ನೆಮ್ಮದಿಯ ನಾಳೆ ನಮ್ಮದು

# ಹೊಸತು

ISSN 2319-7307




ಜನವರಿ ೨೦೧೮

ಬೆಲೆ : ₹ ೫೦




Kariyappa Hanchinamani 16



# ಅಮರ ಬಾಪು ಚಿಂತನ

ಗಾಂಧಿ ದರ್ಪಣ ಕನ್ನಡ ಮತ್ತು ಆಂಗ್ಲ ದ್ವೈಮಾಸಿಕ ಪತ್ರಿಕೆ

# AMARA BAAPU CHINTANA

Mirror of Gandhi Kannada & English Bi-Monthly

**Regd. Office : Gandhi Bhavana, Kumara Park East, Bangalore - 560 001.**

"ಅಮರ ಬಾಪು ಚಿಂತನ"
ಕನ್ನಡ ಮತ್ತು ಆಂಗ್ಲ ದ್ವೈಮಾಸಿಕ ಪತ್ರಿಕೆಗೆ
ಇಂದೇ ಚಂದಾದಾರರಾಗಿ !





ಗಾಂಧೀ ಒಂದು ಶಕ್ತಿ, ಸಿದ್ಧಾಂತ, ಪ್ರಭಾವ, ವ್ಯಕ್ತಿತ್ವ, ಹೋರಾಟ

Editor-in-Chief :
**JEERIGE LOKESH**

**Advisory Board**
- Dr. Wooday P. Krishna
- Prof. Mallepuram G.Venkatesh
- H. Krishna



ಉಚಿತ FREE

Send Subscription Amount through Cheque / DD / Money order or NEFT in favour of 'AMARA BAAPU CHINTANA'

| ಚಂದಾ ವಿವರ | | Subscription Details |
|---|---|---|
| ಮೂರು ವರ್ಷದ ಚಂದಾ<br>500 ಪುಟಗಳ ಗಾಂಧಿ ಆತ್ಮಕಥೆ ಪುಸ್ತಕ ಉಚಿತ | ₹ 600/- | For 3 Years<br>Avail 500 Pages Gandhi Autobiography Book Free |
| ಐದು ವರ್ಷದ ಚಂದಾ<br>(500 ಪುಟಗಳ ಗಾಂಧಿ ಆತ್ಮಕಥೆ ಪುಸ್ತಕ ಮತ್ತು ಸುಂದರವಾದ ಚರಕದ ಸ್ಮರಣಿಕೆ ಉಚಿತ | ₹ 1000/- | For 5 Years<br>Avail 500 Pages Gandhi Autobiography & Charaka Momento Free |

Name of the Bank :
**ALLAHABAD BANK**
Branch : Malleshwaram, 6th Cross, Bangalore-560003
Account No : **50323011980**
IFSC Code : ALLA0212729

**For Details Contact : 94480 42653, 98800 60354 For Advertisement : 90536 18076**

amarabaapuchintana@gmail.com facebook.com/amarabaapuchintana www.amarabaapuchintana.com

## ನವಕರ್ನಾಟಕ : 2016ರ ಪ್ರಮುಖ ಪ್ರಕಟಣೆಗಳು



₹200



₹175



₹90


₹120



₹120



₹175



₹160



₹250


₹125



₹70


₹390



₹250



₹65



₹90


₹85



₹70



₹75



₹120



₹110



₹60



₹90



₹890



₹90



₹260

ಮೂರು ವರ್ಷದ 'ಹೊಸತು' ಚಂದಾದಾರರಿಗೆ 20% ಸೋಡಿ. ಇತರರಿಗೆ 10% ಸೋಡಿ. ನಿವ್ವಳ ₹ 250ಕ್ಕಿಂತ ಕಡಿಮೆ ಮೊಬಲಗಿನ ಬೇಡಿಕೆಗಳಿಗೆ ಅಂಚೆವೆಚ್ಚ ₹ 25 ಪ್ರತ್ಯೇಕ

ಹಣವನ್ನು ಡಿ.ಡಿ., ಎಂ.ಒ. ಮೂಲಕ ಕಳಿಸಿ ಅಥವಾ ನಮ್ಮ ಪುಸ್ತಕ ಮಳಿಗೆಗೆ ಭೇಟಿ ನೀಡಿ

### ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೇಟ್ ಲಿಮಿಟೆಡ್

11, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂಚೆ ಪೆಟ್ಟಿಗೆ ಸಂಖ್ಯೆ 5159, ಕುಮಾರ ಪಾರ್ಕ್ ಪೂರ್ವ ಬೆಂಗಳೂರು - 560 001. ಫೋನ್ : 080-22392460/61 ಮೊಬೈಲ್ : 9480686858
e-mail : navakarnataka@gmail.com http://navakarnataka.blogspot.in

ಆನ್‌ಲೈನ್ ಮೂಲಕವೂ ಲಭ್ಯ Shop Online www.navakarnataka.com

ಶಾಖೆಗಳು : ಬೆಂಗಳೂರು ✆ 22251382 ✆ 22203106 :: ಮಂಗಳೂರು ✆ 2441016 ✆ 2425161 :: ಮೈಸೂರು ✆ 2424094 :: ಕಲಬುರಗಿ ✆ 224302



ತಿಂಗಳ ಪತ್ರಿಕೆ

**ಹೊಸತು**

ನೆಮ್ಮದಿಯ ನಾಳೆ ನಮ್ಮದು

ನವಕರ್ನಾಟಕ ಪ್ರಕಾಶನ

ಸಂಪುಟ-೧೯ ಸಂಚಿಕೆ-೬ ಜನವರಿ ೨೦೧೮

**■ ಗೌರವ ಸಂಪಾದಕ**

ಜಿ. ರಾಮಕೃಷ್ಣ

**■ ಸಂಪಾದಕ-ಮುದ್ರಕ-ಪ್ರಕಾಶಕ**

ಸಿದ್ದನಗೌಡ ಪಾಟೀಲ

**■ ಸಹಸಂಪಾದಕರು**

ಎಂ. ಅಬ್ದುಲ್ ರೆಹಮಾನ್ ಪಾಷ

ಇಂದಿರಾ ಕುಮಾರಿ

ಸಿ. ಆರ್. ಕೃಷ್ಣರಾವ್

ಎನ್. ಗಾಯತ್ರಿ

ಎಸ್. ಸುರೇಂದ್ರ

**■ ವ್ಯವಸ್ಥಾಪಕ**

ಎ. ರಮೇಶ ಉಡುಪ

**■ ಮುದ್ರಣ**

**ಶ್ರೀ ವಿನಾಯಕ ಪ್ರಿಂಟರ್ಸ್**

೭೩೮/೧೦, ೬೦ನೇ ಅಡ್ಡರಸ್ತೆ

೫ನೇ ಬ್ಲಾಕ್, ರಾಜಾಜಿನಗರ

ಬೆಂಗಳೂರು - ೫೬೦ ೦೧೦

**■ ಹೊಸತು ಕಚೇರಿಯ ವಿಳಾಸ**




**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೇಟ್ ಲಿಮಿಟೆಡ್**

೧೫, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ , ಅಂ. ಪೆ. ೫೧೫೯

ಕುಮಾರ ಪಾರ್ಕ್ ಪೂರ್ವ, ಬೆಂಗಳೂರು - ೫೬೦ ೦೦೧

ದೂರವಾಣಿ : ೨೨೧೬೧೯೦೦, ೨೨೧೬೧೯೧೨

**e-mail : navakarnataka@gmail.com**

**hosathu@gmail.com**

**hosathu.nkp@gmail.com**

**URL : www.navakarnataka.com**

**http : //navakarnataka.blogspot.in**

**http : //hosathumonthly.blogspot.in**


# ಈ ತಿಂಗಳು



ಕರ್ನಾಟಕದಲ್ಲಿ ಚುನಾವಣೆಗಳು ಈ ವರ್ಷ ಮೇ ತಿಂಗಳಲ್ಲಿ ನಡೆಯುವ ಸಂಭವ ಇದೆ. ಆದರೆ ಈಗಲೇ ಮೂರೂ ಪ್ರಮುಖ ಪಕ್ಷಗಳು ಚುನಾವಣೆಯ ಅಖಾಡಕ್ಕೆ ಇಳಿದಿವೆ. ಆರೋಪ ಪ್ರತ್ಯಾರೋಪಗಳ ಸುರಿಮಳೆಯಾಗುತ್ತಿದೆ. ಕಾಂಗ್ರೆಸ್ ಮುಕ್ತ ರಾಜ್ಯದ ಪಣ ಭಾಜಪ ತೊಟ್ಟಿದ್ದರೆ, ಕಾಂಗ್ರೆಸ್ ಮತ್ತೆ ಅಧಿಕಾರ ಪಡೆಯಲು ಹೊರಟಿದೆ. ಜೆಡಿಎಸ್ ಕಿಂಗ್ ಮೇಕರ್ ಸ್ಥಾನ ಅಲಂಕರಿಸಲು ನೋಡುತ್ತಿದೆ. ಅಂತೂ ಈ ಸಲದ ಚುನಾವಣೆಗಳು ಕುತೂಹಲಕರ. ಈಗಾಗಲೇ ಭಾಜಪ ರಾಷ್ಟ್ರಾಧ್ಯಕ್ಷ, ಗೆಲುವಿನ ರೂವಾರಿ ರಾಜ್ಯಕ್ಕೆ ಎರಡು ಮೂರು ಸಲ ಭೇಟಿ ಕೊಟ್ಟಿದ್ದಾರೆ. ಉತ್ತರ ಕರ್ನಾಟಕದ ಜನರನ್ನು ತಮ್ಮ ಕಡೆಗೆ ಒಲಿಸಿಕೊಳ್ಳಲು ಮಹದಾಯಿ ಯೋಜನೆಯನ್ನು ಟ್ರಂಪ್ ಕಾರ್ಡಾಗಿ ಬಳಸಲು ಮೂರೂ ಪಕ್ಷಗಳು ಪ್ರಯತ್ನಿಸುತ್ತಿವೆ. ಹಾಗೆಯೇ ಲಿಂಗಾಯಿತ–ವೀರಶೈವ ಪ್ರತ್ಯೇಕ ಧರ್ಮದ ಪ್ರಶ್ನೆಯನ್ನು ಬಳಸಿಕೊಳ್ಳಲು ಹೊರಟಿವೆ. ತರಾತುರಿಯಲ್ಲಿ ಸಿದ್ದರಾಮಯ್ಯ ಸಮಿತಿಯೊಂದನ್ನು ರಚಿಸಿ ಒಂದು ತಿಂಗಳೊಳಗೆ ವರದಿ ತರಿಸಿಕೊಳ್ಳಲು ಮುಂದಾಗಿದೆ. ಟಿಕೇಟು ಆಕಾಂಕ್ಷಿಗಳು ದಲ್ಲಾಳಿ ಪ್ರಾರಂಭಿಸಿದ್ದಾರೆ. ಪಕ್ಷದಿಂದ ಪಕ್ಷಕ್ಕೆ ಹಾರಲು ಇನ್ನೂ ಸಮಯವಿದೆ. ರಾಜ್ಯದ ಮತದಾರ ಈಗ ರಾಜ.

ಈ ಮಧ್ಯೆ ಹಿಂದುತ್ವವಾದಿ ಸಂಘಟನೆಗಳು ಹೊಸ ಅವತಾರ ತಾಳುತ್ತಿವೆ. ಸಾಮೂಹಿಕ ಧಾರ್ಮಿಕ ಆಚರಣೆಗಳೇ ನವರೂಪ. ಕೇಳುವವರೇ ಇಲ್ಲದಿದ್ದ ಚಿಕ್ಕಮಗಳೂರಿನ 'ದತ್ತ ಪೀಠ' ಈಗ ಕರ್ನಾಟಕದ ಅಯೋಧ್ಯೆ. ಅಲ್ಲಿರುವ ಮುಸ್ಲಿಮ್ ದರ್ಗಾವನ್ನು ಸ್ಥಳಾಂತರಿಸಬೇಕೆಂದು ಶಾಸಕ ಸಿ. ಟಿ. ರವಿ ಪಣತೊಟ್ಟಿದ್ದಾರೆ. ಪ್ರತಿ ವರ್ಷ ಮಾಲಾಧಾರಣೆ, ಕೇಸರಿ ಧ್ವಜಗಳ ಹಾರಾಟ ಪ್ರಾರಂಭವಾಗಿ ಎರಡು ಮೂರು ದಶಕಗಳಾಯಿತು. ಈಗ ಅದರ ಜೊತೆಗೆ 'ಹನುಮ ಜಯಂತಿ' ಪ್ರಾರಂಭವಾಗಿದೆ. ಪ್ರತಾಪ ಸಿಂಹ ಎಂಬ ಭಾಜಪ ಪಾರ್ಲಿಮೆಂಟ್ ಸದಸ್ಯ ಅದರ ಚಾಲಕ. ಮೈಸೂರು–ಕೊಡಗು ದಾರಿಯ ಹುಣಸೂರನ್ನು ಹನುಮನ ಕಾರ್ಯಕ್ಷೇತ್ರ ಮಾಡಲಾಗಿದೆ. ವಿಷಪೂರಿತ, ಹರಿತ ನಾಲಿಗೆಗೆ ಹೆಸರಾಗಿರುವ ವ್ಯಕ್ತಿ ಪ್ರತಾಪ ಸಿಂಹ. ಸಾಕಷ್ಟು ಗಲಭೆ ನಡೆಸಿ ಆಯಿತು ಹನುಮ ಜಯಂತಿ ಆಚರಣೆ ಸಂದರ್ಭದಲ್ಲಿ. ರವಿ–ಸಿಂಹ ಜೋಡಿ ಕೋಮುವಾದಿ ಘರ್ಷಣೆಗಳನ್ನು ಹುಟ್ಟುಹಾಕುವುದರಲ್ಲಿ ನಿಸ್ಸೀಮರು. ಹಿಂದುತ್ವ ವಾದಿಗಳ ಪ್ರಯೋಗಾಲಯವಾಗಿರುವ ದಕ್ಷಿಣ ಕನ್ನಡ ಜಿಲ್ಲೆಯ ಕುಂದಾಪುರದಲ್ಲಿ ಜರುಗಿದ ಘಟನೆಗಳು ಅದಕ್ಕೆ ಸಾಕ್ಷಿ. ಕೇಂದ್ರ ಸರಕಾರದಲ್ಲಿ ಸಚಿವ ಸ್ಥಾನ ಗಿಟ್ಟಿಸಿ ಕೊಂಡಿರುವ ಅನಂತಕುಮಾರ ಹೆಗಡೆ ಇದರ ಪ್ರೇರಕ. ಈತ ಬಾಯಿಬಿಟ್ಟರೆ ಹೊರಬೀಳುವುದು ದ್ವೇಷದ ಕಿಡಿಗಳೆ.

* * *

ಮುಂಬರುವ ಚುನಾವಣೆಗಳಲ್ಲಿ ಪ್ರಚಾರ ಯಾವ ಮಟ್ಟದಲ್ಲಿ ಇರುತ್ತದೆ ಎನ್ನುವುದಕ್ಕೆ ಗುಜರಾತ್‌ನಲ್ಲಿ ಈಚೆಗೆ ನಡೆದ ಚುನಾವಣೆಗಳು ಒಂದು ಸೂಚಿ. ಪ್ರಧಾನಿ ಪಟ್ಟದಲ್ಲಿರುವ ನರೇಂದ್ರ ಮೋದಿ ಕಾಂಗ್ರೆಸ್ ನಾಯಕರ ಮೇಲೆ ಹೊರಿಸಿದ, ಪಾಕಿಸ್ತಾನದೊಂದಿಗೆ ಶಾಮೀಲಾಗಿ, ತಮ್ಮನ್ನು ಹತ್ಯೆಗೈಯ್ಯಲು ಸಂಚು ಹೂಡಿದ್ದರು ಎಂಬ ಆಪಾದನೆ ಅದಕ್ಕೆ ಉದಾಹರಣೆ. ಈ ಆರೋಪಕ್ಕೆ ಪ್ರಧಾನಿ ಕ್ಷಮೆ ಕೋರಬೇಕೆಂದು ಕಾಂಗ್ರೆಸ್ ಪಟ್ಟು ಹಿಡಿದಿದೆ. ಇದರಿಂದ ಈಗಾಗಲೇ ಪಾರ್ಲಿಮೆಂಟಿನ ಉಭಯ ಸದನಗಳ ಕಲಾಪಗಳು ಹಲವು ದಿನಗಳು ಸ್ಥಗಿತಗೊಂಡಿವೆ. ಕೋಟ್ಯಾನುಕೋಟಿ ತೆರಿಗೆದಾರರ ಹಣ




ತಿಂಗಳ ಪತ್ರಿಕೆ

**ಹೊಸತು**

ನೆಮ್ಮದಿಯ ನಾಳೆ ನಮ್ಮದು

ನವಕರ್ನಾಟಕ ಪ್ರಕಾಶನ





**■ ಚಂದಾ ವಿವರಗಳು**

| | |
|---|---|
| **ಬಿಡಿ ಸಂಚಿಕೆ** | ₹ ೨೦/- |
| **ವಾರ್ಷಿಕ ಸಂಚಿಕೆ** | ₹ ೫೦/- |
| **ವಾರ್ಷಿಕ ಚಂದಾ** | ₹ ೨೫೦/- |
| **ಮೂರು ವರ್ಷಕ್ಕೆ** | ₹ ೫೦೦/- |

**■ ನವಕರ್ನಾಟಕ ಶಾಖೆಗಳು**

೫ನೇ ಮುಖ್ಯ ರಸ್ತೆ , ಗಾಂಧಿನಗರ
ಬೆಂಗಳೂರು - ೫೬೦ ೦೦೯
✆ : ೦೮೦-೨೨೨೫೧೩೮೨

ಕೆಂಪೇಗೌಡ ರಸ್ತೆ
ಬೆಂಗಳೂರು - ೫೬೦ ೦೦೯
✆ : ೦೮೦-೨೨೨೦೩೧೦೬

ಕೆ. ಎಸ್. ಆರ್. ರಸ್ತೆ
ಮಂಗಳೂರು - ೫೭೫ ೦೦೧
✆ : ೦೮೨೪-೨೪೪೧೦೧೬

ಶರಾವತಿ ಕಟ್ಟಡ, ಬಲ್ಮಠ
ಮಂಗಳೂರು - ೫೭೫ ೦೦೧
✆ : ೦೮೨೪-೨೪೨೫೧೬೧

ರಾಮಸ್ವಾಮಿ ವೃತ್ತ
ಮೈಸೂರು - ೫೭೦ ೦೨೪
✆ : ೦೮೨೧-೨೪೨೪೮೯೪

ಸ್ಟೇಷನ್ ರಸ್ತೆ
ಕಲಬುರಗಿ - ೫೮೫ ೧೦೨
✆ : ೦೮೪೭೨-೨೨೪೩೦೨

ವ್ಯರ್ಥವಾಗಿದೆ. ಎಂದಿನಂತೆ ಪ್ರಧಾನಿ ಮೌನವಹಿಸಿದ್ದಾರೆ. ಗುಜರಾತ್ ಚುನಾವಣೆಗಳ ಫಲಿತಾಂಶ ಭಾಜಪಗೆ ಹೊಸ ಚೈತನ್ಯ ತಂದಿದೆ. ತನಗೆ ಎದುರಾಳಿಗಳೇ ಇಲ್ಲ ಎನ್ನುವ ಅಹಮಿಕೆಯಲ್ಲಿ ಬೀಗುತ್ತಿದೆ. ಹಾಗೆ ನೋಡಿದರೆ ಚುನಾವಣಾ ಫಲಿತಾಂಶ ಅನಿರೀಕ್ಷಿತವಾದ್ದೇನಲ್ಲ. ಕಾಂಗ್ರೆಸ್ ಮತ್ತೆ ಗುಜರಾತಿನಲ್ಲಿ ಚೇತರಿಸಿಕೊಂಡಿದ್ದರೆ ಭಾಜಪ ಹೆಚ್ಚುಕಡಿಮೆ ೨೦ ಸ್ಥಾನಗಳನ್ನು ಕಳೆದುಕೊಂಡು ಎರಡಂಕಿಗೆ ತೃಪ್ತಿ ಕಂಡಿದೆ. ಹೊಸದಾಗಿ ಕಾಂಗ್ರೆಸ್ ಅಧ್ಯಕ್ಷ ಸ್ಥಾನ ಪಡೆದುಕೊಂಡಿರುವ ರಾಹುಲ್ ಗಾಂಧಿ ಗುಜರಾತಿನಲ್ಲಿ ಕಾಂಗ್ರೆಸ್‌ನ ಪ್ರದರ್ಶನ ಸಮಾಧಾನ ತಂದಿದೆ. ಆದರೆ ಅದೇ ಸಮಯದಲ್ಲಿ ಸಂಘಟನಾತ್ಮಕವಾಗಿ ಕಾಂಗ್ರೆಸ್ಸಿನ ದೌರ್ಬಲ್ಯವನ್ನು ಹೊರಗೆಡಹಿದೆ. ೨೦೧೯ರ ಚುನಾವಣೆಗಳನ್ನು ಎದುರಿಸುವ ಸಾಮರ್ಥ್ಯ ಪಡೆದುಕೊಳ್ಳಬೇಕಾದರೆ ಸಮಾನ ಮನಸ್ಕರು ಒಂದಾಗುವುದು ಅನಿವಾರ್ಯವಾಗಿದೆ.

✶ ✶ ✶

ಭಾರತದಲ್ಲಿ ಸ್ಟೇಟ್ ಬ್ಯಾಂಕ್ ಆಫ್ ಇಂಡಿಯ (ಎಸ್‌ಬಿಐ) ದೇಶದ ಬ್ಯಾಂಕಿಂಗ್ ವ್ಯವಸ್ಥೆಯಲ್ಲಿ ಅತಿ ದೊಡ್ಡ ಸಂಸ್ಥೆ. ಪ್ರಪಂಚದ ಪ್ರಮುಖ ಬ್ಯಾಂಕುಗಳ ಪಟ್ಟಿಯ ೫೦ ದೊಡ್ಡ ಬ್ಯಾಂಕುಗಳಲ್ಲಿ ಒಂದು, ಅಲ್ಲದೆ ಫಾರ್ಚೂನ್ ೫೦೦ರಲ್ಲಿ ಕಾಣಿಸಿಕೊಂಡಿರುವ ಏಕೈಕ ಬ್ಯಾಂಕ್. ಎಸ್‌ಬಿಐ ೨೩,೫೬೬ ಶಾಖೆಗಳನ್ನು ಹೊಂದಿದೆ, ಇವುಗಳ ಪೈಕಿ ೧೫,೦೩೭ ಗ್ರಾಮಾಂತರ ಪ್ರದೇಶದಲ್ಲಿವೆ. ೩೫ ವಿದೇಶಗಳಲ್ಲಿ ೧೯೮ ಶಾಖೆಗಳನ್ನು ಹೊಂದಿದೆ ಎಸ್‌ಬಿಐ. ೨೨೫ ಮಿಲಿಯ ಜನ ಈ ಬ್ಯಾಂಕಿನಲ್ಲಿ ವ್ಯವಹಾರ ಇರಿಸಿ ಕೊಂಡಿದ್ದಾರೆ. ಠೇವಣಿ ಹಣ, ಆಸ್ತಿಪಾಸ್ತಿ ಎಲ್ಲ ಸೇರಿಸಿದರೆ ಕ್ರಮವಾಗಿ ರೂ. ೧೪,೭೩,೭೮೫ ಕೋಟಿ, ರೂ. ೧೭,೯೯,೬೪೪ ಕೋಟಿ ಮತ್ತು ರೂ. ೧೮,೭೪,೩೩೨ ಕೋಟಿ ಆಗುತ್ತದೆ. ಈಚೆಗೆ ಎಸ್‌ಬಿಐನೊಂದಿಗೆ ಐದು ರಾಜ್ಯಗಳ ಸ್ಟೇಟ್ ಬ್ಯಾಂಕುಗಳು ವಿಲೀನಗೊಂಡು ವ್ಯವಹಾರ ಮತ್ತಷ್ಟು ಹೆಚ್ಚಾಗಿದೆ. ಪ್ರಧಾನಮಂತ್ರಿ ಮೋದಿಯವರ ಜನಧನ್ ಯೋಜನೆ ಅಡಿ ಕೋಟಿಗೂ ಅಧಿಕ ಖಾತೆಗಳನ್ನು ಈ ಬ್ಯಾಂಕಿನಲ್ಲಿ ತೆರೆಯಲಾಗಿದೆ. ರಾಷ್ಟ್ರೀಕೃತ ಬ್ಯಾಂಕುಗಳಲ್ಲಿ ಎಸ್‌ಬಿಐ ಅಗ್ರಸ್ಥಾನದಲ್ಲಿದೆ. 'ಬ್ಯಾಂಕಿಂಗ್ ದಿ ಅನ್ ಬ್ಯಾಂಕ್ಡ್' ಯೋಜನೆಯಡಿ ಈ ಬ್ಯಾಂಕ್ ಅಂಬಾನಿಯ ರಿಲಯನ್ಸ್ ಇಂಡಸ್ಟ್ರೀಸ್‌ನ ಪಾಲಾಗುವ ಭೀತಿ ಆವರಿಸಿದೆ. ಬ್ಯಾಂಕ್ ನೌಕರರು ಮತ್ತು ಅವರ ಸಂಘದವರು ಇದರಿಂದ ಆತಂಕಗೊಂಡಿದ್ದಾರೆ, ಪ್ರತಿಭಟಿಸಿದ್ದಾರೆ ಸಂಘದ ಮೂಲಕವಾಗಿ. ರಿಲಯನ್ಸ್ ಪೇಮೆಂಟ್ ಬ್ಯಾಂಕ್ ಮತ್ತು ಎಸ್‌ಬಿಐ, ಪಾಲುದಾರ ಸಂಸ್ಥೆಗಳು ಈಗ. ಬ್ಯಾಂಕ್‌ನ ಶಾಖೆ ಇಲ್ಲದಿರುವ ಗ್ರಾಮಗಳಲ್ಲಿ ಬ್ಯಾಂಕಿಂಗ್ ವ್ಯವಹಾರ ನಡೆಸುವುದು ಈ ಹೊಸ ವ್ಯವಸ್ಥೆಯ ಉದ್ದೇಶ. ರಿಸರ್ವ್ ಬ್ಯಾಂಕ್ ರಿಲಯನ್ಸ್ ಇಂಡಸ್ಟ್ರೀಸ್ ಲಿಮಿಟೆಡ್‌ಗೆ ಪೇಮೆಂಟ್ ಬ್ಯಾಂಕುಗಳನ್ನು ತೆರೆಯಲು ೨೦೧೭ರ ಮಾರ್ಚ್‌ನಲ್ಲಿ ಅಂತಿಮ ಪರವಾನಗಿ ನೀಡಿದೆ. ೨೦೧೫ರಲ್ಲೇ ಪೇಮೆಂಟ್ ಬ್ಯಾಂಕ್ ಪ್ರಾರಂಭಿಸಲು ರಿಲಯನ್ಸ್‌ಗೆ ಸರಕಾರ ಒಪ್ಪಿಗೆ ನೀಡಿತ್ತು. ೨೦೧೬ರ ನವೆಂಬರ್ ೧೦ರಂದು ರಿಲಯನ್ಸ್-ಎಸ್‌ಬಿಐ ಪೇಮೆಂಟ್ ಬ್ಯಾಂಕ್ ಕಂಪೆನಿ ರಿಜಿಸ್ಟ್ರಾರ್ ಕಚೇರಿ ಯಲ್ಲಿ ನೋಂದಾವಣೆಯಾಯಿತು. ಇಷ್ಟೆಲ್ಲ ಕಾರುಬಾರು ನಡೆದದ್ದು ತೆರೆಮರೆಯಲ್ಲಿ. ಮೋದಿ-ಅಂಬಾನಿಗಳ ನಂಟು ಹೊಸದೇನಲ್ಲ. ಈ ಹೊಸ ವ್ಯವಸ್ಥೆಯಲ್ಲಿ ರಿಲಯನ್ಸ್ ಶೇ. ೭೦ ಪಾಲು ಹೊಂದಿದ್ದರೆ, ಎಸ್‌ಬಿಐ ಪಾಲು ಶೇ. ೩೦ರಷ್ಟು. ಹಾಗಾಗಿ ಎಲ್ಲ ಪಾರುಪತ್ಯ ರಿಲಯನ್ಸ್ ಕೈಯಲ್ಲೇ ಇರುತ್ತದೆ. ಮುಂದೇನಾಗುತ್ತದೆ ಎಂದು ಇದರಿಂದ ಊಹಿಸಿಕೊಳ್ಳಬಹುದು. ಈಗಾಗಲೇ ಎಸ್‌ಬಿಐ ಕುಗ್ರಾಮಗಳಲ್ಲಿ ಕೂಡ ಬ್ಯಾಂಕಿಂಗ್ ವ್ಯವಸ್ಥೆ ವಿಸ್ತರಿಸಲು ೧,೫೦,೦೦೦ ಸಿಬ್ಬಂದಿಯನ್ನು ಹೊಂದಿದೆ. ಈ ಸಿಬ್ಬಂದಿಯನ್ನು 'ಕರೆಸ್ಪಾಂಡೆಂಟ್ಸ್' ಎಂದು ಕರೆಯುತ್ತಾರೆ. ಪಾರ್ಟ್ ಟೈಮ್ ಆಗಿ ಕೆಲಸಮಾಡುವ ಈ ಕರೆಸ್ಪಾಂಡೆಂಟ್ಸ್‌ಗಳು ಬ್ಯಾಂಕಿನ ಎಲ್ಲ ವ್ಯವಹಾರಗಳನ್ನು ನೋಡಿಕೊಳ್ಳುತ್ತಿದ್ದಾರೆ. ಹಾಗಿರುವಾಗ ಅಂಬಾನಿಯ ರಿಲಯನ್ಸ್‌ನೊಂದಿಗೆ ಎಸ್‌ಬಿಐ ಲಗತ್ತಿಸುವ ಉದ್ದೇಶವೇನು ಎಂಬುದು ಅನುಮಾನಕ್ಕೆಡೆಯಾಗಿರುವುದು ಸಹಜ.

✶ ✶ ✶

ಕಾಂಗ್ರೆಸ್ ನೇತೃತ್ವದ ಯುನೈಟೆಡ್ ಪ್ರೋಗ್ರೆಸಿವ್ ಅಲಯನ್ಸ್ (ಯುಪಿಎ) ಎರಡನೇ ಅವಧಿಯಲ್ಲಿ '೨ಜಿ ಹಗರಣ' ಬಹುದೊಡ್ಡ ಭ್ರಷ್ಟಾಚಾರದ ಪ್ರಕರಣ. ಒಂದು ರೀತಿಯಲ್ಲಿ ೨೦೧೪ರ ಪಾರ್ಲಿಮೆಂಟ್ ಚುನಾವಣೆಗಳಲ್ಲಿ ಯುಪಿಎ ಸೋಲಿಗೆ ಇದೂ ಒಂದು ಪ್ರಮುಖ ಕಾರಣ. ಕಾಂಗ್ರೆಸ್ ಮೈತ್ರಿಕೂಟದಲ್ಲಿದ್ದ ಪ್ರಮುಖ ಪಕ್ಷ ದ್ರಾವಿಡ ಮುನ್ನೇತ್ರ ಕಳಗಂ (ಡಿಎಂಕೆ) ಈ ಭ್ರಷ್ಟಾಚಾರದಲ್ಲಿ ಪಾಲ್ಗೊಂಡಿತ್ತು ಎನ್ನುವ ಆರೋಪ ಇತ್ತು. ತಮಿಳುನಾಡು ರಾಜಕಾರಣದಲ್ಲಿ ಡಿಎಂಕೆ ಸೋಲಿಗೂ ಅದೇ ಕಾರಣವಾಗಿತ್ತು. ಡಿಎಂಕೆಯ ನಾಯಕ ಎ. ರಾಜಾ ಆಗ ಮೈತ್ರಿಕೂಟದಲ್ಲಿ ಮನಮೋಹನ ಸಿಂಗ್ ಸಂಪುಟದಲ್ಲಿ ದೂರಸಂಪರ್ಕ ಖಾತೆಯ ಸಚಿವರಾಗಿದ್ದರು. ೨ಜಿ ತರಂಗಾಂತರ ಹಂಚಿಕೆಯಲ್ಲಿ ಪಕ್ಷಪಾತ ತೋರಿ ಭ್ರಷ್ಟಾಚಾರ ಎಸಗಿ ಸರಕಾರಕ್ಕೆ ಕೋಟಿಗಟ್ಟಲೆ ವರಮಾನ ನಷ್ಟ ಮಾಡಿದರು ಎಂಬುದೇ ಸಚಿವರ ಮೇಲಿದ್ದ ಆರೋಪ. ರಾಜ ಹಾಗೂ ರಾಜ್ಯಸಭೆಯ ಸದಸ್ಯೆ ಡಿಎಂಕೆ ನಾಯಕ ಕರುಣಾನಿಧಿ ಪುತ್ರಿ ಕನಿಮೊಳಿ ಮತ್ತು ಇತರ ಆರೋಪಿ ಕೆಲಕಾಲ ದೆಹಲಿಯ ತಿಹಾರ್ ಜೈಲಿನಲ್ಲಿದ್ದರು ಆರೋಪಿಗಳಾಗಿ. ಏಳು ವರ್ಷಗಳಾದ ಮೇಲೆ ೨೦೧೭ರ ಡಿಸೆಂಬರ್ ತಿಂಗಳ ಮೂರನೇ ವಾರದಲ್ಲಿ ಸಿಬಿಐ ನ್ಯಾಯಾಲಯದ ತೀರ್ಪಿನಂತೆ ದೋಷಮುಕ್ತರಾಗಿ ಖುಲಾಸೆಯಾಗಿದ್ದಾರೆ ಎಲ್ಲ ಆರೋಪಿಗಳು. ಅವರುಗಳಿಗೆ ತಮಿಳುನಾಡಿನಲ್ಲಿ ಅದ್ದೂರಿಯ ಸ್ವಾಗತ, ಇತ್ಯಾದಿ ಸಂಭ್ರಮ. ಕಾಂಗ್ರೆಸ್ ನಾಯಕರುಗಳಿಗೆ, ಆಗ ಪ್ರಧಾನಿಯಾಗಿದ್ದ ಮನಮೋಹನ ಸಿಂಗ್‌ಗೆ ನಿರಾಳ.

ಇಪ್ಪತ್ತು ವರ್ಷಗಳ ಹಿಂದೆ (೧೯೯೬ರಲ್ಲಿ) ಬೆಳಕಿಗೆ ಬಂದ ಭ್ರಷ್ಟಾಚಾರದ ಪ್ರಕರಣ ಬಿಹಾರದ 'ಮೇವು ಹಗರಣ.' ಇದರಲ್ಲಿ ಪ್ರಮುಖ ಆರೋಪಿ ಆಗ ಬಿಹಾರದ ಮುಖ್ಯಮಂತ್ರಿ ಆಗಿದ್ದ ಲಾಲೂಪ್ರಸಾದ್ ಯಾದವ್. ಮಂತ್ರಿಸ್ಥಾನ ಕಳೆದುಕೊಂಡು, ಕೆಲಕಾಲ, ಜೈಲುವಾಸವನ್ನೂ ಅನುಭವಿಸಿದ್ದರು. ಈಗ ಮತ್ತೆ ಜೈಲು ಪಾಲಾಗಿದ್ದಾರೆ ೨೦೧೭ರ ಡಿಸೆಂಬರ್ ಕೊನೆಯಲ್ಲಿ ಸಿಬಿಐ ನ್ಯಾಯಾಲಯದಲ್ಲಿ ಅಪರಾಧ ಸಾಬೀತಾಗಿ. ಲಾಲೂ ಯಾದವ್ ಯುಪಿಎಯ ಪ್ರಧಾನ ಪಾಲುದಾರ. ಕಾಂಗ್ರೆಸ್ ಮೈತ್ರಿಕೂಟದ ಆಧಾರ ಸ್ತಂಭ. ಈಚೆಗೆ ಬಿಹಾರದಲ್ಲಿ 'ಮಹಾಘಟ ಬಂಧನ್' ಎಂಬ ಮೈತ್ರಿಕೂಟ ಸ್ಥಾಪಿಸಿ ಭಾಜಪ ಸೋಲಿಗೆ ಕಾರಣವಾಗಿದ್ದರು ಲಾಲು. ಆದರೆ ಈ ಮಹಾಘಟ ನಿತೀಶ್ ಕುಮಾರ್ ಸಮಯಸಾಧಕತನದಿಂದ ಒಡೆದು ಭಾಜಪ ಮತ್ತೆ ಸರಕಾರದಲ್ಲಿ ಪಾಲುದಾರನಾದದ್ದು ಹಳೆಯ ಕತೆ. ಇಪ್ಪತ್ತು ವರ್ಷಗಳಾದ ಮೇಲೆ ನ್ಯಾಯಾಲಯದ ತೀರ್ಪು ಬಂದಿದೆ. ಆದರೆ ಇದೇ ಕೊನೆಯಲ್ಲ, ಇನ್ನೂ ಅಪೀಲು ಬಾಕಿ ಇದೆ. ಸಾಮಾನ್ಯವಾಗಿ ಭ್ರಷ್ಟಾಚಾರ ಪ್ರಕರಣಗಳಲ್ಲಿ ರಾಜಕಾರಣಿಗಳು ಜೈಲುಪಾಲಾಗುವುದು ಅಪರೂಪ. ಏನೇ ಲಂಚ ತಿಂದಿದ್ದರೂ ಜೀರ್ಣಿಸಿಕೊಳ್ಳುವ ತಾಖತ್ತಿರುವ ಭ್ರಷ್ಟ ರಾಜಕಾರಣಿಗಳಿದ್ದಾರೆ.

✶ ✶ ✶

ಕಳೆದ ತಿಂಗಳು ವರದಿಯಾದ ಒಂದು ಸಂಗತಿ ಅಷ್ಟಾಗಿ ಗಮನಕ್ಕೆ ಬರಲಿಲ್ಲ, ಆದರೆ ಅದೊಂದು ಗಮನಾರ್ಹವಾದ ವಿಚಾರ. ಭಾರತೀಯ ಜನತಾ ಪಕ್ಷವು ಕೇಂದ್ರದಲ್ಲಿ ಅಧಿಕಾರಕ್ಕೆ ಬಂದ ನಂತರ ಇಸ್ರೇಲ್ ಜೊತೆ ನಮ್ಮ ದೇಶವು ಅಪಾಯಕಾರಿ ಸಂಬಂಧಗಳನ್ನು ಬೆಳೆಸಿಕೊಂಡಿತು. ಬೇಹುಗಾರಿಕೆ ಮತ್ತು ಯುದ್ಧತಂತ್ರಗಳಲ್ಲಿ ಇಸ್ರೇಲಿನಿಂದ ತರಬೇತಿ ಕಾರ್ಯಕ್ರಮಗಳ ಬಗ್ಗೆ ಕೂಡ ಕೇಳಿಬಂದಿತ್ತು. ಗುಟ್ಟಾಗಿ ಅದು ನಡೆಯುತ್ತಿ ದೆಯೇನೋ, ತಿಳಿಯದು. ಮಿಲಿಟರಿ ಶಸ್ತ್ರಾಸ್ತ್ರಗಳನ್ನು ಕೊಳ್ಳಲು ನಮ್ಮ ದೇಶವು ಇಸ್ರೇಲಿನ ಜೊತೆ ಒಪ್ಪಂದ ಮಾಡಿಕೊಳ್ಳುವ ದುರವಸ್ಥೆಗೆ ನಾವು ತಳ್ಳಲ್ಪಟ್ಟಿದ್ದೇವೆ. ನೂರಾರು ಕೋಟಿ ರೂಪಾಯಿಗಳ ಮಿಲಿಟರಿ ಆಯುಧಗಳು ಸರಬರಾಜಾಗಬೇಕಾಗಿತ್ತು. ಸಿದ್ಧತೆಯೆಲ್ಲಾ ಮುಗಿದು ಆಯುಧಗಳು ದೇಶದ ಬಾಗಿಲಿಗೆ ಬಂದು ನಿಂತಿದ್ದವು, ಆದರೆ ಕಡೆ ಗಳಿಗೆಯಲ್ಲಿ ಆ ಶಸ್ತ್ರಾಸ್ತ್ರಗಳನ್ನು ಸ್ವೀಕರಿಸಲು ನಮ್ಮ ದೇಶ ನಿರಾಕರಿಸಿತು. ಇದೊಂದು ವಿಚಿತ್ರ ಆದರೆ ಸ್ವಾಗತಾರ್ಹವಾದ ಬೆಳವಣಿಗೆ. ಇಸ್ರೇಲ್ ಅಂದರೆ ಅತ್ಯುತ್ಸಾಹ ತೋರುವ ಶೇಕಡ ೩೧ರ ಮೋದಿ ಸರ್ಕಾರ ಶಸ್ತ್ರಾಸ್ತ್ರಗಳನ್ನು ಪಡೆದುಕೊಳ್ಳುವುದರಿಂದ ಹಿಂದೆ ಸರಿದದ್ದು ಅಭಿನಂದನಾರ್ಹ ಕ್ರಮ. ಇಸ್ರೇಲಿನ ಕೆಟ್ಟ ಹುನ್ನಾರವನ್ನು ಅರಿತುಕೊಂಡು ಖಂಡಿತವಾದಿಯಾಗಿ ಸ್ವಲ್ಪ ಜಾಗರೂಕತೆ ಪ್ರದರ್ಶಿಸಿದ್ದು ಸರಿ, ಆದರೆ ತೆರೆಮರೆಯಲ್ಲಿ ಇನ್ನೆಂತಹ ವ್ಯವಹಾರ ಕುದುರಿಸಲಾಗುತ್ತಿದೆಯೋ ತಿಳಿಯದು. ಒಪ್ಪಂದ ಮಾಡಿಕೊಂಡಾಗ, ಶಸ್ತ್ರಾಸ್ತ್ರಗಳ ಸರಬರಾಜು ಮಾಡುವಾಗ ಅದರ ಜೊತೆ ತಾಂತ್ರಿಕ ವಿವರಗಳನ್ನು ಸಹ ನಮ್ಮ ದೇಶಕ್ಕೆ ಕೊಡಲು ಇಸ್ರೇಲ್ ಒಪ್ಪಿಗೆ ನೀಡಿತ್ತು. ಆದರೆ ಶಸ್ತ್ರಾಸ್ತ್ರಗಳನ್ನು ನೀಡುವ ಸಮಯದಲ್ಲಿ ಆ ಷರತ್ತನ್ನು ಪಾಲಿಸಲಿಲ್ಲ. ಆದ್ದರಿಂದ ಸರ್ಕಾರವು ಅವನ್ನು ಸ್ವೀಕರಿಸಲು ನಿರಾಕರಿಸಿತು. 'ಮೇಕ್ ಇನ್ ಇಂಡಿಯ' ಎಂಬ ಮೋದಿ ಹುಲಿ ತಾನು ಹುಟ್ಟಿದಾಗಲೇ ಪ್ರಾಣ ಕಳೆದುಕೊಳ್ಳುವ ಸ್ಥಿತಿಯಲ್ಲಿತ್ತು. ಈಗ ಅದರ ತಮಟೆ ಶಬ್ದ ಅಷ್ಟಾಗಿ ಕೇಳಿಸುತ್ತಿಲ್ಲ. ಸರ್ಕಾರದಿಂದ ಎರಡು ಅಥವಾ

ಮೂರು ಮಾಹಿತಿ ಬಯಸಬೇಕಾಗಿದೆ : (ಅ) ಒಪ್ಪಂದದಲ್ಲಿ ಸ್ಪಷ್ಟವಾಗಿ ಹೇಳಿದ್ದುದೇನು ಮತ್ತು ಇಸ್ರೇಲ್ ಅದನ್ನು ಪಾಲಿಸದಿದ್ದುದಕ್ಕೆ ಕಾರಣವೇನು ? (ಆ) ವಚನಭಂಗ ಮಾಡಿದ ಆ ದೇಶದೊಡನೆ ಬೇರೆ ಯಾವ ಒಪ್ಪಂದಗಳು ಜಾರಿಯಲ್ಲಿವೆ ಮತ್ತು ಅವನ್ನು ರದ್ದುಪಡಿಸ ಲಾಗುತ್ತದೆಯೆ? (ಇ) ಮುಂಗಡವಾಗಿ ನಾವು ನೀಡಿದ್ದ ಹಣವನ್ನು ಹಿಂದಿರುಗಿಸಲಾಗಿದೆಯೆ? ಇಲ್ಲವಾದಲ್ಲಿ ಇಸ್ರೇಲಿನಿಂದ ಅದನ್ನು ಮರಳಿ ಪಡೆಯಲು ಏನು ಕ್ರಮ ಕೈಗೊಳ್ಳಲಾಗುತ್ತದೆ?

ಮೋದಿ ಅವರ ಪಕ್ಷ ಮತ್ತು ಇಸ್ರೇಲಿನ ಸಂಬಂಧ ವಿಚಿತ್ರವಾದ್ದು, ಸರಿ. ಆದರೆ ಹೇಗೆ? ಹಿಟ್ಲರನ ಜನಾಂಗೀಯ ದ್ವೇಷವನ್ನು ಎಂ. ಎಸ್. ಗೋಲ್ವಾಲ್ಕರ್ ಅವರು ಹುಮ್ಮಸ್ಸಿನಿಂದ ಸ್ವಾಗತಿಸಿ ಅದು ರಾಷ್ಟ್ರೀಯತೆಗೆ ಒಳ್ಳೆಯ ಮಾದರಿ ಎಂದು ಒಮ್ಮೆ ಹೇಳಿದ್ದುದುಂಟು. ದೇಶವನ್ನು "ಕಟ್ಟಲು" ಹಿಟ್ಲರ್ ಕೈಗೊಳ್ಳುತ್ತಿದ್ದ ಕ್ರಮವನ್ನು ಅದೇಕೆ ಮೆಚ್ಚಿಕೊಂಡಿದ್ದರೋ ತಿಳಿಯದು. ಯಹೂದ್ಯರ ಹತ್ಯೆ ದೊಡ್ಡ ಪ್ರಮಾಣದಲ್ಲಿ ಜರುಗಿತು. ಹಿಟ್ಲರನನ್ನು ದ್ವೇಷಿಸುವ ಇಸ್ರೇಲ್ ಅವನನ್ನು ಶ್ಲಾಘಿಸಿದ್ದ ಜನರೊಡನೆ ಅಷ್ಟೊಂದು ಮೈತ್ರಿ ಬೆಳೆಸಿಕೊಳ್ಳಲು ತವಕಿಸಿದ್ದು ಕೂಡ ಬೇರೊಂದು ತೆರನ ಜನಾಂಗೀಯ ದ್ವೇಷದಿಂದ. ಇಬ್ಬರೂ ಒಂದು ಮತಧರ್ಮೀಯ ಬಣವನ್ನು ಹೀನಾಯವಾಗಿ ಕಾಣುವ ಪ್ರವೃತ್ತಿ ಅವರನ್ನು ಹತ್ತಿರಕ್ಕೆ ತಂದಿದೆ. ಆದರೆ ಶಸ್ತ್ರಾಸ್ತ್ರಗಳನ್ನು ಕೊಳ್ಳುವ ದೇಶಕ್ಕೆ ಇಸ್ರೇಲ್ ತಾಂತ್ರಿಕ ಜ್ಞಾನವನ್ನು ಹಸ್ತಾಂತರಿಸಲು ಒಪ್ಪೀತೆ? ಇದನ್ನು ನಮ್ಮ ದೇಶದ ಮುತ್ಸದ್ದಿಗಳು ಮೊದಲೇ ಚೆನ್ನಾಗಿ ತಿಳಿದುಕೊಂಡಿರಬೇಕಾಗಿತ್ತು. ಇನ್ನು ಮುಂದಾದರೂ ನಮ್ಮ ವಿದೇಶಾಂಗ ನೀತಿಗಳಲ್ಲಿ ಇಂತಹ ಅವಿವೇಕ ಇಲ್ಲವಾಗಬೇಕು.

✶ ✶ ✶

ನಮ್ಮ ದೇಶದ ಆಕಾಶವಾಣಿ ನಡೆಸಿಕೊಡುವ ಚರ್ಚೆಗಳನ್ನು ಸೂಕ್ಷ್ಮವಾಗಿ ಎಷ್ಟು ಮಂದಿ ಗಮನಿಸುತ್ತಾರೋ ತಿಳಿಯದು. ಇತ್ತೀಚೆಗೆ ಚರ್ಚೆಗೆ ಬಂದಿದ್ದ ವಿಷಯ ಇದು : ಭಾರತವು ನೆರೆರಾಷ್ಟ್ರಗಳೊಡನೆ ಹೊಂದಿದ್ದ ಸಾಂಸ್ಕೃತಿಕ ಸಂಬಂಧಗಳು. ನಿವೃತ್ತ ಸರ್ಕಾರಿ ಅಧಿಕಾರಿಗಳು ಮತ್ತು ಕೆಲವು ಸಂಸ್ಕೃತಿ ಪರಿಣತರು ಚರ್ಚೆಯಲ್ಲಿ ಭಾಗವಹಿಸಿದ್ದರು. ಶ್ರೀಲಂಕಾ ಮತ್ತು ಆಫ್ಘಾನಿಸ್ತಾನ ನಮ್ಮದೇ ದೇಶಗಳೆಂದು ಭಾವಿಸುವ ತಜ್ಞರು ನಮ್ಮಿಂದ ಪ್ರಾಚೀನ ಕಾಲದಲ್ಲಿ ಆ ದೇಶಗಳಿಗೆ ಮಹತ್ತರವಾದ ಸಾಂಸ್ಕೃತಿಕ ನೆರವು ನೀಡಲಾಗಿತ್ತು ಎಂಬರ್ಥದ ಮಾತುಗಳನ್ನಾಡಿದ್ದು ಗಮನಾರ್ಹವಾಗಿತ್ತು. ಒಬ್ಬ ಪರಿಣತರು ಋಗ್ವೇದದಲ್ಲಿ ಬರುವ ಪಣಿಗಳೆಂಬ ಬುಡಕಟ್ಟಿನವರು ಆಫ್ಘಾನಿಸ್ತಾನ ಪ್ರದೇಶದಲ್ಲಿದ್ದವರೆಂದು ಹೇಳಿದ್ದಲ್ಲದೆ ಅವರು ಶಿಷ್ಟರ ಗೋವುಗಳನ್ನು ಬಲವಂತವಾಗಿ ಸೆಳೆದುಕೊಂಡಿದ್ದ ರೆಂದೂ, ಆರ್ಯರ ದೇವತೆಯಾದ ಇಂದ್ರನ ಪ್ರತಿನಿಧಿಯಾಗಿ ಹೋಗಿದ್ದ ಸರಮೆ (ಎಂಬ ನಾಯಿ) ಪಣಿಗಳಿಗೆ ನೀತಿಬೋಧೆ ಮಾಡಿ ಗೋವುಗಳನ್ನು ಹಿಂದಿರುಗಿ ಸುವಂತೆ ಮನವೊಲಿಸಿದ್ದಳೆಂದೂ, ಇದು ಉಚ್ಚ ಸಂಸ್ಕೃತಿಯ ಮಾದರಿಯೆಂದೂ ನುಡಿದರು. ನಿಜಕ್ಕೂ ಋಗ್ವೇದದ ಸರಮೆಯು ಪಣಿಗಳಿಗೆ ಮುನ್ನೆಚ್ಚರಿಕೆ ನೀಡಲು ಹೋಗಿದ್ದಳೆಂಬುದು ತಿಳಿದ ವಿಚಾರ. ಇಂದ್ರನು ಪಣಿಗಳ ಆಕ್ರಮಣಕ್ಕೆ ತಯಾರಿ ನಡೆಸಿದ್ದುದನ್ನು ಸರಮೆ ಪಣಿಗಳಿಗೆ ತಿಳಿಸಿದ್ದು ಆಕ್ರಮಣದಿಂದ ಪಾರಾಗಲು ಸೂಚನೆಯೇ ವಿನಾ ಅವರು ಗೋವುಗಳನ್ನು ಸೆಳೆದು ತಂದಿದ್ದರೆಂದು ಅವಳೆಲ್ಲೂ ಹೇಳುವುದಿಲ್ಲ. ಹೊಸ ಸಂಶೋಧನೆಗಳು ಪಠ್ಯಪುಸ್ತಕ ಮತ್ತು ವಿಶ್ವವಿದ್ಯಾಲಯಗಳನ್ನು ದಾಟಿ ಈಗ ಆಕಾಶವಾಣಿಯನ್ನೂ ಪ್ರಭಾವಿಸುತ್ತಿವೆ. ಅದೊಂದು ವಿಶೇಷ.

✶ ✶ ✶

## ಹೊಸ ವರ್ಷದ ಶುಭಾಶಯಗಳು



## ೨೦೧೮

ಒಂದು ಶತಮಾನದ ಹಿಂದೆ ರಷ್ಯಾದಲ್ಲಿ ಕ್ರಾಂತಿ ಜರುಗಿತು. ಅದರ ಸಮಾಚಾರ ಮತ್ತು ಅಂದು ದಿನದಿಂದ ದಿನಕ್ಕೆ ಬದಲಾಗುತ್ತಿದ್ದ ಸನ್ನಿವೇಶದ ಚಿತ್ರಣವನ್ನು ನಮ್ಮ ದೇಶಕ್ಕೆ ಹೇಗೆ ನೀಡಲಾಗುತ್ತಿತ್ತು? ನೀಡುತ್ತಿದ್ದವರು ವಸಾಹತು ಯಜಮಾನರಾದ ಬ್ರಿಟನ್ನಿನವರು, ಅವರ ಪತ್ರಿಕೆಗಳ ಬಾತ್ಮೀದಾರರು. 'ದಿ ಹಿಂದು' ಪತ್ರಿಕೆ ೧೯೧೭ರ ಡಿಸೆಂಬರ್ ೧೫ರಂದು ಅಂತಹ ವರದಿಯೊಂದನ್ನು ಪ್ರಕಟಿಸಿದ್ದುದನ್ನು ಈ ವರ್ಷದ ಅದೇ ತಾರೀಕಿನ ಪತ್ರಿಕೆಯಲ್ಲಿ ಪತ್ರಿಕೆಯು ಮರು-ಅಚ್ಚು ಮಾಡಿದೆ. ಬ್ರಿಟನ್ ಅಕ್ಟೋಬರ್ ಕ್ರಾಂತಿಯನ್ನು ನಮ್ಮ ದೇಶಕ್ಕೆ ಪರಿಚಯಿಸಿದ್ದು ಹೇಗೆಂಬುದು ಈ ತುಣುಕಿನಿಂದ ತಿಳಿಯುತ್ತದೆ : "ಪೆತ್ರೋಗ್ರಾಡ್‌ನಿಂದ ಬಂದಿರುವ ತಂತಿ ಸಂದೇಶಗಳು ಅಲ್ಲಿ "ಮಾಕ್ಸಿಮಲಿಸ್ಟ್"ಗಳು (ಅಂದರೆ ಕಮ್ಯುನಿಸ್ಟರು, ಬಾಲ್ಶೆವಿಕರು) ಕ್ರೂರವಾಗಿ ಮತ್ತು ತಡೆಯಿಲ್ಲದೆ ನಿರಂಕುಶ ಅಧಿಕಾರವನ್ನು ನಡೆಸುತ್ತಿವೆಯೆಂದು ತಿಳಿಸಿವೆ. ಸಂವಿಧಾನರಚನಾ ಶಾಸನಸಭೆಯಲ್ಲಿ ವಿರೋಧಿಗಳಿಗೆ ಅವಕಾಶ ನೀಡಲಾಗುವುದಿಲ್ಲ. ಚರ್ಚೆಯಲ್ಲಿ ಭಾಗವಹಿಸಬಹುದಾಗಿದ್ದ ಪ್ರಮುಖ ಕ್ಯಾಡೆಟ್‌ಗಳನ್ನು (ಅದೊಂದು ಅಂದಿನ ಪಕ್ಷದ ಹೆಸರು) ಈಗಾಗಲೆ ದಸ್ತಗಿರಿ ಮಾಡಲಾಗಿದೆ, ಇಲ್ಲವೆ ಕಾನೂನುಬಾಹಿರವಾಗಿ ಆಯ್ಕೆಯಾದವರೆಂದು ಪರಿಗಣಿಸಲಾಗಿದೆ. ಅದೇ ಸಮಯದಲ್ಲಿ ಸರ್ಕಾರವು ಜನರ ದುರಾಸೆಗೆ ಪ್ರಚೋದನೆಯನ್ನು ಸತತವಾಗಿ ನೀಡುತ್ತಲೇ ಇದೆ. ಭೂಮಿ ಮತ್ತು ಬೇರೆ ರೂಪದ ಆಸ್ತಿಯ ಹಂಚಿಕೆಯ ಆಶ್ವಾಸನೆ ಇಂತಹ ಒಂದು ಪ್ರಚೋದನೆಯಾಗಿದೆ. ಪೆತ್ರೋಗ್ರಾಡಿನ ಮೇಯರ್ ಸಂವಿಧಾನ ರಚನಾ ಸಭೆಯನ್ನು ತನ್‌ಬಿದಾ ಅರಮನೆಯಲ್ಲಿ ಉದ್ಘಾಟಿಸಿದ್ದಾನೆ."

– ಭೂಮಿಯನ್ನು ರೈತರಿಗೆ ಹಸ್ತಾಂತರಿಸುವ ಕ್ರಮವನ್ನಿಲ್ಲಿ "ದುರಾಸೆಗೆ ಪ್ರಚೋದನೆ" ಎಂದು ಉಲ್ಲೇಖಿಸಿರುವುದು ಸ್ವಾರಸ್ಯಕರವಾಗಿದೆ. ನಮ್ಮ ದೇಶದ ಇಂದಿನ ರೈತರು ತಮ್ಮ ಹಕ್ಕಿನ ಭೂಮಿ, ವಸತಿ, ಇತ್ಯಾದಿಗಳನ್ನು ಪಡೆಯಲು ಆಗ್ರಹಿಸಿದರೆ ಅದನ್ನೂ "ದುರಾಸೆ"ಯೆಂದು ಬಗೆಯುವ ಮನಸ್ಸುಗಳು ನಮ್ಮ ನಡುವೆ ಇವೆಯೆಂಬುದು ದೊಡ್ಡ ಮತ್ತು ಕ್ರೂರ ವ್ಯಂಗ್ಯ.

✶ ✶ ✶

ಮೂಢನಂಬಿಕೆಗಳನ್ನು ನಿಗ್ರಹಿಸಲು ಕಾನೂನನ್ನು ರೂಪಿಸಬೇಕೆಂದು ಹೊರಟ ಕರ್ನಾಟಕ ಸರ್ಕಾರವು ಬೆಟ್ಟವನ್ನೂ ಕಡಿಯದ ಮತ್ತು ಇಲಿಯನ್ನೂ ಹಿಡಿಯದ ಪರಾಕ್ರಮ ಪ್ರದರ್ಶಿಸುವ ರೀತಿಯಲ್ಲಿ ಒಂದು ಶಾಸನವನ್ನು ತನ್ನ ಬತ್ತಳಿಕೆಯಲ್ಲಿ ತುಂಬಿಕೊಂಡಿದೆ. ಬೆಳಗಾವಿಯಲ್ಲಿ ಜರುಗಿದ ವಿಧಾನಸಭೆಯು ಆ ಶಾಸನವನ್ನು ಅಂಗೀಕರಿಸಿತು. ನಮ್ಮ ಘೋರ ಶಾಸಕರಿಗೆ ಇಂತಹ ಅಪ್ರಬುದ್ಧ ತೇಪೆ ಶಾಸನವನ್ನು ಹೊರತರಲು ಮೂರು-ನಾಲ್ಕು ವರ್ಷ ಬೇಕಾಯಿತೆಂಬುದು ಒಂದು ನೂತನ ದಾಖಲೆಯಾಗಿ ಉಳಿಯಬಹುದು. ಶಾಸನದ ವಿಶೇಷವೇನೆಂದರೆ ಅದೆಲ್ಲೂ 'ಮೂಢನಂಬಿಕೆ' ಎಂಬ ಪದವನ್ನು ಬಳಸಿಯೇ ಇಲ್ಲ. ಜೊತೆಗೆ ಜ್ಯೋತಿಷ್ಯ (ಅಂದರೆ ಉಚ್ಚದರ್ಜೆಯ ಕವಡೆಶಾಸ್ತ್ರ) ಮತ್ತು ವಾಸ್ತು, ಶಾಸನದಲ್ಲೆಲ್ಲೂ ಪ್ರತಿಬಂಧಕಕ್ಕೆ ಗುರಿಯಾಗಿಲ್ಲ. ಸರ್ವೋಚ್ಚ ನ್ಯಾಯಾಲಯವು ಹಲವು ವರ್ಷಗಳಿಂದ ತನ್ನ ಮೇಜಿನ ಮೇಲೆ ಇರಿಸಿಕೊಂಡಿರುವ 'ಮಡೆಸ್ನಾನ'ವನ್ನು ಪರೋಕ್ಷವಾಗಿ ನಿಷೇಧಿಸುವ ಒಂದು ಒಳ್ಳೆಯ ಕ್ರಮವನ್ನು ವಿಧಾನಸಭೆಯು ಮಾನ್ಯ ಮಾಡಿದೆ. ಶಾಸನ ಹೇಗಿದೆಯೆಂದರೆ ಮೊಸಳೆಗಳು ಗಾಳಕ್ಕೆ ಬೀಳುವುದಿಲ್ಲ, ಆದರೆ ಕಪ್ಪೆಯ ಗೊದಮೊಟ್ಟೆ (ಬಾಲವಿರುವ ಅತ್ಯಂತ ಶೈಶವಾವಸ್ಥೆಯ ಕಪ್ಪೆಮರಿ) ಸಿಕ್ಕಿಹಾಕಿಕೊಳ್ಳುತ್ತದೆ. ಉದಾಹರಣೆಗೆ, ಮಾರುಕಟ್ಟೆಗಳ

*(೧೩ನೇ ಪುಟಕ್ಕೆ...)*

ಸಂಪಾದಕೀಯ

# ಬೆನ್ನ ಹಿಂದಿನ ಬೆಂಕಿ ಕಣ್ಣ ಮುಂದಿನ ಬೆಳಕಾಗಲಿ

'ಹೊಸತು' ತನ್ನ ಪ್ರಕಟಣೆಯ ಹದಿನೆಂಟು ವರ್ಷಗಳನ್ನು ಪೂರೈಸಿ ಹತ್ತೊಂಬತ್ತನೇ ವರ್ಷಕ್ಕೆ ಕಾಲಿಟ್ಟಿದೆ. ವರ್ತಮಾನದ ವಿದ್ಯಮಾನಗಳಿಗೆ ಮುಖಾಮುಖಿಯಾಗುತ್ತ, ಜನಪರ ಒಲವು–ನಿಲುವಿನೊಂದಿಗೆ ಪ್ರಕಟವಾಗುತ್ತಿರುವ 'ಹೊಸತು' ಲೇಖಕರ, ಓದುಗರ, ಜಾಹೀರಾತುದಾರರ, ನವಕರ್ನಾಟಕ ಸಿಬ್ಬಂದಿಯ ನಿರಂತರ ಪಾಲ್ಗೊಳ್ಳುವಿಕೆಯಿಂದಾಗಿ ಇಂದು ಕನ್ನಡ ಓದುಗರ ಒಂದು ಮೌಲಿಕ ತಿಂಗಳ ಪತ್ರಿಕೆಯಾಗಿ ಬೆಳೆದಿದೆ. ಸದಾ ನೆಮ್ಮದಿಯ ನಾಳೆಗಾಗಿ ಹಂಬಲಿಸುತ್ತ ಜನತೆಯ ನೆಮ್ಮದಿಯನ್ನು ಕದಡುವ ಶಕ್ತಿಗಳನ್ನು ಪ್ರತಿರೋಧಿಸುವ, ನೆಮ್ಮದಿಗೆ ಪೂರಕವಾದ ಚಿಂತನೆಗಳನ್ನು ಪುರಸ್ಕರಿಸಿ ಪ್ರಕಟಿಸಿ ಸಾಧ್ಯವಾದಷ್ಟು ಓದುಗರಿಗೆ ತಲುಪಿಸುತ್ತ ಕನ್ನಡ ಪತ್ರಿಕೋದ್ಯಮದ ನಿಯತಕಾಲಿಕೆಗಳಲ್ಲಿ ಒಂದು ವಿಭಿನ್ನ ಮಾದರಿಯನ್ನು 'ಹೊಸತು' ಸೃಷ್ಟಿಸಿದೆ. ಇಂಥ ಪ್ರಯತ್ನಕ್ಕೆ ಪೂರಕವಾಗಿ ಶ್ರಮಿಸಿದ ಎಲ್ಲರಿಗೂ ಹೊಸತು ಬಳಗ ವಂದಿಸುತ್ತಲೇ ಇನ್ನೂ ಹೆಚ್ಚಿನ ಲೇಖಕರು, ಚಿಂತಕರು ಪಾಲ್ಗೊಂಡು, ಹೆಚ್ಚಿನ ಓದುಗರನ್ನು ತಲುಪಲು ಸಹಕರಿಸಬೇಕೆಂದು ವಿನಂತಿಸುತ್ತದೆ. ಎಂಥ ವಿಷಮಕಾರಿ ಸ್ಥಿತಿಯಲ್ಲಿಯೂ ನೆಮ್ಮದಿಯ ನಾಳೆ ನಮ್ಮದು ಎಂಬ ಭರವಸೆ ಇಟ್ಟುಕೊಳ್ಳೋಣ, ಅಂಥ ಭರವಸೆಗೆ ಹೊಸ ವರ್ಷ ಆಕರ ಒದಗಿಸಲಿ. ಎಲ್ಲರಿಗೂ ಹೊಸ ವರ್ಷದ ಶುಭಾಶಯಗಳು.

ವರ್ತಮಾನದ ಪ್ರತಿಯೊಂದು ಕ್ಷಣವೂ ಭೂತದಿಂದ ಭವಿಷ್ಯತ್ತಿನ ಕಡೆಗಿನ ಸ್ಥಿತ್ಯಂತರವೇ. ನಿರ್ದಿಷ್ಟ ಸಂದರ್ಭದ ಕೆಲವು ಸಾಮಾಜಿಕ, ರಾಜಕೀಯ ಸ್ಥಿತ್ಯಂತರಗಳು ಇತಿಹಾಸವಾಗಿ, ಭವಿಷ್ಯತ್ತಿನ ಮುನ್ನೋಟಗಳಾಗಿ ದಾಖಲಾಗುತ್ತವೆ. ಇಂಥ ಮಹತ್ವದ ಸ್ಥಿತ್ಯಂತರ ಸಂದರ್ಭದಲ್ಲಿ ವಿಶ್ವ ೨೦೧೮ನೇ ವರ್ಷಕ್ಕೆ ಕಾಲಿಡುತ್ತಿದೆ. ಕಳೆದ ಶತಮಾನದ ಆರಂಭ ಸ್ವಾತಂತ್ರ್ಯ ಆಂದೋಲನಗಳಿಂದಾಗಿ ಗುಲಾಮಗಿರಿಯಿಂದ ವಿಮೋಚನೆಗೊಂಡು ಪ್ರಜಾಸತ್ತೆಯ ಸ್ಥಾಪನೆಯೆಡೆಗೆ ಸಾಗಿತು. ಆದರೆ ಈ ಶತಮಾನದ ಆರಂಭದಲ್ಲಿ ಸ್ವತಂತ್ರಗೊಂಡ ಪ್ರಜಾಸತ್ತೆಗಳು ಜಾಗತೀಕರಣದ ನೀತಿಗಳಿಂದ ಮತ್ತೆ ನವವಸಾಹತುಶಾಹಿಯ ನಿಯಂತ್ರಣಕ್ಕೊಳಗಾದವು. ಆರ್ಥಿಕ ಉದಾರೀಕರಣ ನೀತಿಗಳಿಂದ ಬಣ್ಣ ಬಣ್ಣದ ಕನಸು ತೋರಿಸಿ ಇದಕ್ಕೆ ಪರ್ಯಾಯವೇ ಇಲ್ಲವೆಂದವರು ಇಂದು ಸುಸ್ತಾಗಿದ್ದಾರೆ. ಅಮೆರಿಕದ ಅಧ್ಯಕ್ಷ ಟ್ರಂಪ್ ಅಮೆರಿಕ ಮತ್ತು ಮೆಕ್ಸಿಕೋ ದೇಶಗಳ ನಡುವೆ ಗೋಡೆ ಕಟ್ಟುವ ಘೋಷಣೆ ಮಾಡಿದ್ದಾನೆ. ಅಮೆರಿಕಾ ದೇಶಕ್ಕೆ ಇತರ ದೇಶಗಳ ಕೆಲಸಗಾರರ ಪ್ರವೇಶ ನಿರ್ಬಂಧಿಸುವ ಕಾನೂನು ತರುತ್ತಿದ್ದಾನೆ. ಅಂದರೆ ಬಂಡವಾಳದ ಜಾಗತೀಕರಣವನ್ನು ಪ್ರತಿಪಾದಿಸುವವರು ಶ್ರಮದ ಜಾಗತೀಕರಣವನ್ನು ನಿರಾಕರಿಸುತ್ತಾರೆ. ಜಾಗತೀಕರಣದ ನೀತಿಗಳಿಂದಾಗಿ ಉದ್ಯೋಗಗಳಿಲ್ಲದ ಅಭಿವೃದ್ಧಿ ಕಣ್ಣಿಗೆ ರಾಚುತ್ತಿದೆ. ವಿಶ್ವದ ಸಂಪನ್ಮೂಲಗಳು ಕಾರ್ಪೊರೇಟ್ ವಲಯದ ಹಸಿವಿಗೆ ಆಹಾರವಾಗುತ್ತಿವೆ. ವಿಶ್ವದ ಮಾನವ ಸಂಪನ್ಮೂಲ ಉತ್ಪಾದನಾ ಪ್ರಕ್ರಿಯೆಯಿಂದ ಹೊರಬೀಳುತ್ತಿದೆ. ಇದು ಎಷ್ಟು ದಿನ ನಡೆದೀತು? ಇಂಥದೇ ಸಂದರ್ಭದಲ್ಲಿ ಸಮಾಜವಾದಿ ಕ್ರಾಂತಿಯಾಗಿ ನೂರು ವರ್ಷ ಕಳೆಯಿತು. ತಮ್ಮ ನೆಲದ ಮಣ್ಣಿನಲ್ಲಿ ತಾವೇ ಅನಾಥರಾಗುತ್ತಿರುವ ಜನತೆಗೆ ಇಂದು ಸಮಾಜವಾದ, ಸಮತಾವಾದವೇ ಪರ್ಯಾಯ. ಆದರೆ ಜನ ಅಂಥ ಯೋಚನೆ ಮಾಡಬಾರದೆಂದೇ ಇಂದು ವಿಶ್ವದಲ್ಲಿ ಜನಾಂಗೀಯ, ಪ್ರಾದೇಶಿಕ, ಧಾರ್ಮಿಕ ಭಾವನೆಗಳನ್ನು ಕೆರಳಿಸಿ ಅಂತರ್‌ಸಂಘರ್ಷ ಹುಟ್ಟುಹಾಕಲಾಗುತ್ತಿದೆ.

ಭಾರತ ಅಂತರರಾಷ್ಟ್ರೀಯ ವಿದ್ಯಮಾನಗಳಿಂದ ಹೊರತಾಗಿಲ್ಲ. ಜಿಂಕೆಯೊಂದನ್ನು ಹೆಬ್ಬಾವು ಕ್ಷಣಕ್ಷಣಕ್ಕೂ ನುಂಗುವಂತೆ ಭಾರತವನ್ನು ಕಾರ್ಪೊರೇಟ್ ಕಂಪನಿಗಳು ಕಬಳಿಸುತ್ತಿವೆ. ಕಾರ್ಪೊರೇಟ್ ಸ್ನೇಹಿಯಾದ ಭಾರತದ ಆಡಳಿತ ವರ್ಗ ಅಭಿವೃದ್ಧಿಯ ಕುರಿತು ಮಾತನಾಡುತ್ತದೆ. ಆದರೆ ಆ ಅಭಿವೃದ್ಧಿಯಲ್ಲಿ ಭಾರತದ ಪ್ರಜೆಗಳಿಲ್ಲ. ಕೋಮುಭಾವನೆಗಳನ್ನು ಕೆರಳಿಸಿ, ಸಮಾಜವನ್ನು ಧ್ರುವೀಕರಣಗೊಳಿಸಿ ಅಧಿಕಾರಕ್ಕೆ ಬಂದ ಇಲ್ಲಿನ ಆಡಳಿತ ಪಕ್ಷ ಜನತೆಗೆ ಕೊಟ್ಟ ಭರವಸೆಗಳನ್ನು ಪೂರೈಸಲಾರದೇ ಬೆತ್ತಲೆಯಾಗಿ ನಿಂತಿದೆ. ಅದೇ ಸಂದರ್ಭದಲ್ಲಿ ಕಾರ್ಪೊರೇಟ್ ವಲಯಕ್ಕೆ ನೀಡಿದ ಭರವಸೆಯನ್ನು ಪೂರೈಸುತ್ತಿದೆ. ವಿದೇಶದಲ್ಲಿರುವ ಕಪ್ಪುಹಣವನ್ನು ಭಾರತಕ್ಕೆ ತಂದು ಭಾರತದ ಪ್ರಜೆಗಳ ಖಾತೆಗಳಲ್ಲಿ ಹಾಕುತ್ತೇನೆಂದ ಪ್ರಧಾನಿ ಮೋದಿ ಕೈಚೆಲ್ಲಿ ಕುಳಿತಿದ್ದಾರೆ. ಪನಾಮಾ ಪೇಪರ್ಸ್‌ನಲ್ಲಿ ಬಹಿರಂಗವಾದ ಕಪ್ಪು ಹಣ ಖದೀಮರ ಹೆಸರುಗಳು ಕೈಸೇರಿದ್ದರೂ ಅದನ್ನು ಜನರಿಗೆ ತಿಳಿಸುವ ಧೈರ್ಯವನ್ನೂ ಈ ಸರಕಾರ ಮಾಡುತ್ತಿಲ್ಲ. ಬದಲಾಗಿ ಜನಸಾಮಾನ್ಯರ ಹಣವನ್ನು ನೋಟು ಅಮಾನ್ಯೀಕರಣದ ಮೂಲಕ ಬ್ಯಾಂಕಿಗೆ ತುಂಬಿಸಿಕೊಂಡರು. ಈಗ ಬ್ಯಾಂಕುಗಳು ದಿವಾಳಿ ಆದರೆ ಬ್ಯಾಂಕ್‌ನಲ್ಲಿರುವ ಜನಸಾಮಾನ್ಯರ ಹಣವನ್ನು ಮುಟ್ಟುಗೋಲು ಹಾಕುವ ಕಾನೂನು (ಹಣಕಾಸು ಪರಿಹಾರ ಮತ್ತು ವಿಮಾ ಠೇವಣಿ – ಎಫ್.ಆರ್.ಡಿ.ಐ.) ತರುತ್ತಿದ್ದಾರೆ. ಬ್ಯಾಂಕ್‌ಗಳ ದಿವಾಳಿಗೆ ಕಾರಣರಾಗುವ ದೊಡ್ಡ ದೊಡ್ಡ ಉದ್ಯಮಿಗಳು ಪಡೆದ ಸಾಲ ವಸೂಲಿ ಮಾಡಲು, ಅವರ ಆಸ್ತಿ ಮುಟ್ಟುಗೋಲು ಹಾಕಿಕೊಳ್ಳಲು ಸಿದ್ಧರಿಲ್ಲ. ದೇಶದ ಬ್ಯಾಂಕ್‌ಗಳಲ್ಲಿರುವ ಶೇ. ೭೦ರಿಂದ ೮೦ರಷ್ಟು ಹಣ ಈ ದೇಶದ ಜನಸಾಮಾನ್ಯರು ಪರಿಶ್ರಮದಿಂದ ಇಟ್ಟಿರುವ ಹಣ. ವಿದೇಶದಲ್ಲಿರುವ ಕಪ್ಪು ಹಣವನ್ನು ತಂದು ಭಾರತದ ಪ್ರಜೆಗಳ ಬ್ಯಾಂಕ್ ಖಾತೆಗೆ ಹಾಕುತ್ತೇನೆಂದ ಮೋದಿಯವರು ಇಂದು ಭಾರತದ ಪ್ರಜೆಗಳು ಬ್ಯಾಂಕ್‌ಗಳಲ್ಲಿಟ್ಟ ಹಣವನ್ನೇ ಮುಟ್ಟುಗೋಲು ಹಾಕಿಕೊಳ್ಳುವ ಕಾನೂನು ತರಲು ಹೊರಟಿದ್ದಾರೆ. ಇನ್ನೊಂದೆಡೆ ನೀತಿ ಆಯೋಗದ ಅನೀತಿಯ ಶಿಫಾರಸ್ಸಿನ ಫಲವಾಗಿ ದೇಶದ ಕೃಷಿ ಮಾರುಕಟ್ಟೆ ಕಾನೂನನ್ನು ಬದಲಾಯಿಸಿ ಕೃಷಿಕೈಗಾರಿಕೆಗಳಿಗೆ ಅನುಕೂಲವಾಗುವಂಥ ಕಾನೂನು (ಎ.ಪಿ.ಎಲ್.ಎಂ.ಸಿ.) ಸಿದ್ಧಮಾಡಿದ್ದಾರೆ. ಇದರಿಂದ ದೇಶದಲ್ಲಿರುವ ಶೇ. ೭೦ರಷ್ಟು ಸಣ್ಣ, ಅತಿ ಸಣ್ಣ ರೈತರು ಬೀದಿಗೆ ಬೀಳುತ್ತಾರೆ. ಅಲ್ಲಿಗೆ ಪ್ರಧಾನಿಯವರ ಕಾರ್ಪೊರೇಟ್ ಸ್ನೇಹಿ ಸರಕಾರದ ಪ್ರಮುಖ ಅಜೆಂಡಾ ಪೂರ್ತಿಯಾಗುತ್ತದೆ. ಇದಾವುದೂ ಜನರಿಗೆ ತಿಳಿಯ ಬಾರದೆಂದೇ ದೇಶಪ್ರೇಮದ ಹೆಸರಿನಲ್ಲಿ, ಧರ್ಮದ ಹೆಸರಿನಲ್ಲಿ ಜನರ ಮಧ್ಯೆ ಸಂಘರ್ಷ ಉಂಟುಮಾಡುವ ಯೋಜಿತ ಕ್ರಿಯೆ ನಡೆಯುತ್ತಿದೆ.



ನಿರುದ್ಯೋಗ, ಬಡತನ, ರೈತರ ಆತ್ಮಹತ್ಯೆ, ಮಹಿಳೆಯರ ಮೇಲಿನ ಅತ್ಯಾಚಾರ, ಕೊಲೆ, ಸಣ್ಣ ಮಧ್ಯಮ ಕೈಗಾರಿಕೆಗಳ ನಾಶ, ಸಾರ್ವಜನಿಕ ಕೈಗಾರಿಕೆ, ಸಂಪತ್ತಿನ ಖಾಸಗೀಕರಣ, ಕೃಷಿ ವ್ಯವಸ್ಥೆಯ ನಾಶ, ಈ ಸಮಸ್ಯೆಗಳ ವಿರುದ್ಧ ಹೋರಾಡಬೇಕಾದ ನಾಡಿನಲ್ಲಿ ಲವ್ ಜಿಹಾದ್, ಮರ್ಯಾದಾ ಹತ್ಯೆ, ಗೋಮಾಂಸ, ಗೋರಕ್ಷಣೆ, ಟಿಪ್ಪು ಜಯಂತಿ, ರಾಮ ಮಂದಿರ, ದತ್ತಪೀಠ ಇಂಥ ವಿಷಯಗಳನ್ನು ಸೃಷ್ಟಿಸಿ ಸಂಘರ್ಷ ನಡೆಸಲಾಗುತ್ತಿದೆ. ಇದನ್ನು ವಿರೋಧಿಸಿ ಮೂಲಭೂತ ಪ್ರಶ್ನೆ ಎತ್ತಿದವರನ್ನು ದೇಶದ್ರೋಹಿಗಳು, ಪಾಕಿಸ್ತಾನ ನಿಷ್ಠರು ಎಂದು ಬಿಂಬಿಸಿ ಅವರ ಮೇಲೆ ದಾಳಿ, ಕೊಲೆ ನಡೆಸಲಾಗುತ್ತಿದೆ. ನಾಗರಿಕ ಸಮಾಜವನ್ನು ಒಡೆದು ರಾಜಕಾರಣ ಮಾಡುವ ಈ ನೀತಿ ತಕ್ಷಣಕ್ಕೆ ಫಲ ನೀಡಿರಬಹುದು. ಆದರೆ ಭವಿಷ್ಯದಲ್ಲಿ ನಾಗರಿಕ ಸಂಘರ್ಷದಂಥ ಅಪಾಯಕಾರಿ ಬೆಳವಣಿಗೆಗೆ ದಾರಿ ಮಾಡಿಕೊಡುತ್ತದೆ. ಈಗಾಗಲೇ ಸಾಮಾಜಿಕ ಜಾಲತಾಣಗಳಲ್ಲಿ ಅಂಥ ಸಂಘರ್ಷಗಳು ಆರಂಭವಾಗಿವೆ. ಧ್ವನಿ ಎತ್ತಿದವರ ನಾಲಿಗೆ ಕತ್ತರಿಸುವ, ಭಿನ್ನಮತದವರ ತಲೆ ತೆಗೆಯುವ ಹೇಳಿಕೆಗಳು ಈಗ ಕೇವಲ ಹೇಳಿಕೆಗಳಾಗಿ ಉಳಿದಿಲ್ಲ. ದಾಭೋಲ್ಕರ್, ಪಾನ್ಸರೆ, ಕಲಬುರ್ಗಿ, ಗೌರಿ ಹತ್ಯೆಗಳು ಇತಿಹಾಸ ಸೇರಿಹೋಗುವುದಿಲ್ಲ. ಕ್ರಿಯೆಗೆ ಪ್ರತಿಕ್ರಿಯೆ ಇದ್ದೇ ಇರುತ್ತದೆ.

# ಸಂಪಾದಕೀಯ

ಇತಿಹಾಸದ ಘಟನೆಗಳಿಗೆ ಬಣ್ಣ ಬಳಿದು ವರ್ತಮಾನದಲ್ಲಿ ಸಂಘರ್ಷ ಸೃಷ್ಟಿಸಿದರೆ ಒಳ್ಳೆಯ ಭವಿಷ್ಯ ನಿರ್ಮಾಣ ಸಾಧ್ಯವಿಲ್ಲ. ಬೆನ್ನ ಹಿಂದಿನ ಬೆಂಕಿ ಕಣ್ಣಮುಂದಿನ ಬೆಳಕಾಗಬೇಕು. ಇಂಥ ಸಂಘರ್ಷಗಳನ್ನು ತಡೆಯಬೇಕಾದರೆ ಜನ ಜಾಗೃತರಾಗಬೇಕು. ದೇಶದ ಆಳುವ ಪಕ್ಷ ಬಿ.ಜೆ.ಪಿ. ತನ್ನ ಕಾರ್ಪೊರೇಟ್ ಸ್ನೇಹಿ ನೀತಿಗಳನ್ನು ಮುಚ್ಚಿಹಾಕಿ ಆಡಳಿತ ಮುಂದುವರಿಸಿಕೊಳ್ಳಲು ಇಂದು ಫ್ಯಾಸಿಸ್ಟ್ ನೀತಿಗಳನ್ನು ಅನುಸರಿಸುತ್ತಿದೆ. ಅದನ್ನು ಎದುರಿಸಬೇಕಾದ ವಿರೋಧ ಪಕ್ಷವಾದ ಕಾಂಗ್ರೆಸ್ ಸಹ ಕಾರ್ಪೊರೇಟ್ ಪರವಾದ ನೀತಿಯನ್ನೇ ಹೊಂದಿದೆ. ನಾಗರಿಕ ಧ್ರುವೀಕರಣ ಮಾಡುತ್ತಿರುವ ಫ್ಯಾಸಿಸ್ಟ್ ಶಕ್ತಿಗಳನ್ನು ಎದುರಿಸಬೇಕಾದರೆ ಕೇವಲ ಸೆಕ್ಯೂಲರಿಸಂನ ಪಠಣ ಸಾಲದು. ಇದೇ ಕಾಂಗ್ರೆಸ್ ೧೯೬೯ರಲ್ಲಿ ಮಾಡಿದಂತೆ (ರಾಷ್ಟ್ರೀಕರಣ, ಉಳುವವನಿಗೆ ಭೂಮಿ ಮುಂತಾದ) ಜನಸ್ನೇಹಿ ಕಾರ್ಯಕ್ರಮಗಳನ್ನು ಪ್ರಾಮಾಣಿಕವಾಗಿ ಕೈಗೆತ್ತಿಕೊಳ್ಳಬೇಕು. ಕಾರ್ಪೊರೇಟ್ ಕಂಪನಿಗಳ ಭಿಕ್ಷೆಯನ್ನು ತಿರಸ್ಕರಿಸಿ ಜನತೆಯ ಮಧ್ಯೆ ತನ್ನ ಬೇರುಗಳನ್ನು ಬಲಪಡಿಸಿಕೊಳ್ಳಬೇಕು. ಪ್ರಾದೇಶಿಕ ಪಕ್ಷಗಳು ಸಮಯಸಾಧಕ ನಿಲುವನ್ನು ತಳೆದಿವೆ. ಎಡಪಕ್ಷಗಳು ಜನಪ್ರತಿನಿಧಿ ವೇದಿಕೆಗಳಲ್ಲಿ ತಮ್ಮ ಪ್ರಾತಿನಿಧ್ಯವನ್ನು ಸಾಂಕೇತಿಕವಾಗಿ ಹೊಂದಿವೆ. ಇಂಥ ಸಂದರ್ಭದಲ್ಲಿ ಸೆಕ್ಯೂಲರ್, ಪ್ರಜಾಸತ್ತಾತ್ಮಕ, ಎಡಶಕ್ತಿಗಳ ಏಕತೆಯೇ ಫ್ಯಾಸಿಸಂಅನ್ನು ತಡೆಯುವ ದಾರಿ. ಫ್ಯಾಸಿಸಂ ಭಾರತದ ಒಕ್ಕೂಟ ವ್ಯವಸ್ಥೆಯಲ್ಲಿ ಬೆಳೆಯಲಾರದು. ಅದರ ಪ್ರಯೋಗಶಾಲೆಯಾದ ಗುಜರಾತ್‌ನಲ್ಲಿಯೇ ಅದು ಪತನದತ್ತ ಹೋಗುತ್ತಿದೆ. ಅದಕ್ಕೊಂದು ಪರ್ಯಾಯ ರೂಪಿಸಿ ಪ್ರಭುತ್ವ ಸ್ಥಾಪನೆಗಾಗಿಯೇ ನಡೆಯುತ್ತಿರುವ ಸಾಮಾಜಿಕ ಸಂಘರ್ಷಗಳನ್ನು ಕೊನೆಗಾಣಿಸಿ, ಜನರ ಮೂಲಭೂತ ಸಮಸ್ಯೆಗಳ ಕುರಿತು ಚಿಂತಿಸುವ, ಪರಿಹಾರ ಕಂಡುಕೊಳ್ಳುವ ಜವಾಬ್ದಾರಿ ಈ ದೇಶದ ರಾಜಕೀಯ, ಸಾಮಾಜಿಕ ಸಂಘಟನೆಗಳಿಗೆ ಬರಲಿ. ಅಂಥ ಕ್ರಿಯೆಗೆ ದೇಶದ ವಾತಾವರಣ ಪಕ್ವವಾಗಿದೆ. ೨೦೧೮ ಅಂಥ ಬೆಳವಣಿಗೆಗೆ ಪೂರಕವಾಗಿರಲಿ ಎಂದು ಆಶಿಸೋಣ.

ಸಿದ್ಧನಗೌಡ ಪಾಟೀಲ.

---

*ಈ ತಿಂಗಳು... (೧೧ನೇ ಪುಟದಿಂದ)*

ಬಳಿ ಕುಳಿತು ಗಿಣಿಶಾಸ್ತ್ರ ಹೇಳಿ ದಿನಕ್ಕೆ ಐದಾರು ರೂಪಾಯಿ ಸಂಪಾದಿಸುವ ಅನಪಾಯಕಾರಿ ವ್ಯಕ್ತಿಯನ್ನು ಪೊಲೀಸರು ಬಂಧಿಸಿಬಿಟ್ಟಾರು, ಆದರೆ ಲಕ್ಷ ರೂ. ವ್ಯವಹಾರದ ಟಿ.ವಿ. ಜ್ಯೋತಿಷಿ ಸುಕ್ಷೇಮವಾಗಿ ಮೂರ್ಖ ಟೋಪಿಗಳನ್ನು ಮೂರ್ಖಜನರ ತಲೆಯ ಮೇಲೆ ಹಾಕುತ್ತಾ ಮುಂದುವರಿಯಬಹುದು. ಏನೂ ಇಲ್ಲದಿರುವುದಕ್ಕಿಂತ ತುಸುವಾದರೂ ಏನೋ ಒಂದು ಬಂದಿತಲ್ಲಾ ಎಂದು ಸಮಾಧಾನ ವ್ಯಕ್ತಪಡಿಸುವುದು ಶಾಸನಕ್ಕೆ ಮೊದಲ ಪ್ರತಿಕ್ರಿಯೆ. ಶಾಸನದ ಪ್ರಕಾರ ಎಲ್ಲ ಜವಾಬ್ದಾರಿಯೂ ಒಬ್ಬ ಪೊಲೀಸ್ ಇನ್‌ಸ್ಪೆಕ್ಟರ್ ಮೇಲಿರುತ್ತದೆ (ನಿಬಂಧ ೬) ಮತ್ತು ಆತನ ಇಪ್ಪತ್ತು ಕೆಲಸಗಳಲ್ಲಿ ಇದು ಅತಿಕಡೆಯ ಸ್ಥಾನದಲ್ಲಿರುತ್ತದೆ. ಕೆಲವು ವೀಕ್ಷಕರ ಪ್ರಕಾರ ಅಂಥವರಿಗೆ ಒಂದೆರಡು ಪುಡಿಕಾಸು ಮಾಡಿಕೊಳ್ಳಲು ಶಾಸನವು ಇನ್ನೊಂದು ದ್ವಾರವನ್ನೇರ್ಪಡಿಸಿದೆ. ಶಾಸನಕ್ಕೆ ಸ್ವಲ್ಪವಾದರೂ ಶಕ್ತಿ ತುಂಬಬೇಕಾದರೆ ಈ ಪೊಲೀಸ್ ಅಧಿಕಾರಿಗೆ ಒಂದು ನಾಗರಿಕ ಸಮಿತಿಯ ಸಹಾಯ ದೊರೆಯುವಂತೆ ಶಾಸನದಡಿ ನಿಯಮಗಳನ್ನು ರೂಪಿಸಬೇಕು. ರಾಜ್ಯಪಾಲ ಮಹಾಶಯ ಇನ್ನೂ ಶಾಸನಕ್ಕೆ ತನ್ನ ಅಂಕಿತ ಹಾಕಿಲ್ಲ. (ಹಾಕುವ ಮೊದಲೇ ಗುಜರಾತಿಗೆ ಹಿಂದಿರುಗಿದರೆ ಮುಂದೆ ಬರುವ ಬೇರೊಬ್ಬ ಮಹಾನುಭಾವ ಹೊಸ ತಕರಾರುಗಳನ್ನೆತ್ತಬಹುದೇನೋ). ನಾಗರಿಕ ಸಮಿತಿಯಲ್ಲಿ ಮೂಢನಂಬಿಕೆಗಳ ವಿರುದ್ಧ ತಿಳಿವಳಿಕೆ ಮೂಡಿಸುವ ಪ್ರಕ್ರಿಯೆಯಲ್ಲಿ ಭಾಗವಹಿಸುತ್ತಾ ಬಂದಿರುವ ವ್ಯಕ್ತಿಗಳು ಸೇರ್ಪಡೆಗೊಳ್ಳಬೇಕು. ಪ್ರತಿಯೊಂದು ಜಿಲ್ಲೆಯಲ್ಲೂ ಇಂತಹ ಸಮಿತಿಗಳಿರಬೇಕಾದ್ದು ಸಹ ಅತ್ಯವಶ್ಯಕ. ಶಾಸನದ ೧೨ನೆಯ ನಿಬಂಧನೆಯು "ಅಮಾನವೀಯ, ದುಷ್ಟ ಪದ್ಧತಿಗಳ ಮತ್ತು ವಾಮಾಚಾರದ ದುಷ್ಪರಿಣಾಮಗಳ ಕುರಿತು" ಸಮಾಜದಲ್ಲಿ ಅರಿವುಂಟುಮಾಡುವ ಸಲುವಾಗಿ ಕಾರ್ಯಕ್ರಮಗಳನ್ನು ಕೈಗೊಳ್ಳಬಹುದೆಂದು ಹೇಳಿದೆ. ನಮ್ಮ ದೇಶದಲ್ಲಿ ಅರಿವು ಸುತರಾಂ ಇಲ್ಲದವರು ಅರಿವು ಮೂಡಿಸಲು ಯೋಜಿತರಾಗುವ ವಿಚಿತ್ರ ಪರಿಸ್ಥಿತಿ ಅನೇಕ ದಶಕಗಳಿಂದ ಜಾರಿಯಲ್ಲಿದೆ. ಅನೀತಿವಂತರು "ನೀತಿ ಆಯೋಗದ" ಸದಸ್ಯರಾಗುವುದು ಅದಕ್ಕೊಂದು ಉದಾಹರಣೆ. ವಿಜ್ಞಾನವನ್ನು ತಿರಸ್ಕರಿಸುವವರು ಅಖಿಲ ಭಾರತ ವಿಜ್ಞಾನ ಸಮ್ಮೇಳನದಲ್ಲಿ ಸಂಶೋಧನಾ ಪ್ರಬಂಧ ಮಂಡಿಸುವುದು ಇನ್ನೊಂದು ಉದಾಹರಣೆ. ಇಂತಹ ದುಷ್ಟ ಪ್ರಹಸನಗಳಿಗೆ ಅವಕಾಶ ನೀಡದಂತೆ 'ಅರಿವು ಕಾರ್ಯಕ್ರಮ'ಗಳನ್ನು ಸಾರ್ವಜನಿಕರ ಮತ್ತು ಶಾಸಕರ ನಡುವೆ ನಡೆಸಲು ಸೂಕ್ತ ಪರಿಣತರು ಮತ್ತು ನಿಷ್ಠಾವಂತ ಕಾರ್ಯಕರ್ತರಿಗೆ ಮಾತ್ರವೇ ಅವಕಾಶ ನೀಡಬೇಕು. "ವಾಸ್ತುಶಾಸ್ತ್ರದ ಕುರಿತು ಸಲಹೆ, ಜ್ಯೋತಿಷ್ಯ ಮತ್ತು ಇತರ ಜ್ಯೋತಿಷಿಗಳಿಂದ ಸಲಹೆ" ಇವೆಲ್ಲಾ ಶಾಸನದ ಪರಿಧಿಗೆ ಸೇರುವುದಿಲ್ಲವೆಂದು ಕಲಂ ೧೩ (vii) ತಿಳಿಸುತ್ತದೆ. ಅಂದರೆ, ತಿಮಿಂಗಿಲಗಳು ಶಾಸನದ ಹೊರಗೆ ಇರಿಸಲ್ಪಟ್ಟಿದ್ದಾರೆ ಎಂದರ್ಥ. ಸಾಧ್ಯವಾದಷ್ಟು ಬೇಗನೆ ಈ ನ್ಯೂನತೆಯನ್ನು ಪರಿಹರಿಸಲು ಶಾಸಕರು ಮುಂದಾಗಬೇಕು, ಸೂಕ್ತ ತಿದ್ದುಪಡಿಯನ್ನು ಅಂಗೀಕರಿಸಬೇಕು. ಅದಕ್ಕಾಗಿ ಸಾರ್ವಜನಿಕ ವಲಯಗಳಲ್ಲಿ ಎಲ್ಲ ಮೂಢನಂಬಿಕೆಗಳ ವಿರುದ್ಧ ತೀವ್ರವಾದ ಆಂದೋಲನಗಳು ಜರುಗುತ್ತಿರಬೇಕು. ಅರ್ಥಾತ್, ಮೌಢ್ಯವನ್ನು ಪೋಷಿಸುವಂತಹ ಮೌಢ್ಯದಿಂದ ಆವೃತವಾಗಿರುವ ಮಿದುಳುಗಳು ನಿಷ್ಕ್ರಿಯಗೊಳ್ಳುವಂತಾಗಬೇಕು; ಶಾಸನಸಭೆಯೂ ಸೇರಿದಂತೆ ಅಂತಹ ಮಿದುಳುಗಳಿಗೆ ಯಾವ ಸಭೆಯಲ್ಲೂ ಅಗ್ರಸ್ಥಾನ ದೊರೆಯಬಾರದು.

* * *

ಚುನಾವಣೆಗಳಲ್ಲಿ ಮತ ಚಲಾಯಿಸಲು ಯಂತ್ರಗಳು ಚಾಲ್ತಿಗೆ ಬಂದಿವೆ. ಅವನ್ನು ತಂತ್ರಜ್ಞಾನದ ಆವಿಷ್ಕಾರಗಳ ಮುಖೇನ ದುರುಪಯೋಗಮಾಡಿಕೊಳ್ಳಲು ಸಾಧ್ಯವೆಂದು ಕೆಲವು ಅನುಮಾನಗಳು ವ್ಯಕ್ತವಾಗಿವೆ. ಅಂತಹ ಭೀತಿ ಅನವಶ್ಯಕವೆಂದು ತಂತ್ರಜ್ಞಾನಿಗಳು ಹೇಳುತ್ತಲೂ ಇದ್ದಾರೆ. ಮಾಜಿ ಪ್ರಧಾನಿಯನ್ನು ಪಾಕಿಸ್ತಾನದ ಏಜೆಂಟ್ ಎಂದು ದೂಷಿಸಿದರೂ ಖಂಡನೆಗೆ ಗುರಿಯಾಗದ ಪ್ರಧಾನಿ ನಮ್ಮ ದೇಶದಲ್ಲಿರುವಾಗ ಎಂತೆಂತಹ ದೈತ್ಯತಂತ್ರಗಳನ್ನು ಅನುಸರಿಸಿ ಚುನಾವಣೆಯಲ್ಲಿ ಗೆಲುವು ಸಾಧಿಸಬಹುದೆಂಬುದನ್ನು ಪೂರ್ತಿಯಾಗಿ ಊಹಿಸಲು ಬರುವುದಿಲ್ಲ. ಅಂತಹ ಆಪಾದನೆ ಮಾಡಿದಾಗ ಸಹ ಕಾಂಗ್ರೆಸ್ ಪಕ್ಷವು ರಾಷ್ಟ್ರಾಧ್ಯಕ್ಷರ ಬಳಿ ಹೋಗಿ, "ಸ್ವಾಮಿ, ಅಪ್ಪಣೆ ಕೊಡಿ, ನಾವು ಈ ವ್ಯಕ್ತಿಯ ವಿರುದ್ಧ ಮಾನನಷ್ಟ ಮೊಕದ್ದಮೆ ಹೂಡಬೇಕಾಗಿದೆ" ಎಂದು ಚಕಾರವೆತ್ತಲಿಲ್ಲ. ಬೆನ್ನುಹುರಿಯು ವೀಳೆಯದೆಲೆ ಅಂಬಿನ ಕಾಠಿಣ್ಯವನ್ನೂ ಹೊಂದಿರದಿದ್ದರೆ ಹೇಗೆ ತಾನೆ ಅಂತಹ ಮಾತನ್ನು ಕಾಂಗ್ರೆಸ್ ಹೇಳೀತು! ಬಿಡಿ, ಅದು ಬೇರೆ ಮಾತು. ಈ ಯಂತ್ರಗಳನ್ನು ಇವಿಯೆಂ ಎನ್ನುತ್ತಾರೆ, ಕನ್ನಡದಲ್ಲಿ ಅದನ್ನು "ಮಚಯಂ" ಎನ್ನಬಹುದು. "ಮಚಯಂ"ಗಳ ಬಗ್ಗೆ ಅನುಮಾನ ವ್ಯಕ್ತಪಡಿಸುವವರು ದ್ರೋಹಿಗಳು, ಇತ್ಯಾದಿ ಬೈಗುಳಗಳನ್ನು ಪ್ರಧಾನಿ ಮತ್ತು ಅವರ ಪಕ್ಷ ಧಾರಾಳವಾಗಿ ಸುರಿಸಿರುವುದುಂಟು. ಈ ಮಂದಿಗೆ ಮೂರು ದಶಕಗಳ ಹಿಂದಿನ ಒಂದು ಪ್ರಸಂಗವನ್ನು ನೆನಪಿಸಬೇಕು. ಪ್ರಧಾನಿಯವರಿಗೆ ಅದು ತಿಳಿದಿರುತ್ತದೆ, ಏಕೆಂದರೆ ಅವರಿಗೆ ಆಗ ಮೂವತ್ತು ವರ್ಷಕ್ಕೂ ಹೆಚ್ಚು ವಯಸ್ಸಾಗಿತ್ತು. ವಯಸ್ಸಾದವರಿಗೆಲ್ಲಾ ಬುದ್ಧಿ

*(೧೮ನೇ ಪುಟಕ್ಕೆ...)*
















# ಪರಿವಿಡಿ

# ಪರಿವಿಡಿ



**ಚುಟುಕಗಳು :** ಶ್ರೀನಿವಾಸ ಕುಂಡಂತಾಯ, ದ್ವಾರನಕುಂಟೆ ಪಾತಣ್ಣ, ಸುಜಾತಾ, ಶೋಭಾ ಪ್ರಮೋದ್, ಗೋಪಿ, ಅಶೋಕ, ವ. ಉಮೇಶ ಕಾರಂತ, ಗೀತಾ ಶಾಸ್ತ್ರಿ, ಜಿ. ಎಂ. ಬೊಮ್ನಳ್ಳಿ, ಸುರೇಶ ವಗ್ಗಾ, ಡಾ॥ ಷಾಕಿರಾ ಖಾನಂ, ಶಿವರಂಜನ್ ಸತ್ಯಂಪೇಟೆ


**ಮುಖಚಿತ್ರ :** ಕೆಂಚಪ್ಪ ಹಂಚಿನಮನಿ ಅವರ ಕಲಾಕೃತಿ

**ವಿನ್ಯಾಸ :** ನವಕರ್ನಾಟಕ ವಿನ್ಯಾಸ

***ಈ ಸಂಚಿಕೆಯ ಚಿತ್ರಗಳ ಕಲಾವಿದರು :***
ನಾಮದೇವ ಕಾಗದಗಾರ, ಕಮಲಂ ಅರಸು, ವಿ. ಗೋಪಾಲ್, ತನು, ಸುನಿಲ್ ಮಿಶ್ರಾ, ಉಮೇಶ ಹಿರೇಮಠ, ಸೃಜನ್

**ಕಚೇರಿ ಸಹಕಾರ :** ಜಿ. ವಿ. ತೇಜೋವತಿ






















## ಮೈಸೂರು ಸಾಹಿತ್ಯ ಸಮ್ಮೇಳನ : ಚಂಪಾ ಆಡಿದ್ದೇನು? ಆದದ್ದೇನು?

ಇತ್ತೀಚಿನ ದಿನಗಳಲ್ಲಿ ಈ ಆತಿಥ್ಯದ ಗೊಂದಲಗಳು ಪೂರ್ಣ ನಿಂತಿಲ್ಲವಾದರೂ ಗಣನೀಯ ಪ್ರಮಾಣದಲ್ಲಿ ಇಳಿಮುಖವಾಗಿವೆ ಎಂದೇ ಹೇಳಬೇಕು. ಸಮ್ಮೇಳನದಿಂದ ಸಮ್ಮೇಳನಕ್ಕೆ ಸಂಘಟಕರು ಪಾಠ ಕಲಿಯುತ್ತಿರುವುದು ಈ ಸುಧಾರಣೆಗೆ ಕಾರಣ ಎನ್ನಬಹುದು. ಹಾಗಾಗಿ ಈ ಗೊಂದಲ ಮತ್ತು ಪ್ರತಿಭಟನೆಗಳು ಸಮ್ಮೇಳನದ ಶೈಕ್ಷಣಿಕ ಅಥವಾ ಸೈದ್ಧಾಂತಿಕ ವಿಭಾಗಕ್ಕೂ ವಿಸ್ತರಿಸಿಕೊಳ್ಳುತ್ತಿವೆ. ಸಮ್ಮೇಳನದ ಗೋಷ್ಠಿಗಳಲ್ಲಿ ಮಂಡಿಸುವ ಪ್ರಬಂಧಗಳು, ನಡೆಯುವ ಬೌದ್ಧಿಕ ಚರ್ಚೆಗಳು, ಓದುವ ಕವಿತೆಗಳು ಇವೆಲ್ಲ ಸಂವಾದ, ವಾದ ಅದನ್ನೂ ಮೀರಿ ವಿವಾದದ ವ್ಯಾಪ್ತಿಗೆ ತಮ್ಮನ್ನು ವಿಸ್ತರಿಸಿಕೊಳ್ಳುತ್ತಿವೆ. ಅಂತಹ ವಿವಾದದ ವ್ಯಾಪ್ತಿಯನ್ನು ತಲುಪುತ್ತಿರುವ ಅಂಶಗಳಲ್ಲಿ ಸಮ್ಮೇಳನದ ಆರಂಭದ ಉದ್ಘಾಟನಾ ಸಮಾರಂಭದಲ್ಲಿ ನಡೆಯುವ ಸಮ್ಮೇಳನದ ಬಹುಮುಖ್ಯ ಅಂಶವೆಂದೇ ಪರಿಗಣಿತವಾಗುವ ಸಮ್ಮೇಳನದ ಸರ್ವಾಧ್ಯಕ್ಷರ ಭಾಷಣ ಕೂಡ ಸೇರಿಕೊಳ್ಳುತ್ತಿದೆ. ಮೈಸೂರು ಸಮ್ಮೇಳನದಲ್ಲಿ ಚಂಪಾ ಮಾಡಿದ ಭಾಷಣ ಇಂಥದೊಂದು ವಿವಾದವನ್ನು ಹುಟ್ಟುಹಾಕಿ ತೀವ್ರತರವಾದ ಚರ್ಚೆಗೆ ಗ್ರಾಸವಾಗಿದೆ. 'ಚಂಪಾ ತಮ್ಮ ಭಾಷಣವನ್ನು ರಾಜಕೀಯಗೊಳಿಸಿದರು, ಇಂಥ ಪಕ್ಷಕ್ಕೇ ಮತ ಹಾಕಿ ಎಂದು ಹೇಳುವ ಮೂಲಕ ಸಾಹಿತ್ಯ ಪರಿಷತ್ತಿನ ಮರ್ಯಾದೆ ತೆಗೆದರು', ಎಂಬುದು ಅವರ ಭಾಷಣಕ್ಕೆ ಬಂದ ಮುಖ್ಯ ತಕರಾರು. ಈ ತಕರಾರು ಬಂದದ್ದು ಮುಖ್ಯವಾಗಿ ರಾಜಕೀಯ ಪಕ್ಷವೊಂದರ ವಿವಿಧ ಹಂತದ ನಾಯಕರುಗಳಿಂದ. ಅದಕ್ಕೂ ಮೊದಲು ನಡೆದ ಸಮ್ಮೇಳನಾಧ್ಯಕ್ಷರ ಮೆರವಣಿಗೆಯ ಮೊದಲು ಅವರು ಮೈಸೂರು ಪೇಟ ಧರಿಸಲಿಲ್ಲ, ಚಾಮುಂಡೇಶ್ವರಿ ದೇವಿಗೆ ಪೂಜೆ ಸಲ್ಲಿಸಲಿಲ್ಲ ಇದರಿಂದ ನಮ್ಮ ಸಂಸ್ಕೃತಿಗೆ ಅಪಮಾನ ಮಾಡಿದರು ಎಂಬುದು ಇದಕ್ಕೆ ಪೀಠಿಕೆಯ ರೂಪದಲ್ಲಿ ಸೇರಿಕೊಂಡಿರುವ ಆರೋಪ.

**'ಮೈಸೂರು ಪೇಟ' ಮತ್ತು 'ಚಾಮುಂಡಿ ಪೂಜೆ'**

ಮೊದಲನೆಯದಾಗಿ 'ಮೈಸೂರು ಪೇಟ' ಮತ್ತು 'ಚಾಮುಂಡಿ ಪೂಜೆ' – ಈ ಅಂಶವನ್ನು ಪರಿಶೀಲಿಸುವುದಾದರೆ ಇವೆರಡೂ ಪ್ರಸ್ತಾಪವಾದದ್ದು ಚಂಪಾ ಭಾಷಣದ ವಿವಾದ ಶುರುವಾದ ಮೇಲೆ ಮತ್ತು ಈ ವಿವಾದವನ್ನು ಇನ್ನಷ್ಟು ಉರಿಯುವಂತೆ ಮಾಡಲಿಕ್ಕೆ, ಅದಕ್ಕೆ ಪೂರಕವಾಗಿ. ಇಲ್ಲಿನ ವಿದ್ಯಮಾನಗಳನ್ನು ಸೂಕ್ಷ್ಮವಾಗಿ ನೋಡಿದರೆ ಚಂಪಾ ಕೆಲವರಿಗೆ ಇಷ್ಟವಾಗದ ಅಂಶಗಳನ್ನು ಭಾಷಣದಲ್ಲಿ ಪ್ರಸ್ತಾಪಿಸಿ ಮಾತನಾಡದಿದ್ದರೆ, ಅದು ವಿವಾದವಾಗದಿದ್ದರೆ ಈ 'ಮೈಸೂರು ಪೇಟ' ಮತ್ತು 'ಚಾಮುಂಡಿ ಪೂಜೆ' ವಿವಾದ ಬಹುಶಃ 'ಜಾಗೃತ'ವಾಗುತ್ತಿರಲಿಲ್ಲವೆನಿಸುತ್ತದೆ. ಇದಕ್ಕೆ ಸಂಬಂಧಿಸಿದಂತೆ ಚಂಪಾ ಸ್ಪಷ್ಟವಾಗಿ ತಮ್ಮ




ಹೇಳಿಕೆಯನ್ನು ನೀಡಿದ್ದಾರೆ. 'ನಾನು ನಾಸ್ತಿಕ ಆದ್ದರಿಂದ ಪೂಜೆ ಸಲ್ಲಿಸಲಿಲ್ಲ; ಚಾಮುಂಡಿ ಮಾತ್ರವಲ್ಲ, ನಮ್ಮೂರಲ್ಲಿ ಮಾರಿಗುಡಿಗೂ ನಾನು ಹೋಗುವುದಿಲ್ಲ' ಎಂಬುದು ಅವರು ಈ ಸಂಬಂಧ ನೀಡಿದ ಹೇಳಿಕೆ. ಮೈಸೂರು ಪೇಟ 'ರಾಜಪ್ರಭುತ್ವದ ಪಳೆಯುಳಿಕೆ', ಆದ್ದರಿಂದ ಚಂಪಾ ಅಂಥವರು ಅದನ್ನು ವಿರೋಧಿಸುವುದು ಅತ್ಯಂತ ಸಹಜವಾದದ್ದು.

ಶಿವಮೊಗ್ಗ **_ರಾಜೇಂದ್ರ ಬುರಡಿಕಟ್ಟಿ_**

ಸಾಹಿತ್ಯದ ಮೂಲ ಉದ್ದೇಶ ಏನು? ಸಾಹಿತ್ಯದ ವ್ಯಾಖ್ಯಾನ, ಪರಿಧಿ, ವ್ಯಾಪ್ತಿ ಮತ್ತು ಹರವು ಹಲವು ರೂಪಗಳಲ್ಲಿ ವಿಸ್ತರಿಸುತ್ತಿರುವ ಸಂದರ್ಭದಲ್ಲಿ ಈ ಪ್ರಶ್ನೆಗೆ ಉತ್ತರ ಕಂಡುಕೊಳ್ಳುವ ಅನಿವಾರ್ಯತೆಯನ್ನು ಮೈಸೂರು ಸಾಹಿತ್ಯ ಸಮ್ಮೇಳನ ಸೃಷ್ಟಿಸಿದೆ. ೨೦ಕ್ಕೂ ಹೆಚ್ಚು ವಿಚಾರಗೋಷ್ಠಿಗಳು, ಮೂರು ಕವಿಗೋಷ್ಠಿಗಳು, ಮೂರು ವೇದಿಕೆ, ಸಾವಿರಾರು ಸಾಹಿತ್ಯಾಭಿಮಾನಿಗಳು, ಬೃಹತ್ ಸಂಖ್ಯೆಯ ಪುಸ್ತಕಗಳ ನಡುವೆ ಸಾಹಿತ್ಯಾಭಿಮಾನಿಗಳ ಸೆಲ್ಫಿ ಪ್ರೀತಿಗೆ ಬಲಿಯಾದ ೮೩ನೆಯ ಸಾಹಿತ್ಯ ಸಮ್ಮೇಳನ ವೈವಿಧ್ಯಗಳ ನಡುವೆಯೇ ಹಲವು ವಿವಾದಗಳನ್ನೂ ಹುಟ್ಟುಹಾಕಿದೆ. ಅಭಿವ್ಯಕ್ತಿ ಸ್ವಾತಂತ್ರ್ಯ, ವ್ಯಕ್ತಿಗತ ನಿಲುವು ಮತ್ತು ಸಾಹಿತ್ಯ–ಸಿದ್ಧಾಂತಗಳ ನಡುವಿನ ಲಟಾಪಟಿ ಬಹುಶಃ ಈ ಸಮ್ಮೇಳನದಲ್ಲಿ ಹೆಚ್ಚು ಪ್ರಖರವಾಗಿ ಕಂಡುಬಂದಿದೆ. ಇಷ್ಟಕ್ಕೂ ಸಾಹಿತ್ಯ ಸಮ್ಮೇಳನದ ಮೂಲ ಉದ್ದೇಶವಾದರೂ ಏನು? ಕೇವಲ ಅಕ್ಷರ ಜಾತ್ರೆಯ ಸಾರೋಟಿನಲ್ಲಿ ಸಾಗುತ್ತಾ ಸಾಹಿತ್ಯಕ ಆತ್ಮರತಿಯ ನಾಗಾಲೋಟವನ್ನು ವೀಕ್ಷಿಸುವುದೇ? ಅಥವಾ ಕನ್ನಡ ಸಾಹಿತ್ಯದ ಗತ ವಾಸ್ತವಗಳ ನೆಲೆಗಳನ್ನು ಸಂಭ್ರಮಿಸುವುದೇ? ಅಥವಾ ಸಾಹಿತ್ಯ ಲೋಕದ ಸಾರಥಿಗಳಿಂದ ಶುಷ್ಕ ಉಪನ್ಯಾಸಗಳನ್ನು ಕೇಳಿ ಸಂಭ್ರಮದ ಓಕುಳಿಯಲ್ಲಿ ಮಿಂದು ನಿರ್ಗಮಿಸುವುದೇ?

ಇವಿಷ್ಟೇ ಉದ್ದೇಶ ಎಂದಾದಲ್ಲಿ ಕೋಟ್ಯಂತರ ರೂ.ಗಳ ಜಾತ್ರೆಯ ಅವಶ್ಯಕತೆಯೇ ಕಂಡುಬರುವುದಿಲ್ಲ. ಸಾಹಿತ್ಯ ಸಮ್ಮೇಳನ ಅಕ್ಷರ ಜಾತ್ರೆಯೇ ನಿಜ. ಆದರೆ ಸಮಸ್ತ ಕನ್ನಡಿಗರ ಆಶೋತ್ತರಗಳನ್ನು ಬಿಂಬಿಸುವ ಈ ಜಾತ್ರೆಯಲ್ಲಿ ಸಾಹಿತ್ಯ ಲೋಕ ತನ್ನ ಸುತ್ತಲಿನ ಸಮಾಜದೊಡನೆ ಇರುವ ಸೂಕ್ಷ್ಮತಂತುಗಳನ್ನು, ತರಂಗಗಳನ್ನು, ಪ್ರವಹಿಸುವ ವಿದ್ಯುತ್ ಅಲೆಗಳನ್ನು ಗ್ರಹಿಸುವುದೂ ಅಷ್ಟೇ ಮುಖ್ಯ. ಇಲ್ಲಿ ಸಾಹಿತ್ಯಕ ಸಂವೇದನೆಗಿಂತಲೂ ಸಾಹಿತ್ಯ ಕೃಷಿಯಲ್ಲಿ ಸೂಕ್ಷ್ಮವಾಗಿ ಅಡಗಿರುವ ಮಾನವ ಸಂವೇದನೆ ಮುಖ್ಯವಾಗುತ್ತದೆ. ಜನಸಾಮಾನ್ಯರ ನಿತ್ಯಜೀವನದ ಆತಂಕ, ಹತಾಶೆ ಮತ್ತು ಹಪಾಹಪಿಯನ್ನು ಈ ಕೃಷಿ ಭೂಮಿಯಿಂದ ಹೊರಗಿಟ್ಟು ನೋಡುವುದು ಫಲವತ್ತಾದ ಬೆಳೆಯನ್ನು ಕಿತ್ತೆಸೆದು ಕಳೆಯನ್ನು ಉಳಿಸಿಕೊಂಡಂತಾಗುತ್ತದೆ. ಸಾಹಿತ್ಯ ಸಮಾಜದ ಬದಲಾವಣೆಯ ಭೂಮಿಕೆಯಲ್ಲ ಎಂದು ವಾದಿಸುವ ಸಾಹಿತ್ಯ ವಲಯ ಶತಮಾನಗಳ ಕಾಲ ಹೀಗೆಯೇ ಮುನ್ನಡೆದು ಬಂದಿದ್ದನ್ನು ಕಾಣಬಹುದು. ಭಾರತದ ಬದಲಾಗುತ್ತಿರುವ ಸಮಾಜೋ ಸಾಂಸ್ಕೃತಿಕ ಸಂದರ್ಭದಲ್ಲಿ ಬಹುಶಃ ಇದೇ ಮಾರ್ಗ ಮತ್ತೊಮ್ಮೆ ಮಾನ್ಯತೆ ಪಡೆಯುತ್ತಿರುವಂತೆ ಕಾಣುತ್ತಿದೆ.

ಈ ಸಂವೇದನಾಶೀಲ ನೆಲೆಯಲ್ಲಿ ಮೈಸೂರು ಸಾಹಿತ್ಯ ಸಮ್ಮೇಳನದತ್ತ ಗಮನ ಹರಿಸಿದಾಗ, ಸಾಹಿತ್ಯ ಲೋಕದ ಆತ್ಮರತಿ ಎದ್ದು ಕಾಣುತ್ತದೆ. ಆಧುನಿಕ ತಂತ್ರಜ್ಞಾನದ ಸೆಲ್ಫಿ ಭರಾಟೆಗೆ ಬಲಿಯಾದ ಸಾಹಿತ್ಯ ಸಂವೇದನೆಯನ್ನು ವಿಚಾರಗೋಷ್ಠಿಗಳ ಖಾಲಿ ಕುರ್ಚಿಗಳಲ್ಲಿ ಕಾಣಬಹುದಾಗಿತ್ತು. ಬಹುಶಃ ೮೩ ಸಮ್ಮೇಳನಗಳ ನಂತರ ಕನ್ನಡ ಸಾಹಿತ್ಯ ಸಮ್ಮೇಳನ ಎಂಬ ಪರಿಕಲ್ಪನೆಯೇ ತನ್ನ ಅರ್ಥ ಕಳೆದುಕೊಂಡಿದೆ ಎನ್ನುವಷ್ಟರಮಟ್ಟಿಗೆ ಈ ಸಮ್ಮೇಳನ ರಗಳೆ ಸೃಷ್ಟಿಸಿದೆ. ವಿಚಾರ ಸಂಕಿರಣಗಳಲ್ಲಿ ಯಾರೂ ಸಹ ಭವಿಷ್ಯದ ದಿನಗಳಿಗೆ ಮಾರ್ಗದರ್ಶಕವಾಗುವಂತಹ ಉಪನ್ಯಾಸ ಮಂಡಿಸಲಿಲ್ಲ. ನಿಜ, ಸಮಾಜವನ್ನು ಕಾಡುತ್ತಿರುವ ಪಿತೃಪ್ರಧಾನ ಧೋರಣೆ, ಮಹಿಳೆಯರ ಮೇಲಿನ ದೌರ್ಜನ್ಯ, ದಲಿತ ಸಂವೇದನೆ, ರೈತರ ಸಮಸ್ಯೆಗಳು, ಕಾವ್ಯಲೋಕದ ತುಮುಲಗಳು, ಅಭಿವ್ಯಕ್ತಿ ಸ್ವಾತಂತ್ರ್ಯ ಹೀಗೆ ಹತ್ತು ಹಲವಾರು ಜ್ವಲಂತ ಸಮಸ್ಯೆಗಳು ಬಿಂಬಿಸಲ್ಪಟ್ಟಿವೆ. ಆದರೆ ನಮ್ಮ ಮುಂದಿರುವುದು

ಭವಿಷ್ಯದ ಬೃಹತ್ ಸವಾಲು ಮತ್ತು ಈ ಸವಾಲಿಗೆ ಪಾಟಿ ಸವಾಲು ಹಾಕಿ ನಿಂತಿರುವ ಬ್ರಹ್ಮರಾಕ್ಷಸ ಎಂದರೆ ನವ ಉದಾರವಾದ ಮತ್ತು ಕೋಮುವಾದಿ ಫ್ಯಾಸಿಸಂ ಎಂಬ ಪರಿಜ್ಞಾನ ವಿಚಾರ ಸಂಕಿರಣಗಳಲ್ಲಿ ವ್ಯಕ್ತವಾಗಬೇಕಿತ್ತಲ್ಲವೇ?

ಸಮ್ಮೇಳನಾಧ್ಯಕ್ಷರ ವ್ಯಕ್ತಿಗತ ಆಶಯಗಳು, ತಾತ್ವಿಕ ನಿಲುವು ಮತ್ತು ವೈಚಾರಿಕ ಪ್ರಜ್ಞೆ ಸಮ್ಮೇಳನದಲ್ಲಿ ವ್ಯಕ್ತವಾದದ್ದು ಗಂಭೀರ ಚರ್ಚೆಗೊಳಗಾಗಿದೆ. ಸಾಮಾಜಿಕ ಸಾಂಸ್ಕೃತಿಕ ನೆಲೆಯಲ್ಲಿ ಪ್ರಜ್ಞಾವಂತ ಮನಸುಗಳು, ವೈಚಾರಿಕ ಮನಸ್ಥಿತಿಗಳು ಕಾಣಬಹುದಾದ ಜಾತ್ಯತೀತತೆಗೂ ಭ್ರಷ್ಟ ರಾಜಕೀಯ ನೆಲೆಯಲ್ಲಿ ಕಾಣುವ ಜಾತ್ಯತೀತತೆಗೂ ಇರುವ ಸೂಕ್ಷ್ಮ ವ್ಯತ್ಯಾಸವನ್ನು ಸಮ್ಮೇಳನಾಧ್ಯಕ್ಷರು ಗಮನಿಸಿದ್ದಿದ್ದರೆ ಬಹುಶಃ ಬಿಜೆಪಿ ಸಂಸದರಿಗೆ ಮೂತ್ರದ ವಾಸನೆ ಬಡಿಯುತ್ತಿರಲಿಲ್ಲ. ಕಾರ್ಪೊರೇಟ್ ಶಕ್ತಿಗಳ ಔದ್ಯಮಿಕ ಆಧಿಪತ್ಯ, ಕೋಮುವಾದಿ ಮತಾಂಧರ ಆಡಳಿತಾತ್ಮಕ ಆಧಿಪತ್ಯ ಮತ್ತು ಕರ್ಮಠ ಸಂಪ್ರದಾಯವಾದಿಗಳ ಸಾಂಸ್ಕೃತಿಕ ಆಧಿಪತ್ಯದ ವಿರುದ್ಧ ದೇಶದ ಪ್ರಜ್ಞಾವಂತ ಮನಸುಗಳು ಹೂಡಿರುವ ಸೈದ್ಧಾಂತಿಕ ಸಂಘರ್ಷಕ್ಕೆ ರಾಮಾಯಣದ ಸೀತಾ ಪರಿತ್ಯಾಗ ಮುಖ್ಯವಾಗುವುದಿಲ್ಲ. ವಾಲ್ಮೀಕಿ ಸೃಷ್ಟಿಸಿದ ಒಬ್ಬ ಪೌರಾಣಿಕ ವ್ಯಕ್ತಿಯನ್ನು ಮತಾಂಧ ಶಕ್ತಿಗಳು ಬಳಸಿಕೊಂಡ ಮಾತ್ರಕ್ಕೆ ಸಾಹಿತ್ಯಲೋಕ ಚಾರಿತ್ರಿಕ ಮೌಲ್ಯ ನೀಡುವ ಅವಶ್ಯಕತೆಯೂ ಇರುವುದಿಲ್ಲ. ಸಮಕಾಲೀನ ಸಂದರ್ಭದ ಮಹಿಳಾ ಸಂವೇದನೆಯ ಸೂಕ್ಷ್ಮ ತಂತುಗಳನ್ನು ಶೋಷಣೆಯ ಛದ್ಮವೇಷಗಳ ಮೂಲಕ ನೋಡುವ ಪ್ರಯತ್ನ ಇಲ್ಲಿ ಸ್ತುತ್ಯರ್ಹವಾಗಿತ್ತು. ಆದರೆ ಸಮಯದ ಅಭಾವ ವಿಷಯ ಮಂಡನೆಯನ್ನು ಸೀಮಿತಗೊಳಿಸಿತ್ತು.

ನಮ್ಮ ಮುಂದಿರುವ ಸವಾಲು ಈ ಛದ್ಮವೇಷಗಳ ವಿಭಿನ್ನ ಆಯಾಮಗಳನ್ನು ಕಳಚಿಹಾಕುವುದೇ ಆಗಿದೆ. ಸಾಹಿತ್ಯ ಸಮ್ಮೇಳನವೂ ಈ ದಿಕ್ಕಿನಲ್ಲೇ ಸಾಗಬೇಕಿತ್ತು. ಕನ್ನಡ ಸಾಹಿತ್ಯ ಸಮ್ಮೇಳನ ಒಂದು ಭಾಷಿಕ ಸಂವೇದನೆಯನ್ನು ಸೂಚಿಸುವ ಅಕ್ಷರ ಜಾತ್ರೆ. ಇಲ್ಲಿ ಮತಧರ್ಮಗಳಿಗಾಗಲೀ, ಪ್ರಾಂತೀಯ ಅಸ್ಮಿತೆಗಳಿಗಾಗಲೀ ಅವಕಾಶ ಇರಕೂಡದು. ಈ ನೆಲೆಯಲ್ಲಿ ನಿಂತು ನೋಡಿದಾಗ ಸಮ್ಮೇಳನಾಧ್ಯಕ್ಷರು ಪೂಜಾ ವಿಧಿವಿಧಾನಗಳಿಂದ ದೂರ ಉಳಿದಿದ್ದು ಅಪರಾಧವೇನಲ್ಲ. ಚಂಪಾ ಅಧ್ಯಕ್ಷತೆ ವಹಿಸಿದ್ದು ಕನ್ನಡ ಸಮ್ಮೇಳನಕ್ಕೆ. ಒಂದು ಭಾಷೆಯಾಗಿ ಕನ್ನಡ ಯಾವುದೇ ಮತಧರ್ಮದ ಸ್ವತ್ತಲ್ಲ. ಅದು ಜನತೆಯ ಜೀವನಾಡಿ. ಇದು ಮತಾಂಧರಿಗೆ ಅರ್ಥವಾಗದ ವಿಚಾರ. ಆದರೆ ನಮ್ಮ ಮಾಧ್ಯಮಗಳಿಗೆ ಅರ್ಥವಾಗಬೇಕಿತ್ತಲ್ಲವೇ? ಸಮಾಜದಲ್ಲಿ ಜಾಗೃತಿಯನ್ನು ಮೂಡಿಸುವ ಗುರುತರ ಹೊಣೆಗಾರಿಕೆ ಹೊತ್ತಿರುವ ವಿದ್ಯುನ್ಮಾನ ಮತ್ತು ಮುದ್ರಣ ಮಾಧ್ಯಮಗಳು ವೈಚಾರಿಕತೆ ಮತ್ತು ವೈಜ್ಞಾನಿಕ ಪರಂಪರೆಗೆ ತಿಲಾಂಜಲಿ ನೀಡಿ, ಜನಸಾಮಾನ್ಯರಲ್ಲಿ ಮೌಢ್ಯದ ಬೀಜಗಳನ್ನು ವ್ಯವಸ್ಥಿತವಾಗಿ ಬಿತ್ತುತ್ತಿರುವ ಸಂದರ್ಭದಲ್ಲಿ ಸಮ್ಮೇಳನದಲ್ಲಿ ನಡೆದ ಮಾಧ್ಯಮಗಳನ್ನು ಕುರಿತ ಗೋಷ್ಠಿ ಅರ್ಥಹೀನ ಎನಿಸಿತ್ತು. ಸದಾ ಪ್ರಳಯ, ವಿನಾಶ ಮತ್ತು ಮನುಕುಲದ ಅಂತ್ಯದ ಸ್ತುತಿ ಮಾಡುವ ಮಾಧ್ಯಮಗಳ ವಕ್ತಾರರು ಭವಿಷ್ಯದ ಸಮಾಜಕ್ಕೆ ಹಾದಿ ತೋರಲು ಹೇಗೆ ಸಾಧ್ಯ?

ಮಹಿಳಾ ಗೋಷ್ಠಿಯಲ್ಲಿ ಸಾಂಸ್ಕೃತಿಕ ರಾಜಕಾರಣವನ್ನು ಕುರಿತು ಮಾತನಾಡಿದ ಶ್ರೀಮತಿ ಲೋಲಾಕ್ಷಿ, ಸಂಸ್ಕೃತಿಯನ್ನು ಕುರಿತು ಮಾತನಾಡಿ ರಾಜಕಾರಣ ಬೇಡ ಎಂಬ ಹಿರಿಯರೊಬ್ಬರ ಸಲಹೆಯನ್ನು ಪ್ರಸ್ತಾಪಿಸಿದ್ದು ಮಾರ್ಮಿಕವಷ್ಟೇ ಅಲ್ಲ ವಸ್ತುಸ್ಥಿತಿಯ ಅನಾವರಣವೂ ಆಗಿತ್ತು. ಸಾಹಿತ್ಯ ಸಮ್ಮೇಳನದಲ್ಲಿ ಸಂಸ್ಕೃತಿ ಮತ್ತು ಸಾಂಸ್ಕೃತಿಕ ಪಲ್ಲಟಗಳ ಪುನರ್‌ಮನನ ಅಗತ್ಯವಾದರೂ, ಇದೇ ಸಾಂಸ್ಕೃತಿಕ ಪಲ್ಲಟಗಳಿಗೆ ಕಾರಣವಾಗುತ್ತಿರುವ ವಿಕೃತ ಪರಂಪರೆಗಳನ್ನು ಧಿಕ್ಕರಿಸುವುದು ಸಮ್ಮೇಳನದ ಆಶಯವಾಗಬೇಕು. ಸಮ್ಮೇಳನದಲ್ಲಿ ಭಾಗವಹಿಸುವವರೆಲ್ಲರೂ ಅಧ್ಯಯನಶೀಲರೇನಲ್ಲ. ಅಥವಾ ಸಾಹಿತ್ಯ ದಿಗ್ಗಜರ ಕೃತಿಗಳನ್ನು ಅರೆದು ಕುಡಿದವರೂ ಆಗಿರಲಿಕ್ಕಿಲ್ಲ. ಆದರೆ ಅವರ ಆಶಯಗಳು ಕನ್ನಡ ಜನತೆಯ ತುಮುಲಗಳನ್ನು ಪ್ರತಿನಿಧಿಸುತ್ತವೆ. ತಮ್ಮ ಸುತ್ತಲಿನ ಸಮಾಜದ ಎಲ್ಲ ಕ್ಷೇತ್ರಗಳೂ ಭ್ರಷ್ಟ ವ್ಯವಸ್ಥೆಯ ಕೂಪದಲ್ಲಿ ಸಿಲುಕಿ ವಿನಾಶದ ಅಂಚಿಗೆ ಸಾಗುತ್ತಿರುವ ಸಂದರ್ಭದಲ್ಲಿ, ಸಾರಸ್ವತ ಲೋಕದ ಭರವಸೆಯ ಮಾತುಗಳಲ್ಲಿ ಜನಸಾಮಾನ್ಯರು ಸಂವೇದನೆಯನ್ನು ಬಯಸುತ್ತಾರೆ. ದುರಂತ ಎಂದರೆ ಈ ಮಾನವ ಸಂವೇದನೆಯೇ ಗಿರಡ್ಡಿಯಂತಹ ಸಾಹಿತಿಗಳಿಗೆ ಕಪ್ಪು ಚುಕ್ಕೆಯಾಗಿ ಕಾಣುತ್ತದೆ.

ದಲಿತ, ಮಹಿಳೆ, ತೃತೀಯ ಲಿಂಗಿಗಳು, ರೈತರ ಸಂವೇದನೆಗಳಿಗೆ ಸ್ಪಂದಿಸಲು ಅಭಿವ್ಯಕ್ತಿ ಸ್ವಾತಂತ್ರ್ಯದ ಸಾವು ಬದುಕು ನಿರ್ಣಾಯಕವಾಗುತ್ತದೆ. ಸಾಹಿತ್ಯ ಸಮ್ಮೇಳನದ ವೇದಿಕೆಗಳಲ್ಲೇ ಈ ಅಭಿವ್ಯಕ್ತಿ ಸ್ವಾತಂತ್ರ್ಯವನ್ನು ಹತ್ತಿಕ್ಕುವ ಪ್ರವೃತ್ತಿಯನ್ನೂ ಸಮ್ಮೇಳನ ಕಂಡಿದೆ. ಕನ್ನಡ ಒಂದು ಭಾಷೆಯಾಗಿ ಉಳಿಯುತ್ತದೆ ಆದರೆ ಕನ್ನಡ ಭಾಷೆಯನ್ನು ಉಸಿರಾಡುವ ಜನಸಾಮಾನ್ಯರ ವ್ಯಕ್ತಿ ಸ್ವಾತಂತ್ರ್ಯ ಮತ್ತು ಅಭಿವ್ಯಕ್ತಿ ಸ್ವಾತಂತ್ರ್ಯ ಉಳಿಯುತ್ತದೆ ಎಂಬ ಭರವಸೆ ಕಾಣುತ್ತಿಲ್ಲ. ಇದು ಸಮ್ಮೇಳನದ ವಿಚಾರಗೋಷ್ಠಿಗಳಲ್ಲಿ ಇನ್ನೂ ಹೆಚ್ಚು ಸ್ಪಷ್ಟತೆಯಿಂದ ವ್ಯಕ್ತವಾಗಬೇಕಿತ್ತು. ಆಗಿಲ್ಲ ಎನ್ನುವುದು ದುರಂತ ಸತ್ಯ. ಚರಿತ್ರೆಯ ಪದ್ಮಾವತಿ ಸಮಕಾಲೀನ ಚೇತನವನ್ನು ಅಡಗಿಸಲು ಸಜ್ಜಾಗುತ್ತಿರುವುದನ್ನು ಸಾಂಸ್ಕೃತಿಕ ಲೋಕದಲ್ಲಿ ಕಾಣುತ್ತಿದ್ದೇವೆ. ಒಂದು ಚಲನಚಿತ್ರ ನಮ್ಮ ಸಾಮಾಜಿಕ ಜೀವನವನ್ನು ಪ್ರಕ್ಷುಬ್ಧಗೊಳಿಸುತ್ತದೆ ಆದರೆ ನಮ್ಮ ಸುತ್ತಲಿನ ಜಡಗಟ್ಟಿದ ವಿಕೃತ ವ್ಯವಸ್ಥೆ ನಮ್ಮ ಸಾಕ್ಷಿಪ್ರಜ್ಞೆಯನ್ನು ಅಲುಗಾಡಿಸುವುದೂ ಇಲ್ಲ.

ಇಲ್ಲಿ ಕನ್ನಡ ಪ್ರಜ್ಞೆ ಜಾಗೃತವಾಗಬೇಕಾದರೆ ಮಾನವ ಸಂವೇದನೆಯೂ ಜಾಗೃತವಾಗಬೇಕು. ಕನ್ನಡ ಎಂದರೆ ಒಂದು ಅಮೂರ್ತ ಕಲ್ಪನೆಯಲ್ಲ, ಅದು ವಾಸ್ತವ. ಕನ್ನಡಿಗರು ಈ ವಾಸ್ತವದ ವಾರಸುದಾರರು. ಕನ್ನಡ ಉಳಿಯಬೇಕೆಂದರೆ ಕನ್ನಡಿಗರು ಉಳಿಯಬೇಕು. ಕನ್ನಡಿಗರು ಎಂದರೆ ಒಂದು ನಿರ್ದಿಷ್ಟ ಚೌಕಟ್ಟಿನಲ್ಲಿ ಬಂಧಿಯಾಗುವ ಜನಸಮೂಹ ಅಲ್ಲ. ಇಲ್ಲಿ ಸಮಷ್ಟಿ ಪ್ರಜ್ಞೆ ಮುಖ್ಯವಾಗುತ್ತದೆ. ಈ ಸಮಷ್ಟಿ ಪ್ರಜ್ಞೆಯನ್ನು ಜಾಗೃತಗೊಳಿಸಲು ಸಾಹಿತ್ಯಕ ಸಂವೇದನೆ ಒಂದು ಪ್ರಬಲ ಅಸ್ತ್ರವಾಗಿ ಸಾರಥ್ಯ ವಹಿಸಬೇಕಾಗುತ್ತದೆ. ಸಾಕ್ಷಿಪ್ರಜ್ಞೆ ಇಲ್ಲದ ಶುಷ್ಕ ಸಾಹಿತ್ಯಕ್ಕಿಂತಲೂ ಮಾನವ ಸಂವೇದನೆಯ ಸೂಕ್ಷ್ಮಗಳನ್ನು ಸ್ವತಂತ್ರ ಅಭಿವ್ಯಕ್ತಿಯ ನೆಲೆಯಲ್ಲಿ ಅನಾವರಣಗೊಳಿಸುವ ಸಾಹಿತ್ಯ ಇಂದಿನ ಆದ್ಯತೆಯಾಗಬೇಕಿದೆ. ಈ ಸಂವೇದನೆ ೮೩ನೆಯ ಸಾಹಿತ್ಯ ಸಮ್ಮೇಳನದಲ್ಲಿ ಮರೆಯಾದದ್ದು ಹೇಗೋ?

*ಬೆಂಗಳೂರು* **ನಾ. ದಿವಾಕರ**

## ಕಳ್ಳರಿಂದ ರಾತ್ರಿ ದರೋಡೆ, ಗ್ರಾಮ ಪಂಚಾಯಿತಿ ಅಧಿಕಾರಿಗಳಿಂದ ಹಗಲು ದರೋಡೆ

ಕಳ್ಳರು ಮತ್ತು ಡಕಾಯಿತರು ರಾತ್ರಿ ವೇಳೆಯಲ್ಲಿ ಲೂಟಿ ಮಾಡಿದ್ದರೆ ಗ್ರಾಮ ಪಂಚಾಯಿತಿ ಸದಸ್ಯರು ಮತ್ತು ಪಿಡಿಓಗಳು ಹಗಲು ದರೋಡೆ ಮಾಡಲಿಕ್ಕೆ ಹೊರಟಿದ್ದಾರೆ. ಅದು ಯಾವ ರೀತಿಯಲ್ಲಿ ಅಂದರೆ ಸರ್ಕಾರದಿಂದ ಮಂಜೂರಾದ ಆಶ್ರಯ ಮನೆಗಳನ್ನು ಉಪನೋಂದಣಾಧಿಕಾರಿಗಳ ಕಛೇರಿಯಲ್ಲಿ ನೋಂದಣಿಯನ್ನು ಮಾಡುವ ನೆಪದಲ್ಲಿ ಫಲಾನುಭವಿಗಳಿಂದ ಸುಮಾರು ೨೫೦೦ರಿಂದ ೩೦೦೦ ರೂಪಾಯಿಗಳನ್ನು ಪಡೆದುಕೊಳ್ಳುತ್ತಾರೆ. ಆದರೆ ಈ ವ್ಯಕ್ತಿಗಳ ಹತ್ತಿರ ಊಟಕ್ಕೂ ಹಣವಿಲ್ಲದೆ ಉಪವಾಸ ಮನೆಗೆ ಬರುತ್ತಾರೆ. ಆದರೆ ಈ ಅಧಿಕಾರಿಗೆ ಮತ್ತು ಚುನಾಯಿತ ಪ್ರತಿನಿಧಿಗೆ ಸ್ವಲ್ಪವಾದರೂ ಮನುಷ್ಯತ್ವ ಎಂಬುದು ಇಲ್ವಾ?

ಆದರೆ ಈ ದೊಡ್ಡ ಮನುಷ್ಯರು ಮಾತ್ರ ಬಡವರ ಹಣದಲ್ಲಿ ಮೋಜುಮಸ್ತಿ ಮಾಡಿಕೊಂಡು ಬರುತ್ತಾರೆ. ಇವರಿಗೆ ಹೇಳೋರು ಕೇಳೋರು ಇಲ್ವೆ? ಇದೇ ರೀತಿಯಲ್ಲಿ ಮುಂದುವರೆದರೆ ಸರ್ಕಾರದಿಂದ ಬರುವಂತಹ ಆಶ್ರಯ ಯೋಜನೆಯ ಮನೆಗಳನ್ನು ಯಾರೂ ಸಹ ಕಟ್ಟಿಸಿಕೊಳ್ಳಲಿಕ್ಕೆ ಮುಂದೆ ಬರುವುದಿಲ್ಲ. ಯಾಕೆಂದರೆ ಇವರಿಗೆ ಕೊಡುವ ಹಣದಲ್ಲಿ ಮನೆಗೆ ಬೇಕಾಗುವಂತಹ ಸಾಮಾನುಗಳನ್ನು ತರಲಿಕ್ಕೆ ಸಹಕಾರವಾಗುತ್ತದೆ. ಆದರೆ ಈ ಅಧಿಕಾರಿಗಳು ಮತ್ತು ಗ್ರಾಮ ಪಂಚಾಯಿತಿ ಸದಸ್ಯರಿಗೆ ಸಂಬಂಧಪಟ್ಟ ಅಧಿಕಾರಿಗಳು ಇದರ ಬಗ್ಗೆ ಸರಿಯಾದ ರೀತಿಯಲ್ಲಿ ಕ್ರಮ ಕೈಗೊಳ್ಳಬೇಕು ಮತ್ತು ಅಂತಹವರ ವಿರುದ್ಧ ಕಾನೂನು ಕ್ರಮ ಕೈಗೊಳ್ಳಬೇಕು.

*ಹರಪನಹಳ್ಳಿ* **ರವಿಕುಮಾರ್ ಪೂಜಾರ್**
**ರಾಮಘಟ್ಟ ತಾಂಡ**

ಕಾವೇರಿಯಿಂದ ಗೋದಾವರಿ ನದಿಯವರೆಗೆ ಸಾವಿರಾರು ವರುಷಗಳಿಂದ ಹರಡಿದ್ದ ಕನ್ನಡದ ಕಂಪೀಗ ಕರ್ನಾಟಕ ಏಕೀಕರಣದ ನಂತರ ಬೃಹತ್ ನಗರ ಹಾಗೂ ಗ್ರಾಮೀಣ ಪ್ರದೇಶಗಳಲ್ಲಿ ಇಂಗ್ಲಿಷ್ ಭಾಷಾ ವ್ಯಾಮೋಹ ಹಾಗೂ ಆಂಗ್ಲ ಮಾಧ್ಯಮ ಶಾಲೆಗಳಿಂದಾಗಿ ಕನ್ನಡಿಗರ ಮನೆ-ಮನದಿಂದ

ಮರೆಯಾಗುತ್ತಿರುವ ಕಳವಳಕಾರಿ ಹಂತದಲ್ಲಿದೆ.

ಪರಧರ್ಮ, ಪರಭಾಷಾ ಸಹಿಷ್ಣುಗಳಾದ ಕರ್ನಾಟಕದ ನಾವು ಮಾತೃಭಾಷೆಯಾಗಿರುವ ಕನ್ನಡವನ್ನು ಹೊರತುಪಡಿಸಿ ಇಂಗ್ಲಿಷ್ ಹಾಗೂ ಅನ್ಯಭಾಷಿಕರೊಂದಿಗೆ ಹರಕು ಮುರುಕಾಗಿ ಅವರ ಭಾಷೆಯಲ್ಲಿ ಮಾತನಾಡುತ್ತಾ ಕರ್ನಾಟಕದಲ್ಲಿ ಕನ್ನಡ ಕಾವಲು ಸಮಿತಿ, ಕನ್ನಡ ಅಭಿವೃದ್ಧಿ ಪ್ರಾಧಿಕಾರ, ಜನತೆಯತ್ತ ಕನ್ನಡ ಅಭಿಯಾನಗಳ ಮೂಲಕ ಕನ್ನಡದ ಉಳಿವಿಗಾಗಿ ಹೋರಾಟ ಮಾಡುವ ಪ್ರಸಂಗ ತಂದುಕೊಂಡಿರುವದು ವಿಷಾದನೀಯ.

ಐತಿಹಾಸಿಕ ದ್ರಾವಿಡ ಭಾಷೆಗಳಾದ ಕನ್ನಡ, ತೆಲುಗು, ತಮಿಳು, ಮಲಯಾಳಂ ಭಾಷೆಗಳ ಪೈಕಿ ಕನ್ನಡದವರನ್ನು ಹೊರತುಪಡಿಸಿ ಉಳಿದ ಭಾಷಿಕ ಜನತೆ, ಸಾಹಿತಿಗಳು, ರಾಜಕೀಯ ಧುರೀಣರು, ಅಧಿಕಾರಿಗಳು ತಮ್ಮ ನಾಡಭಾಷೆಯನ್ನು ದೈನಂದಿನ ವ್ಯವಹಾರದಲ್ಲಿ ರಾಜ್ಯ-ರಾಷ್ಟ್ರಮಟ್ಟದಲ್ಲಿ ಸಮರ್ಪಕ ವಾಗಿ ಬಳಕೆ ಮಾಡುವ ಮೂಲಕ ತಮ್ಮ ಮಾತೃ ಭಾಷೆಗೆ ಗೌರವವನ್ನು ದೊರಕಿಸಿಕೊಟ್ಟಿರುವರು. ೧೯೫೬ರಲ್ಲಿ ಭಾಷಾವಾರು ಪ್ರಾಂತಗಳ ರಚನೆಯಾದ ನಂತರ ರಚಿತವಾದ ವಿವಿಧ ರಾಜ್ಯಗಳಲ್ಲಿ ಸ್ಥಳೀಯ ಮಾತೃಭಾಷೆಯನ್ನು ಆಡಳಿತ ವ್ಯವಹಾರದ ಭಾಷೆಯಾಗಿ ಅಲ್ಲಿಯ ಜನತೆ ಜಾತಿ ಮತ ಪಂಥಗಳನ್ನು ಹೊರತುಪಡಿಸಿ ಬಳಸುತ್ತಿದ್ದಾರೆ. ನಮ್ಮ ರಾಜ್ಯದ ಅಕ್ಕಪಕ್ಕದ ರಾಜ್ಯಗಳಾದ ಗೋವಾ, ಮಹಾರಾಷ್ಟ್ರ, ಆಂಧ್ರಪ್ರದೇಶ, ತಮಿಳುನಾಡು ಕೇರಳಗಳಲ್ಲಿ ಸರಕಾರ, ಅಧಿಕಾರಿಗಳು, ಸಚಿವರು, ಶಾಸಕರು, ಸಂಸದರು, ವಿವಿಧ ಸಂಘಟನೆಗಳು ಮತ್ತು ಜನತೆ ತಮ್ಮ ರಾಜ್ಯದ ಭಾಷೆಯಲ್ಲಿಯೇ ವ್ಯವಹರಿಸುವರಲ್ಲದೆ ಅದನ್ನೇ ತಾವುಗಳು ಬೇರೆ ರಾಜ್ಯಗಳಿಗೆ ಹೋದಾಗ ಬಳಸುವ ಹಾಗೂ ಅಲ್ಲಿಯ ಜನತೆಯೊಂದಿಗೆ ತಮ್ಮ ರಾಜ್ಯಗಳಿಗೆ ಬರುವ ಪರ ರಾಜ್ಯಗಳ ಜನತೆಯೊಂದಿಗೆ ವ್ಯವಹರಿಸುವ ಮೂಲಕ ತಮ್ಮ ಮಾತೃಭಾಷೆ ಸಮೃದ್ಧವಾಗಿ ಬೆಳೆಯಲು ಕಾರಣರಾಗಿರುವರು. ಕನ್ನಡ ನಾಡು, ನುಡಿ, ಸಂಸ್ಕೃತಿಗೆ ಹೊರಗಿನವರಿಗಿಂತ ಬಲವಾದ ಪೆಟ್ಟು ನಮ್ಮವರಿಂದಲೇ ಬೀಳುತ್ತಿದ್ದು ಕನ್ನಡಕ್ಕೆ ಶಾಸ್ತ್ರೀಯ ಸ್ಥಾನವನ್ನು ಪಡೆಯುವ ಸಂದರ್ಭದಲ್ಲಿ ಹಾಗೂ ಇತರೆ ವೇದಿಕೆಗಳಲ್ಲಿ ಕೆಲವು ಕನ್ನಡದ ಹಿರಿಯ ಸಾಹಿತಿಗಳೆಂದು ಹೇಳಲಾಗುವ ಶಿಕ್ಷಕ ಸಾಹಿತಿಗಳು ತಮ್ಮ ಸ್ವಪ್ರತಿಷ್ಠೆ ಬೆಳೆಸಿಕೊಳ್ಳಲು ಪರಸ್ಪರ ಕೆಟ್ಟ ಶಬ್ದ ಬಳಸಿ ಕೆಸರೆರಚಾಟ ಆಡುವ ಮೂಲಕ ಕನ್ನಡದ ಬೆಳವಣಿಗೆಗೆ ಅಡ್ಡಿಯಾಗುತ್ತಿರುವದನ್ನು ನಿತ್ಯ ಜೀವನದಲ್ಲಿ ಕಾಣಬಹುದಾಗಿದೆ.

ಕನ್ನಡ ಭಾಷೆಯಲ್ಲಿರುವ ಬಾಂಧವ್ಯವನ್ನು ಬೆಸೆಯುವ ಪರಸ್ಪರ ಪ್ರೀತಿಯ ಹೆಚ್ಚಿಸುವ ಅಪ್ಪ, ಅವ್ವ, ಅತ್ತೆ, ಮಾವ, ಅಣ್ಣ, ಅಕ್ಕ, ತಮ್ಮ, ತಂಗಿ, ಭಾವ ಮುಂತಾದ ಪದಗಳನ್ನು ಬಳಸುವ ಬದಲಾಗಿ ಶಿಕ್ಷಿತರು, ಅಶಿಕ್ಷಿತರುಗಳು ಅಸಂಬದ್ಧ ಅರ್ಥ ಕೊಡುವ ಆಂಟಿ, ಅಂಕಲ್, ಮಾಮ್, ಡ್ಯಾಡ್, ನೀಸ್, ಕಸಿನ್ ಎಂಬ ಪದಗಳನ್ನು ಬಳಸುತ್ತಾರೆ, ಅವುಗಳಿಗೆ ಬದಲಾಗಿ ಅರ್ಥಪೂರ್ಣವಾಗಿರುವ ಕನ್ನಡ ಪದಗಳನ್ನು ಬಳಸುವ ಮೂಲಕ ಕನ್ನಡ ಶಬ್ದ ಭಂಡಾರವನ್ನು ಸಮೃದ್ಧವಾಗಿಸೋಣ. ಕರ್ನಾಟಕದಲ್ಲಿ ಹುಟ್ಟಿದವರು ಹಾಗೂ ಬಾಳುತ್ತಿರುವವರು, ಉದ್ಯೋಗ ಅರಸಿ ಬಂದವರು, ನಮ್ಮ ನೆಲದ ಭಾಷೆಯಾಗಿರುವ ಕನ್ನಡವನ್ನು ದಿನನಿತ್ಯದ ಬದುಕಿನಲ್ಲಿ, ಮನೆ - ಮನೆಗಳಲ್ಲಿ ಬಳಸುವ ಮನಸ್ಸನ್ನು ಹೊಂದಿ ಕನ್ನಡವನ್ನು ಆಡುನುಡಿ, ವ್ಯವಹಾರದ ನುಡಿ, ಸಂಕೇತ ನುಡಿಯಾಗಿ ಬಳಸುವುದು ಅತ್ಯವಶ್ಯಕ ವಾಗಿದೆ. ನಾವು ನಮ್ಮ ಮಾತೃಭಾಷೆ ಬಳಸಿಕೊಂಡು ವ್ಯಾವಹಾರಿಕವಾಗಿ ಮಾತನಾಡಿದರೆ ಇತರ ಭಾಷಿಕರು ಮಾತನಾಡಲು ಮುಂದಾಗುವರು. ನವಾಬರ ಆಡಳಿತದಲ್ಲಿದ್ದ ಹಾವೇರಿ ಜಿಲ್ಲೆಯ ಸವಣೂರಿನ ಬಹುತೇಕ ಮುಸ್ಲಿಂ ಬಾಂಧವರು ಉರ್ದುವಿನಲ್ಲಿ ಮಾತನಾಡುವರು. ನಾನು ೨೦೦೪ರಲ್ಲಿ ಸವಣೂರು ನ್ಯಾಯಾಲಯದಲ್ಲಿ ಪ್ರಭಾರ ಅಭಿಯೋಜಕನಾಗಿದ್ದ ಸಂದರ್ಭದಲ್ಲಿ ನ್ಯಾಯಾಲಯಕ್ಕೆ ಸಾಕ್ಷಿ ನುಡಿಯಲು ಬಂದ ಮುಸ್ಲಿಂ ಬಾಂಧವರಿಗೆ ಕನ್ನಡದಲ್ಲಿ ಸಾಕ್ಷಿ ನುಡಿಯಲು ವ್ಯವಹಾರಗಳಲ್ಲಿ ಕನ್ನಡ ಬಳಸಲು ಕೋರಿದಾಗ ಅವರುಗಳು ಒಪ್ಪಿಕೊಂಡು ಅವರುಗಳು ಕನ್ನಡದಲ್ಲಿ ಸಾಕ್ಷಿ ನುಡಿದರಲ್ಲದೆ ಕನ್ನಡವನ್ನು ವ್ಯವಹಾರದಲ್ಲಿ ಬಳಸಲು ಪ್ರಾರಂಭಿಸಿದ್ದು ನನ್ನ ಮನದಲ್ಲಿ ಹಸಿರಾಗಿ ಉಳಿದಿದೆ.

ನಮ್ಮ ರಾಷ್ಟ್ರದ ಉಳಿದ ಯಾವುದೇ ರಾಜ್ಯಗಳಲ್ಲಿ ರಾಜ್ಯ ಭಾಷೆಯ ಬಳಕೆಗೆ ಹಾಗೂ ಜಾರಿಯಲ್ಲಿ ತರಲು ಭಾಷಾ ಕಾವಲು ಸಮಿತಿ, ಪ್ರಾಧಿಕಾರಗಳನ್ನು ಹೊಂದಿರುವದಿಲ್ಲ. ಆದರೂ ಅಲ್ಲಿಯ ಜನರು ತಮ್ಮ ಮಾತೃಭಾಷೆಯನ್ನು ತಮ್ಮ ಹಡೆದ ತಾಯಿಯಂತೆ ಪ್ರೀತಿಸಿ ಅಭಿಮಾನದಿಂದ ದಿನನಿತ್ಯದ ವ್ಯವಹಾರದಲ್ಲಿ ಬಳಕೆ ಮಾಡುತ್ತಿದ್ದಾರೆ. ನಾವುಗಳೆಲ್ಲ ಕನ್ನಡವನ್ನು ಮುಕ್ತಮನಸ್ಸಿನಿಂದ ಬಳಸುವುದನ್ನು ರೂಢಿಸಿಕೊಂಡಲ್ಲಿ ನಮ್ಮ ಸರಕಾರ ಕನ್ನಡದ ಅಭಿವೃದ್ಧಿಗಾಗಿ ವೆಚ್ಚ ಮಾಡುತ್ತಿರುವ ಹೇರಳ ಪ್ರಮಾಣದ ಹಣ ಉಳಿತಾಯವಾಗಲಿದೆ. ಅದನ್ನು ನಾಡಿನ ಇತರೆ ಅಭಿವೃದ್ಧಿ ಕೆಲಸಗಳಿಗೆ ಬಳಸಬಹುದಾಗಿದೆ.

೧೯೮೦ರಿಂದಲೂ ನ್ಯಾಯಾಲಯದ ಕಲಾಪ ಗಳು ಕಕ್ಷಿಗಾರರಿಗೆ ತಿಳಿಯುವ ರಾಜ್ಯ ಭಾಷೆಯಲ್ಲಿರ ಬೇಕೆಂದು ಮಾಡಿದ ಹೋರಾಟ ಹಾಗೂ ಒತ್ತಾಯಕ್ಕೆ ಸ್ಪಂದಿಸಿದ ಮಾನ್ಯ ಕರ್ನಾಟಕ ಉಚ್ಚ ನ್ಯಾಯಾಲಯ ೨೦೦೩ರ ನವೆಂಬರ್‌ನಿಂದ ಜಿಲ್ಲಾ ನ್ಯಾಯಾಲಯದ ವರೆಗಿನ ನ್ಯಾಯಾಲಯಗಳಲ್ಲಿ ಕನ್ನಡವನ್ನು ನ್ಯಾಯಾಲಯದ ಭಾಷೆಯಾಗಿ ಬಳಸಲು ಆದೇಶ ಹೊರಡಿಸಿದೆ. ನ್ಯಾಯ ಕೋರಿ ಬರುವ ಕಕ್ಷಿದಾರನಿಗೆ ಮಾನ್ಯ ಉಚ್ಚ ನ್ಯಾಯಾಲಯದ ಆದೇಶದ ಜಾರಿಯಿಂದ ಅನುಕೂಲವಾಗಿದೆ. ನಮ್ಮ ನಾಡು-ನುಡಿ, ಮನೆ-ಮನ, ಮಾನ-ಪ್ರಾಣ, ಕೃತಿ, ರಕುತ-ತುಡಿತ, ಕಾಯ-ಕಾಯಕ, ಉಸಿರಲಿ ಕನ್ನಡ ಎನ್ನುವ ಸಪ್ತ ಮಂತ್ರಗಳನ್ನು ಕರ್ನಾಟಕದಲ್ಲಿ ಇರುವವರೆಲ್ಲ ಕಾಯಾ-ವಾಚಾ-ಮನಸಾ ನಿರಂತರ ವಾಗಿ ಪಾಲಿಸಿ ಕನ್ನಡದ, ಕನ್ನಡ ನಾಡಿನ ಅಭಿವೃದ್ಧಿಗೆ ಕಾರಣರಾಗೋಣ.

*ಬೆಂಗಳೂರು* **ಬಸವರಾಜ ಹುಡೇದಗಡ್ಡಿ**

---

*ಈ ತಿಂಗಳು... (೧೩ನೇ ಪುಟದಿಂದ)*

ಬಂದಿರುವುದಿಲ್ಲವೆಂಬ ಹೇಳಿಕೆಯನ್ನು ಪ್ರಬುದ್ಧರಿಗೆ ಅನ್ವಯಿಸುವುದು ಬೇಡ.

ಪ್ರಸಂಗ ಹೀಗಿತ್ತು: ಇಂದಿರಾ ಗಾಂಧಿ ನೇತೃತ್ವ ದಲ್ಲಿ ಕಾಂಗ್ರೆಸ್ ಪಕ್ಷವು ದೇಶದ ಪಾರ್ಲಿಮೆಂಟಿಗೆ ನಡೆದ ಚುನಾವಣೆಯಲ್ಲಿ ಭಾರಿ ಬಹುಮತ ಪಡೆದು ಭಾರತೀಯ ಜನಸಂಘವೂ (ಈಗಿನ ಭಾಜಪದ ಪೂರ್ವ ಅವತಾರ) ಸೇರಿದಂತೆ ವಿರೋಧ ಪಕ್ಷಗಳನ್ನು ಧೂಳೀಪಟ ಮಾಡಿಬಿಟ್ಟಿತು. ಆಗ ಜನಸಂಘದ ಪ್ರಮುಖ ನಾಯಕರಾಗಿದ್ದ ಮಾನ್ಯ ಅಟಲ್ ಬಿಹಾರಿ ವಾಜಪೇಯಿಯವರು ಒಂದು ಬಾಂಬು ಸಿಡಿಸಿದ್ದರು (ಆದರೆ ಅದು ಹುಸಿ ಬಾಂಬ್ ಎಂದು ತಿಳಿದು ಆಮೇಲೆ ಮಾತು ನುಂಗಿ ಕೂತರು) ಮತ್ತು ಅವರ ಪಕ್ಷವು ದೇಶದಾದ್ಯಂತ ಹುಯಿಲೆಬ್ಬಿಸಿತ್ತು. ಅವರ ಆಪಾದನೆ ಬಹಳ ಸರಳವಾಗಿತ್ತು: ಈ ಇಂದಿರಾ ಗಾಂಧಿ ಎಂಬ ಮಹಾಮಾಯೆ ಚುನಾವಣಾ ಮತಪತ್ರಗಳನ್ನು ಅಚ್ಚುಮಾಡಲು ಪ್ರತ್ಯಕ್ಷವಾಗಿ ಕಾಣದ ಮಸಿಯನ್ನು (ಇನ್‌ವಿಸಿಬಲ್ ಇಂಕ್) ಬಳಸಿಬಿಟ್ಟಿದ್ದಾಳೆ, ಆ ಮಸಿಯನ್ನು ಸೋವಿಯೆತ್ ಒಕ್ಕೂಟವು ಸರಬರಾಜು ಮಾಡಿದೆ. ಆ ಮಸಿಯಿಂದ ಕಾಂಗ್ರೆಸ್ ಅಭ್ಯರ್ಥಿಗಳ ಚಿಹ್ನೆಯ ಮೇಲೆ ಸ್ಟಾಂಪ್ ಒತ್ತಿಬಿಡಲಾಗಿತ್ತು ಆದರೆ ಅದು ಕಾಣುತ್ತಿರಲಿಲ್ಲ. ಮತಚೀಟಿಗಳ ಪೆಟ್ಟಿಗೆ ಯಿಂದ ಅವನ್ನು ತೆಗೆಯುವ ವೇಳೆಗೆ ಆ ಚಿಹ್ನೆಗಳು ಕಾಣುವಂತಾಗಿತ್ತು ಮತ್ತು ಬೇರೆ ಅಭ್ಯರ್ಥಿಗಳ ಚಿಹ್ನೆಗಳಿಗೆ ಒತ್ತಿದ್ದ ಸ್ಟಾಂಪು ಅಳಿಸಿಹೋಗಿತ್ತು. ಏಕೆಂದರೆ, ಆ ಮಸಿ ಅಳಿಸಿಹೋಗುವಂಥದಾಗಿತ್ತು.

ಇಂತಹ ಅಸಾಮಾನ್ಯ ಊಹೆಯನ್ನು ರಾಷ್ಟ್ರೀಯ ರಾಜಕಾರಣದ ಅಸ್ತ್ರವನ್ನಾಗಿಸಿಕೊಂಡಿದ್ದ ಪಕ್ಷವು ೨೧ನೆಯ ಶತಮಾನದಲ್ಲಿ "ಮಚಯಂ"ಗಳ ತಾಂತ್ರಿಕ ದುರುಪಯೋಗ ಸಾಧ್ಯವಿಲ್ಲವೆಂದು ಅಬ್ಬರಿಸುವುದು ಅರ್ಥಹೀನ. ಮಾಜಿ ಪ್ರಧಾನಿ ಮತ್ತು ಉಪಾಧ್ಯಕ್ಷರಿಬ್ಬರೂ ಪಾಕಿಸ್ತಾನದ ಏಜೆಂಟ ರಾಗಿ ರಾಷ್ಟ್ರದ್ರೋಹ ಎಸಗಿದ್ದಾರೆ ಎಂಬಂತಹ ಚುನಾವಣಾ ಪ್ರಚಾರ ಭಾಷಣ ಮಾಡಿ ಚುನಾವಣೆ ಯಲ್ಲಿ ವಿಜಯಿಯಾಗುವುದು ಎಂತಹ ಮಹಾ ಪರಾಕ್ರಮ, ಅಲ್ಲವೆ? ಬೇಜವಾಬ್ದಾರಿತನಕ್ಕೆ ಎಲ್ಲೆಯೇ ಇಲ್ಲವಾದರೆ ಪ್ರಜಾಪ್ರಭುತ್ವವು ಔಪಚಾರಿಕವಾಗಿ ಯಾದರೂ ಉಳಿಯಬಹುದೆ? ೨೦೧೮ರಲ್ಲಿ ನಾವೆಲ್ಲಾ ಇದನ್ನು ಕುರಿತು ಗಂಭೀರವಾಗಿ ಯೋಚಿಸಿ ಹೊಸ ವರ್ಷವನ್ನು ಶುಭವನ್ನಾಗಿಸೋಣ. ●










ಮುರಳೀಧರ ಚಿಕ್ಕಮಗಳೂರು

**ಸಂ**ವತ್ಸರ ೨೦೧೬ ತಾನು ಚರಿತ್ರೆಯೊಳಗೆ ಸೇರುವ ಮುನ್ನ ಕೂಡಿಟ್ಟ ಎಲ್ಲ ಆರ್ಥಿಕ, ಸಾಮಾಜಿಕ ಹಾಗೂ ರಾಜಕೀಯ ರೋಗಗಳ ವೈರಸ್ಸನ್ನು ೨೦೧೭ಕ್ಕೆ ಸಾಗಿಸಿದ ಕಾರಣದಿಂದಲೇ ಅದು ಹುಟ್ಟಿನಿಂದಲೇ ಅಸ್ವಸ್ಥ ಮತ್ತು ರೋಗಗ್ರಸ್ತ. ಹಾಗಾಗಿ ವರ್ಷ ೨೦೧೭ ಹೊಸ ಆಸೆಗಳನ್ನೇನೂ ಚಿಗುರಿಸುವ ಸಾಧ್ಯತೆಗಳೇ ಇರಲಿಲ್ಲ. ಅಂಟಿಕೊಂಡ ರೋಗ ಉಲ್ಬಣಗೊಂಡು ವರ್ಷವಿಡೀ ಅಶಾಂತಿ, ನೋವು, ಸಂಕಟ, ಅನಿಶ್ಚಿತತೆ, ಅಸಹಿಷ್ಣುತೆ ಮತ್ತು ಆತಂಕಗಳನ್ನು ಜನತೆಗೆ ಹಂಚಿದ್ದೇ ೨೦೧೭ನೇ ಇಸವಿಯ ಅಳಿಯದೆ ಉಳಿಯುವ ನೆನಪುಗಳು. ಜಗತ್ತಿನಾದ್ಯಂತ ನಡೆದ ಮತ್ತು ನಡೆಯುತ್ತಿರುವ ವಿದ್ಯಮಾನಗಳೇ ಈ ಸ್ಥಿತಿಗೆ ರುಜುವಾತು. ಬಂಡವಾಳಶಾಹಿ ವ್ಯವಸ್ಥೆಯ ತೀವ್ರ ಹಾಗೂ ದೀರ್ಘಕಾಲದ ಬಿಕ್ಕಟ್ಟು, ಇವುಗಳ ಪರಿಣಾಮವಾಗಿ ಸಮಾಜದಲ್ಲಿ ಅದು ಸೃಷ್ಟಿಸಿರುವ ಅಸಮಾನತೆ, ಉದ್ಯೋಗಹೀನತೆ, ಬಡತನ ಇತ್ಯಾದಿಗಳ ಬಗ್ಗೆ ಆರ್ಥಿಕ ತಜ್ಞರು ಈಗಾಗಲೇ ಅನೇಕಾನೇಕ ಸಂಶೋಧಿತ ಗ್ರಂಥಗಳನ್ನು ಮತ್ತು ಲೇಖನಗಳನ್ನು ಬರೆದಿದ್ದಾರೆ. ಬಂಡವಾಳಶಾಹಿಯ ವೈಫಲ್ಯದ ಫಲವೆಂದರೆ, ಯುದ್ಧ, ಅಂತಃಕಲಹ, ಭಯೋತ್ಪಾದಕತೆ, ಪ್ರಭುತ್ವಗಳ ಭಯೋತ್ಪಾದಕತೆ ಮತ್ತು ಮಾನವ ಹಕ್ಕುಗಳ ಮೇಲಿನ ದಾಳಿ. ಪ್ರಜಾಪ್ರಭುತ್ವದ ಮೌಲ್ಯಗಳನ್ನು ಅರ್ಥಹೀನವನ್ನಾಗಿಸುವ ಮತ್ತು ಸಂಕುಚಿತ ರಾಷ್ಟ್ರೀಯ ಮನೋಭಾವನೆಯನ್ನು ಬೆಳೆಸುತ್ತಿರುವ ರಾಜಕೀಯ ಶಕ್ತಿಗಳು ಅಣಬೆಗಳಂತೆ ಹುಟ್ಟುತ್ತಿವೆ.

# ೨೦೧೭ ಸಂಕಷ್ಟಗಳ ವರ್ಷಧಾರೆ







**ಯುದ್ಧವೇ ಉದ್ದಿಮೆ**

ಅಮೆರಿಕದ ಮಾರುಕಟ್ಟೆ ಅಗಾಧವಾದದ್ದು. ಹಾಗೆಯೇ ಅದರ ಮಿಲಿಟರಿ ಶಕ್ತಿಯೂ ಅಗಾಧವಾದದ್ದು, ಶಸ್ತ್ರಾಸ್ತ್ರಗಳ ತಯಾರಿಕೆ ಅಮೆರಿಕದ ಬೃಹತ್ ಉದ್ದಿಮೆ. ಈ ದೇಶದ ಎರಡು ಪ್ರಮುಖ ರಾಜಕೀಯ ಪಕ್ಷಗಳಾದ ರಿಪಬ್ಲಿಕನ್ ಮತ್ತು ಡೆಮೊಕ್ರಾಟಿಕ್ ಪಕ್ಷಗಳೆರಡೂ ಈ ಉದ್ದಿಮೆಗಳ ಕೈಗೊಂಬೆಗಳಾಗಿ ಸಂತೋಷದಿಂದ ತಮ್ಮ ತಮ್ಮ ರಾಜಕೀಯ ಅಸ್ತಿತ್ವವನ್ನು ಮುಂದುವರಿಸಿಕೊಂಡು ಬಂದಿವೆ. ಯುದ್ಧ, ಅಂತಃಕಲಹ, ಭಯೋತ್ಪಾದನೆ ಇತ್ಯಾದಿಗಳಿಗೆಲ್ಲ ಅಗತ್ಯವಾದ ಶಸ್ತ್ರಾಸ್ತ್ರಗಳನ್ನು ಅಮೆರಿಕದ ಶಸ್ತ್ರಾಸ್ತ್ರ ಉದ್ದಿಮೆಗಳು ಪೂರೈಸುತ್ತವೆ. ಯುದ್ಧ, ಅಂತಃಕಲಹ, ಭಯೋತ್ಪಾದನೆ ನಿಂತಲ್ಲಿ ಈ ಉದ್ದಿಮೆಗಳ ವ್ಯಾಪಾರ ಮತ್ತು ವ್ಯವಹಾರಗಳಿಗೆ ಧಕ್ಕೆ ಬರುತ್ತದೆ. ಅಮೆರಿಕದ ಸರ್ಕಾರ ಯುದ್ಧ, ಅಂತಃಕಲಹಗಳನ್ನು ಹುಟ್ಟುಹಾಕಿ, ನಂತರ ಮಧ್ಯಪ್ರವೇಶಿಸುವುದು ಬಹುಮಟ್ಟಿಗೆ ಈ ಉದ್ದಿಮೆಗಳ ಹಿತದೃಷ್ಟಿಯಿಂದ. ೧೯೫೦ರಿಂದ ಇಲ್ಲಿಯವರೆಗೆ ಕೊರಿಯ, ಲಾವೋಸ್, ಕ್ಯೂಬಾ, ವಿಯೆಟ್ನಾಂ, ಕಾಂಬೋಡಿಯ, ಲೆಬನಾನ್, ಲಿಬ್ಯ, ಪನಾಮ, ಇರಾಕ್, ಸೊಮಾಲಿಯ, ಬೊಸ್ನಿಯ, ಆಫ್ಘಾನಿಸ್ತಾನ, ಸಿರಿಯ ದೇಶಗಳಲ್ಲಿ ಅಮೆರಿಕ ಮತ್ತು ನ್ಯಾಟೋ ದೇಶಗಳು ನಡೆಸಿರುವ ಯುದ್ಧಗಳೇ ಇದಕ್ಕೆ ಸಾಕ್ಷಿ. ಈ ಎಲ್ಲ ಯುದ್ಧಗಳಲ್ಲಿ ಅಮೆರಿಕದ ಸ್ವಾತಂತ್ರ್ಯವಾಗಲೀ ಅಥವಾ ಸಾರ್ವಭೌಮತೆಯಾಗಲೀ ಪಣಕ್ಕಿರಲಿಲ್ಲ. ಆದರೆ ಇತರೆ ದೇಶಗಳ ಸ್ವಾತಂತ್ರ್ಯ ಮತ್ತು ಸಾರ್ವಭೌಮತೆಯನ್ನು ಧಿಕ್ಕರಿಸಿ ಪ್ರತ್ಯಕ್ಷ ಮತ್ತು ಪರೋಕ್ಷವಾಗಿ ಕದನಕ್ಕಿಳಿದು ಲಕ್ಷಾಂತರ ಅಮಾಯಕರನ್ನು ಸಂಹರಿಸಿ, ಲಕ್ಷಾಂತರ ಜನರನ್ನು ಊನಗೊಳಿಸಿ, ಲಕ್ಷಾಂತರ ಜನರನ್ನು ನಿರಾಶ್ರಿತರನ್ನಾಗಿಸಿ, ನಿರ್ಗತಿಕರನ್ನಾಗಿಸಿ ತನ್ನ ಮಿಲಿಟರಿ ಶಕ್ತಿಯನ್ನು ಮೆರೆದು ಅಮೆರಿಕ ತಾನು ಪ್ರಜಾಪ್ರಭುತ್ವದ ರಕ್ಷಣೆಯ ಪ್ರಪಂಚದ ಪೊಲೀಸ್ ಎಂದು ಹಿಗ್ಗಿದೆ. ಆದ ಕಾರಣ ಅಮೆರಿಕಕ್ಕೆ ಯುದ್ಧ ಒಂದು ನಿರಂತರ ಉದ್ದಿಮೆ. ಯುದ್ಧವಿಲ್ಲದಿದ್ದಲ್ಲಿ ಅಮೆರಿಕ ತನ್ನ ಘನತೆ – ಗೌರವ – ಶ್ರೇಷ್ಠತೆಯನ್ನು ಕಳೆದುಕೊಳ್ಳುತ್ತದೆ ಎಂಬುದು ಆ ದೇಶದ ಸಾರ್ವಜನಿಕ ಅಭಿಮತವಲ್ಲದಿದ್ದರೂ, ಅದು ಯುದ್ಧವನ್ನೇ ಉದ್ದಿಮೆಯಾಗಿಸಿರುವವರ ಪ್ರಚಾರ. ಡೊನಾಲ್ಡ್ ಟ್ರಂಪ್ ಇವರಲ್ಲೊಬ್ಬರು.

**ಅಮೆರಿಕ ಶ್ರೇಷ್ಠ – ಟ್ರಂಪ್**

ಡೊನಾಲ್ಡ್ ಟ್ರಂಪ್ ರಿಪಬ್ಲಿಕನ್ ಪಕ್ಷದ ಅಭ್ಯರ್ಥಿಯಾಗಿ ಆಯ್ಕೆಗೊಂಡು ಅಮೆರಿಕದ ಅಧ್ಯಕ್ಷಸ್ಥಾನಕ್ಕೆ ಡೆಮೊಕ್ರಾಟಿಕ್ ಪಕ್ಷದ ಅಭ್ಯರ್ಥಿ ಹಿಲರಿ ಕ್ಲಿಂಟನ್‌ರನ್ನು ಪರಾಭವಗೊಳಿಸಿ ಫೆಬ್ರವರಿ ೨೦೧೭ರಲ್ಲಿ ಗದ್ದುಗೆ ಏರಿದವ. ಈತನ ಗೆಲುವಿನಲ್ಲಿ ರಷ್ಯದ ಪಾತ್ರವಿತ್ತು ಎಂಬ ಶಂಕೆಯ ಬಗ್ಗೆ ಅಮೆರಿಕದಲ್ಲಿ ಚರ್ಚೆ ನಡೆಯುತ್ತಿದೆ. ಅದೇನೇ ಇರಲಿ, ಅಮೆರಿಕದ ಅಧ್ಯಕ್ಷನಾಗಿ ಟ್ರಂಪ್‌ನ ಆಯ್ಕೆ ವಿಶ್ವದ ಹಿತದೃಷ್ಟಿಯಿಂದ ಅತ್ಯಂತ ದುರದೃಷ್ಟಕರ ಬೆಳವಣಿಗೆ. ಈತನ ಅಹಂಕಾರ ಮತ್ತು ಅಟ್ಟಹಾಸದ ಹೇಳಿಕೆಗಳು ಅಮೆರಿಕದ ಅಧ್ಯಕ್ಷಸ್ಥಾನಕ್ಕೆ ಅಗೌರವ ತಂದಿದೆ. ಟ್ರಂಪ್‌ನ ನಾಲಿಗೆಗೆ ಹಿಡಿತವೇ ಇಲ್ಲ ಮತ್ತು ಸಿಕ್ಕದವರಿಲ್ಲ. ಚುನಾವಣೆಯ ಸಂದರ್ಭದಲ್ಲಿ ಟ್ರಂಪ್ ಜರೆಯದ ದೇಶಗಳಿಲ್ಲ. ಅಮೆರಿಕದ ವಾಣಿಜ್ಯ ವ್ಯವಹಾರಗಳಲ್ಲಿ ಚೀನಾ ಮೋಸ ಮಾಡಿದೆ, ಅಮೆರಿಕದ ಉದ್ಯೋಗಗಳನ್ನು ಭಾರತ ಕಸಿದುಕೊಂಡಿದೆ, ಮೆಕ್ಸಿಕೊ ದೇಶ ಅಪರಾಧಿಗಳನ್ನು ಅಮೆರಿಕಕ್ಕೆ ರವಾನಿಸಿದೆ ಇತ್ಯಾದಿಗಳೇ ಈತನ ಚುನಾವಣಾ ಭಾಷಣಗಳ ಆರೋಪ. "ಅಮೆರಿಕ ಶ್ರೇಷ್ಠ – ಅಮೆರಿಕ ಪ್ರಥಮ" ಎಂಬುದೇ ಈತನ ಚುನಾವಣಾ ಘೋಷಣೆ. ಬರಾಕ್ ಒಬಾಮ ಅಮೆರಿಕದ ಶ್ರೇಷ್ಠತೆ ಮತ್ತು ಗೌರವವನ್ನು ಕುಂದುಗೊಳಿಸಿದ್ದು ತಾನು ಮತ್ತೆ ಅವುಗಳನ್ನು ಮೇಲೆತ್ತುವುದಾಗಿ ಈತನ ಚುನಾವಣಾ ವಾಗ್ದಾನ.

**ವಲಸಿಗರ ಮೇಲೆ ದಾಳಿ**

ಅಮೆರಿಕದಲ್ಲಿ ಸುಮಾರು ಎರಡುಕೋಟಿಗೂ ಮೀರಿ ಆ ದೇಶದಲ್ಲಿ ನೆಲೆಸಲು ಅಧಿಕೃತ ದಾಖಲೆಗಳಿಲ್ಲದ ವಲಸೆಗಾರರಿದ್ದಾರೆಂದು ಅಂದಾಜಿಸಲಾಗಿದೆ. ಇವರನ್ನು ದೇಶದಿಂದ ಉಚ್ಚಾಟಿಸಬೇಕೆಂಬುದು

ರಿಪಬ್ಲಿಕನ್ ಪಕ್ಷದ ಬಹುಪಾಲು ಚುನಾಯಿತ ಪ್ರತಿನಿಧಿಗಳ ಅಭಿಮತ. ಡೊನಾಲ್ಡ್ ಟ್ರಂಪ್ ಇವರಲ್ಲಿ ಪ್ರಮುಖ. ಅಮೆರಿಕದಲ್ಲಿ ಅಧಿಕೃತ ದಾಖಲೆ ಹೊಂದದೆ ಹತ್ತು ಹಲವಾರು ವರ್ಷಗಳಿಂದ ನೆಲೆಸಿರುವ ವಲಸೆಗಾರರನ್ನು ಹೊರಹಾಕಿ, ಮುಂದೆ ಇಂತಹ ಅನಧಿಕೃತ ವಲಸೆಗಾರರು ಅಮೆರಿಕಕ್ಕೆ ನುಸುಳದ ಹಾಗೆ ಮೆಕ್ಸಿಕೊ ಮತ್ತು ಅಮೆರಿಕದ ಗಡಿಯಲ್ಲಿ ಗೋಡೆ ಕಟ್ಟುವುದೇ ಟ್ರಂಪ್‌ನ ಬೃಹತ್ ಯೋಜನೆ. ಟ್ರಂಪ್‌ನ ಈ ನಿಲುವು ಅಮೆರಿಕ ಸಾರಿದ್ದ ಮೂಲ ತತ್ವಕ್ಕೆ ವಿರುದ್ಧವಾದದ್ದು. ಏಕೆಂದರೆ ಅಮೆರಿಕ ವಲಸೆಗಾರರ ನಾಡು. ಯುರೋಪ್ ರಾಷ್ಟ್ರಗಳಿಂದ ದಾಖಲೆ ರಹಿತವಾಗಿ ಬಂದವರೇ ಈಗ ಆ ದೇಶದ ಪ್ರಜೆಗಳು. ಹಾಗೆಯೇ ಹಿಂದೆ ದಕ್ಷಿಣ ಅಮೆರಿಕ ಮತ್ತು ವೆಸ್ಟ್ ಇಂಡೀಸ್ ದೇಶಗಳಿಂದ ಅಮೆರಿಕಕ್ಕೆ ಕರೆತಂದ ದುಡಿಯುವ ಜನರೂ ಈಗ ಆ ದೇಶದ ಪ್ರಜೆಗಳು. ಹಾಗೆ ನೋಡಿದಲ್ಲಿ ಡೊನಾಲ್ಡ್ ಟ್ರಂಪ್‌ನ ಪೂರ್ವಜರೂ ಕೂಡ ದಾಖಲೆ ರಹಿತವಾಗಿ ಬಂದು ಅಮೆರಿಕದಲ್ಲಿ ನೆಲೆಸಿದವರು. ವಲಸೆಗಾರರನ್ನು ಕೈ ಬೀಸಿ ಕರೆಯುತ್ತಿರುವ ನ್ಯೂಯಾರ್ಕ್‌ನ ಸ್ವಾತಂತ್ರ್ಯಮಾತೆಯ ಪ್ರತಿಮೆಯೇ ಅಮೆರಿಕದ ಮೂಲ ಸತ್ವಕ್ಕೆ ಸಾಕ್ಷಿ.



**ಉತ್ಪ್ರೇಕ್ಷಿತ ರಾಷ್ಟ್ರೀಯತೆ**

ಟ್ರಂಪ್ ಅಮೆರಿಕದ ಅಧ್ಯಕ್ಷನಾಗಿ ಅಧಿಕಾರ ವಹಿಸಿಕೊಂಡ ಮೊದಲ ದಿನಗಳಲ್ಲಿ ಅನಧಿಕೃತ ವಲಸೆಗಾರರು ದೇಶಾದ್ಯಂತ ದಿನಗಟ್ಟಲೆ ತಲೆ ಮರೆಸಿಕೊಂಡದ್ದನ್ನು ಅಲ್ಲಿಯ ಅನೇಕ ಪತ್ರಿಕೆಗಳು ವರದಿ ಮಾಡಿದ್ದವು. ಅಮೆರಿಕದ ಆರ್ಥಿಕತೆಗೆ ಈ ವಲಸೆಗಾರರು ನೀಡುತ್ತಿರುವ ಪಾಲು ಅಪಾರ. ಸರ್ಕಾರ ಇದನ್ನು ಕಡೆಗಣಿಸುವಂತಿಲ್ಲ. ಟ್ರಂಪ್ ವಲಸೆಗಾರರ ವಿರೋಧಿ ಮಾತ್ರವಲ್ಲ. ಈತ ಕಡು ಮುಸ್ಲಿಂ ವಿರೋಧಿ ಕೂಡ. ಅವನ ಈ ಧೋರಣೆಯನ್ನು ಆತ ಯಥೇಚ್ಛವಾಗಿ ಪ್ರದರ್ಶಿಸಿದ್ದಾನೆ. ಲಿಬ್ಯ, ಸಿರಿಯ, ಸೊಮಾಲಿಯ, ಸುಡಾನ್, ಇರಾನ್ ಮತ್ತು ಯೆಮೆನ್ ರಾಷ್ಟ್ರಗಳಿಂದ ಅಮೆರಿಕಕ್ಕೆ ಬರುವ ಮುಸ್ಲಿಂರ ಮೇಲೆ ತಾತ್ಕಾಲಿಕ ನಿರ್ಬಂಧ ಹೇರಲಾಗಿದೆ. ಅಮೆರಿಕಾದ ಸರ್ವೋಚ್ಚ ನ್ಯಾಯಾಲಯ ಟ್ರಂಪ್ ಸರ್ಕಾರದ ಈ ನೀತಿಯನ್ನು ಅಲ್ಪ ಸ್ವಲ್ಪ ಮಾರ್ಪಾಡಿನೊಂದಿಗೆ ಎತ್ತಿ ಹಿಡಿದಿರುವುದು ವಿಷಾದನೀಯ. ಟ್ರಂಪ್ ಅಧಿಕಾರಕ್ಕೆ ಬಂದ ನಂತರ ಹತ್ತಾರು ಭಾರತೀಯರು ವರ್ಣ ದ್ವೇಷಕ್ಕೆ ಬಲಿಯಾಗಿದ್ದಾರೆ. ಭಾರತದ ಅನೇಕ ಮಾಹಿತಿ ತಂತ್ರಜ್ಞಾನದ ಉದ್ದಿಮೆಗಳಿಗೆ ವೀಸಾ ನಿಷೇಧಿಸಲಾಗಿದೆ. ಅನಗತ್ಯ ವಲಸೆಯನ್ನು ತಡೆಯಲು ಈಗಿರುವ ವೀಸಾ ನೀತಿಯನ್ನೇ ಮಾರ್ಪಾಡು ಮಾಡುವ ಪ್ರಯತ್ನಗಳು ನಡೆಯುತ್ತಿವೆ. ಟ್ರಂಪ್‌ನ ನೀತಿಗಳನ್ನು ಪ್ರತಿರೋಧಿಸುವ ಬೃಹತ್ ಪ್ರತಿಭಟನೆಗಳೂ ಅಮೆರಿಕದಲ್ಲಿ ನಡೆಯುತ್ತಿವೆ. ಬಹುತೇಕ ಪತ್ರಿಕೆಗಳು ಟ್ರಂಪ್‌ನ ನೀತಿಗಳನ್ನು ಪ್ರಶ್ನಿಸಿವೆ. ರಿಪಬ್ಲಿಕನ್ ಪಕ್ಷದ ಅನೇಕ ಜನಪ್ರತಿನಿಧಿಗಳೇ ಟ್ರಂಪ್‌ನ ವಿರುದ್ಧ ಸೆಡ್ಡು ಹೊಡೆದಿದ್ದಾರೆ. ಬರಾಕ್ ಒಬಾಮ ಜಾರಿಗೊಳಿಸಿದ್ದ ಆರೋಗ್ಯ ಯೋಜನೆಯನ್ನು ಹೊಸಕಿಹಾಕುವ ಪ್ರಯತ್ನವೂ ಜಾರಿಯಲ್ಲಿದೆ. ಅಮೆರಿಕದ ಸಮಾಜ ಬಹುಶಃ ಹಿಂದೆಂದೂ ಕಾಣದಂತಹ ರಾಜಕೀಯ ಧ್ರುವೀಕರಣದತ್ತ ಧಾವಿಸುತ್ತಿದೆ. ಬಲಪಂಥೀಯ ರಾಜಕೀಯವು ಹುಸಿ ರಾಷ್ಟ್ರೀಯತೆಗೆ ಇಂಬುಕೊಟ್ಟಿದೆ.

**ದಟ್ಟೈಸುತ್ತಿರುವ ಯುದ್ಧದ ಕಾರ್ಮೋಡ**

೧೯೫೦ರ ಕೊರಿಯ ಯುದ್ಧದಲ್ಲಾಗಲೀ, ೧೯೭೦ರ ವಿಯೆಟ್ನಾಂ ಯುದ್ಧದಲ್ಲಾಗಲೀ, ೨೦೦೪ರ ಇರಾಕ್ ಯುದ್ಧದಲ್ಲಾಗಲೀ, ಆಫ್ಘಾನಿಸ್ಥಾನದಲ್ಲಿ ತಾಲಿಬಾನ್ ವಿರುದ್ಧದ ಕಾರ್ಯಾಚರಣೆಯಲ್ಲಾಗಲೀ, ಅಮೆರಿಕದ ಸೈನ್ಯ ಅಮಾಯಕರನ್ನು ಹತ್ಯೆಗೈದಿದೆಯೆ ಹೊರತು ಜಯ ಸಾಧಿಸಲಾಗಿಲ್ಲ. ಆದರೆ ಅಮೆರಿಕದ ಯುದ್ಧದಾಹವೆಂದಿಗೂ ಕಡಿಮೆಯಾಗುವುದಿಲ್ಲ. ಸಿರಿಯಾದ ಮೇಲೆ ಅಮೆರಿಕವೂ ಸೇರಿದಂತೆ ನ್ಯಾಟೋ ದೇಶಗಳು ೮೦೦೦ ಬಾರಿ ಬಾಂಬ್ ದಾಳಿ ನಡೆಸಿವೆ ಎಂಬುದು ಅಧಿಕೃತ ಅಂಕಿ–ಅಂಶ. ಈಗ ಟ್ರಂಪ್‌ನ ಗೃಧ್ರಕಣ್ಣು ಇರಾನ್ ಮತ್ತು ಉತ್ತರ ಕೊರಿಯಗಳ ಮೇಲೆ ನೆಟ್ಟಿದೆ. ಬರಾಕ್ ಒಬಾಮನ ಸರ್ಕಾರ ಇರಾನ್‌ನೊಡನೆ ಮಾಡಿಕೊಂಡ ಅಣು ಒಪ್ಪಂದವನ್ನು ರದ್ದುಪಡಿಸುವುದಾಗಿ ಮತ್ತು ಉತ್ತರ ಕೊರಿಯವನ್ನು ನೆಲಸಮ ಮಾಡುವುದಾಗಿ ಈತ ಘೋಷಿಸಿದ್ದಾನೆ. ಇನ್ನೊಂದು ಯುದ್ಧಕೋರ ದೇಶ ಇಸ್ರೇಲ್‌ನ ಪ್ರಧಾನಿ ನೇತನ್‌ಯಾಹು ಈಗ ಟ್ರಂಪ್‌ನ ಪರಮಾಪ್ತ ಮಿತ್ರ ಮತ್ತು ಸಹವರ್ತಿ. ಈಗಾಗಲೇ ಅಮೆರಿಕ ತನ್ನ ವಾಯುಸೇನೆ ಮತ್ತು ನೌಕಾಪಡೆಯನ್ನು ಕೊರಿಯನ್ ದ್ವೀಪಕಲ್ಪದಲ್ಲಿ ಜಮಾಯಿಸಿದೆ. ಟ್ರಂಪ್‌ನ ಗದರಿಕೆ ಮತ್ತು ಗರ್ಜನೆಗೆ ಬೆದರದೆ ಉತ್ತರ ಕೊರಿಯದ ಅಧ್ಯಕ್ಷ ಕಿಮ್ ಜಾಂಗ್ ಉನ್ ತನ್ನಲ್ಲಿರುವ ಅತ್ಯಾಧುನಿಕ ಅಣ್ವಸ್ತ್ರಗಳನ್ನು ಪ್ರಯೋಗಿಸಿ ಅಮೆರಿಕದ ಎಲ್ಲ ನಗರಗಳನ್ನು ಧ್ವಂಸ ಮಾಡುವುದಾಗಿ ಪ್ರತಿಗರ್ಜಿಸಿದ್ದಾನೆ. ಯುದ್ಧದ ಕಾರ್ಮೋಡ ದಟ್ಟೈಸುತ್ತಿದೆ. ಚೀನ ಸುಮಾರು ೧,೫೦,೦೦೦ ಸೇನಾಪಡೆಯನ್ನು ಕೊರಿಯನ್ ದ್ವೀಪಕಲ್ಪದಲ್ಲಿ ನಿಲ್ಲಿಸಿದೆ. ಏಷ್ಯಾಖಂಡದಲ್ಲಿ ರಷ್ಯ, ಚೀನ, ಭಾರತ, ಪಾಕಿಸ್ತಾನ ಮತ್ತು ಉತ್ತರ ಕೊರಿಯ ಅಣ್ವಸ್ತ್ರಗಳನ್ನು ಹೊಂದಿರುವ ದೇಶಗಳು. ಈ ಬೆಳವಣಿಗೆಯಿಂದಾಗಿ ಇಡೀ ವಿಶ್ವದಲ್ಲಿ ಭಯಾನಕ ವಾತಾವರಣ ಸೃಷ್ಟಿಯಾಗಿದೆ. ಸಂಯುಕ್ತ ರಾಷ್ಟ್ರಗಳ ಸಂಸ್ಥೆ ಈವರೆಗೂ ಯಾವ ಯುದ್ಧವನ್ನೂ ತಡೆಯಲಾಗಿಲ್ಲ. ಹಾಗಾಗಿ ಮಹಾಯುದ್ಧವೊಂದು ಸಂಭವಿಸುವ ಸಾಧ್ಯತೆ ದಟ್ಟವಾಗುತ್ತಿದೆ. ಟ್ರಂಪ್‌ನ ಹುಚ್ಚಾಟಕ್ಕೆ ಕಡಿವಾಣ ಬೀಳದಿದ್ದರೆ ಅದಕ್ಕೆ ಜನತೆ ತೆರಬೇಕಾದ ಬೆಲೆ ಅಳೆಯಲಾಗದು. ಟ್ರಂಪ್‌ನ ವಿರುದ್ಧ ಅಮೆರಿಕದ ಜನತೆಯ ಪ್ರತಿಭಟನೆಯ ಕಾವು ಏರುತ್ತಿದೆ. ರಿಪಬ್ಲಿಕನ್ ಪಕ್ಷದ ನಾಯಕರೂ ಟ್ರಂಪ್ ವಿರುದ್ಧ ತಿರುಗಿ ಬಿದ್ದಿದ್ದಾರೆ. ಟ್ರಂಪ್ ಪೂರ್ಣಾವಧಿಗೆ ಅಧ್ಯಕ್ಷನಾಗಿರುವ ಸಾಧ್ಯತೆಯೂ ಶಂಕೆಯಲ್ಲಿದೆ. ಇದು ಸಿದ್ಧಿಸಿದಲ್ಲಿ ಜಗತ್ತಿನ ಬಹುದೊಡ್ಡ ಆತಂಕವೊಂದು ನಿವಾರಣೆಗೊಳ್ಳಬಹುದು.

**ಆತಂಕದಲ್ಲಿ ವೆನಿಜೂಲ**

ಕ್ಯೂಬಾ ದಕ್ಷಿಣ ಅಮೆರಿಕದ ದೇಶಗಳಿಗೆ ಸ್ಫೂರ್ತಿ ನೀಡಿದ ಸಣ್ಣ ದೇಶ. ಎಲ್ಲ ಸಂಕಷ್ಟಗಳನ್ನೂ ಎದುರಿಸಿ ಗೆದ್ದ ದೇಶ. ಒಬ್ಬೊಂಟಿಯಾಗಿದ್ದ ಕ್ಯೂಬಾದ ಜೊತೆಗೂಡಿದ್ದು ವೆನಿಜೂಲ. ಈ ಬೆಳವಣಿಗೆ ಇಡೀ ದಕ್ಷಿಣ ಅಮೆರಿಕದ ರಾಜಕೀಯ ಚಿತ್ರಣವನ್ನೇ ಬದಲಾಯಿಸಿದ್ದು ಈಗ ಇತಿಹಾಸ. ಬೊಲಿವಿಯ, ಈಕ್ವೆಡಾರ್, ಉರುಗ್ವೆ, ಚಿಲಿ, ನಿಕರಾಗುವ, ಬ್ರೆಜಿಲ್ ಸಮಾಜವಾದಿ ಸಿದ್ಧಾಂತದ ಪರ ವಾಲಿದ ದೇಶಗಳು. ಅಮೆರಿಕಕ್ಕೆ ಇದು ಸಹಿಸಲಾಗದ ಬೆಳವಣಿಗೆ. ವೆನಿಜೂಲದ ಮದುರೊ ಸರ್ಕಾರವನ್ನು ಕಿತ್ತುಹಾಕುವ ಪ್ರಯತ್ನವನ್ನು ಅಮೆರಿಕ ನಡೆಸಿದೆ. ವೆನಿಜೂಲ ತೈಲ ಸಂಪದ್ಭರಿತ ದೇಶ. ವಿಶ್ವದ ತೈಲ ಬೆಲೆಯ ಇಳಿಕೆ ಮತ್ತು ಅಮೆರಿಕದ ಶೆಲ್ ತೈಲ ವೆನಿಜೂಲದ ಆರ್ಥಿಕತೆಗೆ ಪ್ರಬಲ ಪೆಟ್ಟು ನೀಡಿದೆ. ಅಮೆರಿಕ ವೆನಿಜೂಲದಿಂದ ತೈಲ ಆಮದನ್ನು ನಿಲ್ಲಿಸಿದೆ. ಹೀಗಾಗಿ ವೆನಿಜೂಲದ ಆರ್ಥಿಕ ಪರಿಸ್ಥಿತಿ ಅಲ್ಲೋಲ ಕಲ್ಲೋಲವಾಗಿ ಪ್ರತಿಭಟನೆಗಳು ನಡೆಯುತ್ತಿವೆ. ದಕ್ಷಿಣ ಅಮೆರಿಕ ದೇಶಗಳು ರಚಿಸಿಕೊಂಡಿರುವ ಒಕ್ಕೂಟ ವೆನಿಜೂಲದ ಜೊತೆ ನಿಂತಿದೆ. ದಕ್ಷಿಣ ಅಮೆರಿಕದ ಇತರೆ ರಾಷ್ಟ್ರಗಳಲ್ಲಿ ಸಮತೋಲನವನ್ನು ಕಂಡರೂ ಆತಂಕವಂತೂ ಜನತೆಯನ್ನು ಕಾಡುತ್ತಿದೆ.

**ಯೂರೋಪ್ ಒಕ್ಕೂಟ – ಬಿರುಕು**

ಯೂರೋಪ್ ರಾಷ್ಟ್ರಗಳು ಅನೇಕ ತುಮುಲಗಳನ್ನು ಅನುಭವಿಸಿದ ವರ್ಷ ೨೦೧೭. ಬ್ರಿಟನ್, ಫ್ರಾನ್ಸ್, ಸ್ಪೇನ್ ಮತ್ತು ಪೋರ್ಚುಗಲ್ ದೇಶಗಳು ಈ ಹಿಂದೆ ವಸಾಹತುಗಳನ್ನು ಹೊಂದಿದ್ದು, ಆ ವಸಾಹತು ದೇಶಗಳ ಸಂಪತ್ತನ್ನು ಲೂಟಿ ಹೊಡೆದು ತಮ್ಮ ಶ್ರೀಮಂತಿಕೆಯನ್ನು ಮೆರೆದ ಯೂರೋಪ್‌ನ ದೇಶಗಳು.

ವಸಾಹತು ದೇಶಗಳು ಸ್ವಾತಂತ್ರ್ಯ ಗಳಿಸಿದ ನಂತರ ನವ ವಸಾಹತು ನೀತಿಗಳನ್ನು ಅನುಸರಿಸಿದವು. ಪ್ರಪಂಚದ ಮಾರುಕಟ್ಟೆಯಲ್ಲಿ ತಮ್ಮ ಪಾಲನ್ನು ಪಡೆಯುವ ಸಲುವಾಗಿ ಯೂರೋಪ್‌ನ ರಾಷ್ಟ್ರಗಳು ರಚಿಸಿಕೊಂಡಿದ್ದು ಯೂರೋಪಿಯನ್ ಒಕ್ಕೂಟ. ಬ್ರಿಟನ್ ಯೂರೋಪಿನ ಒಕ್ಕೂಟ ಸೇರ್ಪಡೆಗೊಳ್ಳಬೇಕೊ ಅಥವಾ ಬೇಡವೊ ಎಂಬ ಚರ್ಚೆ ಆ ದೇಶದಲ್ಲಿ ನಡೆದರೆ, ಅದನ್ನು ಒಕ್ಕೂಟಕ್ಕೆ ಸೇರಿಸಿಕೊಳ್ಳಬೇಕೊ ಅಥವಾ ಬೇಡವೊ ಎಂಬುದೂ ಕೂಡ ಯೂರೋಪ್‌ನ ಇತರೆ ರಾಷ್ಟ್ರಗಳಲ್ಲಿ ವಿವಾದಕ್ಕೊಳಗಾದ ವಿಚಾರ. ೧೯೭೫ರಲ್ಲಿ ಬ್ರಿಟನ್‌ನಲ್ಲಿ ಈ ಸಂಬಂಧವಾಗಿ ನಡೆದ ಮತದಾನದಲ್ಲಿ ಸೇರಬೇಕೆಂದಾದರೆ, ಫ್ರಾನ್ಸ್ ದೇಶ ಯೂರೋಪ್‌ನ ಒಕ್ಕೂಟದ ಬಗ್ಗೆ ಬ್ರಿಟನ್‌ನ ಬದ್ಧತೆಯನ್ನೇ ಪ್ರಶ್ನಿಸಿ ತನ್ನ ಪ್ರತಿರೋಧವನ್ನು ವ್ಯಕ್ತಪಡಿಸಿತ್ತು. ಒಕ್ಕೂಟ ಸೇರಿದ ಮೇಲೂ ಬ್ರಿಟನ್ ಯೂರೋಪ್‌ನ ಒಕ್ಕೂಟದ ಬಗ್ಗೆ ಸಂಪೂರ್ಣ ಬದ್ಧತೆಯನ್ನು ತೋರಿರಲಿಲ್ಲ.

**ಬ್ರೆಕ್ಸಿಟ್ – ಹೊಸ ಬಿಕ್ಕಟ್ಟು**

೨೦೦೮–೦೯ರಲ್ಲಿ ಜಾಗತಿಕ ಆರ್ಥಿಕ ಬಿಕ್ಕಟ್ಟು ತೀವ್ರವಾಗಿ ಬಾಧಿಸಿದ್ದು ಅಮೇರಿಕ ಮತ್ತು ಯೂರೋಪ್ ರಾಷ್ಟ್ರಗಳನ್ನು. ದಿವಾಳಿಯ ಅಂಚಿಗೆ ತಲುಪಿದ್ದ ಗ್ರೀಸ್, ಪೋರ್ಚುಗಲ್ ಮತ್ತು ಸ್ಪೇನ್ ದೇಶಗಳ ಆರ್ಥಿಕತೆಯನ್ನು ಪುನಶ್ಚೇತನಗೊಳಿಸಲು ಯೂರೋಪ್ ಒಕ್ಕೂಟ ಮತ್ತು ಜರ್ಮನಿ ಪಟ್ಟ ಪ್ರಯತ್ನಗಳು ಅಷ್ಟಿಷ್ಟಲ್ಲ. ಬಡತನ, ನಿರುದ್ಯೋಗ ಮತ್ತು ಅಸಮಾನತೆ ಈ ದೇಶಗಳಲ್ಲಿ ವ್ಯಾಪಕವಾದ ಪ್ರತಿಭಟನೆ ಮತ್ತು ಚಳವಳಿಯನ್ನು ಹರಡಿದ ಕಾರಣಗಳು. ಈಗ ಸಿರಿಯ ಮತ್ತು ಲಿಬ್ಯದಿಂದ ಬರುತ್ತಿರುವ ನಿರಾಶ್ರಿತರು ಯೂರೋಪ್ ರಾಷ್ಟ್ರಗಳ ಸಮಸ್ಯೆಗಳನ್ನು ಉಲ್ಬಣಗೊಳಿಸಿದ್ದಾರೆ. ಜರ್ಮನಿ ಮತ್ತು ಫ್ರಾನ್ಸ್ ದೇಶಗಳು ನಿರಾಶ್ರಿತರಿಗೆ ಆಶ್ರಯ ನೀಡುವಲ್ಲಿ ಉದಾರತೆಯನ್ನು ತೋರಿರುವಷ್ಟು ಇತರೆ ಯೂರೋಪ್ ರಾಷ್ಟ್ರಗಳು ತೋರದ ಕಾರಣ ಯೂರೋಪ್ ಒಕ್ಕೂಟದಲ್ಲಿ ಹೊಸದೊಂದು ಬಿರುಕು ಹುಟ್ಟಿದೆ. ತತ್ಪರಿಣಾಮವಾಗಿ ಜರ್ಮನಿ, ಫ್ರಾನ್ಸ್‌ನಲ್ಲಿ ನಿರಾಶ್ರಿತರಿಗೆ ಆಶ್ರಯವನ್ನು ವಿರೋಧಿಸುತ್ತಿರುವ ಬಲಪಂಥೀಯ ಶಕ್ತಿಗಳು ಮೇಲುಗೈ ಸಾಧಿಸುತ್ತಿವೆ ಎಂಬುದು ಈ ದೇಶಗಳಲ್ಲಿ ಬಲಪಂಥೀಯ ಪಕ್ಷಗಳ ಚುನಾವಣಾ ಗೆಲುವು ದೃಢಪಡಿಸಿದೆ. ಜರ್ಮನಿಯ ಚಾನ್ಸಲರ್ ಎಂಜಲಾ ಮೆರ್ಕೆಲ್ ಸೆಪ್ಟೆಂಬರ್‌ನಲ್ಲಿ ನಡೆದ ಚುನಾವಣೆಯಲ್ಲಿ ಅವರ ಕಳಪೆ ಪ್ರದರ್ಶನ ಮತ್ತು ಫ್ರಾನ್ಸ್‌ನ ಬಲಪಂಥೀಯ ರಾಷ್ಟ್ರೀಯ ರಂಗದ ನಾಯಕಿ ಮೆರಿನ್ ಲ ಪೆನ್‌ನ ಹೆಚ್ಚಿರುವ ಜನಪ್ರಿಯತೆ ಈ ಬೆಳವಣಿಗೆಗೆ ನಿದರ್ಶನಗಳು.

**ಜೆರೆಮಿ ಕೋರ್ಬಿನ್ – ದೃಢನಾಯಕ**

ನಿರಾಶ್ರಿತರ ಪ್ರಶ್ನೆ ಬ್ರಿಟನ್‌ಅನ್ನೂ ಕಾಡಿದ್ದುಂಟು. ಬ್ರಿಟನ್‌ನ ಕನ್ಸರ್‌ವೇಟಿವ್ ಪಕ್ಷ ತನ್ನ ದೇಶದ ಜನತೆ ಎದುರಿಸುತ್ತಿರುವ ಸಮಸ್ಯೆಗಳಿಗೆ ಪರಿಹಾರ ನೀಡುವಲ್ಲಿ ವಿಫಲವಾಗಿದೆ. ಯೂರೋಪ್ ಒಕ್ಕೂಟಕ್ಕೆ ತಾನು ನೀಡಿದಷ್ಟು ಒಕ್ಕೂಟ ಬ್ರಿಟನ್‌ಗೆ ನೀಡಿಲ್ಲ ಎಂಬ ಭಾವನೆ ವ್ಯಾಪಕವಾದ ಕಾರಣವೇ ಯೂರೋಪ್ ಒಕ್ಕೂಟ ತೊರೆಯಬೇಕೇ ಅಥವಾ ಮುಂದುವರೆಯಬೇಕೇ ಎಂಬುದಕ್ಕೆ ಮತದಾನ ನಡೆದದ್ದು ಮತ್ತು ತೊರೆಯಬೇಕೆಂಬ ಫಲಿತಾಂಶ ಬಂದದ್ದು. ಬ್ರೆಕ್ಸಿಟ್ ಮಾತುಕತೆಗಳಲ್ಲಿ ಬ್ರಿಟನ್ ಹೆಚ್ಚು ಅಧಿಕಾರಯುತವಾಗಿ ವ್ಯವಹರಿಸುವ ಕಾರಣವೊಡ್ಡಿ ದಿಢೀರನೆ ನಡೆಸಿದ ಚುನಾವಣೆಯಲ್ಲಿ ಪ್ರಧಾನಿ ತೆರೆಸ ಮೇ ಅಧಿಕಾರ ಉಳಿಸಿಕೊಂಡಿದ್ದೇ ಹೆಚ್ಚು. ಲೇಬರ್ ಪಕ್ಷದ ನಾಯಕ ಜೆರೆಮಿ ಕೋರ್ಬಿನ್ ತನ್ನ ಪ್ರಗತಿಪರ ವಿಚಾರಗಳಿಂದಾಗಿ ಪಕ್ಷವನ್ನು ಅಧಿಕಾರದ ಆಸುಪಾಸಿಗೆ ಕೊಂಡೊಯ್ದಿರುವುದು ಗಮನ ಸೆಳೆದ ಮಹತ್ತರ ಬೆಳವಣಿಗೆ.

**ಭಯೋತ್ಪಾದಕತೆ – ರಾಷ್ಟ್ರೀಯತೆ**

ಜರ್ಮನಿ, ಫ್ರಾನ್ಸ್ ಮತ್ತು ಬ್ರಿಟನ್ ಭಯೋತ್ಪಾದನೆಯ ಕೃತ್ಯಗಳಿಗೆ ಬಲಿಯಾಗಿವೆ. ಈ ಭಯೋತ್ಪಾದನೆಯ ಘಟನೆಗಳು ಬಲಪಂಥೀಯ ಶಕ್ತಿಗಳ ಬೆಳವಣಿಗೆಗೆ ಕಾರಣಗಳಾಗಿವೆ. ಹುಸಿ ರಾಷ್ಟ್ರೀಯತೆಯ ಭಾವನೆಗಳು ಈ ಬಲಪಂಥೀಯ ಪಕ್ಷಗಳ ಬಂಡವಾಳವಾಗಿದೆ. ಭಯೋತ್ಪಾದಕ ಕೃತ್ಯಗಳು ರಾಷ್ಟ್ರೀಯತೆಯ ಭಾವನೆಗಳನ್ನು ಪ್ರಚೋದಿಸಿದರೆ ಹುಸಿ ರಾಷ್ಟ್ರೀಯತೆಯ ಪ್ರದರ್ಶನಗಳು ಭಯೋತ್ಪಾದನೆಯನ್ನು ಪ್ರಚೋದಿಸಿವೆ. ಸ್ಪೇನ್‌ನ ರಾಜ್ಯದ ಭಾಗವಾಗಿರುವ ಕೆಟಲೋನಿಯ ತನ್ನ ಸ್ವಾತಂತ್ರ್ಯವನ್ನು ಘೋಷಿಸಿಕೊಂಡು ಬಿಟ್ಟಿದೆ. ಸಂಪದ್ಭರಿತ ಕೆಟಲೋನಿಯವನ್ನು ಸ್ಪೇನ್ ಬಿಡಲು ತಯಾರಿಲ್ಲ. ಈಗ ಆ ದೇಶದಲ್ಲೊಂದು ಅಂತಃಕಲಹ ಟಿಸಿಲೊಡೆದಿದೆ. ಒಟ್ಟಾರೆ, ಇಡೀ ಯೂರೋಪ್ ಅತೀವ ಸಂಕಷ್ಟವನ್ನು ಅನುಭವಿಸುತ್ತಿರುವುದು ವೇದ್ಯ.

**ಪಾಕಿಸ್ತಾನ – ಅನಿಶ್ಚಿತತೆಯ ಮಡಿಲಲ್ಲಿ**

ಏಷ್ಯ ಖಂಡದ ಪ್ರಚಲಿತ ಉದ್ವಿಗ್ನತೆಗೆ ಉತ್ತರ ಕೊರಿಯ ಪ್ರಮುಖ ಕಾರಣವಾದರೂ ಚೀನ, ಭಾರತ, ಪಾಕಿಸ್ತಾನ, ಆಫ್ಘಾನಿಸ್ತಾನ, ಸೌದಿ ಅರೇಬಿಯ, ಕುವೈಟ್, ಮ್ಯಾನ್ಮಾರ್ ಮತ್ತು ಬಂಗ್ಲಾದೇಶದ ಕೊಡುಗೆಯೇನೂ ಕಡಿಮೆಯಲ್ಲ. ಭಯೋತ್ಪಾದಕರಿಗೆ ಆಶ್ರಯ ನೀಡಿದ ಪಾಕಿಸ್ತಾನ ತಾನೇ ಭಯೋತ್ಪಾದಕರ ಬಾಂಬ್ ದಾಳಿಗಳಿಗೆ ತುತ್ತಾಗಿದೆ. ಮೊನ್ನೆಯವರೆಗೂ ಚುನಾಯಿತ ಪ್ರಧಾನ ಮಂತ್ರಿಯಾಗಿದ್ದ ನವಾಜ್ ಷರೀಫ್‌ನನ್ನು ಈ ಬಾರಿ ಅಲ್ಲಿಯ ಮಿಲಿಟರಿ ಬದಲು ಸರ್ವೋಚ್ಚ ನ್ಯಾಯಾಲಯ ಪದಚ್ಯುತಗೊಳಿಸಿದೆ. ನ್ಯಾಯಾಲಯವು ಗೃಹಬಂಧನದಲ್ಲಿದ್ದ ಲಷ್ಕರ್–ಎ–ತೊಯ್ಯಬಾದ ಮುಖ್ಯಸ್ಥ ಭಾರತ ವಿರೋಧಿ ಮೊಹಮ್ಮದ್ ಹಫೀಜ್‌ನನ್ನು ಬಿಡುಗಡೆ ಮಾಡಿದೆ. ಇಡೀ ಕಾಶ್ಮೀರವೇ ಪಾಕಿಸ್ತಾನಕ್ಕೆ ಸೇರಿದ್ದೆಂದು ಅಲ್ಲಿಯ ಮಿಲಿಟರಿ ಹೊಸ ರಾಗ ಹಾಡುತ್ತಿದೆ. ಭಾರತದ ಗಡಿಯಲ್ಲಿ ಸೈನ್ಯಾಚರಣೆ ನಡೆಸಿದೆ. ಚೀನ ಪಾಕಿಸ್ತಾನದ ಜೊತೆಗೂಡಿದೆ. ಅಮೇರಿಕ – ಪಾಕಿಸ್ತಾನದ ಹಳೆಯ ನಂಟು ಬಿಡಿಸಲಾಗದ ಗಂಟಿನಂತೆ ಮುಂದುವರಿದಿದೆ. ಪಾಕಿಸ್ತಾನದಲ್ಲಿ ಚುನಾಯಿತ ಸರ್ಕಾರವಿದ್ದರೂ ಅಲ್ಲಿಯ ಆಡಳಿತಯಂತ್ರದ ಮೇಲೆ ಮಿಲಿಟರಿ ತನ್ನ ಹಿಡಿತವನ್ನೇನೂ ಸಡಿಲಗೊಳಿಸಿಲ್ಲ. ಭಾರತ – ಪಾಕಿಸ್ತಾನದ ಸಂಬಂಧಗಳು ಸುಧಾರಿಸುವ ಕುರುಹುಗಳೇ ಇಲ್ಲ.

**ದೋಕಲಾಂ – ಘರ್ಷಣೆ**

ದೋಕಲಾಂ ಭೂತಾನ್‌ಗೆ ಸೇರಿದ ಪುಟ್ಟ ಪ್ರದೇಶವಾದರೂ ಚೀನ ಅದನ್ನು ಆಕ್ರಮಿಸಿದ ಹಿನ್ನೆಲೆಯಲ್ಲೇ ಚೀನ ಮತ್ತು ಭಾರತದ ನಡುವೆ ಯುದ್ಧ ಭಯವನ್ನೇ ಸೃಷ್ಟಿಸಿತ್ತು. ಅದು ತಾತ್ಕಾಲಿಕವಾಗಿ ಪರಿಹಾರವಾದಂತಿದ್ದರೂ ಈ ರಾಷ್ಟ್ರಗಳ ನಡುವಿನ ಗಡಿವಿವಾದ ಇನ್ನೂ ಜೀವಂತವಾಗಿರುವ ಕಾರಣ ಮತ್ತೊಮ್ಮೆ ಭುಗಿಲೇಳುವ ಸಾಧ್ಯತೆಗಳನ್ನು ತಳ್ಳಿಹಾಕುವಂತಿಲ್ಲ. ಆದರೆ ಭಾರತದ ವಿಶಾಲ ಮಾರುಕಟ್ಟೆಯಲ್ಲಿ ತನ್ನ ಪಾಲನ್ನು ಗಮನದಲ್ಲಿಟ್ಟುಕೊಂಡು ಸಂಯಮದಿಂದ ವರ್ತಿಸುವಷ್ಟು ರಾಜತಾಂತ್ರಿಕ ಕುಶಾಗ್ರ ವಿವೇಚನೆ ಚೀನಕ್ಕಿದೆ. ಪ್ರಪಂಚದ ರಾಜಕೀಯದಲ್ಲಿ ತಾನೊಂದು ಪ್ರಭಾವಿ ರಾಷ್ಟ್ರವಾಗಬೇಕೆಂಬುದು ಚೀನದ ಮಹತ್ವಾಕಾಂಕ್ಷೆ. ತನ್ನ ನೆರೆಹೊರೆಯ ರಾಷ್ಟ್ರಗಳಾದ ಉತ್ತರ ಕೊರಿಯ, ಶ್ರೀಲಂಕ ಮತ್ತು ನೇಪಾಳದ ಜೊತೆ ಉತ್ತಮ ವಾಣಿಜ್ಯ ಮತ್ತು ರಾಜತಾಂತ್ರಿಕ ಸಂಬಂಧ ಹೊಂದಿದೆ. ಅಮೇರಿಕ – ಉತ್ತರ ಕೊರಿಯ ನಡುವಿನ ಮಾತಿನ ಘರ್ಷಣೆ ಯುದ್ಧದಲ್ಲಿ ಪರ್ಯವಸಾನ ಹೊಂದದಂತೆ ಎಚ್ಚರ ವಹಿಸುವ ಗುರುತರ ಜವಾಬ್ದಾರಿ ಚೀನಾದ ಮೇಲಿದೆ. ಆದರೆ ಅಮೇರಿಕ – ಆಸ್ಟ್ರೇಲಿಯ – ಜಪಾನ್ – ಭಾರತದ ಬಂಗಾಳ ಕೊಲ್ಲಿಯಲ್ಲಿ ಕಾಲಕಾಲಕ್ಕೆ ನಡೆಸುತ್ತಿರುವ ನೌಕಾ ಕಸರತ್ತುಗಳು ಆತಂಕಕ್ಕೆ ಎಡೆ ಮಾಡಿವೆ. ಅದಕ್ಕೆ ಪರ್ಯಾಯವಾಗಿ ಚೀನ ರಷ್ಯದ ಜೊತೆಗೂಡಿ ಪ್ರತಿ ಕಸರತ್ತು ನಡೆಸಿದೆ. ಇವೆಲ್ಲ ಅಮೇರಿಕ ಮತ್ತು ಚೀನದ ಪ್ರಾಬಲ್ಯ ಪರೀಕ್ಷೆ.

### ಅಭಿನಂದನೆಗಳು...

ಧಾರವಾಡದ ಕರ್ನಾಟಕ ಬಾಲವಿಕಾಸ ಅಕಾಡೆಮಿಯ ೨೦೧೧ನೇ ಸಾಲಿನ 'ಮಕ್ಕಳ ಚಂದಿರ' ಪುಸ್ತಕ ಪ್ರಶಸ್ತಿಯು ಬೇದ್ರೆ ಮಂಜುನಾಥ (ಅಡ್ವೆಂಚರ್) ಅವರಿಗೆ ಹಾಗೂ ೨೦೧೫ನೇ ಸಾಲಿನ 'ಮಕ್ಕಳ ಚಂದಿರ' ಪುಸ್ತಕ ಪ್ರಶಸ್ತಿಯು ಮಾಲತಿ ಪಟ್ಟಣಶೆಟ್ಟಿ (ಮಕ್ಕಳ ಮೂರು ನಾಟಕಗಳು) ಮತ್ತು ಗಣೇಶ ಪಿ. ನಾಡೋರ(ನೆಗೆತ) ಅವರಿಗೆ ಲಭಿಸಿದೆ. ಇವರೆಲ್ಲರಿಗೂ 'ನವಕರ್ನಾಟಕ' ಹಾಗೂ 'ಹೊಸತು' ಬಳಗದ ಅಭಿನಂದನೆಗಳು.

**ಜನಾಂಗೀಯ ಶುದ್ಧೀಕರಣ**

ಸಮಸ್ಯೆಗಳಿಗೆ ಭಯೋತ್ಪಾದಕತೆ ಪರಿಹಾರವಲ್ಲ ಎಂಬುದು ಇತಿಹಾಸದಿಂದ ಕಲಿಯಬೇಕಾದ ಪಾಠ. ಅದು ಹುಟ್ಟುಹಾಕುವ ಪ್ರತಿದಾಳಿ, ಅದರಲ್ಲೂ ಪ್ರಭುತ್ವದ ಪ್ರತಿದಾಳಿ, ಭೀಕರ ಪರಿಣಾಮಕ್ಕೆ ದಾರಿ ಮಾಡಿಕೊಡುತ್ತದೆ. ಇದಕ್ಕೆ ಮ್ಯಾನ್ಮಾರ್ (ಬರ್ಮ) ರೋಹಿಂಗ್ಯ ಜನಾಂಗದ ಮೇಲೆ ಅಲ್ಲಿಯ ಮಿಲಿಟರಿ ನಡೆಸಿರುವ ನರಮೇಧವೇ ನಿದರ್ಶನ. ರೋಹಿಂಗ್ಯ ಜನಾಂಗ ಮ್ಯಾನ್ಮಾರ್‌ನ ರಾಖಿನೆ ರಾಜ್ಯದಲ್ಲಿ ತಲೆಮಾರುಗಳಿಂದ ನೆಲೆಸಿದ್ದರೂ ಮ್ಯಾನ್ಮಾರ್‌ನ ಅಂದಿನ ಮಿಲಿಟರಿ ಸರ್ಕಾರ ೧೯೮೨ರಲ್ಲಿ ಇವರ ಪೌರತ್ವವನ್ನು ರದ್ದುಗೊಳಿಸಿದ ಕಾರಣ ರೋಹಿಂಗ್ಯರು ತಮ್ಮ ದೇಶದಲ್ಲಿ ಪರಕೀಯರಾದರು. ರೋಹಿಂಗ್ಯ ಮುಸ್ಲಿಂರು ಅಲ್ಪಸಂಖ್ಯಾತರು. ಮ್ಯಾನ್ಮಾರ್‌ನ ಬೌದ್ಧರು ಬಹುಸಂಖ್ಯಾತರು. ಪೌರತ್ವವಿಲ್ಲದ ಅಲ್ಪಸಂಖ್ಯಾತ ಮುಸ್ಲಿಂರು ಸರ್ಕಾರ ನೀಡುವ ಎಲ್ಲ ಸವಲತ್ತುಗಳಿಂದ ವಂಚಿತರು. ಅತೀವ ಬಡತನ, ನಿರುದ್ಯೋಗ, ನಿರಕ್ಷರತೆ ರೋಹಿಂಗ್ಯ ಜನಾಂಗವನ್ನು ಕಾಡುತ್ತಿರುವ ಸಮಸ್ಯೆಗಳು. ಈ ಮಧ್ಯೆ ಮತೀಯ ಕಲಹಗಳು ತಮ್ಮ ಸಂಕಷ್ಟಗಳಿಂದ ರೋಸಿಹೋದ ರೋಹಿಂಗ್ಯದ ಕೆಲವರು ಹುಟ್ಟುಹಾಕಿದ ಲಿರಾಕನ್ ರೋಹಿಂಗ್ಯ ಮುಕ್ತಿವಾಹಿನಿಯೆಂಬ ಉಗ್ರಗಾಮಿ ಪಡೆ ಮ್ಯಾನ್ಮಾರ್‌ನ ಪೊಲೀಸ್ ಪಡೆಯ ಮೇಲೆ ದಾಳಿ ನಡೆಸಿದ್ದೇ ತಡ ಆ ದೇಶದ ಸೇನೆ ಮತ್ತು ಮತಾಂಧ ಬೌದ್ಧರು ರಾಖಿನೆ ರಾಜ್ಯದ ಹಳ್ಳಿ ಹಳ್ಳಿಗಳನ್ನು ಧ್ವಂಸಗೊಳಿಸಿ ಇಡೀ ರೋಹಿಂಗ್ಯ ಜನಾಂಗವನ್ನೇ ಮ್ಯಾನ್ಮಾರ್‌ನಿಂದ ಬರಿದು ಮಾಡಿದ್ದಾರೆ. ಸೇನೆ ಅಮಾಯಕರ ಮೇಲೆ ನಡೆಸಿದ ದೌರ್ಜನ್ಯಕ್ಕೆ ಕಡಿವಾಣವೇ ಇರಲಿಲ್ಲ. ಜೀವಭಯದಿಂದ ತಾವು ನೆಲೆಸಿದ ದೇಶವನ್ನೇ ತೊರೆದ ಸುಮಾರು ಏಳು ಲಕ್ಷ ರೋಹಿಂಗ್ಯ ನಿರಾಶ್ರಿತರು ಬಂಗ್ಲಾದೇಶ ಸೇರಿದ್ದಾರೆ. ಭಾರತ ಈ ದುರಂತದ ಬಗ್ಗೆ ಚಕಾರ ಎತ್ತದೆ ರೋಹಿಂಗ್ಯರೆಲ್ಲ ಭಯೋತ್ಪಾದಕರೆಂದು ಜರೆದು ತನ್ನ ಅಮಾನವೀಯ ಧೋರಣೆ ಮತ್ತು ವರ್ತನೆಯನ್ನು ಪ್ರಪಂಚಕ್ಕೆ ಪರಿಚಯಿಸಿದೆ. ಮ್ಯಾನ್ಮಾರ್‌ನ ಮಿಲಿಟರಿ ಸರ್ವಾಧಿಕಾರದ ವಿರುದ್ಧ ಪ್ರಜಾಪ್ರಭುತ್ವಕ್ಕಾಗಿ ದೀರ್ಘ ಹೋರಾಟ ನಡೆಸಿದ ನೊಬೆಲ್ ಪ್ರಶಸ್ತಿ ವಿಜೇತೆ ಅಂಗ್ ಸಾನ್ ಸೂಕಿ ಈ ಮಾನವ ದುರಂತದ ಬಗ್ಗೆ ಕಾಳಜಿ ತೋರದೆ ತಮ್ಮ ನೈತಿಕತೆಯನ್ನೇ ಕಳೆದುಕೊಂಡು ಜಗತ್ತಿನಾದ್ಯಂತ ಟೀಕೆಗೊಳಗಾಗಿದ್ದಾಳೆ. ಬಂಗ್ಲಾದೇಶ ಮತ್ತು ಮ್ಯಾನ್ಮಾರ್ ಸರ್ಕಾರಗಳ ನಡುವೆ ಇತ್ತೀಚೆಗೆ ನಡೆದ ಒಪ್ಪಂದದ ಪ್ರಕಾರ ರೋಹಿಂಗ್ಯ ನಿರಾಶ್ರಿತರು ರಾಖಿನೆಗೆ ಮರಳಬೇಕು ಮತ್ತು ಬಂಗ್ಲಾದೇಶದ ಪ್ರಧಾನಿ, ರೋಹಿಂಗ್ಯ ಜನರ ರಕ್ಷಣೆ ಅಂತರರಾಷ್ಟ್ರೀಯ ಸಂಯುಕ್ತ ಸಂಸ್ಥೆಯ ಉಸ್ತುವಾರಿಯಲ್ಲಿರಬೇಕೆಂಬ ಬೇಡಿಕೆ ಮುಂದಿಟ್ಟಿದ್ದಾರೆ. ಸಹೃದಯರ ಅಂತಃಸಾಕ್ಷಿಯನ್ನು ಕಲಕಿದ ಈ ಹೃದ್ರಾವಕ ಘಟನೆ ಮರುಕಳಿಸದಿರಲು ಮಾನವ ಹಕ್ಕುಗಳ ರಕ್ಷಣಾ ಸಂಘಟನೆಗಳು ಸರ್ಕಾರಗಳ ಮೇಲೆ ಒತ್ತಡ ತರಬೇಕು.

**ನೇಪಾಳ – ಎಡ ತಿರುವು**

೨೦೧೫ರಲ್ಲಿ ಭಾರಿ ಭೂಕಂಪದಿಂದ ಸಂತ್ರಸ್ತಗೊಂಡ ನೇಪಾಳ ಅದೇ ವರ್ಷದಲ್ಲೇ ತನ್ನ ದೇಶಕ್ಕೊಂದು ಸಂವಿಧಾನ ರಚಿಸಿಕೊಂಡದ್ದು ಮಹತ್ತರ ಸಾಧನೆ. ಅದು ಹಿಂದೂ ರಾಷ್ಟ್ರವೆಂದು ಘೋಷಿಸಿಕೊಳ್ಳಬೇಕೆಂಬ ಭಾರತದ ಒತ್ತಡಕ್ಕೆ ಮಣಿಯದೆ ಧರ್ಮ ನಿರಪೇಕ್ಷತೆಯ ಆಶಯವನ್ನು ಸಂವಿಧಾನದಲ್ಲಿ ಅಳವಡಿಸಿಕೊಂಡು ತನ್ನ ರಾಜಕೀಯ ಪ್ರೌಢಿಮೆಯನ್ನು ಮೆರೆದಿದೆ. ಹೊಸ ಸಂವಿಧಾನ ಎಲ್ಲ ಜನ ವಿಭಾಗವನ್ನು ಸಂತೃಪ್ತಗೊಳಿಸಿಲ್ಲವಾದರೂ, ಮುಂದೆ ಸರಿಪಡಿಸಿಕೊಳ್ಳುವ ಸಾಧ್ಯತೆಗಳಿವೆ. ಹೊಸ ಸಂವಿಧಾನದ ಅಡಿಯಲ್ಲಿ ಮೊದಲ ಬಾರಿಗೆ ಅಲ್ಲಿನ ಪಾರ್ಲಿಮೆಂಟ್‌ಗೆ ೨೦೧೭, ನವೆಂಬರ್ ೨೬ ಮತ್ತು ಡಿಸೆಂಬರ್ ೭ರಂದು ನಡೆದ ಎರಡು ಹಂತದಲ್ಲಿ ಚುನಾವಣೆ ನಡೆದಿದೆ. ಈ ಸಲದ ಚುನಾವಣೆಯ ವಿಶೇಷವೆಂದರೆ ನೇಪಾಳದ ಎರಡು ಪ್ರಮುಖ ಕಮ್ಯುನಿಸ್ಟ್ ಪಕ್ಷಗಳಾದ ಕಮ್ಯುನಿಸ್ಟ್ ಪಾರ್ಟಿ ಆಫ್ ನೇಪಾಳ (ಯು.ಎಂ.ಎಲ್) ಮತ್ತು ಕಮ್ಯುನಿಸ್ಟ್ ಪಾರ್ಟಿ ಆಫ್ ನೇಪಾಳ (ಮಾವೊ ಕೇಂದ್ರ) ಮೈತ್ರಿಕೂಟ ರಚಿಸಿ ಚುನಾವಣಾ ಕಣಕ್ಕಿಳಿದು ಜಯಗಳಿಸಿ ಅಧಿಕಾರಕ್ಕೇರಿರುವುದು. ಈ ಎರಡೂ ಪಕ್ಷಗಳ ನಡುವೆ ಸೈದ್ಧಾಂತಿಕ ಭಿನ್ನಾಭಿಪ್ರಾಯಗಳಿದ್ದರೂ ಮೈತ್ರಿಕೂಟ ರಚಿಸಿದ್ದು ಶ್ಲಾಘನೀಯ. ಜಗತ್ತಿನಾದ್ಯಂತ ಎಡಪಕ್ಷಗಳು ಒಂದಾಗಿ ಬಲಪಂಥೀಯ ಶಕ್ತಿಗಳನ್ನು ಎದುರಿಸಬೇಕಾದ ಕಾಲಘಟ್ಟವಿದು. ಅಮೆರಿಕದ ಡೆಮೊಕ್ರಾಟಿಕ್ ಪಕ್ಷದ ಸೆನೆಟರ್ ಬರ್ನಿ ಸ್ಯಾಂಡರ್ಸ್, ಬ್ರಿಟನ್‌ನ ಲೇಬರ್ ಪಕ್ಷದ ನಾಯಕ ಜೆರೆಮಿ ಕೋರ್ಬಿನ್, ಚಿಲಿಯ ಬೆಟ್ರಿಜ್ ಸ್ಯಾಂಚೆ ಮುಂತಾದ ಸಮಾಜವಾದಿ ನಾಯಕರು ಯುವಜನತೆಯಲ್ಲಿ ಹೊಸ ಆಸೆ ಚಿಗುರಿಸಿದ್ದಾರೆ.

**ಕಪ್ಪು–ಬಿಳುಪಿನಾಟ**

೨೦೧೪ರ ಲೋಕ ಸಭಾ ಚುನಾವಣೆಯಲ್ಲಿ ನರೇಂದ್ರ ಮೋದಿ ಜನತೆಗೆ ನೀಡಿದ ಆಶ್ವಾಸನೆಗಳೆಷ್ಟೋ. ಸ್ವಾತಂತ್ರ್ಯೋತ್ಸವದ ದಿನದಂದು ಕೆಂಪುಕೋಟೆಯ ಮೇಲೆ ನಿಂತು ಸಾರಿದ ಯೋಜನೆಗಳೆಷ್ಟೋ. ಯಾವ ಆಶ್ವಾಸನೆಯೂ ಈಡೇರಿಲ್ಲ. ಯಾವ ಯೋಜನೆಯೂ ಕಾರ್ಯಗತವಾಗಿಲ್ಲ. ಮೋದಿಯ ಅಚ್ಚುಮೆಚ್ಚಿನ ಯೋಜನೆಗಳಾದ "ಮೇಕ್ ಇನ್ ಇಂಡಿಯ", "ಸ್ಟಾರ್ಟ್‌ಅಪ್ ಇಂಡಿಯ", "ಡಿಜಿಟಲ್ ಇಂಡಿಯ" ಇತ್ಯಾದಿಗಳು ನೆಲಕಚ್ಚಿವೆ. ಅಧಿಕಾರಕ್ಕೆ ಬಂದ ನೂರು ದಿನಗಳಲ್ಲಿ ಭಾರತೀಯರು ವಿದೇಶಿ ಬ್ಯಾಂಕ್‌ಗಳಲ್ಲಿ ಅವಿತಿಟ್ಟಿರುವ ಕಪ್ಪುಹಣವನ್ನು ತಂದು ಪ್ರತಿಯೊಬ್ಬ ಪ್ರಜೆಯ ಬ್ಯಾಂಕ್ ಖಾತೆಗೆ ತಲಾ ಹದಿನೈದು ಲಕ್ಷ ರೂಪಾಯಿ ಹಾಕುವುದಾಗಿ ಮೋದಿ ಮಾಡಿದ ಮೋಡಿಗೆ ಮರುಳಾದ ಜನರೆಷ್ಟೋ. ಆದರೆ ವಿದೇಶದಲ್ಲಿದ್ದದ್ದು ಬಡವರ ಹಣವಲ್ಲ. ಅದು ಶ್ರೀಮಂತರ ಹಣ. ಅವರ ಹಣವನ್ನು ಮುಟ್ಟುಗೋಲು ಹಾಕುವಷ್ಟು ಎದೆಗಾರಿಕೆ ಮೋದಿಗೆ ಇಲ್ಲವೆಂಬುದು ತಿಳಿಯಲು ಪ್ರಚಂಡ ಬುದ್ಧಿಯೇನೂ ಬೇಕಿಲ್ಲ. ಈ ಶ್ರೀಮಂತರೇ ೨೦೧೪ರಲ್ಲಿ ಭಾರತೀಯ ಜನತಾ ಪಕ್ಷದ ಚುನಾವಣಾ ವೆಚ್ಚವನ್ನು ಭರಿಸಿದವರು ಮತ್ತು ಈಗಲೂ ಭರಿಸುತ್ತಿರುವವರು. ಈಗ ವಿದೇಶಿ ಕಪ್ಪುಹಣ ಅಲ್ಲಿಂದ ಮಾಯವಾಗಿರಬಹುದು. ಇದೇ ನರೇಂದ್ರ ಮೋದಿಯವರ ಕಪ್ಪು–ಬಿಳುಪಿನಾಟ.

**ನೋಟು ರದ್ದತಿ – ನೊಂದ ಜನತೆ**

ಮೋದಿಯವರ ಕಪ್ಪು – ಬಿಳುಪಿನಾಟದ ಎರಡನೇ ಭಾಗವೇ ನವೆಂಬರ್ ೮, ೨೦೧೬ರಂದು ಘೋಷಿಸಿದ ನೋಟು ರದ್ದತಿ. ಕಪ್ಪು ಹಣ, ಖೋಟಾನೋಟು ಮತ್ತು ಭಯೋತ್ಪಾದಕತೆಯ ನಿಗ್ರಹವೇ ಇದರ



# ಪ್ರಗತಿಯ ಹಾದಿಯಲ್ಲಿ

## ಕರ್ನಾಟಕ ರಸ್ತೆ ಅಭಿವೃದ್ಧಿ ನಿಗಮ ನಿಯಮಿತದ ನಾಗಾಲೋಟ



ಶ್ರೀ ಸಿದ್ದರಾಮಯ್ಯ
ಸನ್ಮಾನ್ಯ ಮುಖ್ಯಮಂತ್ರಿಗಳು, ಕರ್ನಾಟಕ ಸರ್ಕಾರ

ನಮ್ಮ ರಸ್ತೆಗಳು ರಾಜ್ಯದ ಸರ್ವತೋಮುಖ ಪ್ರಗತಿಗೆ ಬೆನ್ನೆಲುಬು. ಅವು ಗ್ರಾಮೀಣ ಹಾಗೂ ನಗರ ಪ್ರದೇಶಗಳಿಗೆ ನಿರಂತರ ಸಂಪರ್ಕ ಕಲ್ಪಿಸುವ ಅಮೂಲ್ಯ ಪಥಗಳು. ಕೃಷಿ, ಶಿಕ್ಷಣ, ವ್ಯಾಪಾರ, ವಾಣಿಜ್ಯ, ಪ್ರವಾಸೋದ್ಯಮ ಮುಂತಾದ ಕ್ಷೇತ್ರಗಳಲ್ಲಿ ಸುಗಮ ಕಾರ್ಯಾಚರಣೆಗೆ ಅತ್ಯಂತ ಸಹಕಾರಿಯಾಗಿರುವ ಮೂಲ ಪರಿಕರಗಳು ಹಾಗೂ ಸಮೃದ್ಧಿಯ ಸೋಪಾನಗಳು. ಈ ಎಲ್ಲಾ ಕ್ಷೇತ್ರಗಳ ಸುಸೂತ್ರ ಕಾರ್ಯಾಚರಣೆಗೆ ಅತ್ಯಂತ ಸಹಕಾರಿಯಾಗಿರುವ **ಕರ್ನಾಟಕ ರಸ್ತೆ ಅಭಿವೃದ್ಧಿ ನಿಗಮ ನಿಯಮಿತವು (ಕೆಆರ್‌ಡಿಸಿಎಲ್)** ಕರ್ನಾಟಕ ಸರ್ಕಾರದ ಹೆಮ್ಮೆಯ ಸಾರ್ವಜನಿಕ ಉದ್ದಿಮೆಯಾಗಿ ರೂಪುಗೊಂಡಿರುವುದು ಅತ್ಯಂತ ಆದರಣೀಯ ಸಂಗತಿ.



ಸನ್ಮಾನ್ಯ ಮುಖ್ಯಮಂತ್ರಿಗಳಾದ ಶ್ರೀ ಸಿದ್ದರಾಮಯ್ಯ ರವರೊಂದಿಗೆ ಮಾನ್ಯ ಲೋಕೋಪಯೋಗಿ ಸಚಿವರಾದ **ಡಾ. ಹೆಚ್.ಸಿ. ಮಹದೇವಪ್ಪ, ಶ್ರೀ ಸಿ. ಪುಟ್ಟರಂಗಶೆಟ್ಟಿ,** ಮಾನ್ಯ ಅಧ್ಯಕ್ಷರು, ಕ.ರ.ಅ.ನಿ.ನಿ., **ಶ್ರೀ ಮಹಾವೀರ್ ಲಕ್ಷ್ಮಣ ಮೋಹಿತೆ,** ಮಾನ್ಯ ಉಪಾಧ್ಯಕ್ಷರು, ಕ.ರ.ಅ.ನಿ.ನಿ., ಹಾಗೂ **ಶ್ರೀ ಕೆ.ಎಸ್. ಕೃಷ್ಣಾರೆಡ್ಡಿ,** ಮಾನ್ಯ ವ್ಯ.ನಿ., ಕ.ರ.ಅ.ನಿ.ನಿ. ಇವರುಗಳು ಬೆಳಗಾವಿ ಜಿಲ್ಲೆ, ಜಾತ್-ಜಾಂಬೋಟಿ ರಸ್ತೆ ಕಾಮಗಾರಿ ಶಂಕುಸ್ಥಾಪನಾ ಕಾರ್ಯಕ್ರಮದಲ್ಲಿರುವ ಸಂದರ್ಭ.



ಮೈಸೂರು – ಬಂಟ್ವಾಳ ರಸ್ತೆ ಸಂಪಾಜೆಯಿಂದ ಮಾಣಿವರೆಗೆ

ಜಾತ್ – ಜಾಂಬೋಟಿ ರಾಜ್ಯ ಹೆದ್ದಾರಿ-3



ಗಿಣಿಗೇರ – ಗಂಗಾವತಿ – ಸಿಂಧನೂರು ರಸ್ತೆ (ರಾಹೆ-23)

ಮೈಸೂರು – ಬಂಟ್ವಾಳ ರಸ್ತೆ ಸಂಪಾಜೆಯಿಂದ ಮಾಣಿವರೆಗೆ ರಾತ್ರಿ ದೃಶ್ಯ

## ಜನಸೇವೆಯ ಹೆದ್ದಾರಿಯಲ್ಲಿ ಸದಾ ನಿರತ

ಜಮಖಂಡಿ – ಸಾವಳಗಿ ರಸ್ತೆಯ ಕಿ.ಮೀ. 7.40ರಲ್ಲಿ ಜಂಬಗಿ ಬಳಿ ಕೃಷ್ಣಾ ನದಿಗೆ ಅಡ್ಡಲಾಗಿ ಸೇತುವೆ



## ಕರ್ನಾಟಕ ರಸ್ತೆ ಅಭಿವೃದ್ಧಿ ನಿಗಮ ನಿಯಮಿತವು ಕೈಗೊಂಡಿರುವ ಯೋಜನೆಗಳ ಪಕ್ಷಿನೋಟ

**2013-14, 2014-15, 2015-16ನೇ ಸಾಲಿನಿಂದ 2016-17ನೇ ಸಾಲಿನವರೆಗೆ ನಿಗಮದ ವತಿಯಿಂದ ಅನುಷ್ಠಾನಗೊಳಿಸಲಾಗಿರುವ ಯೋಜನೆಗಳು.**

ರಸ್ತೆಗಳು:

- ರೂ. 714.77 ಕೋಟಿ ಮೊತ್ತದಲ್ಲಿ ಇಪಿಸಿ ಆಧಾರದಲ್ಲಿ 249.88 ಕಿ.ಮೀ. ಉದ್ದದ 7 ರಸ್ತೆಗಳ ನಿರ್ಮಾಣ ಯೋಜನೆ.
- ರೂ. 961.80 ಕೋಟಿ ಅಂದಾಜು ಮೊತ್ತದಲ್ಲಿ ಪಿಪಿಪಿ – ವಿ.ಜಿ.ಎಫ್ (ಟೋಲ್) ಆಧಾರದಲ್ಲಿ 347.55 ಕಿ.ಮೀ. ಉದ್ದದ 4 ಯೋಜನೆಗಳು.
- ರೂ. 1096 ಕೋಟಿ ಯೋಜನಾ ಮೊತ್ತದಲ್ಲಿ ವಿಶ್ವ ಬ್ಯಾಂಕ್ ಆರ್ಥಿಕ ನೆರವಿನ ಕೋ ಫೈನಾನ್ಸ್ ಹೈ-ಬ್ರಿಡ್ (ಪಿಪಿಪಿ) ಆಧಾರದ ಮೇಲೆ 361 ಕಿ.ಮೀ. ಉದ್ದದ 6 ರಾಜ್ಯ ಹೆದ್ದಾರಿಗಳ ಅಭಿವೃದ್ಧಿ ಯೋಜನೆ.

ಸೇತುವೆಗಳು:

- ರಾಜ್ಯದ ವಿವಿಧ ಸ್ಥಳಗಳಲ್ಲಿ ರೂ. 684.17 ಕೋಟಿ ಮೊತ್ತದಲ್ಲಿ 20 ಬೃಹತ್ ಸೇತುವೆಗಳ ನಿರ್ಮಾಣ ಯೋಜನೆ.
- ರಾಜ್ಯದ ವಿವಿಧ ಭಾಗಗಳಲ್ಲಿ ರೂ. 1395.58 ಕೋಟಿ ಅಂದಾಜು ಮೊತ್ತದಲ್ಲಿ ಒಟ್ಟು 195 ಸೇತುವೆಗಳ ನಿರ್ಮಾಣ ಯೋಜನೆಗೆ ಅನುಮೋದನೆ.
- ಬೆಂಗಳೂರು ನಗರದಲ್ಲಿ 108 ಕಿ.ಮೀ. ಉದ್ದದ 6 ಎಲಿವೇಟೆಡ್ ಕಾರಿಡಾರ್‌ಗಳ ನಿರ್ಮಾಣಕ್ಕೆ ಕಾರ್ಯಸಾಧ್ಯತಾ ವರದಿಯ ತಯಾರಿಕೆ ಪ್ರಗತಿಯಲ್ಲಿದೆ.

**2008-09ನೇ ಸಾಲಿನಿಂದ 2012-13ನೇ ಸಾಲಿನವರೆಗೆ ನಿಗಮದ ವತಿಯಿಂದ ಅನುಷ್ಠಾನಗೊಳಿಸಲಾಗಿರುವ ಯೋಜನೆಗಳು.**

ರಸ್ತೆಗಳು:

- ರೂ. 585.46 ಕೋಟಿಗಳ ಮೊತ್ತದಲ್ಲಿ ಇಪಿಸಿ ಆಧಾರದಲ್ಲಿ ಕೈಗೊಂಡ 206.55 ಕಿ.ಮೀ. ಉದ್ದದ ಒಟ್ಟು 11 ರಸ್ತೆಗಳ ನಿರ್ಮಾಣ.
- ರೂ. 271.58 ಕೋಟಿಗಳ ಮೊತ್ತದಲ್ಲಿ ಪಿಪಿಪಿ – ವರ್ಷಾಸನ ಆಧಾರದಲ್ಲಿ ಕೈಗೊಂಡ 68.63 ಕಿ.ಮೀ. ಉದ್ದದ ಎರಡು ಯೋಜನೆಗಳು.
- ರೂ. 237.60 ಕೋಟಿಗಳ ಅಂದಾಜು ಮೊತ್ತದಲ್ಲಿ ಪಿಪಿಪಿ – ವಿ.ಜಿ.ಎಫ್ (ಟೋಲ್) ಆಧಾರದಲ್ಲಿ ಕೈಗೊಂಡ 60.40 ಕಿ.ಮೀ. ಉದ್ದದ ಒಂದು ಯೋಜನೆ.

ಸೇತುವೆಗಳು:

- ರಾಜ್ಯದ ವಿವಿಧೆಡೆ ರೂ. 245.33 ಕೋಟಿ ಮೊತ್ತದಲ್ಲಿ ಕೈಗೊಂಡ 13 ಬೃಹತ್ ಸೇತುವೆ ನಿರ್ಮಾಣ ಯೋಜನೆಗಳು.

- ರಾಜ್ಯದ ವಿವಿಧ ಭಾಗಗಳಲ್ಲಿ ಒಟ್ಟು 1099 ಕಿ.ಮೀ. ಉದ್ದದ 40 ರಸ್ತೆ ಯೋಜನೆಗಳನ್ನು ರೂ. 1890 ಕೋಟಿಗಳ ಮೊತ್ತದಲ್ಲಿ ಇ.ಪಿ.ಸಿ ಆಧಾರದಲ್ಲಿ ಅಭಿವೃದ್ಧಿಪಡಿಸಲಾಗಿದೆ.
- 131 ಕಿ.ಮೀ ಉದ್ದದ ಮೂರು ರಸ್ತೆ ಅಭಿವೃದ್ಧಿ ಯೋಜನೆಗಳನ್ನು ರೂ. 1069 ಕೋಟಿಗಳ ಮೊತ್ತದಲ್ಲಿ ಪಿ.ಪಿ.ಪಿ – ವರ್ಷಾಸನ ಆಧಾರದಲ್ಲಿ ಕೈಗೊಳ್ಳಲಾಗಿದೆ.
- 285 ಕಿ.ಮೀ ಉದ್ದದ ಮೂರು ರಸ್ತೆ ಯೋಜನೆಗಳನ್ನು ಒಟ್ಟಾರೆ ಯೋಜನಾ ಮೊತ್ತ ರೂ. 671 ಕೋಟಿಗಳಲ್ಲಿ ಪಿ.ಪಿ.ಪಿ-ವಿ.ಜಿ.ಎಫ್ (ಟೋಲ್) ಆಧಾರದಲ್ಲಿ ಅಭಿವೃದ್ಧಿಪಡಿಸಲಾಗಿದೆ.
- 2001-04 ರ ಮೊದಲನೇ ಹಂತದಲ್ಲಿ 7327 ಕಿಮೀ ಉದ್ದದ ರಾಜ್ಯ ಹೆದ್ದಾರಿ ನಿರ್ವಹಣೆಯನ್ನು ರೂ. 225 ಕೋಟಿಗಳ ಮೊತ್ತದಲ್ಲಿ ಮತ್ತು 2005-08 ರ ಎರಡನೇ ಹಂತದಲ್ಲಿ 14500 ಕಿ.ಮೀ ಉದ್ದದ ರಾಜ್ಯ ಹೆದ್ದಾರಿ ನಿರ್ವಹಣೆಯನ್ನು ರೂ. 503 ಕೋಟಿಗಳ ಮೊತ್ತದಲ್ಲಿ ಪೂರ್ಣಗೊಳಿಸಲಾಗಿದೆ.
- ಒಟ್ಟು 641 ಸೇತುವೆಗಳನ್ನು ಹಂತವಾರು ನಿರ್ಮಾಣ ಯೋಜನೆ ಅಡಿಯಲ್ಲಿ ರೂ. 670 ಕೋಟಿಗಳ ಮೊತ್ತದಲ್ಲಿ ಪೂರ್ಣಗೊಳಿಸಲಾಗಿದೆ. ಇದಲ್ಲದೆ 16 ಬೃಹತ್ ಸೇತುವೆಗಳನ್ನು ರೂ. 245 ಕೋಟಿಗಳ ಮೊತ್ತದಲ್ಲಿ ಪೂರ್ಣಗೊಳಿಸಲಾಗಿದೆ.
- ಒಟ್ಟು 324 ಕಿ.ಮೀ. ಉದ್ದದ 10 ರಸ್ತೆ ಯೋಜನೆಗಳನ್ನು ರೂ. 1010 ಕೋಟಿಗಳ ಮೊತ್ತದಲ್ಲಿ ಇ.ಪಿ.ಸಿ ಆಧಾರದಲ್ಲಿ ಕೈಗೊಳ್ಳಲಾಗುತ್ತಿದೆ. ಒಟ್ಟು 16 ಬೃಹತ್ ಸೇತುವೆಗಳನ್ನು ರೂ. 397 ಕೋಟಿಗಳ ಮೊತ್ತದಲ್ಲಿ ಕೈಗೊಳ್ಳಲಾಗುತ್ತಿದೆ.



## ಕರ್ನಾಟಕ ರಸ್ತೆ ಅಭಿವೃದ್ಧಿ ನಿಗಮ ನಿಯಮಿತ

(ಕರ್ನಾಟಕ ಸರ್ಕಾರದ ಒಂದು ಉದ್ಯಮ)

ನಂ. 16/ಜೆ, ತಿಮ್ಮಯ್ಯ ರಸ್ತೆ ಕ್ರಾಸ್, ಮಿಲ್ಲರ್ ಟ್ಯಾಂಕ್ ಬೆಡ್, ವಸಂತನಗರ, ಬೆಂಗಳೂರು-560 052, ದೂ: 080-2238 0140/42 ವೆಬ್‌ಸೈಟ್: www.krdcl.in



ಕರ್ನಾಟಕ ರಸ್ತೆ ಅಭಿವೃದ್ಧಿ ನಿಗಮ ನಿಯಮಿತದ ಸಾಧನೆಗೆ ಸರ್ಕಾರವು 2010ನೇ ಸಾಲಿನ ಕರ್ನಾಟಕ ರತ್ನ ಪ್ರಶಸ್ತಿ ನೀಡಿ ಗೌರವಿಸಿದೆ.

ಸಿ. ಪುಟ್ಟರಂಗಶೆಟ್ಟಿ
ಮಾನ್ಯ ಅಧ್ಯಕ್ಷರು, ಕ.ರ.ಅ.ನಿ.ನಿ

ಮಹಾವೀರ್ ಲಕ್ಷ್ಮಣ ಮೋಹಿತೆ
ಮಾನ್ಯ ಉಪಾಧ್ಯಕ್ಷರು, ಕ.ರ.ಅ.ನಿ.ನಿ

ಎಂ. ಲಕ್ಷ್ಮೀನಾರಾಯಣ, ಭಾ.ಆ.ಸೇ.
ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು
ಲೋಕೋಪಯೋಗಿ, ಬಂದರು ಹಾಗೂ ಒಳನಾಡು ಜಲಸಾರಿಗೆ ಇಲಾಖೆ

ಎಸ್.ಬಿ. ಸಿದ್ದಗಂಗಪ್ಪ
ಸರ್ಕಾರದ ಕಾರ್ಯದರ್ಶಿಗಳು
ಲೋಕೋಪಯೋಗಿ, ಬಂದರು ಹಾಗೂ ಒಳನಾಡು ಜಲಸಾರಿಗೆ ಇಲಾಖೆ

ಕೆ.ಎಸ್. ಕೃಷ್ಣಾರೆಡ್ಡಿ
ವ್ಯವಸ್ಥಾಪಕ ನಿರ್ದೇಶಕರು
ಕ.ರ.ಅ.ನಿ.ನಿ.

ಕೆಆರ್‌ಡಿಸಿಎಲ್‌ನ
ಎಲ್ಲಾ ನಿರ್ದೇಶಕರುಗಳು

**ಉತ್ತಮ ರಸ್ತೆಗಳು ಮತ್ತು ಸೇತುವೆಗಳು ಅಭಿವೃದ್ಧಿಗೆ ಮುನ್ನುಡಿ**





ಉದ್ದೇಶವೆಂದು ಸಾರಿ ಮತ್ತೆ ಜನರಿಗೆ ಟೋಪಿ ಹಾಕಿದ್ದು. ಈ ಯಾವ ಉದ್ದೇಶಗಳೂ ಸಾಧಿಸಲಾಗಿಲ್ಲ ಎಂಬುದು ಬೆಳಕಿಗೆ ಬಂದಿರುವ ವಿಷಯ. ದೇಶದ ಶ್ರೀಮಂತರನ್ನು ಹೊರತುಪಡಿಸಿ ಇಡೀ ಜನಸ್ತೋಮದ ಜೀವನವನ್ನೇ ಅಸ್ತವ್ಯಸ್ತಗೊಳಿಸಿ ನೂರಕ್ಕೂ ಹೆಚ್ಚು ಜನರನ್ನು ಬಲಿ ತೆಗೆದುಕೊಂಡ ಆರ್ಥಿಕ ಕ್ರಮ ಯಾವುದೇ ಭಯೋತ್ಪಾದಕ ಕೃತ್ಯಕ್ಕೂ ಕಡಿಮೆಯಿರಲಿಲ್ಲ. ನೋಟು ರದ್ದತಿಯ ಪರಿಣಾಮಗಳು ಇನ್ನೂ ಆರಿಲ್ಲ. ಲಕ್ಷಾಂತರ ರೈತರನ್ನು ನಿರ್ಗತಿಕರನ್ನಾಗಿಸಿ, ಲಕ್ಷಾಂತರ ಕಾರ್ಮಿಕರನ್ನು ಉದ್ಯೋಗಹೀನರನ್ನಾಗಿಸಿ, ಲಕ್ಷಾಂತರ ಸಣ್ಣ ಉದ್ದಿಮೆದಾರರನ್ನು ಮತ್ತು ವರ್ತಕರನ್ನು ದಿವಾಳಿಯ ಅಂಚಿಗೆ ಕರೆದೊಯ್ದು ನಿಲ್ಲಿಸಿರುವುದೇ ನೋಟು ರದ್ದತಿಯ ಏಕೈಕ ಸಾಧನೆ!

**ಬಾಣಲೆಯಿಂದ ಬೆಂಕಿಗೆ**

ನೋಟು ಅಮಾನ್ಯಗೊಳಿಸಿದ ಹಿನ್ನೆಲೆಯಲ್ಲೇ ಯಾವುದೇ ಸಿದ್ಧತೆಯಿಲ್ಲದೆ ಜಾರಿಗೊಳಿಸಿದ ಸರಕು ಮತ್ತು ಸೇವಾ ತೆರಿಗೆ (ಜಿ.ಎಸ್.ಟಿ.) ವಾಣಿಜ್ಯ ಮತ್ತು ವ್ಯಾಪಾರ ವಲಯಗಳಲ್ಲಿ ತೀವ್ರ ಗೊಂದಲ ಸೃಷ್ಟಿಸಿದೆ. ಜನತೆಯನ್ನು ಒಂದು ಸಂಕಷ್ಟದಿಂದ ಇನ್ನೊಂದು ಸಂಕಷ್ಟಕ್ಕೆ ಸಾಗಿಸುವುದೇ ಮೋದಿ ಸರ್ಕಾರದ ಕಾಯಕವಾಗಿಬಿಟ್ಟಿದೆ. ನಿಧಾನವಾಗಿಯಾದರೂ ಜನ ಈಗ ಮೋದಿಯ ಕ್ರಮಗಳನ್ನು ಪ್ರಶ್ನಿಸಲು ಪ್ರಾರಂಭಿಸಿದ್ದಾರೆ. ಮೋದಿಯವರ ಗುಣವೆಂದರೆ ಅವರು ತಮ್ಮ ವೈಫಲ್ಯಗಳನ್ನು ಒಪ್ಪಿಕೊಳ್ಳದಿರುವುದು ಮತ್ತು ಪ್ರಶ್ನಿಸಿದವರನ್ನು ಖಂಡಿಸುವುದು. ಯಾರೂ ಅವರನ್ನು ಪ್ರಶ್ನಿಸುವಂತಿಲ್ಲ. ಈ ಕಾರಣಕ್ಕಾಗಿಯೇ ಅವರು ಲೋಕಸಭೆಗೆ ಹೋಗುವುದನ್ನು ಆದಷ್ಟೂ ಕಡಿಮೆ ಮಾಡಿಕೊಂಡಿದ್ದಾರೆ. ಆದರೆ ತಮ್ಮ ಮನಸ್ಸಿನ ಮಾತನ್ನು ಎಲ್ಲರೂ ಕೇಳಬೇಕೆಂದು ಅದಕ್ಕೆ ತಕ್ಕ ವ್ಯವಸ್ಥೆ ಮಾಡಿಕೊಂಡಿದ್ದಾರೆ. ಇಂತಹ ಅನೇಕ ವ್ಯಕ್ತಿಗಳು ಚರಿತ್ರೆಯಲ್ಲಿ ಹಾದುಹೋಗಿದ್ದಾರೆ.

**ಸಂವಿಧಾನದ ಆಶಯಗಳ ನಾಶ**

ಭಾರತದ ಆರ್ಥಿಕ ಪರಿಸ್ಥಿತಿ ಹದಗೆಟ್ಟಿದೆ. ನಿರುದ್ಯೋಗದ ಪ್ರಮಾಣ ಏರುತ್ತಿದೆ. ಮಾಹಿತಿ ತಂತ್ರಜ್ಞಾನದ ಉದ್ದಿಮೆಗಳು ಕುಸಿತ ಕಂಡಿವೆ. ಕೃಷಿಕ್ಷೇತ್ರ ಭೀಕರ ಸಮಸ್ಯೆಗಳನ್ನೆದುರಿಸುತ್ತಿದೆ. ರೈತ ಕಾರ್ಮಿಕರ ಹೋರಾಟ ತೀವ್ರವಾಗಿ ಬೆಳೆಯುತ್ತಿದೆ. ಮೋದಿ ಸರ್ಕಾರ ಈ ಬೆಳವಣಿಗೆಗಳಿಂದ ಕಂಗೆಟ್ಟಿದೆ. ಮೋದಿ ಈಗ "ಅಭಿವೃದ್ಧಿ"ಯ ಮಾತು ನಿಲ್ಲಿಸಿದ್ದಾರೆ. "ಹಿಂದುತ್ವ"ವೊಂದೇ ಆಸರೆ ಎಂಬ ತೀರ್ಮಾನಕ್ಕೆ ಬಂದ ಹಾಗಿದೆ. ಹಾಗಾಗಿ ಸಂಘಪರಿವಾರದ ಕೈಮೇಲಾಗಿದೆ. ಸಂಘಪರಿವಾರ "ಹಿಂದುತ್ವ"ದ ಹೆಸರಿನಲ್ಲಿ ದೇಶವನ್ನು ಒಡೆಯುತ್ತಾ ಬಂದಿರುವುದೇ ಅದರ ಚರಿತ್ರೆ. ಮತೀಯ ಭಾವನೆಗಳನ್ನು ಕೆರಳಿಸಿ ಕೋಮು ದಳ್ಳುರಿಯನ್ನು ದೇಶದಾದ್ಯಂತ ಹಬ್ಬಿಸಿ ದೇಶದ ಅಖಂಡತೆ ಮತ್ತು ಐಕ್ಯತೆಗೆ ಧಕ್ಕೆ ತಂದಿರುವುದೇ ಸಂಘಪರಿವಾರದ ಈವರೆಗಿನ ಸಾಧನೆ. ನರೇಂದ್ರ ಮೋದಿ ರಾಷ್ಟ್ರೀಯ ಸ್ವಯಂ ಸೇವಕ ಸಂಘದ ಪ್ರಚಾರಕರಾಗಿದ್ದರೆಂಬುದು ತಿಳಿದ ವಿಷಯ. ಪ್ರಧಾನ ಮಂತ್ರಿಯಾದ ನಂತರ ಪ್ರಧಾನ ಪ್ರಚಾರಕರಾಗಿ ಬಡ್ತಿ ಹೊಂದಿದವರು. ಈಗ ಸಂಘಪರಿವಾರಕ್ಕೆ ಯಾವ ಅಂಜಿಕೆಯೂ ಇಲ್ಲ. ಮೋದಿಯವರ ಆಳ್ವಿಕೆಯಲ್ಲಿ ಕಾನೂನು ಸಂಘಪರಿವಾರದವರ ಮಟ್ಟಿಗೆ ನಿಷ್ಕ್ರಿಯ. ದೇಶಪ್ರೇಮ ಮತ್ತು ಹಿಂದುತ್ವದ ಹೆಸರಿನಲ್ಲಿ ದೇಶವನ್ನು ಛಿದ್ರಗೊಳಿಸುವ, ಸಂಸ್ಕೃತಿಯ ಹೆಸರಿನಲ್ಲಿ ಸಂಸ್ಕೃತಿಯನ್ನು ವಿನಾಶಗೊಳಿಸುವ, ರಾಷ್ಟ್ರೀಯತೆಯ ಹೆಸರಿನಲ್ಲಿ ಸಂವಿಧಾನದ ಆಶಯಗಳನ್ನು ಉಲ್ಲಂಘಿಸುವ ಕೃತ್ಯಗಳು ನಿರಾತಂಕವಾಗಿ ಮತ್ತು ನಿರ್ವಿಘ್ನವಾಗಿ ನಡೆಯುತ್ತಿವೆ. ಸಂಘಪರಿವಾರದವರು ದೇಶವನ್ನೇ ಕೊಂಡುಕೊಂಡಂತೆ ವರ್ತಿಸುತ್ತಿದ್ದಾರೆ. ವಿಚಾರವಾದಿಗಳಾದ ನರೇಂದ್ರ ದಾಭೋಲ್ಕರ್, ಗೋವಿಂದ ಪನ್ಸಾರೆ ಮತ್ತು ಎಂ. ಎಂ. ಕಲಬುರ್ಗಿಯವರ ಕೊಲೆಯಾಗಿದೆ. ಖ್ಯಾತ ಪತ್ರಕರ್ತೆ ಮತ್ತು ಮಾನವತಾವಾದಿ ಗೌರಿಯ ಹತ್ಯೆ ನಡೆದಿದೆ. ಗುಜರಾತ್‌ನ ಊನದಲ್ಲಿ ದಲಿತರ ಮೇಲೆ ಸಂಘ ಪರಿವಾರದವರು ನಡೆಸಿದ ಅಮಾನುಷ ಕೃತ್ಯ, ಮುಸ್ಲಿಂರ ಮೇಲೆ ದಿನನಿತ್ಯದ ಹಲ್ಲೆಗಳು ದೇಶದ ಬಹುಮುಖಿ ಸಂಸ್ಕೃತಿಯ ಬೇರನ್ನೇ ಕಿತ್ತೆಸೆಯುವ ಕೃತ್ಯಗಳಾಗಿವೆ. ಸಂಜಯ್ ಲೀಲಾ ಬನ್ಸಾಲಿ, ಕಮಲ್‌ಹಾಸನ್ ಇವರ ಶಿರಚ್ಛೇದನ ಮಾಡುವವರಿಗೆ, "ಪದ್ಮಾವತಿ" ಪಾತ್ರದ ದೀಪಿಕಾ ಪಡುಕೋಣೆಯ ಮೂಗು ಕತ್ತರಿಸುವವರಿಗೆ ಬಹುಮಾನ ನೀಡುವವರ ಪ್ರಚಾರ ಹೆಚ್ಚಿದೆ. ಆದರೆ ಭಾರತದ ಪ್ರಧಾನಿ ಮೌನಿ. ಇದು ಅವರ ಸಮ್ಮತಿಯೋ ಏನೋ! ೧೯೭೧–೧೯೭೨ರ ಅವಧಿಯಲ್ಲಿ ಭಗವತ್ ಶರಣ ಉಪಾಧ್ಯಾಯ ಅವರು "ನ್ಯೂ ಏಜ್" ಪತ್ರಿಕೆಗೆ ಬರೆದ "ಸಮಗ್ರ ಇತಿಹಾಸ, ಸಮಗ್ರ ಸಂಸ್ಕೃತಿ" ಎಂಬ ಲೇಖನದಲ್ಲಿನ ಈ ಸಾಲುಗಳು ಅವರ ಮುನ್ನೋಟ ಮತ್ತು ವಿಶ್ಲೇಷಣಾ ಸಾಮರ್ಥ್ಯಕ್ಕೆ ಸಾಕ್ಷಿ.

*"ರಾಷ್ಟ್ರೀಯತೆಯು ತನ್ನ ವಿಕೃತ ರೂಪದಲ್ಲಿ ಯುದ್ಧಗಳಿಗೆ ಆಸ್ಪದ ಮಾಡಿಕೊಟ್ಟಿದೆ. ಆರ್ಥಿಕ ಪ್ರತೀಕಾರ ಮತ್ತು ದ್ವೇಷಗಳು ಜನಾಂಗೀಯ ಸ್ವರೂಪ ಪಡೆಯುತ್ತವೆ. ಉತ್ಪ್ರೇಕ್ಷಿತ ರಾಷ್ಟ್ರೀಯತೆಯೇ ಆಕ್ರಮಣಶೀಲ ಅಂಧಾಭಿಮಾನವಾಗುತ್ತದೆ. ಅಂತಹ ರಾಷ್ಟ್ರಾಭಿಮಾನವು ತನ್ನ ಮೊಂಡುವಾದ ಮತ್ತು ಮಾನಸಿಕ ಜಡತ್ವದಿಂದಾಗಿ ಪ್ರಭಾವಯುತವಾಗಿದ್ದು ಸಮಗ್ರ ಅಧಿಕಾರವನ್ನು ಸೃಷ್ಟಿಸುತ್ತದೆ. ಇಂತಹ ಸಮಗ್ರ ಅಧಿಕಾರವು ಶಿರಚ್ಛೇದನಗಳಿಗೆ ಹಿಂಸಾಚಾರಗಳಿಗೆ ಮತ್ತು ಸಾರ್ವಜನಿಕ ಸುಳ್ಳುಗಳಿಗೆ ದಾರಿ ಮಾಡುತ್ತದೆ."*

(ಭಾರತೀಯ ಬಹುಮುಖಿ ಸಂಸ್ಕೃತಿ – ಅನುವಾದ : ಡಾ॥ ಎಚ್. ಎಸ್. ಗೋಪಾಲರಾವ್, ನವಕರ್ನಾಟಕ ಪ್ರಕಾಶನ)

**ರಾಜತಾಂತ್ರಿಕ ವೈಫಲ್ಯ**

ವಿದೇಶಾಂಗ ವ್ಯವಹಾರಗಳಲ್ಲೂ ಮೋದಿ ಸರ್ಕಾರ ತನ್ನ ಅಸಮರ್ಥತೆಯನ್ನು ಪ್ರದರ್ಶಿಸಿದೆ. ನೆರೆಯ ರಾಷ್ಟ್ರಗಳಾದ ಚೀನ, ಪಾಕಿಸ್ತಾನ, ನೇಪಾಳ, ಬಂಗ್ಲಾದೇಶಗಳೊಡನೆ ಸಂಬಂಧಗಳು ಹಳಸಿಕೊಂಡಿವೆ. ಇತ್ತೀಚೆಗೆ ಟ್ರಂಪ್ ಸರ್ಕಾರ ನ್ಯಾಷನಲ್ ಡಿಫೆನ್ಸ್ ಆಥರೈಸೇಶನ್ ಕಾಯ್ದೆಯಡಿಯಲ್ಲಿನ ಭಯೋತ್ಪಾದಕರ ಪಟ್ಟಿಯಲ್ಲಿ ಲಷ್ಕರ್–ಎ–ತೊಯ್ಯಬಾದ ಮೊಹಮದ್ ಹಫೀಜ್‌ನ ಹೆಸರನ್ನು ಕೈಬಿಟ್ಟಿದ್ದು ಭಾರತದ ವಿದೇಶಾಂಗ ನೀತಿಯ ಭಾರಿ ಸೋಲು ಎಂದು ರಾಜತಾಂತ್ರಿಕ ವಲಯದಲ್ಲಿ ಪರಿಗಣಿಸಲಾಗಿದೆ.

ಉಡುಪಿಯ ಪೇಜಾವರ ಮಠದ ಸ್ವಾಮಿ ವಿಶ್ವೇಶ್ವರ ತೀರ್ಥರು ೨೦೦೩ರಲ್ಲಿ ಪ್ರಧಾನಮಂತ್ರಿ ಅಟಲ್ ಬಿಹಾರಿ ವಾಜಪೇಯಿ ಅವರಿಗೆ ಅಯೋಧ್ಯೆಯಲ್ಲಿ ರಾಮಮಂದಿರದ ನಿರ್ಮಾಣಕ್ಕೆ ಕ್ರಮ ತೆಗೆದುಕೊಳ್ಳಲು ಸಲಹೆ ಕೊಟ್ಟರೂ ಅವರು ಅದಕ್ಕೆ ಗಮನಹರಿಸಲಿಲ್ಲ ಎಂದು ಇತ್ತೀಚಿನ ಸಂದರ್ಶನವೊಂದರಲ್ಲಿ ಹೇಳಿದ್ದನ್ನು ಸ್ಮರಿಸಬಹುದು. ಈಗ ಅಧಿಕಾರದ ನಾಲ್ಕನೇ ವರ್ಷದಲ್ಲಿರುವ ಮೋದಿಗೂ ಸ್ವಾಮಿಗಳು ಇದೇ ಸಲಹೆ ಕೊಟ್ಟು ಅದನ್ನು ಕಾರ್ಯಗತಗೊಳಿಸಲು ನವೆಂಬರ್ ೨೬ ಮತ್ತು ೨೭ರಂದು ಉಡುಪಿಯಲ್ಲಿ ನಡೆದ ಧರ್ಮ ಸಂಸತ್‌ನಲ್ಲಿ ಈ ಬಗ್ಗೆ ಅವರ ಅಧ್ಯಕ್ಷತೆಯಲ್ಲಿ ನಿರ್ಣಯವನ್ನೂ ಕೈಗೊಳ್ಳಲಾಗಿದೆ. ಏಕಾಏಕೀ ಸರ್ವೋಚ್ಚ ನ್ಯಾಯಾಲಯವೂ ಬಾಬ್ರಿ ಮಸೀದಿಯ ಪ್ರಕರಣವನ್ನು ತೀರ್ಮಾನಿಸುವ ತರಾತುರಿಯಲ್ಲಿದ್ದಂತಿದೆ. ಈ ಬೆಳವಣಿಗೆಗಳೆಲ್ಲ ಸಂಘ ಪರಿವಾರದ ಸರ್ವಾಂಗೀಣ ಯೋಜನೆ. ಅಂದರೆ ೨೦೧೯ರ ಲೋಕಸಭಾ ಚುನಾವಣೆಯ ವಿಷಯಸೂಚಿ ಮತ್ತು ನೀಲಿನಕ್ಷೆಯನ್ನು ಸಿದ್ಧಪಡಿಸಿದ್ದಾರೆ.

**ನ್ಯಾಯಾಂಗ – ಏರಿಳಿತ**

೨೦೧೭ರಲ್ಲಿ ಭಾರತ ಸರ್ವೋಚ್ಚ ನ್ಯಾಯಾಲಯ ಮಹತ್ತರ ತೀರ್ಪುಗಳನ್ನಿತ್ತಿದೆ. ಒಂಭತ್ತು ನ್ಯಾಯಾಧೀಶರನ್ನೊಳಗೊಂಡ ನ್ಯಾಯಪೀಠವು ಒಮ್ಮತದಿಂದ ಖಾಸಗೀತನದ ಹಕ್ಕು ಮೂಲಭೂತ ಹಕ್ಕೆಂದು ನೀಡಿದ ತೀರ್ಪು ನ್ಯಾಯಾಂಗದ ಚರಿತ್ರೆಯಲ್ಲಿನ ಮಹತ್ವದ ತೀರ್ಪುಗಳಲ್ಲೊಂದು ಎಂದು ಪರಿಗಣಿಸಬಹುದು. ಈ ಹಿಂದೆ ಸರ್ವೋಚ್ಚ ನ್ಯಾಯಾಲಯ ರಾಷ್ಟ್ರೀಯ ನ್ಯಾಯಾಂಗ ನೇಮಕಾತಿ ಆಯೋಗ ಕಾಯ್ದೆಯನ್ನು ಅಸಾಂವಿಧಾನಿಕ ಎಂದು ಘೋಷಿಸಿದ್ದು ಮೋದಿ ಸರ್ಕಾರಕ್ಕೊಂದು ಕೊಡಲಿ ಪೆಟ್ಟಾಗಿತ್ತು. ನ್ಯಾಯಾಂಗವನ್ನೂ ತನ್ನ ಕಪಿಮುಷ್ಠಿಗೆ ತರಬೇಕೆಂಬ ಲೆಕ್ಕಾಚಾರ ತಲೆಕೆಳಗಾಗಿತ್ತು. ಕೇಂದ್ರ ಸರ್ಕಾರ ತನ್ನ ಸಿಟ್ಟು ಮತ್ತು ಅಸಮಾಧಾನವನ್ನು ಅಸಹಕಾರದ ಮೂಲಕ ತೋರುತ್ತಿದೆ. ಉಚ್ಚ ನ್ಯಾಯಾಲಯಗಳಲ್ಲಿ ನ್ಯಾಯಮೂರ್ತಿಗಳ ಹುದ್ದೆಗಳು ವರ್ಷಾನುಗಟ್ಟಲೆ ಖಾಲಿ ಬಿದ್ದಿವೆ. ಬಾಕಿ ಉಳಿದಿರುವ ಪ್ರಕರಣಗಳ ಸಂಖ್ಯೆ ದಿನೇ ದಿನೇ ಬೆಳೆಯುತ್ತಿದೆ. ಕೇಂದ್ರ ಸರ್ಕಾರ ನ್ಯಾಯಾಂಗದ ಮೇಲೆ ಅಘೋಷಿತ ಘರ್ಷಣೆಗಿಳಿದಿದೆ. ಕೇಂದ್ರ ಸರ್ಕಾರದ ಈ ಬೇಜವಾಬ್ದಾರಿ ವರ್ತನೆಯನ್ನು ವಕೀಲ ವೃಂದದವರು ಖಂಡಿಸಿ ಪ್ರತಿಭಟಿಸಬೇಕು. ದುರದೃಷ್ಟದ ಸಂಗತಿಯೆಂದರೆ ನ್ಯಾಯಾಂಗದಲ್ಲಿನ ಭ್ರಷ್ಟಾಚಾರದ ಪ್ರಕರಣಗಳು ಬಹಿರಂಗಗೊಂಡಿವೆ. ಅರುಣಾಚಲ ಪ್ರದೇಶದ ಮಾಜಿ ಮುಖ್ಯಮಂತ್ರಿ ಕೆಲಿಕ್ಹೊ ಪ್ರುಲ್‌ನ ಆತ್ಮಹತ್ಯೆಯ ಪತ್ರದಲ್ಲಿ ಸರ್ವೋಚ್ಚ ನ್ಯಾಯಾಲಯದ ನಾಲ್ಕು ನ್ಯಾಯಮೂರ್ತಿಗಳ ಬಗ್ಗೆ ಪ್ರಸ್ತಾಪವಿದ್ದರೂ, ಅದನ್ನು ತಮ್ಮದೇ ಆದ ಒಂದು ಆದೇಶದ ಮೂಲಕ ತಳ್ಳಿಹಾಕಿದ್ದು ನ್ಯಾಯಾಂಗದ ಭ್ರಷ್ಟಾಚಾರವನ್ನು ಮುಚ್ಚಿಡುವ ಪ್ರಯತ್ನವೆಂಬ ಸಂದೇಹಕ್ಕೀಡುಮಾಡಿದೆ. ತರುವಾಯ ಮೆಡಿಕಲ್ ಕಾಲೇಜಿನ ಅವ್ಯವಹಾರಗಳ ತನಿಖೆ ನಡೆಸುತ್ತಿರುವ ಎಸ್.ಐ.ಟಿ.ಯ ನಡಾವಳಿಯಲ್ಲಿ ಸರ್ವೋಚ್ಚ ನ್ಯಾಯಾಲಯದ ಬಗ್ಗೆ ಪ್ರಸ್ತಾಪವಿದ್ದರೂ, ಅದನ್ನು ಬಹಳ ತರಾತುರಿಯಿಂದ ಮತ್ತು ಎಲ್ಲ ರೂಢಿ – ರಿವಾಜುಗಳನ್ನೂ ಗಾಳಿಗೆ ತೂರಿ ಪ್ರಕರಣದ ದಿಕ್ಕನ್ನೇ ಬದಲಾಯಿಸಿದ ಮುಖ್ಯ ನ್ಯಾಯಾಧೀಶರ ನಡವಳಿಕೆ ನ್ಯಾಯಾಲಯದ ಘನತೆ ಮತ್ತು ವರ್ಚಸ್ಸನ್ನೇ ಕುಂದಿಸಿದೆ. ನ್ಯಾಯಾಂಗದಲ್ಲಿನ ಈ ಅಹಿತಕರ ಬೆಳವಣಿಗೆಗಳು ಪ್ರಜಾಪ್ರಭುತ್ವದ ಬುನಾದಿಯನ್ನೇ ಶಿಥಿಲಗೊಳಿಸಿರುವುದು ಶೋಚನೀಯ.

> **ಸಾರ್ಥಕ**
>
> ಸತ್ತು ಬದುಕಬೇಕು
> ಕೀರ್ತಿ ದೇಹವಾಗಿ
> ಆದರೆ ~
> ಬದುಕಿ ಸಾಯಬಾರದು
> ನಯವಂಚಕರಾಗಿ !
>
> **ಶೋಭಾ ಪ್ರಮೋದ್**
> ಮಾಣ್‌ಗಾಂವ್, ಮಹಾರಾಷ್ಟ್ರ

**ಹೋರಾಟವೇ ದಾರಿ**

ಮೋದಿ ಸರ್ಕಾರದ ಇಂತಹ ಸರ್ವಾಂಗೀಣ ವೈಫಲ್ಯಗಳು ಸಂಘ ಪರಿವಾರದವರನ್ನು ಧೃತಿಗೆಡಿಸಿವೆ. ಈಗ ಅವರಿಗೆ ಉಳಿದಿರುವ ಒಂದೇ ಮಾರ್ಗವೆಂದರೆ ಅಯೋಧ್ಯೆಯ ರಾಮಮಂದಿರದ ನಿರ್ಮಾಣ. ಇದು ಸವಕಲು ನಾಣ್ಯವಾದರೂ ಚಲಾವಣೆ ಮಾಡಲೇಬೇಕಾದ ಪರಿಸ್ಥಿತಿ. ಹಾಗಾಗಿ ಮುಂದಿನ ದಿನಗಳಲ್ಲಿ ಪ್ರಜಾಪ್ರಭುತ್ವ ಹಕ್ಕುಗಳ ಮೇಲಿನ ದಾಳಿ ಹೆಚ್ಚುವುದು ನಿಶ್ಚಿತ. ಸಂಘಪರಿವಾರವನ್ನು ಎದುರಿಸಲು ಎಡಪಕ್ಷಗಳು ಮತ್ತು ಕಾಂಗ್ರೆಸ್ ಪಕ್ಷ ಸಜ್ಜಾಗಬೇಕಿದೆ. ರೈತ ಕಾರ್ಮಿಕರ ಹೋರಾಟಗಳನ್ನು ತೀವ್ರಗೊಳಿಸಬೇಕಿದೆ. ಜವಹರ್‌ಲಾಲ್ ನೆಹರು ವಿಶ್ವವಿದ್ಯಾಲಯ, ದೆಹಲಿ ವಿಶ್ವವಿದ್ಯಾಲಯ, ಹೈದರಾಬಾದ್ ಕೇಂದ್ರೀಯ ವಿಶ್ವವಿದ್ಯಾಲಯ, ಗುಜರಾತ್ ಕೇಂದ್ರೀಯ ವಿಶ್ವವಿದ್ಯಾಲಯ, ಕಾಶಿ ವಿಶ್ವವಿದ್ಯಾಲಯದ ಎಡ ಮತ್ತು ಪ್ರಜಾಪ್ರಭುತ್ವವಾದಿ ವಿದ್ಯಾರ್ಥಿ ಸಂಘಟನೆಗಳು ಇತ್ತೀಚೆಗೆ ನಡೆದ ಚುನಾವಣೆಗಳಲ್ಲಿ ಸಂಘಪರಿವಾರದ ಅಖಿಲ ಭಾರತ ವಿದ್ಯಾರ್ಥಿ ಫೆಡರೇಶನ್‌ನನ್ನು ಸೋಲಿಸಿ ಬೇರೆ ಹೋರಾಟಗಳಿಗೆ ಸ್ಫೂರ್ತಿ ನೀಡಿದ್ದಾರೆ. ಹೋರಾಟದ ಹೊಸ ಶಕ್ತಿಗಳು ಭುಗಿಲೆದ್ದಿವೆ.

**ಮಿಷನ್ – ೧೫೦**

ಇದೀಗ ಗುಜರಾತ್ ರಾಜ್ಯದ ಚುನಾವಣೆಯ ಫಲಿತಾಂಶ ಹೊರಬಿದ್ದಿದೆ. ಭಾರತೀಯ ಜನತಾ ಪಕ್ಷ ಮತ್ತೆ ಅಧಿಕಾರಕ್ಕೇರಿದೆ. ಗುಜರಾತ್ ರಾಜ್ಯದ ಚುನಾವಣೆ ಇಡೀ ದೇಶದ ಗಮನ ಸೆಳೆದ ಕಾರಣಗಳೆಂದರೆ ಅದು ದೇಶದ ಪ್ರಧಾನ ಮಂತ್ರಿ ನರೇಂದ್ರ ಮೋದಿ ಮತ್ತು ಭಾರತೀಯ ಜನತಾ ಪಕ್ಷದ ರಾಷ್ಟ್ರಾಧ್ಯಕ್ಷ ಅಮಿತ್ ಶಾ ಅವರ ತವರೂರು. ಅವರ ಜೊತೆಗೆ ಚುನಾವಣಾ ಪರಿಣತಿ ಹೊಂದಿದ ಸಂಘ ಪರಿವಾರದ ಸೈನ್ಯ ಮತ್ತು ಮೋದಿ – ಭಕ್ತರ ಪಡೆ. ಛಿದ್ರವಾದ ವಿರೋಧ ಪಕ್ಷ. ಎಲ್ಲಕ್ಕಿಂತ ಮಿಗಿಲಾಗಿ ಗುಜರಾತ್ ಬಿ.ಜೆ.ಪಿ.ಗೆ ಹಿಂದುತ್ವದ ಪ್ರಯೋಗಶಾಲೆ. ಕಳೆದ ೨೦೧೪ರ ಲೋಕಸಭಾ ಚುನಾವಣೆಯಲ್ಲಿ ಗುಜರಾತ್ ವಿಧಾನ ಸಭೆಯ ೧೮೨ ಸ್ಥಾನಗಳಲ್ಲಿ ೧೬೦ ಸ್ಥಾನಗಳಲ್ಲಿ ಬಿ.ಜೆ.ಪಿ. ಪ್ರಥಮ ಸ್ಥಾನ ಗಳಿಸಿದ್ದು ಶೇಕಡ ೬೦ರಷ್ಟು ಮತ. ಈ ಎಲ್ಲ ಪೂರಕ ಅಂಶಗಳ ಆಧಾರದ ಮೇಲೆ "ಮಿಷನ್ – ೧೫೦" ಘೋಷಣೆಯನ್ನು ಅಮಿತ್ ಶಾ ಕೊಟ್ಟದ್ದು.

**ಗರಿಗೆದರಿದ ಕಾಂಗ್ರೆಸ್**

೨೦೧೪ರ ಲೋಕಸಭಾ ಚುನಾವಣೆಯ ನಂತರ ಕಾಂಗ್ರೆಸ್‌ನ ಚುನಾವಣಾ ಪ್ರದರ್ಶನ ಕಳಪೆಯೆಂದೇ ಹೇಳಬಹುದು. ೨೦೧೨ರ ಗುಜರಾತ್ ಚುನಾವಣೆಯಲ್ಲಿ ಕಾಂಗ್ರೆಸ್ ಪಕ್ಷ ೬೧ ಸ್ಥಾನಗಳನ್ನು ಗೆದ್ದಿದ್ದರೂ ೨೦೧೭ರ ಚುನಾವಣೆಯ ಹೊತ್ತಿಗೆ ೪೪ ಶಾಸಕರನ್ನು ಉಳಿಸಿಕೊಂಡಿತ್ತು. ಹೀಗಾಗಿ ಗುಜರಾತ್ ಚುನಾವಣೆ ಘೋಷಿಸಿದ ಸಮಯದಲ್ಲಿ ಕಾಂಗ್ರೆಸ್ ರಾಜಕೀಯವಾಗಿ ಅತಂತ್ರ ಸ್ಥಿತಿಯಲ್ಲಿತ್ತು ಮತ್ತು ಅದರ ಸಂಘಟನೆಯಂತೂ ಅತ್ಯಂತ ಬಲಹೀನವಾಗಿತ್ತು. ಆದರೆ ಕಾಂಗ್ರೆಸ್ ಪಕ್ಷದ ಹೊರತಾಗಿ ಬೆಳೆದ ಅನೇಕ ರಾಜಕೀಯ ಬೆಳವಣಿಗೆಗಳು – ಹಾರ್ದಿಕ ಪಟೇಲ ನೇತೃತ್ವದ ಪಾಟೀದಾರ್ ಚಳವಳಿ, ಜಿಗ್ನೇಶ್ ಮೇವಾನಿಯ ದಲಿತ ಹೋರಾಟ ಮತ್ತು ಅಲ್ಪೇಶ ಠಾಕೂರ್‌ನ ಒ.ಬಿ.ಸಿ. ಚಳವಳಿ ಇವು ಕಾಂಗ್ರೆಸ್‌ನ ಪುನಶ್ಚೇತನಕ್ಕೆ ಸಿಕ್ಕ ದಿಢೀರ್ ಸಾಮಗ್ರಿಗಳು. ಈ ಎಲ್ಲ ಬೆಳವಣಿಗೆಗಳೂ ಭಾರತೀಯ ಜನತಾ ಪಕ್ಷವನ್ನು ವಿಚಲಿತಗೊಳಿಸಿ ಕಂಗೆಡಿಸಿದ್ದಂತೂ ನಿಜ. ಇದು ಕಾಂಗ್ರೆಸ್‌ಗೆ ಒದಗಿ ಬಂದ ನಂತರ ಒಲಿದು ಬಂದ ನವಚೈತನ್ಯಗಳಾದದ್ದು ವಿಶೇಷ. ಅದರ ಜೊತೆಗೆ ರಾಹುಲ್ ಗಾಂಧಿಯ ಉತ್ಸಾಹಪೂರ್ಣ ಮತ್ತು ನಿರಂತರ ಮೋದಿಯ ಮೇಲಿನ ವಾಗ್ದಾಳಿ ಬಿ.ಜೆ.ಪಿ ಪಕ್ಷವನ್ನು ಕಕ್ಕಾಬಿಕ್ಕಿಯಾಗಿಸಿದ್ದ ಪರಿಣಾಮವೇ ಕೇಂದ್ರದ ಇಡೀ ಮಂತ್ರಿ ಮಂಡಳವೇ ಗುಜರಾತಿಗೆ ಧಾವಿಸಿದ್ದು. ಸಂಯಮ ಮತ್ತು ಶಿಸ್ತುಬದ್ಧ ಚುನಾವಣಾ ಪ್ರಚಾರ ರಾಹುಲ್ ಗಾಂಧಿಯ ಪರಿಯಾದರೆ, ತಾನು ದೇಶದ ಪ್ರಧಾನಿ ಎಂಬುದನ್ನೂ ಲೆಕ್ಕಿಸದೆ ಅತ್ಯಂತ ಕೀಳುಮಟ್ಟದ ಪ್ರಚಾರ ಮೋದಿಯ ಪರಿಯಾಗಿತ್ತು. ಸೋಲಿನ ಭೀತಿ ಕಾಡಿತ್ತು.

**ಗುಜರಾತ್ ಚುನಾವಣೆ – ಕಲಿಸಿದ ಪಾಠ**

ಮೋದಿ, ಅಮಿತ್ ಶಾ ಮತ್ತು ಸಂಘ ಪರಿವಾರ ತಮ್ಮೆಲ್ಲ ಶಕ್ತಿ ಮತ್ತು ಸಂಪನ್ಮೂಲಗಳನ್ನು ಪಣಕ್ಕಿಟ್ಟಿದ್ದರೂ ಕೇವಲ ೯೯ ಸ್ಥಾನಗಳು, ಕಾಂಗ್ರೆಸ್ ೮೦ ಸ್ಥಾನಗಳನ್ನು ಗೆದ್ದು ಸರಿ ಸಮಾನ ಪೈಪೋಟಿ ನೀಡಿದ್ದು ಗಮನಾರ್ಹ. ಕಾಂಗ್ರೆಸ್ ತನ್ನ ಸ್ಥಾನಗಳನ್ನು ಮಾತ್ರವಲ್ಲ, ತನ್ನ ಮತಗಳ ಪಾಲನ್ನೂ ಹೆಚ್ಚಿಸಿಕೊಂಡಿದೆ. ಕಾಂಗ್ರೆಸ್‌ಮುಕ್ತ ಭಾರತವೇನು, ಕಾಂಗ್ರೆಸ್ ಮುಕ್ತ ಗುಜರಾತ್ ಮಾಡಲೂ ಮೋದಿಗೆ ಸಾಧ್ಯವಾಗಿಲ್ಲ. ಗುಜರಾತ್ ಚುನಾವಣೆ ರಾಹುಲ್ ಗಾಂಧಿಯ ವರ್ಚಸ್ಸನ್ನು ಹೆಚ್ಚಿಸಿದ್ದರೆ ಮೋದಿಯ ವರ್ಚಸ್ಸನ್ನು ಇಳಿಮುಖಗೊಳಿಸಿದೆ. ಇದು ಮುಂಬರುವ ಕರ್ನಾಟಕ, ಮಧ್ಯಪ್ರದೇಶ, ಚತ್ತೀಸ್‌ಘಡ ಮತ್ತು ರಾಜಾಸ್ತಾನ ರಾಜ್ಯಗಳ ಚುನಾವಣೆಗಳ ಮೇಲೆ ಗಂಭೀರ ಪರಿಣಾಮ ಬೀರಲಿದೆ. ಇಡೀ ಗುಜರಾತ್ ಚುನಾವಣೆಯಲ್ಲಿ ಮೋದಿ ಬಾಯಿ ಬಿಡದದ್ದು "ಅಭಿವೃದ್ಧಿ" ಮತ್ತು "ಗುಜರಾತ್ ಮಾದರಿ". ಮೋದಿ ಸರ್ಕಾರದ ವೈಫಲ್ಯಗಳನ್ನು ಗುಜರಾತ್ ಮತದಾರರು ಎತ್ತಿ ತೋರಿಸಿದ್ದಾರೆ. ಕಾಂಗ್ರೆಸ್ ಪಕ್ಷ ಈವರೆಗೆ ಅನುಸರಿಸಿಕೊಂಡು ಬಂದ ನವ ಉದಾರೀಕರಣದ ಆರ್ಥಿಕ ನೀತಿಗಳನ್ನು ಕೈಬಿಟ್ಟು ಮೋದಿಯ ಶ್ರೀಮಂತರ ಪರ ಆರ್ಥಿಕ ನೀತಿಗೆ ಪರ್ಯಾಯವಾಗಿ ಜನಪರ ಆರ್ಥಿಕ ನೀತಿಯನ್ನು ಅಳವಡಿಸಿಕೊಂಡಲ್ಲಿ ಮಾತ್ರ ಅದು ಜನಮನ್ನಣೆ ಗಳಿಸಲು ಮತ್ತು ಪರ್ಯಾಯ ರಾಜಕೀಯ ಧ್ರುವೀಕರಣಕ್ಕೆ ಚಾಲನೆ ಕೊಡಲು ಸಾಧ್ಯ.

**ಮುರಳೀಧರ ಚಿಕ್ಕಮಗಳೂರು**
ವಕೀಲರು, ನಂ. ೩, ೨ನೇ ಮಹಡಿ, ಡೈಯಾಗನಲ್ ರಸ್ತೆ
ವಿ. ವಿ. ಪುರಂ, ಬೆಂಗಳೂರು – ೫೬೦ ೦೦೪




## ಭಗವದ್ಗೀತೆ : ಒಂದು ಅವಲೋಕನ

# ೧೬. ಶ್ರೇಣೀಕರಣಕ್ಕೆ ತಾತ್ವಿಕ ಬುನಾದಿ

ಜಿ. ರಾಮಕೃಷ್ಣ

**ಗೀತೆಯ ಕರ್ತೃ ತಾನು ಬಯಸುವ ವಿಚಾರಗಳ ಪ್ರತಿಪಾದನೆಗೆ ಅವಕಾಶ ದೊರಕಿಸಿಕೊಳ್ಳಲು ಶಿಷ್ಯನ ಸ್ಥಾನದಲ್ಲಿರಿಸಲ್ಪಟ್ಟ ಅರ್ಜುನನ ಬಾಯಿಂದ ಪ್ರಶ್ನೆಗಳನ್ನು ಕೇಳಿಸುತ್ತಾನೆ. ಅವು ತರ್ಕಬದ್ಧವಾಗಿ ಒಂದರಿಂದ ಒಂದು ಮೂಡಿರಬೇಕೆಂಬ ಒತ್ತಾಯವೇನೂ ಇಲ್ಲ. ಅಷ್ಟರಮಟ್ಟಿಗೆ ಕರ್ತೃವು ತರ್ಕಪದ್ಧತಿಗೆ ವಿಮುಖನಾಗುವ ಸ್ವಾತಂತ್ರ್ಯವನ್ನು ಘೋಷಿಸಿಕೊಂಡಿದ್ದಾನೆ. ತನ್ನ ಮೂಲೋದ್ದೇಶದ ಪೂರೈಕೆಯನ್ನು ಭರವಸೆಯಿಂದ ಪೋಷಿಸಿಕೊಳ್ಳುವ ಅಧ್ಯಾಯ ಹದಿನೆಂಟನೆಯ ಮತ್ತು ಕಡೆಯ ಅಧ್ಯಾಯ. ಮೊದಲ ಅಧ್ಯಾಯದಲ್ಲಿ ಎತ್ತಲಾದ ಸಮಾಜಮುಖಿ ಪ್ರಶ್ನೆಗಳಿಗೆ ಕ್ಲುಪ್ತವಾದ ಉತ್ತರಗಳನ್ನು ನೀಡಿರದಿದ್ದರೂ ಶ್ರೀಭಗವಾನನನ್ನು ಗಟ್ಟಿಯಾದ ಗುರಾಣಿಯನ್ನಾಗಿ ಪರಿವರ್ತಿಸಿದ ಸಂತೃಪ್ತಿ ಗೀತೆಯ ಲೇಖಕನಿಗಿದೆ. ಉಳಿದೆಲ್ಲ ಅಧ್ಯಾಯಗಳಿಗಿಂತಲೂ ದೀರ್ಘವಾದ ಕಡೆಯ ಅಧ್ಯಾಯದಲ್ಲಿ "ಎಲ್ಲ ವೇದಾರ್ಥವನ್ನು ಹೇಳಬೇಕಾದ ಜರೂರು" ಇದೆಯೆಂದು ಭಾಷ್ಯಕಾರ ಶಂಕರನು ಹೇಳುತ್ತಾನೆ. ಅಂತೆಯೇ "ಹಿಂದಿನ ಅಧ್ಯಾಯಗಳಲ್ಲಿ ಹೇಳಿರುವುದೆಲ್ಲದರ ಸಾರಾಂಶವು ಈ ಅಧ್ಯಾಯದಲ್ಲಿ ದೊರಕುತ್ತದೆ" ಎಂದು ಸಹ ಹೇಳಿದ್ದಾನೆ. ಆ ಎಲ್ಲದರ ಸಾರಾಂಶವು ಕಡೆಗೆ ಮತ್ತೆ ನಿಗದಿತ ವರ್ಣಧರ್ಮಕ್ಕೆ ಒತ್ತುಕೊಡುವುದಾಗಿದೆ.**

ಗೀತೆಯ ಕಡೆಯ ಅಧ್ಯಾಯವನ್ನು ಸಾಂಪ್ರದಾಯಿಕವಾಗಿ "ಮೋಕ್ಷಸಂನ್ಯಾಸಯೋಗ" ಎನ್ನಲಾಗಿದೆ. ಮೋಕ್ಷದ ಜಿಜ್ಞಾಸೆಯಿಲ್ಲದೆ ಭಾರತೀಯ ತತ್ತ್ವಶಾಸ್ತ್ರವು ಅಪರಿಪೂರ್ಣವಾದ್ದರಿಂದ ಗೀತೆಯು ಸಹ "ಅತ್ಯುತ್ಕೃಷ್ಟ ಶಾಂತಿ"ಯ ಸೋಪಾನಕ್ಕೆ ತನ್ನ ಪಾಠಕರನ್ನು ಕೊಂಡೊಯ್ಯಲು ತವಕಿಸುತ್ತದೆ. ಆ ಕಾರಣದಿಂದಲೋ ಏನೋ ಅರ್ಜುನನು ಸಂನ್ಯಾಸ ಮತ್ತು ತ್ಯಾಗ ಎಂಬ ಕಲ್ಪನೆಗಳ ನಿಜಾರ್ಥಗಳನ್ನು ತಿಳಿಯಲು ಉತ್ಸುಕನಾಗುತ್ತಾನೆ. ಹಿಂದಿನ ಅಧ್ಯಾಯದಲ್ಲಾಗಲಿ, ಅದಕ್ಕೆ ಮುಂಚಿನ ಅಧ್ಯಾಯಗಳಲ್ಲಾಗಲಿ ಸಂನ್ಯಾಸದ ಪ್ರಸ್ತಾಪವು ನೇರವಾಗಿ ಬಂದಿಲ್ಲ. ವಿಷಯಾಂತರವೋ ಎಂಬಂತೆ ಥಟಕ್ಕನೆ ಅದಿಲ್ಲಿ ಪ್ರವೇಶ ಮಾಡಿಬಿಟ್ಟಿದೆ. ಹಿಂದಿನ ಅಧ್ಯಾಯಕ್ಕೆ "ಶ್ರದ್ಧಾತ್ರಯ ವಿಭಾಗಯೋಗ" ಎಂಬ ಹೆಸರಿದೆ. ಅದರಿಂದ ಸಂನ್ಯಾಸದ ವಿಷಯಕ್ಕೆ ಸಾರುವುದು ತಾರ್ಕಿಕವಾಗಿ ಅಗತ್ಯವಲ್ಲ. ಆದರೆ ಸತ್ವ–ರಜಸ್–ತಮೋ ಗುಣಗಳ ಚರ್ಚೆಯ ಮುಂದುವರಿದ ಭಾಗವೆಂದು ಭಾಸವಾಗುವ ರೀತಿಯಲ್ಲಿ ಸಂನ್ಯಾಸದ ಬಗೆಗಿನ ಪ್ರಶ್ನೆಯನ್ನು ಎತ್ತಲಾಗಿದೆ. ಗೀತೆಗೆ ಮಧುಸೂದನ ಸರಸ್ವತಿ ಎಂಬುವನು ಒಂದು ವಿಸ್ತಾರವಾದ ವ್ಯಾಖ್ಯಾನ ಬರೆದಿದ್ದಾನೆ. ಅವನು ಹದಿನೈದನೆಯ ಶತಮಾನದವನು ಮತ್ತು ಬಹುಶಃ ೧೫೨೦ರ ನಂತರ ಯಾವಾಗಲೋ ವ್ಯಾಖ್ಯಾನ ಬರೆದನೆಂದು ಊಹಿಸಲಾಗಿದೆ. ಅವನದು ಸ್ವತಂತ್ರ ವ್ಯಾಖ್ಯಾನವೇನೋ ಹೌದು, ಆದರೆ ಮೂಲತಃ ಶಂಕರನ ಸಿದ್ಧಾಂತವನ್ನು ಪುರಸ್ಕರಿಸುವ ನಿಲುವು ಅವನದು. ಪ್ರಸ್ತುತ ಅಧ್ಯಾಯದಲ್ಲಿ ಸಂನ್ಯಾಸದ ಬಗೆಗಿನ ಚರ್ಚೆಯು ಏಕೆ ಉದ್ಭವಿಸಿದೆಯೆಂಬುದನ್ನು ತಾರ್ಕಿಕವಾಗಿ ಸಮಂಜಸಗೊಳಿಸಲು ತನ್ನ ವ್ಯಾಖ್ಯಾನದಲ್ಲಿ ಅವನೊಂದು ಪೀಠಿಕೆಯನ್ನು ನೀಡಿದ್ದಾನೆ. ಬೌದ್ಧಿಕ ಕುತೂಹಲವನ್ನು ತಣಿಸಿಕೊಳ್ಳಲು ಮತ್ತು ಗೀತೆಯ ವ್ಯಾಖ್ಯಾನಗಳ ಶೈಲಿಯನ್ನು ಪರಿಚಯಿಸಿಕೊಳ್ಳಲು ಅದನ್ನಿಲ್ಲಿ ಸ್ಥೂಲವಾಗಿ ನೋಡೋಣ. ಶುದ್ಧತರ್ಕವಿಲ್ಲದೆಡೆ ತರ್ಕಬದ್ಧತೆ ಇದೆಯೆಂದು ವಾದ ಹೂಡಲು ಎಂತಹ ಕಸರತ್ತು ಬೇಕಾಗುತ್ತದೆಂಬುದಕ್ಕೆ ಅದು ಉದಾಹರಣೆಯಾದೀತು :

"ಕ್ರಿಯೆಯಲ್ಲಿ ತೊಡಗುವವರಲ್ಲಿ ಮೂರು ವಿಧಗಳಿವೆಯೆಂಬುದನ್ನು ಹಿಂದಿನ (೧೭ನೆಯ) ಅಧ್ಯಾಯದಲ್ಲಿ ಹೇಳಲಾಗಿತ್ತು. ಶ್ರದ್ಧೆ, ಆಹಾರ, ಯಜ್ಞ, ತಪಸ್ಸು ಮತ್ತು ದಾನ, ಇವುಗಳಲ್ಲಿ ಮೂರು ಬಗೆಗಳಿವೆಯೆಂಬುದನ್ನು ಅಲ್ಲಿ ವಿಸ್ತರಿಸಲಾಯಿತು. ರಾಜಸ ಮತ್ತು ತಾಮಸಗಳನ್ನು ದೂರಮಾಡಿ ಸಾತ್ವಿಕ ಭಾವವನ್ನು ವರಿಸಬೇಕೆಂದು ತಿಳಿಸುವುದು ಅದರ ಉದ್ದೇಶ. ಸಂನ್ಯಾಸದಲ್ಲಿ ಮೂರು ಬಗೆಗಳಿವೆ ಮತ್ತು ಅದರಿಂದಾಗಿ ಸಂನ್ಯಾಸಿಗಳು ಮೂರು ವಿಧ ಎಂಬುದನ್ನೀಗ ಪ್ರಸ್ತಾಪಿಸಲಾಗುತ್ತಿದೆ. ೧೪ನೆಯ ಅಧ್ಯಾಯದಲ್ಲಿ ಮೂರು ಗುಣಗಳನ್ನು ದಾಟುವುದು ಬ್ರಹ್ಮ ಸಾಕ್ಷಾತ್ಕಾರ ಮಾಡಿಕೊಂಡವರಿಗೆ ಸಾಧ್ಯ ಮತ್ತು ಅಂಥವರು ಕರ್ಮಕ್ಕೆ ಅತೀತರು ಎಂಬುದನ್ನು ತಿಳಿಸಲಾಗಿತ್ತು. ಬ್ರಹ್ಮಜ್ಞಾನಿಗಳು ಮೂರು ಗುಣಗಳ ಪರಿಧಿಯನ್ನು ದಾಟಿರುವಂಥವರು. ಬ್ರಹ್ಮಜ್ಞಾನ ಪಡೆಯುವ ಮೊದಲೇ ಕರ್ಮಗಳ ತ್ಯಾಗ ಮಾಡಿರಬೇಕಾಗಿರುತ್ತದೆ. ಅದನ್ನು "ತ್ರೈಗುಣ್ಯ ವಿಷಯಾ ವೇದಾ ನಿಸ್ತ್ರೈಗುಣ್ಯೋ ಭವಾರ್ಜುನ" (೨.೪೫) ಎಂಬ ವಾಕ್ಯದಲ್ಲಿ ಆರಂಭದಲ್ಲಿಯೇ ಸೂಚಿಸಲಾಗಿತ್ತು. ತತ್ತ್ವದ ಜ್ಞಾನ ಹೊಂದಿಲ್ಲದವರು ಮತ್ತು ಅಂತಹ ಜ್ಞಾನ ಪಡೆಯಲು ಮುಂದಾಗಿಲ್ಲದವರು ಇರುತ್ತಾರಲ್ಲ, ಅವರಲ್ಲಿ ಕರ್ಮ ಮತ್ತು ಕರ್ಮಫಲ ತ್ಯಾಗ ಇನ್ನೂ ಅಂಕುರಿಸಿರುವುದಿಲ್ಲ. ಅದನ್ನು "ಅನಾಶ್ರಿತಃ ಕರ್ಮಫಲಂ ಕಾರ್ಯಂ ಕರ್ಮ ಕರೋತಿ ಯಃ। ಸ ಸಂನ್ಯಾಸೀ ಚ ಯೋಗೀ ಚ ನ ನಿರಗ್ನಿರ್ನ ಚಾಕ್ರಿಯಃ॥" (೬.೧) ಎಂಬಲ್ಲಿ ಸೂಚಿಸಲಾಗಿತ್ತು. ಅಂಥವರು ಮೂರು ವಿಧಗಳವರಾಗಿರಲು ಸಾಧ್ಯ ಎಂಬ ಕಾರಣದಿಂದ ಪ್ರಸ್ತುತ ಅದನ್ನು ಅರ್ಜುನನು ಪ್ರಸ್ತಾಪಿಸುತ್ತಿದ್ದಾನೆ."

ನಮ್ಮಂತಹ ಪಾಮರರಿಗೆ ಸುಲಭವಾಗಿ ಅರ್ಥವಾಗುವ ತರ್ಕಸರಣಿ ಇದಲ್ಲ, ಬಿಡಿ; ಬ್ರಹ್ಮಜ್ಞಾನ ಪಡೆಯಬಯಸುವವರಿಗೆ ಮತ್ತು ಅದನ್ನು ಪಡೆದಿರುವವರಿಗೆ ಅದು ಬಹಳ ಸರಳ ಎನ್ನಿಸುತ್ತದೆಯೆಂದು ಭಾವಿಸಿ ಬಿಡೋಣ. ಅಂತೂ ಶ್ರೀಭಗವಾನನ ಶಿಷ್ಯನಾದ ಅರ್ಜುನನಿಗೆ ಸಂನ್ಯಾಸ ಮತ್ತು ತ್ಯಾಗ, ಇವುಗಳ ಬಗೆಗಿನ ಸತ್ಯವನ್ನು ತಿಳಿಯುವ ಹಂಬಲ ಹುಟ್ಟಿದೆ (೧೮.೧). ಸತ್ಯವನ್ನು ಶ್ರೀಭಗವಾನನು ಸರಳವಾಗಿಯೇ ತಿಳಿಸುತ್ತಾನೆ : ಯಾವುದೋ ಕ್ರಿಯೆಯನ್ನು ಮಾಡುವುದು ಯಾವುದೋ ಉದ್ದೇಶದ ಸಾಫಲ್ಯಕ್ಕಾಗಿ. ಉದಾಹರಣೆಗೆ, ವಿವಿಧ ಹಂತಗಳಲ್ಲಿ ಆಚರಿಸಬೇಕೆಂದು ನಿಯಮಿತವಾದ ಕರ್ಮಗಳಿವೆ; ಬ್ರಹ್ಮಚಾರಿಯ ವೇದಾಧ್ಯಯನ; ಗೃಹಸ್ಥನ ಯಜ್ಞ, ದಾನ ಇತ್ಯಾದಿಗಳು; ವಾನಪ್ರಸ್ಥನ ತಪಸ್ಸಿನ ಆಚರಣೆ, ಮುಂತಾದವು. ಈ ನಿತ್ಯಕರ್ಮಗಳು ಸಹ ಜ್ಞಾನದ ಸಾಧನೆಗಳೇ. ಅವಲ್ಲದೆ ಬೇರೆ "ಕಾಮ್ಯ ಕರ್ಮ" ಗಳಿವೆ : ಉದಾಹರಣೆಗೆ, ಸ್ವರ್ಗಲೋಕದ ಸಿದ್ಧಿ ಪಡೆಯುವ ಇಚ್ಛೆಯಿದ್ದರೆ ಜ್ಯೋತಿಷ್ಟೋಮ ಯಾಗ ಮಾಡುವುದು, ಇತ್ಯಾದಿ. ಸಂನ್ಯಾಸವೆಂದರೆ ಕಾಮ್ಯ ಕರ್ಮಗಳನ್ನು

ತೊರೆಯುವುದು ಎಂಬುದು ಶ್ರೀಭಗವಾನನ ವಿವರಣೆ. ಅದನ್ನು ಮೀರಿದ್ದು ತ್ಯಾಗ; ಎಲ್ಲ ಕ್ರಿಯೆಗಳ ಫಲವನ್ನೂ ತೊರೆಯುವುದು ಅದರ ವ್ಯಾಪ್ತಿಗೆ ಬರುತ್ತದೆ. (೧೮.೨ : ಕಾಮ್ಯಾನಾಂ ಕರ್ಮಣಾಂ ನ್ಯಾಸಂ ಸಂನ್ಯಾಸಂ ಕವಯೋ ವಿದುಃ। ಸರ್ವಕರ್ಮಫಲತ್ಯಾಗಂ ಪ್ರಾಹುಃ ತ್ಯಾಗಂ ವಿಚಕ್ಷಣಾಃ ॥)

ಯುದ್ಧದಿಂದ ಜೀವಹಾನಿಯಾಗುತ್ತದೆ, ಸಾಮಾಜಿಕ ವ್ಯವಸ್ಥೆಯು ಅಸ್ತವ್ಯಸ್ತಗೊಳ್ಳುತ್ತದೆ, "ಶಾಶ್ವತ" ಧರ್ಮಗಳು ನಶಿಸಿಹೋಗುತ್ತವೆ, ಇತ್ಯಾದಿ ಆತಂಕಗಳಿಂದ ವಿಷಾದಕ್ಕೆ ಒಳಗಾದವನ ಪ್ರಶ್ನೆಗಳಿಂದ ಆರಂಭಗೊಂಡ ಗೀತೆಯು ಕೊನೆಗೊಳ್ಳುತ್ತಿರುವುದು 'ಸರ್ವಕರ್ಮಫಲತ್ಯಾಗ' ಎಂಬ ಬೋಧನೆಯಿಂದ ಎಂಬುದು ಒಂದು ದಾರ್ಶನಿಕ ವ್ಯಂಗ್ಯ ಎನಿಸುತ್ತದೆಯೆ? ಒಂದು ಪ್ರಸಂಗವು ನೆನಪಾಗುತ್ತದೆ, ಓದುಗರ ಕ್ಷಮೆ ಕೇಳಿ ಅದನ್ನು ಪ್ರಸ್ತಾಪಿಸಬಹುದಲ್ಲವೆ?

ಅದು ೧೯೭೦ರ ದಶಕದ ಮೊದಲ ವರ್ಷಗಳಲ್ಲಿ ಘಟಿಸಿದ ಸಂಗತಿ. ಬೆಂಗಳೂರಿನ ಗಾಂಧಿನಗರದಲ್ಲಿ ಆರ್ಯ-ವೈಶ್ಯ ಪ್ರೌಢಶಾಲೆ ಇತ್ತು, ಅದೀಗ ಬಹಳ ಬದಲಾಗಿದೆ. ಆಗ್ಗೆ ಅದು ಬಡಕುಟುಂಬಗಳಿಂದ ಬಂದ ವಿದ್ಯಾರ್ಥಿಗಳ ಕಲಿಕೆಯ ತಾಣವಾಗಿತ್ತು. ಒಂದು ಮಧ್ಯಾಹ್ನ ಅಲ್ಲೊಂದು ಸಮಾರಂಭ. ಅದಕ್ಕೆ ಶಾಲೆಯಲ್ಲಿ ಸಭಾಂಗಣವೇನೂ ಇರಲಿಲ್ಲವಾದ್ದರಿಂದ ಶಾಲೆಯ ಆವರಣದ ಬಯಲಿನಲ್ಲಿ ವಿದ್ಯಾರ್ಥಿಗಳನ್ನು ಕೂಡಿಸಲಾಗಿತ್ತು. ಅವರಲ್ಲಿ ಎಷ್ಟು ಬಾಲಕರು ಮಧ್ಯಾಹ್ನ ತಿಂಡಿ ತಿಂದಿದ್ದರೋ ಹೇಳಬರುತ್ತಿರಲಿಲ್ಲ. ಅವರಿಗೇನೂ ಸಮವಸ್ತ್ರಗಳಿರಲಿಲ್ಲ. ಎಲ್ಲರೂ ನೆಲದ ಮೇಲೆ ಕುಳಿತಿದ್ದರು. ಶಾಲೆಯ ಮುಖ್ಯೋಪಾಧ್ಯಾಯರ ಅಧ್ಯಕ್ಷತೆಯಲ್ಲಿ ಇಬ್ಬರು "ವಿದ್ವಾಂಸರು" ಮಕ್ಕಳಿಗೆ ಭಾಷಣ ಮಾಡುವುದಿತ್ತು : ಒಬ್ಬರು ಪ್ರಸಿದ್ಧ ಉಪನ್ಯಾಸಕರು, ಬೆಂಗಳೂರಿನ ಎಂ.ಇ.ಎಸ್. ಕಾಲೇಜಿನ ಪ್ರಾಚಾರ್ಯರಾಗಿದ್ದ ಪ್ರೊಫೆಸರ್ ಎಂ. ಪಿ. ಎಲ್. ಶಾಸ್ತ್ರಿಗಳು, ಉತ್ತಮ ವಾಗ್ಮಿಗಳೆಂದು ಹೆಸರು ಗಳಿಸಿದ್ದವರು; ಇನ್ನೊಬ್ಬರು ಈ ಗೀತೆಯ ಮಾಲಿಕೆಯ ಲೇಖಕ, ಬಸವನಗುಡಿಯ ನ್ಯಾಷನಲ್ ಕಾಲೇಜಿನ ಇಂಗ್ಲಿಷ್ ಅಧ್ಯಾಪಕ. ಇಬ್ಬರಿಗೂ ವಯಸ್ಸಿನಲ್ಲಿ ಸುಮಾರು ಮೂವತ್ತೈದು ವರ್ಷಗಳ ಅಂತರವಿದ್ದಿರಬಹುದು. ಮಾನ್ಯ ಶಾಸ್ತ್ರಿಗಳು ವಿದ್ವತ್ಪೂರ್ಣವಾಗಿ ಅದ್ವೈತ ವೇದಾಂತದ ಸಾರವನ್ನು ಮನೋಜ್ಞವಾಗಿ ತಿಳಿಸಿ ವಿದ್ಯಾರ್ಥಿಗಳು ಬ್ರಹ್ಮಜ್ಞಾನ ಪಡೆಯುವ ದಿಕ್ಕಿನಲ್ಲಿ ಮುನ್ನಡೆಯಬೇಕೆಂದು ತಿಳಿಸಿದರು. ಹಸಿವನ್ನು ಲೆಕ್ಕಿಸದೆ ವಿದ್ಯಾರ್ಥಿಗಳು ಶಿಸ್ತಿನಿಂದ ಕುಳಿತು ಉಪನ್ಯಾಸ ಕೇಳಿ ಉತ್ಸಾಹದಿಂದ ಚಪ್ಪಾಳೆ ತಟ್ಟಿದರು. ನಂತರದ ಸರದಿ ನನ್ನದಾಗಿತ್ತು. ಚೇಷ್ಟೆಯ ಸ್ವಭಾವದಿಂದ ನಾನು ಆರಂಭಿಸಿದ್ದು ಹೀಗೆ : ಆಗಲೇ ನಾಲ್ಕು ಗಂಟೆ ದಾಟಿದೆ. ಯಾವಾಗ ಊಟ ಮಾಡಿದ್ದಿರೋ ಏನೋ, ಹೊಟ್ಟೆ ತಾಳ ಹಾಕುತ್ತಿರಬೇಕು. ನಾನು ನಿಮ್ಮಂತೆ ಪ್ರೌಢಶಾಲೆಯಲ್ಲಿದ್ದಾಗ ನಮ್ಮ ಶಾಲೆಯಲ್ಲಿ ಆವರಣವೇನೂ ಇರಲಿಲ್ಲ. ಸಭೆ ನಡೆದರೆ ಪಕ್ಕದಲ್ಲೇ ಇದ್ದ ಒಂದು ಮರದ ಕೆಳಗೆ ನಡೆಯುತ್ತಿತ್ತು. ಸಭೆಯ ನಂತರ ನಾಲ್ಕು ಮೈಲಿ ನಡೆದು ಮನೆ ತಲುಪಬೇಕಾಗುತ್ತಿತ್ತು. ಹಸಿವಿನ ಅಬ್ಬರ ತಾಳ್ಮೆಗೆಡಿಸುತ್ತಿತ್ತು. ವಿದ್ವಾಂಸರ ಭಾಷಣದ ಮಧ್ಯೆಯೇ ನಮ್ಮೂರಿನವರು ಎದ್ದುಹೋಗಿಬಿಡುತ್ತಿದ್ದೆವು. ನಿಮಗೆ ಹಾಗೆ ಮಾಡಲು ಆಗುವುದಿಲ್ಲ. ನಿಮ್ಮ ಶಾಲೆಯ ಸುತ್ತ ಗೋಡೆ ಇದೆ, ಅದನ್ನು ಹಾರುವುದು ಸುಲಭವಲ್ಲ. ನಾನಾಗಿದ್ದರೆ ಖಂಡಿತ ಹಾರಲು ಯತ್ನಿಸುತ್ತಿದ್ದೆ. ಹಾಗೆ ಮಾಡದೆ ನೀವು ಬ್ರಹ್ಮಜ್ಞಾನದ ಅವಶ್ಯಕತೆಯ ಬಗ್ಗೆ ತಿಳಿವಳಿಕೆ ಪಡೆದಿದ್ದೀರಿ. ಬಹಳ ಸಂತೋಷ, ಆದರೆ ನೀವೆಷ್ಟು ಮಂದಿ ತೇರ್ಗಡೆಯಾಗಿ ಕಾಲೇಜುಗಳಿಗೆ ಹೋಗುತ್ತೀರಿ? ಕಾಲೇಜಿಗೆ ಸೇರಿಸಲು ನಿಮ್ಮ ಪೋಷಕರಿಗೆ ಆರ್ಥಿಕ ಚೈತನ್ಯ ಇದೆಯೆ? ಹಣವಿಲ್ಲದೆಯೂ ಶಿಕ್ಷಣ ಪಡೆಯುವ ವ್ಯವಸ್ಥೆ ಏಕಿಲ್ಲವೆಂದು ಎಂದಾದರೂ ಯೋಚನೆ ಮಾಡಿದ್ದಿರಾ? ಈಗಲಾದರೂ ಅದನ್ನು ನೀವು ಮತ್ತು ನಿಮ್ಮ ಪೋಷಕರು ಕುಳಿತು ಮಾತನಾಡಿಕೊಳ್ಳಿ, ಆಮೇಲೆ ಬೇಕೆನಿಸಿದರೆ ಬ್ರಹ್ಮಜ್ಞಾನವನ್ನೂ ಪಡೆದುಕೊಳ್ಳಿ, ಇತ್ಯಾದಿ. ಸಭೆಯ ನಂತರ ಮಾನ್ಯ ಶಾಸ್ತ್ರಿಗಳು ನನ್ನ

ಭುಜದ ಮೇಲೆ ಕೈಹಾಕಿ ನುಡಿದರು: ಅಲ್ಲಾ, ವಿದ್ಯಾರ್ಥಿಗಳಿಗೆ ಏನೇನೋ ಹೇಳಿಬಿಟ್ಟಿರಲ್ಲ. ಇರಲಿ, ಆದರೂ ಬ್ರಹ್ಮಜ್ಞಾನದ ಲೇವಡಿ ಮಾಡಬಾರದಿತ್ತು. ಮೌಲ್ಯಗಳನ್ನು ರೂಢಿಸಿಕೊಳ್ಳಲು ಅನುಕೂಲವಾಗುವಂತಹ ಮಾತುಗಳನ್ನು ವಿದ್ಯಾರ್ಥಿಗಳಿಗೆ ಈ ವಯಸ್ಸಿನಲ್ಲಿಯೇ ತಿಳಿಹೇಳಬೇಕು, ಇತ್ಯಾದಿ. ಗೀತೆಯ ಮೊದಲನೆಯ ಅಧ್ಯಾಯದಲ್ಲಿ ಸಾಮಾಜಿಕ ತುಮುಲ ಮತ್ತು ವ್ಯವಸ್ಥೆಯು ಭಗ್ನವಾಗಿಬಿಡುವ ಆತಂಕ ವ್ಯಕ್ತಪಡಿಸಿದ ವಿದ್ಯಾರ್ಥಿಗೆ ಉಪನ್ಯಾಸಕ ಶ್ರೀಭಗವಾನನು ತ್ಯಾಗದ ಬೋಧನೆ ಮಾಡುತ್ತಿದ್ದಾನೆ. ಆದರೆ ಅವನಿಗೆ ಅಸಾಮಾನ್ಯ ತಿಳಿವಳಿಕೆ ಮತ್ತು ಯೋಜನೆ ಉಂಟು. ಘಟಿಸಬಹುದಾದ ಸಾಮಾಜಿಕ ಅಸ್ತವ್ಯಸ್ತತೆಯನ್ನು ತಡೆಯಲು ಅವನಲ್ಲಿ ಮದ್ದಿದೆ. ಅದು ಪ್ರಭಾವೀ ಬೌದ್ಧಿಕ ಅಸ್ತ್ರ. ವರ್ಣಧರ್ಮವು ವಿಧಿಸಿರುವ ಸ್ವ-ಧರ್ಮವನ್ನು ಯಾವ ಕಾರಣಕ್ಕೂ ಮೀರಕೂಡದೆಂಬ ಮೂಲಭೂತ ಸಾಮಾಜಿಕ ಅಡಿಪಾಯವು ಅಲುಗಾಡದಂತೆ ಪ್ರೇರೇಪಿಸಲು ಸಮರ್ಥವಾದ ಅಸ್ತ್ರ ಅದು. ಹಾಗೆ ಅಡಿಪಾಯವು ಅಲುಗಾಡದಿದ್ದರೆ ಸಾಮಾಜಿಕ ಅಸ್ತವ್ಯಸ್ತತೆ ಏಕೆ ಉಂಟಾಗುತ್ತದೆ ಮತ್ತು ಹೇಗುಂಟಾಗುತ್ತದೆ? ಶ್ರೇಣೀಕೃತ ಸಾಮಾಜಿಕ ವ್ಯವಸ್ಥೆಗೆ ಕಿಂಚಿತ್ತೂ ಊನವಾಗದಂತೆ ಸನ್ನಿವೇಶವನ್ನು ನಿಭಾಯಿಸಲು ಬೇಕಾದ ಪರಿಕರಗಳು ಗೀತೆಯ ಅರುಚಿಕರ ಹೂರಣ, ಮಿಕ್ಕಿದ್ದೆಲ್ಲಾ ಹೊರಕವಚದ ಆಕರ್ಷಕ ಬೌದ್ಧಿಕ-ಮತಧಾರ್ಮಿಕ ವಿನ್ಯಾಸ. ಅದನ್ನೇ ಕೆಲವು ವಿದ್ವಾಂಸರು ಗೀತೆಯ ಆಧ್ಯಾತ್ಮಿಕ ಸಂದೇಶವೆಂದು ಕರೆಯುತ್ತಾರೆ. ಇದರ ಮುಖ್ಯ ಅಪಾಯವೇನೆಂದರೆ ತ್ಯಾಗದಲ್ಲಿ ಶುಶ್ರೂಷಕನ ಪಾಲುಗಾರಿಕೆಯೂ ಸೇರಿದೆ: ಶುಶ್ರೂಷೆಯೇ ಧರ್ಮವಾಗಿರುವುದು ಶೂದ್ರರಿಗೆ ಮಾತ್ರ; ಅವರು ತ್ಯಾಗ ಮಾಡಬೇಕಾದ್ದು ಅವರ ಕೂಲಿಯನ್ನು, ಸಮಾನತೆಯ ಆಕಾಂಕ್ಷೆಯನ್ನು, ಬದಲಾವಣೆಯ ಆಶಯವನ್ನು. ಸಂನ್ಯಾಸ ಮತ್ತು ತ್ಯಾಗದ ಜಿಜ್ಞಾಸೆಯು ಗೀತೆಯಲ್ಲಿ ಅಂತಹ ಆಶಯಗಳ ತ್ಯಾಗಕ್ಕೆ ಮನೋಭೂಮಿಕೆಯನ್ನು ಸಿದ್ಧಗೊಳಿಸಲು ಅನುವಾಗಿದೆ. ಅದು ಹೇಗೆಂಬುದನ್ನು ಗೀತೆಯ ಮುಂದಿನ ಭಾಗದ ಪರಿಶೀಲನೆಯಿಂದ ತಿಳಿಯೋಣ.

ಈ ಸಂಬಂಧದಲ್ಲಿ ಶಂಕರನು ಒಂದು ಒಳ್ಳೆಯ ಆಕ್ಷೇಪವನ್ನು ಪ್ರಸ್ತಾಪಿಸಿರುವುದು ಸ್ವಾರಸ್ಯಕರವಾಗಿದೆ: ಕರ್ಮಗಳು ಎರಡು ವಿಧ, ನಿತ್ಯ ಮತ್ತು ನೈಮಿತ್ತಿಕ ಎಂದು. ಅವು ದ್ವಿಜರಿಗೆ ಮಾತ್ರ ಅನ್ವಯವಾಗುವಂಥವು, ಶೂದ್ರರಿಗೆ ಅವು ಅನ್ವಯವಾಗುವುದಿಲ್ಲ. ಉದಾಹರಣೆಗೆ, ಕ್ಷತ್ರಿಯನ ನಿತ್ಯಕರ್ಮವು ದೇವತಾಪೂಜೆ; ಅಶ್ವಮೇಧಯಾಗವು ನೈಮಿತ್ತಿಕ. ಅಶ್ವಮೇಧದ ಫಲವು ಬೇಕಿಲ್ಲದಿದ್ದರೆ ಅವನು ಅದನ್ನು ಕೈಗೊಳ್ಳಬೇಕಾಗಿಲ್ಲ. ಶೂದ್ರರಿಗಿರುವುದು ಕೇವಲ ನಿತ್ಯಕರ್ಮಗಳೇ; ಅವರಿಗೆ ನೈಮಿತ್ತಿಕ ಕರ್ಮಗಳ ಗೊಡವೆಯಿಲ್ಲ. ಶಂಕರನು ಎತ್ತಿರುವ ಆಕ್ಷೇಪವು ಸ್ವತಃ ಅವನದಲ್ಲ, ಅದನ್ನು ಎತ್ತಬಹುದಾದವರು ಲೋಕಾಯತರು ಮತ್ತು ಬೌದ್ಧರು. ಏನದು ಆಕ್ಷೇಪ? ನಿತ್ಯ ಮತ್ತು ನೈಮಿತ್ತಿಕ ಕರ್ಮಗಳು ಎಂಥವೋ ಫಲ ನೀಡುತ್ತವೆ ಎಂಬುದೇ ನಿಜವಲ್ಲದಿದ್ದಾಗ ಅವುಗಳ ಫಲತ್ಯಾಗಕ್ಕೆ ಅರ್ಥವೇನಿದೆ, ಎಂಬುದು ಆಕ್ಷೇಪ. ಅದಕ್ಕೆ ಪರಿಹಾರ ರೂಪದ ಉತ್ತರವೇನು? ಅವೂ ಫಲ ನೀಡುತ್ತವೆ, ಎಂಬುದಷ್ಟೇ ಉತ್ತರ.

ಈಗ ಮುಂದಿನ ಭಾಗಕ್ಕೆ ತೆರಳಿ ಶ್ರೀಭಗವಾನನ ವಾಣಿಯನ್ನು ಆಲಿಸಬಹುದು: "ಕೆಲವರು ಹೇಳುತ್ತಾರೆ, ಎಲ್ಲ ಕರ್ಮಗಳೂ ದೋಷಪೂರಿತವಾದುವೇ ಆದ್ದರಿಂದ ಎಲ್ಲ ಕರ್ಮಗಳನ್ನೂ ತ್ಯಜಿಸಬೇಕು, ಎಂದು; ಇತರರು ಹೇಳುತ್ತಾರೆ, ಯಜ್ಞ, ದಾನ, ತಪಸ್ಸು ಮುಂತಾದುವನ್ನು ತ್ಯಜಿಸಬಾರದು, ಎಂದು (೧೮.೩). ಆದರೆ ನನ್ನ ನಿಶ್ಚಿತ ಅಭಿಪ್ರಾಯವೇನೆಂದರೆ ಮೂಲತಃ 'ತ್ಯಾಗ' ಎಂಬುದರಲ್ಲಿ ಮೂರು ವಿಧಗಳಿವೆ (೧೮.೪). ಯಜ್ಞ, ದಾನ, ತಪಸ್ಸು, ಇಂತಹ ಕರ್ಮಗಳನ್ನು ಮಾಡಲೇಬೇಕು, ಅವು ತ್ಯಾಜ್ಯವಲ್ಲ; ಏಕೆಂದರೆ ಅವು ಪಾವನವಾದವು, ಅವು ಕಶ್ಮಲಗಳನ್ನು ತೊಡೆದುಹಾಕುವಂಥವು (೧೮.೫).




ಆದರೆ ಅವುಗಳನ್ನು ಸಹ ಫಲಾಪೇಕ್ಷೆ ಇಲ್ಲದೆ, ನಿರಾಸಕ್ತರಾಗಿ, ಮಾಡಬೇಕು (೬). ಏನೇ ಇರಲಿ, ನಿತ್ಯಕರ್ಮಗಳನ್ನು ಮಾತ್ರ ಬಿಡಲೇಕೂಡದು. ಹಾಗೇನಾದರೂ ಅವನ್ನು ಬಿಟ್ಟರೆ ಅದು ತಾಮಸಿಕ ಮೋಹದ ಪರಿಣಾಮವೇ ಆಗಿರುತ್ತದೆ (೧೮.೭: ನಿಯತಸ್ಯ ತು ಸಂನ್ಯಾಸಃ ಕರ್ಮಣೋ ನೋಪಪದ್ಯತೇ। ಮೋಹಾತ್ತಸ್ಯ ಪರಿತ್ಯಾಗಃ ತಾಮಸಃ ಪರಿಕೀರ್ತಿತಃ॥)."

ಮಧುಸೂದನ ಸರಸ್ವತಿಯು ಈ ಸಂದರ್ಭದಲ್ಲಿ ಸಾಂಖ್ಯದ್ದೆಂದು ಒಂದು ಆಕ್ಷೇಪವನ್ನು ಪ್ರಸ್ತಾಪಿಸಿದ್ದಾನೆ: ಕಾಮ್ಯ ಕರ್ಮಗಳಲ್ಲಿರುವಂತೆ (ಅಂದರೆ, ಯಜ್ಞದಲ್ಲಿ ಆಡನ್ನೋ ಕುದುರೆಯನ್ನೋ ಕೊಲ್ಲುವಂತೆ) ದರ್ಶ, ಪೂರ್ಣಮಾಸ, ಜ್ಯೋತಿಷ್ಟೋಮ, ಮುಂತಾದ ನಿತ್ಯ ಕರ್ಮಗಳಲ್ಲೂ ಭತ್ತಕ್ಕೋ ಅಥವಾ ಯಾವುದಾದರೂ ಪ್ರಾಣಿಗೋ ಹಾನಿಯುಂಟಾಗುತ್ತದೆ; ಶ್ರುತಿವಾಕ್ಯದ ಹೆಸರಿನಲ್ಲಿ ಇಂತಹ ಹಾನಿಯನ್ನು ಮನ್ನಿಸಲಾಗದು, ಎಂದು. ಇದಕ್ಕೆ ಒಂದೇ ಸಮಾಧಾನ ಹೀಗೆ ನೀಡಲಾಗಿದೆ: "ಯಜ್ಞದ ಆಚರಣೆಯಲ್ಲಿ ಕಾಣಬರುವ ಯಾವುದೇ ನೋವನ್ನು ಕೆಡುಕಿನ ಆಗರವೆನ್ನುವಂತಿಲ್ಲ, ಏಕೆಂದರೆ ಯಾವುದನ್ನು ಶ್ರುತಿಯು ವಿಧಿಸಿದೆಯೋ ಅದಕ್ಕೆ ನಿಷೇಧವು ಅನ್ವಯವಾಗುವುದಿಲ್ಲ."

ಹೀಗೆ ತಾಮಸಿಕ ಮೋಹದಿಂದ ನಿತ್ಯಕರ್ಮಗಳನ್ನು ಬಿಡಬಾರದೆಂದು ಹೇಳಿದ ಗೀತೆಯು ಮುಂದುವರಿದು ರಾಜಸಿಕ ಕಾರಣಗಳಿಂದ ನಿತ್ಯಕರ್ಮಗಳನ್ನು ತ್ಯಜಿಸುವುದನ್ನು ಕುರಿತು ಹೇಳುವುದಿದು: "ದೇಹಕ್ಕೆ ದಂಡನೆಯಾಗುತ್ತದೆಂಬ ಕಾರಣಕ್ಕೆ ಕರ್ಮಗಳನ್ನು ಮಾಡದಿರುವುದು ರಾಜಸಿಕವೆನಿಸಿಕೊಳ್ಳುತ್ತದೆ. ಹಾಗೆ ಮಾಡುವವರಿಗೆ ತ್ಯಾಗದ ಫಲವೇನೂ ಲಭಿಸುವುದಿಲ್ಲ" (೮: ದುಃಖಮಿತ್ಯೇವ ಯತ್ಕರ್ಮ ಕಾಯಕ್ಲೇಶಭಯಾತ್ ತ್ಯಜೇತ್। ಸ ಕೃತ್ವಾ ರಾಜಸಂ ತ್ಯಾಗಂ ನೈವ ತ್ಯಾಗಫಲಂ ಲಭೇತ್॥). ಆದ್ದರಿಂದ ಉಳಿಯುವುದು ಸಾತ್ವಿಕ ತ್ಯಾಗ; ಅದೇ ಸರ್ವಶ್ರೇಷ್ಠ. ಏಕೆಂದರೆ, ನಿತ್ಯಕರ್ಮವು ಆಚರಿಸಬೇಕಾದ ಕರ್ಮವೆಂಬ ಕಾರಣಕ್ಕಾಗಿಯೇ, ಯಾವ ಆಕಾಂಕ್ಷೆಯನ್ನೂ ಇಟ್ಟುಕೊಳ್ಳದೆ ಆಚರಿಸಲಾಗುವ ಕರ್ಮ ಅದು (೯: ಕಾರ್ಯಮಿತ್ಯೇವ ಯತ್ಕರ್ಮ ನಿಯತಂ ಕ್ರಿಯತೇಽರ್ಜುನ। ಸಂಗಂ ತ್ಯಕ್ತ್ವಾ ಫಲಂ ಚೈವ ಸ ತ್ಯಾಗಃ ಸಾತ್ವಿಕೋ ಮತಃ॥). ಕರ್ತೃವು ಫಲವನ್ನು ಅಪೇಕ್ಷಿಸದಿದ್ದರೂ ಫಲವಂತೂ ಇರುತ್ತದಂತೆ; ಹಣ್ಣಿಗಾಗಿ ಬೆಳೆದ ಮರವು ನೆರಳನ್ನೂ ನೀಡುತ್ತದಲ್ಲವೇ, ಹಾಗೆ. ಇದು ಆಪಸ್ತಂಬ ಧರ್ಮಸೂತ್ರದ ವಿವರಣೆ. ಅಂದರೆ, ಫಲತ್ಯಾಗದ ಭಾವದಿಂದ ಮಾಡಲಾಗುವ ಕರ್ಮವು ಸಹ ಫಲವನ್ನು ನೀಡುತ್ತದೆ ಎಂದರ್ಥ. ಹೇಗೂ ದಕ್ಕುವ ಫಲವನ್ನು ಸ್ವೀಕರಿಸುವುದೇ ಆದರೆ ಕರ್ಮಫಲವನ್ನು ತ್ಯಾಗ ಮಾಡಿ ಕರ್ಮನಿರತರಾಗುವುದು ಎಂಬುದರಲ್ಲಿ ವಿಶೇಷವೇನು? ಕರ್ತೃವಿನ ಅಂತಃಕರಣವು ಅಕಲುಷಿತವಾಗಿ ಉಳಿಯುತ್ತದೆ, ಎನ್ನುತ್ತಾನೆ ಶಂಕರ. ಸಾತ್ವಿಕ ತ್ಯಾಗಮೂರ್ತಿಯು ಮೇಧಾವಿಯಾಗಿದ್ದು ಸಂಶಯಗಳ ಬಾಧೆಯಿಂದ ನಿವೃತ್ತನಾಗಿರುತ್ತಾನೆ. ಯಾವುದರ ಬಗೆಗೂ ಅಂಥವರಿಗೆ ಅನುರಾಗ ಅಥವಾ ದ್ವೇಷದ ಭಾವನೆ ಇರುವುದಿಲ್ಲ (೧೮.೧೦). ಒಂದು ರೀತಿಯ ಸ್ಥಿತಪ್ರಜ್ಞತ್ವವನ್ನು ಮತ್ತೆ ಗೀತೆಯು ನಿರೂಪಿಸುತ್ತಿದೆ ಎನ್ನಲಡ್ಡಿಯಿಲ್ಲ. ಆದರೆ ಒಂದಂತೂ ನಿಜ: ದೇಹವನ್ನು ಹೊಂದಿರುವ ಜೀವಿಯು ಯಾವ ಕರ್ಮದಲ್ಲೂ ನಿರತನಾಗದೆ ಉಳಿಯುವುದು ಸಾಧ್ಯವಿಲ್ಲ. ಏನಿಲ್ಲವೆಂದರೆ ತನ್ನ ಶರೀರದ ಪೋಷಣೆಯನ್ನಾದರೂ ಮಾಡಿಕೊಳ್ಳಬೇಕಲ್ಲ! ಆದ್ದರಿಂದ ನಿಜಾರ್ಥದಲ್ಲಿ ತ್ಯಾಗಿಯೆಂದರೆ ಕರ್ಮಫಲವನ್ನು ತ್ಯಾಗ ಮಾಡಿರುವವನು ಎಂದೇ ಅರ್ಥವೆಂಬುದು ಗೀತೆಯ ನಿಷ್ಕರ್ಷೆ (೧೮.೧೧: ನ ಹಿ ದೇಹಭೃತಾ ಶಕ್ಯಂ ತ್ಯಕ್ತುಂ ಕರ್ಮಾಣಿ ಅಶೇಷತಃ। ಯಸ್ತು ಕರ್ಮಫಲತ್ಯಾಗೀ ಸ ತ್ಯಾಗೀತ್ಯಭಿಧೀಯತೇ॥). ಅಂಥವರಿಗೆ ಮರಣಾನಂತರದಲ್ಲಿ ಕೂಡ ಕರ್ಮಫಲದ ಲೇಶವೂ ಅಂಟಿಕೊಳ್ಳುವುದಿಲ್ಲ. ಇತರರಿಗಾದರೋ ಕರ್ಮಫಲವು ಮೂರು ವಿಧ: ಇಷ್ಟವಾದ್ದು, ಅನಿಷ್ಟವಾದ್ದು ಮತ್ತು ಅವೆರಡರ ಮಿಶ್ರಣ ಹೊಂದಿರುವುದು. ಅವು

ಜನ್ಮಾಂತರದಲ್ಲೂ ಅವರನ್ನು ಹಿಂಬಾಲಿಸುತ್ತವೆ! ಪುನರ್ಜನ್ಮಕ್ಕೆ ಘನವಾದ ಪುರಾವೆಯನ್ನೇನೂ ಒದಗಿಸಿಲ್ಲವಾದರೂ ಗೀತೆಯು ಪದೇ ಪದೇ ಜನ್ಮಾಂತರಗಳ ಮಾತನ್ನಾಡುತ್ತಿರುವುದು ಅದರ ಸ್ವಭಾವ. ಕರ್ಮಫಲವು ಯಾರನ್ನನುಸರಿಸಿ ಮುಂದಿನ ಜನ್ಮದ ಲೆಕ್ಕಪತ್ರಗಳಲ್ಲಿ ಕಾಣಿಸಿಕೊಳ್ಳಬೇಕು? ಅದಕ್ಕೆ ಉತ್ತರ ಕೊಡಲು ಆತ್ಮನ್ ಎಂಬುದರ ಕಲ್ಪನೆಯೂ ಅಗತ್ಯವಾಗುತ್ತದೆ.

ಕರ್ಮ, ಕರ್ಮಫಲ, ಕರ್ಮಫಲ ತ್ಯಾಗ, ಇತ್ಯಾದಿಗಳನ್ನು ಕುರಿತು ಅಮೂರ್ತವಾದ ಕಲ್ಪನೆಗಳನ್ನು ಬೋಧಿಸುವಾಗ ಗೀತೆಗೆ ಮೂಲಭೂತವಾದ ಬೇರೊಂದು ಪ್ರಶ್ನೆಯು ಎದುರಾಗುತ್ತದೆ. ದೇಹವಿರುವುದರಿಂದ ಕರ್ಮವೂ ಇರುತ್ತದೆ (೧೮.೧೧) ಮತ್ತು ಕರ್ಮದ ಹೊರೆಯನ್ನು ಹೊತ್ತು ಸಾಗಲು ಆತ್ಮ ಮತ್ತು ಪುನರ್ಜನ್ಮಗಳಿವೆ. ಗೀತೆಯ ತತ್ತ್ವಶಾಸ್ತ್ರವೂ ಸೇರಿದಂತೆ ಹಲವು ಭಾರತೀಯ ದರ್ಶನದ ಶಾಖೆಗಳು ಇದನ್ನು ಅಂಗೀಕರಿಸುತ್ತವೆ. ಕರ್ಮಾದಿಗಳು ಘಟಿಸುತ್ತಿರಲು ಕೇಂದ್ರಬಿಂದುವೊಂದು ಬೇಕಲ್ಲ, ಅದು ಯಾವುದು? ಶರೀರ ಮತ್ತು ಆತ್ಮ ಸಾಲುವುದಿಲ್ಲ. ಜೊತೆಗೆ ಇಂದ್ರಿಯಗಳು ಬೇಕು. ಆಗ ವಿವಿಧ ಕರ್ಮಗಳು ಸಾಧ್ಯ. ಎಲ್ಲವನ್ನೂ ನಿಯಂತ್ರಿಸಲು ಒಂದು ಹೊರಗಣ ಶಕ್ತಿಯನ್ನು ಸಹ ಗಣನೆಗೆ ತಂದುಕೊಳ್ಳಬೇಕು. ಗೀತೆಯು ಇದಕ್ಕಾಗಿ ಐದು ಸಾಮಗ್ರಿಗಳನ್ನು ಗುರುತಿಸುತ್ತದೆ: ಅಧಿಷ್ಠಾನ(ಶರೀರ), ಕರ್ತಾ(ಆತ್ಮ; ಇದರಲ್ಲಿ ಅಂತಃಕರಣ, ಅಹಂಕಾರ, ಬುದ್ಧಿ, ಎಲ್ಲಾ ಅಂತರ್ಗತವಾಗಿವೆ), ಕರಣ (ಇಂದ್ರಿಯಗಳು ಮತ್ತು ಮನಸ್ಸು), ಚೇಷ್ಟಾ (ಕ್ರಿಯೆಗಳು) ಮತ್ತು ದೈವ (೧೮.೧೪). ಎಲ್ಲ ಕ್ರಿಯೆಗಳಿಗೂ ಈ ಐದನ್ನು ಕಾರಣಗಳೆಂದು ಗುರುತಿಸಬಹುದು; ಕ್ರಿಯೆಗಳು ಸರಿಯಾದವೇ ಇರಲಿ, ದುಷ್ಟವಾದುವೇ ಇರಲಿ, ಮೇಲೆ ಹೇಳಿದ ಐದು ಸಾಮಗ್ರಿಗಳಂತೂ ಕಾರಣರೂಪದಲ್ಲಿ ಇರಲೇಬೇಕು (೧೮.೧೫): ಶರೀರ ವಾಕ್ ಮನೋಭಿಃ ಯತ್ ಕರ್ಮ ಪ್ರಾರಭತೇ ನರಃ। ನ್ಯಾಯ್ಯಂ ವಾ ವಿಪರೀತಂ ವಾ ಪಂಚೈತೇ ತಸ್ಯ ಹೇತವಃ॥). ಆದ್ದರಿಂದ ಆತ್ಮನ್ ಒಂದೇ ಎಲ್ಲ ವ್ಯವಹಾರಗಳಿಗೂ ಕಾರಣವೆಂದು ತಿಳಿಯುವುದು ಸಲ್ಲದು, ಎನ್ನುತ್ತದೆ ಗೀತೆ. ಏಕೆಂದರೆ, ಸ್ವಭಾವತಃ ಆತ್ಮನ್ ಎಂಬುದು ನಿರಪೇಕ್ಷವಾದ್ದು (೧೮.೧೬).

ಇದನ್ನೆಲ್ಲಾ ಗೀತೆಯು ವಿಸ್ತಾರವಾಗಿ ಪರಾಮರ್ಶೆ ಮಾಡುವುದು ಪರಮಜ್ಞಾನಿಗೆ ಈ ಪ್ರಕ್ರಿಯೆಗಳೆಲ್ಲಾ ಅನ್ವಯಿಸುವುದಿಲ್ಲವೆಂಬುದನ್ನು ಪ್ರತಿಪಾದಿಸುವುದಕ್ಕೋಸ್ಕರ ಎಂಬುದನ್ನು ಒತ್ತಿಹೇಳಬೇಕು. ಎರಡನೆಯ ಅಧ್ಯಾಯದ "ನಾಯಂ ಹಂತಿ ನ ಹನ್ಯತೇ" ಮತ್ತು "ನ ಜಾಯತೇ ಮ್ರಿಯತೇ ವಾ ಕದಾಚಿತ್" (೨.೧೯–೨೦) ಎಂಬುದಕ್ಕೆ ಸಂವಾದಿಯಾದ್ದು ಇದು. ಆತ್ಮನ್ ಎಂಬುದು ಆದಿ–ಅಂತ್ಯ ರಹಿತವಾದ್ದು, ನಿತ್ಯವಾದ್ದು, ಎಂಬುದು ಪರಮತ್ಯಾಗಿಯ ಅನುಭವ ಲೋಕಕ್ಕೆ ದಕ್ಕಿದಾಗ ಇಷ್ಟ–ಅನಿಷ್ಟ–ಮಿಶ್ರ ಎಂಬ ಕರ್ಮಫಲಗಳು ಅಂಥವನಿಗೆ ಅನ್ವಯಿಸುವುದಿಲ್ಲ ಎಂಬುದು ಗೀತೆಯ ಮಥಿತಾರ್ಥ. ಇದನ್ನು ಶಂಕರರು ಹೇಗೆ ಸಂಗ್ರಹಿಸಿ ಹೇಳಿದ್ದಾರೆಂಬುದನ್ನು ಗಮನಿಸಬಹುದು: ಏವಂ ಚ ಸತಿ ದೇಹಭೃತ್ತ್ವ ಅಭಿಮಾನ ಅನುಪಪತ್ತೌ (ದೇಹವನ್ನು ಧರಿಸಿದ್ದೇನೆಂಬ ಅಭಿಮಾನದ ಅಭಾವದಲ್ಲಿ) ಅವಿದ್ಯಾಕೃತ ಅಶೇಷ ಕರ್ಮ ಸಂನ್ಯಾಸ ಉಪಪತ್ತೇಃ (ಅವಿದ್ಯೆಯಿಂದ ಆವೃತವಾಗಿದ್ದ ಹಂತವನ್ನು ದಾಟಿ ಕರ್ಮಗಳನ್ನೆಲ್ಲಾ ಸಂಪೂರ್ಣವಾಗಿ ತ್ಯಾಗ ಮಾಡಿರುವುದರಿಂದ) ಸಂನ್ಯಾಸಿನಾಂ ಅನಿಷ್ಟಾದಿ ತ್ರಿವಿಧಂ ಕರ್ಮಣಃ ಫಲಂ ನ ಭವತಿ ಇತಿ ಉಪಪನ್ನಂ ತದ್ವಿಪರ್ಯಯಾತ್ ಚ ಇತರೇಷಾಂ ಭವತಿ ಇತಿ ಏತತ್ ಚ ಅಪರಿಹಾರ್ಯಂ ಇತಿ ಏಷ ಗೀತಾಶಾಸ್ತ್ರಸ್ಯ ಅರ್ಥ ಉಪಸಂಹೃತಃ॥

ಇದೆಲ್ಲಾ ಎಷ್ಟೇ ಅಮೂರ್ತವೆನಿಸಲಿ, ಕ್ಲಿಷ್ಟವಾಗಿರಲಿ, ಅದನ್ನು ಸಾವಧಾನದಿಂದ ಯಥಾಶಕ್ತಿ ಗ್ರಹಿಸುವುದು ಅಗತ್ಯ ಮತ್ತು ಅನಿವಾರ್ಯ. ಏಕೆಂದರೆ ಮುಕ್ತಾಯದ ಹಂತದಲ್ಲಿ ಗೀತೆಯ ಕರ್ತೃವು ಮಹತ್ತರವಾದ ತೀರ್ಮಾನಗಳನ್ನು ಪ್ರಕಟಿಸುವವನಿದ್ದಾನೆ. ಸಾಮಾಜಿಕ ಯಥಾಸ್ಥಿತಿವಾದವು ಸರ್ವಥಾ ಅಂಗೀಕರಿಸಬೇಕಾದ ಸಿದ್ಧಾಂತವೆಂದು ನಿಷ್ಠುರವಾಗಿ ಸ್ಥಾಪಿಸುವುದಕ್ಕೆ ಪರಮಜ್ಞಾನ, ಸಂನ್ಯಾಸ, ಕರ್ಮಫಲತ್ಯಾಗ, ಇವೆಲ್ಲಾ ಭದ್ರವಾದ ಅಡಿಗಲ್ಲುಗಳಾಗಿವೆ. ಸಾಮಾಜಿಕ ವ್ಯವಸ್ಥೆಯಲ್ಲಿ ಪಲ್ಲಟವನ್ನು ನಿರೀಕ್ಷಿಸುವುದು ಮತ್ತು ಅಪೇಕ್ಷಿಸುವುದು ಯೋಗ್ಯವಲ್ಲವೆಂಬುದು ಗೀತೆಯ ಮೂಲ ಸಿದ್ಧಾಂತ. ಅದನ್ನು ಅಪೇಕ್ಷಿಸುವವರಿದ್ದಾರೆ, ಯುದ್ಧವು ಅವರ ಅಪೇಕ್ಷೆಯು ಸಫಲವಾಗಲು ಕಾರಣವಾಗಿಬಿಟ್ಟೀತು ಎಂಬುದು ಮೊದಲ ಅಧ್ಯಾಯದಲ್ಲಿ ಎತ್ತಲಾದ ಪ್ರಶ್ನೆಗಳ ಇಂಗಿತ ಮತ್ತು ಆತಂಕ. ಅದನ್ನು ನಿರಾಕರಿಸುವುದು ಕೊನೆಯ ಅಧ್ಯಾಯದ ಬಿಗಿ ಪಟ್ಟು. ವಿಚಾರಗಳ ದ್ವಂದ್ವವು ಏರ್ಪಟ್ಟಿರುವಾಗ, ತನ್ನ ನಿಲುವನ್ನು ಸಮರ್ಥವಾಗಿ ಮಂಡಿಸಲು ಗೀತೆಯ ಕರ್ತೃವು ಅಮೂರ್ತ ಸಂಗತಿಗಳ ಅಡಿಪಾಯದ ಮೇಲೆ ಮೂರ್ತವಾದ ಸಾಮಾಜಿಕ ವ್ಯವಸ್ಥೆಯ ತತ್ತ್ವವನ್ನು ಕಟ್ಟುವವನಿದ್ದಾನೆ. ಮೋಕ್ಷ–ಸಂನ್ಯಾಸ ಯೋಗವೆಂಬ ಹೆಸರಿನಡಿ ಬಂಧನ – ಕಟ್ಟುನಿಟ್ಟು ವ್ಯವಸ್ಥೆ ಎಂಬ ಸೌಧದ ನಿರ್ಮಾಣವನ್ನು ಅಪ್ರತಿಮ ಪ್ರತಿಭಾವಂತನಾದ ಗೀತೆಯ ಕರ್ತೃವು ಹೇಗೆ ನಿಭಾಯಿಸುತ್ತಾನೆ ಎಂಬುದನ್ನು ಸೂಕ್ಷ್ಮವಾಗಿ ಗಮನಿಸಬೇಕು. ಅದಕ್ಕಾಗಿ ಗೀತಾಚಾರ್ಯನ ಜೊತೆ ನಾವು ಪ್ರತಿಯೊಂದು ಮೆಟ್ಟಿಲನ್ನೂ ಹತ್ತುತ್ತಾ ಸಾಗಬೇಕು. ನಿಧಾನಗತಿ ಮತ್ತು ಸಹನೆ ಎರಡೂ ಅದಕ್ಕೆ ಅವಶ್ಯಕ.

ಗೀತೆಯ ಅರ್ಥೈಸುವಿಕೆಯ ಸಂದರ್ಭದಲ್ಲಿ ಇನ್ನೊಂದು ಮಹತ್ವದ ಸಂಗತಿಯನ್ನು ಗಮನಿಸಬೇಕು. ಸಂನ್ಯಾಸ ಮತ್ತು ತ್ಯಾಗ ಎಂಬ ಪರಿಕಲ್ಪನೆಗಳನ್ನು ವಿವರಿಸುವಾಗ ಬಹಳ ಒತ್ತುಕೊಟ್ಟು ಪ್ರಶಂಸಿಸಲಾಗಿರುವುದು ಕರ್ಮಫಲದ ತ್ಯಾಗ ಎಂಬುದನ್ನು. ಕರ್ಮಯೋಗವೆಂಬ ಮೂರನೆಯ ಅಧ್ಯಾಯದಲ್ಲಿ ಮುಂಚೆಯೇ ಅದನ್ನು ಶ್ಲಾಘಿಸಿ ಅದೊಂದು ಘನವಾದ ಮೌಲ್ಯವೆಂಬಂತೆ ಪ್ರತಿಫಲಿಸಲಾಗಿತ್ತು. ಅದೇ ನಂತರದ ಕಾಲದಲ್ಲಿ 'ನಿಷ್ಕಾಮಕರ್ಮ' ಎಂಬ ನಾಮಾಂಕಿತವನ್ನು ಪಡೆಯಿತು. ಗೀತೆಗೆ ಮುಂಚೆ ಭಾರತೀಯ ದರ್ಶನಗಳಲ್ಲಿ ಮತ್ತು ಸಂಸ್ಕೃತಿಯಲ್ಲಿ ಎಲ್ಲೂ ಕರ್ಮಫಲ ತ್ಯಾಗದ ಪ್ರಸ್ತಾಪವು ಬಂದಿಲ್ಲ. ತತ್ತ್ವಶಾಸ್ತ್ರಕ್ಕೆ ಬುನಾದಿಯೆಂದು ಪರಿಗಣಿಸಲಾಗಿರುವ ಉಪನಿಷತ್ತುಗಳಲ್ಲೆಲ್ಲೂ ಅದರ ಸುಳಿವಿಲ್ಲ. ಬೃಹದಾರಣ್ಯಕ ಉಪನಿಷತ್ತಿನಲ್ಲಿ ಆಚಾರ್ಯ ಸ್ಥಾನದಲ್ಲಿರುವ ಯಾಜ್ಞವಲ್ಕ್ಯನಂಥವರು ತತ್ತ್ವ ಬೋಧನೆ ಮಾಡಿ ಸಾವಿರಾರು ಗೋವುಗಳನ್ನು ದಕ್ಷಿಣೆಯಾಗಿ ಪಡೆಯಲು ಅಂಜುವುದಿಲ್ಲ. ಛಾಂದೋಗ್ಯ ಉಪನಿಷತ್ತಿನಲ್ಲಿ ಜಾನಶ್ರುತಿಗೆ ಬೋಧನೆ ನೀಡುವ ರೈಕ್ವನು ಶಿಷ್ಯನ

ಮಗಳನ್ನು ನೋಡಿ ಆನಂದಿಸಿದ ನಂತರವೇ ಉಪದೇಶ ನೀಡಲು ಮುಂದಾಗುತ್ತಾನೆ. 'ಶ್ರೇಯಸ್' ಮತ್ತು 'ಪ್ರೇಯಸ್'ಗಳಲ್ಲಿ 'ಪ್ರೇಯಸ್' ಎಂಬುದು ಕಳಪೆಯ ಸ್ಥಾನವನ್ನು ಹೊಂದಿದೆಯೆಂದು ನಂಬುವ ನಚಿಕೇತನು ಯಮನಿಂದ ಉಪದೇಶ ಪಡೆದಾಗ ಕರ್ಮಫಲ ತ್ಯಾಗದ ಲವಲೇಶ ಸೂಚನೆಯೂ ಇಲ್ಲ. ನಂತರದ ಬೌದ್ಧ ಸಾಹಿತ್ಯದಲ್ಲಾಗಲಿ ಧರ್ಮಶಾಸ್ತ್ರಗಳಲ್ಲಾಗಲಿ ಕರ್ಮಫಲವನ್ನು ನಿರೀಕ್ಷಿಸಬಾರದೆಂಬ ಸೂಚನೆ ಎಲ್ಲೂ ಬಂದಿಲ್ಲ. ತಮ್ಮ ದುಡಿಮೆಯನ್ನು ನೀಡಿದ ಶೂದ್ರರಿಗೆ ಪ್ರತಿಫಲ ನೀಡಿದರೂ ಸರಿ, ನೀಡದಿದ್ದರೂ ಸರಿ, ಅವರಿಂದಂತೂ ಸದಾ ಸೇವೆಯನ್ನು ಪಡೆಯಬೇಕೆಂದು ವಿಧಿಸುವ ಧರ್ಮಶಾಸ್ತ್ರ ಗ್ರಂಥಗಳು ಬಲವಂತವಾಗಿ ಅವರಿಂದ ಕರ್ಮಫಲದ ತ್ಯಾಗ ಮಾಡಿಸಿದುವೇ ವಿನಾ ಅಂತಹ ತ್ಯಾಗವನ್ನು ಮೌಲ್ಯವೆಂದು ಪರಿಗಣಿಸಲಿಲ್ಲ. "ಶೂದ್ರಂ ತು ಕಾರಯೇತ್ ದಾಸ್ಯಂ ಕ್ರೀತಂ ಅಕ್ರೀತಮೇವ ವಾ" ಎಂದ ಮನುವಿಗೆ ಕರ್ಮಫಲ ತ್ಯಾಗದಿಂದ ಶೂದ್ರರು ಶ್ರೇಷ್ಠರೆನಿಸಿಕೊಳ್ಳುತ್ತಾರೆ ಎಂಬ ಯೋಚನೆ ಎಂದೂ ಬರಲಿಲ್ಲ. ಅಶೋಕನ ಶಾಸನಗಳಲ್ಲಂತೂ ಅಂತಹ ತ್ಯಾಗದ ಛಾಯೆ ಸುತರಾಂ ಇಲ್ಲ. ಹೀಗಿರುವಾಗ ಗೀತೆಯು ಅದನ್ನು ಅತಿಯಾಗಿ ವೈಭವೀಕರಿಸಿರುವುದನ್ನು ವಿಮರ್ಶಾತ್ಮಕವಾಗಿ ಸಹನೆಯಿಂದ ಅರ್ಥಮಾಡಿಕೊಳ್ಳುವುದು ತತ್ತ್ವಶಾಸ್ತ್ರ ಹಾಗೂ ಮತಧರ್ಮದ ಅಧ್ಯಯನಗಳಲ್ಲಿ ತೀರಾ ಅಗತ್ಯ. ಕರ್ಮಫಲ ತ್ಯಾಗವೆಂಬುದು ಒಂದು ಚಾರಿತ್ರಿಕ ಪರಿಕಲ್ಪನೆ ಎಂಬುದು ನಿಜ; ಅದು ಶ್ರೇಷ್ಠವೋ, ಇಲ್ಲವೇ ಮಾರ್ಮಿಕವೋ, ಎಂಬುದನ್ನು ಪರೀಕ್ಷಿಸಿ ನೋಡಬೇಕು. ಹಿಂದಿನ ಅಧ್ಯಾಯಗಳಲ್ಲಿ ಅದನ್ನೇನೂ ತೇಲಿಸಿ ಹೇಳಿಲ್ಲ, ಆದರೆ ಗೀತೆಯ ಕಡೆಯ ಅಧ್ಯಾಯದಲ್ಲಿ ಅದಕ್ಕೆ ವಿಶಿಷ್ಟವಾದ ಒತ್ತು ನೀಡಲಾಗಿರುವುದು ಗಮನಾರ್ಹ. ಸಾಮಾಜಿಕ ಏಣಿಯಲ್ಲಿ ಒಂದೊಂದು ವರ್ಣದವರು ಒಂದೊಂದು ಮೆಟ್ಟಿಲಿನಲ್ಲಿ ನಿಲ್ಲುವ ನಿಯಮವು ಶ್ರೇಷ್ಠ–ಕನಿಷ್ಠ ಎಂಬ ಶ್ರೇಣಿಯನ್ನು ಸಹಜವಾಗಿಯೇ ನಿರ್ಮಿಸಿದೆ. ಅದನ್ನು ಅಂಗೀಕರಿಸದ ಜನವಿಭಾಗವು ನಮ್ಮ ದೇಶದ ಇತಿಹಾಸದಲ್ಲಿ ದೊಡ್ಡದನಿಯಾಗಿ ತಲೆಯೆತ್ತಿದ್ದು ಲೋಕಾಯತ ಮತ್ತು ಬೌದ್ಧ ತತ್ತ್ವಶಾಸ್ತ್ರ ಪರಂಪರೆಗಳಲ್ಲಿ. ಆ ದನಿಯು ಅರ್ಜುನನನ್ನು ಆತಂಕಕ್ಕೆ ಗುರಿಮಾಡಿತು. ಈ ಅರ್ಜುನನು ಮಹಾಭಾರತ ಮಹಾಕಾವ್ಯದ ಅರ್ಜುನನಲ್ಲ; ಸಾಮಾಜಿಕ ವ್ಯವಸ್ಥೆಯನ್ನು ತೀವ್ರವಾಗಿ ಪ್ರಶ್ನಿಸಿದವರಿಂದಾಗಿ ಕಸಿವಿಸಿಗೊಂಡ "ಉಚ್ಚ" ವರ್ಣಗಳವರ ಪ್ರತಿನಿಧಿ ಅವನು; ವರ್ಣ ವಿಭಜನೆಯು ನಿಜಕ್ಕೂ ಶಾಶ್ವತವಾಗಿ ಉಳಿಯಬೇಕೆಂದು ಹಾರೈಸಿದ ಜನವಿಭಾಗದ ಮುಖವಾಣಿ ಅವನು. ತತ್ತ್ವಶಾಸ್ತ್ರ, ನೀತಿಶಾಸ್ತ್ರ, ತ್ರಿಗುಣಾತ್ಮಕ ವ್ಯಕ್ತಿತ್ವಗಳು, ಮುಂತಾದ ಚಿಂತನೆಗಳ ಆಧಾರದಿಂದ ಸ್ವ–ಧರ್ಮವೆಂಬ ವರ್ಣಧರ್ಮವು ಶ್ರೇಯಸ್ಕರ, ಅದನ್ನು ಶಿರಸಾ ವಹಿಸಿ ಪಾಲಿಸುವುದು ಶ್ರೇಷ್ಠ ಮಾರ್ಗ, ಎಂದು ಬೋಧಿಸುವ ಗ್ರಂಥ ಭಗವದ್ಗೀತೆ. ಆದರೆ ಅದಷ್ಟೇ ಅದರ ಆಯಾಮವಲ್ಲವೆಂಬುದು ಸಹ ಅಷ್ಟೇ ಸತ್ಯ. ಇದೆಲ್ಲದರ ಅನುಸಂಧಾನ ಮಾಡಿಕೊಳ್ಳುತ್ತಾ ಗೀತೆಯ ಕಡೆಯ ಅಧ್ಯಾಯದ ಇನ್ನುಳಿದ ಭಾಗದತ್ತ ಚಿತ್ತ ಹರಿಸೋಣ.

ಯಾವುದನ್ನು ಅರಿಯಲು ಚಿಂತನೆಯಲ್ಲಿ ತೊಡಗಲಾಗುತ್ತದೋ ಅದನ್ನು 'ಪ್ರಮೇಯ' (ಅಥವಾ ಚಿಂತನಾ ವಿಷಯ) ಎನ್ನುತ್ತಾರೆ. ಹಾಗೆ ಅರಿವಿಗಾಗಿ ಚಿಂತನೆ ನಡೆಸುವ ವ್ಯಕ್ತಿಯು 'ಪ್ರಮಾತೃ' ಎನಿಸಿಕೊಳ್ಳುತ್ತಾಳೆ. ಅರಿವು ಪಡೆಯುವ ಪ್ರಕ್ರಿಯೆಗೆ 'ಪ್ರಮಾಣ' ಎಂಬ ಹೆಸರಿದೆ. ಈ ಮೂರನ್ನೂ 'ತ್ರಿಪುಟಿ' ಎಂಬ ಸಂಜ್ಞೆಯಿಂದ ಗುರುತಿಸಲಾಗುತ್ತದೆ. ಜ್ಞೇಯ, ಜ್ಞಾತೃ ಮತ್ತು ಜ್ಞಾನ ಎಂದು ಪರಿಭಾವಿಸಿದಾಗಲೂ ಅದೇ ತ್ರಿಪುಟಿ ಇರುತ್ತದೆ. ಮೋಕ್ಷ, ಮೋಕ್ಷಾರ್ಥಿ ಮತ್ತು ಮೋಕ್ಷಮಾರ್ಗ ಎಂಬುವನ್ನು ಬೇಕಾದರೂ ತ್ರಿಪುಟಿ ಎಂದು ಕರೆಯಲಡ್ಡಿಯಿಲ್ಲ. ಕರ್ಮ, ಕರ್ತೃ, ಕ್ರಿಯೆ ಅಥವಾ ಕ್ರಿಯಾವಿಧಾನ ಎಂಬುದೂ ತ್ರಿಪುಟಿಯಾಗಬಲ್ಲದು. ಇಲ್ಲೆಲ್ಲಾ ಒಂದು ಪ್ರಕ್ರಿಯೆ ಇದೆ, ಅದಕ್ಕೊಂದು ವಿಧಾನವಿದ್ದಂತೆ ಉದ್ದೇಶವೂ ಇದೆ. ಜ್ಞಾತೃವು ಜ್ಞೇಯದ ಬಗ್ಗೆ ಜ್ಞಾನ ಪಡೆಯುವುದರಲ್ಲಿ ವಿಧಾನವಿದೆ, ಉದ್ದೇಶವಿದೆ. ಹಾಗಿರುವಾಗ, ಪ್ರಕ್ರಿಯೆಯ ಫಲವಾದ ಜ್ಞಾನದಲ್ಲಿ ಜ್ಞಾತೃವಿಗೆ ನಿರಾಸಕ್ತಿ ಇರಬೇಕು ಅಥವಾ ಜ್ಞಾತೃವು ಆಸಕ್ತಿಯ ತ್ಯಾಗ ಮಾಡಬೇಕು ಎಂದರೆ ತ್ರಿಪುಟಿಯು ಕೊಂಚ ಭಗ್ನವಾಗಿಬಿಡುವುದಿಲ್ಲವೆ? ಇದೇ ಮಾದರಿಯು ಕರ್ತೃವಿನ ಕ್ರಿಯೆಗೂ ಅನ್ವಯವಾಗುವುದಾದರೆ ಕರ್ಮಫಲವು ಹೇಗೆ ತಾನೆ ಅಪ್ರಸ್ತುತವಾದೀತು!

ತ್ರಿಪುಟಿಯನ್ನು ಗೀತೆಯು ಬಹಳ ಸ್ಪಷ್ಟವಾಗಿ ಗುರುತಿಸುತ್ತದೆ. ಜ್ಞಾನ, ಜ್ಞೇಯ ಮತ್ತು ಪರಿಜ್ಞಾತೃ (ಅಥವಾ ಜ್ಞಾತೃ) ಇದ್ದಾಗಲೇ ಒಂದು ತಿಳಿವಿನ ಚಟುವಟಿಕೆ ಆರಂಭವಾಗಬಲ್ಲದು. ಅಂತೆಯೇ ಕರಣ (ಜ್ಞಾನೇಂದ್ರಿಯಗಳು ಮತ್ತು ಕರ್ಮೇಂದ್ರಿಯಗಳು), ಕರ್ಮ (ಉದ್ದೇಶಿತ ಕ್ರಿಯೆ) ಮತ್ತು ಕರ್ತೃ ಇದ್ದಾಗಲೇ ಕರ್ಮಪ್ರಕ್ರಿಯೆ ಸಾಧ್ಯವಾಗಬಲ್ಲದು (೧೮.೧೮ : ಜ್ಞಾನಂ ಜ್ಞೇಯಂ ಪರಿಜ್ಞಾತಾ ತ್ರಿವಿಧಾ ಕರ್ಮಚೋದನಾ। ಕರಣಂ ಕರ್ಮ ಕರ್ತೇತಿ ತ್ರಿವಿಧಃ ಕರ್ಮಸಂಗ್ರಹಃ॥). "ಕರ್ಮ" ಎಂಬುದಕ್ಕೆ ಶಂಕರರು ನೀಡುವ ವ್ಯಾಖ್ಯಾನವು ಬೋಧಪ್ರದವಾಗಿದೆ : ಕರ್ಮ ಈಪ್ಸಿತತಮಂ ಕರ್ತುಃ ಕ್ರಿಯಯಾ ವ್ಯಾಪ್ಯಮಾನಂ.

ಸುಲಭಗ್ರಾಹ್ಯವಾಗಿರುವಂತೆ ಇಲ್ಲಿ ಎರಡು ತ್ರಿಪುಟಿಗಳನ್ನು ಹೇಳಲಾಗಿದೆ. ಗೀತೆಯು ತ್ರಿಪುಟಿಯಲ್ಲಿ ಕೂಡ ಮೂರು ಗುಣಗಳ ಪ್ರಭಾವದಿಂದ ಉಂಟಾಗುತ್ತದೆನ್ನಲಾದ ವೈವಿಧ್ಯವನ್ನು ಗುರುತಿಸುತ್ತದೆ. ಅರ್ಥಾತ್, ಜ್ಞಾನವು ಸಾತ್ವಿಕ, ರಾಜಸಿಕ ಮತ್ತು ತಾಮಸಿಕ ಎಂಬ ಪ್ರಭೇದವನ್ನು ಹೊಂದಿದೆ; ಅಂತೆಯೇ ಕರ್ಮವು ಸಹ ಮೂರು ವಿಧಗಳಲ್ಲಿರುತ್ತದೆ (೧೮.೧೯). ಹಾಗಿದ್ದರೆ ಸಾತ್ವಿಕ ಜ್ಞಾನ ಯಾವುದು? ಇಲ್ಲಿ ಜ್ಞಾನದ ಪ್ರಖರತೆಯು ಅಳತೆ ಗೋಲಲ್ಲ; ಬದಲಾಗಿ, ಜ್ಞಾನವು ಎಂಥದು ಎಂಬುದು ಮುಖ್ಯವಾಗುತ್ತದೆ. ಶಂಕರನ ಪ್ರಾತಿಭಾಸಿಕ, ವ್ಯಾವಹಾರಿಕ ಮತ್ತು ಪಾರಮಾರ್ಥಿಕ ಜ್ಞಾನ ಭೇದಗಳು ಸಹ ಇಲ್ಲಿ ಗೌಣ. "ಬಹುತ್ವದ ಪದಾರ್ಥಗಳಲ್ಲಿ ಒಂದು ಸತ್ವವನ್ನು ಕಾಣುವುದು ಸಾತ್ವಿಕ ಜ್ಞಾನ" (೧೮.೨೦ : ಸರ್ವಭೂತೇಷು ಯೇನ ಏಕಂ ಭಾವಂ ಅವ್ಯಯಂ ಈಕ್ಷತೇ। ಅವಿಭಕ್ತಂ ವಿಭಕ್ತೇಷು ತತ್ ಜ್ಞಾನಂ ವಿದ್ಧಿ ಸಾತ್ವಿಕಂ॥). "ಸರ್ವಂ ಖಲ್ವಿದಂ ಬ್ರಹ್ಮ" ಎಂಬುದೇ ಪರಮಜ್ಞಾನ ಎಂಬ ಉಪನಿಷದ್ವಾಕ್ಯವನ್ನು ಗೀತೆಯು ನೆನಪಿಸುತ್ತಿದೆ ಎನ್ನಬಹುದು. ಬಹುತ್ವವನ್ನು ಬಹುತ್ವವಾಗಿಯೇ ಗ್ರಹಿಸುವುದು ರಾಜಸಿಕ ಜ್ಞಾನ. ಪ್ರತ್ಯೇಕವಾದ ಪದಾರ್ಥಗಳನ್ನು ಒಂದರ ಪ್ರತೀಕವೆಂದು ಭಾವಿಸದಿರುವುದು ಎಂದು ಬೇಕಾದರೂ ಅದನ್ನು ವ್ಯಾಖ್ಯಾನಿಸಿಕೊಳ್ಳಬಹುದು. "ಅವಿವೇಕಿಗಳ ಜ್ಞಾನವು ತಾಮಸಿಕ ಜ್ಞಾನ" (ತಾಮಸಾನಾಂ ಹಿ ಪ್ರಾಣಿನಾಂ ಅವಿವೇಕಿನಾಂ ಈದೃಶಂ ಜ್ಞಾನಂ ದೃಶ್ಯತೇ) ಎಂದು ಶಂಕರರು ಗೀತೆಯ ಭಾವವನ್ನು ಸಂಗ್ರಹಿಸಿದ್ದಾನೆ. ಗೀತೆಯ ಉಕ್ತಿಯು ಹೀಗಿದೆ : ಒಂದು ವಸ್ತುವಷ್ಟೇ ಸರ್ವಸ್ವವೆಂದು ಅತಾರ್ಕಿಕವಾಗಿ ಭಾವಿಸಲಾಗುವುದು, ಸತ್ಯವನ್ನು ಕಡೆಗಣಿಸುವಂಥದು, ಅಲ್ಪವಾದ್ದು, ತಾಮಸಿಕ ಜ್ಞಾನ (೧೮.೨೨ : ಯತ್ತು ಕೃತ್ಸ್ನವತ್ ಏಕಸ್ಮಿನ್ ಕಾರ್ಯೇ ಸಕ್ತಂ ಅಹೈತುಕಂ। ಅತತ್ತ್ವಾರ್ಥವತ್ ಅಲ್ಪಂ ಚ ತತ್ ತಾಮಸಂ ಉದಾಹೃತಂ॥). ಮಧುಸೂದನ ಸರಸ್ವತಿಯು ಇದು ಜೈನ ಮತ್ತು ಚಾರ್ವಾಕ ಪದ್ಧತಿಯೆಂದು ಹೆಸರಿಸಿದ್ದಾನೆ. ಆತ್ಮದ ಗಾತ್ರವು ಅದಕ್ಕೆ ಸಂಬಂಧಿಸಿದ ದೇಹದ ಪ್ರಮಾಣದ್ದೆಂಬ ಜೈನ ತತ್ವವನ್ನು ಅವನು ಉದಾಹರಿಸಿದ್ದಾನೆ; ಅಂದರೆ ಇರುವೆಯಷ್ಟು ಗಾತ್ರದ್ದು ಇರುವೆಯ ಆತ್ಮ, ಆನೆಯ ಗಾತ್ರದ್ದು ಆನೆಯ ಆತ್ಮ ಎಂಬುದನ್ನು ಟೀಕಿಸಿದ್ದಾನೆ. ದೇಹವೇ ಆತ್ಮವೆಂಬ ಚಾರ್ವಾಕವಾದವನ್ನು ಸಹ ಟೀಕಿಸಿದ್ದಾನೆ. ಕಲ್ಲಿನಲ್ಲೋ ಕಟ್ಟಿಗೆಯಲ್ಲೋ ದೇವರಿದ್ದಾನೆ ಎಂದು ಭಾವಿಸುವವರ ಜ್ಞಾನವೂ ತಾಮಸಿಕವಂತೆ. ಅಂದರೆ, ಪ್ರತಿಮೆಯೇ ದೇವರು ಎಂಬ ಭಾವ.

ಒಂದು ಸಮಾಧಾನದ ಸಂಗತಿಯೆಂದರೆ ಗೀತೆಯು ಜ್ಞಾನದ ಪ್ರಕಾರಗಳನ್ನು ಗುಣಾತ್ಮಕತೆಯ ಆಧಾರದಿಂದ ಭಿನ್ನೈಸುವಾಗ ನೇರವಾಗಿ ತಾಮಸಿಕ ಗುಣದವರು ಪಡೆಯುವ ಜ್ಞಾನವು ತಾಮಸಿಕ ಗುಣ ಉಳ್ಳದ್ದೆಂದು ಹೇಳಿಲ್ಲದಿರುವುದು. ಅದು ಸಾತ್ವಿಕ ಮತ್ತು ರಾಜಸಿಕ ಜ್ಞಾನಗಳಿಗೂ ಅನ್ವಯವಾಗುತ್ತದೆ. ವಾಚ್ಯವಾಗಿ ಅಲ್ಲದಿದ್ದರೂ ಅಂತಹ ಗ್ರಹಿಕೆಯನ್ನು ಗೀತೆಯು ವ್ಯಂಜಿಸಿದ್ದರೆ ಆಶ್ಚರ್ಯಪಡಬೇಕಾಗಿಲ್ಲ. ಜ್ಞಾನವನ್ನು ತರ್ಕಶುದ್ಧವಾದ್ದು ಮತ್ತು ತರ್ಕಶುದ್ಧವಲ್ಲದ್ದು ಎಂದಷ್ಟೇ ಭಿನ್ನೈಸುವುದು ಗೀತೆಗೆ ರುಚಿಸುವುದಿಲ್ಲ. ಶ್ರೀಭಗವಾನನಲ್ಲಿ ಸರ್ವಸ್ವವೂ ಅಡಗಿದೆ ಅಥವಾ ಸರ್ವಸ್ವವೂ ಶ್ರೀಭಗವಾನನೇ ಆಗಿದ್ದಾನೆ ಎಂಬ ಜ್ಞಾನವು ಶ್ರೇಷ್ಠಜ್ಞಾನವೆಂಬುದು ಗೀತೆಗೆ ಆಪ್ತವಾದ್ದು, ಅಂತಿಮವಾಗಿ ಅದೇ ಗೀತೆಯ ಪ್ರಕಾರ ಸಾತ್ವಿಕ ಜ್ಞಾನ.

ಜ್ಞಾನವು ತ್ರಿವಿಧವಿರುವಂತೆ ಕರ್ಮವೂ ತ್ರಿವಿಧವೆಂದು ಗೀತೆಯು ನಿರೂಪಿಸುತ್ತದೆ. ಅನುರಕ್ತಿಯಿಂದ ಕೂಡಿಲ್ಲದಿರುವುದು, ಫಲಾಪೇಕ್ಷೆಯಿಂದ

ಪ್ರೇರಿತವಾಗದ್ದು ಸಾತ್ವಿಕ ಕರ್ಮವೆನಿಸುತ್ತದೆ (೧೮.೨೩ : ನಿಯತಂ ಸಂಗರಹಿತಂ ಅರಾಗದ್ವೇಷತಃ ಕೃತಂ। ಅಫಲಪ್ರೇಪ್ಸುನಾ ಕರ್ಮ ಯತ್ ತತ್ ಸಾತ್ವಿಕಮುಚ್ಯತೇ ॥). ಇದಕ್ಕೆ ಭಿನ್ನವಾಗಿ ಫಲಾಪೇಕ್ಷೆಯಿಂದ ಕೂಡಿದ, ಇಲ್ಲವೇ ಸ್ವ-ಕೇಂದ್ರಿತವಾದ, ಇಲ್ಲವೇ ತ್ರಾಸದಾಯಕವಾದ ಕರ್ಮವು ರಾಜಸಿಕ ಕರ್ಮ ಎನಿಸುತ್ತದೆ (೧೮.೨೪). ಇನ್ನುಳಿದದ್ದು ಹೀನಮಟ್ಟದ ತಾಮಸಿಕ ಕರ್ಮ. ಪೂರ್ವಾಪರ ವಿವೇಚನೆ ಇಲ್ಲದೆ ಮಾಡುವ ಕರ್ಮ (ಉದಾಹರಣೆಗೆ, ಕುರುಕ್ಷೇತ್ರ ಯುದ್ಧ?), ಹಿಂಸೆ ಮತ್ತು ಪ್ರತಾಪಗಳ ಹಿನ್ನೆಲೆಯುಳ್ಳ ಕರ್ಮ, ಮುಂತಾದವು ತಾಮಸಿಕ ಕರ್ಮ (೧೮.೨೫ : ಅನುಬಂಧಂ ಕ್ಷಯಂ ಹಿಂಸಾಂ ಅನಪೇಕ್ಷ್ಯ ಚ ಪೌರುಷಂ। ಮೋಹಾದಾರಭ್ಯತೇ ಕರ್ಮ ಯತ್ ತತ್ ತಾಮಸಮುಚ್ಯತೇ ॥).

ಜ್ಞಾನ ಮತ್ತು ಕರ್ಮಗಳನ್ನು ಸಾತ್ವಿಕ-ರಾಜಸ-ತಾಮಸವೆಂದು ಭಿನ್ನೈಸಿದಂತೆಯೇ ಗೀತೆಯು ಕರ್ತೃಗಳನ್ನೂ ಭಿನ್ನೈಸುತ್ತದೆ (೧೮.೨೬-೨೮). ಅದನ್ನು ಸುಲಭವಾಗಿ ಊಹಿಸಿಕೊಳ್ಳಬಹುದಾದ್ದರಿಂದ ವಿವರಣೆಗೆ ಹೋಗುವುದು ಬೇಡ. ಅದೇ ರೀತಿಯಲ್ಲಿ ಬುದ್ಧಿ, ಧೃತಿ ಮತ್ತು ಸುಖ ಸಹ ಮೂರು ಗುಣಗಳದ್ದೆಂದು ನಿರೂಪಿಸಲಾಗಿದೆ (೧೮.೨೯-೩೯). ಇಷ್ಟು ಪ್ರಭೇದಗಳನ್ನು ಪಟ್ಟಿ ಮಾಡಿದ ನಂತರ ಗೀತೆ ಹೇಳುತ್ತದೆ, "ಭೂಲೋಕದಲ್ಲಾಗಲಿ, ದೇವಲೋಕದಲ್ಲಾಗಲಿ, ದೇವತೆಗಳ ಪೈಕಿ ಆಗಲಿ, ಸತ್ವ-ರಜಸ್-ತಮಸ್ ಎಂಬ ಗುಣಗಳಿಂದ ಮುಕ್ತವಾದದ್ದು ಏನೂ ಇಲ್ಲ, ಯಾವುದೂ ಇಲ್ಲ" ಎಂದು (೧೮.೪೦ : ನ ತದಸ್ತಿ ಪೃಥಿವ್ಯಾಂ ವಾ ದಿವಿ ದೇವೇಷು ವಾ ಪುನಃ। ಸತ್ತ್ವಂ ಪ್ರಕೃತಿ - ಜೈರ್ಮುಕ್ತಂ ಯದೇಭಿಃ ಸ್ಯಾತ್ ತ್ರಿಭಿರ್ಗುಣೈಃ ॥). ಮನುಷ್ಯರಲ್ಲಿ, ಪ್ರಾಣಿಗಳಲ್ಲಿ, ಅಂತೆಯೇ ಎಲ್ಲದರಲ್ಲಿಯೂ ಪ್ರತ್ಯೇಕತೆಯನ್ನು ತಾತ್ವಿಕ ನೆಲೆಯಲ್ಲಿ ಸಿದ್ಧಗೊಳಿಸಿ, ಗೀತೆಯ ಕರ್ತೃವು ಸಾಮಾಜಿಕ ವ್ಯವಸ್ಥೆಯಲ್ಲಿ ಪ್ರತ್ಯೇಕತೆಯನ್ನು ಸಮರ್ಥಿಸಲು ನೆಲೆಯನ್ನು ಸಿದ್ಧಪಡಿಸಿಕೊಂಡಿದ್ದಾನೆ. ಸಮಾಜದಲ್ಲಿ ಶ್ರೇಣಿಗಳನ್ನು ಪ್ರಬಲವಾಗಿ ಸುಭದ್ರಗೊಳಿಸಲು ಪರಮಾತ್ಮ ಶ್ರೀಭಗವಾನನೇ ಮುದ್ರೆಯೊತ್ತಿದ್ದಾನೆಂದರೆ ಜನತೆಯು ಮೂಕವಿಸ್ಮಿತರಾಗಿ ಅದನ್ನು ಸ್ವೀಕರಿಸಬೇಕು. ಅದು ಶ್ರೀಮದ್ಭಗವದ್ಗೀತೆಯ ಅಂತಿಮ ಸಂದೇಶ. ಜ್ಞಾನಾದಿಗಳನ್ನು ಪ್ರತ್ಯೇಕಿಸಿದಂತೆ ಬ್ರಾಹ್ಮಣಾದಿಗಳನ್ನು ಪ್ರತ್ಯೇಕಿಸುವುದು ಗೀತೆಯ ಇನ್ನುಳಿದ ಕೈಂಕರ್ಯ. ಗೀತೆಯು ದಾರ್ಶನಿಕ ಗ್ರಂಥವೋ, ಧರ್ಮಗ್ರಂಥವೋ, ಸಾಮಾಜಿಕ ಕೈಪಿಡಿಯೋ ಎಂಬುದು ಇದರಿಂದಲೇ ತೀರ್ಮಾನವಾಗಬೇಕು. ಸ್ಥಿತಪ್ರಜ್ಞತ್ವ, ಭಕ್ತಿ, ಧ್ಯಾನ, ವಿಭೂತಿ, ವಿಶ್ವರೂಪ ದರ್ಶನ, ಇತ್ಯಾದಿಗಳೆಲ್ಲಾ ಸಾಮಾಜಿಕ ಶ್ರೇಣೀಕರಣವನ್ನು ಒಂದು ಅದ್ಭುತ ಪರಮಾತ್ಮ ಸೃಷ್ಟಿ ಎಂದು ಭ್ರಮಿಸುವಂತೆ ಮಾಡುವುದರಲ್ಲಿ ಸಾಧನಗಳು. ಶ್ರೇಣೀಕರಣಕ್ಕೆ ಗೀತೆಯ ಅನಿಷ್ಟ ಕಾಣಿಕೆಯು ಮಹತ್ತರವಾದುದು.

*(ಮುಂದುವರೆಯುವುದು)*

**ಜಿ. ರಾಮಕೃಷ್ಣ**
೨-ಎಫ್, ಪವನ ಪರಂಜ್ಯೋತಿ ಅಪಾರ್ಟ್‌ಮೆಂಟ್ಸ್, ೨೨/೧, ೪ನೇ ಕ್ರಾಸ್, ಕಾವೇರಿನಗರ
ಬನಶಂಕರಿ ೩ನೇ ಹಂತ, ಬೆಂಗಳೂರು - ೫೬೦ ೦೮೫

# ಜೆ. ಆರ್. ಲಕ್ಷ್ಮಣರಾವ್‌ಗೆ ನಮನ

**ತೊ**ಂಬತ್ತೇಳು ವಯಸ್ಸಿನ ವಿಜ್ಞಾನ ಲೇಖಕ, ಭಾರತ ಕಮ್ಯುನಿಸ್ಟ್ ಪಾರ್ಟಿಯೊಂದಿಗೆ ನಿಕಟ ಸಂಬಂಧ ಹೊಂದಿದ್ದವರು, 'ಹೊಸತು' ಪತ್ರಿಕೆಗೆ ಆಗಾಗ್ಗೆ ಲೇಖನ ಬರೆಯುತ್ತಿದ್ದವರು, ನವಕರ್ನಾಟಕ ಪ್ರಕಾಶನದೊಂದಿಗೆ ಸಂಪರ್ಕವಿರಿಸಿಕೊಂಡು ಅದರ ಹಲವು ಯೋಜನೆಗಳಲ್ಲಿ ಸಕ್ರಿಯವಾಗಿ ಭಾಗಿಯಾಗಿದ್ದವರು ಆದ ಜೆ. ಆರ್. ಲಕ್ಷ್ಮಣರಾವ್ ಇವರು ಶುಕ್ರವಾರ (೨೯-೧೨-೨೦೧೭)ರಂದು ನಿಧನರಾದರೆಂದು ಪ್ರಕಟಿಸಲು ವಿಷಾದಿಸುತ್ತೇವೆ. ಅವರಿಗೆ 'ನವಕರ್ನಾಟಕ' ಮತ್ತು 'ಹೊಸತು' ಬಳಗ ನಮನ ಸಲ್ಲಿಸುತ್ತದೆ. ಅವರು ಪತ್ನಿ, ಮೂವರು ಪುತ್ರಿಯರು ಮತ್ತು ಒಬ್ಬ ಪುತ್ರನನ್ನು, ಅನೇಕ ಮಂದಿ ಶಿಷ್ಯರು, ಅಭಿಮಾನಿಗಳನ್ನು ಅಗಲಿದ್ದಾರೆ.

ಚಿತ್ರದುರ್ಗ ಜಿಲ್ಲೆಯ ಜಗಳೂರಿನಲ್ಲಿ ಜನಿಸಿದ, 'ಜೆಆರ್‌ಎಲ್' ಎಂದೇ ಹೆಸರುವಾಸಿಯಾಗಿದ್ದ ಜೆ. ಆರ್. ಲಕ್ಷ್ಮಣರಾಯರು ವಿದ್ಯಾರ್ಥಿಯಾಗಿದ್ದಾಗಲೇ ಕ್ರಿಯಾಶೀಲರಾಗಿದ್ದರು. ಬೆಂಗಳೂರಿನ ಸೆಂಟ್ರಲ್ ಕಾಲೇಜಿನಲ್ಲಿ ಬಿಎಸ್ಸಿ, ಎಂಎಸ್ಸಿಗಳನ್ನು ಮುಗಿಸಿದ ಅವರು ಅದೇ ಕಾಲೇಜಿನಲ್ಲಿ ರಸಾಯನ ವಿಜ್ಞಾನದ ಅಧ್ಯಾಪಕರಾಗಿದ್ದರು. ತುಮಕೂರು, ಮೈಸೂರು, ಶಿವಮೊಗ್ಗದ ಕಾಲೇಜುಗಳಲ್ಲಿ ಅಧ್ಯಾಪಕರಾಗಿದ್ದು, ನಂತರ ಪ್ರಾಧ್ಯಾಪಕರಾಗಿ ನಿವೃತ್ತರಾದರು. ಕರ್ನಾಟಕದ ವಿಜ್ಞಾನ ಲೇಖಕರಲ್ಲಿ ಪ್ರಮುಖರು. ವಿಜ್ಞಾನವನ್ನು ಜನಪ್ರಿಯಗೊಳಸಲು ಹಲವು ಲೇಖನಗಳನ್ನು ಗ್ರಂಥಗಳನ್ನು ಪ್ರಕಟಿಸಿದ ಕೀರ್ತಿ ಅವರದು. ಮೈಸೂರು ವಿಶ್ವವಿದ್ಯಾನಿಲಯವು ಪ್ರಕಟಿಸುತ್ತಿದ್ದ 'ಪ್ರಬುದ್ಧ ಕರ್ನಾಟಕ' ಪತ್ರಿಕೆಯ ಚಿನ್ನದ ಹಬ್ಬದ ವಿಶೇಷ ಸಂಚಿಕೆ 'ವಿಜ್ಞಾನ ಕರ್ನಾಟಕ'ದ ಸಂಪಾದಕರಲ್ಲಿ ಒಬ್ಬರಾಗಿದ್ದರು. ಮೈಸೂರು ವಿಶ್ವವಿದ್ಯಾನಿಲಯದ 'ಇಂಗ್ಲಿಷ್ - ಕನ್ನಡ ನಿಘಂಟು' ಸಂಪಾದಕರಲ್ಲೊಬ್ಬರಾಗಿದ್ದರು.

ಕರ್ನಾಟಕ ರಾಜ್ಯ ವಿಜ್ಞಾನ ಪರಿಷತ್ತನ್ನು ಎಂ.ಎ. ಸೇತುರಾವ್ ಮತ್ತು ಅಡ್ಯನಡ್ಕ ಕೃಷ್ಣ ಭಟ್ ಜೊತೆಗೂಡಿ ಸ್ಥಾಪಿಸಿದವರಲ್ಲಿ ಲಕ್ಷ್ಮಣರಾವ್ ಒಬ್ಬರು. ವಿಜ್ಞಾನ ಪ್ರಸರಣಕ್ಕಾಗಿ ಭಾರತ ಸರ್ಕಾರ ಅವರಿಗೆ ಪ್ರಶಸ್ತಿ ನೀಡಿ ಗೌರವಿಸಿತ್ತು. ರಾಜ್ಯೋತ್ಸವ ಪ್ರಶಸ್ತಿ ಮತ್ತು ಕರ್ನಾಟಕ ಸಾಹಿತ್ಯ ಅಕಾಡೆಮಿಯ ಪ್ರಶಸ್ತಿಯನ್ನೂ ಒಳಗೊಂಡಂತೆ ಅವರು ಹಲವು ಪುರಸ್ಕಾರಗಳಿಗೆ ಭಾಜನರಾಗಿದ್ದರು.

'ನವಕರ್ನಾಟಕ ಜ್ಞಾನ ವಿಜ್ಞಾನಕೋಶ'ದ ಸಲಹಾ ಮಂಡಳಿಯ ಸದಸ್ಯರಾಗಿದ್ದರು. ಅವರ ಹಲವು ಕೃತಿಗಳನ್ನು ನವಕರ್ನಾಟಕ ಪ್ರಕಟಿಸಿದೆ. ಅವರ ಆತ್ಮಕಥೆ 'ನೆನಪಿನ ಅಲೆಗಳು' ಎರಡನೇ ಮುದ್ರಣ ಕಂಡಿದೆ. ಆರ್ನಾಲ್ಡ್ ಕೆಟಲ್ ಅವರು ಇಂಗ್ಲಿಷ್‌ನಲ್ಲಿ ರಚಿಸಿದ್ದ 'ಕಾರ್ಲ್ ಮಾರ್ಕ್ಸ್'ರವರ ಜೀವನ ಚರಿತ್ರೆಯನ್ನು ಅವರು ಅವರ ಪತ್ನಿ ಜೀವೂಬಾಯಿ ಲಕ್ಷ್ಮಣರಾವ್‌ರೊಂದಿಗೆ ಅನುವಾದಿಸಿದ್ದರು ತೊಂಬತ್ತರ ಹರಯದಲ್ಲಿ. ಅದೇ ಅವರ ಕೊನೆಯ ಕೃತಿ. 'ಹೊಸತು' ಪತ್ರಿಕೆಗೆ ಬರೆದ ಕೊನೆಯ ಲೇಖನ 'ಹೀಗಿದ್ದರು ಗೆಳೆಯ ಎಂ. ಎಸ್. ಕೃಷ್ಣನ್'.

*- ಸಂಪಾದಕ*




ಡಾ॥ ಬಿ. ಆರ್. ಮಂಜುನಾಥ್



'ಮಾಡಬೇಕಾದುದೇನು' – ಚಳುವಳಿಯಲ್ಲಿ ಸಕ್ರಿಯವಾಗಿರುವ ನಾವೆಲ್ಲರೂ ಅನೇಕ ಬಾರಿ ಇಂಥ ಪ್ರಶ್ನೆಗಳನ್ನು ಕೇಳಕೊಂಡಿರುತ್ತೇವೆ. ನಮ್ಮ ಲೇಖನಗಳಿಗೆ ಇಂತಹ ಒಂದು ಶೀರ್ಷಿಕೆಯನ್ನು ಕೊಟ್ಟುಕೊಂಡಿರಬಹುದು ಸಹ ! ಈ ಶೀರ್ಷಿಕೆಯನ್ನು ಮೊದಲ ಬಾರಿ ಉಪಯೋಗಿಸಿದವನು ಚೆರ್‌ನಿಶೇವ್‌ಸ್ಕಿ. ಲೆನಿನ್‌ನ ಮಡದಿ ಕ್ರುಪ್‌ಸ್ಕಾಯಾ ಹೇಳುವಂತೆ ಈತನ ಬಗ್ಗೆ ಮಾತನಾಡುವಾಗೆಲ್ಲಾ ಲೆನಿನ್‌ರ ಧ್ವನಿಯಲ್ಲಿ ಒಂದು ಮಾರ್ದವತೆ, ಒಂದು ಮೆಚ್ಚುಗೆ ಕಾಣಿಸುತ್ತಿತ್ತಂತೆ. ಬಹಳ ಚಿಕ್ಕ ವಯಸ್ಸಿನಲ್ಲೇ ಜೈಲಿನಲ್ಲಿ ಕುಳಿತು 'ವಾಟ್ ಈಸ್ ಟು ಬಿ ಡನ್' ಕಾದಂಬರಿಯನ್ನು ಬರೆದ. ನಂತರ ಗಡೀಪಾರು, ಸೈಬೀರಿಯಾ ವಾಸ ಇವೆಲ್ಲವನ್ನೂ ಅನುಭವಿಸಿದ ಚೆರ್‌ನಿಶೇವ್‌ಸ್ಕಿ ಅಪಾರ ಕೆಚ್ಚೆದೆಯವನು.

# ಲೆನಿನ್ ಮತ್ತು ಸಾಹಿತ್ಯ

ಕ್ರಾಂತಿಕಾರಿಗಳೆಂದರೆ ಮೂಗಿನ ಹೊಳ್ಳೆಗಳಿಂದ ಬೆಂಕಿ ಉಗುಳುತ್ತಾ ನುಗ್ಗುತ್ತಿರುವ ಡ್ರೇಗನ್‌ಗಳ ತರಹದವರು ಎಂದು ಭಾವಿಸಿದವರಿಗೆ ಮೇಲಿನ ಲೇಖನದ ಶೀರ್ಷಿಕೆ ಖಂಡಿತ ಅಚ್ಚರಿಯನ್ನು ಹುಟ್ಟಿಸುತ್ತದೆ. ಅದು ನಮ್ಮ ಬೂರ್ಶ್ವಾ ಮಾಧ್ಯಮಗಳು ಸೃಷ್ಟಿಸಿರುವ 'ಇಮೇಜ್'. ಹೀಗಾಗಿ ಲೆನಿನ್‌ರ ಸೈದ್ಧಾಂತಿಕ ನಿಲುವು, ಹೋರಾಟದ ಕೆಚ್ಚುಗಳನ್ನು ಮೆಚ್ಚಿಕೊಂಡವರಿಗೂ ಸಹ ಅವರ ವ್ಯಕ್ತಿತ್ವದ ವಿವಿಧ ಪಾರ್ಶ್ವಗಳ ಪರಿಚಯವಿರುವುದಿಲ್ಲ. ಇದೇನೂ ಆಶ್ಚರ್ಯದ ವಿಷಯವೇನಲ್ಲ. ಆದರೆ ಕ್ರಾಂತಿಯನ್ನು ಅದರ ಎಲ್ಲಾ ಆಯಾಮಗಳೊಂದಿಗೆ ಮೆಚ್ಚಿಕೊಳ್ಳುವಂಥವರು, ಕ್ರಾಂತಿಕಾರಿ ನಾಯಕರ ವ್ಯಕ್ತಿತ್ವದ ಸೊಬಗಿನ ಎಲ್ಲ ರೂಪಗಳನ್ನು ಅರಿತಿರುವುದು ಒಳ್ಳೆಯದು. ಅದು ಅವರ ವ್ಯಕ್ತಿತ್ವಕ್ಕೂ ಒಂದು ಸಮಗ್ರತೆ, ಪರಿಪೂರ್ಣತೆ, ಜೀವನೋಲ್ಲಾಸಗಳನ್ನು ದಕ್ಕಿಸಿಕೊಡುತ್ತದೆ.

ನಿಮಗೆಲ್ಲಾ ಗೊತ್ತು ಲೆನಿನ್ ಹುಟ್ಟಿದ್ದು ೧೮೭೦ರಲ್ಲಿ. ಎಂದರೆ ಗಾಂಧೀಜಿಗಿಂತ ಅವರು ಒಂದು ವರ್ಷ ಚಿಕ್ಕವರು. ತ್ಸಾರ್ ಚಕ್ರವರ್ತಿಯ ಜನವಿರೋಧಿ ಆಡಳಿತದ ಎಲ್ಲಾ ಕುರೂಪವು ಕಣ್ಣಿಗೆ ರಾಚುವಂತೆ ಬೀಳುತ್ತಿದ್ದ ಕಾಲ ಅದು. ಆದರೆ ರಷ್ಯಾದ ಪ್ರತಿಷ್ಠಿತ ಕುಟುಂಬಗಳ ಮಕ್ಕಳು ಮಾತ್ರ ಯುರೋಪಿನ ಆಧುನಿಕ ಶಿಕ್ಷಣವನ್ನು ಪಡೆದುಕೊಳ್ಳುತ್ತಿದ್ದರು ಮತ್ತು ಅಲ್ಲಿನ ಸಾಹಿತ್ಯವನ್ನು ಅಭ್ಯಾಸ ಮಾಡುತ್ತಾ ತಮ್ಮನ್ನೇ ಹೊಸ ಚಿಂತನೆಗಳಿಗೆ ತೆರೆದುಕೊಳ್ಳುತ್ತಿದ್ದರು. ಟಾಲ್‌ಸ್ಟಾಯ್, ಪುಷ್ಕಿನ್, ತುರ್ಗೆನೀವ್ ಇವರಿಗೆಲ್ಲಾ ಮನೆಯಲ್ಲೇ ಫ್ರೆಂಚ್, ಜರ್ಮನ್ ಭಾಷೆಗಳನ್ನು ಹೇಳಿಕೊಡುವ ಮೇಷ್ಟರಿದ್ದರು. ಫ್ರೆಂಚ್ ಭಾಷೆಯಲ್ಲಿ ಮಾತನಾಡುವುದು ಉನ್ನತ ಸ್ಥಾನಮಾನದ ಲಕ್ಷಣ, ನಾಗರಿಕತೆಯ ಚಿಹ್ನೆ ಎಂದು ಭಾವಿಸಿದ್ದ ದಿನಗಳವು.

ಇರಲಿ. ರಷ್ಯನ್ ಸಮಾಜದ ಮೇಲೆ ಇದರಿಂದ ಒಂದು ದೊಡ್ಡ ಪರಿಣಾಮ ಉಂಟಾಯಿತು. ತಾವು ನಿಂತ ಭೂಮಿಯ ಹೊಲಸಾದ ವಾತಾವರಣದಿಂದ ಅಸಹ್ಯಿಸಿಕೊಳ್ಳುತ್ತಾ ಅದೇ ಸಮಯದಲ್ಲಿ ಹೊಸ ಆದರ್ಶಗಳ ನಕ್ಷತ್ರಗಳ ಕಡೆಗೆ ಕೈಚಾಚಬಲ್ಲ ಸಾಹಿತಿಗಳ ಒಂದು ದೊಡ್ಡ ತಂಡವೇ ನಿರ್ಮಾಣವಾಯಿತು. ಪುಷ್ಕಿನ್‌ನಿಂದ ಆರಂಭವಾದ ಈ ಪ್ರತಿಭಾಶಾಲಿಗಳ ಮೆರವಣಿಗೆಯಲ್ಲಿ ನಂತರ ಲರ್ಮಾಂತೋವ್, ಪಿಸಾರೇವ್, ಗೊಗೊಲ್, ವಿಮರ್ಶಕ ಬೆಲಿನ್‌ಸ್ಕಿ ಮುಂತಾದವರು ಕಾಣಿಸಿಕೊಳ್ಳುತ್ತಾರೆ. ಆಮೇಲೆ ಇನ್ನೂ ರ್‍ಯಾಡಿಕಲ್ ಆಗಿ ಬರೆದ ಚೆರ್‌ನಿಶೇವ್‌ಸ್ಕಿ, ಹರ್ಜೆನ್, ನೆಕ್ರಸೊವ್ ದಾಪುಗಾಲಿಟ್ಟು ಬರುತ್ತಾರೆ. ಲೆನಿನ್ ಹುಟ್ಟುವ ವೇಳೆಗೆ ರಷ್ಯನ್ ಸಾಹಿತ್ಯದ ಆಗಸದಲ್ಲಿ ಟಾಲ್‌ಸ್ಟಾಯ್, ತುರ್ಗೆನೀವ್, ದೊಸ್ತೊಯೆವ್‌ಸ್ಕಿ ಉಜ್ವಲವಾಗಿ ಬೆಳಗುತ್ತಿದ್ದರು. ಚೆಖಾವ್ ಮತ್ತು ಗಾರ್ಕಿಯರ ಆಗಮನಕ್ಕೆ ಆರ್ಥಿಕ–ಸಾಮಾಜಿಕ–ಸಾಹಿತ್ಯಕ ಭೂಮಿಕೆ ಸಿದ್ಧವಾಗುತ್ತಿತ್ತು. ಒಮ್ಮೆ ಕನ್ನಡದ ಖ್ಯಾತ ಲೇಖಕರೊಬ್ಬರು 'ರಷ್ಯನ್ ಸಾಹಿತ್ಯ ಏಕೆ ಅಷ್ಟು ದಟ್ಟವಾಗಿದೆ, ಪ್ರಗಾಢವಾಗಿದೆ' ಎಂಬ ಪ್ರಶ್ನೆಯನ್ನು ಕೇಳಿಕೊಂಡಿದ್ದರು. ಭೌತವಾದಿ



ದೃಷ್ಟಿಕೋನದಿಂದ ನೋಡಿದರೆ ನಮಗನ್ನಿಸುವುದು ತಡವಾದ ಬೂರ್ಶ್ವಾ ಜನತಾಂತ್ರಿಕ ಕ್ರಾಂತಿ ಅಲ್ಲಿನ ಪರಿಸರದಲ್ಲಿ ಸೃಷ್ಟಿಸಿದ್ದ ದ್ವಂದ್ವಗಳು, ಉಸಿರುಗಟ್ಟಿಸುವ ಸಂದರ್ಭ, ಪಕ್ಕದಲ್ಲೇ ಇದ್ದ ಮುಂದುವರೆದ ಯುರೋಪಿಯನ್ ರಾಷ್ಟ್ರಗಳಿಂದ ಬೀಸುತ್ತಿದ್ದ ನವೋದಯದ, ಜನತಾಂತ್ರಿಕ ಕ್ರಾಂತಿಗಳ ಗಾಳಿ ಇಂಥ ಶ್ರೇಷ್ಠ ಸಾಹಿತ್ಯಕ್ಕೆ ಕಾರಣವಾದವು. ನಿಜಕ್ಕೂ ಹೇಳಬೇಕೆಂದರೆ ಅಂಥಾ ಸಾಹಿತ್ಯಕ ಸಾಂಸ್ಕೃತಿಕ ಸನ್ನಿವೇಶವು ಮುಂದಿನ ಕಾರ್ಮಿಕ ವರ್ಗದ ಕ್ರಾಂತಿಗೆ ಅಪಾರ ಕೊಡುಗೆಯನ್ನು ಕೊಟ್ಟಿತು. ಲೆನಿನ್‌ರಂಥ ಮೇಧಾವಿ ನಾಯಕರನ್ನು, ಅನೇಕ ಪ್ರತಿಭಾಶಾಲಿಗಳಾದ ಬೋಲ್ಶೆವಿಕ್ ಸಂಘಟನಾಕಾರರನ್ನು ತಯಾರು ಮಾಡುವಲ್ಲಿ ನೆರವಾಯಿತು. ಲೆನಿನ್ ಬಾಲ್ಯದಿಂದಲೇ ಅಭಿಜಾತ ಕೃತಿಗಳನ್ನು ಓದುವ ಅಭ್ಯಾಸವನ್ನು ಬೆಳೆಸಿಕೊಂಡರು. ಲ್ಯಾಟಿನ್ ಕಲಿತಿದ್ದ ಅವರು ವರ್ಜಿಲ್ ಮುಂತಾದ ಹಳೆಯ ಕವಿಗಳನ್ನು ಓದಿ ಮೆಚ್ಚಿಕೊಂಡರು. ಪುಷ್ಕಿನ್ ಎಂದರೆ ಅವರಿಗೆ ತುಂಬ ಅಭಿಮಾನ. ಬದುಕಿನುದ್ದಕ್ಕೂ ಅವರು ಆಧುನಿಕ ಕಾವ್ಯಕ್ಕಿಂತ ಹೆಚ್ಚಾಗಿ ಪ್ರೀತಿಸಿದ್ದು ಕ್ಲಾಸಿಕಲ್ ಮಾದರಿಯ ಕಾವ್ಯವನ್ನೇ. ಷೇಕ್ಸ್‌ಪಿಯರ್ ಹಾಗೂ ಗಯಟೆ ಸಹ ಅವರಿಗೆ ಎಳೆಯ ವಯಸ್ಸಿನಲ್ಲಿಯೇ ಪರಿಚಿತರಾಗಿದ್ದರು.

ಇದರ ಬಗ್ಗೆ ಒಂದು ಚೆಂದವಾದ ಕಥೆಯಿದೆ. ಕ್ರಾಂತಿಯ ನಂತರ ಲೆನಿನ್ ಶಾಲೆಯೊಂದಕ್ಕೆ ಭೇಟಿ ನೀಡಿದ್ದರಂತೆ. ಆಗ ಅಲ್ಲಿನ ಅಧ್ಯಾಪಕರು ಕ್ರಾಂತಿಯ ನಾಯಕರಿಗೆ ಖುಷಿಯಾಗಲಿ, 'ವಿದ್ಯಾರ್ಥಿಗಳ ಮುಂದುವರಿದ ರಾಜಕೀಯ ತಿಳಿವಳಿಕೆಯನ್ನು ನೋಡಿ, ಅದನ್ನು ದಯಪಾಲಿಸಿದ ತಮ್ಮನ್ನೂ ಮೆಚ್ಚಿಕೊಳ್ಳಲಿ' ಎಂದು ಮಾಯಾಕೋವ್‌ಸ್ಕಿಯ ಪದ್ಯವನ್ನು ಆ ಪುಟ್ಟ ಹುಡುಗರ ಬಾಯಿಂದ ಕಿರುಚಿಸಿದರಂತೆ. ಮುಖ ಕಿವುಚಿಕೊಂಡ ಲೆನಿನ್, "ಯಾವುದಾದರೂ ಹಳೆಯ ಪದ್ಯ... ಅಂದರೆ ಪುಷ್ಕಿನ್‌ದು ಗೊತ್ತಿದ್ದರೆ ಹಾಡಿಸಿ" ಎಂದರಂತೆ. ಇದು ನಂಬಲರ್ಹವಾದ ಕತೆಯೇ. ಕ್ಲಾಸಿಕಲ್ ಕಾವ್ಯವನ್ನು ಆನಂದಿಸುವ ತಲೆಮಾರಿನ ಸೌಂದರ್ಯಪ್ರಜ್ಞೆಯ ಪ್ರತಿನಿಧಿ ಲೆನಿನ್.

ಹಾಗೆಂದು ಲೆನಿನ್ ಹೊಸ ಪ್ರಯೋಗಗಳ ವಿರೋಧಿ ಎಂದೇನೂ ತೀರ್ಮಾನಿಸಬೇಕಿಲ್ಲ. ಅವರು ಸದಾ ಹೊಸದನ್ನು ಆಹ್ವಾನಿಸುತ್ತಿದ್ದ ಆಧುನಿಕರೇ. ಆದರೆ ನಾವು ಆಶಿಸುವ ಪ್ರೊಲೆಟೇರಿಯನ್ ಸಂಸ್ಕೃತಿ ಎಂಬುದು ಆಕಾಶದಿಂದ ಉದುರುವಂಥದ್ದಲ್ಲ, ಅದು ಈ ನೆಲದ ಈವರೆಗಿನ ಎಲ್ಲಾ ಅತ್ಯುತ್ತಮ ಕಲಾ-ಸಾಹಿತ್ಯ ಪ್ರಕಾರಗಳ ಸೊಗಸನ್ನು ಹೀರಿ, ಮೀರಿ ಬೆಳೆಯುವಂಥದ್ದು ಎಂಬುದು ಅವರ ತಿಳಿವಳಿಕೆ. ಕ್ರಾಂತಿಕಾರಿ ಕಾರ್ಮಿಕವರ್ಗವು ಜಗತ್ತಿನ ಎಲ್ಲಾ ನಾಗರಿಕತೆಗಳ, ಎಲ್ಲ ಶ್ರೇಷ್ಠ ಸೃಷ್ಟಿಗಳ ಉತ್ತರಾಧಿಕಾರಿಯಾಗಿರಬೇಕು ಎಂದು ಅವರು ಭಾವಿಸಿದ್ದರು. ಸಮಾಜವಾದಿ ಸಾಹಿತ್ಯದ ಸಾರ-ಸಂದೇಶಗಳು ಅಂತರರಾಷ್ಟ್ರೀಯವಾದಿಯಾಗಿರುತ್ತವೆ ನಿಜ, ಆದರೆ ಅದು ಪ್ರತಿಯೊಂದು ದೇಶದಲ್ಲಿ, ಭಾಷಾ ಸಮುದಾಯದಲ್ಲಿ ಅಲ್ಲಲ್ಲಿನ ರಾಷ್ಟ್ರೀಯ ಚಹರೆಯನ್ನು ಪಡೆದುಕೊಳ್ಳಬೇಕು. ಅಲ್ಲಿ ಚಾಲ್ತಿಯಲ್ಲಿರುವ ರೂಪಗಳನ್ನು ದುಡಿಸಿಕೊಳ್ಳಬೇಕು, ತನ್ನ ಅಗತ್ಯಕ್ಕೆ ತಕ್ಕಂತೆ ಒಗ್ಗಿಸಿಕೊಳ್ಳಬೇಕು. ಅಲ್ಲಿನ ಜಾಯಮಾನ, ಸೊಗಡು, ಗಾದೆ, ನುಡಿಕಟ್ಟುಗಳ ಸಂಪರ್ಕವಿಲ್ಲದ ಕಲಾಪ್ರಕಾರ ತ್ರಿಶಂಕುವಿನಂತೆ ಆಕಾಶದಲ್ಲಿ ತಲೆಕೆಳಕಾಗಿ ನೇತಾಡಬೇಕಾಗುತ್ತದೆ. ಇದು ಲೆನಿನ್‌ರವರ ಪ್ರತಿಪಾದನೆ.

ಅದಿರಲಿ, ನಾವು ಮತ್ತೆ ಲೆನಿನ್‌ರ ವ್ಯಕ್ತಿತ್ವ ರೂಪುಗೊಂಡ ಕಾಲಾವಸ್ಥೆಗೆ ಹಿಂತಿರುಗೋಣ. ಲೆನಿನ್‌ರ ಬಾಲ್ಯ ಎಂದರೆ ರಷ್ಯಾದ ಅನೇಕ ಮಹಾಕೃತಿಗಳು ಆಗಲೇ ಹೊರಬಂದಿದ್ದ ಕಾಲ. ಪ್ರತಿಯೊಬ್ಬ ಪ್ರಜ್ಞಾವಂತ ಕಿಶೋರ, ತರುಣರೆಲ್ಲ ತ್ಸಾರ್‌ಶಾಹಿಯ ವಿರುದ್ಧವಾದ ಭಾವನೆಗಳನ್ನು ಹೊಂದಿರುತ್ತಿದ್ದ ಸನ್ನಿವೇಶ ಅದು. ಅದಕ್ಕೆ ಪೂರಕವಾದ ಕ್ರಾಂತಿಕಾರಿ ಸಾಹಿತ್ಯ ಆಗಲೇ ಲಭ್ಯವಿತ್ತು. ಅದರಲ್ಲಿ ಹರ್ಜೆನ್ ಮತ್ತು ಚೆರ್‌ನಿಶೇವ್‌ಸ್ಕಿ ಮುಖ್ಯರು. ಇಬ್ಬರೂ ಲೆನಿನ್‌ರ ಮೇಲೆ ಗಾಢವಾದ ಪ್ರಭಾವ ಬೀರಿದವರೇ.

ಹರ್ಜೆನ್, ಲೆನಿನ್ ಹುಟ್ಟಿದ ವರ್ಷವೇ ತೀರಿಕೊಂಡವನು. ರಷ್ಯಾದ ರೈತಾಪಿಗಳ ದುಸ್ಥಿತಿಯ ಬಗ್ಗೆ ಬಹಳ ತಲೆಕೆಡಿಸಿಕೊಂಡವನು. ಸರ್ಕಾರವನ್ನು ಪ್ರತಿಭಟಿಸಿದ್ದರಿಂದ ಯುರೋಪಿನಲ್ಲಿ ಬಹಳ ಕಾಲ ಕಳೆಯಬೇಕಾಗಿ ಬಂತು. ಅದರಿಂದಾಗಿ ಕಾರ್ಲ್ ಮಾರ್ಕ್ಸ್‌ರ ಜೊತೆಯಲ್ಲಿ ನೇರ ಒಡನಾಟವೂ ದೊರಕಿತು. "ಹು ಈಸ್ ಟು ಬ್ಲೇಮ್" ಅವನ ಹೆಸರಾಂತ ಕಾದಂಬರಿ. ೧೯೧೨ರಲ್ಲಿ ಹರ್ಜೆನ್‌ನ ಶತಮಾನೋತ್ಸವದ ಸಂದರ್ಭದಲ್ಲಿ ಲೆನಿನ್ ಆತನ ಬಗ್ಗೆ ತುಂಬ ಉಪಯುಕ್ತವಾದ ಲೇಖನವನ್ನು ಬರೆದರು. ಸಮಾಜವಾದದ ಬಗ್ಗೆ ರಷ್ಯಾದಲ್ಲಿ ಮೊದಲು ಮಾತನಾಡಿದ ಲೇಖಕನೇ ಹರ್ಜೆನ್. ಆದರೂ ಆತನಿಗೆ ಕೆಲವೊಂದು ಗೊಂದಲಗಳಿದ್ದವು. ರೈತಾಪಿಗಳ ಬಗ್ಗೆಯೇ ಗಮನವಿಟ್ಟ ಆತ ಜೀತದಾಳುಗಳ ಬಿಡುಗಡೆಗೆ ಕಾಣಿಕೆ ನೀಡಿದ, ನಿಜ. ಆದರೆ ಹಿಂದುಳಿದ ರೈತಾಪಿ ವರ್ಗದಿಂದ ದೊಡ್ಡ ಸಾಮಾಜಿಕ ಬದಲಾವಣೆ ಸಾಧ್ಯವಿರಲಿಲ್ಲ. ಅಲ್ಲದೆ ಅವನ ಸಮಾಜವಾದದ ತಿಳಿವಳಿಕೆಯಲ್ಲಿ ಶ್ರೀಮಂತರ ಮನಸ್ಸನ್ನು ಒಲಿಸಿ ಅವರನ್ನು ಒಳ್ಳೆಯವರನ್ನಾಗಿ ಮಾಡುವ ಯತ್ನವಿತ್ತು. ೧೮೪೮ರಲ್ಲಿ ಯುರೋಪಿಯನ್ ರಾಷ್ಟ್ರಗಳಲ್ಲಿ ಸರಣಿ ಕ್ರಾಂತಿಗಳು ವಿಫಲವಾದಾಗ ಅವನು ಹತಾಶನಾಗಿದ್ದೂ ಉಂಟು. ೧೯೧೨ರಲ್ಲಿ ಅವನ ಜನ್ಮಶತಮಾನೋತ್ಸವ ಜರುಗಿದಾಗ ಅನೇಕರು ಅವನ ಇಂಥ ಅನೇಕ ಋಣಾತ್ಮಕ ಅಂಶಗಳಿಗೇ ಒತ್ತುಕೊಟ್ಟು ಮಾತನಾಡಿದಾಗ ಲೆನಿನ್ ಆತನ ಸಮರ್ಥನೆಗೆ ಧಾವಿಸಿದರು. ಅಂದಿನ ಕಾಲದಲ್ಲಿ ರಷ್ಯಾದಲ್ಲಿ ಬಂಡವಾಳಶಾಹಿ ವರ್ಗವಾಗಲೀ ಕಾರ್ಮಿಕ ವರ್ಗವಾಗಲೀ ಹುಟ್ಟಿರಲಿಲ್ಲ. ಕ್ರಾಂತಿಕಾರಿ ಬರಹಗಾರರಿಗೆ ಒತ್ತಾಸೆಯಾಗಬಲ್ಲ ಪ್ರಗತಿಶೀಲ ವರ್ಗವೂ ಇರಲಿಲ್ಲ. ಅವರ ಕಣ್ತೆರೆಸಬಹುದಾದ ಕಾರ್ಮಿಕ ಆಂದೋಲನವೂ ಇರಲಿಲ್ಲ. ಇಂಥ ಸಂದರ್ಭದಲ್ಲಿ ಕೆಲವು ಗೊಂದಲಗಳು ಅನಿವಾರ್ಯ. ಆದರೆ ಆತ ಎಂದೂ ಅನ್ಯಾಯದೊಂದಿಗೆ, ದಮನಕಾರಿ ಪ್ರಭುತ್ವದೊಂದಿಗೆ ರಾಜಿಯಾಗಲಿಲ್ಲ ಎಂಬುದನ್ನು ಲೆನಿನ್ ಎತ್ತಿ ತೋರಿಸಿದರು.

**ಮಾಡಬೇಕಾದುದೇನು?**

ಚಳುವಳಿಯಲ್ಲಿ ಸಕ್ರಿಯವಾಗಿರುವ ನಾವೆಲ್ಲರೂ ಅನೇಕ ಬಾರಿ ಇಂಥ ಪ್ರಶ್ನೆಗಳನ್ನು ಕೇಳಿಕೊಂಡಿರುತ್ತೇವೆ. ನಮ್ಮ ಲೇಖನಗಳಿಗೆ ಇಂತಹ ಒಂದು ಶೀರ್ಷಿಕೆಯನ್ನು ಕೊಟ್ಟುಕೊಂಡಿರಬಹುದು ಸಹ! ಈ ಶೀರ್ಷಿಕೆಯನ್ನು ಮೊದಲ ಬಾರಿ ಉಪಯೋಗಿಸಿದವನು ಚೆರ್‌ನಿಶೇವ್‌ಸ್ಕಿ. ಲೆನಿನ್‌ನ ಮಡದಿ ಕ್ರುಪ್‌ಸ್ಕಾಯಾ ಹೇಳುವಂತೆ ಈತನ ಬಗ್ಗೆ ಮಾತನಾಡುವಾಗೆಲ್ಲಾ ಲೆನಿನ್‌ರ ಧ್ವನಿಯಲ್ಲಿ ಒಂದು ಮಾರ್ದವತೆ, ಒಂದು ಮೆಚ್ಚುಗೆ ಕಾಣಿಸುತ್ತಿತ್ತಂತೆ. ಬಹಳ ಚಿಕ್ಕ ವಯಸ್ಸಿನಲ್ಲೇ ಜೈಲಿನಲ್ಲಿ ಕುಳಿತು 'ವಾಟ್ ಈಸ್ ಟು ಬಿ ಡನ್' ಕಾದಂಬರಿಯನ್ನು ಬರೆದ. ನಂತರ ಗಡೀಪಾರು, ಸೈಬೀರಿಯಾ ವಾಸ

ಇವೆಲ್ಲವನ್ನೂ ಅನುಭವಿಸಿದ ಚೆರ್‌ನಿಶೇವ್‌ಸ್ಕಿ ಅಪಾರ ಕೆಚ್ಚೆದೆಯವನು.

ಲೆನಿನ್ ಈ ಪುಸ್ತಕವನ್ನು ತಮ್ಮ ಹದಿನಾಲ್ಕನೆಯ ವಯಸ್ಸಿನಲ್ಲೇ ಓದಿದರಂತೆ. ಲೆನಿನ್‌ರ ಅಣ್ಣ, ಪ್ರೀತಿಯ ಸಾಶಾನಿಗೂ ಈ ಲೇಖಕ ಅಚ್ಚುಮೆಚ್ಚು. ಉಗ್ರಗಾಮಿಗಳೊಂದಿಗೆ ಸೇರಿದ್ದ ಸಾಶಾ ಪ್ರಭುತ್ವದ ಕ್ರೌರ್ಯಕ್ಕೆ ಬಲಿಯಾದ. "ಚಿಕ್ಕ ವಯಸ್ಸಿನಲ್ಲಿ ನಾನು ಓದಿದ ರೀತಿ ಮೇಲುಮೈ ಓದು. ಅಣ್ಣ ಸತ್ತಮೇಲೆ ನಾನದನ್ನ ಗಂಭೀರವಾಗಿ ಓದಿದೆ, ದಿನಗಟ್ಟಲೆ ಅಲ್ಲ ವಾರಗಟ್ಟಲೆ; ಮತ್ತು ಅದರಿಂದ ಇಡೀ ಜೀವಮಾನಕ್ಕಾಗುವಷ್ಟು ಸ್ಫೂರ್ತಿ ಪಡೆದೆ" ಎಂದು ಲೆನಿನ್ ಹೇಳುತ್ತಾರೆ. ಚೆರ್‌ನಿಶೇವ್‌ಸ್ಕಿಯಿಂದ ತಾವು ಜಗತ್ತಿನ ಕುರಿತು ಭೌತವಾದಿ ವೈಜ್ಞಾನಿಕ ದೃಷ್ಟಿಕೋನವನ್ನು ಪಡೆದುಕೊಂಡದ್ದಾಗಿಯೂ ಹಾಗೂ ಹೆಗೆಲ್‌ರವರ ದ್ವಂದ್ವಾತ್ಮಕ ಚಿಂತನಾಕ್ರಮಕ್ಕೆ ಪರಿಚಯವನ್ನು ಪಡೆದುಕೊಂಡದ್ದಾಗಿಯೂ ಬರೆಯುತ್ತಾರೆ. ನಂತರ ಮಾರ್ಕ್ಸ್‌ರವರ ದ್ವಂದ್ವಾತ್ಮಕ ಭೌತವಾದವನ್ನು ಗ್ರಹಿಸಲು ಇದೆಲ್ಲಾ ಲೆನಿನ್‌ರಿಗೆ ನೆರವಾಯಿತಂತೆ.

ಪಿಸಾರೊವ್ ಎಂಬುವನು ಲೆನಿನ್ ಮೆಚ್ಚಿಕೊಂಡ ಇನ್ನೊಬ್ಬ ಲೇಖಕ. ಕೇವಲ ಇಪ್ಪತ್ತೆಂಟು ವರ್ಷ ಬದುಕಿದ್ದ ಈತ ನಾಲ್ಕು ವರ್ಷಗಳನ್ನು ಸತತವಾಗಿ ಜೈಲಿನಲ್ಲೇ ಕಳೆದಿದ್ದ. ಮನುಷ್ಯನಿಗೆ ಕನಸು ಕಾಣುವುದು ಎಷ್ಟು ಅವಶ್ಯಕ ಹಾಗೂ ಕನಸು ಮತ್ತು ವಾಸ್ತವದ ನಡುವಣ ಕಂದರವನ್ನು ಅರ್ಥೈಸುವುದು ಹೇಗೆ ಎಂದು ಅವನು ಒಂದು ಕಡೆ ಬರೆದಿದ್ದಾನೆ. ಅದನ್ನು ಬಹಳ ಮೆಚ್ಚಿಕೊಂಡ ಲೆನಿನ್ ತಮ್ಮ ರಾಜಕೀಯ ಬರೆಹ ಒಂದರಲ್ಲಿ ಅದನ್ನೇ ಉದ್ಧರಿಸುತ್ತಾರೆ. ಅದರ ಸಂಗ್ರಹ ರೂಪವನ್ನು ನಾನು ನನ್ನ ಮಾತುಗಳಲ್ಲಿ ಹೀಗೆ ಹೇಳುತ್ತೇನೆ :

"ಕನಸು ಮತ್ತು ವಾಸ್ತವದ ನಡುವೆ ಅನೇಕ ರೀತಿಯ ಕಂದರಗಳಿರುತ್ತವೆ. ನನ್ನ ಕನಸು ವಾಸ್ತವಕ್ಕಿಂತ ತುಂಬ ಮುಂದೆ ಹೋಗಬಹುದು. ಆದರೆ ಅದು ಬದುಕಿನ ಚಲನೆಯ ಸಹಜವಾದ ಮಾರ್ಗಕ್ಕೆ ಅನುಗುಣವಿದ್ದೂ ಉಂಟಾದ ಕಂದರ. ಇನ್ನೊಂದು, ಬದುಕಿನ ಚಲನೆಗೆ ಸಂಬಂಧವೇ ಇಲ್ಲದ ಕಂದರ. ಮೊದಲ ರೀತಿಯ ಕನಸುಗಾರಿಕೆಯಿಂದ ದುಡಿಯುವ ಜನರ ಹೋರಾಟಕ್ಕೆ ಒಳ್ಳೆಯದೇ ಆಗಬಹುದು.

"ಆಗಾಗ ವಾಸ್ತವದಿಂದ ಮುನ್ನೆಗೆದು, ಮುಂದೆ ನಾವು ಸೃಷ್ಟಿಸಬೇಕೆಂದು ಇರುವುದರ ಬಗ್ಗೆ ಮೊದಲೇ ಸಮಗ್ರ ಚಿತ್ರವನ್ನು ಕಟ್ಟಿಕೊಳ್ಳುವ ಕನಸು ಅವಶ್ಯಕ. ಆದರೆ ಕನಸು ಕಾಣುವಾತ ತನ್ನ ಸ್ವಪ್ನವು ಗಾಳಿಗೋಪುರವಾಗದಂತೆ ಅದನ್ನು ವಾಸ್ತವದೊಡನೆ ತಳುಕು ಹಾಕಿ ನೋಡುತ್ತಲೇ ಇರಬೇಕು. ಇಂಥ ಕನಸುಗಾರಿಕೆ ಇಲ್ಲದಿದ್ದರೆ ಏನಾಗುತ್ತದೆ ಊಹಿಸಿ. ಕಲೆ, ವಿಜ್ಞಾನ, ಪ್ರತ್ಯಕ್ಷ ಕಾರ್ಯಚಟುವಟಿಕೆ ಇವುಗಳಿಗೆ ಸ್ಫೂರ್ತಿ ದೊರಕುವುದಾದರೂ ಎಲ್ಲಿಂದ?"

ಪಿಸಾರೊವ್‌ನ ಈ ಮಾತನ್ನು ಲೆನಿನ್ ತಮ್ಮ ಲೇಖನದಲ್ಲಿ ಮೆಚ್ಚುಗೆಯಿಂದ ಉದ್ಧರಿಸಿದರು. 'ಕಾರ್ಯ ಸಾಧುತ್ವ', 'ಮುನ್ನೆಚ್ಚರಿಕೆ', 'ಮೂರ್ತ ಸನ್ನಿವೇಶ' ಇವುಗಳ ಹೆಸರಿನಲ್ಲಿ ನಿಷ್ಕ್ರಿಯರಾಗಿ ಉಳಿಯುವವರನ್ನು ಖಂಡಿಸುತ್ತಾ ಲೆನಿನ್ ನುಡಿದರು, "ನಮ್ಮ ಆಂದೋಲನಕ್ಕೆ ಇಂಥ ಕನಸುಗಾರಿಕೆ ತುರ್ತಾಗಿ ಬೇಕಾಗಿದೆ !" ಅತ್ಯಂತ 'ಪ್ರಾಕ್ಟಿಕಲ್' ಕ್ರಾಂತಿಕಾರಿಯಾದ ಲೆನಿನ್‌ಗೆ ಅಪಾರ ಕನಸುಗಾರಿಕೆಯೂ ಇತ್ತು. ಅಷ್ಟಲ್ಲದೆ ಎಚ್. ಜಿ. ವೆಲ್ಸ್ ಅವರನ್ನು 'ಕ್ರೆಮ್ಲಿನ್‌ನ ಕನಸುಗಾರ' ಎಂದರೇ!

ಲೆನಿನ್ ತುರ್ಗೆನೀವ್‌ರ ಬರೆಹಗಳಲ್ಲಿ ಸೂಕ್ಷ್ಮವಾಗಿ, ಕಲಾತ್ಮಕವಾಗಿ ಇದ್ದ ತ್ಸಾರ್‌ಶಾಹಿಯ ಟೀಕೆಯನ್ನು ಮೆಚ್ಚಿಕೊಂಡಿದ್ದರು. ಆದರೆ ತುರ್ಗೆನೀವ್‌ರ ನಡವಳಿಕೆಯಲ್ಲಿ ರಾಜಿಯ ಸುಳಿವು ಕಂಡಾಗ ಅದನ್ನು ಟೀಕಿಸಿದರು ಕೂಡ. ಗೊಂಚರೇವ್, ಗೊಗೊಲ್ ಎಲ್ಲರನ್ನೂ ಓದಿದ್ದ ಲೆನಿನ್ ತಮ್ಮ ಬರೆಹಗಳಲ್ಲಿ ಅಲ್ಲಿ ಕಾಣುವ ವ್ಯಕ್ತಿತ್ವ ವೈಶಿಷ್ಟ್ಯಗಳನ್ನು, ಸನ್ನಿವೇಶಗಳನ್ನು, ಹಾಸ್ಯವನ್ನು ಉದ್ಧರಿಸುತ್ತಾ ಹೋಗುತ್ತಿದ್ದರು. ಜರ್ಮನ್ ಕಮ್ಯುನಿಸ್ಟ್ ಪಕ್ಷದ ನಾಯಕನೂ, ಆಳುವವರ್ಗದೊಂದಿಗೆ ಸಂಧಾನ ಮಾಡಿಕೊಂಡವನೂ ಆದ ಕಾರ್ಲ್ ಕೌಟ್‌ಸ್ಕಿಯು ಎಷ್ಟರಮಟ್ಟಿಗೆ ವಾಸ್ತವದೊಂದಿಗೆ ಸಂಪರ್ಕವನ್ನೇ ಕಳೆದುಕೊಂಡುಬಿಟ್ಟಿದ್ದಾನೆ ಎಂದು ಟೀಕಿಸಿದ ಲೆನಿನ್, ಆತ ಚೆಖಾವ್‌ನ ಪಾತ್ರ ಇದೆಯಲ್ಲಾ 'ಮಫ್ಲರ್‌ನಲ್ಲಿರುವ ಮನುಷ್ಯ' ಅವನ ಹಾಗೆ ಎಂದು ಹಾಸ್ಯ ಮಾಡಿದ್ದರು. ಇಂಥ ಉದಾಹರಣೆಗಳು ಲೆಕ್ಕವಿಲ್ಲದಷ್ಟು.

ಟಾಲ್‌ಸ್ಟಾಯ್ ಬಗ್ಗೆ ಲೆನಿನ್ ಬಹಳ ಗಂಭೀರ ವಿಮರ್ಶೆ ಮಾಡಿದ್ದಾರೆ. ಆತನ ಬಗ್ಗೆ ಆತನ ಸಾಹಿತ್ಯದ ಬಗ್ಗೆ ಅವರು ಸುಮಾರು ಐದು ಪ್ರಬಂಧಗಳನ್ನು



*ಮ್ಯಾಕ್ಸಿಂ ಗಾರ್ಕಿಯವರೊಂದಿಗೆ ಲೆನಿನ್*

ಬರೆದಿದ್ದಾರೆ. ಮಾರ್ಕ್ಸ್‌ವಾದಿ ಸಾಹಿತ್ಯ ವಿಮರ್ಶೆಗೆ ಬೇಕಾದ ವರ್ಗದೃಷ್ಟಿಕೋನ, ಸರಳತೆ, ಟೀಕೆಯಲ್ಲಿ ಸಮತೋಲನ ಈ ಎಲ್ಲ ಗುಣಗಳಿಗೂ ಆ ಪ್ರಬಂಧಗಳು ಅತ್ಯಂತ ಒಳ್ಳೆಯ ಮಾದರಿಗಳು. ಟಾಲ್‌ಸ್ಟಾಯ್ ನುಡಿದಂತೆ ನಡೆದಾತ. ಸದಾ ತನ್ನ ಆತ್ಮಸಾಕ್ಷಿಯನ್ನು ತಾನೇ ಕೆದಕಿಕೊಳ್ಳುತ್ತಾ ಇದ್ದವನು. ಎಲ್ಲಾ ರೀತಿಯ ಅನ್ಯಾಯದ ವಿರುದ್ಧ, ಡಾಂಭಿಕತನದ ವಿರುದ್ಧ, ಸಿಡಿಯುತ್ತಾ ಹೋದವನು. ಮತ್ತೆ ಅತ್ಯಂತ ಒಳ್ಳೆಯ ಕಲಾವಿದ. ಪ್ರಬುದ್ಧ ಲೇಖಕ. ಹೀಗಾಗಿ ರಷ್ಯಾದ ಜನಜೀವನದ ಮೇಲೆ ಆತನ ಪ್ರಭಾವ ಅತ್ಯಂತ ಗಾಢವಾದದ್ದು. ಇವುಗಳನ್ನು ಲೆನಿನ್ ಹಾಡಿ ಹೊಗಳುತ್ತಾರೆ. ಆತನನ್ನು 'ರಷ್ಯಾದ ಕ್ರಾಂತಿಯ ಕನ್ನಡಿ' ಎಂದು ಕರೆಯುತ್ತಾರೆ. ರಷ್ಯನ್ ಸಮಾಜದಲ್ಲಿ ಕುದಿಯುತ್ತಿರುವ ಎಲ್ಲ ದ್ವಂದ್ವಗಳು, ನೋವುಗಳು – ಕೌಟುಂಬಿಕವಾದದ್ದು, ಧಾರ್ಮಿಕವಾದದ್ದು, ಹಳ್ಳಿಗಾಡಿನ ಸಮಸ್ಯೆಗಳಿಗೆ ಸಂಬಂಧಿಸಿದ್ದು – ಎಲ್ಲಕ್ಕೂ ಅಭಿವ್ಯಕ್ತಿ ನೀಡಿದ ಮಹಾನ್ ಲೇಖಕ ಎಂದು ಅವರ ವಿಮರ್ಶೆ ಎತ್ತಿ ಹಿಡಿಯುತ್ತದೆ. ಟಾಲ್‌ಸ್ಟಾಯ್‌ನನ್ನು ಓದದೆ ಅಂದಿನ ರಷ್ಯಾವನ್ನು ಗ್ರಹಿಸುವುದು ಸಾಧ್ಯವೇ ಇಲ್ಲ ಎನ್ನುತ್ತಾರೆ.

ಆದರೆ ಅನ್ಯಾಯವನ್ನು ಕ್ರಿಯಾಹೀನವಾಗಿ ಪ್ರತಿರೋಧಿಸುವುದು, ಆತ್ಮದಂಡನೆ ಮಾಡಿಕೊಳ್ಳುವುದು, ಕೊನೆಯಿಲ್ಲದ ಆತ್ಮವಿಮರ್ಶೆ, ಸಸ್ಯಾಹಾರದ ಅಭಿಮಾನ, ಯಂತ್ರ ನಾಗರಿಕತೆಯ ವಿರೋಧ ಇಂಥ ಎಲ್ಲ ಟಾಲ್‌ಸ್ಟಾಯ್ ಚಿಂತನೆಯನ್ನೂ ನಿರ್ದಯವಾಗಿ ಟೀಕಿಸುವ ಲೆನಿನ್, ಟಾಲ್‌ಸ್ಟಾಯ್ ಚಿಂತನೆಯ ಬೇರು ಇರುವುದು ಊಳಿಗಮಾನ್ಯ ಪದ್ಧತಿಯ ಕ್ರೌರ್ಯವನ್ನು ದ್ವೇಷಿಸುತ್ತಾ ಅದೇ ಸಮಯದಲ್ಲಿ ಆಧುನಿಕ ಕೈಗಾರಿಕೆಗಳನ್ನು ದ್ವೇಷಿಸುವ ಸಣ್ಣ ರೈತಾಪಿ ವರ್ಗದ ಚಿಂತನೆಯಲ್ಲಿ ಎಂದು ತೀರ್ಮಾನಿಸುತ್ತಾರೆ. ಇದನ್ನು ನಮ್ಮ ದೇಶಕ್ಕೆ ಅನ್ವಯಿಸಿ ನೋಡಿದಾಗ ಇದು ಗಾಂಧಿವಾದಕ್ಕೂ, ಒಂದು ಮಟ್ಟಿಗೆ ಲೋಹಿಯಾವಾದಕ್ಕೂ ಅನ್ವಯಿಸುವ ಟೀಕೆಯೇ !

ಮಹಾನ್ ಸಾಹಿತಿ ಮ್ಯಾಕ್ಸಿಂ ಗಾರ್ಕಿಯವರೊಂದಿಗೆ ಲೆನಿನ್‌ಗೆ ಇದ್ದ ಸಂಬಂಧ ವಿಶೇಷವಾದದ್ದು. ಇಬ್ಬರೂ ಆತ್ಮೀಯ ಗೆಳೆಯರಂತೆ ಹರಟಿದ್ದೇನು, ನಕ್ಕಿದ್ದೇನು, ಪರಸ್ಪರ ಟೀಕಿಸಿಕೊಂಡದ್ದೇನು, ಚೆಸ್ ಆಡಿದ್ದೇನು ! ಗಾರ್ಕಿಗಂತೂ ಲೆನಿನ್‌ರವರ ಬಗ್ಗೆ ಆತ ತನ್ನನ್ನು ಕಡೆದ ಶಿಲ್ಪಿ ಎಂಬ ಭಾವನೆಯೇ ಇತ್ತು. ಕ್ರಾಂತಿಯ ದೀರ್ಘ ಸಿದ್ಧತೆಯ ಅವಧಿಯಲ್ಲಿ ಅನೇಕ ಬಿರುಕುಗಳು, ಕಹಿಯಾದ ಮಾತುಗಳೂ ಇಬ್ಬರ ನಡುವೆ ನಡೆದಿರಬಹುದು. ಆದರೆ ಲೆನಿನ್‌ಗೆ ಗಾರ್ಕಿಯ ಬೆಲೆ ಗೊತ್ತಿತ್ತು. ಗಾರ್ಕಿಗೆ ಎಲ್ಲ ಭಿನ್ನಾಭಿಪ್ರಾಯವನ್ನೂ ಮೀರಿ ಲೆನಿನ್ ಎಂದರೆ ತೀವ್ರ ಶ್ರದ್ಧೆ, ಅಭಿಮಾನ, ಗೌರವ. ಇದಕ್ಕೆ ಸಾಕ್ಷಿಯಾಗಿ ಲೆನಿನ್ ತೀರಿಕೊಂಡಮೇಲೆ ಗಾರ್ಕಿ ಬರೆದ ಲೇಖನ ಅಗಲಿದ ಮಹಾನ್ ನಾಯಕನ ಬಗ್ಗೆ ಸಮಗ್ರ ಚಿತ್ರಣವನ್ನು ನೀಡುತ್ತದೆ.

ಗಾರ್ಕಿ ಲೆನಿನ್‌ರ ಆತ್ಮವಿಶ್ವಾಸ, ಮಗುವಿನಂತೆ ನಗಬಲ್ಲ ಗುಣ, ಆತನ ಅಸಾಧಾರಣ ಸರಳತೆ, ಅಯಸ್ಕಾಂತದಂಥ ವ್ಯಕ್ತಿತ್ವ, ತಾನು ನಾಯಕ ಎಂಬ ಅರಿವೇ ಇಲ್ಲದಂಥ ನಡವಳಿಕೆ ಎಲ್ಲವನ್ನೂ ವರ್ಣಿಸಿದ್ದಾರೆ. ಒಮ್ಮೆ ಗಾರ್ಕಿ

ಅವರನ್ನು ಭೇಟಿಯಾದಾಗ ಲೆನಿನ್, ಟಾಲ್‌ಸ್ಟಾಯ್ ಅವರ 'ವಾರ್ ಅಂಡ್ ಪೀಸ್' ಪುಸ್ತಕ ಹಿಡಿದು ಕೂತಿದ್ದರಂತೆ. ಅದರಲ್ಲಿನ 'ಶಿಕಾರಿ'ಯ ಚಿತ್ರವನ್ನು ಮತ್ತೆ ಓದಲು ಆಸೆಯಾಗುತ್ತಿದೆಯೆಂದೂ ಆದರೆ ಓದಲು ಹೊರಟಾಗ ತುರ್ತು ಪಾರ್ಟಿಯ ಕೆಲಸ ಬಂತೆಂದೂ ಹೇಳಿದರಂತೆ. ಟಾಲ್‌ಸ್ಟಾಯ್ ಬಗ್ಗೆ ಹೇಳುತ್ತಾ 'ಅವನಿಗೆ ಹೋಲಿಸಬಹುದಾದವರು ಯುರೋಪ್‌ನಲ್ಲಿ ಯಾರಿದ್ದಾರೆ' ಎಂದು ಕೇಳಿ, ನಂತರ ಅವರೇ 'ಯಾರೂ ಇಲ್ಲ' ಎಂದರಂತೆ.

ತಮ್ಮ 'ತಾಯಿ' (ಮದರ್) ಕಾದಂಬರಿಯನ್ನು ಮೆಚ್ಚಿಕೊಂಡ ಲೆನಿನ್ ತಮಗೆ ಅದು 'ಉಪಯುಕ್ತ' ಎಂದದ್ದನ್ನು ಬಿಟ್ಟು ಅದಕ್ಕಿಂತ ಹೆಚ್ಚಿಗೆ ಹೊಗಳಲಿಲ್ಲ ಎಂದು ಗಾರ್ಕಿ ಖುಷಿಯಿಂದಲೇ ಹೇಳಿಕೊಳ್ಳುತ್ತಾರೆ. ಅಲ್ಲದೆ ಲೆನಿನ್ ಅದರ ಇತಿಮಿತಿಗಳನ್ನೂ ಟೀಕಿಸಿದರಂತೆ ! ಗಾರ್ಕಿಯವರ 'ಹೊಸ ರೀತಿಯ ದೇವರ ಕಲ್ಪನೆ' ಇವೆಲ್ಲವನ್ನೂ ಲೆನಿನ್ ಒಪ್ಪುತ್ತಿರಲಿಲ್ಲ. ಒಬ್ಬ ರಾಜಕಾರಣಿ ಮತ್ತು ಒಬ್ಬ ಸಾಹಿತಿಯ ನಡುವಿನ ಟೀಕೆ, ಮೆಚ್ಚುಗೆ, ಮಾರ್ಗದರ್ಶನ ಈ ಎಲ್ಲವನ್ನೂ ಒಳಗೊಂಡ ಸಂಕೀರ್ಣ ಸಂಬಂಧ ಹೇಗಿರಬೇಕು ಎಂಬುದಕ್ಕೆ ಈ ಇಬ್ಬರು ಅಸಾಧಾರಣ ವ್ಯಕ್ತಿಗಳ ಮಧ್ಯದ ಸಂಬಂಧ ಒಂದು ಉತ್ತಮ ನಿದರ್ಶನ.



**ಪತ್ನಿಯೊಂದಿಗೆ ಲೆನಿನ್**

ಲೆನಿನ್ ಒಬ್ಬ ಅಸಾಮಾನ್ಯ ಅಜಿಟೇಟರ್ – ಪ್ರಾಪಗಾಂಡಿಸ್ಟ್. ಹೇಳಬೇಕಾದ್ದನ್ನು ನೇರವಾಗಿ ಸರಳವಾಗಿ ಹೇಳಬಲ್ಲ ಪ್ರತಿಭಾಶಾಲಿ. ಆದರೆ ಆ ಹೊರಗಿನ ಸರಳವಾದ ಕವಚದ ಒಳಗೆ ಅದೆಂಥ ಪ್ರಗಾಢ ಚಿಂತನೆ ಇರುತ್ತಿತ್ತು. ಬದುಕಿನುದ್ದಕ್ಕೂ ಅವರು ಅನೇಕ ಗೊಂದಲಗಳನ್ನು ಹುಟ್ಟುಹಾಕುತ್ತಿದ್ದ ಜನರನ್ನು ಬಯಲಿಗೆಳೆಯಬೇಕಾದ್ದರಿಂದ ತೀರಾ ಮೊನಚಾದ ಶೈಲಿಯನ್ನು, ವ್ಯಂಗ್ಯ–ವಿಡಂಬನೆಗಳ ಬಾಣವನ್ನು ಬಳಸುತ್ತಾ ಹೋದರು. ಅದನ್ನು ಕೇಳಿಸಿಕೊಂಡ ಅವರ ಆಪ್ತರೂ ಸಹ, "ಸದ್ಯ, ನಾನು ಲೆನಿನ್‌ರ ಶಿಬಿರದಲ್ಲಿದ್ದೇನೆ, ನನಗಿದು ಅನ್ವಯವಾಗುವುದಿಲ್ಲ, ಬದುಕಿದೆ !" ಎಂದು ನಿಟ್ಟುಸಿರುಬಿಡುವಂತೆ! ಮೆನ್ಷೆವಿಕ್ ಹಾಗೂ ಬೋಲ್ಷೆವಿಕ್ ಬಣಗಳ ನಡುವೆ ಸದಾ ತಾರಾಡುತ್ತಿದ್ದ ಟ್ರಾಟ್‌ಸ್ಕಿಯನ್ನು ಲೆನಿನ್ 'ಶಟಲ್ ಕಾಕ್' ಎಂದಿದ್ದರು. 'ಓಲಾಡುವ ಖದೀಮ' ಎಂದಿದ್ದರು. ಬ್ರೆಸ್ಟ್–ಲಿಟೋವ್‌ಸ್ಕ್ ಶಾಂತಿ ಸಭೆಯಲ್ಲಿ ಜರ್ಮನರು ತನ್ನ ಉಡುಪನ್ನು ವಿರೋಧಿಸಿದ್ದರಿಂದ ತಾನು ಸಭೆಗೆ ಹೋಗುವುದಿಲ್ಲ ಎಂದ ಟ್ರಾಟ್‌ಸ್ಕಿಗೆ ಶಾಂತಿ ಅಂದು ಎಷ್ಟು ಅನಿವಾರ್ಯ ಎಂಬುದು ಅರ್ಥವಾಗಿರಲಿಲ್ಲ. ಆಗ ಲೆನಿನ್ "ಅವಶ್ಯವಿದ್ದರೆ ಪೆಟಿಕೋಟ್‌ನಲ್ಲಿ ಹೋಗಿ ಬಾ. ಆದರೆ ಶಾಂತಿಯನ್ನು ಸಾಧಿಸಿಕೊಂಡೇ ಬರಬೇಕು" ಎಂದಿದ್ದರು. ಕಾರ್ಲ್ ಕೌಟ್‌ಸ್ಕಿ ರಾಜಿಪರವಾದ ಇಂಟರ್‌ನ್ಯಾಷನಲ್ ಸಂಘಟನೆಯನ್ನು ಮಾಡಿಕೊಂಡಿದ್ದಾಗ, ಅವರ ಹೇಡಿತನವನ್ನು ಟೀಕಿಸಿ ಅದನ್ನು 'ಯೆಲ್ಲೋ ಇಂಟರ್‌ನ್ಯಾಷನಲ್' ಎಂದರು. ಟ್ರಾಟ್‌ಸ್ಕಿಯ ಬಗ್ಗೆ "ಆತನ ಮಾತುಗಳು ಮಿನುಗುತ್ತವೆ, ಆದರೆ ಥಳಥಳಿಸುವುದೆಲ್ಲಾ ಚಿನ್ನವಲ್ಲ" ಎಂದರು. ಬುಖಾರಿನ್‌ನ ಬಗ್ಗೆ "ಆತ ನಮ್ಮ ಪಕ್ಷದ ಡಾರ್ಲಿಂಗ್, ಆದರೆ ಅವನ ಮಾತಿನಲ್ಲಿ ಅದೆಷ್ಟು ಮಾರ್ಕ್ಸ್‌ವಾದ ಇದೆಯೋ, ನಾನು ಕಾಣೆ" ಎಂದರು. ಅವರ ಹರಿತವಾದ ಟೀಕೆಗೆ ಅವರ ಪ್ರೀತಿಗೆ ಪಾತ್ರರಾಗಿದ್ದ ಮಹಿಳಾ ನಾಯಕಿಯರು ರೋಸಾ ಲಕ್ಸೆಂಬರ್ಗ್ ಹಾಗೂ ಕ್ಲಾರಾ ಜೆಟ್‌ಕಿನ್ ಕೂಡ ತುತ್ತಾಗುತ್ತಿದ್ದರು. ಇದನ್ನು ಅನೇಕರು ವಿಶೇಷವಾಗಿ ಬಲಪಂಥೀಯರು ಲೆನಿನ್‌ರ ಅವಗುಣ ಎಂಬಂತೆ ಚಿತ್ರಿಸಿರುವುದುಂಟು.

ಆದರೆ ಗಾರ್ಕಿ ಕೊಡುವ ಚಿತ್ರಣವೇ ಬೇರೆ. ತಾವು ಟೀಕಿಸಿದವರನ್ನು ಮತ್ತೆ ಭೇಟಿಯಾದಾಗ ಲೆನಿನ್‌ರಲ್ಲಿ ಯಾವ ಹಳೆಯ ಕಿಡಿಯೂ ಕಾಣುತ್ತಿರಲಿಲ್ಲ. ಅಷ್ಟೇ ಅಲ್ಲ, ತಾವು ಅಷ್ಟೊಂದು 'ಬೈದಿದ್ದ' ವ್ಯಕ್ತಿಯ ಅನೇಕ ಗುಣಗಳನ್ನೂ, ಪ್ರತಿಭೆಗಳನ್ನೂ ಅವರು ಹಾಡಿ ಹೊಗಳುತ್ತಿದ್ದದ್ದೂ ಉಂಟು. ಹೀಗಾಗಿ ಲೆನಿನ್‌ರ ಹರಿತವಾದ ವಿಮರ್ಶೆ, 'ಬೈಗುಳ'ಗಳ ಹಿಂದೆ ಯಾವ ವೈಯಕ್ತಿಕ ಇಷ್ಟಾನಿಷ್ಟಗಳ ಸೋಂಕೂ ಇರುತ್ತಿರಲಿಲ್ಲ ಎಂಬುದನ್ನು ನಾವು ಗುರುತಿಸಲೇಬೇಕು. ಧ್ಯೇಯ, ನಿಷ್ಠೆ, ವಿಶಾಲ ಮನಸ್ಸು ಇದ್ದುದರಿಂದಲೇ ಅವರಿಂದ ಬೈಸಿಕೊಂಡವರೂ ಅವರಿಗೆ ವೈಯಕ್ತಿಕ ಶತ್ರುಗಳಾಗುತ್ತಿರಲಿಲ್ಲ. ಆ ಗುಣಗಳಿಲ್ಲದವರು, ಅಂಥ ಭಾಷೆಯನ್ನು ಉಪಯೋಗಿಸುವುದು ಮಾತ್ರ ಫಲಪ್ರದವಾಗುವುದಿಲ್ಲ !

ಅದ್ಭುತ ಬರಹಗಾರರಾದ ಲೆನಿನ್‌ರ ಪ್ರಬಂಧಗಳು ರಾಜಕೀಯ ಬರವಣಿಗೆ ಹೇಗಿರಬೇಕು ಎಂಬುದಕ್ಕೆ ಎಷ್ಟು ಒಳ್ಳೆಯ ದೃಷ್ಟಾಂತ ! ಅದೆಂಥ ನಮ್ಮನ್ನು ಆವರಿಸಿ ಬಿಗಿಯುವ ತರ್ಕದ ಕಬಂಧ ಬಾಹುಗಳು. ಅದೆಂಥ ಸರಳತೆ–ಪ್ರಗಾಢತೆ, ಅದೆಂಥ ಲವಲವಿಕೆ, ಅದೆಂಥ ಭಾಷಾ ಸೌಂದರ್ಯ! ಆದರೆ ಇಂದು ನಾವು ಓದುವ ಅನೇಕ ರ್‍ಯಾಡಿಕಲ್ ಆದ ರಾಜಕೀಯ ಬರೆಹಗಳು, ಭಾಷಣಗಳು ಹೇಗಿರುತ್ತವೆ? ನೀರಸವಾಗಿ, ಜಡವಾಗಿ, ಪಾಡಿದ್ದೆ ಪಾಟ ಕಿಸಬಾಯಿ ದಾಸ ಎಂಬಂತೆ. ಮಾವೋ ತಮಾಷೆ ಮಾಡಿದ 'ಎಂಟು ಕಾಲಿನ ಪ್ರಬಂಧದ' ಗೊಡ್ಡು ಸಾಂಪ್ರದಾಯಿಕತೆಯಂತೆ! ಪ್ರತಿಯೊಂದು ಲೇಖನವೂ ಒಂದೇ ರೀತಿಯ ಹೋರಾಟದ ಕರೆಯೊಂದಿಗೆ ಮುಗಿಯಬೇಕೆಂಬ ಹಠ! ಆದರೆ ಲೆನಿನ್‌ರ ಮುಕ್ತಾಯದ ಪ್ಯಾರಾಗಳು, ಕೊನೆಯ ವಾಕ್ಯ ಎಷ್ಟು ಸೃಜನಶೀಲವಾಗಿರುತ್ತಿದ್ದವೆಂದರೆ, ಇವುಗಳೇ ಒಂದು ಅಧ್ಯಯನದ ವಸ್ತುವಾಗಬಹುದು. ಅವರು ಕೊಟ್ಟ ಶೀರ್ಷಿಕೆಗಳಾದರೂ ಎಂಥವು – 'ವನ್ ಸ್ಟೆಪ್ ಫಾರ್‌ವರ್ಡ್, ಟೂ ಸ್ಟೆಪ್ಸ್ ಬ್ಯಾಕ್', 'ಲೆಫ್ಟ್ ವಿಂಗ್ ಕಮ್ಯುನಿಸಂ, ಆ್ಯನ್ ಇನ್‌ಫೆಂಟೈಲ್ ಡಿಸ್‌ಆರ್ಡರ್', 'ಫ್ಯೂ ಬೆಟರ್ ಫ್ಯೂ'... ಹೀಗೆ ಎಷ್ಟೋ!

ಸಮಾಜವಾದವನ್ನು ವ್ಯಾಖ್ಯಾನಿಸುತ್ತಾ ಗಂಭೀರ, ದೀರ್ಘ ಪ್ರಬಂಧಗಳನ್ನೇ ಬರೆದ ಲೆನಿನ್, ಕ್ರಾಂತಿಯ ನಂತರ ಒಂದೇ ವಾಕ್ಯದಲ್ಲಿ ಹೇಳಿದ್ದರು. "ಸಮಾಜವಾದ = ಸೋವಿಯತ್+ವಿದ್ಯುಚ್ಛಕ್ತಿ." ಇದರಲ್ಲಿ ಅಡಕವಾಗಿರುವ ಸತ್ಯ ಇಷ್ಟೇ; ಸಮಾಜವಾದ ಅಂದು ಯಶಸ್ವಿಯಾಗಬೇಕೆಂದರೆ ಅವಶ್ಯಕವಾದದ್ದು ನಿಜವಾದ ಜನತೆಯ ರಾಜಕೀಯ ಶಕ್ತಿ ಮತ್ತು ಆಧುನಿಕ ತಂತ್ರಜ್ಞಾನದ ಮೂಲಕ ರಷ್ಯಾದ ಸಮಸ್ಯೆಗಳನ್ನು ಬಗೆಹರಿಸುವ ಛಲ. ಇದು ಗಣಿತದ ಭಾಷೆಯೋ, ಕಾವ್ಯದ ಕುಣಿದಾಟವೋ?

ಸಮಾಜವಾದಿ ಕ್ರಾಂತಿಗೆ ಮುನ್ನ ಗಡೀಪಾರಾಗಿದ್ದ ಲೆನಿನ್ ಏಪ್ರಿಲ್‌ನಲ್ಲಿ ರಷ್ಯಾಗೆ ಬಂದಿಳಿದರು. ಬಂಡವಾಳಶಾಹಿ ವರ್ಗದ ಪ್ರತಿನಿಧಿಯಾಗಿದ್ದ ಕೆರೆನ್‌ಸ್ಕಿ ಅತ್ಯಂತ ಜನವಿರೋಧಿ ಆಡಳಿತ ನಡೆಸುತ್ತಿದ್ದ. ಜನರ ಸಹನೆಯ ಕಟ್ಟೆ ಒಡೆದುಹೋಗಿತ್ತು. ಆಗ ಬೇಕಾಗಿತ್ತು ಇನ್ನೊಂದು ಕ್ರಾಂತಿ – ಸಮಾಜವಾದಿ ಕ್ರಾಂತಿ. ಆದರೆ ಗೊಡ್ಡು ಸಿದ್ಧಾಂತಿಗಳು ಮಾತ್ರ ಈಗ ತಾನೆ ಬಂಡವಾಳವಾದ ರಷ್ಯಾದಲ್ಲಿ ಅಸ್ತಿತ್ವಕ್ಕೆ ಬಂದಿದೆ. ಅದು ಮಾಗಿ, ಕೊಳೆತಮೇಲೆ ಇನ್ನೊಂದು ಕ್ರಾಂತಿ ಸಾಧ್ಯ ಎಂದು, ಇದೇ 'ಅಧಿಕೃತ ಮಾರ್ಕ್ಸ್‌ವಾದ' ಎಂದು ಮಂತ್ರ ಪಠಿಸುತ್ತಿದ್ದರು. ಆದರೆ ಲೆನಿನ್, ಬದುಕನ್ನು ಕಣ್ಣಿಗೆ ಪಟ್ಟಿ ಕಟ್ಟಿಕೊಳ್ಳದೆ ನೋಡಬಲ್ಲ ಲೆನಿನ್, ಕೂಡಲೇ ಇನ್ನೊಂದು ಕ್ರಾಂತಿಯಾಗಬೇಕೆಂದು ಕರೆ ನೀಡಿದರು. ಅದಕ್ಕಾಗೇ ಹೆಸರಾಂತ ಏಪ್ರಿಲ್ ಥೀಸಿಸ್ ಬರೆದರು. ಅದರಲ್ಲಿ ಎಷ್ಟು ಸಮಯೋಚಿತವಾಗಿ ಎಷ್ಟು ಸುಂದರವಾಗಿ ಗಯಟೆಯನ್ನು ಉದ್ಧರಿಸಿದರು ಗೊತ್ತೇ –

*"ಸಿದ್ಧಾಂತವೆಂಬುದಕ್ಕಿದೆ ಒಂದೇ ಬಣ್ಣ ಅದು ಬೂದು ಬಣ್ಣ*
*ಆದರೆ ಬದುಕೆಂಬ ಚಿರಂಜೀವಿ ವೃಕ್ಷವೋ ನಿತ್ಯ ಹರಿದ್ವರ್ಣ'.'*

ಇಂಥ ಲೆನಿನ್‌ರ ಕುರಿತಾದ ಎಲ್ಲಾ ಅಪಪ್ರಚಾರ, ಕುಹಕಗಳನ್ನು ಬಯಲಿಗೆಳೆದು ಆತನ ಜಗದ್ವಂದ್ಯ ಬಹುಮುಖಿ ವ್ಯಕ್ತಿತ್ವವನ್ನು ಪರಿಚಯಿಸಬೇಕಾದದ್ದು ಎಲ್ಲಾ ಸತ್ಯನಿಷ್ಠರ, ಚಳುವಳಿಗಾರರ ಆದ್ಯ ಕರ್ತವ್ಯವಾಗಬೇಕು. ಅದು ಕ್ರಾಂತಿಯ ದಿಕ್ಕಿನಲ್ಲಿ ಮುಖ್ಯ ಹೆಜ್ಜೆ. ಮತ್ತೆ ಕ್ರಾಂತಿ ಅತ್ಯವಶ್ಯವಾದದ್ದು. ಏಕೆಂದರೆ ಮತ್ತೆ ಲೆನಿನ್‌ರನ್ನೇ ಉದ್ಧರಿಸೋಣ.

"ಕ್ರಾಂತಿ ಎಂದರೆ ಅದು ಶೋಷಿತರ, ದಮನಿತರ ಹಬ್ಬದ ದಿನ !"

**ಡಾ|| ಬಿ. ಆರ್. ಮಂಜುನಾಥ್**
ನಂ. ೬೧, ೪ನೇ ಅಡ್ಡರಸ್ತೆ, ಅಶೋಕನಗರ
ಎನ್. ಆರ್. ಕಾಲೋನಿ ಹತ್ತಿರ, ಬೆಂಗಳೂರು – ೫೬೦ ೦೫೦






ತಿಂಗಳ ಕಥೆ

# ಅಮರ ಮಧುರ ಪ್ರೇಮ

**ಬಾ**ಬೂಜಿ ತಲೆ ಗೊಂದಲದ ಗೂಡಾಗಿತ್ತು. ಸಂಜೆವರೆಗೂ ಕಾಯುವದು ಅವನಿಗೆ ಅಸಾಧ್ಯವಾಗಿ ಹೋಗಿತ್ತು. ನಿವೃತ್ತಿಯಾದ ಐದು ವರ್ಷಗಳಲ್ಲಿ ಅವನೆಂದೂ ಟೆನ್ಸನ್‌ಗೊಳಗಾಗಿರಲಿಲ್ಲ. ಆದರೆ ಇಂದು ಮಧ್ಯಾಹ್ನ ಊಟಮಾಡಿ ಮಲಗ ಬೇಕೆಂದಾಗ ಫೋನು ರಿಂಗಣಿಸಿತ್ತು. ನಾಲ್ಕೇ ನಾಲ್ಕು ಮಾತು ಅವನ ರಕ್ತದ ವೇಗ ಹೆಚ್ಚಿಸಿದ್ದವು. ಆ ಕಡೆಯ ಧ್ವನಿ ಮಾತಾಡುತ್ತಿರಲಿಲ್ಲ, ಕೇವಲ ಆದೇಶ. 'ಬಾಬು ಬೇಗ ಬೆಂಗಳೂರಿಗೆ ಬಾ. ಒಂದು ವಾರಾಯಿತು ಬೆಂಗಳೂರಲ್ಲಿ ನೆಲೆಯಾಗಿದ್ದೇನೆ. ಅಡ್ರೆಸ್ ಬರೆದುಕೋ... ನಾಳೆ ಬೆಳಿಗ್ಗೆ ದಾರಿಕಾಯ್ತೇನೆ' ಎಂದು ಫೋನ್ ಇಡುವುದರಲ್ಲಿದ್ದ. 'ಯಾಕ ನಂದೂ, ಆರಾಮದೀಯಲ್ಲ.' ಬಾಬೂಜಿ ಎದೆಬಡಿತ ಜೋರಾಗಿದ್ದು ಈ ಮಾತಿನಿಂದಲೇ ಅರ್ಥ ಮಾಡಿಕೊಂಡಿದ್ದ ನಂದೂ. 'ಏನೂ ಆಗಿಲ್ಲ ಗುಂಡಕಲ್ಲಾಗಿದ್ದೀನಿ... ಟೆನ್ಸನ್ ಮಾಡ್ಕೋಬ್ಯಾಡ ನಾನು ಮದುವಿ ಆಗೊ ತೀರ್ಮಾನ ಮಾಡೀನಿ ನಿನ್ನ ಜೊತೆ ಸ್ವಲ್ಪ ಮಾತಾಡಬೇಕು. ನಾಳಿ ಬೆಳಿಗ್ಗಿ ಇಲ್ಲೇ ಮಾತಾಡೂನು...' ಫೋನ್ ಇಟ್ಟಿದ್ದ.

ನಂದೂ ಅನಾರೋಗ್ಯದಿಂದ ಅಡ್ಮಿಟ್ ಆಗಿದ್ರೂ ಬಾಬೂಜಿಗೆ ಅಂಥಾ ಗಾಬರಿ ಏನೂ ಆಗ್ತಿರಲಿಲ್ಲ. ಆದ್ರ ನಂದೂ ಹೇಳಿದ ಮಾತು ಅವನ ರಕ್ತದೊತ್ತಡ ಹೆಚ್ಚಿಸಿತ್ತು. ಮದುವಿ... ಅದೂ ಈ ವಯಸ್ಸಿನಾಗ. ಏನಾಯ್ತವನಿಗಿ... ಯಾಕ ಇಂಥಾ ತೀರ್ಮಾನ ತಗೊಂಡ. ಹೋಗ್ಲಿ ವಿಜಾಪೂರದಾಗಿದ್ದಾವ ಬೆಂಗಳೂರಿಗೆ ಯಾಕ ಹೋದಾ... ಯಾವಾಗ ಹೋದಾ... ಅಲ್ಲಿ ಮನಿಬ್ಯಾರೆ ಮಾಡ್ಯಾನ. ಊಹೂಂ... ಒಂದೂ ತಿಳೀಲಾರ್ದ ಒದ್ದಾಡ್ತಿತ್ತು ಬಾಬೂಜಿ ಜೀವ. ಕೇವಲ ಎರಡು ತಿಂಗಳ ಹಿಂದ ಬಾಬೂಜಿ ಮೊಮ್ಮಗನ ನಾಮಕರಣಕ್ಕ ನಂದೂ ಧಾರವಾಡಕ ಬಂದಿದ್ದ. ಅವಾಗೇನೂ ಸುದ್ದಿ ಇಲ್ಲ. ಅದೇ ಪ್ರಶಾಂತ ಮುಖ. ಅದೇ ನಗು. ಎಲ್ಲಾ ಸ್ನೇಹಿತ್ರು ಸೇರಿದ್ರೂ ಈ ಯಾವ ಸುದ್ದೀನೂ ಬಾಯಿಬಿಟ್ಟಿರಲಿಲ್ಲ. ಈಗ ಧಡಕ್ಕನ ಇಂಥಾ ಸುದ್ದಿಕೊಟ್ಟಿದ್ದ ಅದೂ ಬೆಂಗಳೂರಿಂದ. ಬಾಬೂಜಿ ತಿರಿಗಿ ಫೋನ್ ಮಾಡಿ ಮಾತಾಡಬೇಕಂದ್ರ ನಂದೂ ಬರೀ ಅಡ್ರೆಸ್ ಕೊಟ್ಟಿದ್ದ ಫೋನ್ ನಂಬರ್‌ಕೊಡ್ಲಿಲ್ಲ. ಸರೀ ಹೋದರ ತಿಳೀತದಲ್ಲ, ಧಾರವಾಡದಿಂದ ಬೆಂಗಳೂರು ಎಷ್ಟು ದೂರ, ಬೆಳಿಗ್ಗೆ ಅಲ್ಲಿರ್ತೀನಿ ಅನಕೊಂಡು ಸುಮ್ಮನಾದ್ರೂ ಮನಸು ಕೇಳ್ತಿಲ್ಲ. ಜೋಕ... ಜೋಕ್ ಮಾಡೋ ವ್ಯಕ್ತಿತ್ವ ನಂದೂದಲ್ಲ. ಯಾವಾಗಲೂ ಗಂಭೀರ. ಆದ್ರೂ ನಿವೃತ್ತಿ ಆಗಿ ಐದು ವರ್ಷಾತು. ಹೆಚ್ಚೂ ಕಡಿಮಿ ತಿಂಗಳುಗಳ ವ್ಯತ್ಯಾಸ ಬಿಟ್ರ ಇಬ್ಬರದೂ ಒಂದ ವಯಸ್ಸು. ಈ ವಯಸ್ಸಿನಾಗ ಮದುವಿ ಅಂದ್ರ... ಛೇ... ಅಂತ ಎಷ್ಟೇ ತಲಿ ಕೊಡವಿದರೂ ಬಾಬೂಜಿ ತಲಿ ಒಳಗಿನ ಸಂಘರ್ಷ ನಿಲ್ಲಲಿಲ್ಲ. ಫೋನಿನೊಳಗ ಮಾತಾಡಿದ ನಂದೂನ ಧ್ವನಿ, ಆ ದೃಢತೆ. ಸ್ಪಷ್ಟ ಮಾತು. ಅಂತಿಮ ತೀರ್ಮಾನ. ಬಾಬೂಜಿ ಎದ್ದು ಟೀ ಕುಡಿದು ಬಂದ್ರು. ಹೊರಗಡೆ ಹೋದರೆನಾದ್ರೂ ಸ್ವಲ್ಪ ಸಮಾಧಾನ ಆದೀತು ಅಂತ ಹೋದ್ರು. ಎಲ್ಲಿ ಹೋದ್ರೂ ಮನಸ ಜೋತೇನೇ ಒಯ್ಯಬೇಕಲ್ಲ. ಪ್ರತೀ ಸೆಕೆಂಡಿಗೂ ಅವರ ತಲೀ ನರಾ ಬಿಗೀತಾನ ಹೊರಟು ದೊಡ್ಡದಾಗಿ ತಲಿನೋವು ಆರಂಭ ಆತು. ತಿರುಗಿ ಮನೀಗಿ ಬರೂವಾಗ ಅವಿರಿಗಿ ಭಯಾ ಆರಂಭ ಆತು. ಯಾರೋ ನಂದೂನ ಆಸ್ತಿ ಸಲುವಾಗಿ ಹಿಂಗ ತಲೀ ಕೆಡಿಸಿರಬೇಕು. ಅದನ್ನೂ ಅವರೀಗಿ ನಂಬಾಕ ಆಗ್ತಾ ಇಲ್ಲ. ಅದೂ ನಂದೂ ವಿಷಯದಾಗ. ಪ್ರೊಫೆಸರ್ ನಂದ ಕುಮಾರ ಯಾರಾದ್ರೂ ತಲೀ ಕೆಡಿಸಿದರ ಮದುವಿ ಆಗಾಕ ಸಾಧ್ಯಾನಾ. ಅದೂ ಈ ವಯಸ್ಸಿನಾಗ. ಛೇ ಅಲ್ಲೀಗಿ ಹೋದ್ರ ತಿಳಿಯೂದು. ಆದರೂ ಸ್ವಲ್ಪ ವಿವರವಾಗಿ ಹೇಳಿದ್ರ ಅವನ ಗಂಟೇನು ಹೋಗ್ತಿತ್ತು. ಬಾಬೂಜಿ ಉಸಿರಾಟ ಜೋರಾಗಿತ್ತು.

ಬಸ್ಸಿನ ಕಿಟಕಿಯಿಂದ ಎಂಥಾ ಗಾಳಿ ಬೀಸಿದರೂ ಸಮಾಧಾನ ಆಗ್ತಾಯಿಲ್ಲ. ನಂದೂನ ಇಡೀ ಬದುಕಿನ ಪ್ರತಿ ಹೆಜ್ಜೆಗೂ ಜೊತೆ ಇದ್ದವರು ಬಾಬೂಜಿ. ಅವನು ಇವತ್ತಿಗೂ ಬಾಬೂಜಿ ಜೀವನದ ಒಂದು ಭಾಗವೇ. ನಂದೂನಂಥ ದೃಢ

ನಿರ್ಧಾರದ ವ್ಯಕ್ತಿಯನ್ನು ಅವರು ಜೀವಮಾನದಲ್ಲೇ ನೋಡಿರಲಿಲ್ಲ. ಧಾರವಾಡ ವಿಶ್ವವಿದ್ಯಾಲಯದಲ್ಲಿ ಓದುವಾಗ ಹಾಸ್ಟೇಲಿನ ಒಂದೇ ರೂಂನಲ್ಲಿ ಇದ್ದವರು. ಜೊತೇಲೇ ಓದಿ ಬೆಳದು ಕೆಲಸಕ್ಕ ಸೇರಿದವರು. ಜೊತೇಲೇ ನಿವೃತ್ತಿ ಆದವರು. ನಿವೃತ್ತಿ ಆಗಿ ಈಗ ಐದು ವರ್ಷ. ನಂದೂ ವಿಜಾಪೂರಕ ಹೋಗಿದ್ದ. ಆದ್ರ ಬದುಕಿನುದ್ದಕ್ಕೂ ಅವನ ಬ್ರಹ್ಮಚರ್ಯದ ಜೀವನ, ಬದ್ಧತೆ ಸ್ನೇಹಿತರನ್ನು ದಂಗಾಗಿಸಿತ್ತು. ಬಸ್ ಯಾವುದೋ ನಿಲ್ದಾಣದಲ್ಲಿ ನಿಂತು ಲೈಟ್ ಹೊತ್ತಿದವು. ಯಾರೋ ನವ ದಂಪತಿಗಳು ಬಸ್ಸೇರಿ ಒಳಬಂದರು. ಹನಿಮೂನಿಗೆ ಹೊರಟಿರಬೇಕು. ಬಾಬೂಜಿ ಅವರನ್ನೇ ನೋಡುತ್ತ ಒಂದು ನಿಟ್ಟುಸಿರು ಬಿಟ್ಟರು. ತಾವು ಧಾರವಾಡದಲ್ಲಿ ಓದುವಾಗ ನಂದೂ ಚಂದನಾ ಹಿಂಗ ಇದ್ದರು. ಆಗ ಇದೇ ವಯಸ್ಸು...

ನಂಬಲೂ ಅಸಾಧ್ಯ. ಎರಡು ವರ್ಷ ಅವರು ಒಂದೇ ಒಂದು ಮಾತೂ ಬಾಯಿ ಬಿಟ್ಟು ಆಡಲಿಲ್ಲ. ಆದರೆ ಅವರ ಕಣ್ಣುಗಳು ಮಾತ್ರ ನಿರಂತರ ಮಾತನಾಡಿದವು. ನಂದೂ ಒಂದೇ ಒಂದು ಗಳಿಗೆ ತಡವಾಗಿ ಕ್ಲಾಸಿಗೆ ಬಂದರೂ ಮೌನ ಸುಂದರಿ ಚಂದನಾಳ ಆತಂಕ ಹೆಚ್ಚುತ್ತಿತ್ತು. ಬಾಬು ಅವಳನ್ನೇ ಗಮನಿಸುತ್ತಿದ್ದ. ಹೊರಗಡೆ ನಂದೂನ ಮೃದುವಾದ ಹೆಜ್ಜೆ ಸಪ್ಪಳ ಅದ್ಹೇಗೊ ಚಂದನಾಳ ಕಿವಿಗೆ ಬೀಳುತ್ತಿತ್ತು. ಅವಳ ಕಣ್ಣು ಪಾಠ ಮಾಡುವ ಪ್ರೊಫೆಸರ್ ಕಡೆಗಿದ್ದರೂ ಅವಳ ಹೃದಯದ ಬಡಿತ ನಂದೂನ ಹೆಜ್ಜೆಯೊಂದಿಗೇ ವಿಲೀನವಾಗುತ್ತಿತ್ತು. ನಂದಕುಮಾರ ಒಳಗೆ ಬಂದರೆ ಒಂದು ಬೆಳದಿಂಗಳಂಥ ಮುಗುಳ್ನಗೆ. ಖಂಡಿತ ಅದು ಅವಳಿಗೆ, ಅದರಲ್ಲೇ ಒಂದು ಕ್ಷಮೆಯಾಚನೆ. ಈ ಅತಿ ಸೂಕ್ಷ್ಮ ಸಂವೇದನೆಗಳು ಇಡೀ ಕ್ಯಾಂಪಸ್ಸಿನಲ್ಲಿ ಗೊತ್ತಿದ್ದುದು ಒಬ್ಬನಿಗೇ ಅದು ಬಾಬೂಗೆ. ಇಡೀ ನಾಲ್ಕು ತಿಂಗಳು ಈ ಮೌನಕ್ರಾಂತಿಯನ್ನು ನೋಡಿದ ಬಾಬು ತಡೆಯಲಾರದೇ ಒಂದು ರಾತ್ರಿ ನಂದೂಗೆ ಹೇಳಿದ. 'ಚಂದನಾ ಜೊತೆ ಒಂದು ಸಲ ಮಾತನಾಡು. ಬೇಕಾದ್ರೆ ಅವಳಿಗೆ ನಾನು ಹೇಳ್ತೀನಿ.' ನಂದು ಈ ಮಾತು ಬಂದದ್ದೇ ತಡ ಕಣ್ಣು ಮುಚ್ಚಿ ಕುಳಿತ. ಶಾಂತವಾದ ಮುಖ. ಅಲ್ಲಿ ಬುದ್ಧನ ಧ್ಯಾನ. ಖಂಡಿತ ಅಲ್ಲಿ ಚಂದನಾ ಇದ್ದಾಳೆ. ಅವರಿಬ್ಬರೂ ಸಂಭಾಷಿಸುತ್ತಿದ್ದಾರೆ. ಬಾಬೂಗೆ ಅವನ ಧ್ಯಾನ ಮುರಿಯುವ ಮನಸ್ಸಾಗಲಿಲ್ಲ, ಮೌನವಾದ. ಇಡೀ ರಾತ್ರಿ ಹಾಗೇ ಕುಳಿತ ನಂದೂ, ಕದಲಿರಲಿಲ್ಲ.

ಒಂದೇ ಒಂದು ಗಳಿಗೆ ಏಕಾಂತದೊಳಗ ಕೂರಲಿಲ್ಲ. 'ನಾ ನಿನ್ನ ಪ್ರೀತಿಸ್ತೀನಿ' ಡೈಲಾಗ್ ಹೇಳಲಿಲ್ಲ. ಲೈಬ್ರರಿಯಲ್ಲಿ ಓದುವ ನೆಪ ಮಾಡಿ ಹತ್ತಿರ ಬರಲಿಲ್ಲ. ಕ್ಯಾಂಟೀನ್... ಗಾರ್ಡನ್... ಊಹೂಂ. ಆದರೂ ಅವರಿಬ್ಬರ ಪ್ರೀತಿಯ ಆಳ ಕಂಡು ಅಚ್ಚರಿಗೊಂಡಿದ್ದ ಬಾಬು. ಅವರಿಬ್ಬರ ಪ್ರೀತಿಯ ಆರಾಧಕನಾಗಿ ಹೋಗಿದ್ದ. ಒಂದೇ ಒಂದು ಸಲ ನಂದೂನ್ನ ಚುಡಾಯಿಸಲೂ ಮನಸ್ಸಾಗಲಿಲ್ಲ. ಆ ವಿಷಯ ಮಾತನಾಡಿದರೂ ಭಂಗ ಬಂದೀತೆಂಬ ಭಾವ ಅವನಲ್ಲೂ ಮೂಡಿತ್ತು. ಹೀಗೇ ಅವರಿಬ್ಬರ ಮೌನ ಸಂಭಾಷಣೆ ನಡೆಯುತ್ತಲೇ ಎರಡು ವರ್ಷಗಳ ಕೊನೆ ಸಮೀಪಿಸಿತ್ತು. ಕ್ಯಾಂಪಸ್ಸಿನಲ್ಲಿ ಪರೀಕ್ಷೆಯ ಬಿಸಿ ಒಂದೆಡೆಯಾದರೆ ಅಲ್ಲಲ್ಲಿ ಸಂಜೆ ಪ್ರೇಮಿಗಳು ತಮ್ಮ ಪ್ರೇಮದ ಅಂತ್ಯಕ್ರಿಯೆ ಕುರಿತ ದುಃಖತಪ್ತ ಸಂಭಾಷಣೆ ಇನ್ನೊಂದೆಡೆ ನಡೆದಿರುತ್ತಿತ್ತು.

ಅದೊಂದು ರಾತ್ರಿ ನಂದ ಕುಮಾರನಿಗೆ ವಿಪರೀತ ಜ್ವರ. ಇಡೀ ರಾತ್ರಿ ತಣ್ಣೀರ ಪಟ್ಟಿ ಹಣೆಗೆ ಹಾಕಿ ಅವನ ಮುಂದೆ ಕುಳಿತಿದ್ದ ಬಾಬು. ಅಂಥ ಜ್ವರದಲ್ಲೂ ಆಗಾಗ ಕಣ್ಣು ತೆರೆದು ಗೆಳೆಯನತ್ತ ನೋಡಿ ಅವನ ಕೈ ಬಿಗಿಯಾಗಿ ಹಿಡಿದು ಕಣ್ಣು ಮುಚ್ಚಿ ಮಲಗಿದ ನಂದಕುಮಾರ. ಪ್ರೀತಿಯ ಗೆಳೆಯನ ತಲೆ ನೇವರಿಸಿದ ಬಾಬು. ಬೆಳಗಾದರೂ ಜ್ವರ ಕಡಿಮೆಯಾಗದಾದಾಗ ಆಸ್ಪತ್ರೆಗೆ ಸೇರಿಸಿದ್ದ.

ನಂದೂನ ಜ್ವರದ ತಾಪ ಚಂದನಾಳ ಮುಖದಲ್ಲಿ ಕಾಣುವಂತಿತ್ತು. ಅವತ್ತು ನಂದೂ ಕ್ಲಾಸಿಗೆ ಕೊನೆಗೂ ಬರದಾದಾಗ ಚಂದನಾಳ ಕಣ್ಣುಗಳು ಅವಳ ಹೃದಯದ ಬಡಿತ ಹೇಳುತ್ತಿದ್ದವು. ಮೊಟ್ಟಮೊದಲ ಬಾರಿಗೆ ಅವಳು ಬಾಬೂನ ಕಡೆಗೆ ತುಂಬಿದ ಕ್ಲಾಸ್‌ನಲ್ಲಿ ನೆಟ್ಟನೋಟದಿಂದ ನೋಡಿದ್ದಳು. ಅಲ್ಲಿ ಪ್ರಶ್ನೆಗಳ ಸಾಗರ. ಬಾಬು ಶಾಂತವಾಗಿ ಕಣ್ ಸನ್ನೆಯಲ್ಲೇ ಸಮಾಧಾನ ಹೇಳಿದ. ಕ್ಲಾಸ್ ಮುಗಿಸಿ ಹೊರಟಾಗ ಚಂದನಾ ಕೊನೆಗುಳಿದಳು ಬಾಬು ಹತ್ತಿರ ಹೋಗಿ ನಂದೂನ ವಿಷಯ ಹೇಳಿದ. ಒಂದೇಕ್ಷಣ ಅವಳ ಕಣ್ಣಂಗಳದ ತುಂಬ

ತುಂತುರು. ಅಷ್ಟು ಹತ್ತಿರದಿಂದ ಅವಳನ್ನು ಬಾಬು ಮೊಟ್ಟಮೊದಲು ನೋಡಿದ್ದ. ಕೂಸಿನಂಥ ಅವಳ ಮುದ್ದು ಮುಖವನ್ನು ನೇವರಿಸಬೇಕೆನಿಸಿತ್ತು. 'ನನ್ನ ಅವರ ಹತ್ತಿರ ಕರಕೊಂಡು ಹೋಗ್ತೀರಾ' ಆ ಧ್ವನಿ ಬಂದಾಗ ಬೆಚ್ಚಿಬಿದ್ದ ಬಾಬು. ಆ ಧ್ವನಿಯಲ್ಲಿ ಅವಳ ನೋವು ಎರಡು ವರ್ಷದ ಮೌನ ಪ್ರೀತಿ ಶಬ್ದಗಳಾಗಿ ಧುಮ್ಮಿಕ್ಕಿತ್ತು.

ಆಸ್ಪತ್ರೆಯಲ್ಲಿ ನಂದೂನ ಮುಂದೆ ಕುಳಿತ ಚಂದನಾ, ಬೆಡ್ ಮೇಲೆ ಕುಳಿತ ನಂದೂ ಅದೇ ಮೌನ ಸಂಭಾಷಣೆಯಲ್ಲಿ ತೊಡಗಿದ್ದರು. ಬಾಬು ಬೇಕೆಂತಲೇ ಹೊರಗೆ ಹೋದ ಮತ್ತು ತಡವಾಗಿಯೂ ಬಂದ. ಅಷ್ಟರಲ್ಲಿ ಚಂದನಾ ಹೊರಟು ಹೋಗಿದ್ದಳು. ನಂದೂನ ಕೈಯಲ್ಲಿ ಎರಡು ಗುಲಾಬಿ ಹೂಗಳ ಒಂದು ಸುಂದರ ಚಿತ್ರ, ಕೆಳಗೆ 'ಬಾಡದಿರಲಿ' ಅಷ್ಟೇ ಸುಂದರ ಅಕ್ಷರ. ಅಂಥ ಜ್ವರ ಬಡಿದರೂ ನಂದೂನ ಮುಖಕಾಂತಿ ಇಮ್ಮಡಿಸಿತ್ತು. ನೆಮ್ಮದಿಯಾಗಿದ್ದ ಬಾಬುಗೆ.

ಫಲಿತಾಂಶ ನೋಡಲು ಅಂದೇ ಬರಬೇಕೆಂದು ಬಾಬು ನಂದಕುಮಾರಗೆ ಹೇಳಿದ್ದರೂ ಅಂದು ಅವ ಬಂದಿರಲಿಲ್ಲ. ನಂದೂ, ಚಂದೂ ಹಾಗೂ ತನ್ನ ಫಲಿತಾಂಶ ನೋಡಿ ಉಲ್ಲಾಸಗೊಂಡ ಬಾಬು ನಂದೂನ ಊರಿಗೆ ಓಡಿದ. ಅಲ್ಲಿ ಫಲಿತಾಂಶ ಮೊದಲೇ ಗೊತ್ತಿತ್ತು ಎಂಬಂತೆ ಕುಳಿತಿದ್ದ ಶಾಂತಮೂರ್ತಿ ನಂದೂ. ಬಾಬುನ ಜಗಳ ಕದನ ಎಲ್ಲ ಮುಗಿದ ಮೇಲೆ ಸಂಜೆ ತೋಟದ ಕಡೆ ಹೋದಾಗ ಬಾಬು ನಿಧಾನವಾಗಿ ಚಂದನಾ ಸುದ್ದಿ ತೆಗೆದ. 'ಮನ್ಯಾಗ ಹೇಳಿದೇನು?' ನಂದೂ ಗೆಳೆಯನ ಹೆಗಲ ಮೇಲೆ ಕೈಯಿಟ್ಟು ನಾಲ್ಕು ಹೆಜ್ಜೆ ನಡೆದು ಬಾಬುನ ಕೈಗೊಂದು ಪತ್ರ ಕೊಟ್ಟ.

'ಪ್ರೀತಿಯ ನಂದು, ಪರಿಸ್ಥಿತಿಗೆ ಬಲಿಯಾಗಿ ಮದುವೆ ಆಗಿದ್ದೇನೆ. ನನ್ನನ್ನು ಕ್ಷಮಿಸಬೇಡ, ಅದಕ್ಕೂ ನಾನು ಯೋಗ್ಯಳಲ್ಲ.' ಎರಡೇ ಸಾಲಿನ ಪತ್ರ. ಬಾಬು ಕುಸಿದು ಹೋದ. ಹೊತ್ತು ಸರಿಯುತ್ತಲೇ ಇತ್ತು. ಇಬ್ಬರಲ್ಲೂ ಮಾತಿಲ್ಲ. ಬಾಬು ನಂದೂನ ಕೈಹಿಡಿದ. ಅದೇ ಬುದ್ಧ ಧ್ಯಾನ. ನಗುಮುಖ, ಅದು ಮುಖವಾಡವಲ್ಲ. ಮುಂದೇನು ಎನ್ನುವಂತೆ, ಬಾಬು ಮುಖ ನೋಡಿದ. ನಂದೂನ ಒಂದೇ ವಾಕ್ಯದ ಉತ್ತರ 'ಚಂದನದ ಪರಿಮಳ ಈ ಬದುಕಿಗಾಗುವಷ್ಟಿದೆ...'

'ಅಂಥಾ ನಂದಕುಮಾರ ಈಗ ಮದುವೆ ಆಗ್ತಾನಂತ' ತಿಳಿಯದೆ ಬಾಬುಜಿ ಧ್ವನಿ ಏರಿಸಿ ಅಂದದ್ದು ಬಸ್ಸಿಗೆಲ್ಲಾ ಕೇಳಿಸಿತ್ತು. ನೆನಪಿನಿಂದ ಹೊರಬಂದ ಬಾಬೂಜಿ ಆಕಾಶಕ್ಕೆ ಕೆಂಪಡರುತ್ತಿರುವುದನ್ನು ಬಸ್‌ನ ಕಿಟಕಿಯಿಂದಲೇ ನೋಡಿದರು. ತಣ್ಣನೆಯ ಗಾಳಿ ಮುಖಕ್ಕೆ ಹೊಡೆಯುತ್ತಿದ್ದರೂ ಅವರ ತಲೆ ಬಿಸಿ ಇನ್ನೂ ಇತ್ತು. ಇಡೀ ರಾತ್ರಿ ಇದೇ ನೆನಪುಗಳಲ್ಲಿದ್ದ ಅವರು ಸೀಟು ಸರಿ ಮಾಡಿಕೊಂಡು ಮತ್ತೇ ಕಣ್ಣು ಮುಚ್ಚಿದರು. ಈಗ ಅವರ ನೆನಪಲ್ಲಿ ಚಂದನಾ ದಾಳಿ ಇಡುತ್ತಿದ್ದಳು. ಅವಳು ಮದುವೆ ಆದ ದಿನದಿಂದ ಬಾಬೂಜಿಗೆ ಅವಳ ಬಗ್ಗೆ ಜಿಗುಪ್ಸೆ ಉಂಟಾಗಿತ್ತು. ಧನವಂತ ಪತಿ, ಮಗ, ಮಗಳು ಸುಖವಾಗಿದ್ದಾಳೆ. ಆದರೆ ಅವಳನ್ನು ಪ್ರೀತಿಸಿದ ನಂದೂ ಇನ್ನೂ ಕುಮಾರನಾಗಿಯೇ ಇದ್ದಾನೆಂಬ ಕೊರಗು ಅವರನ್ನು ಜೀವನ ಪೂರ್ತಿ ಕಾಡಿತ್ತು. ಈಗ ನಂದೂ ಮದುವೆ ಆಗುವ ಸುದ್ದಿ ಕೇಳಿ ತರ್ಕ ತಪ್ಪಿದ ತರಗೆಲೆಯಾಗಿದ್ದರು. ಈ ವಯಸ್ಸಿನಲ್ಲಿ... ಎಂದುಕೊಂಡರು. ಅವನು ಉದ್ಯೋಗದಲ್ಲಿದ್ದಾಗ ಯಾರೇ ಎಷ್ಟೇ ಒತ್ತಾಯ ಮಾಡಿದರೂ ಮದುವೆ ಆಗಿರಲಿಲ್ಲ.

ಈಗ ಯಾಕೋ...

ನಂದಕುಮಾರನ ಮನೆ ವಿಳಾಸ ಹುಡುಕುವಾಗಲೇ ಕಾಯುತ್ತಿದ್ದ ನಂದೂ ಇಷ್ಟು ನಿಮಿಷ ಇಷ್ಟು ಸೆಕೆಂಡಿಗೆ ಗೆಳೆಯ ಬರುತ್ತಾನೆಂಬ ತೀರ್ಮಾನದೊಂದಿಗೆ ರಸ್ತೆಯಲ್ಲೇ ನಿಂತಿದ್ದ. ಬಾಬೂಜಿ ಎಲ್ಲ ಮರೆತು ಒಮ್ಮೆ ಬಿಗಿಯಾಗಿ ಅಪ್ಪಿಕೊಂಡರು. ಬಾಬೂಜಿ ಬಾಯಿ ತೆಗೆಯುವ ಮುನ್ನವೇ ನಂದಕುಮಾರ ಅವರನ್ನು ಮನೆಗೆ ಎಳೆದೊಯ್ದರು. ಬಾಬೂಜಿ ಮನೆ ಒಳಗೆ ಕಾಲಿಟ್ಟವರೇ ಒಂದು ಕ್ಷಣ ಹಾಗೇ ನಿಂತರು – ವ್ಯವಸ್ಥಿತವಾದ ಮನೆ. ನಂದಕುಮಾರನಲ್ಲಿ ಅದೇ ಗಾಂಭೀರ್ಯ. ಬುದ್ಧ ಧ್ಯಾನದ ಚಹರೆ. ಬಾಬೂಜಿಯನ್ನು ಕುಳ್ಳಿರಿಸಿದ ನಂದಕುಮಾರ ಮೊದಲು ಟೀ ತಂದುಕೊಟ್ಟರು. ಬಾಬೂಜಿ ತಡೆಯದೇ ಪ್ರಶ್ನಾರ್ಥಕ ಮುಖ ಮಾಡಿದಾಗ ಮಕ್ಕಳಿಗೆ ಶಾಂತವಾಗಿರುವಂತೆ ಹೇಳುವ ಹಾಗೆ ಸನ್ನೆ ಮಾಡಿದ.

ಟೀ ಕುಡಿದಿಟ್ಟು 'ಏನು ನಿನ್ನ ಕತೆ' ಎಂದು ತಡೆಯದೆಯೆ ಕೇಳಿದರು ಬಾಬೂಜಿ. ಇನ್ನು ಒಂದು ಕ್ಷಣವೂ ತಡೆಯಲಾರೆನೆಂಬ ಅವಸರ, ತವಕ, ಆತಂಕ ಅವರಲ್ಲಿತ್ತು. ಅಷ್ಟರಲ್ಲಿ ಒಳಮನೆಯಿಂದ ಒಂದು ಆಕೃತಿ ಚಲಿಸಿ ಬೆಳಕಿಗೆ ಬಂದಿತು. ಅತ್ತ ನೋಡಿದವರೇ ಬಾಬೂಜಿ ಅವಾಕ್ಕಾಗಿ ಎದ್ದು ನಿಂತರು. ಅವರ ಬಾಯಿಯಿಂದ ಒಂದೇ ಮಾತು. 'ಚಂದನಾ....' ಅವಳ ಕಣ್ಣುಗಳು ಬಾಬೂಜಿಯವರನ್ನು ನೇರವಾಗಿ ನೋಡಿದವು. ಅದೇ ನಂದೂಗೆ ಹುಷಾರಿಲ್ಲ ಎಂದು ಕ್ಲಾಸ್ ರೂಂನಲ್ಲಿ ಹೇಳಿದಾಗ ಆದಂತೆ ಅವಳ ಕಣ್ಣಂಗಳದಲ್ಲಿನ ತುಂತುರು ಮರುಕಳಿಸಿತು. ಅದೇ ಕಳೆ, ಅದೇ ಭಾವ, ಅದೇ ಮುದ್ದುತನ. ಕಾಲ ಸಂದರ್ಭ ಮಾತ್ರ ಬೇರೆ. ಸ್ವಲ್ಪ ಹೊತ್ತು ಇಬ್ಬರೂ ಹಾಗೇ ನಿಂತಿದ್ದರು. ಇಬ್ಬರನ್ನು ಕುಳ್ಳಿರಿಸಿದ್ದು ನಂದಕುಮಾರ. ಬಾಬುಗೆ ಏನು ಹೇಳಬೇಕೋ ತಿಳಿಯುತ್ತಿಲ್ಲ. ಒಂದು ನಿಟ್ಟುಸಿರು ಮಾತ್ರ ಅವರ ಬಾಯಿಂದ ಹೊರಬಂತು. ಜೊತೆಗೆ ಇದು ಸರಿಯಲ್ಲ ಎಂಬ ಭಾವ.

ಯಾವ ಪಾಪಪ್ರಜ್ಞೆಯೂ ಇಲ್ಲದೇ ನಂದಕುಮಾರನ ಮಾತು ಶಾಂತವಾಗಿ ಹರಿಯುತ್ತಿತ್ತು. ಅಂದು ನಾನು ರೈಲಿನಲ್ಲಿ ಬೆಂಗಳೂರಿಗೆ ಬರ್‍ತಿದ್ದೆ. ಮಧ್ಯರಾತ್ರಿ ಯಾವುದೋ ಸ್ಟೇಷನ್‌ನಲ್ಲಿ ಜನ ಇಳಿಯುವ, ಹತ್ತುವ ಗದ್ದಲ ಕೇಳುತ್ತಿತ್ತು. ನಾನು ಮಲಗಿದ ಸೀಟಿನ ಎದುರಿನ ಸೀಟಿಗೆ ಯಾರೋ ಬಂದಂತಾಯಿತು. ನಾನು ಸುಮ್ಮನೆ ತಿರುಗಿ ಮಲಗಿದೆ. ಯಾರೋ ದುಃಖಿಸುತ್ತಿರುವ ಶಬ್ದ. ಪಕ್ಕದ ಸೀಟಿನ ಮಹಿಳೆ ಮುಖ ಮುಚ್ಚಿ ದುಃಖಿಸುತ್ತಿದ್ದಳು. ಅದು ದುಃಖವನ್ನು ತಡೆದುಕೊಳ್ಳುವ ಯತ್ನ. ಕಿಟಕಿಯಿಂದ ಹೆಣ್ಣುಮಗಳೊಬ್ಬಳು ಸಮಾಧಾನ ಮಾಡುತ್ತಿದ್ದಳು. 'ನೀನು ನಮ್ಮ ಓಣಿಗೇ ತಾಯಿಯ ಹಾಗಿದ್ದೆ. ನಿನಗ್ಯಾಕೆ ಈ ತೀರ್ಥಯಾತ್ರೆ ಹುಚ್ಚೋ, ಹೋಗಲಿ ಹುಷಾರಾಗಿರು. ವಾರಕ್ಕೊಮ್ಮೆ ಎಲ್ಲೇ ಇದ್ದರೂ ಪತ್ರ ಬರಿ. ಸಾಧ್ಯವಾದಾಗ ಫೋನ್ ಮಾಡು. ನಾವು ನಿನ್ನ ಮಕ್ಕಳಲ್ವಾ?' ಹೀಗೇ ಅವರ ಬುದ್ಧಿವಾದ ಸಾಗಿತ್ತು. ಅಷ್ಟರಲ್ಲಿ ಟ್ರೇನ್ ಹೊರಟಿತು. ಬೆಳಗಿನ ಜಾವ ನಾನು ಕಣ್ಣು ತೆರೆದಾಗ ಎದುರಿನ ಸೀಟಿನಲ್ಲಿ ಆ ಮಹಿಳೆ ಕುಳಿತೇ ಇದ್ದಳು. ಮುಖದ ಮೇಲೆ ಸೆರಗು. ನಾನು ಎದ್ದು ಕುಳಿತ ಸದ್ದಿಗೆ ಅವಳು ಮುಖ ತೆಗೆದು ನೇರ ಕುಳಿತಳು. ಉದಯಸೂರ್ಯನ ಕಿರಣಗಳು ಅವಳ ಮುಖದ ಮೇಲೆ ಆಡುತ್ತಿದ್ದವು. ಅವಳನ್ನು ನೇರವಾಗಿ ನೋಡಿದಾಗ ನನ್ನ ರಕ್ತ ಸಂಚಾರ ನಿಂತಂತಾಯಿತು. ಚಂದನಾ... ನನಗೆ ತಿಳಿಯದೆಯೇ ಕೂಗಿದೆ. ಅವಳದೂ ಅದೇ ಸ್ಥಿತಿ. ನಾವೆಲ್ಲಿದ್ದೇವೆನ್ನುವದೇ ಮರೆತು ಹೋಯಿತು. ತಿಳಿಯದೇ ಒಬ್ಬರ ಮಡಿಲು ಒಬ್ಬರು ಸೇರಿದ್ದೆವು... ನಂತರ ಚಂದನಾ ಹೇಳಿದಳು. ಹತ್ತು ವರ್ಷದ ಹಿಂದೆಯೇ ಅವಳ ಗಂಡ ತೀರಿಹೋದ. ಮದುವೆಯಾಗಿ ಹೋದ ಮಗಳು ದೆಹಲಿಯಲ್ಲಿದ್ದಾಳೆ. ಮಗ ಅಮೇರಿಕಾ ಸೇರಿ ಕ್ರಮೇಣ ಮರೆತು ಹೋದ. ಒಂಟಿ ಜೀವ. ಅಪಾರ ಆಸ್ತಿ... ಏನೂ ಮಾಡಲು ತೋಚದೆ ಆಸ್ತಿಯನ್ನೆಲ್ಲ ಅನಾಥಾಶ್ರಮಕ್ಕೆ ಬರೆದುಕೊಟ್ಟು ತೀರ್ಥಯಾತ್ರೆಗೆ ಹೊರಟಿದ್ದಳು. ನಾನು ಅವಳ ತೀರ್ಥಯಾತ್ರೆ ಬಿಡಿಸಿ ಈ ಯೋಚನೆಯಲ್ಲಿದ್ದೀನಿ.

ಊರು ಬಿಟ್ಟು ಇಲ್ಲಿ ಬಂದಿದೀನಿ. ನಮಗೆ ಪ್ರಶ್ನೆಗಳು ಬೇಡ ಉತ್ತರ ಕೊಡುವಷ್ಟು ಸಮಯವಿಲ್ಲ. ಈ ಕೊನೆಗಾಲದ ನನ್ನ ಬದುಕು ಆದರ್ಶಕ್ಕಾಗಲೀ, ಸ್ವಾರ್ಥಕ್ಕಾಗಲಿ ಮಾದರಿ ಆಗಬಾರದು ಅದಕ್ಕ ಯಾರೂ ಗುರ್ತಿಸಲಾರದ ಈ ಜಾಗಾಕ ಬಂದೀದಿನಿ. ನಮ್ಮ ಪಾಡಿಗೆ ನಮ್ಮನ್ನ ಬಿಟ್ರೆ ಸಾಕು. ನನಗೆ ಬಂಧು ಬಾಂಧವ್ಯ ಸಮಾಜ ಎಲ್ಲಾ ನೀನsss. ನೀ ಒಪ್ಪಿದರ ಈ ಮದಿವಿ. ಇಲ್ಲಾ ಅಂದ್ರ ಸ್ನೇಹಿತರಂಗ ಹಿಂಗ ಇರ್‍ತೀವಿ.' ನಂದಕುಮಾರನ ಅಷ್ಟೂ ಪ್ರಶ್ನೆಗಳು ಚಂದನಾ ಕತೆ ಎಲ್ಲಾ ಏಕಕಾಲಕ್ಕ ಕೇಳಿ ದಿಕ್ಕು ತೋಚದೆ ಕುಳಿತಿದ್ದರು ಬಾಬೂಜಿ. ಆಗ ಬಂತು ಆ ಧ್ವನಿ.

'ಬಾಬೂಜಿ ಸಂಬಂಧದ ಹೆಸರು ಏನರ ಇರಲಿ ಸಾಯೂತನ ಇವರ ಕಣ್ಣೆದುರಿಗೆ ಇರೋ ಅವಕಾಶ ಕೊಡ್ರಿ.' ಅದೇ ಪ್ರೀತಿ, ಅದೇ ಭಾವ... ಅಂದು ನಂದೂ ಆಸ್ಪತ್ರೆಯಲ್ಲಿರುವಾಗ 'ನನ್ನ ಅವರ ಹತ್ತಿರ ಕರಕೊಂಡು, ಹೋಗ್ತಿರಾ' ಅಂತ ಕೇಳಿದ ಅದೇ ಮುಗ್ಧತೆ. ಬಾಬೂಜಿ ಕಣ್ಣೀರು ಉಕ್ಕಿ 'ಚಂದನಾ'... ಅಂತ ಎದ್ದು ನಿಂತು ಇಬ್ಬರಿಗೂ ಕೈ ಮುಗಿದರು. ಉಸಿರಿನ ಕಣಕಣದಲ್ಲೂ ಚಂದನದ ಪರಿಮಳ. ಗೋಡೆ ಮೇಲೆ ಚಂದನಾ ಕೊಟ್ಟ, ಎರಡು ಗುಲಾಬಿ ಹೂವಿನ ಚಿತ್ರವಿತ್ತು, ಕೆಳಗೆ 'ಬಾಡದಿರಲಿ' ಎಂಬ ಸುಂದರ ಅಕ್ಷರ.

**ಶ್ರೀಸುಮಿತ್ರಾಸುತ ಅಗಸಬಾಳ**
ಘಾಟೆ ಭವನ, ವೈಯಾಲಿಕಾವಲ್, ಜಿ. ಡಿ. ಪಾರ್ಕ್ ಬಡಾವಣೆ
ಮಲ್ಲೇಶ್ವರಂ, ಬೆಂಗಳೂರು – ೫೬೦ ೦೦೩

ಕಾವ್ಯಲೋಕ

# ಹಕ್ಕಿಗಳು ಹಾಡಿದವು ವಿಪ್ಲವ ಗೀತೆ



ರೆಕ್ಕೆಗಳಿದ್ದರೆ ಶಕ್ತಿ ಹಾರಬಹುದು ಬಾನೆತ್ತರಕೆ
ನಸು ನಸುಕು ಕತ್ತಲೆಯ ತಳ್ಳಿ
ಹಕ್ಕಿಗಳು ಹಾಡಿದವು ವಿಪ್ಲವ ಗೀತೆ

ಕಣ್ಣು ಕಾಣದಿದ್ದರೆ ಚಿತ್ರವೊಂದು ಮೂಡದಿದ್ದರೆ
ಮನಸ ಪರದೆಯೊಳಗೆ ಬಾರದು ಕನಸುಚಿತ್ರ
ಕಾಳ ರಾತ್ರಿಯಲಿ ಹುಟ್ಟಿದ ಕರಿನೋಟಿನೊಳಗಿಂದ
ಬಂತೊಂದು ರಕ್ತಕೊಂಬಿನ ರಣಕಹಳೆ ಕನಸು

ಹುಲ್ಲು ಕಡ್ಡಿಯೊಳಗಿನ ಕಾಳುಗಳು ಮಾಂಸದ ತುಂಡುಗಳಾಗಿ
ತಮ್ಮೊಡನೆ ಮೇಯ್ದ ದನಗಳು ಗುರುತು ಸಿಗದಂತಾಗಿ
ಗುಡಿಯೊಳಗಿಣ ಘಂಟೆ ಘಣಘಣ ಮೊಳಗಲು
ದನಗಳ ಬೆನ್ನ ಮೇಲೆ ಕೆಳಗೆ ಕೂತ ಹಕ್ಕಿಗಳು
ಹಾರಿದವು ಮುಗಿಲೆತ್ತರಕೆ ಬಾಂಧವ್ಯದ ಬೆಸುಗೆ ಕಳಚಿ

ಯುಗಾಂತರದ ಸೃಷ್ಟಿ ಪುರಾಣಗಳ ಪುಟಪುಟದಿ ನೆಗೆದವು
ಉಳಿವಿಗಾಗಿ ಹೋರಾಟ : ಸಂಕೇತ ಶಬ್ದಗಳ ಜಾಲ ಹರಿದು
ಜಲದೊಳಗೆ ಜಲವಾಗಿ ಜಲಕುಂಭವಾಗಿ ಜೀವವಿಕಾಸ ಸೂತ್ರ
ತಿನ್ನುವುದು ಭೂಮಿಯ ಅನ್ನ! ತಿನ್ನದವರು ಬದುಕುವುದು ಉಂಟೆ?

ಕಾಳು ತಿನ್ನುವ ನಾವು ; ಮೇವು ತಿನ್ನುವ ದನಗಳು
ದೇವರಾದರು ಹೇಗೆ? ಮನುಷ್ಯರ ಮಸಲತ್ತು
ಹಾರಬಲ್ಲರೆ ನಮ್ಮಂತೆ ಮುಗಿಲೆತ್ತರಕೆ
ಚಿಂತಿಸಿ, ಮಥಿಸಿ ಸಂಪು ಹೂಡಲು
ಕೆಂಪು ಎಲೆಹೂಗಳ ಬಾವುಟ ಹಿಡಿದು
ಹಿಂಡು ಹಿಂಡಾಗಿ ನೆಗೆದವು ನೆಲಬಾನಿಗೆ
ಹಕ್ಕಿಗಳು ಹಾಡಿದವು ವಿಪ್ಲವ ಗೀತೆ

ರಣರಣಿಸುವ ಹಸಿವಿನ ಹಾಡು
ರೆಕ್ಕೆಗಳಿದ್ದರೆ ಶಕ್ತಿ ಹಾರಬಹುದು ಬಾನೆತ್ತರಕೆ



ಬೆಚ್ಚಿದವು ಬೆದರಿದವು ನೆಗೆಯಲಾರದ ದನಗಳು
ಮಾಂಸದ ಕಥೆ ; ಮಾಂಸ ರಾಜಕಾರಣ
ಚುನಾವಣೆಯ ಚಲಾವಣೆಗೆ ದನಗಳ ಹಬ್ಬ!
ದೇಹವೇ ದೇವಾಲಯವಾಗದೆ ಎದ್ದ ಗೋಡೆಗಳು
ವಂಚಿತ ಜನರ ಚರಿತೆಗೆ ಅರಿವಿನ ಕಣ್ಣು
ಬೆಳಗು ಮುಂಜಾನೆ
ಹಕ್ಕಿಗಳು ಹಾಡಿದವು ವಿಪ್ಲವ ಗೀತೆ

**ಅನಸೂಯ ಕಾಂಬಳೆ**
ಸಹಾಯಕ ಪ್ರಾಧ್ಯಾಪಕರು, ಕನ್ನಡ ವಿಭಾಗ
ಕರ್ನಾಟಕ ವಿಶ್ವವಿದ್ಯಾಲಯ, ಪಿ.ಜಿ ಸೆಂಟರ್
ಕೆರಿಮತ್ತಿಹಳ್ಳಿ, ಹಾವೇರಿ – ೫೮೧ ೧೧೦















## ಪುಸ್ತಕ ಪ್ರಕಾಶನ

91, 9ನೇ ಮುಖ್ಯರಸ್ತೆ
ಸರಸ್ವತಿಪುರಂ
ಮೈಸೂರು – 570 009
ಫೋನ್ : 0821-2545774




## ಪುಸ್ತಕ ಪ್ರಕಾಶನ

ಬುಕ್‌ಪೋಸ್ಟ್ ಸರ್ವೀಸ್
ಪಿ. ಬಿ. ನಂ. 58, ಮೂಡಿಗೆರೆ
ಚಿಕ್ಕಮಗಳೂರು ಜಿಲ್ಲೆ-577132
ಫೋನ್ : 08263-228353, 240202
ಮೊಬೈಲ್ : 94482 03730
e-mail : raghu202@bsnl.in




### ಪುಸ್ತಕ ಬೆಲೆ ಪಟ್ಟಿ – 2015*

**ಶ್ರೀ ಕೆ. ಪಿ. ಪೂರ್ಣಚಂದ್ರ ತೇಜಸ್ವಿ :**

| | |
|---|---|
| ಕಿರಗೂರಿನ ಗಯ್ಯಾಳಿಗಳು | 90.00 |
| ಕರ್ವಾಲೊ | 105.00 |
| ಚಿದಂಬರ ರಹಸ್ಯ | 216.00 |
| ಸಹಜ ಕೃಷಿ | 60.00 |
| ಪರಿಸರದ ಕತೆ | 105.00 |
| ಮಿಸ್ಸಿಂಗ್ ಲಿಂಕ್ | 90.00 |
| ಅಲೆಮಾರಿಯ ಅಂಡಮಾನ್ ಹಾಗೂ ಮಹಾನದಿ ನೈಲ್ | 114.00 |
| ಜುಗಾರಿ ಕ್ರಾಸ್ | 216.00 |
| ಏರೋಪ್ಲೇನ್ ಚಿಟ್ಟೆ ಮತ್ತು ಇತರ ಕತೆಗಳು | 87.00 |
| ಫ್ಲೈಯಿಂಗ್ ಸಾಸರ್ಸ್ (1) | 87.00 |
| ಫ್ಲೈಯಿಂಗ್ ಸಾಸರ್ಸ್ (2) | 87.00 |
| ಕಾಡಿನ ಕತೆಗಳು 1 – ಬೆಳ್ಳಂದೂರಿನ ನರಭಕ್ಷಕ | 75.00 |
| ಕಾಡಿನ ಕತೆಗಳು 2 – ಪೆದ್ದಚೆರುವಿನ ರಾಕ್ಷಸ | 75.00 |
| ಕಾಡಿನ ಕತೆಗಳು 3 – ಜಾಲಹಳ್ಳಿಯ ಕುರ್ಕ | 75.00 |
| ಕಾಡಿನ ಕತೆಗಳು 4 – ಮುನಿಶಾಮಿ ಮತ್ತು ಮಾಗಡಿ ಚಿರತೆ | 75.00 |
| ರುದ್ರಪ್ರಯಾಗದ ಭಯಾನಕ ನರಭಕ್ಷಕ | 105.00 |
| ಕನ್ನಡನಾಡಿನ ಹಕ್ಕಿಗಳು (1) – ಮಿಂಚುಳ್ಳಿ | 99.00 |
| – ,, – (2) – ಹೆಜ್ಜೆ ಮೂಡದ ಹಾದಿ | 96.00 |
| ಹಕ್ಕಿ–ಪುಕ್ಕ | 396.00 |
| ಅಣ್ಣನ ನೆನಪುಗಳು | 225.00 |
| ಹುಲಿಯೂರಿನ ಸರಹದ್ದು | 105.00 |
| ಅಬಚೂರಿನ ಪೋಸ್ಟಾಫೀಸು | 90.00 |
| ಮಿಲನಿಯಮ್ (1) – ಹುಡುಕಾಟ | 87.00 |
| ಮಿಲನಿಯಮ್ (2) – ಜೀವನ ಸಂಗ್ರಾಮ | 87.00 |
| ಮಿಲನಿಯಮ್ (3) – ಪೆಸಿಫಿಕ್ ದ್ವೀಪಗಳು | 87.00 |
| ಮಿಲನಿಯಮ್ (4) – ಚಂದ್ರನ ಚೂರು | 87.00 |
| ಮಿಲನಿಯಮ್ (5) – ನೆರೆಹೊರೆಯ ಗೆಳೆಯರು | 87.00 |
| ಮಿಲನಿಯಮ್ (6) – ಮಹಾಯುದ್ಧ (1) | 87.00 |
| ಮಿಲನಿಯಮ್ (7) – ಮಹಾಯುದ್ಧ (2) | 87.00 |
| ಮಿಲನಿಯಮ್ (8) – ಮಹಾಯುದ್ಧ (3) | 87.00 |
| ಮಿಲನಿಯಮ್ (9) – ದೇಶ ವಿದೇಶ (1) | 87.00 |
| ಮಿಲನಿಯಮ್ (10) – ದೇಶ ವಿದೇಶ (2) | 87.00 |
| ಮಿಲನಿಯಮ್ (11) – ದೇಶ ವಿದೇಶ (3) | 87.00 |
| ಮಿಲನಿಯಮ್ (12) – ದೇಶ ವಿದೇಶ (4) | 87.00 |
| ಮಿಲನಿಯಮ್ (13) – ವಿಸ್ಮಯ ವಿಶ್ವ (1) | 87.00 |
| ಮಿಲನಿಯಮ್ (14) – ಮಹಾಪಲಾಯನ | 87.00 |
| ಮಿಲನಿಯಮ್ (15) – ವಿಸ್ಮಯ ವಿಶ್ವ (2) | 87.00 |
| ಮಿಲನಿಯಮ್ (16) – ಅಡ್ವೆಂಚರ್ | 87.00 |
| ಮಾಯಾಲೋಕ – 1 | 216.00 |

* ಹೊಸ ಆವೃತ್ತಿ (Edition) ಬಿಡುಗಡೆಗೊಂಡಾಗ್ಯೂ ಮುಖಪುಟ ಬೆಲೆಯಲ್ಲಿ ವ್ಯತ್ಯಾಸವಿರುವುದು.

| | |
|---|---|
| ಪಾಕ ಕ್ರಾಂತಿ ಮತ್ತು ಇತರ ಕತೆಗಳು | 87.00 |
| ವ್ಯಕ್ತಿ ವಿಶಿಷ್ಟಸಿದ್ಧಾಂತ ಮತ್ತು ಯಮಳ ಪ್ರಶ್ನೆ | 60.00 |
| ಬೃಹನ್ನಳೆ ಸೋಮುವಿನ ಸ್ವಗತ ಲಹರಿ ಮತ್ತು ಇತರ ಕವನಗಳು | 60.00 |
| ವಿಮರ್ಶೆಯ ವಿಮರ್ಶೆ | 183.00 |
| 'ಮಾಯೆಯ ಮುಖಗಳು' (ಚಿತ್ರಲೇಖನ) | 690.00 |
| ಹೊಸ ವಿಚಾರಗಳು | 480.00 |
| ಕಾಡು ಮತ್ತು ಕ್ರೌರ್ಯ | 120.00 |

**ಶ್ರೀ ಕೆ. ಪಿ. ಪೂರ್ಣಚಂದ್ರ ತೇಜಸ್ವಿ– ಶ್ರೀ ಪ್ರದೀಪ ಕೆಂಜಿಗೆ :**

| | |
|---|---|
| ವಿಸ್ಮಯ (1) (2) (3) ಪ್ರತಿಯೊಂದೂ | 87.00 |
| ಪ್ಯಾಪಿಲಾನ್ (1) (2) (3) ಪ್ರತಿಯೊಂದೂ | 162.00 |

**ಶ್ರೀ ಕೆ. ಪಿ. ಪೂರ್ಣಚಂದ್ರ ತೇಜಸ್ವಿ– ಡಾ|| ವಿ. ವಿ. ಬೆಳವಾಡಿ :**

| | |
|---|---|
| ನಡೆಯುವ ಕಡ್ಡಿ ! ಹಾರುವ ಎಲೆ ! | 87.00 |

**ಶ್ರೀ ಪ್ರದೀಪ ಕೆಂಜಿಗೆ :**

| | |
|---|---|
| ಬರ್ಮುಡಾ ಟ್ರ್ಯಾಂಗಲ್ | 87.00 |
| ಅದ್ಭುತ ಯಾನ | 108.00 |
| ಹೆಬ್ಬಾವಿನೊಡನೆ ಹೋರಾಟ | 120.00 |

**ಶ್ರೀ ಎಮ್. ಶಿವಕುಮಾರ್**

| | |
|---|---|
| ಕಂಪ್ಯೂಟರ್ ಕಲಿಯಿರಿ | 147.00 |
| 'ಗಡಿಯಾರ' ವಿಕಾಸದ ಹಾದಿಯಲ್ಲಿ | 66.00 |

**ವಿದ್ವಾನ್ ಶ್ರೀ ಕೊಳಂಬೆ ಪುಟ್ಟಣ್ಣ ಗೌಡರು :**

| | |
|---|---|
| ಅಚ್ಚಕನ್ನಡ ನುಡಿಕೋಶ | 360.00 |
| **ಶ್ರೀ ನರೇಂದ್ರ ರೈ ದೇರ್ಲ :** ಸಾವಯವ ಕೃಷಿ | 51.00 |
| ತೇಜಸ್ವಿ ಪತ್ರಗಳು | 450.00 |

**ಶ್ರೀ ಕೃಪಾಕರ – ಸೇನಾನಿ :**

| | |
|---|---|
| ಸೆರೆಯಲ್ಲಿ ಕಳೆದ ಹದಿನಾಲ್ಕು ದಿನಗಳು | 108.00 |

**ಡಾ|| ಎಸ್. ಎಂ. ವೃಷಭೇಂದ್ರ ಸ್ವಾಮಿ :**

| | |
|---|---|
| ತರಗತಿಗಳಲ್ಲಿ ಕುವೆಂಪು | 198.00 |

**ಶ್ರೀ ದೇವನೂರು ಮಹಾದೇವ**

| | |
|---|---|
| ಕುಸುಮಬಾಲೆ | 90.00 |
| ದ್ಯಾವನೂರು ಹಾಗೂ ಒಡಲಾಳ | 96.00 |

**ಶ್ರೀಮತಿ ತಾರಿಣಿ ಚಿದಾನಂದ :**

| | |
|---|---|
| ಮಗಳು ಕಂಡ ಕುವೆಂಪು | 370.00 |

**ಶ್ರೀಮತಿ ಪದ್ಮಾಶ್ರೀರಾಮ :**

| | |
|---|---|
| ಗಿಡಗಂಟೆಯಾ ಕೊರಳು | 78.00 |

**ಡಾ|| ಕೆ. ಚಿದಾನಂದ ಗೌಡ :**

| | |
|---|---|
| ಬದುಕು.. ಬೆಳಕು... ಚುಟುಕು....! ಭಾಗ 1 | 89.00 |
| ಬದುಕು.. ಬೆಳಕು... ಚುಟುಕು....! ಭಾಗ 2 | 90.00 |
| **ಶ್ರೀಮತಿ ರಾಜೇಶ್ವರಿ ತೇಜಸ್ವಿ :** ನನ್ನ ತೇಜಸ್ವಿ | 369.00 |

ಅಂಚೆಮೂಲಕ ತರಿಸಿಕೊಳ್ಳುವವರಿಗೆ ವಿ. ಸೂ : ನಮ್ಮ ಯಾವ ಪುಸ್ತಕ ಬೇಕಾದರೂ ತಿಳಿಸಿ. ವಿ.ಪಿ.ಪಿ. ಮಾಡುತ್ತೇವೆ. ಅಂಚೆಯವರು ತಿಳಿಸಿದಾಗ ಹಣ ಕಟ್ಟಿ ಪುಸ್ತಕ ಪಡೆಯಬಹುದು. ಅಂಚೆ ಮತ್ತು ಪ್ಯಾಕಿಂಗ್ ವೆಚ್ಚ ಉಚಿತ














# ಪ್ರಪಂಚ ಕಂಪಿಸಿದಾಗ...

೧೭ನೆಯ ಆಗಸ್ಟ್ ೨೦೧೭! ಈ ತಾರೀಖಿನಲ್ಲಿ ಸಂಖ್ಯೆ ೧೭ ಎರಡು ಬಾರಿ ಬಂದಿರುವುದನ್ನು ಬಿಟ್ಟರೆ ಮತ್ತೆ ಏನಾದರೂ ವಿಶೇಷವಿದೆಯೇ? ಅಂದು ಆಲ್ಬರ್ಟ್ ಐನ್‌ಸ್ಟೈನರ ಖ್ಯಾತ ಸಿದ್ಧಾಂತವೊಂದಕ್ಕೆ ಮತ್ತೊಂದು ಖಚಿತ ಪುರಾವೆ ಸಿಕ್ಕಿತ್ತು. ಅವರು ಬದುಕಿದ್ದಿದ್ದರೆ ಅಂದು ಅವರ ಮುಖದಲ್ಲಿ ಮಂದಹಾಸವಿದ್ದು "ನಾನು ಹಿಂದೆಯೇ ಹೇಳಿರಲಿಲ್ಲವೇ" ಎನ್ನುತ್ತಿದ್ದರೋ ಏನೊ! ಆದರೆ "ಅದು ಎಂದಿಗೂ ಪರೀಕ್ಷಿಸಲಾಗುವುದಿಲ್ಲವೇನೋ ಎಂದುಕೊಂಡಿದ್ದೆ" ಎಂದೂ ಸೇರಿಸುತ್ತಿದ್ದಿರಬಹುದು ಕೂಡ! ೧೯೧೫ರಲ್ಲಿ ಆಲ್ಬರ್ಟ್ ಐನ್‌ಸ್ಟೈನರು ಮಂಡಿಸಿದ ಖ್ಯಾತ ಸಾರ್ವತ್ರಿಕ ಸಾಪೇಕ್ಷತಾ ಸಿದ್ಧಾಂತಕ್ಕೆ ಮೊದಲ ಪುರಾವೆ ಸಿಕ್ಕಿದ್ದು ೪ ವರ್ಷಗಳ ನಂತರ. ಅವರಿಗೆ ತಮ್ಮ ಸಿದ್ಧಾಂತಗಳಲ್ಲಿ ಅಪಾರ ಭರವಸೆ ಇದ್ದಿತು. ಆದರೂ ಅವರ ಸ್ನೇಹಿತ ಮೇರು ವಿಜ್ಞಾನಿ ಮ್ಯಾಕ್ಸ್ ಪ್ಲಾಂಕ್ ಸಿದ್ಧಾಂತಗಳಿಗೆ ಪುರಾವೆ ಸಿಗುವುದು ಒಳ್ಳೆಯದು ಎಂದಿದ್ದರು. ಈಗ ಅದೇ ಸಿದ್ಧಾಂತದ ಮತ್ತೊಂದು ಪ್ರತಿಪಾದನೆಗೂ ಖಚಿತ ಪುರಾವೆ ಸಿಕ್ಕಿದೆ: ಅವೇ ಭೀಮ-ದುರ್ಯೋಧನರ ಯುದ್ಧದಲ್ಲಿ ಭೂಮಿ ಕಂಪಿಸಿದಂತೆ ದೈತ್ಯ ಆಕಾಶಕಾಯಗಳ ಘರ್ಷಣೆಯಲ್ಲಿ ಪ್ರಪಂಚ ಕಂಪಿಸಿದಾಗ ಹುಟ್ಟುವ ಗುರುತ್ವದ ತರಂಗಗಳು!

**(೧) ವ್ಯೋಮ-ಕಾಲ**

ಸೌರಮಂಡಲದ ಗ್ರಹಗಳ ಚಲನೆಯನ್ನು ವಿವರಿಸಲು ೧೭ನೆಯ ಶತಮಾನದಲ್ಲಿ ಐಸ್ಯಾಕ್ ನ್ಯೂಟನ್ ದ್ರವ್ಯರಾಶಿಯ ಮೂಲ ಗುಣ ಗುರುತ್ವ ಮತ್ತು ಎರಡು ದ್ರವ್ಯರಾಶಿಗಳ ಮಧ್ಯೆ ಇರುವುದು ಗುರುತ್ವಾಕರ್ಷಣೆ ಎಂದು ತನ್ನ ಸಿದ್ಧಾಂತವನ್ನು ಪ್ರತಿಪಾದಿಸಿದ್ದರು. ಆದರೆ ದೂರದ ಸೂರ್ಯ ಭೂಮಿಯ ಮೇಲೆ ಹೇಗೆ ಪ್ರಭಾವ ಬೀರಬಲ್ಲದು? ಈ ಪ್ರಶ್ನೆಗೆ ಉತ್ತರವಿಲ್ಲದಿರುವುದು ತನ್ನ ಸಿದ್ಧಾಂತದ ಕೊರತೆ ಎಂದು ಅವರಿಗೆ ಅರಿವಿತ್ತು. ೧೯೦೫ರಲ್ಲಿ ಐನ್‌ಸ್ಟೈನ್ ತಮ್ಮ ವಿಶೇಷ ಸಾಪೇಕ್ಷತಾ ಸಿದ್ಧಾಂತವನ್ನು ಮಂಡಿಸಿದಾಗ ವಿಜ್ಞಾನ ಜಗತ್ತಿನಲ್ಲಿ ಹೊಸ ಗಾಳಿ ಬೀಸಲಾರಂಭಿಸಿತು. ಕೆಲವೇ ವರ್ಷಗಳ ನಂತರ ಅವರು ತಮ್ಮ ಯೋಜನೆಯಲ್ಲಿ ಗುರುತ್ವವನ್ನು ಅಳವಡಿಸಲು ಪ್ರಾರಂಭಿಸಿ, ೧೯೧೫ರ ನವೆಂಬರಿನಲ್ಲಿ ಬರ್ಲಿನ್ ನಗರದಲ್ಲಿ ನಾಲ್ಕು ಉಪನ್ಯಾಸಗಳ ಮೂಲಕ ತಮ್ಮ ಹೊಸ ಸಿದ್ಧಾಂತವನ್ನು ಮಂಡಿಸಿದರು. ಆ ಸಿದ್ಧಾಂತವೇ ಪ್ರಖ್ಯಾತ ಸಾರ್ವತ್ರಿಕ ಸಾಪೇಕ್ಷತಾ ಸಿದ್ಧಾಂತ (ಜನರಲ್ ಥಿಯರಿ ಆಫ್ ರಿಲೆಟಿವಿಟಿ) !

ಒಂದು ಘಟನೆಯನ್ನು ವಿವರಿಸಬೇಕಾದರೆ ಅದು ಎಲ್ಲಿ ನಡೆಯಿತು (೩ ಆಯಾಮಗಳು) ಎಂದಲ್ಲದೆ ಅದು ಯಾವಾಗ (೪ನೆಯ ಆಯಾಮ) ನಡೆಯಿತು ಎಂಬುದನ್ನೂ ಸ್ಪಷ್ಟಪಡಿಸಬೇಕಾದ ಅವಶ್ಯಕತೆಯನ್ನು ಐನ್‌ಸ್ಟೈನ್ ಮತ್ತು ಮಿನ್ಕೋವ್‌ಸ್ಕಿ ಮಂಡಿಸಿ ೧೯೦೮ರಲ್ಲಿ ವ್ಯೋಮ/ದೇಶ-ಕಾಲ ಪರಿಕಲ್ಪನೆಗೆ ಜನ್ಮಕೊಟ್ಟರು. ಸಾರ್ವತ್ರಿಕ ಸಾಪೇಕ್ಷತಾ ಸಿದ್ಧಾಂತದ ಪ್ರಕಾರ ಆಕಾಶಕಾಯ ಅಥವಾ ಯಾವುದಾದರೂ ದ್ರವ್ಯರಾಶಿ ಇದ್ದಲ್ಲಿ ವ್ಯೋಮ-ಕಾಲದ ಅಖಂಡತೆ ಡೊಂಕು/ವಕ್ರವಾಗುತ್ತದೆ. ಸಾಮಾನ್ಯವಾಗಿ ಇದಕ್ಕೆ ಒಂದು ರಬ್ಬರ್ ಹಾಳೆಯ ಮೇಲೆ ಒಂದು ಭಾರದ ಚೆಂಡನ್ನು ಇಟ್ಟಾಗ ಆ ಸ್ಥಳ ಬಗ್ಗಿ ಕಾಣಿಸುವ ವಕ್ರತೆಯನ್ನು ಉದಾಹರಣೆಯಾಗಿ ಕೊಡುತ್ತಾರೆ. ಎರಡು ದ್ರವ್ಯರಾಶಿಗಳು ವ್ಯೋಮ-ಕಾಲದ ಅಖಂಡತೆಯಲ್ಲಿ ಉಂಟುಮಾಡುವ ಇಳಿಜಾರು ಎರಡೂ ರಾಶಿಗಳನ್ನು ಹತ್ತಿರ ತರುತ್ತದೆ. ಈ ರೀತಿ ಸೂರ್ಯ ಮತ್ತು ಭೂಮಿಯ ಮಧ್ಯೆಯ ಗುರುತ್ವಾಕರ್ಷಣೆಯನ್ನು ಅರ್ಥಮಾಡಿಕೊಳ್ಳಬಹುದು.

**(೨) ಗುರುತ್ವದ ತರಂಗಗಳು**

ದ್ರವ್ಯರಾಶಿಯ ಚಲನೆಯಲ್ಲಿ ವೇಗೋತ್ಕರ್ಷ ಉಂಟಾದಾಗ ಇಡೀ ವ್ಯೋಮ-ಕಾಲ ಜಾಲದಲ್ಲಿ ಕಂಪನ ಉಂಟಾಗಿ ಅದು ತರಂಗ ರೂಪದಲ್ಲಿ ಎಲ್ಲ ಕಡೆಯೂ ಹರಡುತ್ತದೆ. ಒಂದು ಕೊಳಕ್ಕೆ ಕಲ್ಲೊಂದನ್ನು ಎಸೆದರೆ ಉಂಟಾಗುವ ಅಲೆಗಳ ತರಹವೇ ಈ ಅಲೆಗಳು. ಸಾಧಾರಣ ದ್ರವ್ಯರಾಶಿಗಳಿಂದ ಈ ತರಂಗಗಳು ಉತ್ಪತ್ತಿಯಾದರೂ ಅವು ಕ್ಷೀಣವಾಗಿರುತ್ತವೆ; ಅದಲ್ಲದೆ, ಅವುಗಳು ಅನೇಕ ಜ್ಯೋತಿರ್ವರ್ಷಗಳ ದೂರದಲ್ಲಿ ಉತ್ಪಾದನೆಯಾಗಿ ಭೂಮಿಗೆ ಬರುವಾಗ ಮತ್ತೂ ಕ್ಷೀಣವಾಗಿಬಿಡುತ್ತವೆ. ಆದ್ದರಿಂದ ಅವುಗಳನ್ನು ಕಂಡುಹಿಡಿಯುವುದು ಕಷ್ಟ. ಇದರ ಅರಿವಿದ್ದ ಐನ್‌ಸ್ಟೈನ್‌ರಿಗೆ ಅಂತಹ ತರಂಗಗಳನ್ನು ಕಂಡುಹಿಡಿಯಲು ಆಗುವುದಿಲ್ಲವೇನೋ ಎಂಬ ಅನುಮಾನವಿದ್ದಿತು.

ಭೂಮಿ ನಡುಗಬೇಕಾದರೆ ಭೀಮ ಮತ್ತು ದುರ್ಯೋಧನರಂತಹವರ ಮಧ್ಯೆ ಯುದ್ಧವಾಗಬೇಕಲ್ಲವೇ? ಹೀಗೆಯೇ ಅತಿ ಹೆಚ್ಚು ರಾಶಿಯ ಆಕಾಶಕಾಯಗಳು ಪಾತ್ರವಹಿಸುವ ವಿದ್ಯಮಾನಗಳು ನಡೆದಾಗ ವ್ಯೋಮ-ಕಾಲ ಜಾಲದಲ್ಲಿ ಕಂಪನ ಹೆಚ್ಚಾಗಿ ಗುರುತ್ವದ ತರಂಗಗಳನ್ನು ಕಂಡುಹಿಡಿಯಬಹುದೆಂಬ ನಿರೀಕ್ಷೆ ಹುಟ್ಟಿತು. ಅಂತಹ ಆಕಾಶಕಾಯಗಳು ಯಾವುವು ಎಂದು ಯೋಚಿಸಿದರೆ ಸಿಗುವುದು ಎರಡು ಮುಖ್ಯ ಉದಾಹರಣೆಗಳು : ನ್ಯೂಟ್ರಾನ್ ನಕ್ಷತ್ರಗಳು ಮತ್ತು ಕಪ್ಪು ಕುಳಿಗಳು! ಇವೆರಡೂ ಹುಟ್ಟುವುದು ಹೆಚ್ಚು ದ್ರವ್ಯರಾಶಿಯ ತಾರೆಗಳ ಜೀವನದ ಅಂತ್ಯದಲ್ಲಿ. (೧) ನ್ಯೂಟ್ರಾನ್ ನಕ್ಷತ್ರ ೨-೩ ಸೌರ ರಾಶಿಯನ್ನು ಅತಿ ಚಿಕ್ಕ (~ ೨೦-೩೦ ಕಿ.ಮೀ. ಅಗಲದ, ಅಂದರೆ ಒಂದು ಮಹಾನಗರದಷ್ಟು ಜಾಗ) ಸ್ಥಳದಲ್ಲಿ ಅಳವಡಿಸಿಕೊಂಡಿರುವ ಆಕಾಶಕಾಯ; ಬಹಳ ಕಾಲ ಬರೀ ಕಲ್ಪನೆಯಾಗಿದ್ದ ಈ ನಕ್ಷತ್ರವನ್ನು ೧೯೬೭ರಲ್ಲಿ ಬೆಳಕು/ರೇಡಿಯೊ ಕಿರಣಗಳನ್ನು ನಿಯತಕಾಲಿಕವಾಗಿ ಕಳಿಸುವ 'ಪಲ್ಸಾರ್' ಎಂಬ ಕಾಯದ ರೂಪದಲ್ಲಿ ಕಂಡುಹಿಡಿಯಲಾಗಿದ್ದು, ಇಂದು ೨೦೦೦ಕ್ಕೂ ಹೆಚ್ಚು ಅಂತಹ ನಕ್ಷತ್ರಗಳನ್ನು ಗುರುತಿಸಲಾಗಿದೆ; ಅವುಗಳ ಸಂಖ್ಯೆ ನಮ್ಮ ಗ್ಯಾಲಕ್ಸಿಯಲ್ಲೇ ಒಂದು ಬಿಲಿಯ ಇರಬಹುದು. (೨) ಮತ್ತೂ ಹೆಚ್ಚು ದ್ರವ್ಯರಾಶಿಯನ್ನು ಇನ್ನೂ ಚಿಕ್ಕ ಸ್ಥಳದಲ್ಲಿ ಹೊಂದಿರುವ ಆಕಾಶಕಾಯದಲ್ಲಿ ಅಗಾಧ ಸಾಂದ್ರತೆಯಿಂದಾಗಿ ಬೆಳಕು ಹೊರಬರಲು ಸಾಧ್ಯವಿಲ್ಲವಾದ್ದರಿಂದ ಇವಕ್ಕೆ ಕಪ್ಪು ಕುಳಿ (ಬ್ಲ್ಯಾಕ್ ಹೋಲ್)ಗಳೆಂದು ಕರೆಯಲಾಯಿತು; ಇವುಗಳನ್ನು ನೇರವಾಗಿಯಲ್ಲವಾದರೂ ಪರೋಕ್ಷವಾಗಿ ಇವುಗಳ ಪ್ರಭಾವದಿಂದ ಕಂಡುಹಿಡಿಯಲಾಗಿದೆ.

ಗುರುತ್ವದ ತರಂಗಗಳಿಗೆ ಮೊದಲ ಪುರಾವೆ ಸಿಕ್ಕಿದ್ದು ೧೯೭೪ರಲ್ಲಿ. ಒಂದು ಅವಳಿ-ಜವಳಿ ನ್ಯೂಟ್ರಾನ್ ನಕ್ಷತ್ರಗಳ ವ್ಯವಸ್ಥೆಯಿದ್ದಾಗ ಅವು ಹತ್ತಿರ ಹತ್ತಿರ ಬರುತ್ತ ಗುರುತ್ವದ ಅಲೆಗಳು

**ಡಾ॥ ಪಾಲಹಳ್ಳಿ ವಿಶ್ವನಾಥ್**

ಹುಟ್ಟುತ್ತವೆ; ಅಂತಹ ಎರಡು ನಕ್ಷತ್ರಗಳ ಮಧ್ಯೆಯ ದೂರ ಕಡಿಮೆಯಾಗುತ್ತ ಹೋಗುವುದನ್ನು ಕಂಡುಹಿಡಿದ ಈ ಆವಿಷ್ಕಾರಕ್ಕೆ ನೊಬೆಲ್ ಪ್ರಶಸ್ತಿಯೂ ಬಂದಿತು. ಆದರೆ ಇದು ಪರೋಕ್ಷ ಆವಿಷ್ಕಾರವಾಗಿದ್ದಿತು. ನೇರವಾಗಿ ಕಂಡುಹಿಡಿದರೆ ಮಹತ್ವ ಹೆಚ್ಚಲ್ಲವೆ?

೧೯೮೦ರಲ್ಲಿಯೇ ವಿಜ್ಞಾನಿಗಳು ಗುರುತ್ವದ ಅಲೆಗಳನ್ನು ನೇರವಾಗಿ ಕಂಡುಹಿಡಿಯುವ ವಿಧಾನವನ್ನು ಮಂಡಿಸಿದ್ದರು. ಗುರುತ್ವದ ತರಂಗಗಳು ಹರಡುತ್ತಾ ಹೋಗಿ ಭೂಮಿಯ ಬಳಿ ಬಂದಾಗ ಅದರ ಪ್ರಭಾವದಿಂದ ಎರಡು ವಸ್ತುಗಳ ಮಧ್ಯೆಯ ದೂರ ನಿಯತಕಾಲಿಕವಾಗಿ ಹೆಚ್ಚು ಕಡಿಮೆಯಾಗುತ್ತದೆ; ಈ ಬದಲಾವಣೆಯ ಅವಧಿ ಗುರುತ್ವದ ತರಂಗಗಳ ಆವೃತ್ತಿಯೇ ಆಗಿರುತ್ತದೆ. ಆದ್ದರಿಂದ ಈ ಬದಲಾವಣೆಯನ್ನು ವ್ಯತೀಕರಣ (ಇಂಟರ್‌ಫಿಯರೆನ್ಸ್) ಮಾಪಕದಿಂದ ಅಳೆದರೆ ಗುರುತ್ವದ ಅಲೆಗಳ ಆವಿಷ್ಕಾರವಾಗುತ್ತದೆ. ಆ ಉಪಕರಣಗಳ ಹೆಸರು ಲೈಗೊ. ಈ ಉಪಕರಣದಲ್ಲಿ ಲೇಸರ್ ಬೆಳಕನ್ನು ಸೀಳುಮಾಡಿ ಎರಡು ದಿಕ್ಕುಗಳಲ್ಲಿ ಕಳಿಸಲಾಗುತ್ತದೆ. ಬೆಳಕಿನ ಕಿರಣಗಳು ಎರಡು (ಒಂದಕ್ಕೊಂದು ಲಂಬವಿರಬೇಕು) ದಿಕ್ಕುಗಳಲ್ಲಿ ಅತಿ ದೂರ (೪ ಕಿ.ಮೀ.) ಪ್ರಯಾಣ ಮಾಡಿ ವಾಪಸ್ಸು ಅದು ಹೊರಟ ಜಾಗಕ್ಕೆ ಬರಬೇಕಾಗುತ್ತದೆ. ಸಾಮಾನ್ಯವಾಗಿ ಎರಡೂ ಕಡೆಗಳಿಂದಲೂ ಬೆಳಕು ಒಂದೇ ಸಮಯಕ್ಕೆ ಮೂಲ ಸ್ಥಳಕ್ಕೆ ಬರುತ್ತದೆ. ಆದರೆ ಕಂಪನವಿದ್ದು ಗುರುತ್ವದ ಅಲೆಗಳ ಪ್ರಭಾವದಿಂದಾಗಿ, ಭೂಮಿ ಒಂದು ದಿಕ್ಕಿನಲ್ಲಿ ಹಿಗ್ಗಿದ್ದು, ಇನ್ನೊಂದರಲ್ಲಿ ಕುಗ್ಗಿರುತ್ತದೆ. ಈ ವ್ಯತ್ಯಾಸ ಬಹಳ ಕಡಿಮೆ ಇದ್ದು ಪ್ರಯೋಗಗಳನ್ನು ಬಹಳ ಸೂಕ್ಷ್ಮವಾಗಿ ನಡೆಸಬೇಕಾಗುತ್ತದೆ. ಬೇರೆ ಬೇರೆ ಪ್ರಕ್ರಿಯೆಗಳಿಂದ ಕಂಪನಗಳು ಉಂಟಾಗಬಹುದಾದ್ದರಿಂದ ಒಂದು ಘಟನೆಯು ನಿಜವೇ ಎಂದು ಖಚಿತವಾಗಿ ಹೇಳಲು ಬಹಳ ದೂರದಲ್ಲಿರುವ ಎರಡಾದರೂ ಉಪಕರಣಗಳು ಅವಶ್ಯವಾಗುತ್ತವೆ. ಈ ಉದ್ದೇಶದಿಂದ ಎರಡು ಲೈಗೊ ಉಪಕರಣಗಳನ್ನು (ಒಂದು ಅಮೆರಿಕದ ದಕ್ಷಿಣ ಭಾಗದಲ್ಲಿ, ಮತ್ತೊಂದು ವಾಯವ್ಯ ಭಾಗದಲ್ಲಿ – ಇವುಗಳ ಮಧ್ಯೆ ದೂರ ~೩೦೦೦ ಕಿ.ಮೀ.ಗಳು) ೨೦೧೪ರಲ್ಲಿ ಬಳಸಲು ಪ್ರಾರಂಭವಾಯಿತು. ೨೦೦೨ರಲ್ಲಿಯೇ ಮೊದಲ ಪ್ರಯೋಗಗಳು ನಡೆದರೂ ಉಪಕರಣ ಮತ್ತು ವಿಧಾನ ಸುಧಾರಿಸುತ್ತ ಹೋಗಿ ಸೆಪ್ಟೆಂಬರ್ ೨೦೧೫ರಲ್ಲಿ ಮತ್ತೆ ಪ್ರಾರಂಭವಾಯಿತು. ಭೂಮಿಗೂ ಮತ್ತು ಹತ್ತಿರದ ಅಲ್ಫ ಸೆಂಟೋರಿ ನಕ್ಷತ್ರಕ್ಕೂ ಇರುವ ದೂರ (೪.೨ ಜ್ಯೋತಿರ್ವರ್ಷಗಳು – ೨೫ ಟ್ರಿಲಿಯನ್ ಕಿ.ಮೀ.ಗಳು)ದಲ್ಲಿ ಒಂದು ಕೂದಲೆಳೆಯಷ್ಟು ಬದಲಾವಣೆಯನ್ನು ಕೂಡ ಗುರುತಿಸುವ, ದಾಖಲಿಸುವ ಸಾಮರ್ಥ್ಯವಿರುವ ಉಪಕರಣಗಳಿವು! ಅಮೆರಿಕದ ಅತ್ಯಂತ ದುಬಾರಿ ಮೂಲಭೂತ ವೈಜ್ಞಾನಿಕ ಪ್ರಯೋಗಗಳಲ್ಲಿ ಇದೂ ಒಂದು.




*ಲೇಸರ್ ಬೆಳಕನ್ನು ಎರಡು ಭಾಗ ಮಾಡಿ, ಎರಡು ದಿಕ್ಕುಗಳಲ್ಲಿ ಆದರೆ ಒಂದೇ ದೂರ ಕಳಿಸಿ ಮತ್ತೆ ವಾಪಸ್ಸು ಪಡೆದು ಸಮಯವನ್ನು ದಾಖಲಿಸುವುದು; ಏನಾದರೂ ವ್ಯತ್ಯಾಸ ಕಂಡರೆ, ಪರಿಶೀಲನೆ ನಡೆಸಿ, ದೂರದಲ್ಲಿ ಮತ್ತೊಂದು ಸ್ಥಳದಲ್ಲಿರುವ ಲೈಗೊ ಉಪಕರಣವೂ ಇದೇ ಸಮಯದಲ್ಲಿ ಇದೇ ವ್ಯತ್ಯಾಸವನ್ನು ದಾಖಲಿಸಿದೆಯೇ ಎಂದು ನೋಡಬೇಕು.*

ಪ್ರಯೋಗ ಶುರುವಾದ ಕೆಲವೇ ದಿನಗಳಲ್ಲಿ – ಸೆಪ್ಟೆಂಬರ್ ೧೪, ೨೦೧೫ರಂದು – ಮೊದಲನೆಯ ಗುರುತ್ವದ ತರಂಗಗಳ ದಾಖಲೆಯಾಯಿತು. ದತ್ತಾಂಶವನ್ನು ಪರಿಶೀಲಿಸಲು ಸ್ವಲ್ಪ ಸಮಯ ಬೇಕಾಗಿ ಫೆಬ್ರವರಿ ೨೦೧೬ರಲ್ಲಿ ಇದರ ಬಗ್ಗೆ ಅಧಿಕೃತ ಘೋಷಣೆ ನಡೆಯಿತು. ೧.೩ ಬಿಲಿಯ ಕಿ.ಮೀ. ದೂರದಲ್ಲಿ ಎರಡು ಕಪ್ಪು ಕುಳಿಗಳ (೨೯ ಮತ್ತು ೩೬ ಸೌರರಾಶಿಗಳ ಕಪ್ಪು ಕುಳಿಗಳು) ಘರ್ಷಣೆಯಿಂದ ಹೊಸ ಕಪ್ಪು ಕುಳಿ ಹುಟ್ಟಿದಾಗ ಉಳಿದ ೩ ಸೌರರಾಶಿಯಷ್ಟು ಶಕ್ತಿ ಗುರುತ್ವ ತರಂಗಗಳಾಗಿ ಪರಿವರ್ತನೆಗೊಂಡು ಎಲ್ಲೆಲ್ಲೂ ಹರಡಿದವು ಎಂದು ತಿಳಿದುಬಂದಿತು. ಕೆಲವು ವಿದ್ಯಮಾನಗಳಿಂದ ಬೆಳಕು ಮತ್ತು ಇತರ ವಿದ್ಯುತ್ಕಾಂತೀಯ ತರಂಗಗಳು ಭೂಮಿಗೆ ಬರಲು ಅಡಚಣೆಗಳಿದ್ದರೂ ಗುರುತ್ವದ ತರಂಗಗಳನ್ನು ಈ ರೀತಿ ದಾಖಲಿಸಬಹುದಾದ್ದರಿಂದ ಇದನ್ನು ಹೊಸ ಖಗೋಳ ವಿಜ್ಞಾನ ಎಂದೂ ಘೋಷಿಸಲಾಯಿತು. ಇದರ ನಂತರ ೧೫ ಡಿಸೆಂಬರ್ ೨೦೧೬, ಜೂನ್ ೧ ೨೦೧೭, ಆಗಸ್ಟ್ ೧೪ ೨೦೧೭ರಲ್ಲಿ ಲೈಗೊ ಉಪಕರಣಗಳು ಮತ್ತೆ ಈ ತರಂಗಗಳನ್ನು ದಾಖಲಿಸಿದವು. ಇವೂ ಕೂಡ ಕಪ್ಪು ಕುಳಿಗಳ ಘರ್ಷಣೆಗಳಿಂದ ಹುಟ್ಟಿದ್ದವು ಎಂದು ನಿರ್ಧರಿಸಲಾಯಿತು. ಈ ಆವಿಷ್ಕಾರಗಳಿಗೆ ೨೦೧೬ರ ನೊಬೆಲ್ ಪ್ರಶಸ್ತಿಯನ್ನು ಈ ಪ್ರಯೋಗದ ಮೂವರು ಮುಖ್ಯಸ್ಥರಿಗೆ ಕೊಡಲಾಯಿತು.

ಇಷ್ಟೆಲ್ಲ ಆದರೂ ಅನುಮಾನವನ್ನು ವ್ಯಕ್ತಪಡಿಸುವವರು ಇದ್ದೇ ಇದ್ದರು. ಉಪಕರಣಗಳಲ್ಲಿ ಏನಾದರೂ ಒಂದೇ ತರಹದ ಗಲಭೆ (ನಾಯ್ಸ್) ಇರಬಹುದೇನೋ? ಗುರುತ್ವದ ತರಂಗಗಳ ಜೊತೆ ಬೇರೆ ವಿದ್ಯುತ್ಕಾಂತೀಯ ತರಂಗಗಳು (ಬೆಳಕು, ಇತ್ಯಾದಿ) ಏಕೆ ಇಲ್ಲ? ೨೦–೩೦ ಸೌರರಾಶಿಯ ಕಪ್ಪು ಕುಳಿಗಳು ಹೇಗೆ ತಯಾರಾಗುತ್ತವೆ? ಇವೆಲ್ಲಕ್ಕೂ ಉತ್ತರವಾಗಿ ೧೭ ಆಗಸ್ಟ್ ೨೦೧೭ರಂದು ಪ್ರಕೃತಿ ಒಂದು ಮಹಾ ಕೊಡುಗೆಯನ್ನು ನೀಡಿತು!

**(೩) ಪ್ರಕೃತಿಯ ಧಾರಾಳತನ**

೧೭ ಆಗಸ್ಟ್ ೨೦೧೭ರಂದು ೧೨.೪೧ರ ಸಮಯದಲ್ಲಿ ಲೈಗೊ ಮತ್ತು ಹೊಸದಾಗಿ ಪ್ರಾರಂಭವಾಗಿದ್ದ ಇಟಲಿಯ ಪೀಸಾ ನಗರದ ಬಳಿಯ

ಇನ್ನೊಂದು ಲೈಗೊ ಉಪಕರಣ ಒಂದು ಗುರುತ್ವದ ತರಂಗದ ಘಟನೆಯನ್ನು ದಾಖಲಿಸಿತು. ಈ ಘಟನೆಗೆ ಸುಮಾರು ಹತ್ತಿರ (~೧೩೦ ಮಿಲಿಯ ಜ್ಯೋತಿರ್ವರ್ಷ) ದೂರದಲ್ಲಿ ನಡೆದ ಎರಡು ನ್ಯೂಟ್ರಾನ್ ನಕ್ಷತ್ರಗಳ ಘರ್ಷಣೆ ಕಾರಣ ಎಂದು ಅಕ್ಟೋಬರ್ ೧೬ರಂದು ಘೋಷಿಸಲಾಯಿತು. ಹಿಂದೆ ಕಂಡುಹಿಡಿದಿದ್ದ ಗುರುತ್ವದ ಅಲೆಗಳ ಅವಧಿ ಹಲವಾರು ಸೆಕೆಂಡುಗಳು ಮಾತ್ರ ಇದ್ದಿತು; ಆದರೆ ಈ ತರಂಗಗಳು ೧೦೦ ಸೆಕೆಂಡುಗಳಿಗೂ ಹೆಚ್ಚು ಹೊತ್ತು ಇದ್ದವು. ಆದ್ದರಿಂದ ಇದರ ಖಚಿತತೆಗೆ ಯಾವ ಅನುಮಾನವೂ ಇರಲಿಲ್ಲ. ಆ ಸಮಯದಲ್ಲಿ ಹೊರಬಂದ ಶಕ್ತಿ ನಮ್ಮ ಗ್ಯಾಲಕ್ಸಿ ಒಟ್ಟು ಹೊರಸೂಸುವ ಶಕ್ತಿಗಿಂತ ಬಿಲಿಯದಷ್ಟು ಹೆಚ್ಚು ಎಂದೂ ತಿಳಿದುಬಂದಿತು. ಅದಲ್ಲದೆ, ವಿಜ್ಞಾನಿಯೊಬ್ಬರು ಹೇಳಿದಂತೆ "ಒಂದೊಂದು ಬಾರಿ ಪ್ರಕೃತಿ ಬಹಳ ಧಾರಾಳವಾಗಿ ವರ್ತಿಸುತ್ತದೆ"! ಅದೇನೆಂಬುದನ್ನು ಮುಂದೆ ನೋಡೋಣ.

ಈ ವಿದ್ಯಮಾನದ ಅರಿವೇ ಇಲ್ಲದಂತೆ ಬಾಹ್ಯಾಕಾಶದಲ್ಲಿ ಕಕ್ಷೆಯಲ್ಲಿರುವ ಫರ್ಮಿ ಗ್ಯಾಮಾ ಕಿರಣ ವೀಕ್ಷಣಾಲಯ ಅದೇ ಸ್ಥಳದಲ್ಲಿ ಗ್ಯಾಮಾ ಸ್ಫೋಟವೊಂದನ್ನು ದಾಖಲು ಮಾಡಿತ್ತು; ೩ ದಶಕದಿಂದ ಇಂತಹ ಬಹಳ ಶಕ್ತಿಶಾಲೀ ಆಸ್ಫೋಟಗಳನ್ನು ಬಾಹ್ಯಾಕಾಶದ ವಿವಿಧ ಉಪಕರಣಗಳು ಪ್ರತಿದಿನವೂ ಕಂಡುಹಿಡಿಯಲಾಗಿದ್ದು ಇವುಗಳಲ್ಲಿ ಕೆಲವು ನ್ಯೂಟ್ರಾನ್ ನಕ್ಷತ್ರಗಳ ಘರ್ಷಣೆಯಲ್ಲಿ ಹುಟ್ಟಬಹುದು ಎಂಬ ಸಿದ್ಧಾಂತಗಳು ಇದ್ದವು. ಆದ್ದರಿಂದ ಒಂದೇ ಮೂಲದಿಂದ ಗುರುತ್ವದ ತರಂಗಗಳು ಮತ್ತು ಗ್ಯಾಮಾ ಕಿರಣಗಳು ದಾಖಲಾಗಿದ್ದು ವಿಜ್ಞಾನಿಗಳಿಗೆ ಸಂತಸವನ್ನು ಕೊಟ್ಟಿತು. ಈ ಸುದ್ದಿ ತಿಳಿದ ತಕ್ಷಣವೆ ಭೂಮಿಯ ಇತರ ವಿದ್ಯುತ್ಕಾಂತೀಯ – ಬೆಳಕು, ಕ್ಷಕಿರಣ, ಅವ ಕೆಂಪು ಕಿರಣ – ದೂರದರ್ಶಕಗಳನ್ನೂ (ಒಟ್ಟು ಸುಮಾರು ೭೦) ಅದೇ ದಿಕ್ಕಿಗೆ ತಿರುಗಿಸಿದಾಗ ಈ ಎಲ್ಲ ತರಂಗಾಂತರಗಳ ಕಿರಣಗಳು ಕಂಡುಬಂದವು! ಅದಲ್ಲದೆ ಈ ಘಟನೆ ನಡೆದ ಸ್ಥಳವನ್ನೂ ನಿಖರವಾಗಿ ಕಂಡುಹಿಡಿಯಲಾಯಿತು : ಹೈಡ್ರ ಎಂಬ ನಕ್ಷತ್ರಪುಂಜದ ಎನ್.ಜಿ.ಸಿ. ೪೯೯೩ ಎಂಬ ಗ್ಯಾಲಕ್ಸಿಯಲ್ಲಿ ಈ ಘಟನೆ ೧೩೦ ಮಿಲಿಯ ವರ್ಷಗಳ ಹಿಂದೆ ನಡೆಯಿತು. ಅಂತೂ ಪುರಾವೆಯ ಮೇಲೆ ಪುರಾವೆ! ಕ್ಷ–ಕಿರಣ ಮತ್ತು ಬೆಳಕನ್ನು ಕಂಡುಹಿಡಿದ ಹಲವಾರು ದೂರದರ್ಶಕಗಳಲ್ಲಿ ಭಾರತದ ಉಪಕರಣಗಳೂ ಸೇರಿದ್ದವು. ಇವೆಲ್ಲ ಅಲ್ಲದೆ ಮತ್ತೊಂದು ಮುಖ್ಯ ಆವಿಷ್ಕಾರವೂ ಸಾಧ್ಯವಾಯಿತು.

ಹಿಂದಿನಿಂದಲೂ ಚಿನ್ನ, ಬೆಳ್ಳಿಯಂತಹ ತೂಕದ ಮೂಲಧಾತುಗಳು ಪ್ರಕೃತಿಯಲ್ಲಿ ಹೇಗೆ ತಯಾರಾಗುತ್ತವೆ ಎಂಬುದರ ಬಗ್ಗೆ ವಾದ–ವಿವಾದಗಳಿದ್ದವು. ಅತಿ ಲಘು ಪರಮಾಣುಗಳಾದ ಹೈಡ್ರೋಜೆನ್ ಮತ್ತು ಹೀಲಿಯಮ್, ಮಹಾಸ್ಫೋಟದ ಹಲವಾರು ಸಾವಿರ ವರ್ಷಗಳ ನಂತರ ಹುಟ್ಟಿದವು. ಉಳಿದ ಪರಮಾಣುಗಳನ್ನು ತಯಾರು ಮಾಡಬೇಕಾದರೆ ನಕ್ಷತ್ರಗಳು ಜನ್ಮ ತಾಳಬೇಕಾಯಿತು. ಅಗಾಧ ಸಂಖ್ಯೆಯ ಜಲಜನಕದ ಪರಮಾಣುಗಳು ಒಟ್ಟಿಗೆ ಸೇರಿದಲ್ಲಿ ಅಗಾಧ ತಾಪಮಾನ ಉಂಟಾಗುತ್ತದೆ. ಇದರಿಂದಾಗಿ ಪ್ರಾರಂಭವಾದ ಸಂಲಯನ (ಫ್ಯೂಷನ್) ಪ್ರಕ್ರಿಯೆಗಳಲ್ಲಿ ಮೊದಲಿಂದ ಇರುವ ಹೈಡ್ರೋಜೆನ್ ನಿಧಾನವಾಗಿ ಹೀಲಿಯಮ್ ಆನಂತರ ಲಿಥಿಯಮ್ ಇತ್ಯಾದಿ ಪರಮಾಣುಗಳಿಗೆ ಪರಿವರ್ತನೆಯಾಗುತ್ತಾ ಹೋಗುತ್ತದೆ. ಈ ಪರಿವರ್ತನೆಗಳಲ್ಲೇ ಬೆಳಕೂ ಹುಟ್ಟಿ ನಕ್ಷತ್ರದ ಪ್ರಕಾಶಕ್ಕೆ ಕಾರಣವಾಗುತ್ತದೆ. ಲಘು ರಾಶಿಯ ನಕ್ಷತ್ರಗಳಲ್ಲಿ ಇಂಗಾಲ/ ಆಮ್ಲಜನಕದ ತನಕ ಪರಮಾಣುಗಳು ತಯಾರಾಗುತ್ತವೆ. ಹೆಚ್ಚು ರಾಶಿಯ ನಕ್ಷತ್ರಗಳಲ್ಲಿ ಕಬ್ಬಿಣದ ತನಕ ಕೂಡ ಮೂಲಧಾತುಗಳು ತಯಾರಾಗುತ್ತವೆ. ಆದರೆ ಇನ್ನೂ ತೂಕದ ಮೂಲಧಾತುಗಳನ್ನು ಹೇಗೆ ತಯಾರಿಸುವುದು? ಉದಾಹರಣೆಗೆ, ೩೦ ನ್ಯೂಟ್ರಾನ್‌ಗಳಿರುವ ಕಬ್ಬಿಣದ ಪರಮಾಣುವೆಲ್ಲಿ? ೭೯ ನ್ಯೂಟ್ರಾನ್‌ಗಳಿರುವ ಚಿನ್ನದ ಪರಮಾಣುವೆಲ್ಲಿ? ಅಂದರೆ ಒಟ್ಟಿನಲ್ಲಿ ನ್ಯೂಟ್ರಾನುಗಳು ಹೆಚ್ಚು ಉತ್ಪಾದನೆಯಾಗಿ ಮತ್ತೂ ತೂಕದ ಮೂಲಧಾತುಗಳು ತಯಾರಾಗಬೇಕಾಗುತ್ತದೆ. ಆದ್ದರಿಂದ ಇಂತಹ ತೂಕದ ಪರಮಾಣುಗಳು ನಕ್ಷತ್ರಗಳ ಅಂತ್ಯ ಸಮಯದಲ್ಲಿ ನಡೆಯುವ ಸೂಪರ್ನೋವಾ ವಿದ್ಯಮಾನದಲ್ಲಿ ತಯಾರಾಗುತ್ತವೆ ಎಂದು ೧೯೫೦ರ ದಶಕದಲ್ಲಿ ಇಂಗ್ಲೆಂಡಿನ ಕೆಲವು ವಿಜ್ಞಾನಿಗಳು ಪ್ರತಿಪಾದಿಸಿದ್ದು ಇದೇ ಸಿದ್ಧಾಂತವನ್ನು ಹಲವಾರು ವರ್ಷಗಳು ನಿಜವೆಂದೂ ಸ್ವೀಕರಿಸಲಾಗಿತ್ತು ಕೂಡ. ಆದರೆ ಕ್ರಮೇಣ ಈ ಸೂಪರ್ನೋವಾ ವಿದ್ಯಮಾನದಲ್ಲಿ ಸಾಕಷ್ಟು ನ್ಯೂಟ್ರಾನ್‌ಗಳು ಸಿಗುವುದಿಲ್ಲವಲ್ಲ ಎಂಬ ಅನುಮಾನ ಹುಟ್ಟಿತು. ಮತ್ತೂ ಹೆಚ್ಚು ನ್ಯೂಟ್ರಾನ್‌ಗಳು ಯಾವ ವಿದ್ಯಮಾನದಲ್ಲಿ ಸಿಗುತ್ತವೆ? ಆದ್ದರಿಂದ ವಿಜ್ಞಾನಿಗಳು ನ್ಯೂಟ್ರಾನ್ ನಕ್ಷತ್ರಕ್ಕೇ ಮೊರೆಹೋಗಿ ನ್ಯೂಟ್ರಾನ್ ನಕ್ಷತ್ರಗಳ ಘರ್ಷಣೆಯಲ್ಲಿ ಇಂತಹ ತೂಕದ ಮೂಲಧಾತುಗಳು ಹುಟ್ಟಬಹುದೆಂದು ಅಭಿಪ್ರಾಯಪಟ್ಟರು. ಪ್ರತಿ ಧಾತುವಿಗೂ ಅದರದ್ದೇ ವಿಶಿಷ್ಟ ಬೆಳಕಿನ ರೇಖೆಗಳು ಇರುತ್ತವೆ; ಉದಾಹರಣೆ : ಚಿನ್ನ ಮತ್ತು ಬೆಳ್ಳಿಯಿಂದ ಹೊರಬರುವ ಬೆಳಕು ಬೇರೆ ಬೇರೆ ರೀತಿಯ ತರಂಗಗಳನ್ನು ಹೊಂದಿರುತ್ತದೆ. ಆದ್ದರಿಂದ ಈ ಗುರುತ್ವದ ತರಂಗಗಳ ಜೊತೆ ಉತ್ಪನ್ನವಾದ ವಿದ್ಯುತ್ಕಾಂತೀಯ ರೋಹಿತ (ಬೆಳಕು, ಅವಕೆಂಪು, ಕ್ಷ–ಕಿರಣ ಇತ್ಯಾದಿಗಳಲ್ಲಿ ಧಾತುಗಳ ಸಹಿ)ವನ್ನು ಬಹಳ ಕುತೂಹಲದಿಂದ ಪರೀಕ್ಷಿಸಲಾಯಿತು. ಕಡೆಗೂ ಅವರ ನಿರೀಕ್ಷೆ ಸಫಲವಾಗಿ ಚಿನ್ನ ಮತ್ತು ಇತರ ಧಾತುಗಳಿಂದ ಬರುವ ವಿಶಿಷ್ಟ ಬೆಳಕಿನ ಮತ್ತು ಅವಕೆಂಪು ರೇಖೆಗಳು ಆ ರೋಹಿತದಲ್ಲಿ ಕಾಣಿಸಿದವು. ಅಂತೂ ದಶಕಗಳಿಂದ ಈ ವಿಷಯದ ಬಗ್ಗೆ ಯೋಚಿಸುತ್ತಿದ್ದ ಬೈಜಿಕ ವಿಜ್ಞಾನಿಗಳ ಸಮಸ್ಯೆಗೂ ಉತ್ತರ ಸಿಕ್ಕಿತ್ತು!

ಈ ವಿದ್ಯಮಾನದಿಂದ ಮೂರು ಮುಖ್ಯ ವಿಷಯಗಳು ತಿಳಿದುಬಂದವು : (೧) ನ್ಯೂಟ್ರಾನ್ ನಕ್ಷತ್ರಗಳ ಘರ್ಷಣೆಯಲ್ಲಿ ಗುರುತ್ವದ ಅಲೆಗಳ ಖಚಿತ ಆವಿಷ್ಕಾರ, (೨) ಕೆಲವು ರೀತಿಯ ಗ್ಯಾಮ ಆಸ್ಫೋಟನೆಗಳಿಗೆ ಇಂತಹ ಘರ್ಷಣೆಯೇ ಕಾರಣ ಎಂಬ ಸಂಶೋಧನೆ, ಮತ್ತು (೩) ಪ್ರಕೃತಿಯಲ್ಲಿ ತೂಕದ ಮೂಲಧಾತುಗಳಾದ ಚಿನ್ನ ಇತ್ಯಾದಿಗಳ ತಯಾರಿಕೆಗೆ ಒಂದು ವಿಧಾನ. ಈ ವಿಷಯಗಳ ಬಗ್ಗೆ ಅನೇಕ ಸಂಶೋಧನಾ ಲೇಖನಗಳು ಒಂದೇ ದಿನ ಪ್ರಕಟವಾಗಿದ್ದು ಲೇಖಕರ ಒಟ್ಟು ಸಂಖ್ಯೆ ೪೦೦೦ಕ್ಕೂ ಹೆಚ್ಚಿತ್ತು. ಇದರಿಂದಲೇ ಈ ಘಟನೆ ಭೌತವಿಜ್ಞಾನಿಗಳಿಗೆ ಎಷ್ಟು ಮುಖ್ಯ ಎಂಬುದನ್ನು ತಿಳಿಯಬಹುದು. ಅಕಸ್ಮಾತ್ತಾಗಿ ಈ ವರ್ಷ ಗುರುತ್ವದ ಅಲೆಗಳ ಆವಿಷ್ಕಾರಕ್ಕೆ ನೊಬೆಲ್ ಪ್ರಶಸ್ತಿ ಬರದಿದ್ದಲ್ಲಿ ಈ ೧೭ ಆಗಸ್ಟ್‌ನ ವಿದ್ಯಮಾನವಂತೂ ನಿಶ್ಚಯವಾಗಿ ನೊಬೆಲ್ ಪ್ರಶಸ್ತಿಯನ್ನು ಗಳಿಸುತ್ತಿತ್ತು. ಭಾರತದಲ್ಲೂ ಒಂದು ಲೈಗೊ ಉಪಕರಣವನ್ನು ಇರಿಸಲು ಲೈಗೊ ವಿಜ್ಞಾನಿಗಳು ನಿರ್ಧರಿಸಿದ್ದು, ಅದು ಶೀಘ್ರದಲ್ಲಿಯೇ ಮಹಾರಾಷ್ಟ್ರದಲ್ಲಿ ಸ್ಥಾಪಿತವಾಗಲಿದೆ. ಈ 'ಇಂಡಿಗೊ' ಎಂಬ ಹೆಸರಿನ ಪ್ರಯೋಗದಿಂದ ಮೂಲಭೂತ ವಿಜ್ಞಾನಕ್ಕೆ ಒತ್ತು ಸಿಗಲಿದ್ದು ಮುಂದಿನ ಪೀಳಿಗೆಯ ವಿದ್ಯಾರ್ಥಿಗಳಲ್ಲಿ ಈ ವಿಷಯಗಳಲ್ಲಿ ಆಸಕ್ತಿ ಹುಟ್ಟುವಂತೆ ಮಾಡಬಹುದು.



*ಎರಡು ನ್ಯೂಟ್ರಾನ್ ನಕ್ಷತ್ರಗಳ ಘರ್ಷಣೆ (ಕಾಲ್ಪನಿಕ) : ಈ ಘಟನೆಯಲ್ಲಿ ಗುರುತ್ವದ ಅಲೆಗಳೂ ಮತ್ತು ವಿದ್ಯುತ್ಕಾಂತೀಯ ಅಲೆಗಳೂ (ಬೆಳಕು, ಕ್ಷ–ಕಿರಣ ಇತ್ಯಾದಿ) ಕಾಣಿಸಿಕೊಂಡಿರುವುದು ಮಹತ್ವದ ಆವಿಷ್ಕಾರ.*

**ಡಾ|| ಪಾಲಹಳ್ಳಿ ವಿಶ್ವನಾಥ್**
ನಂ. ೯, ಕಾಳಪ್ಪ ಬ್ಲಾಕ್, ಬಸವನಗುಡಿ
ಬೆಂಗಳೂರು – ೫೬೦ ೦೦೪

# ರಾಜ್ಯ ಶಿಕ್ಷಣ ಸಂಶೋಧನೆ ಮತ್ತು ತರಬೇತಿ ಇಲಾಖೆ

## ಇವರಿಂದ ರಚಿತವಾದ ಕೃತಿಗಳು




ಪ್ರಸ್ತುತ ಭೂಗೋಳ ಸಂಗಾತಿ ಪುಸ್ತಕವನ್ನು ಪ್ರಾಥಮಿಕ ಹಾಗೂ ಪ್ರೌಢಶಾಲಾ ಶಿಕ್ಷಕರಿಗೆ ಮತ್ತು ವಿದ್ಯಾರ್ಥಿ ವೃಂದಕ್ಕೆ ವಿಶಾಲವಾದ ವಿಶ್ವ ಸೌರವ್ಯೂಹ ಹಾಗೂ ಮಾನವನ ಆವಾಸ ಸ್ಥಾನವಾದ ಪೃಥ್ವಿಯನ್ನು ಕುರಿತ ಆಳವಾದ ಅಧ್ಯಯನ ಮಾಡಲು ವಿಶೇಷವಾಗಿ ರಚಿಸಲಾಗಿದೆ. ಶಿಲೆಗಳು ಮತ್ತು ಭೂ ಮೇಲ್ಮೈ ಸ್ವರೂಪಗಳನ್ನು ರೂಪಿಸಿ ಹಾಗೂ ಏರ್ಪಡಿಸಿ ವೈವಿಧ್ಯಮಯವಾದ ಸ್ವರೂಪಗಳನ್ನು ಸೃಷ್ಟಿಸುವ ಶಕ್ತಿಗಳಿಂದ ಗೋಚರಿತ ಮತ್ತು ಆಕರ್ಷಣೀಯ ವಿವಿಧ ಮಜಲುಗಳನ್ನು ಈ ಪುಸ್ತಕವು ಪ್ರತಿಬಿಂಬಿಸುತ್ತದೆ.

........... ಈ ಸಂಪುಟದಲ್ಲಿ ನಾವು ಜೀವಮಂಡಲ ಎಂಬ ನಾಲ್ಕನೆಯ ಮಂಡಲದ ಬಗ್ಗೆ ಪರಿಚಯ ಮಾಡಲು ಪ್ರಯತ್ನಿಸಿದ್ದೇವೆ... ಇಲ್ಲಿ ಜೀವ ಮಂಡಲದ ಪ್ರಾಮುಖ್ಯತೆ ಹಾಗೂ ಪರಿಸರದ ಮೇಲೆ ಮಾನವನ ಪ್ರಭಾವದಿಂದ ಉಂಟಾದ ಪರಿಸರದ ನಾಶ ಮತ್ತು ಪರಿಸರ ಮಾಲಿನ್ಯ ಕುರಿತು ಸವಿಸ್ತಾರವಾಗಿ ಬರೆಯಲಾಗಿದೆ.

... 'ಭೂಗೋಳ ಸಂಗಾತಿ ಸಂಪುಟ 3 'ಪೃಥ್ವಿಯ ಮೇಲೆ ದೊರೆಯುವ ವಿವಿಧ ಬಗೆಯ ಸಂಪನ್ಮೂಲಗಳು, ವಿವಿಧ ಪ್ರದೇಶಗಳಲ್ಲಿ ಮಾನವ ಚಟುವಟಿಕೆಗಳಲ್ಲಿನ ವ್ಯತ್ಯಾಸಗಳು ಹಾಗೂ ಅವುಗಳ ಪರಿಣಾಮ ಸ್ವರೂಪವಾಗಿ ಮಾನವನ ವಿವಿಧ ಉದ್ಯೋಗಗಳ, ಉಂಟಾದ ಸಂಪನ್ಮೂಲಗಳ ಅಭಿವೃದ್ಧಿಗಳನ್ನು ವಿವರಿಸುತ್ತದೆ. ಶಿಕ್ಷಕರ ಮತ್ತು ವಿದ್ಯಾರ್ಥಿಗಳ ಸೃಜನಾತ್ಮಕ ಶಕ್ತಿಯನ್ನು ಹೆಚ್ಚಿಸಲು ಹಾಗೂ ಭೂಗೋಳ ಶಾಸ್ತ್ರದ ಅಧ್ಯಯನವನ್ನು ಚಟುವಟಿಕೆ ಆಧಾರಿತವನ್ನಾಗಿ ಮಾಡಲು ಸೂಕ್ತ ಚಟುವಟಿಕೆಗಳನ್ನು ಸೂಚಿಸಲಾಗಿದೆ... ಮಾನವನ ಚಟುವಟಿಕೆಗಳ ಮೇಲೆ ನೈಸರ್ಗಿಕ ಪರಿಸರವು ಪ್ರಭಾವ ಬೀರುತ್ತದೆ ಹಾಗೂ ಮಾನವನು ನೈಸರ್ಗಿಕ ಪರಿಸರದೊಳಗೆ ತನ್ನ ಲಾಭಕ್ಕಾಗಿ ಮಧ್ಯೆ ಪ್ರವೇಶಿಸುತ್ತಾನೆ ಎಂಬುದನ್ನು ಈ ಸಂಪುಟವು ವಿವರಿಸುತ್ತದೆ.

... ಈ ಪುಸ್ತಕದ ವಿಷಯವು ಪ್ರೌಢಶಾಲಾ ಹಂತದ ಪಠ್ಯ ವಸ್ತುವನ್ನು ಒಳಗೊಂಡಿದೆ. ಭೂಮಿಯ ಉಗಮದಿಂದ, ಜೀವಿಗಳ ವಿಕಾಸದಿಂದ ಹಿಡಿದು ಆಧುನಿಕ ಯುಗದ ಘಟನೆಗಳನ್ನು ಒಳಗೊಂಡಿದೆ... ಚಿತ್ರ ನೋಡಿ ನಿರೂಪಣೆ ಓದುತ್ತ ಹೋದರೆ ಗತಕಾಲದ ವಾಸ್ತವ ಮನಸ್ಸಿನಲ್ಲಿ ಅಚ್ಚಳಿಯದೇ ಉಳಿಯುತ್ತದೆ.... ಚರಿತ್ರೆಯ ಸಾಮಾಜಿಕ, ಸಾಂಸ್ಕೃತಿಕ, ಸಾಧನೆಗಳ ದರ್ಶನ, ಜನತೆಯ ಜೀವನ ರೂಪುಗೊಂಡ ವಿಧಾನದ ಪರಿಚಯ, ಮಾನವ ಜನಾಂಗದ ಅಧ್ಯಯನ, ಕಾಲದೊಂದಿಗೆ ಮಾನವರ ಪಯಣ ಎಂಬ ಮಹತ್ವದ ಅಂಶಗಳನ್ನು ಮಕ್ಕಳಿಗೆ ತಿಳಿಯಹೇಳಿ, ಚರಿತ್ರೆಯ ಬೋಧನೆಗೆ ಹೊಸ ಆಯಾಮಗಳನ್ನೂ ಸೂಚಿಸುವುದು. ವೈಜ್ಞಾನಿಕ ದೃಷ್ಟಿಕೋನವನ್ನು ಮೂಡಿಸುವುದು ಹಾಗೂ ಚರಿತ್ರೆಯ ಅಭ್ಯಾಸವನ್ನು ಸುಸಂಗತಗೊಳಿಸುವುದೇ ಈ ಪುಸ್ತಕ ರಚನೆಯ ಮೂಲ ಆಶಯವಾಗಿದೆ.

## ಶ್ರೀ ಗಾಯತ್ರಿ ಎಂಟರ್‌ಪ್ರೈಸಸ್

285/ಎಫ್ - 6, ಉತ್ತರಾಧಿ ಮಠ ರಸ್ತೆ, 5ನೇ ಪಶ್ಚಿಮ ಅಡ್ಡರಸ್ತೆ
ಮೈಸೂರು -570004 ಇ-ಮೇಲ್ : kar_mas56@yahoo.co.in
ಮೊಬೈಲ್ : 9448074435, 9449853308, 9242459332

ನಜ್ ಎಂದರೆ ಪ್ರೇರಕ ಅಥವಾ ಪ್ರಚೋದಕ. ವ್ಯಕ್ತಿಯನ್ನು ತನ್ನ ಹಿತಾಸಕ್ತಿಗೆ ಅನುಗುಣವಾಗಿ ನಿರ್ಧಾರ ಕೈಗೊಳ್ಳಲು ಬಳಸುವ ತಂತ್ರ ಅಥವಾ ನೀತಿಯೇ ನಜ್. ವ್ಯಕ್ತಿ ಒಂದು ನಿರ್ದಿಷ್ಟ ರೀತಿಯಲ್ಲಿ ವರ್ತಿಸಬೇಕು ಎಂದು ಹೇಳಿದರೂ, ಹಾಗೊಮ್ಮೆ ವ್ಯಕ್ತಿ ಆ ರೀತಿ ವರ್ತಿಸದಿದ್ದರೆ, ಯಾವುದೇ ದಂಡ, ಶಿಕ್ಷೆ ವಿಧಿಸಲಾಗುವುದಿಲ್ಲ. ವ್ಯಕ್ತಿ ಯಾವುದಾದರೂ, ಮುಖ್ಯವಾಗಿ ಆರ್ಥಿಕ ಹಾಗೂ ಹಣಕಾಸಿನ ವಿಷಯದಲ್ಲಿ ನಿರ್ಧಾರ ಕೈಗೊಳ್ಳಲು ಸಹಕರಿಸುವುದೇ ನಜ್. ಜನರು ಹೇಗೆ ಆಲೋಚಿಸುತ್ತಾರೆ ಎಂಬುದನ್ನು ತಿಳಿದುಕೊಂಡಲ್ಲಿ ಅವರಿಗೆ ಮತ್ತು ಅವರ ಕುಟುಂಬಕ್ಕೆ ಇಷ್ಟವಾದದ್ದನ್ನು ಆಯ್ಕೆ ಮಾಡಿಕೊಳ್ಳುವುದನ್ನು ಸೂಚಿಸುವುದಕ್ಕೆ ನಜ್ ಸಹಕಾರಿ ಎಂದು ಥೇಲರ್ ಮತ್ತು ಕಾಸ್ ಸನ್‌ಸ್ಟೀನ್ ತಮ್ಮ ಪುಸ್ತಕ ನಜ್‌ನಲ್ಲಿ ಹೇಳಿದ್ದಾರೆ.



# ವರ್ತನಾ ಅರ್ಥಶಾಸ್ತ್ರಕ್ಕೆ ಮಾನ್ಯತೆ ತಂದುಕೊಟ್ಟ ನಜ್ ಗುರು ರಿಚರ್ಡ್ ಥೇಲರ್

ಇತ್ತೀಚಿನ ವರ್ಷಗಳಲ್ಲಿ ಅರ್ಥಶಾಸ್ತ್ರದ ಅಧ್ಯಯನ ತನ್ನ ಸಾಂಪ್ರದಾಯಿಕ ಗೆರೆಯನ್ನು ದಾಟಿ ಅನೇಕ ಉಪಶಾಖೆಗಳತ್ತ ಹೊರಳುತ್ತಿದೆ. ಅರವತ್ತರ ದಶಕದಲ್ಲಿ ಪ್ರಚಲಿತವಾಗಿದ್ದ ಅರ್ಥಶಾಸ್ತ್ರದ ತತ್ವಗಳನ್ನು ಪ್ರಶ್ನಿಸುವತ್ತ ಅಧ್ಯಯನ ನಡೆಯುತ್ತಿದೆ. ಮಾರುಕಟ್ಟೆ, ಬೆಲೆ, ಆರ್ಥಿಕ ಅಭಿವೃದ್ಧಿ, ಜಾಗತೀಕರಣ ಇತ್ಯಾದಿಯ ಜೊತೆಗೆ ಮಾನವನ ವರ್ತನೆ ಅಥವಾ ನಡವಳಿಕೆಯನ್ನು ಅರ್ಥಶಾಸ್ತ್ರದ ಹಿನ್ನೆಲೆಯಲ್ಲಿ ವಿಶ್ಲೇಷಿಸುವತ್ತ ಮುನ್ನಡೆಯುತ್ತಿದೆ. ಬಿಹೇವಿಯರಲ್ ಎಕನಾಮಿಕ್ಸ್ ಅಥವಾ ನಡಾವಳಿ ಅರ್ಥಶಾಸ್ತ್ರ ಎಂದು ಕರೆಯಲ್ಪಡುವ ಶಾಖೆಯೊಂದು ಹೆಚ್ಚು ಪ್ರಾಮುಖ್ಯತೆ ಗಳಿಸುತ್ತಿದೆ. ವಿಶ್ವಾದ್ಯಂತ ಬೆಳೆಯುತ್ತಿರುವ ಕೊಳ್ಳುಬಾಕ ಸಂಸ್ಕೃತಿಯನ್ನು ಒಳಗೊಂಡಂತೆ ಬಿಹೇವಿಯರಲ್ ಎಕನಾಮಿಕ್ಸ್ ಸರ್ಕಾರದ ನೀತಿ, ನಿಯಮ ಮತ್ತು ಕಾನೂನು ರಚನೆ ಮಾಡುವಾಗಲೂ ವ್ಯಕ್ತಿಗಳ ವರ್ತನೆಯನ್ನು ಗಮನಕ್ಕೆ ತೆಗೆದುಕೊಳ್ಳಬೇಕೆಂದು ಪ್ರತಿಪಾದಿಸುತ್ತಿದೆ. ಆರ್ಥಿಕ ವಿಷಯದ ಬಗ್ಗೆ ನಿರ್ಧಾರ ಕೈಗೊಳ್ಳುವಾಗ ವ್ಯಕ್ತಿ ತನ್ನ ವಿವೇಚನಾ ಶಕ್ತಿಯನ್ನು ಬಳಸುತ್ತಾನೆ ಎಂಬುದು ಹಿಂದಿನಿಂದ ಬಂದಿರುವ ಒಂದು ತತ್ವ. ಉದಾಹರಣೆಗೆ ಒಂದು ವಸ್ತುವಿನ ಬೆಲೆ ೧೦೦೦ ರೂಪಾಯಿಗಳಿದ್ದಾಗ, ಅದು ದುಬಾರಿ ಎಂದು, ಅದನ್ನು ಖರೀದಿಸಲು ಹಿಂಜರಿಯುವ ಗ್ರಾಹಕರು ವಸ್ತುವಿನ ಬೆಲೆಯನ್ನು ೯೯೯ ರೂಪಾಯಿಗಳಿಗೆ ಇಳಿಸಿದಾಗ ಯಾವುದೇ ಹಿಂಜರಿಕೆಯಿಲ್ಲದೆ ಖರೀದಿಸುತ್ತಾರೆ. ಕೇವಲ ಒಂದು ರೂಪಾಯಿ ಇಳಿಕೆಯಿಂದ ಮಾರಾಟಗಾರರು ಲಕ್ಷಾಂತರ ರೂಪಾಯಿ ಲಾಭ ಗಳಿಸಿರುವ ಪ್ರಕರಣಗಳು ಇವೆ. ಇದಕ್ಕೆ ಕಾರಣ ಗ್ರಾಹಕರು ಕೆಲವೊಮ್ಮೆ ವಿಚಾರಹೀನರಾಗಿಯೂ ವರ್ತಿಸುವುದು. ಇದನ್ನು ಪ್ರತಿಪಾದಿಸುವ ಬಿಹೇವಿಯರಲ್ ಎಕನಾಮಿಕ್ಸ್ ಈಗ ಮತ್ತಷ್ಟು ಗಂಭೀರ ಸ್ವರೂಪ ಪಡೆದುಕೊಂಡಿದೆ. ಕಾರಣ ಬಿಹೇವಿಯರಲ್ ಎಕನಾಮಿಕ್ಸ್‌ನ ಪಿತಾಮಹ ಎಂದೇ ಖ್ಯಾತಿ ಗಳಿಸಿರುವ ರಿಚರ್ಡ್ ಥೇಲರ್, ಅದೇ ವಿಷಯದ ಅಧ್ಯಯನಕ್ಕಾಗಿ ಅರ್ಥಶಾಸ್ತ್ರದ ನೊಬೆಲ್ ಪ್ರಶಸ್ತಿ ಪಡೆದಿದ್ದಾರೆ. ಮನೋವಿಜ್ಞಾನ ಮತ್ತು ಇತರೆ ಸಮಾಜ ವಿಜ್ಞಾನದ ತತ್ವಗಳನ್ನು ಅರ್ಥಶಾಸ್ತ್ರಕ್ಕೆ ಅನ್ವಯಿಸುವ ವಿಷಯಕ್ಕೆ ನೀಡಿರುವ ಕೊಡುಗೆಯನ್ನು ಗಮನಿಸಿ ಅವರಿಗೆ ಈ ಪ್ರಶಸ್ತಿ ನೀಡಲಾಗಿದೆ.

ವೈ. ಜಿ. ಮುರಳೀಧರನ್

ರಿಚರ್ಡ್ ಥೇಲರ್ ಜನಿಸಿದ್ದು (ಜನನ : ೧೨/೯/೧೯೪೫) ಅಮೇರಿಕದ ನ್ಯೂಜೆರ್ಸಿಯಲ್ಲಿ. ಕ್ಲೀವ್‌ಲೆಂಡ್ ವಿಶ್ವವಿದ್ಯಾಲಯದಿಂದ ಅರ್ಥಶಾಸ್ತ್ರದಲ್ಲಿ ಪದವಿ ಪಡೆದ ನಂತರ ಅದೇ ವಿಷಯದಲ್ಲಿ ರಾಚೆಸ್ಟರ್ ವಿಶ್ವವಿದ್ಯಾಲಯದಿಂದ ಸ್ನಾತಕೋತ್ತರ ಪದವಿ ಹಾಗೂ ಡಾಕ್ಟರೇಟ್ ಪಡೆದರು. ನಾಲ್ಕು ವರ್ಷಗಳ (೧೯೭೪–೭೮) ಕಾಲ ಪ್ರಾಧ್ಯಾಪಕರಾಗಿ ಕೆಲಸ ಮಾಡಿ ೧೯೮೦ರಲ್ಲಿ ಸಹಾಯಕ ಪ್ರೊಫೆಸರ್ ಆಗಿ ನೇಮಕಗೊಂಡು ಆರು ವರ್ಷಗಳ ತರುವಾಯ ಪೂರ್ಣ ಪ್ರಮಾಣದ ಪ್ರೊಫೆಸರ್ ಹುದ್ದೆ ಪಡೆದುಕೊಂಡರು. ಈ ಅವಧಿಯಲ್ಲಿ ಬಿಹೇವಿಯರಲ್

ಎಕನಾಮಿಕ್ಸ್ ಕುರಿತು ಹೆಚ್ಚು ಅಧ್ಯಯನ ನಡೆಸಿದರು. ಒಂದು ಸಣ್ಣ ಪ್ರಚೋದಕವು ಬೃಹತ್ ಬದಲಾವಣೆಗೆ ಕಾರಣವಾಗುತ್ತದೆ ಎಂಬುದನ್ನು ಸಾಬೀತುಪಡಿಸುವುದು ಅವರ ಗುರಿಯಾಗಿತ್ತು. ಈ ಪ್ರಚೋದಕ ಅಥವಾ ಪ್ರೇರಕವನ್ನು ಥೇಲರ್ 'ನಜ್' (Nudge) ಎಂದು ಕರೆದರು. ಸನ್‌ಸ್ಟೀನ್ ಅವರೊಂದಿಗೆ ಥೇಲರ್ ಬರೆದ ಮೊದಲ ಪುಸ್ತಕದ ಹೆಸರೂ ಸಹ ನಜ್. ಇದು ೨೦೦೮ರಲ್ಲಿ ಪ್ರಕಟವಾಯಿತು. ಥೇಲರ್ ಅವರ ಮತ್ತೊಂದು ಪುಸ್ತಕ 'ಮಿಸ್‌ಬಿಹೇವಿಂಗ್ – ದ ಮೇಕಿಂಗ್ ಆಫ್ ಬಿಹೇವಿಯರಲ್ ಎಕನಾಮಿಕ್ಸ್' ಎರಡು ವರ್ಷಗಳ ಹಿಂದೆ ಪ್ರಕಟವಾಗಿ ಸಾಕಷ್ಟು ಚರ್ಚೆಗೆ ಒಳಪಟ್ಟಿದೆ. ಈ ವಿಷಯದ ಬಗ್ಗೆ ಅವರು ಸಾಕಷ್ಟು ಲೇಖನಗಳನ್ನು ಬರೆದಿರುವುದಲ್ಲದೆ ಪತ್ರಿಕೆಯೊಂದರಲ್ಲಿ ಅಂಕಣವನ್ನೂ ಬರೆದಿದ್ದರು. ಅದು ಸಾಕಷ್ಟು ಜನಪ್ರಿಯವೂ ಆಗಿತ್ತು.

ಏನಿದು ನಜ್? ಇದರಿಂದ ಉಪಯೋಗ ಇದೆಯೆ? ಅರವತ್ತರ ದಶಕದ ಅರ್ಥಶಾಸ್ತ್ರದ ಸಿದ್ಧಾಂತ ಹಾಗೂ ಪ್ರಸ್ತುತದ ಸಿದ್ಧಾಂತದ ನಡುವೆ ಏನಾದರೂ ಸುಧಾರಣೆ ಇದೆಯೇ? ಸ್ಥೂಲವಾಗಿ ಹೇಳುವುದಾದರೆ, ನಜ್ ಎಂದರೆ ಪ್ರೇರಕ ಅಥವಾ ಪ್ರಚೋದಕ. ವ್ಯಕ್ತಿಯನ್ನು ತನ್ನ ಹಿತಾಸಕ್ತಿಗೆ ಅನುಗುಣವಾಗಿ ನಿರ್ಧಾರ ಕೈಗೊಳ್ಳಲು ಬಳಸುವ ತಂತ್ರ ಅಥವಾ ನೀತಿಯೇ ನಜ್. ವ್ಯಕ್ತಿ ಒಂದು




ನಿರ್ದಿಷ್ಟ ರೀತಿಯಲ್ಲಿ ವರ್ತಿಸಬೇಕು ಎಂದು ಹೇಳಿದರೂ, ಹಾಗೊಮ್ಮೆ ವ್ಯಕ್ತಿ ಆ ರೀತಿ ವರ್ತಿಸದಿದ್ದರೆ, ಯಾವುದೇ ದಂಡ, ಶಿಕ್ಷೆ ವಿಧಿಸಲಾಗುವುದಿಲ್ಲ. ವ್ಯಕ್ತಿ ಯಾವುದಾದರೂ, ಮುಖ್ಯವಾಗಿ ಆರ್ಥಿಕ ಹಾಗೂ ಹಣಕಾಸಿನ ವಿಷಯದಲ್ಲಿ ನಿರ್ಧಾರ ಕೈಗೊಳ್ಳಲು ಸಹಕರಿಸುವುದೇ ನಜ್. ಜನರು ಹೇಗೆ ಆಲೋಚಿಸುತ್ತಾರೆ ಎಂಬುದನ್ನು ತಿಳಿದುಕೊಂಡಲ್ಲಿ ಅವರಿಗೆ ಮತ್ತು ಅವರ ಕುಟುಂಬಕ್ಕೆ ಇಷ್ಟವಾದದ್ದನ್ನು ಆಯ್ಕೆ ಮಾಡಿಕೊಳ್ಳುವುದನ್ನು ಸೂಚಿಸುವುದಕ್ಕೆ ನಜ್ ಸಹಕಾರಿ ಎಂದು ಥೇಲರ್ ಮತ್ತು ಕಾಸ್ ಸನ್‌ಸ್ಟೀನ್ ತಮ್ಮ ಪುಸ್ತಕ ನಜ್‌ನಲ್ಲಿ ಹೇಳಿದ್ದಾರೆ.

ನಜ್ ಥಿಯರಿಯ ಪ್ರಕಾರ ಒತ್ತಾಯ ಪೂರ್ವಕವಾಗಿ ಜನರ ವರ್ತನೆಯನ್ನು ಬದಲಿಸುವ ಬದಲು ಸಣ್ಣಪುಟ್ಟ ಬದಲಾವಣೆ ಅಥವಾ ಪ್ರೇರಕಗಳನ್ನು ನೀಡುವ ಮೂಲಕ ಅವರಲ್ಲಿ ಅಪೇಕ್ಷಿತ ಬದಲಾವಣೆ ಉಂಟುಮಾಡಬಹುದು. ಇಲ್ಲಿ ಕೆಲವು ಉದಾಹರಣೆಗಳನ್ನು ನೀಡಬಹುದು. ನೀವು ಅಥವಾ ನಿಮ್ಮ ಸಂಬಂಧಿಕರು ಸತ್ತನಂತರ ಅವರ ದೇಹವನ್ನಾಗಲಿ ಅಥವಾ ಅಂಗಾಂಗ ಗಳನ್ನಾಗಲಿ ದಾನ ಮಾಡಲು ಬಯಸುತ್ತೀರಾ? ಬಹಳಷ್ಟು ಜನ ಇದನ್ನು ಒಪ್ಪುವುದಿಲ್ಲ. ಅದಕ್ಕೆ ಅನೇಕ ಕಾರಣಗಳಿರಬಹುದು. ಆದರೆ ವಿಶ್ವಾದ್ಯಂತ ರಸ್ತೆ ಅಪಘಾತಗಳಲ್ಲಿ ಸಾವಿರಾರು ಜನರು ಬಲಿಯಾಗುತ್ತಿದ್ದಾರೆ. ವೈದ್ಯರ ಪ್ರಕಾರ ನಿರ್ದಿಷ್ಟ ಸಮಯದಲ್ಲಿ ಮೃತ ದೇಹದಿಂದ ಕೆಲವೊಂದು ಅಂಗಾಂಗಗಳನ್ನು ಹೊರ ತೆಗೆದಲ್ಲಿ ಅದಕ್ಕಾಗಿ ಕಾಯುತ್ತಿರುವ ರೋಗಿಗಳಿಗೆ ಕಸಿ ಮಾಡಬಹುದು. ಆದರೆ ಸತ್ತ ದೇಹದಿಂದ ಅಂಗಾಂಗ ಕಸಿ ಮಾಡಲು ಕಾನೂನು ಒಪ್ಪುವುದಿಲ್ಲ. ಅದಕ್ಕೆ ಮೃತರ ಸಂಬಂಧಿಕರ ಅಪ್ಪಣೆ ಅಗತ್ಯ. ಇದೆಲ್ಲಾ ಪ್ರಕ್ರಿಯೆ ಮುಗಿಯುವ ಹೊತ್ತಿಗೆ ಕಾಲ ಮಿಂಚಿರುತ್ತದೆ.

ಡ್ರೈವಿಂಗ್ ಪರವಾನಗಿಯಲ್ಲೊ ಅಥವಾ ಆರ್‌ಸಿ ಬುಕ್‌ನಲ್ಲೊ ದೇಹದ ಅಂಗಾಂಗ ದಾನ ಮಾಡುವುದಕ್ಕೆ ಒಪ್ಪಿದ್ದೀನಿ ಎಂಬ ವಾಕ್ಯದ ಎದುರು ಗುರುತು ಹಾಕಿದ್ದರೆ ಹೇಗೆ? ಯಾರ ಅಪ್ಪಣೆಯೂ ಇಲ್ಲದೆ ಶೀಘ್ರವಾಗಿ ಅಂಗಾಂಗ ಕಸಿ ಮಾಡ ಬಹುದಲ್ಲವೆ? ಇದು ಒಂದು ರೀತಿಯ ನಜ್. ಈಗ ಸ್ಪೇನ್ ರಾಷ್ಟ್ರ ಅಂಗಾಂಗ ದಾನದಲ್ಲಿ ಪ್ರಥಮ ಸ್ಥಾನಗಳಿಸಿದ್ದು ಈ ನಜ್‌ನಿಂದಲೇ.

ಮತ್ತೊಂದು ಉದಾಹರಣೆಯನ್ನು ನೋಡಿ. ಸಾಮಾನ್ಯವಾಗಿ ಜನರು ಆತುರಗಾರರು. ಯಾವುದಕ್ಕೂ ಕಾಯುವಷ್ಟು ತಾಳ್ಮೆ ಇಲ್ಲದವರು. ಇವತ್ತು ಸಂಪಾದನೆ ಮಾಡಿದ ಹಣವನ್ನು ಇವತ್ತೇ ಖರ್ಚು ಮಾಡಿ ಅದರ ಫಲವನ್ನು ಅನುಭವಿಸುವವರೇ ಹೆಚ್ಚು. ಆದಾಯದಲ್ಲಿ ಸ್ವಲ್ಪ ಅಂಶವನ್ನಾದರೂ ಉಳಿತಾಯ ಮಾಡುವವರು ಬಹಳ ಕಡಿಮೆ. ಈ ವರ್ತನೆಯನ್ನು ಬದಲಿಸಿ ಉಳಿತಾಯ ಮಾಡುವ ವರ್ತನೆ ತರುವುದು ಹೇಗೆ? ಬ್ರಿಟನ್‌ನಲ್ಲಿ ೨೦೧೨ರಲ್ಲಿ ಖಾಸಗಿ ಕಂಪನಿಗಳಲ್ಲಿ ಕೆಲಸ ಮಾಡುವವರಲ್ಲಿ ಪಿಂಚಣಿ ಯೋಜನೆಗೆ ಸದಸ್ಯರಾಗುವವರ ಸಂಖ್ಯೆ ಕಡಿಮೆಯಾಗುತ್ತಿತ್ತು. ಇದಕ್ಕೊಂದು ಉಪಾಯ ಬೇಕಿತ್ತು. ಅಲ್ಲಿನ ಸರ್ಕಾರ ಒಂದು ನಜ್‌ಅನ್ನು ಅಳವಡಿಸಿತು. ಖಾಸಗಿ ಕೆಲಸಗಾರರನ್ನು ಅವರ ಅಪ್ಪಣೆ ಇಲ್ಲದೆ ಪಿಂಚಣಿ ಯೋಜನೆಗೆ ಸೇರಿಸುವ 'ಸ್ವಯಂಚಾಲಿತ' ನಜ್ ಜಾರಿಗೊಳಿಸಿತು. ಇದರ ಪ್ರಕಾರ ಕೆಲಸಗಾರ ತಾನು ಪಿಂಚಣಿ ಯೋಜನೆಗೆ ಸೇರಲು ಬಯಸುವುದಿಲ್ಲ ಎಂದು ಪ್ರತ್ಯೇಕವಾಗಿ ತಿಳಿಸಬೇಕು. ಇಲ್ಲದಿದ್ದಲ್ಲಿ, ಯೋಜನೆಗೆ ಸದಸ್ಯನನ್ನಾಗಿ ಮಾಡಲಾಯಿತು. ಈ ಒಂದು ಸಣ್ಣ ನಜ್‌ನಿಂದ ೨೦೧೨ರಲ್ಲಿ ಸುಮಾರು ೨೭ ಲಕ್ಷ ಸದಸ್ಯರಿದ್ದ ಪಿಂಚಣಿ ಯೋಜನೆಯ ಸದಸ್ಯರ ಸಂಖ್ಯೆ ೨೦೧೬ರಲ್ಲಿ ೭೭ ಲಕ್ಷಕ್ಕೆ ಏರಿಕೆಯಾಗಿತ್ತು.

## ನನ್ನ ಪ್ರೀತಿಸುತ್ತಿಯಾ ?...

ಪ್ರಿಯಕರ ಪ್ರೇಯಸಿಗೆ ಕೇಳಿದ – ನೀನು ನನ್ನ
ಪ್ರೀತಿಸುವುದಕ್ಕಿಂತ ಮಿಗಿಲಾಗಿ ನಿನ್ನ ಪ್ರೀತಿಸುತ್ತಿಯಾ।
ಅವಳು ಉತ್ತರಿಸಿದಳು – ನನಗಾಗಿ ಸತ್ತುಹೋಗಿದ್ದೇನೆ।
ನಿನಗಾಗಿ ಬದುಕಿದ್ದೇನೆ।
ನನ್ನನ್ನು ನಾನು ಮರೆತಿದ್ದೇನೆ.

ನನಗಾಗಿ ಯಾವ ಚಹರೆಗಳೂ ಇಲ್ಲ।
ನಿನಗಾಗಿ ಮಾತ್ರ ಇಲ್ಲಿದ್ದೇನೆ।
ನನ್ನೆಲ್ಲ ಜ್ಞಾನ ಮರೆತುಹೋಗಿದೆ।
ಆದರೆ ನಿನ್ನ ತಿಳಿದಮೇಲೆ ನಾ ಜ್ಞಾನಿಯಾಗಿದ್ದೇನೆ
ನನ್ನೆಲ್ಲ ಶಕ್ತಿ ಉಡುಗಿಹೋಗಿದೆ।
ಆದರೆ ನಿನ್ನ ಬಲದಿಂದ ನಾ ಶಕ್ತಳು।
ಒಂದುವೇಳೆ ನನ್ನ ನಾ ಇಷ್ಟಪಟ್ಟರೆ।
ನಿನ್ನ ನಾ ಪ್ರೀತಿಸುತ್ತೇನೆ।
ನಿನ್ನ ಪ್ರೀತಿಸಿದರೆ।
ನನ್ನ ನಾ ಇಷ್ಟಪಡುತ್ತೇನೆ.

ಸರಿಯುವ ಸಮಯ... ನಿನ್ನ ಬಣ್ಣ ಮುಂಬೆಳಗಿನಂತೆ।
ನನ್ನದು ಕೆಂಗಂದು।
ಒಂದು, ನಿರ್ದಿಷ್ಟ ಕೊನೆ ಇರುವ ಮೊದಲಿಗೆ ಬಣ್ಣ ಬಳಿಯುತ್ತೆ।
ಮತ್ತೊಂದು, ಖಚಿತ ಆದಿಗೆ ಅಂತ್ಯ ಹಾಡುತ್ತೆ.

ಉರ್ದು ಮೂಲ : **ಜಲಾಲುದ್ದಿನ್ ರೂಮಿ**

ಅನುವಾದ : **ಸುಜಾತಾ**

ಆಕಾಶವಾಣಿ, ಹಾಸನ

ಮತ್ತೊಂದು ಉದಾಹರಣೆ. ಮುಂದಿನ ಸಲ ನೀವು ಮಾಲ್ ಅಥವಾ ಡಿಪಾರ್ಟ್‌ಮೆಂಟಲ್ ಸ್ಟೋರ್‌ಗೆ ಭೇಟಿಕೊಟ್ಟಾಗ ಅಲ್ಲಿ ಜೋಡಿಸಿರುವ ವಸ್ತುಗಳು ಮತ್ತು ಸರಕುಗಳನ್ನು ನೋಡಿ. ದೇಹಕ್ಕೆ ಮಾರಕವಾಗುವ ಫಾಸ್ಟ್‌ಫುಡ್, ಜಂಕ್‌ಫುಡ್, ಇತ್ಯಾದಿ ನಿಮ್ಮ ಕಣ್ಣಿನ ಎತ್ತರದಲ್ಲಿ ಜೋಡಿಸಲ್ಪಟ್ಟಿರುತ್ತದೆ. ಆದರೆ ಆರೋಗ್ಯಕ್ಕೆ ಅಗತ್ಯವಾದ ಹಣ್ಣು, ತರಕಾರಿ ಇತ್ಯಾದಿ ಯಾವುದೋ ಮೂಲೆಯಲ್ಲಿರುತ್ತದೆ. ನೀವು ಅದನ್ನು ಹುಡುಕಿಕೊಂಡು ಹೋಗಬೇಕು. ಅಷ್ಟು ತಾಳ್ಮೆ ನಿಮ್ಮಲ್ಲಿರುವುದಿಲ್ಲ. ಕಣ್ಣಿಗೆ ಗೋಚರಿಸುವ ಫಾಸ್ಟ್‌ಫುಡ್ ಖರೀದಿಸುತ್ತೀರಿ. ಆರೋಗ್ಯಕ್ಕೆ ಹಾನಿಕರ ವಸ್ತುಗಳನ್ನು ಕಣ್ಣಿಗೆ ಕಾಣಿಸುವಷ್ಟು ಹತ್ತಿರದಲ್ಲಿ ಇಡುವ ಬದಲು ಹಣ್ಣು ಮತ್ತು ತರಕಾರಿ ಇಟ್ಟಲ್ಲಿ ನೀವು ಅದನ್ನೇ ಖರೀದಿಸುತ್ತೀರಿ. ಫಾಸ್ಟ್‌ಫುಡ್, ಜಂಕ್‌ಫುಡ್, ಇತ್ಯಾದಿ ನಿಷೇಧಿಸುವ ಬದಲು ಈ ನಜ್ ಮಾಡಬಹುದಲ್ಲವೆ? ಇದು ಥೇಲರ್ ಅವರ ಸಿದ್ಧಾಂತದ ಸಾರಾಂಶ.

ಥೇಲರ್ ಪ್ರಕಾರ ಬಿಹೇವಿಯರಲ್ ಎಕನಾಮಿಕ್ಸ್ ಮೂರು ಅಂಶಗಳನ್ನು ಒಳಗೊಂಡಿದೆ. ಮೊದಲನೆಯದಾಗಿ ಸೀಮಿತ ವೈಚಾರಿಕತೆ (ಲಿಮಿಟೆಡ್ ರಾಷನಾಲಿಟಿ). ಜನರು ಹಣಕಾಸಿನ ವಿಷಯಕ್ಕೆ ಸಂಬಂಧಿಸಿದ ನಿರ್ಧಾರ ಕೈಗೊಳ್ಳುವಾಗ ಅವರ ವೈಚಾರಿಕತೆ ಸೀಮಿತಗೊಳ್ಳುತ್ತದೆ. ತಕ್ಷಣದ ಅಗತ್ಯಕ್ಕೆ ತಕ್ಕಂತೆ ನಿರ್ಧಾರ ಕೈಗೊಳ್ಳುತ್ತಾರೆ. ಹೀಗೆ ನಿರ್ಧರಿಸುವಾಗ ಮನಸ್ಸಿನಲ್ಲಿ ತಮ್ಮದೇ ಆದ ಖಾತೆ ತೆರೆಯುತ್ತಾರೆ. ವ್ಯಕ್ತಿ ನಿರ್ಧಾರ ಕೈಗೊಳ್ಳುವಾಗ ತನ್ನ ಮೇಲೆ ಉಂಟಾಗುವ ಪ್ರಭಾವವನ್ನು ಮಾತ್ರ ಪರಿಗಣಿಸುತ್ತಾನೆ. ತನ್ನ ಸುತ್ತಮುತ್ತಲಿನ ವ್ಯಕ್ತಿಗಳ ಮೇಲೆ ಆಗುವ ಪ್ರಭಾವವನ್ನು ಗಮನಿಸುವುದಿಲ್ಲ. ಎರಡನೆಯದು, ಸಾಮಾಜಿಕ ಆದ್ಯತೆಗಳು. ಸಾಂಪ್ರದಾಯಿಕ ಅರ್ಥಶಾಸ್ತ್ರದ ಪ್ರಕಾರ ಸರಕುಗಳಿಗೆ ಬೇಡಿಕೆ ಹೆಚ್ಚಾದಲ್ಲಿ, ತಯಾರಕರು ಮತ್ತು ಮಾರಾಟಗಾರರು ಅದರ ಬೆಲೆಯನ್ನು ಹೆಚ್ಚಿಸುತ್ತಾರೆ. ತಯಾರಕರ ಮೂಲ ಉದ್ದೇಶ ಲಾಭ ಮಾಡುವುದೇ ಆಗಿರುತ್ತದೆ. ಮಾರುಕಟ್ಟೆಗೆ ಸಾಮಾಜಿಕ ಕಾಳಜಿ, ಕಲ್ಯಾಣ ಇದಾವುದೂ ಮುಖ್ಯವಾಗುವುದಿಲ್ಲ. ಆದರೆ ಥೇಲರ್ ಇದಕ್ಕೆ ವಿಭಿನ್ನವಾದ ಸಿದ್ಧಾಂತವನ್ನು ಮಂಡಿಸಿದರು. ಅವರ ಪ್ರಕಾರ ಬೇಡಿಕೆ ಹೆಚ್ಚಾದಲ್ಲಿ ತಯಾರಕರು ಸರಕುಗಳ ಬೆಲೆಯನ್ನು ಹೆಚ್ಚಿಸುವುದಿಲ್ಲ. ಬದಲಾಗಿ, ಸರಕುಗಳಿಗೆ ಬೇಕಾಗುವ ಕಚ್ಚಾವಸ್ತುಗಳ ಬೆಲೆ ಹೆಚ್ಚಿದಾಗ ಮಾತ್ರ ಉತ್ಪನ್ನದ ಬೆಲೆಯನ್ನು ಹೆಚ್ಚಿಸುತ್ತಾರೆ. ಈ ಸಿದ್ಧಾಂತವನ್ನು ಒಪ್ಪದವರೂ ಇದ್ದಾರೆ. ಥೇಲರ್ ಅವರನ್ನು ಈ ನೆಲೆಯಲ್ಲಿ ಟೀಕಿಸಿದವರೂ ಇದ್ದಾರೆ. ಮೂರನೆಯದು ಸ್ವಯಂ ನಿಯಂತ್ರಣದ ಕೊರತೆ. ಇದನ್ನು ಈಗಾಗಲೆ ಉಲ್ಲೇಖಿಸಲಾಗಿದೆ. ವ್ಯಕ್ತಿಗಳು ತಕ್ಷಣದ ಆಕರ್ಷಣೆ, ಪ್ರಚೋದನೆ ಇತ್ಯಾದಿಗಳಿಗೆ ಒಳಗಾಗುತ್ತಾರೆ. ಭವಿಷ್ಯದ ಬಗ್ಗೆ ಚಿಂತಿಸುವುದಿಲ್ಲ.

ನಜ್‌ಅನ್ನು ಅನೇಕ ರೀತಿಯಲ್ಲಿ ಬಳಸಲಾಗುತ್ತಿದ್ದು ಅದರಿಂದ ಸಾಕಷ್ಟು ಉಪಯೋಗವಾಗಿದೆ. ಉದಾಹರಣೆಗೆ, ಸರ್ಕಾರದ ಯಾವುದೇ ಇಲಾಖೆ/ಪ್ರಾಧಿಕಾರದಿಂದ ಯಾವುದಾದರೂ ಪತ್ರವನ್ನು ಗಮನಿಸಿದ್ದೀರಾ? ಎಲ್ಲಿಯಾದರೂ ಧನ್ಯವಾದಗಳು, ತಮ್ಮ ವಿಶ್ವಾಸಿ ಇತ್ಯಾದಿ ಒಕ್ಕಣೆ ಕಂಡಿದ್ದೀರಾ? ಈ ರೀತಿಯ ಪದಗಳನ್ನು ಬಳಸಿದಲ್ಲಿ ಸರ್ಕಾರಿ ಅಧಿಕಾರಿಗಳ ಬಗ್ಗೆ ನಾಗರಿಕರ ಅಭಿಪ್ರಾಯ ಬದಲಾಗುವ ಸಾಧ್ಯತೆ ಇದೆ. ಇದರಿಂದ ಸರ್ಕಾರವಾಗಲಿ ಅಥವಾ ಅಧಿಕಾರಿಗಳಾಗಲಿ ಏನನ್ನೂ ಕಳೆದುಕೊಳ್ಳುವುದಿಲ್ಲ. ಆದರೆ ಆ ರೀತಿಯ ಪದ ಬಳಸಲು ಅವರನ್ನು ಪ್ರೇರೇಪಿಸುವುದು ಯಾರು ಮತ್ತು ಹೇಗೆ? ತೆರಿಗೆ ಪಾವತಿಸುವುದಕ್ಕೆ ಅನೇಕರು ಹಿಂಜರಿಯುತ್ತಾರೆ. ಅಥವಾ ಕಟ್ಟಕಡೆಯ ದಿನ ತೆರಿಗೆ ಪಾವತಿಸುತ್ತಾರೆ. ಆದರೆ ತೆರಿಗೆ ಅಧಿಕಾರಿಗಳು ತಮ್ಮ ಪತ್ರದಲ್ಲಿ 'ಬಹುತೇಕ ತೆರಿಗೆದಾರರು ತಮ್ಮ ತೆರಿಗೆಯನ್ನು ಶೀಘ್ರವಾಗಿ ಪಾವತಿಸುತ್ತಾರೆ' ಎಂಬ ವಾಕ್ಯ ಸೇರಿಸಿದ್ದರಿಂದ ತೆರಿಗೆ ಪಾವತಿ ಹೆಚ್ಚಿರುವ ಪ್ರಕರಣ ನಡೆದಿದೆ. ನಮ್ಮ ದೇಶದಲ್ಲೂ ಈ ನಜ್‌ಅನ್ನು ನೋಡಬಹುದು. ನಿಮ್ಮ ವಿದ್ಯುಚ್ಛಕ್ತಿ ಬಿಲ್ ಪಾವತಿಸಲು ಕೊನೆಯ ದಿನ ಹತ್ತಿರವಾಗುತ್ತಿದೆ ಎಂದು ನಿಮ್ಮ ಮೊಬೈಲ್‌ಗೆ ಎಸ್.ಎಂ.ಎಸ್. ಬಂದ ಕೂಡಲೇ ಎಚ್ಚರಗೊಳ್ಳುತ್ತೀರಿ. ನಿಮ್ಮ ವರ್ತನೆಯನ್ನು ಬದಲಿಸಲು ಇದೊಂದು ಸಣ್ಣ ನಜ್.

**ವೈ. ಜಿ. ಮುರಳೀಧರನ್**

'ಸಂಧ್ಯಾ ರಾಗ' ನಂ. ೯೦೦, ೧೫ನೇ ಅಡ್ಡರಸ್ತೆ, ಚಂದ್ರಾ ಲೇಔಟ್, ೧ನೇ ಹಂತ

ನಾಗರಭಾವಿ ಅಂಚೆ, ಬೆಂಗಳೂರು – ೫೬೦ ೦೭೨

**ಹೊಸ ಓದು**

## ಒಡಲ ಉರಿಯ ನೆನೆದು



**(ಕವನ ಸಂಕಲನ)**

ಅಕ್ಬರ ಸಿ. ಕಾಲಿಮಿರ್ಚಿ

**ಪುಟ : ೮೮ ಬೆಲೆ : ರೂ. ೯೦**

**ಕನ್ನಡ ಮೈತ್ರಿ ಪ್ರಕಾಶನ**

ಭಾಗ್ಯನಗರ

ಚಿಂತನೆಗೀಡು ಮಾಡುವ ಕವಿತೆಗಳು ತಮ್ಮ ಸುತ್ತಲಿನ ಸಾಮಾಜಿಕ, ರಾಜಕೀಯ, ಆರ್ಥಿಕ, ಸಾಂಸ್ಕೃತಿಕ ಸ್ವಭಾವಗಳಿಂದಲೇ ರೂಪುಗೊಂಡಿರಬಹುದಾದ ವರ್ತಮಾನ ಸಂದರ್ಭದ ಮನುಷ್ಯನ ವರ್ತನೆಯನ್ನು ಗಮನದಲ್ಲಿಟ್ಟುಕೊಂಡು ಕವಿ, ಅಕ್ಬರ ಸಿ. ಕಾಲಿಮಿರ್ಚಿ ಅವರು ಕವಿತೆಗಳನ್ನು ರಚಿಸುತ್ತಾರೆ. ಹೀಗಾಗಿಯೇ, ಅವರು ಇತ್ತೀಚೆಗಷ್ಟೇ ಹೊರ ತಂದಿರುವ 'ಒಡಲ ಉರಿಯ ನೆನೆದು' ಕವನ ಸಂಕಲನದಲ್ಲಿರುವ ಕವಿತೆಗಳು ಓದುಗರನ್ನು ಇನ್ನಿಲ್ಲದಂತೆ ಕಾಡುತ್ತವೆ. ಪ್ರಸ್ತುತ, ಈ ಕವನ ಸಂಕಲನದಲ್ಲಿರುವ ಕವಿತೆಗಳು ಈ ದಿನಮಾನಗಳಲ್ಲಿ ಮನುಷ್ಯ-ಮನುಷ್ಯರ ನಡುವೆ ಗೋಡೆ ನಿರ್ಮಿಸಲು ಕಾರಣವಾದ ಸ್ವಯಂ ಮನುಷ್ಯನೇ ರೂಪಿಸಿಕೊಂಡಿರುವ ಜಾತಿ, ಮತ, ಧರ್ಮಗಳು ಹೇಗೆ ನೆಮ್ಮದಿಯ ಬದುಕಿನ ಬೇರುಗಳನ್ನೇ ಸಡಿಲಗೊಳಿಸಿವೆ ಎಂಬುದನ್ನು ಹೇಳಿವೆ. ಈ ಸೃಷ್ಟಿಯ ಮೂಲವನ್ನೇ ಶೋಧಿಸಬೇಕೆಂಬ ಹಪಹಪಿಯಲ್ಲಿ ಮನುಷ್ಯನೊಳಗೆ ತುಂಬಿರುವ ಘೋರ ಕ್ರೌರ್ಯದ ಬಗ್ಗೆ, ಬರೀ ರಾಗ-ದ್ವೇಷ, ಅಸೂಯೆಗಳನ್ನು ತುಂಬಿಕೊಂಡು 'ಅಹಂ' ಮಿಕೆಯಿಂದ ಮೆರೆಯುತ್ತಿರುವ ಬಗ್ಗೆ ಮತ್ತು ಹೈದರಾಬಾದ್ ಕರ್ನಾಟಕ ಪ್ರದೇಶದ ಜನರು ರಾಜಕಾರಣಿಗಳ ಇಚ್ಛಾಶಕ್ತಿಯ ಕೊರತೆಯಿಂದಾಗಿ ಅನುಭವಿಸುತ್ತಿರುವ ಯಾತನಾಮಯ ಬದುಕಿನ ಕುರಿತಾಗಿ ಓದುಗನೊಂದಿಗೆ ಸಂವಾದಕ್ಕೆ ಇಳಿಯುತ್ತವೆ. ಇಲ್ಲಿ, ಕವಿ ಅಕ್ಬರರು ತಮ್ಮ ಸುತ್ತಲಿನ ಎಲ್ಲ ವಿದ್ಯಮಾನಗಳೊಂದಿಗೆ ಮುಖಾಮುಖಿಯಾಗಬೇಕೆಂಬ ಉಮೇದಿಯಲ್ಲಿ ಕವಿತೆಗಳಿಗೆ ಕಾಣಿಸುವ ಗುಣವನ್ನು ಮೀರಿ ಕೇಳಿಸುವ ಗುಣ ಬಂದಿದೆ.

– **ಕಲ್ಲೇಶ್ ಕುಂಬಾರ್,** ರಾಯಭಾಗ ತಾ॥, ಬೆಳಗಾವಿ ಜಿಲ್ಲೆ

## ಇಹದ ಪರಿಮಳ (ಕಥಾಸಂಕಲನ)

ಕಂನಾಡಿಗಾ ನಾರಾಯಣ

**ಪುಟ : ೧೨೦ ಬೆಲೆ : ರೂ. ೧೦೦**

**ನವಕರ್ನಾಟಕ ಪ್ರಕಾಶನ,** ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು-೫೬೦೦೦೧

ಕಥೆಗಳೆಂದರೆ ಇವು ಅಜ್ಜಿಕಥೆಗಳೂ ಅಲ್ಲ; ಕಟ್ಟು ಕಥೆಗಳೂ ಅಲ್ಲ. ಇಂದಿನ ಕಾಲದ ವಿದ್ಯಮಾನಗಳನ್ನು ತಿಳಿಸುವ ಹಸಿ ಬಿಸಿ ಘಟನಾವಳಿಗಳು. ನಾವೆಲ್ಲ ಹೇಗೆ ಬದುಕುತ್ತಿದ್ದೇವೆಂದು ನಮ್ಮನ್ನು ನಮಗೇ ಪರಿಚಯಿಸುವ ನಿಜದ ದನಿಗಳು. ಸತ್ಯ ಆಳದಲ್ಲಿದ್ದು ಬಗೆದು ನೋಡದಿದ್ದಲ್ಲಿ ಅದರ ಮೇಲೆ ಸುಳ್ಳು ವಿಜೃಂಭಿಸುತ್ತದೆ. ಮೇಲ್ನೋಟಕ್ಕೆ ಸಹಜವೆಂಬಂತಿದ್ದರೂ ಲೆಕ್ಕವಿಲ್ಲದಷ್ಟು ಒಳಸುಳಿಗಳು ಅಲ್ಲಿರುತ್ತವೆ. ಇಂಥ ಸುಳ್ಳುಗಳನ್ನೇ ಸತ್ಯವೆಂದು ನಂಬಿ ನಾವಿಂದು ಮೋಸ ಹೋಗುತ್ತಿದ್ದೇವೆ. ನಮ್ಮ ದೇಶದಲ್ಲಿನ ಎಲೆಕ್ಷನ್, ನ್ಯಾಯದಾನ ವ್ಯವಸ್ಥೆ, ಆರೋಗ್ಯ ಸಮಸ್ಯೆ, ಔಷಧ ಪದ್ಧತಿಯ ಮೇಲಾಟ, ರಾಜಕೀಯ ಜೀವನ, ಅತ್ಯಂತ ಪ್ರತಿಭಾವಂತನೊಬ್ಬನ ವೈಯಕ್ತಿಕ ಒಳಬೇಗುದಿ, ನಾಗಾಲೋಟದ ಬದುಕಿನಲ್ಲಿ ಕಳೆದುಕೊಂಡ ನೆಮ್ಮದಿ – ಇವೆಲ್ಲ ಇಲ್ಲಿ ಕಥಾರೂಪದಲ್ಲಿ ಹೊರಹೊಮ್ಮಿ ನಾವಿರುವ ಸ್ಥಿತಿಯನ್ನು ಮನಗಾಣಿಸಿವೆ. ಎಲ್ಲರ ಮುಗ್ಧತೆಯೇ ಇಲ್ಲಿನ ಬಲವಾದ ವೀಕ್‌ನೆಸ್. ಸಹಜವಾಗಿ ಸರಿದಾರಿಯಲ್ಲಿ ಹರಿವ ನದಿಯೊಂದನ್ನು ನಮ್ಮಿಷ್ಟದಂತೆ ಹೊರಳಿಸಿ, ದಾರಿ ತಪ್ಪಿಸಿ ಅಸಹಜತೆಯೇ ಸಹಜವೆಂಬಂತೆ ಬಿಂಬಿಸುವ ಇಂದಿನ ಮೀಡಿಯಾ ತಂತ್ರಗಳಿಗೆ ನಾವು ಮಾರುಹೋಗುತ್ತಿದ್ದೇವೆ. ಸ್ವಲ್ಪ ಯೋಚಿಸಿದರೆ ನಾವೆಲ್ಲಿ ಎಡವಿದ್ದೇವೆಂದು ತಿಳಿದೀತು. ನಮ್ಮನ್ನು ನಾವು ಕಂಡುಕೊಳ್ಳಲು ಇಲ್ಲಿನ ಕಥೆಗಳು ಸಹಾಯ ಮಾಡುತ್ತವೆ. ಕಂನಾಡಿಗಾರವರ ನವಿರಾದ ಲಘು ಹಾಸ್ಯ – ವಿನೋದದ ಶೈಲಿಯಿಂದಾಗಿ ಆಕರ್ಷಣೀಯವಾಗಿದೆ.

## ಬಾನಲ್ಲಿ ಗ್ರಹಗಣತಿ

ಸರೋಜಾ ಪ್ರಕಾಶ

**ಪುಟ : ೧೫೨ ಬೆಲೆ : ರೂ. ೧೫೦**

**ನವಕರ್ನಾಟಕ ಪ್ರಕಾಶನ,** ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು-೫೬೦೦೦೧

ಇದು ಉಪಗ್ರಹ, ಗಗನ ನೌಕೆಗಳ ಯುಗ. ಬಾಹ್ಯಾಕಾಶ ಸಂಶೋಧನೆ ವಿಜ್ಞಾನಿಗಳ ತೀರದ ದಾಹ. ವಿಶ್ವದ ವಿಸ್ತಾರವೆಷ್ಟು? ಬಾನಂಗಳಕ್ಕೆ ಕೊನೆ – ಮೊದಲು ಇದೆಯೆ? ಜ್ಯೋತಿರ್ವರ್ಷಗಳಷ್ಟು ದೂರದಲ್ಲಿ ಮಿಂಚುವ ನಕ್ಷತ್ರಗಳ ಗುಟ್ಟೇನು? ಇವೇ ಮುಂತಾದ ಪ್ರಶ್ನೆಗಳ ಸರಮಾಲೆ ಧರಿಸಿ ವಿಜ್ಞಾನಿಗಳು ಕಾರ್ಯಪ್ರವೃತ್ತರಾಗಿದ್ದಾರೆ. ಬಾನಿನ ವಿಸ್ತಾರದಂತೆ ತಮ್ಮ ಅರಿವೂ ವಿಸ್ತಾರಗೊಂಡಾಗ, ನಮ್ಮ ಸೂರ್ಯನಿಗಿಂತಲೂ ಹೆಚ್ಚು ಪ್ರಕಾಶಮಾನವಾದ ಲೆಕ್ಕವಿಲ್ಲದಷ್ಟು ನಕ್ಷತ್ರಗಳಿದ್ದು ಅವುಗಳನ್ನು ಸುತ್ತುವ ಗ್ರಹಗಳಿವೆಯೆಂದು, ಅಂಥ ಗ್ಯಾಲಕ್ಸಿಗಳು ಲಕ್ಷಾಂತರ ಜ್ಯೋತಿರ್ವರ್ಷ ದೂರದಲ್ಲಿವೆ ಎಂದು ತಿಳಿದದ್ದೇ ತಡ – ಒಂದರ ಹಿಂದೊಂದು ಬಾನ ನೌಕೆಗಳು ಅತ್ಯಾಧುನಿಕ ತಂತ್ರಜ್ಞಾನವನ್ನು ಅಳವಡಿಸಿಕೊಂಡು ಆಕಾಶವನ್ನು ಭೇದಿಸಿ ಸಾಗಿದವು. ನಿರಾಸೆ ಎಂಬ ಪದ ವಿಜ್ಞಾನಿಗಳ ಭಂಡಾರದಲ್ಲೇ ಇಲ್ಲ. ನಮ್ಮ ಸೌರವ್ಯೂಹದಾಚೆ ಪಯಣಿಸಲು ಸಿದ್ಧವಾಗಿರುವ, ವಿಶ್ವದ ರಹಸ್ಯ ಭೇದಿಸಲು ಹೊರಟಿರುವ ಸಾಹಸಯಾನಗಳ ಕಥೆ ಈ ಕೃತಿಯಲ್ಲಿ ರೋಚಕ ಅಂಶಗಳೊಂದಿಗೆ ನಿರೂಪಿಸಲಾಗಿದೆ. ಸ್ಪಿರಿಟ್, ಅಪಾರ್ಚುನಿಟಿ, ನ್ಯೂಹಾರಿಝಾನ್, ಫೀನಿಕ್ಸ್, ಡಾನ್, ವಾಯೇಜರ್ ಜುನೋ – ಮುಂತಾಗಿ ಅರ್ಥಪೂರ್ಣ ಹೆಸರಿನೊಂದಿಗೆ ಬಾನಂಗಳಕ್ಕೆ ಧುಮುಕಿದ ಗಗನ ನೌಕೆಗಳ ಬಗ್ಗೆ ತಿಳಿದುಕೊಂಡು ರೋಮಾಂಚಿತರಾಗುವುದೇ ಒಂದು ರೋಚಕ ಅನುಭವ. ವಿಜ್ಞಾನ ಲೋಕದ ಸಂಶೋಧನೆಗಳ ಮಹಾಪೂರವಿದು.

– **ಇಂದಿರಾಕುಮಾರಿ**

ಯಶವಂತಪುರ, ಬೆಂಗಳೂರು-೫೬೦ ೦೧೮

## ನಾ ಕಂಡ ಅಧ್ಯಾತ್ಮ – ರಾಮಾಯಣ

ಸದಾಶಿವಯೋಗಿ




**ಪುಟ : ೭೪ ಬೆಲೆ : ರೂ. ೧೦೦**

**ಸದಾಶಿವ ಯೋಗ ಪ್ರತಿಷ್ಠಾನ,** ಅಧ್ಯಾತ್ಮ ವಿಕಾಸ ಕೇಂದ್ರ, ಕನ್ನಡ ವಿ.ವಿ., ವಿದ್ಯಾರಣ್ಯ, ಹೊಸಪೇಟೆ – ೫೮೩೨೭೬.

'ರಾಮಾಯಣ'ವನ್ನು ತಾತ್ವಿಕವಾಗಿ, ತಾರ್ಕಿಕವಾಗಿ ವಿಶ್ಲೇಷಿಸುವ ಕೃತಿ ಸದಾಶಿವಯೋಗಿಯವರ 'ನಾ ಕಂಡ ಅಧ್ಯಾತ್ಮ ರಾಮಾಯಣ'. ರಾಮಾಯಣದ ಭಾರದಲಿ ಫಣಿರಾಯ ತಿಣುಕಿದ ಎಂದು ಹೇಳುವ ಮೂಲಕ ರಾಮಾಯಣ ಕೃತಿಗಳ ಸಂಖ್ಯೆಯನ್ನು ಹೇಳಿದರೆ, ರಾಮಾಯಣ ಕುರಿತು ಬಂದ ಕೃತಿಗಳ ಸಂಖ್ಯೆ ಎಣಿಕೆಗೂ, ತೂಕಕ್ಕೂ ಸಿಗಲಾರದು. ರಾಮಾಯಣವನ್ನು ಚಿಕಿತ್ಸಕ ದೃಷ್ಟಿಯಿಂದ ನೋಡುವ ಕೃತಿಗಳು ಟೀಕೆಗೂ, ವಾಗ್ವಾದಕ್ಕೂ ಕೆಲವೊಮ್ಮೆ ಸಂಘರ್ಷಕ್ಕೂ ಕಾರಣವಾಗಿವೆ. ಸದಾಶಿವಯೋಗಿ ಅವರ ಈ ಕೃತಿ ಅಧ್ಯಾತ್ಮ ಮತ್ತು ತರ್ಕದ ಹಿನ್ನೆಲೆಯಲ್ಲಿ ರಾಮಾಯಣವನ್ನು ಎದುರಿಗೆ ನಿಲ್ಲಿಸಿಕೊಂಡು ಮಾತನಾಡುವ ಕೃತಿ. ಮೂಲತಃ ರಾಮಾಯಣ – ಮಹಾಭಾರತಗಳನ್ನು 'ಹಾದರದ, ಸೋದರವಧೆಯ' ಕಥೆಗಳೆಂದೇ ಸರ್ವಜ್ಞನಂಥವರ ಟೀಕೆಯೂ ಇದೆ. ಆದರೆ ಈ ಕೃತಿಯಲ್ಲಿ ಅವೆಲ್ಲ ಮೂಲ ಕೃತಿಕಾರರ ರಚನೆಗಳಲ್ಲ ಎಂಬ ವಾದವಿದೆ. ಒಂದು ಪಕ್ಷಿಯನ್ನು ಕೊಂದು ಪಶ್ಚಾತ್ತಾಪಪಟ್ಟ ವಾಲ್ಮೀಕಿ ಅದ್ಹೇಗೆ ಲಂಕಾ ದಹನದಂಥ ಸಾವಿರಾರು ಜನರ ದಹನದ ಘಟನೆಯನ್ನು ಶೌರ್ಯ ಎಂದು ಹೇಳಲು ಸಾಧ್ಯ. ಎಂ.ಎಂ.ಜಿ. ರಾವಣ ಸೀತೆಯನ್ನು ನಡೆಸಿಕೊಂಡಷ್ಟೂ ಮಾನವತೆಯಿಂದ ರಾಮ ಸೀತೆಯನ್ನು ನೋಡಲಿಲ್ಲ. ಪ್ರತಿಯಾಗಿ ಶೂರ್ಪನಖಿಯನ್ನು ರಾಮಲಕ್ಷ್ಮಣರು ನೋಡಿಕೊಂಡ ರೀತಿ, ಶೂದ್ರ ವಾಲ್ಮೀಕಿ ಶೂದ್ರ ಶಂಬೂಕನನ್ನು ವಧಿಸುವ ಪ್ರಸಂಗ ಕುರಿತು ಬರೆಯಲು ಸಾಧ್ಯವೇ? ಹೀಗೆ ತರ್ಕದ ನೆರವಿನಿಂದ ರಾಮಾಯಣವನ್ನು ಪ್ರಶ್ನಿಸುತ್ತಲೇ ಮೂಲ ರಾಮಾಯಣ ಅಧ್ಯಾತ್ಮಕ್ಕೆ ಸಂಬಂಧಿಸಿದ್ದು, ಕಲಬೆರಕೆ ರಾಮಾಯಣ ಜಾತಿ, ಧರ್ಮ, ಮೌಢ್ಯಗಳನ್ನು ರೂಢಿಸಿಕೊಂಡದ್ದು ಬ್ರಾಹ್ಮಣ್ಯದ ಪಿತೂರಿ ಎಂಬ ಅಂಶಗಳನ್ನು ತರ್ಕಬದ್ಧವಾಗಿ ಚರ್ಚಿಸುವ ಈ ಕೃತಿ ರಾಮಾಯಣ ವಿಶ್ಲೇಷಣೆಯ ಕೃತಿಗಳಲ್ಲಿ ವಿಭಿನ್ನ, ಓದಬೇಕಾದ, ಯೋಚಿಸಬೇಕಾದ ಕೃತಿ.

– **ಶ್ರೀಸುಮಿತ್ರಾಸುತ ಅಗಸಬಾಳ,** ಬೆಂಗಳೂರು.



ನೀವು ನಿಮ್ಮ ಬುದ್ಧಿಪೂರ್ವಕ ಶಿಕ್ಷಣದಿಂದ ನಮ್ಮ ಎಲ್ಲಾ ವೃತ್ತಿ, ಕುಲವೃತ್ತಿಗಳನ್ನು ಕಸಿದು ಶಿಕ್ಷಣವನ್ನಾಗಿ, ತಾಂತ್ರಿಕತೆಯನ್ನಾಗಿ ಪರಿವರ್ತಿಸಿದಿರಿ. ಆದರೆ ನಮಗೆ ಅಲ್ಲಿ ಪಾಲ್ಗೊಳ್ಳುವ ಅವಕಾಶ ನೀಡಲಿಲ್ಲ! ಯಾಕೆಂದರೆ ನಮಗೆ ಬುದ್ಧಿ ಆಧಾರಿತ ಶಿಕ್ಷಣವೇ ಇರಲಿಲ್ಲ... ನೀವು ಮುಂದುವರೆದವರಾಗಿಯೇ ಮುಂದುವರೆದಿರಿ, ಸಹಜವಾಗಿಯೇ ನಾವು ಹಿಂದುಳಿದವರಾಗೇ ಹಿಂದುಳಿದೆವು. ನೀವು ಈ ದೇಶದ ಸಂಪನ್ಮೂಲಗಳನ್ನು, ಅಧಿಕಾರವನ್ನು, ಆಡಳಿತವನ್ನು, ವ್ಯಾಪಾರ – ವಹಿವಾಟುಗಳನ್ನು ನಿಮ್ಮ ಕೈಯಲ್ಲಿ ಹಿಡಿದಿರಿ, ನಾವು ಕುಲವೃತ್ತಿಗಳನ್ನು ಕಳಕೊಂಡು ಬರಿಗೈ ಆದೆವು. ನಿಮ್ಮೊಂದಿಗೆ ನಿಮ್ಮ ಬೌದ್ಧಿಕ ಶಿಕ್ಷಣದ ಸ್ಪರ್ಧೆಯಲ್ಲಿ ಸ್ಪರ್ಧಿಸಲಾರದೆ ಸೋತೆವು.

# ಮೀಸಲಾತಿ: ಇನ್ನೆಷ್ಟು ಸಲ ಉತ್ತರಿಸಬೇಕು?

ಮೀಸಲಾತಿಯಷ್ಟು ವಿವಾದಕ್ಕೆಡೆಗೊಟ್ಟ ಮತ್ತು ಮತ್ತೆ ಮತ್ತೆ ಚರ್ಚೆಗೊಳಪಡುತ್ತಿರುವ ವಿಷಯ ಇನ್ನೊಂದಿರಲಾರದು. ಈಗ ಖಾಸಗಿ ಕ್ಷೇತ್ರದಲ್ಲಿ ಮೀಸಲಾತಿ ಮತ್ತು ಬಡ್ತಿ ಮೀಸಲಾತಿಯ ನೆಪವನ್ನಿಟ್ಟುಕೊಂಡ ಸಂಘ ಪರಿವಾರದ ಮನಸ್ಸುಗಳು ಫೇಸ್‌ಬುಕ್ ಮತ್ತು ವಾಟ್ಸ್ಯಾಪ್‌ಗಳಲ್ಲಿ ಮೀಸಲಾತಿಯ ಮೂಲ ಆಶಯದ ಬಗ್ಗೆಯೇ ಹಿಂದಿನಿಂದಲೂ ಮಾಡಿಕೊಂಡು ಬಂದ ವಾದವನ್ನೇ ಮತ್ತೆ ಮತ್ತೆ ಮಂಡಿಸುತ್ತಿವೆ... "...ಮೀಸಲಾತಿ ನೀಡುವುದಿದ್ದರೆ ಆರ್ಥಿಕ ಆಧಾರದ ಮೇಲೆ ನೀಡಬೇಕು, ಮೇಲ್ಜಾತಿಗಳಲ್ಲಿ ಬಡವರಿಲ್ಲವೆ? ಶೇಕಡ ೩೫ಕ್ಕೆ ಸೀಟು, ಶೇಕಡ ೯೫ಕ್ಕೆ ಸೀಟಿಲ್ಲ! ಇದ್ಯಾವ ನ್ಯಾಯ? ಮೀಸಲಾತಿಯಿಂದ ಪ್ರತಿಭೆ (ಮೆರಿಟ್) ನಾಶವಾಗುತ್ತಿದೆ, ಜಾತಿಗಳನ್ನು ಹುಟ್ಟುಹಾಕುವ ಮೀಸಲಾತಿಯನ್ನು ಕಿತ್ತು ಹಾಕಬೇಕು, ಇನ್ನೆಷ್ಟು ದಿನ ಮೀಸಲಾತಿ ನೀಡಬೇಕು? ಮೀಸಲಾತಿ ತೆಗೆಯುವವರೆಗೂ ಈ ದೇಶ ಉದ್ಧಾರವಾಗಲ್ಲ..." ಮುಂತಾದ ವಾದಗಳನ್ನು ತಲೆಗೊಂದರಂತೆ ಮಂಡಿಸುತ್ತಿದ್ದಾರೆ. ಇವಕ್ಕೆಲ್ಲಾ ಎಷ್ಟೇ ತರ್ಕಬದ್ಧವಾಗಿ ಉತ್ತರಿಸಿದರೂ ಅಂಥವರು ನಮ್ಮ ಯಾವ ಮಾತುಗಳನ್ನೂ ಒಪ್ಪುವಂತಹ ಮನಃಸ್ಥಿತಿ ಹೊಂದಿಲ್ಲ. ಆದ್ದರಿಂದ ಇಲ್ಲಿ ಒಂದಷ್ಟು ಒಳಹೊಕ್ಕು ಸರಳೀಕರಿಸಿ ಮೀಸಲಾತಿಯ ಅನಿವಾರ್ಯತೆಯನ್ನು ಹೇಳಬೇಕಾಗಿದೆ. ಯಾಕೆಂದರೆ ಇಲ್ಲಿ ಮೀಸಲಾತಿ ವಿರೋಧಿಗಳೊಂದಿಗೆ ಮೀಸಲಾತಿ ಪಡೆಯುತ್ತಿರುವ ಅರಿವಿಲ್ಲದ "ಶೂಬ್ರಾ"ಗಳೂ ಸೇರಿಕೊಂಡವರಿದ್ದಾರೆ!!




**ಡಾ॥ ಸಿ. ಎಸ್. ದ್ವಾರಕಾನಾಥ್**

ಈಗ ಮೀಸಲಾತಿ ಪಡೆಯಲು ಹೊರಟಿರುವುದು ಬಹುತೇಕ ಈಗ ಅಕ್ಷರಜ್ಞಾನ ಪಡೆಯುತ್ತಿರುವ ಮೊದಲ ತಲೆಮಾರು. ಕಳೆದ ಪಾರ್ಲಿಮೆಂಟಿನಲ್ಲಿ ಕೇಂದ್ರ ಸಚಿವರಾಗಿದ್ದ ನಾರಾಯಣಸ್ವಾಮಿಯವರು ಮಂಡಿಸಿದ ಅಂಕಿ–ಅಂಶಗಳ ಪ್ರಕಾರ ಎಸ್. ಸಿ. ಗಳಿಗೆ ೨೨.೫% ಮೀಸಲಿದ್ದು, ಅದರಲ್ಲಿ ಈವರೆಗೂ ಬಳಸಿರುವುದು ಸುಮಾರು ೮.೫% ಅಷ್ಟೆ. ಎಸ್. ಟಿ. ಗಳಿಗೆ ೭.೫% ಇದ್ದು ಬಳಕೆಯಾಗಿರುವುದು ಕೇವಲ ೩.೫%, ಅಂತೆಯೇ ಒ. ಬಿ. ಸಿ. ಗಳಿಗೆ ೨೭% ಇದ್ದು, ಅದು ಬಳಕೆಯಾಗಿರುವುದು ೪.೫%ರಿಂದ ೫% ಮಾತ್ರ! ಇನ್ನೂ ಪೂರ್ತಿಯಾಗಿ ಮೀಸಲಾತಿ ಒಂದು ತಲೆಮಾರಿನ ಮೂರನೇ ಒಂದು ಭಾಗಕ್ಕೂ ತಲುಪಲಿಲ್ಲ. ಅಷ್ಟರಲ್ಲಿ ಏನೆಲ್ಲಾ ತಂತ್ರ, ಕುತಂತ್ರ, ಷಡ್ಯಂತ್ರ ನೋಡಿ !

**ಗೂಡು**

ಗೂಡಲ್ಲಿ
ಕಾಳು ಕಡಿ ಕೂಡಿಟ್ಟ ಇರುವೆ
ಮೆರೆಯಿತು.
ಮಳೆರಾಯನ
ಕೋಪಕ್ಕೆ ತುತ್ತಾಗಿ
ಅದು ಗೂಡನ್ನೂ ಬಿಡಲಿಲ್ಲ.

**ದ್ವಾರನಕುಂಟೆ ಪಾತಣ್ಣ**
ಬೆಂಗಳೂರು – ೭೩

ಜಾತಿಯನ್ನೇ ನೀತಿಯನ್ನಾಗಿ ಮಾಡಿಕೊಂಡ ದೇಶವಿದು, ಇದು ಕುಲ ಕಸುಬುಗಳನ್ನೇ ನುಂಗಿ ನೀರು ಕುಡಿದ ದೇಶ ಕೂಡ. ನಮ್ಮ ತಲೆಮಾರನ್ನು ಹೊರತುಪಡಿಸಿ ಹಿಂದಿನ ತಲೆಮಾರುಗಳನ್ನು ಒಮ್ಮೆ ಅವಲೋಕಿಸೋಣ. ಹಿಂದೂಧರ್ಮದ ತಳಪಾಯವಾದ ಚಾತುರ್ವರ್ಣ್ಯ ಸಿದ್ಧಾಂತದ ಮೇಲಿನ ಮೂರು ವರ್ಗಗಳಾದ ಪುರೋಹಿತರು, ರಾಜರು (ಚಕ್ರವರ್ತಿಗಳು) ಮತ್ತು ವ್ಯಾಪಾರಸ್ಥರು ಮುಂತಾದವರಿಗೆ ನಾಲ್ಕನೇ ವರ್ಣದ ಶೂದ್ರರು, ದಲಿತರು, ಅಲ್ಪಸಂಖ್ಯಾತರು ಸೇವೆ ಮಾಡುತ್ತಲೇ ಬಂದರು. ಇಂದು ಅದೇ ತಳಸಮುದಾಯದ ಕುಡಿಗಳೇ ಮೀಸಲಾತಿಯನ್ನು ಬೇಡುತ್ತಿರುವುದು. ಮೇಲಿನ ಮೂರು ವರ್ಣಗಳು ಬ್ರಾಹ್ಮಣ, ಕ್ಷತ್ರಿಯ, ವೈಶ್ಯರು ಅನುತ್ಪಾದಕ ವರ್ಣಗಳು, ಕೆಳಗಿನ ಶೂದ್ರ, ಅತಿಶೂದ್ರ, ಅಸ್ಪೃಶ್ಯ, ಆದಿವಾಸಿ ಅಲೆಮಾರಿ ಮುಂತಾದವರು ಉತ್ಪಾದಕ ವರ್ಣಗಳು. ಈಗ ಮೀಸಲಾತಿ ಬಗ್ಗೆ ನಡೆದಿರುವ ಸಂಘರ್ಷ ಉತ್ಪಾದಕ ಮತ್ತು ಅನುತ್ಪಾದಕ ಸಮುದಾಯಗಳ ನಡುವಿನದು.

ಇಲ್ಲಿ ಅನೇಕ ಉತ್ಪಾದಕ ಕುಲಗಳು ಮಾತನಾಡುತ್ತಿವೆ. ಒಮ್ಮೆ ಸಾವಧಾನದಿಂದ ನೋಡಿ... ನಿಮ್ಮ ಮೂರೂ ವರ್ಣಗಳಿಗೆ ಕ್ಷೌರ ಮಾಡುತ್ತಲೇ ಬಂದ ಕ್ಷೌರಿಕ, ನಿಮಗೆ ಬಟ್ಟೆ ನೇಯ್ದುಕೊಟ್ಟ ದೇವಾಂಗ, ಅದನ್ನು ಹೊಲೆದುಕೊಟ್ಟ ಸಿಂಪಿಗ, ಅದನ್ನು ಒಗೆದು ಇಸ್ತ್ರಿ ಮಾಡಿಕೊಟ್ಟ ಅಗಸ, ನಿಮಗೆ ಚಪ್ಪಲಿ ಮಾಡಿಕೊಟ್ಟ ಚಮ್ಮಾರ, ನಿಮಗೆ ಕುಡಿಯಲಿಕ್ಕೆ, ಸ್ನಾನಕ್ಕೆ ನೀರುಕೊಟ್ಟ ನೀರಗಂಟಿ, ನಿಮ್ಮ ಸಂಧ್ಯಾವಂದನೆ, ಪೂಜೆಗಾಗಿ, ನಿಮ್ಮ ಗರ್ಭಗುಡಿಗೆ ದೇವರ ವಿಗ್ರಹ ಮಾಡಿಕೊಟ್ಟ ವಿಶ್ವಕರ್ಮ, ದೇವರ ದೀಪ ಹಚ್ಚಲು ಮಣ್ಣ ದೀಪ ಮಾಡಿಕೊಟ್ಟ ಕುಂಬಾರ, ಅದಕ್ಕೆ ಬತ್ತಿ ಮಾಡಿಕೊಟ್ಟ ಒಕ್ಕಲಿಗ, ಅದಕ್ಕೆ ಎಣ್ಣೆ ಮಾಡಿಕೊಟ್ಟ ಗಾಣಿಗ, ದೇವರ ಪೂಜೆಗೆ ಹೂವು ಬೆಳೆದು ಅರಿಶಿನ, ಕುಂಕುಮ ತಂದುಕೊಟ್ಟ ಬಲಿಜ, ನಿಮ್ಮ ಹೂವಿಗೆ ಬುಟ್ಟಿ ಮಾಡಿಕೊಟ್ಟ ಮೇದರ... ನಿಮಗೆ ಊದುಕಡ್ಡಿ ಮಾಡಿಕೊಟ್ಟ ಸಾಬಿ, ನೀವು ಪೂಜೆಗೆ ಕೂರಲು ಪೀಠ ಮಾಡಿಕೊಟ್ಟ ಬಡಗಿ... ಹೀಗೆ ಇಡೀ ಪೂಜೆಯಲ್ಲಿ ಮೇಲಿನವರದು ಮಂತ್ರದ ಉಗುಳು ಎನ್ನುವುದನ್ನು ಬಿಟ್ಟರೆ ಮಿಕ್ಕದ್ದೆಲ್ಲಾ ಕೆಳಗಿನವರು ತಮ್ಮ 'ಮೆರಿಟ್'ನಿಂದ ಮಾಡಿಕೊಟ್ಟಿದ್ದೆ.

ನಿಮಗೆ ಅನ್ನಕೊಟ್ಟವನು ರೈತ (ಇಲ್ಲಿ ಒಕ್ಕಲಿಗ, ಲಿಂಗಾಯಿತರಾದಿಯಾಗಿ ಅನೇಕ ಜಾತಿವರ್ಗಗಳಿವೆ). ನಿಮಗೆ ತರಕಾರಿ ಬೆಳೆದು ಕೊಟ್ಟವನು ತಿಗಳ, ತರಕಾರಿ ಕೊಯ್ಯಲು ಕತ್ತಿ, ಯುದ್ಧ ಮಾಡಲು ಕಠಾರಿ ಮಾಡಿಕೊಟ್ಟವನು ಕಮ್ಮಾರ, ನಿಮ್ಮ ಸಾರಿಗೆ ಉಪ್ಪು ಮಾಡಿಕೊಟ್ಟವನು ಉಪ್ಪಾರ, ನಿಮಗೆ ಹಾಲು, ಮೊಸರು, ಬೆಣ್ಣೆ ತುಪ್ಪ ಕೊಟ್ಟವನು ಗೊಲ್ಲ, ಕಾಡಿನ ಜೇನು ಉತ್ಪನ್ನಕೊಟ್ಟವನು ಬೇಡ, ನಿಮ್ಮ ಮಲವನ್ನು ತಲೆಮೇಲೆ ಹೊತ್ತವನು ಭಂಗಿ, ನಿಮ್ಮ ಬೀದಿ ಗುಡಿಸಿ

ಸ್ವಚ್ಛಗೊಳಿಸಿದವನು ಹೊಲೆಯ, ನಿಮ್ಮ ಸೂರಿಗೆ ಕಲ್ಲು, ಮಣ್ಣು ಹೊತ್ತವನು ವಡ್ಡ, ನೀವು ಮಲಗಲು ಹಾಸಿಗೆ ಮಾಡಿಕೊಟ್ಟವನು ಪಿಂಜಾರ, ನಿಮಗೆ ಬೆಚ್ಚಗೆ ಹೊದೆಯಲು ಕಂಬಳಿ ಮಾಡಿಕೊಟ್ಟವನು ಕುರುಬ, ನಿಮಗೆ ಬೇಕಾದಾಗ ಮತ್ತು ನೀಡಲು ಸೇಂದಿ ಮಾಡಿಕೊಟ್ಟವನು ಈಡಿಗ... ನಿಮ್ಮ ಕಾಯಿಲೆಗೆ ಔಷಧಿ ಮಾಡಿಕೊಟ್ಟವರು, ನಿಮಗೆ ಮನರಂಜನೆ ನೀಡಿದವರು ದೊಂಬ, ದೊಂಬಿದಾಸ, ಸುಡುಗಾಡುಸಿದ್ದರಾದಿಯಾಗಿ ಅನೇಕ ಅಲೆಮಾರಿಗಳು, ಆದಿವಾಸಿಗಳು... ಮಿಕ್ಕಂತೆ ನಿಮಗೆ ಅನೇಕ ರೀತಿಯಲ್ಲಿ ಪ್ರತ್ಯಕ್ಷವಾಗೋ, ಪರೋಕ್ಷವಾಗೋ ನಿಮ್ಮ ಸುತ್ತಾ ನಿಮ್ಮನ್ನು ತಮ್ಮ ಶ್ರಮದಿಂದ ರೂಪಿಸಿದ ಅದೆಷ್ಟೋ ಹೇಳ ಹೆಸರಿಲ್ಲದ ನೂರಾರು ಸಮುದಾಯಗಳಿವೆ... ಕಡೆಗೆ ನಿಮ್ಮ ಚಿತಾಭಸ್ಮವನ್ನು ನೀರ ಮೇಲೆ ಕೊಂಡೊಯ್ಯುವವನು ಬೆಸ್ತ...

ದುರಂತವೆಂದರೆ ಮೇಲಿನ ಯಾವುದೇ ಶ್ರಮವನ್ನು, ಕುಶಲ ಕುಲವೃತ್ತಿಗಳನ್ನು ಶಿಕ್ಷಣವನ್ನಾಗಿ ಪರಿಗಣಿಸದ ಈ ದೇಶದ ಮೇಲ್ಜಾತಿ ಮನಸ್ಸು, ಕುಂತು ಚಿಂತಿಸುವ, ಯೋಚಿಸುವ, ಮಂತ್ರವದರುವ, ಮಾತನಾಡುವಂತಹ ಬುದ್ಧಿಆಧರಿತ ಕ್ರಿಯೆಯನ್ನೇ ಶಿಕ್ಷಣವೆಂದು ಪರಿಗಣಿಸಿತು. ಹಾಗಾಗಿ ಈ ದೇಶದ ಶಿಕ್ಷಣ ಪದ್ಧತಿ ಬುದ್ಧಿ ಆಧಾರಿತವಾಯಿತು ಹೊರತು ಶ್ರಮ ಆಧಾರಿತವಾಗಲಿಲ್ಲ, ಇದರೊಂದಿಗೆ ತಲೆಮಾರುಗಳಿಂದಲೂ ಮೇಲಿನವರಾದ ನೀವು ಹೇಳುವವರಾಗೇ ಮುಂದುವರೆದಿರಿ, ಕೆಳಗಿನವರಾದ ನಾವು ಕೇಳುವವರಾಗಿಯೇ ಮುಂದುವರೆದೆವು, ನೀವು ಮಂತ್ರ ಹೇಳಿದಿರಿ ಅದು ನಮಗರ್ಥವಾಗದಿದ್ದರೂ ಅರ್ಥವಾದವರಂತೆ ತಲೆ ತೂಗಿದೆವು, ನೀವು ಹರಿಕತೆ ಮಾಡಿದಿರಿ ನಾವು ತಣ್ಣಗೆ ತೂಕಡಿಸುತ್ತಾ ಕೇಳಿಸಿಕೊಂಡೆವು, ನೀವು ವೇದ, ಉಪನಿಷತ್ತು, ಭಗವದ್ಗೀತೆ, ಪಾರಾಯಣ, ಭಾಗವತಗಳನ್ನು ತೋರಿ 'ಅದರಲ್ಲಿ ಏನೆಲ್ಲಾ ಇದೆ' ಅಂದಿರಿ, ನಾವು ಪ್ರಶ್ನಿಸದೆ ಒಪ್ಪಿಕೊಂಡೆವು. ನೀವು, ನಮಗೂ, ನಾವು ಕಾಣದ ದೇವರಿಗೂ ನಡುವೆ ಮಧ್ಯವರ್ತಿಗಳಾದಿರಿ. ನಮಗೆ ದೇವರು, ಸ್ವರ್ಗ, ನರಕದ ಬಗ್ಗೆ ಹೇಳುತ್ತಾ ನಮ್ಮನ್ನು ಭಯ ಭಕ್ತಿಯಿಂದ ಇರುವಂತೆ ನೋಡಿಕೊಂಡಿರಿ. ನೀವು ಆಳಿದಿರಿ ನಾವು ಆಳಿಸಿಕೊಂಡೆವು. ನಾವು ಬೆಳೆದದ್ದನ್ನು, ರೂಪಿಸಿದ್ದನ್ನು ನಮ್ಮಿಂದ ಪಡೆದು ನಮಗೇ ಮಾರಿದಿರಿ. ನಾವು ನಮ್ರವಾಗಿ ಕೊಂಡುಕೊಂಡೆವು... ಕೆಳಸಮುದಾಯಗಳು ಉತ್ಪಾದಕ ಸಮುದಾಯಗಳಾಗೇ ಉಳಿದುಬಿಟ್ಟವು, ಮೇಲುಸಮುದಾಯಗಳು ಅನುತ್ಪಾದಕ ಸಮುದಾಯಗಳಾಗಿಯೇ ಮುಂದುವರೆದವು!

ನೀವು ನಿಮ್ಮ ಬುದ್ಧಿ ಪೂರ್ವಕ ಶಿಕ್ಷಣದಿಂದ ನಮ್ಮ ಎಲ್ಲಾ ವೃತ್ತಿ, ಕುಲವೃತ್ತಿಗಳನ್ನು ಕಸಿದು ಶಿಕ್ಷಣವನ್ನಾಗಿ, ತಾಂತ್ರಿಕತೆಯನ್ನಾಗಿ ಪರಿವರ್ತಿಸಿದಿರಿ. ಆದರೆ ನಮಗೆ ಅಲ್ಲಿ ಪಾಲ್ಗೊಳ್ಳುವ ಅವಕಾಶ ನೀಡಲಿಲ್ಲ ! ಯಾಕೆಂದರೆ ನಮಗೆ ಬುದ್ಧಿ ಆಧಾರಿತ ಶಿಕ್ಷಣವೇ ಇರಲಿಲ್ಲ... ನೀವು ಮುಂದುವರೆದವರಾಗಿಯೇ ಮುಂದುವರೆದಿರಿ, ಸಹಜವಾಗಿಯೇ ನಾವು ಹಿಂದುಳಿದವರಾಗೇ ಹಿಂದುಳಿದೆವು. ನೀವು ಈ ದೇಶದ ಸಂಪನ್ಮೂಲಗಳನ್ನು, ಅಧಿಕಾರವನ್ನು, ಆಡಳಿತವನ್ನು, ವ್ಯಾಪಾರ – ವಹಿವಾಟುಗಳನ್ನು ನಿಮ್ಮ ಕೈಯಲ್ಲಿ ಹಿಡಿದಿರಿ, ನಾವು ಕುಲವೃತ್ತಿಗಳನ್ನು ಕಳಕೊಂಡು ಬರಿಗೈ ಆದೆವು. ನಿಮ್ಮೊಂದಿಗೆ ನಿಮ್ಮ ಬೌದ್ಧಿಕ ಶಿಕ್ಷಣದ ಸ್ಪರ್ಧೆಯಲ್ಲಿ ಸ್ಪರ್ಧಿಸಲಾರದೆ ಸೋತೆವು.



ಈ ಹಿನ್ನೆಲೆಯನ್ನರಿತ 'ಬೆಳಕು' ಡಾ॥ ಅಂಬೇಡ್ಕರ್ ಎಂಬ ಈ ಜಗತ್ತು ಕಂಡರಿಯದ ಸಮಾಜ ಶಾಸ್ತ್ರಜ್ಞ, ಮಾನವತಾವಾದಿ, ಪ್ರಜಾಪ್ರಭುತ್ವವಾದಿ ನಮಗಾಗಿ ಜನ್ಮತಾಳಿ ಬಂದರು. ತಾವು ಬರೆದ ಸಂವಿಧಾನದಲ್ಲಿ ಅವಕಾಶ ವಂಚಿತರಿಗೆ ಅವಕಾಶಗಳನ್ನು ಕಲ್ಪಿಸಬೇಕೆಂದು ಮೀಸಲಾತಿ ಕೊಟ್ಟರು. ಇದನ್ನು 'ಪ್ರಾತಿನಿಧ್ಯ' ಎಂದರು. ಶತಶತಮಾನಗಳಿಂದ ವಂಚಿತರಾದವರಿಗೆ ದೇಶ ಕಟ್ಟುವ, ಶಾಸನ ರೂಪಿಸುವ ಕ್ರಿಯೆಯಲ್ಲಿ ಪಾಲ್ಗೊಳ್ಳುವ ಅವಕಾಶ ಕಲ್ಪಿಸಿದರು. ಇದರಿಂದಾಗಿ ಅಸಮಾನತೆಯನ್ನೇ ಉಸಿರಾಡುವ ಈ ದೇಶಕ್ಕೆ ಸಮಾನತೆಯ ಹೊಸ ಗಾಳಿ ಬರಲಾರಂಭಿಸಿತು... ದನಿಯಿಲ್ಲದ ಜಾತಿವರ್ಗಗಳಿಗೆ ಧ್ವನಿ ನೀಡಿ ಸ್ವಾಭಿಮಾನದಿಂದ ಬದುಕುವುದನ್ನು ಕಲಿಸಿದರು. ಸಂವಿಧಾನದ ಮೊದಲ ಫಲಗಳನ್ನು ಅನುಭವಿಸುತ್ತಿರುವ ಮೊದಲ ತಲೆಮಾರು ಇಂದಿನದು. ಈ ಒಂದು ತಲೆಮಾರಾದರೂ ಕೊಂಚ ಸಮಾನತೆಯಿಂದ ಬದುಕಲು ಸಾಧ್ಯವಾಗುತ್ತದೇನೋ ಎನ್ನುವಷ್ಟರಲ್ಲಿ ಇದನ್ನು ಸಹಿಸಲಾರದ ಮನಸ್ಸುಗಳು ಈ ಮೀಸಲಾತಿಯೆಂಬ ಸಮಾನತೆಯ ಆಶಯಕ್ಕೆ ಬೆಂಕಿ ಇಡುತ್ತಿವೆ!!

ಸುಮಾರು ಐದು ಸಾವಿರ ವರ್ಷಗಳಿಂದ ವಂಚಿತರಾದವರಿಗೆ ಸಂವಿಧಾನ ಬದ್ಧ ಮೀಸಲಾತಿಯಿಂದಾಗಿ ಕೇವಲ ಈ ೫೦ ವರ್ಷಗಳಿಂದ ಸ್ಥಾನಮಾನ ದೊರಕುತ್ತಿದೆ, ಉಂಡವರು ಅದನ್ನು ಸಹಿಸದಿದ್ದರೆ ಹೇಗೆ?

ಇಲ್ಲೊಂದು ಸವಾಲಿದೆ, ಇದನ್ನು ನೀವು ಸ್ವೀಕರಿಸಬೇಕಿಲ್ಲ. ಕೇವಲ ಮಾತಿಗಾಗಿ... ಒಮ್ಮೆ ಈ ಬಗ್ಗೆ ಚಿಂತಿಸಿ ಅಥವಾ ಕಲ್ಪಿಸಿಕೊಳ್ಳಿ ಸಾಕು... ಶತಶತಮಾನಗಳಿಂದ ಶಿಕ್ಷಣ ಮತ್ತು ಶಿಕ್ಷಣದ ಲಾಭಗಳನ್ನು ಪಡೆದ ನೀವು ಕೇವಲ ೧೦ ವರ್ಷ ಅಕ್ಷರದಿಂದ ದೂರವಿರಿ, ನಿಮ್ಮ ಮನೆಮಠಗಳಲ್ಲಿ ಈ ಹತ್ತು ವರ್ಷ ಯಾರೂ ಅಕ್ಷರ ಕಲಿಯದಂತೆ ಇದ್ದುಬಿಡಿ, ನಿಮ್ಮವರೆಲ್ಲರನ್ನು ಅಕ್ಷರಜ್ಞಾನದಿಂದ ದೂರವಿರಿಸಿ, ಹತ್ತು ವರ್ಷದ ಆಚೆಗೆ ಶಿಕ್ಷಣ ಕೊಡಿ, ಈ ಹತ್ತು ವರ್ಷ ನಿಮಗೆ ಶಿಕ್ಷಣ ನಿರಾಕರಿಸಿದ ಪರಿಣಾಮ ಈ ದೇಶದ ಬಹು ಜನರೆಲ್ಲಾ ಸೇರಿ ಸೂರ್ಯ–ಚಂದ್ರರಿರುವವರೆಗೂ ನಿಮಗೆ ಮೀಸಲಾತಿ ನೀಡುವಂತೆ ನೋಡಿಕೊಳ್ಳುತ್ತೇವೆ. ಸಂವಿಧಾನವನ್ನು ತಿದ್ದುಪಡಿ ಮಾಡಿಸುತ್ತೇವೆ..., ಹತ್ತು ನಿಮಿಷ ಕಣ್ಣುಕಟ್ಟಿದರೇನೆ ಇರಲು ಸಾಧ್ಯವಾಗದವರಿಗೆ ಶತಶತಮಾನಗಳ ಕಾಲ ಕತ್ತಲ ಲೋಕದಲ್ಲಿದ್ದವರ ಬದುಕು ಹೇಗೆ ಅರ್ಥವಾಗಬೇಕು? ಒಮ್ಮೆ ದಯವಿಟ್ಟು ಅನ್ಯಥಾ ಭಾವಿಸದೆ ಆತ್ಮಾವಲೋಕನ ಮಾಡಿಕೊಳ್ಳಿ.

ಯಾವುದೇ ಚಾರಿತ್ರಿಕ ಹಿನ್ನೆಲೆಗಳನ್ನು, ಕಟುವಾಸ್ತವಗಳನ್ನು ಅರಿಯದೆ ಯಾರದೋ ಶ್ರಮವನ್ನು ತಿನ್ನುತ್ತಾ ತೇಗುತ್ತಾ ಸುಮ್ಮನೆ ಕೂತು ವಿರೋಧಿಸಬಾರದು. ಬೀಸು ಹೇಳಿಕೆಗಳನ್ನು ನೀಡಬಾರದು.

ಈ ದೇಶದ ರಾಷ್ಟ್ರಗ್ರಂಥ ಸಂವಿಧಾನವೊಂದೇ, ಸಂವಿಧಾನದ ಆಶಯಗಳಿಗೆ ವಿರೋಧ ವ್ಯಕ್ತಪಡಿಸುವವನು ದೇಶದಲ್ಲಿ ರಾಷ್ಟ್ರೀಯವಾದಿಯಾಗಿ ಇರಲಾರ.... ಅಂಥವನನ್ನು ರಾಷ್ಟ್ರಪ್ರೇಮಿ ಎಂದು ಕರೆಯಲು ಸಾಧ್ಯವಿಲ್ಲ....

**ಡಾ॥ ಸಿ. ಎಸ್. ದ್ವಾರಕಾನಾಥ್**
ನಂ. ೧೨೦೩/೨, 'ಚೊಕ್ಕಮನೆ', ೧೯ನೇ ಮುಖ್ಯರಸ್ತೆ, 'ಎ' ಬ್ಲಾಕ್ ಸಹಕಾರನಗರ
ಬೆಂಗಳೂರು – ೫೬೦ ೦೯೨

# ಅಭಿವೃದ್ಧಿಯ ಸುಳಿಯಲ್ಲಿ ಚಂಬಲ್ ಕಮರಿಗಳು

ಡಾ॥ ಹೆಚ್. ಆರ್. ಕೃಷ್ಣಮೂರ್ತಿ

ಉತ್ತರ ಭಾರತದ ಕಡೆಗೆ ಚಲಿಸುವ ರೈಲುಗಳು ಭೋಪಾಲ್, ಝಾನ್ಸಿ, ಗ್ವಾಲಿಯರ್ ನಿಲ್ದಾಣಗಳನ್ನು ದಾಟಿ ಮುಂದೆ ಸಾಗುತ್ತಿದ್ದಂತೆ ಎರಡೂ ಕಡೆಯ ಭೂದೃಶ್ಯಗಳು ಎದ್ದುಕಾಣುವಂತೆ ಬದಲಾಗುತ್ತ ಹೋಗುತ್ತವೆ. ಮೊರ್ನಿಯಾ, ಶ್ಯೋಪೊರ್, ಭಿಂಡ ಜಿಲ್ಲೆಗಳನ್ನು ಪ್ರವೇಶಿಸುತ್ತಿದ್ದಂತೆ ದುರ್ಗಮವಾದ ಬೆಟ್ಟ–ಗುಡ್ಡ, ಕಣಿವೆ–ಕಂದರ, ಕಮರಿ–ಕೊರಕಲುಗಳ ದಿಗ್ಭ್ರಮೆ ಹಿಡಿಸುವ ದೃಶ್ಯ ಎದುರಾಗುತ್ತದೆ. ಹಸಿರು ಅಪರೂಪವಾಗಿ, ನೀರಿನ ಪಸೆ ಆರಿ, ಪೊದೆ–ಹೊದರುಗಳ, ಏರಿಳಿಯುವ ಹಳ್ಳ–ಕೊಳ್ಳಗಳ, ಧೂಳೆಬ್ಬಿಸುವ ನೆಲ ಸಾಮಾನ್ಯವಾಗುತ್ತದೆ. ಹಳಿಯ ಎರಡೂ ಬದಿಗಳಲ್ಲಿ ಕಣ್ಣು ಹಾಯಿಸಿದಷ್ಟೂ ದೂರ ಕಾಣುವ ಈ ಕಮರಿ–ಕಂದರಗಳ ಪ್ರದೇಶದಲ್ಲಿ ರೈಲುಗಾಡಿ ಹಾದುಹೋಗುವಾಗ, ೫೦–೬೦ರ ದಶಕಗಳಲ್ಲಿ ರೈಲುಗಾಡಿಗಳ ಕಿಟಕಿ–ಬಾಗಿಲುಗಳನ್ನು ಹೆದರಿಕೆಯಿಂದ ಭದ್ರವಾಗಿ ಮುಚ್ಚಲಾಗುತ್ತಿತ್ತು. ಈ ಭಯಕ್ಕೆ ಕಾರಣ ಅದು ಚಲಿಸುತ್ತಿದ್ದ ಪ್ರದೇಶ! ಅದೇ ಕುಖ್ಯಾತ 'ಚಂಬಲ್' ಕಣಿವೆ, ಕಮರಿಗಳು!

'ಚಂಬಲ್' ಹೆಸರು ಕೇಳಿದ ಕೂಡಲೇ ನಮ್ಮ ಕಣ್ಣಮುಂದೆ ಮೂಡುವ ಚಿತ್ರ ಭಯಂಕರವಾದ ಡಕಾಯಿತರರದು; ೧೯೪೦ರಿಂದ ೧೯೭೦ರವರೆಗೆ ರಾಜಸ್ಥಾನ, ಉತ್ತರಪ್ರದೇಶ, ಮಧ್ಯಪ್ರದೇಶಗಳ ಗ್ರಾಮಾಂತರ ಪ್ರದೇಶದ ಶ್ರೀಮಂತ ಜಮೀನ್ದಾರರ ಪಾಲಿಗೆ ಸಿಂಹಸ್ವಪ್ನವಾಗಿದ್ದ ಮಲ್ಕಾನ ಸಿಂಗ್, ಮಾನಸಿಂಗ, ಪಾನಸಿಂಗ ತೋಮಾರ್, ಫೂಲನ್‌ದೇವಿ, ಪುತ್ಲಿಬಾಯಿ ಮುಂತಾದವರದು. ೩೦ ವರ್ಷಗಳ ಅವಧಿಯಲ್ಲಿ ನೂರಾರು ಕೊಲೆ, ಸುಲಿಗೆ, ದರೋಡೆ, ಅಪಹರಣ, ಲೂಟಿ ಮುಂತಾದ ಕೃತ್ಯಗಳನ್ನು ಎಸಗಿದ್ದ ಈ ಡಕಾಯಿತರ ಅಡಗುತಾಣಗಳಿದ್ದುದು ಚಂಬಲ್ ಕಣಿವೆಯಲ್ಲಿ. ಬಹಳ ವರ್ಷಗಳ ಕಾಲ ನಿರಂತರವಾಗಿ ನಡೆದ ಪೊಲೀಸ್ ಕಾರ್ಯಾಚರಣೆ, ಆಚಾರ್ಯ ವಿನೋಬಾ ಭಾವೆ ಮತ್ತು ಜಯಪ್ರಕಾಶ ನಾರಾಯಣ್ ಅವರುಗಳ ಮನವೊಲಿಕೆ ಪ್ರಯತ್ನಗಳಿಂದ ೮೦ರ ದಶಕದ ಪ್ರಾರಂಭದ ವೇಳೆಗೆ ಚಂಬಲ್ ಕಣಿವೆ ಡಕಾಯಿತರ ಹಾವಳಿಯಿಂದ ಮುಕ್ತವಾಯಿತು. ಆದರೆ 'ಭಾರತದ ಕೆಟ್ಟ ನೆಲ' (ಬ್ಯಾಡ್ ಲ್ಯಾಂಡ್ ಆಫ್ ಇಂಡಿಯಾ) ಎಂಬ ಅಪಖ್ಯಾತಿ ಮಾತ್ರ ಹಾಗೆಯೇ ಮುಂದುವರಿಯಿತು. ಇದೀಗ ಚಂಬಲ್ ಕಣಿವೆಯಲ್ಲಿ ಅಭಿವೃದ್ಧಿಯ ಹೊಸಯುಗ ಪ್ರಾರಂಭವಾಗಿದೆ!

ಚಂಬಲ್ ಕಣಿವೆ ಕುಖ್ಯಾತ ಪ್ರದೇಶವಾದರೂ, ಅದು ಭಾರತದ ಭೂವೈಜ್ಞಾನಿಕ ವಿಸ್ಮಯಗಳ ಪಟ್ಟಿಯಲ್ಲಿನ ಮುಖ್ಯ ಹೆಸರೂ ಹೌದು. ಇದಕ್ಕೆ ಕಾರಣ ಅಲ್ಲಿರುವ 'ಕಮರಿ'ಗಳು (ರೇವಿನ್ಸ್). ಭೂವಿಜ್ಞಾನದಲ್ಲಿ ಈ 'ಕಮರಿ'ಗಳನ್ನು 'ಹರಿದುಬರುವ ನದಿಯ ನೀರಿನ ರಭಸದಿಂದ ಉಂಟಾಗುವ ಆಳವಾದ, ಕಿರಿದಾದ ಕೊರಕಲು'ಗಳೆಂದು ವಿವರಿಸಲಾಗುತ್ತದೆ. ಈ ಕಮರಿಗಳು ಕಣಿವೆಗಿಂತ ಚಿಕ್ಕವೂ ಕಂದರಗಳಿಗಿಂತ ದೊಡ್ಡವೂ ಆಗಿರುತ್ತವೆ. ನಮ್ಮ ದೇಶದ ಭೂಭಾಗದಲ್ಲಿ ೩.೯೭ ದಶಲಕ್ಷ ಹೆಕ್ಟೇರುಗಳಷ್ಟು ವಿಶಾಲವಾದ ಪ್ರದೇಶದಲ್ಲಿ ಇಂಥ ಕಮರಿಗಳಿವೆ. ಉತ್ತರಪ್ರದೇಶ, ಮಧ್ಯಪ್ರದೇಶ, ರಾಜಾಸ್ಥಾನ ಮತ್ತು ಗುಜರಾತಗಳಲ್ಲಿರುವ ಕಮರಿಗಳ ಒಟ್ಟು ವಿಸ್ತೀರ್ಣ ೨.೭ ದಶಲಕ್ಷ ಹೆಕ್ಟೇರುಗಳು. ಆದರೆ ಚಂಬಲ್ ಕಣಿವೆಯ ಕಮರಿಗಳ ವೈಶಿಷ್ಟ್ಯವೆಂದರೆ ಅವುಗಳ ಆಳ ಮತ್ತು ವ್ಯಾಪ್ತಿ. ಸುಮಾರು ೩೦ ಮೀಟರುಗಳಷ್ಟು ಆಳದ ಕಮರಿಗಳು ನಮ್ಮ ದೇಶದ ಬೇರೆ ಭಾಗಗಳಲ್ಲಿಲ್ಲ. ಕಮರಿಯ ಆಳದಿಂದ ನೇರಕ್ಕೆ ಎತ್ತರವಾಗಿ ನಿಂತ ಕಡಿದಾದ ಮಣ್ಣಿನ ಗೋಡೆಗಳು ಅಭೇದ್ಯ ಕೋಟೆಯಂತೆ ಕಾಣಿಸುತ್ತವೆ.

ಮಧ್ಯಪ್ರದೇಶದ ಸರ್ಕಾರ ೬೮,೮೩೩ ಹೆಕ್ಟೇರುಗಳಷ್ಟು ಪ್ರದೇಶದಲ್ಲಿ ಹರಡಿರುವ ಚಂಬಲ್ ಕಣಿವೆಯ ಪ್ರದೇಶವನ್ನು 'ಬೀಳು ಭೂಮಿ'ಯೆಂದು ವರ್ಗೀಕರಿಸಿದೆ. ಈ ಕಮರಿಗಳಿಗೆ ಸಂಬಂಧಿಸಿದಂತೆ ನಡೆದಿರುವ ವೈಜ್ಞಾನಿಕ ಅಧ್ಯಯನ, ಈ ಕಮರಿಗಳು ಪ್ರತಿವರ್ಷ ಶೇ. ೯.೫ರ ಪ್ರಮಾಣದಲ್ಲಿ ವಿಸ್ತರಿಸುತ್ತಿದ್ದು, ೮೦೦೦ ಹೆಕ್ಟೇರುಗಳಷ್ಟು ಭೂಮಿ ಕಮರಿಗಳಿಗೆ ಬಲಿಯಾಗಿ, ೬೫ ಟನ್‌ಗಳಷ್ಟು ಮೇಲ್ಮಣ್ಣು ನಾಶವಾಗುತ್ತಿದೆಯೆಂಬುದನ್ನು ತಿಳಿಸಿದೆ. ಉತ್ಪಾದನೆಯೇ ಇಲ್ಲದ ವಿಸ್ತಾರವಾದ ಕಮರಿಗಳು, ಅವು ವಿಸ್ತರಿಸಿದಂತೆ ನಾಶವಾಗುತ್ತಿರುವ ಕೃಷಿಭೂಮಿ ಮತ್ತು ಏರುತ್ತಿರುವ ಭೂಮಿಯ ಬೆಲೆಯ ಹಿನ್ನೆಲೆಯಲ್ಲಿ ಮಧ್ಯಪ್ರದೇಶ ಸರ್ಕಾರ ಮಹತ್ವಾಕಾಂಕ್ಷೆಯ ಯೋಜನೆಯನ್ನು ಪ್ರಾರಂಭಿಸಿದೆ.

'ಚಂಬಲ್ ಕಮರಿಗಳ ಪುನರುಜ್ಜೀವನ' ಎಂಬ ಹೆಸರಿನ ಈ ಯೋಜನೆಯ ಮುಖ್ಯ ಉದ್ದೇಶ ಈ ವಿಸ್ತಾರವಾದ ಪ್ರದೇಶವನ್ನು ಕೃಷಿಭೂಮಿಯನ್ನಾಗಿ ಪರಿವರ್ತಿಸುವುದು. ಇದಕ್ಕಾಗಿ ಚಂಬಲ್ ಕಣಿವೆಯಲ್ಲಿನ ದಿಣ್ಣೆ, ದಿಬ್ಬ, ಸಣ್ಣ ಗುಡ್ಡಗಳನ್ನು ಬುಲ್‌ಡೋಜ಼ರ್ ಹಾಗೂ ಜೆಸಿಬಿಗಳನ್ನು ಬಳಸಿ ಕೆಡವಿ, ಆ





*ಚಂಬಲ್ ನದಿಯ ಒಂದು ನೋಟ*

ಮಣ್ಣನ್ನು ಕಮರಿಗಳಲ್ಲಿ ತುಂಬಿ ನೆಲವನ್ನು ಮಟ್ಟಸ ಮಾಡಲಾಗುತ್ತದೆ. ಮೊದಲ ಹಂತದಲ್ಲಿ ಚಂಬಲ್ ಕಣಿವೆಯ ಚಂಬಲ್, ಕಾಲಿಸಿಂಧ ಬೆಟ್ಟ ಮತ್ತು ಕ್ವಾರಿ ನದಿಗಳ ಅಕ್ಕಪಕ್ಕಗಳಲ್ಲಿ ೧೮೦೦೦ ಹೆಕ್ಟೇರ್ ವಿಸ್ತೀರ್ಣದ ಕಮರಿಗಳನ್ನು ಮಟ್ಟಸ ಮಾಡಲಾಗುತ್ತದೆ. ಹೆಕ್ಟೇರೊಂದಕ್ಕೆ ಒಂದು ಲಕ್ಷ ರೂ. ವೆಚ್ಚದಲ್ಲಿ ಹೀಗೆ ಮಟ್ಟಸ ಮಾಡಿದ ನೆಲದಲ್ಲಿ ೧೬೫೦ ಜಿನುಗು ಕೆರೆಗಳನ್ನು ನಿರ್ಮಿಸಲಾಗುತ್ತದೆ. ಅರಣ್ಯ, ಭೂಸಂಪನ್ಮೂಲ, ಕೃಷಿ, ತೋಟಗಾರಿಕೆ ಮತ್ತು ಪಶುಸಂಗೋಪನಾ ಇಲಾಖೆಗಳು ಒಟ್ಟುಗೂಡಿ ಕಾರ್ಯಗತ ಮಾಡಲಿರುವ ಈ ಯೋಜನೆಯ ಒಟ್ಟು ವೆಚ್ಚ ೧,೧೦೦ ಕೋಟಿ ರೂ.ಗಳು. ಕೇಂದ್ರ ಸರ್ಕಾರ ಮತ್ತು ವಿಶ್ವಬ್ಯಾಂಕ್‌ನಿಂದ ನೆರವು ಕೇಳಿರುವ ಮಧ್ಯಪ್ರದೇಶ ಸರಕಾರ, ಮಧ್ಯಪ್ರದೇಶದ ಕೈಗಾರಿಕೋದ್ಯಮಿಗಳು, ಸ್ಥಳೀಯ ರೈತ ಸಂಘಟನೆಗಳಿಂದಲೂ ಮುಂಗಡ ಪಡೆಯಲಿದ್ದು, ಪಡೆದ ಮೊತ್ತಕ್ಕೆ ಅನುಗುಣವಾಗಿ ಭೂಮಿಯನ್ನು ಅವರಿಗೆ ನೀಡುವ ಅವಕಾಶವೂ ಆಶ್ವಾಸನೆಯೂ ಯೋಜನೆಯಲ್ಲಿದೆ. ಕೇಂದ್ರ ಸರ್ಕಾರ, ವಿಶ್ವ ಬ್ಯಾಂಕ್‌ಗಳಿಂದ ಹಣ ದೊರೆಯುವ ಮುನ್ನವೇ ೨೦೧೫ರ ಜನವರಿಯಲ್ಲಿ ಈ ಯೋಜನೆ ಪ್ರಾರಂಭಿಸಿದರೂ, ಇಂದಿಗೂ ಅದಕ್ಕೊಂದು ನಿಶ್ಚಿತ ರೂಪ ಬಂದಿಲ್ಲ.

ಚಂಬಲ್ ಕಮರಿಗಳ ಪುನರುಜ್ಜೀವನ ಯೋಜನೆ ಕಾಗದದ ಮೇಲೆ ಪರಿಣಾಮಕಾರಿಯಾಗಿ ಕಂಡರೂ, ಯೋಜನೆಯ ಪ್ರಸ್ತಾಪದಲ್ಲಿ ಸ್ಪಷ್ಟ ಉತ್ತರ ದೊರೆಯದ ಅನೇಕ ಸಮಸ್ಯೆಗಳಿವೆ. ಹಾಗೆ ನೋಡಿದರೆ ಈ ಪ್ರಯತ್ನ ಮೊದಲನೆಯದೇನೂ ಅಲ್ಲ. ೧೯೬೦ರಿಂದಲೇ ಕೇಂದ್ರ ಸರಕಾರ ಇಂಥ ಪ್ರಯತ್ನ ಮಾಡಿದೆ. ೧೯೭೧ರಲ್ಲಿ ರಾಜಸ್ಥಾನ, ಮಧ್ಯಪ್ರದೇಶ ಮತ್ತು ಉತ್ತರಪ್ರದೇಶಗಳ ೮೦,೦೦೦ ಹೆಕ್ಟೇರ್ ಪ್ರದೇಶದ ಕಮರಿಗಳನ್ನು ಕೃಷಿಭೂಮಿಯನ್ನಾಗಿ ಪರಿವರ್ತಿಸುವ ಪ್ರಯತ್ನ ಪ್ರಾರಂಭವಾಯಿತು. ನಾಲ್ಕು ಹಂತಗಳಲ್ಲಿ, ೨೭ ವರ್ಷಗಳ ಅವಧಿಯಲ್ಲಿ ಕಾರ್ಯಗತವಾಗಬೇಕಿದ್ದ ಈ ಯೋಜನೆಯ ಅಂದಿನ ವೆಚ್ಚ ೧೨೫೦ ಕೋಟಿ ರೂ.ಗಳು. ಆದರೆ ಇದರಲ್ಲಿ ೨೫ ವರ್ಷಗಳ ಅವಧಿಯಲ್ಲಿ ಕೃಷಿಭೂಮಿಯಾಗಿ ಪರಿವರ್ತನೆಗೊಂಡ ಕಮರಿಗಳ ವಿಸ್ತೀರ್ಣ ೨೦೦೦ ಹೆಕ್ಟೇರ್ ಮಾತ್ರ! ಯೋಜನೆ ಎದುರಿಸಿದ ಬಹು ದೊಡ್ಡ ಸಮಸ್ಯೆಯೆಂದರೆ ಯಾವ ಆಧುನಿಕ ಜೆಸಿಬಿಗೂ ಬಗ್ಗದ ಕಾಂಕ್ರೀಟ್‌ನಂತಹ ಗಟ್ಟಿ ಗುಡ್ಡಗಳು. ಪರಿವರ್ತಿತ ಕೃಷಿಭೂಮಿಯನ್ನು ರೈತರಿಗೆ, ಕೈಗಾರಿಕೋದ್ಯಮಿಗಳಿಗೆ ಹಂಚುವ ವಿಷಯವೂ ಕಗ್ಗಂಟಾಯಿತು. ೧೯೮೦ ಮತ್ತು ೧೯೯೦ರಲ್ಲಿ ಕಮರಿಗಳ ವಿಶಾಲ ಪ್ರದೇಶದಲ್ಲಿ ವಿಮಾನಗಳ ಮೂಲಕ ಗೊಬ್ಬಳಿ, ಬಳ್ಳಾರಿ ಜಾಲಿ, ಕಾಡು ನೇರಳೆ ಮುಂತಾದ ಬಂಜರು ಭೂಮಿಗೆ ಸೂಕ್ತವಾದ ಸಸ್ಯಗಳ ಬೀಜಗಳನ್ನು ಸಿಂಪಡಿಸಲಾಯಿತು. ಆದರೆ ಈ ಪ್ರಯತ್ನದಲ್ಲಿ ಗುರಿತಪ್ಪಿ ರೈತರ ಜಮೀನಿಗೆ ಬಿದ್ದ ಬೀಜಗಳು ಅಲ್ಲಿಯೇ ತಳವೂರಿ ಬೆಳೆದು ಮರಗಳಾಗಿವೆ. ಅವುಗಳನ್ನು ಅಲ್ಲಿಂದ ತೆಗೆಯುವುದೇ ದೊಡ್ಡ ಸಮಸ್ಯೆಯಾಗಿದೆ. ಆಳವಾದ ಕಮರಿಗಳು ವಿಸ್ತಾರಗೊಂಡು ಕೃಷಿಭೂಮಿಯನ್ನು ಕಬಳಿಸುವುದನ್ನು ತಡೆಯಲು

ಕಳೆದ ೫೦ ವರ್ಷಗಳಿಂದ ನಡೆದಿರುವ ಪ್ರಯತ್ನಗಳು ಯಶಸ್ವಿಯಾಗಿಲ್ಲ.

ಮಧ್ಯಪ್ರದೇಶ ಸರ್ಕಾರದ ಈ ಮಹತ್ವದ ಯೋಜನೆಗೆ ಪರಿಸರ ವಿಜ್ಞಾನಿಗಳ ಬೆಂಬಲ ದೊರೆತಿಲ್ಲ. ಹೊರನೋಟಕ್ಕೆ ಈ ಪ್ರದೇಶ ಬರಡು ಭೂಮಿಯಂತೆ ಕಂಡರೂ ಅಲ್ಲಿ ಆ ಪರಿಸರಕ್ಕೆ ಹೊಂದಿಕೊಂಡ ಜೀವ ಪ್ರಪಂಚವಿದೆ. ಅಲ್ಲಿನ ದುರ್ಗಮ ಗುಡ್ಡ, ಕಮರಿ, ಮುಳ್ಳು ಪ್ರದೇಶಗಳು ಹಾಗೂ ನದೀ ತೀರಗಳಲ್ಲಿ ವೈವಿಧ್ಯಮಯವಾದ ವನ್ಯಜೀವಿಗಳನ್ನು ಗುರುತಿಸಲಾಗಿದೆ. ಚಂಬಲ್ ನದಿ ಮೊಸಳೆ, ಘರಿಯಾಲ್, ಡಾಲ್ಫಿನ್ ಹಾಗೂ ಆಮೆಗಳ ಆವಾಸವೂ ಹೌದು. ಸ್ಥಳೀಯ ಹಾಗೂ ವಲಸೆಬರುವ ೩೨೦ ಪಕ್ಷಿಪ್ರಭೇದಗಳನ್ನು ಇಲ್ಲಿ ಗುರುತಿಸಲಾಗಿದೆ. ಅಭಿವೃದ್ಧಿಯ ಹೆಸರಿನಲ್ಲಿ ಚಂಬಲ್ ಕಣಿವೆಯಲ್ಲಿ ಪ್ರವೇಶಿಸಿರುವ ಜೆಸಿಬಿ, ಬುಲ್‌ಡೋಜರ್, ಲಾರಿ, ಟ್ರಾಕ್ಟರ್‌ಗಳಿಂದ ಮೊಸಳೆ, ಆಮೆ, ಘರಿಯಾಲಗಳ ಸಂತಾನೋತ್ಪತ್ತಿಯ ತಾಣಗಳಿಗೆ ಧಕ್ಕೆಯಾಗುತ್ತಿದೆ. ಚಂಬಲ್ ಕಣಿವೆಯ ನೀರಿನಾಶ್ರಯವಾದ ಚಂಬಲ್ ನದಿಗೆ ಅಲ್ಲಲ್ಲಿ ಸಣ್ಣ ಕಟ್ಟೆಗಳನ್ನು ಕಟ್ಟಿ ನೀರನ್ನು ಕೃಷಿ ಚಟುವಟಿಕೆಗಳಿಗೆ ಬಳಸಲು ಪ್ರಾರಂಭಿಸಿರುವುದರಿಂದ ಹರಿಯುವ ನೀರಿನ ಪ್ರಮಾಣ ಇಳಿದು, ಜಲಮಾಲಿನ್ಯ ಹೆಚ್ಚುತ್ತಿದೆ.

ಚಂಬಲ್ ಕಣಿವೆಯಲ್ಲಿ ಕಮರಿಗಳನ್ನು ಮುಚ್ಚುವ ಕೆಲಸ ಪ್ರಾರಂಭವಾಗಿದೆ. ಆದರೆ ಯಾವ ಪ್ರದೇಶದ ದಿಬ್ಬ, ದಿಣ್ಣೆಗಳನ್ನು ಮಟ್ಟಸಗೊಳಿಸಬೇಕೋ ಅಂತಹ ಪ್ರದೇಶದ 'ಡಿಜಿಟಲ್ ಎಲಿವೇಶನ್ ನಕ್ಷೆ' ಮಾತ್ರ ಸಿದ್ಧವಾಗಿಲ್ಲ. ಹಳ್ಳಿಗಳಿಗೆ ಸಮೀಪವಾಗಿ, ತೀರಾ ಕಡಿದಾದ ಇಳಿಜಾರು ಇಲ್ಲದ ಕಮರಿಗಳನ್ನು ಪ್ರಯತ್ನಪಟ್ಟು ಮುಚ್ಚಬಹುದು; ನೆಲವನ್ನು ಮಟ್ಟಸ ಗೊಳಿಸಬಹುದು. ಈ ದೃಷ್ಟಿಯಿಂದ ಗರಿಷ್ಠ ಶೇ. ೨೫ರಷ್ಟು ಕಮರಿಗಳನ್ನು ಮಾತ್ರ ಪುನರುಜ್ಜೀವನ ಗೊಳಿಸಬಹುದು. ಇಷ್ಟೆಲ್ಲ ಆದ ನಂತರವೂ ಪರಿವರ್ತನೆಗೊಂಡ ಭೂಮಿಯಲ್ಲಿ ಕೃಷಿ ಮಾಡಲು ಬೇಕಾದ ನೀರು ಎಲ್ಲಿಂದ ಬರುತ್ತದೆ ಎಂಬ ಪ್ರಶ್ನೆಗೆ ಉತ್ತರವಿಲ್ಲ. ಇದರ ಜೊತೆಗೆ ಕಮರಿಗಳನ್ನು ಮುಚ್ಚುವ ಪ್ರಯತ್ನದಲ್ಲಿ ಮೇಲ್ಮಣ್ಣು ಸಡಿಲಗೊಂಡು, ಶೀಘ್ರಗತಿಯಲ್ಲಿ ಕೊರೆತಕ್ಕೆ ಒಳಗಾಗಿ, ಕೊರಕಲುಗಳು ಹೆಚ್ಚಾಗುತ್ತಿವೆ : ಆದರೆ ಪರಿಸರ ವಿಜ್ಞಾನಿಗಳ ಅಭಿಪ್ರಾಯವಾಗಲೀ, ಇನ್ನಿತರ ಸ್ಥಳೀಯವಾಗಿ ಕಂಡುಬರುತ್ತಿರುವ ಸಮಸ್ಯೆಗಳಾಗಲೀ ಸರ್ಕಾರವನ್ನು ಯೋಚಿಸುವಂತೆ ಮಾಡಿಲ್ಲ. ಚಂಬಲ್ ಕಣಿವೆಯಲ್ಲಿ ವಿರಳವಾಗಿ ಅಲ್ಲಲ್ಲಿ ವಾಸವಾಗಿರುವ ಜನರಂತೂ ಈ ಮಾತುಗಳನ್ನು ಸುತರಾಂ ಕೇಳುವ ಸ್ಥಿತಿಯಲ್ಲಿಲ್ಲ. ಸಾಧ್ಯವಾದ ಕಡೆಗಳಲ್ಲಿ ಜನ ತಾವಾಗಿಯೇ ಮುಂದಾಗಿ ಗುಡ್ಡಗಳನ್ನು ಕಡಿದು, ಕಮರಿಗಳನ್ನು ಮುಚ್ಚಿ, ಕೃಷಿಭೂಮಿಯನ್ನಾಗಿ ಪರಿವರ್ತಿಸಿ ಅವುಗಳ ಮೇಲೆ ತಮ್ಮ ಹಕ್ಕನ್ನು ಸ್ಥಾಪಿಸಹೊರಟಿದ್ದಾರೆ : ಆದರೆ ಇಲ್ಲಿ ಮತ್ತೊಂದು ಸಮಸ್ಯೆಯಿದೆ. ಕಮರಿಗಳನ್ನು ಮಟ್ಟಸ ಮಾಡಲು ಬೇಕಾದ ಜೆಸಿಬಿಗಳ ಬಾಡಿಗೆ ಬಹು ದುಬಾರಿ; ಗಂಟೆಯೊಂದಕ್ಕೆ ೧೦೦೦ ದಿಂದ ೧೨೦೦ ರೂ.ಗಳು. ಇದರೊಡನೆ ಮಟ್ಟಸ ಮಾಡಿದ ಕೃಷಿಭೂಮಿಯ ನಿರ್ವಹಣೆಯನ್ನು ವರ್ಷವಿಡೀ ಮಾಡಬೇಕು. ಹೀಗಾಗಿ ಶ್ರೀಮಂತ ಜಮೀನ್ದಾರರು ಮಾತ್ರ ಈ ದಂಧೆಯಲ್ಲಿ ತೊಡಗಿದ್ದಾರೆ. ಚಂಬಲ್ ಪ್ರದೇಶದ ಬಡಕುಟುಂಬಗಳಿಗೆ ಇಲ್ಲಿ ಪ್ರವೇಶವೇ ಇಲ್ಲ.

### ಆಸರೆ

ಮಗಳು ಹುಟ್ಟಿದಳೆಂದು
ವೇದನೆ ಪಟ್ಟ ಅಪ್ಪನ
ದುಃಖ
ಕರಗಿಹೋಯಿತು
ಮಗನು ಕೈಬಿಟ್ಟಾಗ
ಮಗಳು ಕೈಹಿಡಿದು
ಕಣ್ಣೀರಿಟ್ಟಾಗ

**ಶ್ರೀನಿವಾಸ ಕುಂಡಂತಾಯ**
ಬೆಂಗಳೂರು – ೫೬೦ ೦೯೪

# ಆಲೆಮನೆ...




ನಿತ್ಯ ಗಾಣದ ಬದುಕು...
ಗಟ್ಟಿ ಉಕ್ಕಿನ ಮಧ್ಯೆ ಕಬ್ಬು ಸಿಕ್ಕಿ
ವಿಲವಿಲನೆ ನಲುಗಿ, ಪರಿತಪಿಸಿ,
ಬಡವಾಗಿ, ಬೆಂದು ಸಿಹಿ ನೀಡುತ್ತಿದೆ.

ಕಷ್ಟಗಳೊಂದೇ, ಎರಡೇ... ಲೆಕ್ಕವಿಲ್ಲ !
ಎಲ್ಲದ್ದಕ್ಕೂ ಅವನ ಅನುಮತಿ...
ಸ್ವಾತಂತ್ರ್ಯ ಎಂಬುದು ಬರೀ ಭ್ರಾಂತಿ
ಕಬ್ಬು ಹಿಂಡಿ ಹಿಪ್ಪೆಯಾಗುತ್ತಿದೆ
ಸಿಹಿ ಮಾತ್ರ ಇನ್ನಾರದ್ದೋ ಪಾಲಾಗಿದೆ

ಬೀದಿಯಲ್ಲಿ ನಿಂತರೆ ಕಾಮುಕರ ಕಣ್ಣು
ಮನೆಯಲ್ಲೋ ಅಪ್ಪ , ಅಣ್ಣ , ಗಂಡನ ಕೆಂಗಣ್ಣು
ಹದ್ದು ಮೀರದಂತೆ ಕಟ್ಟಪ್ಪಣೆಯಾಗಿದೆ
ಅವನು ಎಲ್ಲರ ಕಣ್ಣಿಗೆ ಉಕ್ಕಿನ ಮನುಷ್ಯ !
ಇವಳು ಕೇವಲ ಕಬ್ಬು, ತಿಪ್ಪೆ ಸೇರಲೂ ಇಲ್ಲವೆಂಬು.

ಸಹನಾಮೂರ್ತಿಯ ಪ್ರತಿಮೆ ಮಾಡಿ
ನಿತ್ಯ ಪೂಜಿಸಿದರೂ ಫಲವಿಲ್ಲ
ಸೂರ್ಯ ಕಾಣುವ ಮುನ್ನ
ಅರಳಬೇಕು ಮುಖ, ಮನೆ, ಮಂದಿರಗಳೆಲ್ಲ.




**ಸೌಮ್ಯ ಕೆ. ಆರ್.**
ನಂ. ೧೩೪೨/೨, ೭ನೇ ಮುಖ್ಯರಸ್ತೆ
ಮುನೇಶ್ವರ ನಗರ, ಕದಿರೇನಹಳ್ಳಿ
ಬೆಂಗಳೂರು – ೫೬೦ ೦೬೧

ಕೊಂಚ ಎಚ್ಚರ ತಪ್ಪಿದರೂ...
ಗಂಡುಬೀರಿ ಬಿರುದು
ಮದುವೆಯ ಭವ ಬಂಧನದಲ್ಲಿ ಬಂಧಿಯಾಗಿ
ಅನುದಿನ ಸುರಿಸಬೇಕಿದೆ ಸೊರಗಿ ಸಿಹಿರಸ.

ನಿತ್ಯ ಗಾಣಕ್ಕೆ ಸಿಕ್ಕಿ ನಲುಗಿದರೂ
ಚಿಂತೆಯ ಹಂಗಿಲ್ಲ, ಎಲ್ಲರೂ ನಮ್ಮವರೇ...
ಎಲ್ಲವನ್ನೂ ಧಿಕ್ಕರಿಸಿ ರಸ್ತೆಗೆ ಬಂದರಂತೂ
ಮುಗಿದೇ ಹೋಯಿತು ! ಅಬ್ಬಾ...
ನೆನಸಿಕೊಳ್ಳುವುದಕ್ಕೂ ಭಯ
ಬೇಕೆ ಜಾರಿಣಿಯ ಪಟ್ಟ ?

ಬೀದಿಗೆ ಬಿದ್ದು ಕಂಡ ಗೂಳಿಗಳೆಲ್ಲ
ತಿಂದು ನಲುಗುವ ಬದಲು ಆ ಆಲೆಮನೆಯೇ ವಾಸಿ...

ಹೊರಗೆ ಹಪಹಪಿಸುವ ಸ್ನೇಹಿತ, ಶಿಕ್ಷಕ,
ಪಕ್ಕದ ಮನೆಯ ಅಂಕಲ್‌ಗಿಂತ
ಕೇವಲ ಕಟ್ಟುಪಾಡುಗಳ ಹಾಕಿ
ಹಿಂಡುವ ಆಲೆಮನೆಯೇ ನೂರು ಪಾಲು ವಾಸಿ...



*ಚಂಬಲ್ ನದಿಯಲ್ಲಿರುವ ಮೊಸಳೆ*




*ಚಂಬಲ್ ಕಣಿವೆ(ಕಮರಿ)ಗಳು*

ಈ ಅಭಿವೃದ್ಧಿ ಯೋಜನೆಯ ದೊಡ್ಡ ದುರಂತವೆಂದರೆ ಮುಕ್ತ ಬಳಕೆಗೆ ಅವಕಾಶವಿದ್ದ ಸ್ಥಳೀಯ ಸಮುದಾಯದ ಊರೊಟ್ಟಿನ ಸಂಪತ್ತು ಮಾಯವಾಗುತ್ತಿರುವುದು. ಚಂಬಲ್ ಕಣಿವೆಯ ಕಮರಿ–ಕೊರಕಲುಗಳಲ್ಲಿ ಬೆಳೆಯುತ್ತಿದ್ದ ಹುಲ್ಲು, ಸಣ್ಣ–ಪುಟ್ಟ ಗಿಡಗಳು, ಪೊದೆ–ಹೊದರುಗಳು ಸ್ಥಳೀಯರ ಜಾನುವಾರುಗಳಿಗೆ ವರ್ಷವಿಡೀ ಆಹಾರವನ್ನೊದಗಿಸುತ್ತಿತ್ತು. ಈ ಪ್ರದೇಶದಲ್ಲಿ ಜಾನುವಾರುಗಳನ್ನು ಮೇಯಿಸಲು ಯಾವುದೇ ನಿರ್ಬಂಧವಿರಲಿಲ್ಲ. ಆದರೆ ಈಗ ಮಟ್ಟಸಗೊಂಡ ಕಮರಿಗಳಲ್ಲಿನ ಎಲ್ಲ ಸಸ್ಯಪ್ರಭೇದಗಳೂ ನಾಶವಾಗುತ್ತಿವೆ. ಕೃಷಿಭೂಮಿಯಾಗಿ ಪರಿವರ್ತನೆಯಾದ ನಂತರ ಆವರಣಕ್ಕೆ ಬೇಲಿ ಬಂದಿದೆ. ದನಕರುಗಳಿಗೆ ಇಲ್ಲಿ ಮೇವಿಲ್ಲ. ಹೀಗಾಗಿ ಈ ಪ್ರದೇಶದಲ್ಲಿ ಜಾನುವಾರುಗಳ ಸಂಖ್ಯೆ ಇಳಿಯುತ್ತಿದೆ. ಮಳೆ ಆಧರಿತ ಕೃಷಿ ಮತ್ತು ಜಾನುವಾರಗಳ ನಡುವೆಯಿದ್ದ ಸಂಬಂಧ ಹದಗೆಡುತ್ತಿದೆ. ಚಂಬಲ್ ಪ್ರದೇಶದ ಬಡಕುಟುಂಬಗಳು ಮತ್ತೊಂದು ರೀತಿಯ ತೊಂದರೆಯನ್ನೂ ಎದುರಿಸುತ್ತಿವೆ. ಇಲ್ಲಿನ ಕಮರಿಗಳ ಪೊದೆ–ಹೊದರುಗಳಲ್ಲಿ, ಋತುಮಾನಕ್ಕನುಸಾರವಾಗಿ ಬಿಡುತ್ತಿದ್ದ ವಿವಿಧ ಹಣ್ಣುಗಳು ಸ್ಥಳೀಯ ಬಡಕುಟುಂಬಗಳಿಗೆ ಪೌಷ್ಟಿಕಾಂಶವನ್ನು ಒದಗಿಸುವುದರ ಜೊತೆಗೆ ಅಲ್ಪ–ಸ್ವಲ್ಪ ಆದಾಯವನ್ನೂ ತರುತ್ತಿತ್ತು. ಅದರ ಜೊತೆಗೆ ಉರುವಲು ಸೌದೆಯನ್ನೂ ಒದಗಿಸುತ್ತಿತ್ತು. ಆದರೆ ಈಗ ಬಡಕುಟುಂಬಗಳ ಜೀವನಾಧಾರವಾಗಿದ್ದ ಈ ಎಲ್ಲ ಸಂಪನ್ಮೂಲಗಳೂ ನಾಶವಾಗಿ ಅವರ ಬದುಕಿಗೆ ತೀವ್ರ ಹಾನಿಯಾಗುತ್ತಿದೆ. ಜೀವನೋಪಾಯಕ್ಕಿದ್ದ ಹಲವಾರು ಪರ್ಯಾಯಗಳು ಮಾಯವಾಗುತ್ತಿವೆ. "ಚಂಬಲ್ ಕಣಿವೆಯಲ್ಲಿನ ಅಭಿವೃದ್ಧಿ ಯೋಜನೆ ಇಲ್ಲಿನ ಅನನ್ಯವಾದ ಭೂವೈಜ್ಞಾನಿಕ ವಿಸ್ಮಯವನ್ನು ನಾಶಮಾಡಿ, ಸಾಮಾಜಿಕ ಸಾಮರಸ್ಯವನ್ನು ಕೆಡಿಸಿ, ಆರ್ಥಿಕ ಅಸಮಾನತೆಗಳಿಗೆ ದಾರಿಮಾಡಿ, ಸಂಘರ್ಷಣೆಗಳಿಗೆ ಕಾರಣವಾಗಿ, ಸ್ಥಳೀಯ ಬಡಕುಟುಂಬಗಳ ವಲಸೆಯನ್ನು ಪ್ರೇರೇಪಿಸುತ್ತಿದೆ" ಎಂದು, ಇದುವರೆವಿಗೂ ಈ ಅಭಿವೃದ್ಧಿ ಯೋಜನೆಗಳ ಅಧ್ಯಯನ ಮಾಡಿರುವ ಜವಹರಲಾಲ್ ನೆಹರೂ ವಿಶ್ವವಿದ್ಯಾಲಯ ಹಾಗೂ ಜಬ್ಬಲ್‌ಪುರ ಕೃಷಿ ವಿಶ್ವವಿದ್ಯಾಲಯದ ವಿಜ್ಞಾನಿಗಳು, ಸಂಶೋಧಕರು ತಿಳಿಸಿದ್ದಾರೆ.

ಈ ಎಲ್ಲ ವಿರೋಧಾಭಾಸಗಳ ನಡುವೆಯೇ ಕೆಲವು ಸ್ಥಳೀಯ ರೈತ ಸಂಘಟನೆಗಳು, ಯೋಜನೆ ಯಶಸ್ವಿಯಾಗಬೇಕಾದರೆ ಮಾಡಬೇಕಾದುದೇನು ಎಂಬುದನ್ನು ಸ್ಪಷ್ಟವಾಗಿ ತೋರಿಸಿಕೊಟ್ಟಿವೆ. ಮೊರೈನಾ ಜಿಲ್ಲೆಯ ಜಬ್ರೋಲ್ ಗ್ರಾಮದ ರೈತರು, ಕೃಷಿ ಭೂಮಿಯನ್ನು ಕಬಳಿಸುತ್ತಿರುವ ವಿಸ್ತರಿಸುತ್ತಿರುವ ಕಮರಿಗಳನ್ನು ತಡೆಯಲು ಮೂರು ಮೀಟರ್ ಎತ್ತರದ ಮಣ್ಣಿನ ಗೋಡೆಯನ್ನು ನಿರ್ಮಿಸಿದ್ದಾರೆ. ಇಂಥ ತಡೆಗೋಡೆಯ ಆಯುಸ್ಸು ಕೇವಲ ಒಂದು ವರ್ಷವೆನ್ನುವುದು ಪರಿಣತರ ಅಭಿಪ್ರಾಯವಾಗಿದ್ದರೂ, ಸರಿಯಾದ ನಿರ್ವಹಣೆಯಿಂದ ನಾಲ್ಕು ವರ್ಷಗಳ ನಂತರವೂ ಭದ್ರವಾಗಿ ನಿಂತು ಕಮರಿಗಳ ವಿಸ್ತರಣೆಗೆ ತಡೆಹಾಕಿದೆ. ಇದೇ ರೀತಿ ಭಿಂಡ್ವಾ ಗ್ರಾಮದಲ್ಲಿ ಸ್ಥಳೀಯರು ನಿರ್ಮಿಸಿರುವ ೧೦೦ ಮೀಟರುಗಳ ಉದ್ದದ ತಡೆಗೋಡೆ, ಮಳೆಗಾಲದಲ್ಲಿ ನೀರಿನೊಡನೆ ಕೊಚ್ಚಿ ಬಂದ ಮಣ್ಣನ್ನು ಅಕ್ಕಪಕ್ಕದ ಕಮರಿಗಳಿಗೆ ಸೇರಿಸುತ್ತಿದೆ. ಇದರ ಫಲವಾಗಿ ಕಳೆದ ೫ ವರ್ಷಗಳ ಅವಧಿಯಲ್ಲಿ ಹಳ್ಳಿಯ ಸುತ್ತಲಿನ ಗುಡ್ಡಗಳ ಎತ್ತರ ಕಡಿಮೆಯಾಗಿ, ಕಮರಿಗಳು ತುಂಬಿ ನೆಲ ಸಮತಟ್ಟಾಗುತ್ತಿದೆ. ಸರಕಾರದ ನೆರವಿಲ್ಲದೇ, ಜೆಸಿಬಿಗಳ ಬಳಕೆಯಿಲ್ಲದೇ, ಸ್ಥಳೀಯ ಸಸ್ಯಗಳನ್ನು ನಾಶಮಾಡದೇ, ವನ್ಯಜೀವಿಗಳಿಗೆ ತೊಂದರೆಯಾಗದೇ ನಡೆದಿರುವ ಈ ಪ್ರಯತ್ನಗಳಿಂದ ೧೦೦ ಹೆಕ್ಟೇರುಗಳಷ್ಟು ಕಮರಿಯ ಪುನರುಜ್ಜೀವನ ಸಾಧ್ಯವಾಗಿದೆ. ಎಲ್ಲದಕ್ಕಿಂತ ಹೆಚ್ಚಾಗಿ ಈ ಯೋಜನೆಯಲ್ಲಿ ಭಾಗವಹಿಸಿದ್ದ ೧೮ ಕುಟುಂಬಗಳಿಗೆ ಈ ಭೂಮಿಯನ್ನು ಹಂಚಲಾಗಿದೆ. ಈ ಸ್ಥಳೀಯ ಯೋಜನೆಗೆ ತಗುಲಿದ ವೆಚ್ಚ ೧೮ ಲಕ್ಷ ರೂ.ಗಳು. ಇದೇ ರೀತಿ ಮೊರೈನಾ ಜಿಲ್ಲೆಯ ೧೦ ಹಳ್ಳಿಗಳಲ್ಲಿ ಸರಕಾರೇತರ 'ಸುಜಾಗೃತಿ ಸೇವಾ ಸಂಸ್ಥೆ' ಆ ಪ್ರದೇಶಕ್ಕೇ ವಿಶಿಷ್ಟವಾಗಿದ್ದು, ಕಣ್ಮರೆಯಾಗಿದ್ದ ಗುಗ್ಗುಲರಾಳವನ್ನು ನೀಡುವ ಮುಳ್ಳು ಪೊದೆಯನ್ನು ಮತ್ತೆ ಪರಿಚಯಿಸಿದೆ. ಈ ಪೊದೆ ನೆಲದಲ್ಲಿ ಬೇರೂರಿ, ಮಣ್ಣನ್ನು ಹಿಡಿದಿಟ್ಟು ಕಮರಿಯ ವಿಸ್ತರಣೆಯನ್ನು ತಡೆಯುವುದರೊಡನೆ, ಔಷಧೀಯ ಗುಣಗಳುಳ್ಳ ರಾಳವನ್ನೂ ಉತ್ಪಾದಿಸುತ್ತದೆ. ಸ್ಥಳೀಯ ಸಂಘಟನೆಗಳು ೧೦೦ ಹೆಕ್ಟೇರ್ ಪ್ರದೇಶದಲ್ಲಿ ಈ ಪೊದೆಯನ್ನು ಸಂರಕ್ಷಿಸಿ ಅದರಿಂದ ಆರ್ಥಿಕವಾಗಿ ಲಾಭದಾಯಕವಾಗುವ ರಾಳವನ್ನು ಉತ್ಪಾದಿಸುತ್ತಿವೆ, ಕಮರಿಗಳ ವಿಸ್ತರಣೆಯನ್ನೂ ತಡೆದಿವೆ.

ಸ್ಥಳೀಯ ಸಮುದಾಯಗಳ ಯಶಸ್ಸಿನ ಹಿಂದಿರುವ ಸರಳ ತತ್ವಗಳೆಂದರೆ ಯೋಜನೆಯಲ್ಲಿ ಸ್ಥಳೀಯರ ಸಕ್ರಿಯ ಸಹಭಾಗಿತ್ವ, ದೊರೆಯುವ ಲಾಭದಲ್ಲಿ ಸಮಪಾಲು ಮತ್ತು ಸ್ಥಳೀಯ ಮಟ್ಟದಲ್ಲೇ ಕಡಿಮೆಯ ಬಂಡವಾಳದಲ್ಲಿ ಸ್ವತಂತ್ರವಾಗಿ ಕಾರ್ಯಗತಗೊಳಿಸಬಹುದಾದ ಯೋಜನೆ. ಮಧ್ಯಪ್ರದೇಶ ಸರಕಾರದ 'ಚಂಬಲ್ ಕಣಿವೆಗಳ ಪುನರುಜ್ಜೀವನ ಯೋಜನೆ'ಯಲ್ಲಿ ಈ ಯಾವ ಪರಿಕಲ್ಪನೆಗಳಿಗೂ ಸ್ಥಾನವಿಲ್ಲ. ಪರಿಸರವನ್ನು ನಾಶಮಾಡದೇ ನಿರೀಕ್ಷಿತ ಫಲವನ್ನು ನೀಡುವ, ಅಭಿವೃದ್ಧಿಯನ್ನು ಸಾಧಿಸುವ ಯೋಜನೆಗಳು ನಮ್ಮ ಸರಕಾರಗಳಿಗೆ, ರಾಜಕೀಯ ಪಕ್ಷಗಳಿಗೆ ರುಚಿಸುವುದಿಲ್ಲ. ಸದ್ಯದ ಪರಿಸ್ಥಿತಿಯಲ್ಲಿ ಚಂಬಲ್ ಕಣಿವೆಯ ಯೋಜನೆಯಿಂದ ಲಾಭವಾಗುತ್ತಿರುವುದು ಆರ್ಥಿಕ, ಸಾಮಾಜಿಕ, ರಾಜಕೀಯ ಕ್ಷೇತ್ರಗಳಲ್ಲಿನ ಬಲಿಷ್ಠರಿಗೆ ಮಾತ್ರ. ಇಂಥ ಪರಿಸ್ಥಿತಿಯಲ್ಲಿ ಅಭಿವೃದ್ಧಿ, ಆರ್ಥಿಕ ಧ್ರುವೀಕರಣಕ್ಕೆ ದಾರಿಮಾಡಿಕೊಡುತ್ತದೆಯೇ ಹೊರತಾಗಿ ಎಲ್ಲರ ಅಭ್ಯುದಯಕ್ಕಲ್ಲ. ಸಾಮಾಜಿಕ, ಆರ್ಥಿಕ ಅಸಮಾನತೆಗಳು ಈ ಯೋಜನೆಯಿಂದ ಮತ್ತಷ್ಟು ಹೆಚ್ಚುತ್ತಿವೆ; ಅಭಿವೃದ್ಧಿಯ ಫಲ ಒಂದು ವರ್ಗದವರಿಗೆ ಮಾತ್ರ ದೊರೆಯುತ್ತಿದೆ. ಆದರೆ ಅಭಿವೃದ್ಧಿಗೆ ತೆರಬೇಕಾದ ಪಾರಿಸರಿಕ ಬೆಲೆಯನ್ನು ಬಡವರು ಮಾತ್ರ ಭರಿಸುತ್ತಿದ್ದಾರೆ. ಸ್ಥಳೀಯ ಸಮುದಾಯದ ಜೀವನಾಧಾರವಾದ ಸಂಪನ್ಮೂಲಗಳ ಬುನಾದಿಯನ್ನೇ ನಾಶಮಾಡುವ ಈ ಮಾದರಿಯ ಅಭಿವೃದ್ಧಿಯನ್ನು ದೀರ್ಘಕಾಲದವರೆಗೆ ನಡೆಸುವುದು ಸಾಧ್ಯವಿಲ್ಲವೆಂಬ ಸತ್ಯವನ್ನು ನಮ್ಮ ಯೋಜನಾಕಾರರಿಗೆ, ರಾಜಕೀಯ ಪಕ್ಷಗಳಿಗೆ, ಸರಕಾರಗಳಿಗೆ ಅವರಿಗೆ ಮನದಟ್ಟಾಗುವ ರೀತಿಯಲ್ಲೇ ತಿಳಿಸಿಕೊಡಬೇಕಾದ ಅಗತ್ಯ ಹಿಂದೆಂದಿಗಿಂತಲೂ ಈಗ ಹೆಚ್ಚಾಗಿದೆ.

**ಡಾ॥ ಹೆಚ್. ಆರ್. ಕೃಷ್ಣಮೂರ್ತಿ**
ನಂ. ೧೫೬, 'ಅಭಿಲಾಷ', ೪ನೇ ಮುಖ್ಯರಸ್ತೆ, ಪದ್ಮನಾಭನಗರ, ಬೆಂಗಳೂರು – ೫೬೦ ೦೭೦

# ಕ್ರಿಯಾ-ನವಕರ್ನಾಟಕ ಜಂಟಿ ಪ್ರಕಟಣೆ

# ಮಾರ್ಕ್ಸ್ 200 – ಕ್ಯಾಪಿಟಲ್ 150









## ಪ್ರಕಟಣಪೂರ್ವ ಕೂಪನ್ ಖರೀದಿಸಿ

ಮಹಾನ್ ಮಾನವತಾವಾದಿ, ಚಿಂತಕ ಕಾರ್ಲ್ ಮಾರ್ಕ್ಸ್ (1818–1883) ಅವರ ಜನ್ಮದಿನದ ದ್ವಿಶತಮಾನೋತ್ಸವ ಹಾಗೂ ಅವರು ರಚಿಸಿದ ಜಗತ್ಪ್ರಸಿದ್ಧ ಕೃತಿ 'ದಾಸ್ ಕ್ಯಾಪಿಟಲ್'ನ 150ನೇ ವರ್ಷಾಚರಣೆಯ ಅಂಗವಾಗಿ ಮಾರ್ಕ್ಸ್ ಅವರ ಕೆಲವು ಪ್ರಮುಖ ಕೃತಿಗಳನ್ನು ಕನ್ನಡದಲ್ಲಿ ಅನುವಾದಿಸಿ ಪ್ರಕಟಿಸುವ ಬೃಹತ್ ಯೋಜನೆಯನ್ನು ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೇಟ್ ಲಿಮಿಟೆಡ್ ಮತ್ತು ಕ್ರಿಯಾ ಮಾಧ್ಯಮ ಪ್ರೈವೇಟ್ ಲಿಮಿಟೆಡ್ ಸಂಸ್ಥೆಗಳು ಹಮ್ಮಿಕೊಂಡಿವೆ. ಈ ಯೋಜನೆಯಲ್ಲಿ ಹಲವಾರು ತಜ್ಞಲೇಖಕರು ಅನುವಾದ/ಪರಿಷ್ಕರಣೆ ಕಾರ್ಯದಲ್ಲಿ ತೊಡಗಿಕೊಂಡಿದ್ದಾರೆ. ಮಾರ್ಕ್ಸ್ ಅವರ 201ನೇ ಹುಟ್ಟುಹಬ್ಬದ ದಿನವಾದ 2018 ಮೇ 5ರೊಳಗಾಗಿ ಯೋಜಿತ ಎಲ್ಲ ಏಳು ಕೃತಿಗಳನ್ನು ಪ್ರಕಟಿಸಲಿದ್ದೇವೆ. ಅವುಗಳ ಶೀರ್ಷಿಕೆಗಳು ಇಂತಿವೆ –

- ಬಂಡವಾಳ ಸಂಪುಟ 1
- ಭಾರತದ ಬಗ್ಗೆ ಮಾರ್ಕ್ಸ್
- ಪ್ಯಾರೀಸ್ ಕಮ್ಯೂನ್ –1871 (ಮೊದಲ ಕಾರ್ಮಿಕ ಪ್ರಭುತ್ವ)
- ಆರ್ಥಿಕ ಮತ್ತು ತತ್ವಶಾಸ್ತ್ರೀಯ ಕೈಬರಹಗಳು–1844
- ರಾಜಕೀಯ ಅರ್ಥಶಾಸ್ತ್ರದ ವಿಮರ್ಶೆಗೆ ಒಂದು ಕೊಡುಗೆ
- ಲೂಯಿ ಬೊನಪಾರ್ಟೆಯ 18ನೇ ಬ್ರೂಮೈರ್
- ತತ್ವಶಾಸ್ತ್ರದ ಬಡತನ

ಇಂದೇ ರೂ. 1400 ಪಾವತಿಸಿ ಪ್ರಕಟಣಪೂರ್ವ ಕೂಪನ್ ಖರೀದಿಸಿ, ನಿಮ್ಮ ಪ್ರತಿಗಳನ್ನು ಕಾಯ್ದಿರಿಸಿಕೊಳ್ಳಿ. ಪುಸ್ತಕಗಳನ್ನು ಅಂಚೆ/ಕೊರಿಯರ್ ಮೂಲಕ ನಿಮ್ಮ ಮನೆಬಾಗಿಲಿಗೆ ತಲಪಿಸಲಾಗುವುದು. ರವಾನೆ ಉಚಿತ. ನಿಮ್ಮ ಗೆಳೆಯರಿಗೆ, ನೀವು ಓದಿದ ಶಾಲೆ-ಕಾಲೇಜುಗಳಿಗೆ, ಸಂಘ-ಸಂಸ್ಥೆ-ಗ್ರಂಥಾಲಯಗಳಿಗೆ ಈ ಪುಸ್ತಕಗಳನ್ನು ಉಡುಗೊರೆಯಾಗಿ ನೀಡಿ ಈ ಯೋಜನೆಯನ್ನು ಯಶಸ್ವಿಗೊಳಿಸಲು ಸಹಕರಿಸಿ.

**ಈ ಏಳು ಪುಸ್ತಕಗಳ ಒಟ್ಟು ಮುಖಬೆಲೆ ರೂ. 2100/–**
**ಪ್ರಕಟಣಪೂರ್ವ ರಿಯಾಯಿತಿ ಬೆಲೆ ರೂ. 1400/–**

**ರೂ.700/- ರಿಯಾಯಿತಿ**

ಪ್ರಕಟಣಪೂರ್ವ ಕೂಪನ್ ಖರೀದಿಸಲು ಒಂದು ಸೆಟ್‌ಗೆ ರೂ. 1400ರಂತೆ ಹಣವನ್ನು ನಮ್ಮ ಮಳಿಗೆಗಳಲ್ಲಿ ನಗದು ಪಾವತಿಸಿ, ಇಲ್ಲವೇ ನಮ್ಮ ಬ್ಯಾಂಕ್ ಖಾತೆಗೆ ವರ್ಗಾಯಿಸಿ ಅಥವಾ ಆನ್‌ಲೈನ್ ಮೂಲಕ ಸಂದಾಯ ಮಾಡಿ. ಬ್ಯಾಂಕ್ ಖಾತೆಯ ವಿವರಗಳು : Current A/c No. 0788201010612. IFSC Code CNRB0000788 ಕೆನರಾ ಬ್ಯಾಂಕ್, ಮಾಧವನಗರ, ಬೆಂಗಳೂರು (ಬ್ಯಾಂಕ್ ಖಾತೆಗೆ ನೇರವಾಗಿ ಹಣ ವರ್ಗಾಯಿಸಿದವರು navakarnataka@gmail.comಗೆ ವಿವರಗಳನ್ನು ಹಾಗೂ ದಾಖಲೆಗಳನ್ನು ಒದಗಿಸುವುದು.)

## ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೇಟ್ ಲಿಮಿಟೆಡ್

ಪ್ರಧಾನ ಕಛೇರಿ : ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು-560 001. ಫೋನ್ : 080-22161900/01 , ಮೊಬೈಲ್ : 9972590106

e-mail : navakarnataka@gmail.com  www.navakarnataka.com



ಶಾಖೆಗಳು

✶ ಕೆಂಪೇಗೌಡ ರಸ್ತೆ, ಬೆಂಗಳೂರು-560 009, ಮೊ : 9480686859 ✶ ಗಾಂಧಿನಗರ, ಬೆಂಗಳೂರು-560 009, ಮೊ : 9480686802
✶ ಕೆ. ಎಸ್. ರಾವ್ ರಸ್ತೆ, ಮಂಗಳೂರು-575 001 ಮೊ : 9480686864 ✶ ಬಲ್ಮಠ, ಮಂಗಳೂರು-575 001 ಮೊ : 9480686866
✶ ರಾಮಸ್ವಾಮಿ ವೃತ್ತ, ಮೈಸೂರು-570 024 ಮೊ : 9480686863 ✶ ಸ್ಟೇಷನ್ ರಸ್ತೆ, ಕಲಬುರಗಿ-585 102 ಮೊ : 9480686865

## ಅಮರೇಶ ನುಗಡೋಣಿ

ನಿಮ್ಗೆ ಗೊತ್ತಿರುತ್ತೆ. ಪ್ರೈವೇಟ್ ಹಾಸ್ಪಿಟಲ್‌ಗಳು ಮುಚ್ಚಿವೆ. ಸ್ಟ್ರೈಕ್ ಮಾಡಿದ್ದೀವಿ ನಾವೆಲ್ಲ. ಖಾಸಗಿ ಡಾಕ್ಟರ್‌ಗಳು ಐಮೀನ್ ಪ್ರೈವೇಟ್ ಹಾಸ್ಪಿಟಲ್‌ಗಳು ಸಾಮಾನ್ಯ ಜನರಿಂದ ದರೋಡೆ ಮಾಡ್ತಿದ್ದಾರೆ ಅಂತ ಹೇಳಿ ಕಡಿವಾಣ ಹಾಕಲು ಮಸೂದೆ ತಂದಿದ್ದಾರೆ. ಅದನ್ನು ಈ ವಾರ ಅಸೆಂಬ್ಲಿಯಲ್ಲಿ ಪಾಸ್ ಮಾಡಲು ಹಠ ಹಿಡಿದಿದ್ದಾರೆ. ನಾವು ಅದನ್ನು ವಾಪಾಸ್ ಪಡೆಯಲು ಹೋರಾಟ ನಡೆಸಿದ್ದೇವೆ. ನೀವು ಸರ್ಕಾರಿ ಆಸ್ಪತ್ರೆಗೆ ಹೋಗಿಯಪ್ಪ ...



ತಿಂಗಳ ಕಥೆ

# ಕರುಳ ಬಂಧ

೧

ಹಸನ್ ಅಲಿ ಭಯದಿಂದಲೇ ಮನೆಯೊಳಗೆ ಬಂದ. ಬಾಗಿಲಿಗೆ ಚಿಲಕ ಹಾಕಿರಲಿಲ್ಲ. ಒಳಗೆ ನುಗ್ಗಿದಂತೆ ಬಂದು "ಸಾನೀ" ಅಂದು ಗಡಬಡಿಸಿ, ಶೂ ಬಿಚ್ಚಿ ರೂಮಿಗೆ ಬಂದು, ಮಂಚದ ಕೊನೆಗೆ ಕುಂತು ಹೆಂಡತಿಯ ಕೈ ಹಿಡಿದು "ತ್ರಾಸ್ ಆಗಿಲ್ಲ ಅನಸ್ತದ! ಹೇಗಿದ್ದಿ?" ಎಂದು ಕೇಳಿದ. "ನಾರ್ಮಲ್ ಅನ್ನಿಸ್ತಾಯಿಲ್ಲ. ಭಯ ಭಯ!" ಸಾನಿಯಾ ಪಕ್ಕ ಹೊರಳಿ ಕೂಡಲು ಯತ್ನಿಸಿದಳು. "ಬ್ಯಾಡ ಮಲಗು" ಅಂದು ಏಳಲು ಬಿಡಲಿಲ್ಲ. ಸಾನಿಯಾ ತುಂಬು ಗರ್ಭಿಣಿ! ಸಂಜೆಯಾಗಿ ರೂಮಿನಲ್ಲಿ ಕತ್ತಲು ಕಾಣಿಸಿಕೊಳ್ಳುವ ಸಮಯ. ಹಸನ್ ಅಲಿ ಎದ್ದು ಲೈಟ್ ಹಾಕಿದ. ಸಾನಿಯಾ ಬೆಳಕಿಗೆ ಅಂಜಿದಂತೆ ಕಂಡಳು. ಅಡಿಗೆ ಮನೆಯಿಂದ ರಾಮಕ್ಕ ಬಂದು "ಅರಾಮಿದ್ದಾಳಪ್ಪ. ಸುಮ್ನೆ ಭಯ ಪಡ್ತಾಳ" ಅಂದಳು. "ಹ್ಞೂ ನೀನಿದ್ದ ಮ್ಯಾಲೆ ಯಾಕ ಭಯ ಬುಡಮ್ಮ. ನಾನು ಒಂಟಿಯಾಗಿರ್ತಾಳಂತ ಬೇಗ ಬಂದೆ" ಅಂದ. 'ಮುಖ ತೊಳಕಂಡು ಕೂಡಪ್ಪ ಚಹಾ ಮಾಡ್ತೀನಿ' ಅಂತ ಮತ್ತೆ ಅಡಿಗೆ ಮನೆಗೆ ಹೋದಳು. ಬಟ್ಟೆ ಬದಲಿಸದೇ ಹಾಗೆ ಮುಖತೊಳೆದು ಬಂದು ಕುಳಿತ. ರಾಮಕ್ಕ ನೀರಿನ ಗ್ಲಾಸ್, ಚಹದ ಕಪ್ ಹಿಡಿದು ರೂಮಿಗೆ ಬಂದು ಸ್ಟೂಲ್ ಮೇಲಿಟ್ಟು "ಸದ್ಯ ತ್ರಾಸ್ ಪಡ್ತಿಲ್ಲಪ್ಪ. ಆದ್ರೂ ನಮ್ಮ ಎಚ್ಚರದಾಗ ನಾವು ಇರ್ಬೇಕು. ದಿನದಾಗ ಇದ್ದಾಳಲ್ಲ..." ಅಂದಳು.

"ಅದು ಸರಿಯಮ್ಮ. ಆದ್ರೆ ಖಾಸಗಿ ಆಸ್ಪತ್ರೆಗಳು ನಿನ್ನೆಯಿಂದ ಬಂದ್ ಆಗ್ಯಾವ. ಸರ್ಕಾರ ಖಾಸಗೀ ಡಾಕ್ಟರ್‌ಗಳ ಮ್ಯಾಲೆ ಒಂದು ಮಸೂದೆ ತಂದಿದೆ. ಅದನ್ನ ಒಪ್ಪದೆ, ಖಾಸಗಿ ಡಾಕ್ಟರ್‌ಗಳು ತಮ್ಮ ದವಾಖಾನೆಗಳನ್ನ ಬಂದ್ ಮಾಡಿಕೊಂಡು ಸರ್ಕಾರದ ವಿರುದ್ಧ ಹೋರಾಟ ನಡಿಸ್ಯಾರ. ರೋಗಿಗಳಿಗೆ ಚಿಕಿತ್ಸೆ ಇಲ್ದೆ ಸಾಯುವ ಹಂತ ತಲುಪ್ಯಾರ. ಅದು ನನ್ಗ ಸಂಕಟ ತಂದಿದೆ."

"ನಮ್ಮ ಡಾಕ್ಟರ್ ದವಾಖಾನೆಯೂ ಮುಚ್ಚಿದೆಯೇನು? ಹಸನ್, ನಮ್ಮ ಡಾಕ್ಟರ್

ನನ್ನ ಡೆಲಿವರಿ ಡೇಟ ಕೊಟ್ಟುದ್ದು ನಾಳೆ! ಏನು ಮಾಡ್ಲಿ?" ಸಾನಿಯಾ ಹಣೆಹಣೆ ಬಡಕೊಂಡಳು.

"ತಂಗಿ, ಸುಮ್ನಿರವ್ವ! ದೇವುರು ಇಲ್ಲೇನು? ದಾರಿ ತೋರಸ್ತಾನ ಬುಡು" ರಾಮಕ್ಕ ಮಂಚದ ಪಕ್ಕ ಬಂದು ಹೇಳಿದಳು.

"ಗೌವರ್ನ್‌ಮೆಂಟ್ ಆಸ್ಪತ್ರೆಗಳು ಇಪ್ಪತ್ತು ನಾಲ್ಕು ಗಂಟೆ ಕೆಲ್ಸ ಮಾಡ್ತವ. ಸಾನಿಯಾ, ನೀ ಸುಮ್ನಿರು."

"ಆಯ್ತಲ್ಲ. ನನ್ನ ಸೊಸೆಯ ನಾಲ್ಕು ಹೆರಿಗೆಗಳು ಸರ್ಕಾರಿ ಆಸ್ಪತ್ರೆಯಲ್ಲಿ ಆಗ್ಯಾವ. ಆಕಿಗೆ ಅಲ್ಲಿನ ಡಾಕ್ಟ್ರು, ನರ್ಸ್ಗಳು ಬಾಳ ಕೂನ ಐದಾರ. ನಾಳೆ ಮುಂಜಾನೆ ದವಾಖಾನಿಗೆ ಹೋಗನು" ಅಂದ್ಲು ರಾಮಕ್ಕ.

"ಅವ್ವ, ನಿನ್ಗ ತಿಳಿವುದಿಲ್ಲ. ನಾನು ಎಂಟು ತಿಂಗಳಿಂದ ಪ್ರೈವೆಟ್ ಡಾಕ್ಟರ್ ಬಳಿ ಟ್ರೀಟ್‌ಮೆಂಟ್ ತಗೊಂಡೀನಿ. ಕೊನೆ ಸ್ಟೇಜ್‌ನಲ್ಲಿ ಸರ್ಕಾರಿ ದವಾಖಾನೆಗೆ ಹೋದ್ರೆಂಗ? ನನ್ನ ಹೆರಿಗೆ ಮುಗದಂಗೇ. ಹಸನ್..." ಸಾನಿಯಾ ತ್ರಾಸ್ ಪಡತೊಡಗಿದಳು.

"ನೋಡು, ನೀನು ಮೊದ್ಲು ತಣ್ಣಗಿರು. ನಾನು ವ್ಯವಸ್ಥೆ ಮಾಡ್ತೀನಿ" ಹಸನ್ ಅಲಿ ಅಂದ.

"ಅರೇ ದವಾಖಾನೆ ಮುಚ್ಚಿವೆ. ಸರ್ಕಾರಿ ಆಸ್ಪತ್ರೆಗೆ ನಾನು ಬರದಿಲ್ಲ. ಬೇಕಾದ್ರೆ ಇಲ್ಲೇ ಸಾಯ್ತೀನಿ."

"ಬುಡ್ತು ಅನ್ನವ್ವ ತಂಗಿ. ನೀನೇನು? ಉಪ್ಪಿನವರು ಅಳತಾರಂತ ತೆಂಗಿನಕಾಯಿಯವರೂ ಅತ್ತರಂತ. ನಿನ್ಗ ಇನ್ನ ದಿನಗಳೇ ತುಂಬಿಲ್ಲ. ಒಂಬತ್ತು ತಿಂಗಳ, ಒಂಬತ್ತು ದಿನಗಳ ತನಕ ತಡಿಬೇಕು. ನಿನ್ಗ ಇನ್ನೂ..."



"ಅವ್ವ, ಡಾಕ್ಟರ್ ಕೊಟ್ಟ ಡೆಲಿವರಿ ಡೇಟ್ ನಾಳೆ. ನಾಳೆ ಸಿಜೇರಿಯನ್ ಮಾಡ್ತೀವಿ ಅಂದಿದ್ರು. ಹಸನ ನಿನ್ಗ ನೆನಪಿಲ್ಲೇನು? ಯಾ..."

"ನೆನಪಿದೆ. ಆದ್ರೆ ಖಾಸಗೀ ಆಸ್ಪತ್ರೆಗಳು ಬಂದ್ ಆಗಿವೆ. ಸರ್ಕಾರ ಪಟ್ಟು ಹಿಡದದ. ಮಸೂದೆ ಜಾರಿ ತರಬೇಕಂತ. ಅದರ ವಿರುದ್ಧ ಈ ಡಾಕ್ಟರ್‌ಗಳು ಹೋರಾಟ, ಚಳುವಳಿಗೆ ನಿಂತಾರ. ಟಿ.ವಿ. ನೋಡು" ಹಸನ್ ಅಲಿ ಸಮಾಧಾನ ಮಾಡಲು ಪ್ರಯತ್ನಿಸಿದ.

"ಅಯ್ಯ, ಸಿಜ್ರಿನ್, ಸಿಜ್ರಿನ್ ಅಂತ ಈ ಖಾಸಗೀ ಡಾಕ್ಟರ್‌ಗಳು ನಲವತ್ತು, ಐವತ್ತು ಸಾವಿರ ರೂಪಾಯಿ ಸುಲಿತಾರಪ್ಪ. ಸರ್ಕಾರಿ ದವಾಖಾನ್ಯಾಗ ನಾರ್ಮಲ್ ಹೆರಿಗೆನೋ ಮಾಡಸ್ತಾರ" ರಾಮಕ್ಕ.

"ನಮ್ಮ ಪ್ರೈವೆಟ್ ಡಾಕ್ಟರ್‌ಗೆ ಫೋನ್ ಮಾಡು ಎಮರ್ಜೆನ್ಸಿ ಕೇಸ್ ಅಂತ ಹೇಳು. ಬೇಕಾದ್ರೆ ಜಾಸ್ತಿ ಚಾರ್ಜ್ ಮಾಡ್ಲಿ...ಸಾನಿಯಾ."

"ಆಯ್ತು ನಾನು ಕೇಳ್ತೀನಿ. ಸಾನಿಯಾ, ನಿನ್ಗ ತ್ರಾಸಿಲ್ಲ ಈಗ. ಪೇನ್ ಕಾಣಿಸಿಕೊಂಡಿಲ್ಲ. ಮೊನ್ನೆ ಚಕ್‌ಅಪ್ ಮಾಡಿದಾಗ ಡಾಕ್ಟರ್ ಹೇಳಿದ್ರಲ್ಲ 'ನಾರ್ಮಲ್' ಅಂತ! ತಾಳ್ಮೆ ಬೇಕು ಇಂಥ ಪರಿಸ್ಥಿತಿಯಲ್ಲಿ" ಹಸನ್ ಅಲಿ ಸಾನಿಯಾಳ ಕೈ ಹಿಡಿದು ಹೇಳಿದ.

ರಾಮಕ್ಕ ರಾತ್ರಿಯ ಅಡಿಗೆ ಮಾಡಿದ್ದಳು. ತನ್ನ ಮನೆಗೆ ಹೋಗುವ ಸಿದ್ಧತೆಯಲ್ಲಿದ್ದಳು. ಅದನ್ನು ಕಂಡ ಹಸನ್ ಅಲಿ, "ರಾತ್ರಿ ಹೆಚ್ಚು ಕಮ್ಮಿಯಾದ್ರ ಫೋನ್ ಮಾಡ್ತೀನಿ. ಬಾರಮ್ಮ" ಅಂದು ರಾಮಕ್ಕನ ಹಿಂದೆ ಹೊರಗೆ ಬಂದು, ಗೇಟ್ ಬಳಿ ನಿಂತು "ಸರ್ಕಾರಿ ದವಾಖಾನೆಗೆ ನಾವು ಒಮ್ಮೆಯೂ ಹೋಗಿಲ್ಲ, ನೋಡಿಲ್ಲ. ಆದ್ರೆ ಈಗ ಅದು ಬಿಟ್ರ ಬ್ಯಾರೆ ಗತಿಯಿಲ್ಲ. ಏನು ಮಾಡದು?" ಎಂದು ಕೇಳಿದ.

"ತಮ್ಮ, ನಮ್ಮ ಸೊಸೆ ಅಂಗನವಾಡಿಯಲ್ಲೇ ಕೆಲ್ಸಕ್ಕಿರದು. ಆಕಿಯ ಹೆರಿಗೆಗಳು ಸರ್ಕಾರಿ ದವಾಖಾನ್ಯಾಗೇ ನಡದಾವಂತ ಹೇಳಿದ್ನೆಲ್ಲ! ನಾರ್ಮಲ್ ಹೆರಿಗೆ. ಸೊಸೆಗೆ ಅಲ್ಲಿ ಕೂನದವ್ರುರು ಇದ್ದಾರ. ನಾಳೆ ಕರಕಂಡು ಹೋಗನು! ಸೊಸೆನೂ ಬರ್ತಾಳ. ನಿನ್ನ ಹೆಂಡತಿನ್ನ ಒಪ್ಪಿಸಪ್ಪ. ಸರ್ಕಾರಿ ದವಾಖಾನಿಗೆ ಹೋದವರೆಲ್ಲ ಸಾಯ್ತಾರಂಬಂಗ ಮಾಡ್ತಾಳ ನಿನ್ನ ಹೆಂಡತಿ" ಎಂದು ಸಿಟ್ಟು ಮಾಡಿಕೊಂಡಳು.

ರಾಮಕ್ಕ ಎರಡು ವರ್ಷದಿಂದ ಮನೆ ಕೆಲಸಕ್ಕೆ ಬರುತ್ತಿದ್ದಳು. ಸಾನಿಯಾ ಬಸುರಿಯಾದ ಮ್ಯಾಲಿಂದ ಅಡಿಗೆ ಕೆಲ್ಸವನ್ನೂ ಮಾಡುತ್ತಿದ್ದಳು. ರಾಮಕ್ಕ ಸಿಕ್ಕಿದ್ದೇ ಹಸನ್–ಸಾನಿಯಾರ ಪುಣ್ಯ ಅನ್ನಬೇಕು. ಹಿರಿಯಕ್ಕನಂತೆ ಕಾಳಜಿಯಿಂದ ಮನೆ ಕೆಲ್ಸ, ಅಡಿಗೆ ಕೆಲ್ಸ, ಮಾಡುತ್ತ ನೆರವಾಗಿದ್ದಳು. ಮನೆಯ ಒಂದು ಬೀಗದ ಕೈ ರಾಮಕ್ಕನಲ್ಲಿಯೇ ಇರುತ್ತಿತ್ತು.

೨

ರಾಮಕ್ಕ ಮುಂಜಾನೆಯೇ ಬಂದು ಸಾನಿಯಾಗೆ ನಿತ್ಯಕರ್ಮಗಳಿಗೆ ನೆರವಾಗಿ, ಜಳಕ ಮಾಡಲು ಸಹಾಯ ಮಾಡಿ, ಒಂಬತ್ತು ಗಂಟೆಗೆಲ್ಲ ನಾಸ್ಟ ಕೊಟ್ಟು ವಿರಾಮ ಮಾಡಲು ರೂಮಿನಲ್ಲಿ ಮಲಗಿಸಿದಳು. ಹಸನ್ ಅಲಿಯೂ ಸಾನಿಯಾಳನ್ನು ನೋಡಿಕೊಳ್ಳುತ್ತಲೇ, ರಾಮಕ್ಕನಿಗೆ ನೆರವಾಗುತ್ತ, ತಾನೂ ಬೆಳಗಿನ ಕೆಲ್ಸ ಮುಗಿಸಿ ನಾಸ್ಟ ಮಾಡಿದ. ಸಾನಿಯಾಗೆ ನೋವು ಕಾಣಿಸಿರಲಿಲ್ಲ. ಆದ್ರೆ ಡೆಲಿವರಿ ಡೇಟ್ ಇವತ್ತು ಅಂತ ಡಾಕ್ಟರ್ ಹೇಳಿದ್ದರಿಂದ ಎಲ್ಲರಿಗಿಂತ ಸಾನಿಯಾಗೆ ಭಯ ಹೆಚ್ಚಿತ್ತು. ಗಡಬಡ ಮಾಡುತ್ತಿದ್ದಳು. ತಮ್ಮ ಪ್ರೈವೆಟ್ ಡಾಕ್ಟರ್ ಜತೆ ಮಾತಾಡಲು ಗಂಡನಿಗೆ ಮ್ಯಾಲಿಂದ ಮ್ಯಾಲೆ ಒತ್ತಾಯಿಸುತ್ತಲೇ ಇದ್ದಳು. ಹಸನ್ ತನ್ನ ಗೆಳೆಯರಿಂದ ಬೇಕಾದ ಮಾಹಿತಿಯನ್ನು ಫೋನ್ ಮಾಡಿ ಪಡೆಯುತ್ತಿದ್ದ. ಖಾಸಗಿ ಆಸ್ಪತ್ರೆಯ ಡಾಕ್ಟರ್‌ಗಳು ತಮ್ಮ ಆಸ್ಪತ್ರೆಗಳನ್ನು ಸಂಪೂರ್ಣ ಮುಚ್ಚಿ ಸ್ಟ್ರೈಕ್ ಮಾಡುತ್ತಿದ್ದರು. ಈ ವಿಷಯವನ್ನು ಸಾನಿಯಾಗೆ ಹೇಳಿದ. "ಹೆಚ್ಚಿಗೆ ಹಣ ಕೊಟ್ಟರೆ ಪ್ರೈವೆಟ್ ಡಾಕ್ಟರ್ ಸಿಜೇರಿಯನ್ ಮಾಡ್ತಾರಂತ" ಎಂದು ಹೇಳುತ್ತಿದ್ದಳು. ಫ್ಯಾಮಿಲಿ ಡಾಕ್ಟರ್‌ಗೆ ಕರೆ ಮಾಡಿದ. ಅವರು ಸಿಗಲಿಲ್ಲ. ಹೋಗಿ, ಕೇಳಿ ಬರಲು ಸಿದ್ಧವಾದ. ಮಿಸ್ ಕಾಲ್ ನೋಡಿಕೊಂಡಿರಬೇಕು, ಹತ್ತು ನಿಮಿಷಯಲ್ಲಿ ಡಾಕ್ಟರ್ ಫೋನ್ ಮಾಡಿದರು. "ಹಲೋ ಡಾಕ್ಟರ್, ಸಾನಿಯಾ ಹಜ್‌ಬಂಡ್ ಮಾತಾಡೋದು. ಡೆಲಿವರಿ ಡೇಟ್ ನೀವು ಹೇಳಿದ್ದೀರಿಲ್ಲ. ಇವತ್ತೆ ಇತ್ತು."

"ಗೊತ್ತಾಯ್ತು. ನಿಮ್ಗೆ ಗೊತ್ತಿರುತ್ತೆ. ಪ್ರೈವೆಟ್ ಹಾಸ್ಪಿಟಲ್‌ಗಳು ಮುಚ್ಚಿವೆ. ಸ್ಟ್ರೈಕ್ ಮಾಡಿದ್ದೀವಿ ನಾವೆಲ್ಲ. ಖಾಸಗಿ ಡಾಕ್ಟರ್‌ಗಳು, ಐಮೀನ್ ಪ್ರೈವೆಟ್ ಹಾಸ್ಪಿಟಲ್‌ಗಳು ಸಾಮಾನ್ಯ ಜನರಿಂದ ದರೋಡೆ ಮಾಡ್ತಿದ್ದಾರೆ. ಕಡಿವಾಣ ಹಾಕಲು ಮಸೂದೆ ತಂದಿದ್ದಾರೆ. ಅದನ್ನು ಈ ವಾರ ಅಸೆಂಬ್ಲಿಯಲ್ಲಿ ಪಾಸ್ ಮಾಡಲು ಹಠ ಹಿಡಿದಿದ್ದಾರೆ. ನಾವು ಅದನ್ನು ವಾಪಾಸ್ ಪಡೆಯಲು ಹೋರಾಟ ನಡೆಸಿದ್ದೇವೆ. ನೀವು ಸರ್ಕಾರಿ ಆಸ್ಪತ್ರೆಗೆ ಹೋಗಿಯಪ್ಪ. ದಯವಿಟ್ಟು..."

"ಸರ್, ಸಾನಿಯಾಳದು ಮೊದಲ ಹೆರಿಗೆ. ಅವಳು ಭಯಗೊಂಡಿದ್ದಾಳೆ. ಸರ್ಕಾರಿ ದವಾಖಾನೆಗಳು ಹೇಗೆ ಅಂತ ನಿಮಗೆ ಗೊತ್ತಲ್ಲ, ಡಾಕ್ಟರ್. ನೀವು ಎಮರ್ಜೆನ್ಸಿ ಅಂತ ಟ್ರೀಟ್ ಮಾಡಿ ಸರ್, ಪ್ಲೀಜ್..."



"ನಮ್ಮ ಅಸೋಸಿಯೇಶನ್ ನಿರ್ಧಾರ ತೆಗೆದುಕೊಂಡಿದೆ. ಆಸ್ಪತ್ರೆಗಳನ್ನು ಒಮ್ಮತದಿಂದ ಮುಚ್ಚಿದ್ದೇವೆ. ಎಮರ್ಜೆನ್ಸಿ ಅಂತ ಒಂದೊಂದೇ ಕೇಸ್ ನೋಡ್ತಾ ಹೋದ್ರೆ, ನಮ್ಮ ಆಸ್ಪತ್ರೆಗಳು ರೋಗಿಗಳಿಂದ ತುಂಬುತ್ತವೆ. ಸರ್ಕಾರಕ್ಕೆ ನಾವು ಪ್ರಬಲ ವಿರೋಧ ಒಡ್ಡಿ ನಿಂತಿದ್ದೇವೆ. ನಾವು ಡಾಕ್ಟರ್‌ಗಳು ಸ್ಟ್ರೈಕ್‌ನಿಂದ ಹಿಂದೆ ಸರಿಯುವುದಿಲ್ಲ. ದಯಮಾಡಿ ಅರ್ಥಮಾಡಿಕೊಳ್ಳಿ. ಸರ್ಕಾರಿ ದವಾಖಾನೆಗಳು ತೆರೆದಿವೆ. ಹೋಗಿ ಪ್ಲೀಜ್" ಅಂದು ಕರೆಯನ್ನು ಕಟ್ ಮಾಡಿದರು. ಡಾಕ್ಟರ್ ಮಾತುಗಳನ್ನು ಸಾನಿಯಾ ಕೇಳಿಸಿಕೊಂಡಳು. ಆಕೆಗೆ ಇನ್ನಷ್ಟು ಸಿಟ್ಟು, ಚಿಂತೆ ಶುರುವಾಯಿತು.

"ನಮ್ಗೆ ಯಾರೂ ಸಂಬಂಧಿಗಳಿಲ್ಲ, ಛೇ!" ಎಂದು ಮುಖಕ್ಕೆ ಟಾವಲ್ ಹೊದ್ದುಕೊಂಡಳು.

"ಏನೂ ಆಗದಿಲ್ಲ ತಂಗಿ. ಡಾಕ್ಟರ್ 'ಇವತ್ತು ಹೆರಿಗೆ ಆಗಬಹುದು' ಅಂತ ಹೇಳಿದ್ದರೂ, ವಾರದ ಮ್ಯಾಲೆ ಆಗ್ಯಾವಂತ. ನಿನ್ಗ ಇನ್ನ ದಿನಗಳ ತುಂಬಿಲ್ಲ. ನೋವು ಕಾಣಿಸಿಲ್ಲ. ಕಾಣಿಸಿದ್ರ ನಾನು, ಸೊಸೆ ಇರ್ತೀವಿ. ಸರ್ಕಾರಿ ದವಾಖಾನೆಗೆ ಒಯ್ದು ಹೆರಿಗೆ ಮಾಡಸ್ತೀವಿ. ನಾರ್ಮಲ್ ಹೆರಿಗೆ. ನಂಬು ಒಂದಿಷ್ಟು" ರಾಮಕ್ಕ ರೂಮಿಗೆ ಬಂದು ಸಾನಿಯಾಳ ತಲೆಮ್ಯಾಲೆ ಕೈಯಾಡಿಸುತ್ತ ಹೇಳಿದಳು.

"ಸಾನಿಯಾ, ನಿನ್ನ ಗೆಳತಿಯರಿಗೆ ಫೋನ್ ಮಾಡು. ಫೀಸ್ ಡಬ್ಬಲ್ ಕೊಡ್ತೀನಿ. ಡಾಕ್ಟರ್ ಯಾರಾದ್ರೂ ಹೆರಿಗೆ ಮಾಡಿಸ್ತಾರ ಅಂತ..." ಹಸನ್ ಸಾನಿಯಾಗೆ ಬಿಟ್ಟ.

"ನನ್ಗೆ ಸಂಬಂಧಿಗಳಿಲ್ಲ. ಫ್ರೆಂಡ್ಸ್‌ಗಳೂ ಇಲ್ಲ..." ಅಂದಳು ಸಿಟ್ಟಿನಿಂದ.

"ಸದ್ಯ ರೆಸ್ಟ್ ಮಾಡು. ಪ್ರೈವೆಟ್ ಆಸ್ಪತ್ರೆಗಳನ್ನು ವಿಚಾರಿಸುತ್ತೇನೆ" ಎಂದು ಹೊರಬಂದ. ರಾಮಕ್ಕನೂ ಹೊರಬಂದು ನಿಂತಳು.

"ರಾಮಕ್ಕ, ನಿನ್ನ ಸೊಸೆಗೆ ಹೇಳು. ಸರ್ಕಾರಿ ದವಾಖಾನೆಯಲ್ಲಿ ಪರಿಚಯದ ನರ್ಸ್, ಡಾಕ್ಟರ್ ಹತ್ತಿರ ಈಗಲೇ ಹೋಗಿ ಕಂಡು 'ನಮ್ಮವರದು ಒಬ್ಬರ ಹೆರಿಗೆ ಇದೆ. ಕರಕೊಂಡು ಬರ್ತೀವಿ. ಕಾಳಜಿಯಿಂದ ನೋಡ್ರಿ' ಅಂತ. ಅವರಿಗೆ ಮಾಮೂಲಿ ಖುಷಿ ಕೊಡ್ತೀನಿ. ನೀನು ಬೇಗ ಹೋಗು" ಅಂತ ಕಳಿಸಿದ.

೩

ಸಾನಿಯಾ ತನ್ನ ಹೊಟ್ಟೆಯ ಮ್ಯಾಲೆ ಕೈಯಾಡಿಸಿಕೊಂಡಳು. ಕಣ್ಣಲ್ಲಿ ನೀರು ಇಳಿದವು. ಅಪ್ಪನ ನೆನಪಾಯ್ತು. ಒಂದು, ಅರ್ಧದಿನವಿದ್ದು, ಪಕ್ಕದಲ್ಲೇ ಕುಂತು, ಉಂಡು, ನಿದ್ದೆ ಮಾಡಿ ಹೋಗುವಾಗ 'ಸಾನಿಯಾ, ಎಲ್ಲ ಸುಖಾಂತವಾಗ್ತದೆ. ಡಾಕ್ಟರ್‌ಗೂ ಹೇಳಿದ್ದೀನಿ. ಹಸನ್ ಒಳ್ಳೆಯವನು. ರಾಮಕ್ಕನೂ ಜೊತೆ ಇರ್ತಾಳೆ. ಚಿಂತೆ ಮಾಡಬ್ಯಾಡ. ದವಾಖಾನೆಗೆ ಸೇರಿದ ಮ್ಯಾಲೆ ಫೋನ್ ಮಾಡು. ನಾನು ಬರ್ತೀನಿ' ಎಂದು ತಲೆಮ್ಯಾಲೆ ಕೈಯಾಡಿಸಿ ಹೋಗಿದ್ದ. ಅಣ್ಣನವರು, ಅತ್ತಿಗೆಯವರು ಯಾರೂ ಬರಲಿಲ್ಲ. ಬರ್ತಾರಂತ ಸಾನಿಯಾ ಅರೆಮನಸ್ಸಿನಿಂದ ಅಂದುಕೊಂಡಳು. ಒಂದು ವೇಳೆ ಸಾನಿಯಾ ತಾಯಿ ಜೀವಂತ ಬದುಕಿದ್ದಿದ್ದರೆ ಸಾನಿಯಾಗೆ ಯಾರೂ ಬೇಡವಾಗಿತ್ತು! ಆದ್ರೆ ನಾಲ್ಕು ವರ್ಷಗಳ ಹಿಂದೆ ತಾಯಿ ತೀರಿಕೊಂಡಿದ್ದಳು. ಅಂದಿನಿಂದ ಸಾನಿಯಾ ಒಂಟಿಯಾಗಿದ್ದಳು. ಹಾಗೆ ನೋಡಿದರೆ ಹಸನ್ ಅಲಿಯಿಂದ ಒಂಟಿತನ ಕಳೆದಿತ್ತು.

ಈ ನಗರದಲ್ಲಿ ಸಾನಿಯಾ ತಂದೆ ಸಾ ಮಿಲ್‌ನ ಓನರ್. ಮೂವತ್ತು ನಲವತ್ತು ವರ್ಷಗಳಿಂದ ನಡೆಸಿಕೊಂಡು ಬಂದಿದ್ದ. ನಗರದ ಅನೇಕ ಸಂಘ–ಸಂಸ್ಥೆಗಳಲ್ಲಿ ಸದಸ್ಯನಾಗಿಯೂ, ಕೆಲವು ಕಡೆ ಕಾರ್ಯದರ್ಶಿಯಾಗಿಯೂ ಸ್ಥಾನ ಪಡೆದಿದ್ದ. ಇಬ್ಬರು ಹೆಂಡತಿಯರಿದ್ದರು. ಇಬ್ಬರಿಗೂ ಮಕ್ಕಳು, ಮೊಮ್ಮಕ್ಕಳೂ ಇದ್ದರು. ಕೂಡುಕುಟುಂಬ. ಕುಟುಂಬದ ಮೇಲೆ ತಂದೆಗೆ ಹಿಡಿತವಿತ್ತು. ಸಾನಿಯಾ ತಾಯಿ ಮೂರನೇ ಹೆಂಡತಿಯಾಗಿ, ತಂದೆಗೆ ಅರವತ್ತು ವಯಸ್ಸಿದ್ದಾಗ ಬಂದಳು. ಮನೆಮಂದಿಗೆ ಅಸಮಾಧಾನ ತಂದಿತು. ಸಾನಿಯಾ ಹುಟ್ಟಿದಳು. ಬೆಳೆದಳು. ಆದ್ರೆ ಸಾನಿಯಾ ತಾಯಿ ಬಂದ ಮೇಲೆ ಸಾನಿಯಾ ತಂದೆಯನ್ನು ಮನೆಮಂದಿ ಉದಾಸೀನ ಮಾಡಿದರು. ಆದ್ರೆ ವ್ಯವಹಾರವೆಲ್ಲ ಕೈಯಲ್ಲೇ ಇದ್ದುದರಿಂದ, ಊರಲ್ಲಿ ವರ್ಚಸ್ಸು ಇದ್ದುದರಿಂದ ಏನೂ ಮಾತಾಡದೆ ಬರುತ್ತ ಮನೆ ಮಂದಿ ಬಗ್ಗೆ ಸುಮ್ಮನಿದ್ದೇ ಕಡೆಗಣಿಸಿದ್ದರು. ಬೆಳೆಯುತ್ತಿದ್ದ ಸಾನಿಯಾಗೆ ಅದು ಅರಿವಿಗೆ ಬರುತ್ತ ಬರುತ್ತ ಮನೆ ಮಂದಿ ಬಗ್ಗೆ ಅಸಹನೆ ಜಾಸ್ತಿ ಮಾಡಿಕೊಂಡಳು. ಸಿಟ್ಟು ಸೆಡವು, ಜಗಳ ಮಾಡುತ್ತ ಬೆಳೆದಳು.

ಕೂಡಿದ ದೊಡ್ಡ ಮನೆಯಲ್ಲಿದ್ದರೂ ಒಳಗೇ ಸಾನಿಯಾ ತಂದೆ, ತಾಯಿ, ಸಾನಿಯಾ ಬೇರೆಯೇ ಇದ್ದರು. ಸಾನಿಯಾ ಕಾಲೇಜು ಸೇರಿ ಪದವಿ ಮುಗಿಸಿದ ಬೆನ್ನಲ್ಲೇ ತಾಯಿ ಆಕಸ್ಮಿಕವಾಗಿ ಯಾವುದೋ ಕಾಯಿಲೆಗೆ ತುತ್ತಾದಳು. ಸಾನಿಯಾ ತಂದೆ ಸಾನಿಯಾಳನ್ನು ನಾಜೂಕಿನಿಂದ ನೋಡಿಕೊಂಡ. ಬಹಳ ಪ್ರೀತಿ ಮಾಡುತ್ತ ಬಂದ. ಹಸನ್ ಅಲಿ, ಸಾನಿಯಾ ಪ್ರೇಮಿಗಳಾದದ್ದೇ ತಡ, ಮದುವೆ ಮಾಡಿ, ಕೆಲ್ಸ ಕೊಡಿಸಿ ನಿರುಮ್ಮಳಾಗಿಬಿಟ್ಟ. ಹೊಸ ಬಡಾವಣೆಯಲ್ಲಿ ಸೈಟ್ ಕೊಡಿಸಿದ. ಯಾವಾಗ ಸಾನಿಯಾ ತಾಯಿ ಸತ್ತು, ಸಾನಿಯಾಗೆ ಮದುವೆಯಾಯಿತೋ, ಅಂದಿನಿಂದ ಮನೆಮಂದಿ ಸಾನಿಯಾ ತಂದೆಯನ್ನು ಮೊದಲಿಗಿಂತ ಗೌರವದಿಂದ ಕಂಡು, ಹೂವಿನಂತೆ ನೋಡಿಕೊಳ್ಳತೊಡಗಿದರು. 'ತಾಯಿಯನ್ನ ಸಾಯಿಸಿ, ನನ್ನ ಮದುವೆ ಮಾಡಿ ಹೊರಹಾಕಿದ ಮಂದಿ ಅವರು' ಅಂತ ಎಲ್ಲಿಲ್ಲದ ಸಿಟ್ಟಿನಿಂದ ಸಾನಿಯಾ ಅವರತ್ತ ಸುಳಿಯಲಿಲ್ಲ. ಮನೆಮಂದಿಯ ಶುಭ ಕಾರ್ಯಗಳಿಗೆ ಕರೆಯಲು ಬಂದರೂ ಹೋಗುತ್ತಿರಲಿಲ್ಲ. ಎಲ್ಲರಿಂದ ದೂರವಾದಳು. ತಂದೆ ಮಾತ್ರ ನಿರ್ಭಿಡೆಯಿಂದ ತಿಂಗಳಿಗೆ ಒಮ್ಮೆಯಾದರೂ ಬಂದು, ಅಳಿಯ, ಮಗಳ ಮನೆಯಲ್ಲಿದ್ದು ಅರ್ಧ ದಿನ ಕಳೆದು ಹೋಗುತ್ತಿದ್ದ. ಕಳೆದ ವಾರವೂ ಬಂದು ಹೋಗಿದ್ದ. ಸಾನಿಯಾ ಅರೆ ನಿದ್ರೆ, ಅರೆ ಎಚ್ಚರ, ನೆನಪುಗಳ ಹೊರೆಯಿಂದ ಮಲಗಿದ್ದಳು. ಅಪ್ಪನ ನೆನಪು ತೀವ್ರವಾಯ್ತು. ಪಕ್ಕಕ್ಕೆ ನಿಧಾನವಾಗಿ ಹೊರಳಿ, ತಲೆದಿಂಬಿನ ಕೆಳಗಿದ್ದ ತನ್ನ ಮೊಬೈಲ್ ಎತ್ತಿಕೊಂಡಳು. ಅಪ್ಪನಿಗೆ ಕಾಲ್ ಮಾಡಿದಳು.

"ಪಪ್ಪಾ, ಎಲ್ಲಿದ್ದಿ? ಇವತ್ತು ಡಾಕ್ಟರ್ ನನ್ನ ಡೆಲಿವರಿ ಅಂತ ಡೇಟ್ ಕೊಟ್ಟಿದ್ದರು. ಆದ್ರೆ ಪ್ರೈವೇಟ್ ಹಾಸ್ಪಿಟಲ್‌ಗಳು ಸ್ಟ್ರೈಕ್ ಮಾಡ್ತಿವೆ. ಎಲ್ಲ ಬಂದ್. ಏನು ಮಾಡದು? ಅಳು ಬರ್ತಿದೆ."

"ಹ್ಲೋ ಸಾನಿಯಾ, ಹಸನ್ ಎಲ್ಲಿ? ನಾನು ಹೈದ್ರಾಬಾದಿಗೆ ಬಂದಿದ್ದೀನಿ. ನನ್ಗೂ ಡಾಕ್ಟರ್‌ಗಳ ಸ್ಟ್ರೈಕ್ ತಿಳಿದಿದೆ. ಆದ್ರೂ ನಮ್ಮ ಡಾಕ್ಟರ್‌ಗೆ ಫೋನ್ ಮಾಡ್ತೀನಿ. ಒಪ್ಪಿಸಿ ಆನಂತ್ರ ನಿನ್ಗೆ ಹೇಳ್ತೀನಿ" ಎಂದು ಕರೆಯನ್ನು ಕಟ್ ಮಾಡಿದರು.

ಸಾನಿಯಾಗೆ ಉಮೇದಿ ಬಂತು! ಪಕ್ಕದಲ್ಲಿ ರಾಮಕ್ಕ, ಗಂಡ ಇಬ್ಬರೂ ಇರಲಿಲ್ಲ. ತಂದೆಯ ಫೋನ್ ಕಾಯುತ್ತ ಮಲಗಿದಳು...!

ಅಷ್ಟರಲ್ಲೇ ರಾಮಕ್ಕ, ಹಸನ್ ಬಂದರು. ಬಂದು ಸಾನಿಯಾಗೆ ವಿಷಯ ತಿಳಿಸಲು ಅಂಜಿದರು. ಆದರೂ ಅನಿವಾರ್ಯವಾಗಿ ಹಸನ್ "ಸಾನಿಯಾ, ರಾಮಕ್ಕನ ಸೊಸೆ ಸರ್ಕಾರಿ ದವಾಖಾನೆಗೆ ಹೋಗಿದ್ದಾಳ. ನಿನ್ಗೆ ಹೆರಿಗೆ ಮಾಡಿಸಲು ಕೂನ ಇರುವ ನರ್ಸ್, ಡಾಕ್ಟರ್‌ರನ್ನು ಕಂಡು ಮಾತಾಡಿರ್ತಾಳ. ನಾವು ಅಗತ್ಯ ಸಾಮಾನ ತಗಂಡು, ವ್ಯಾನಿನಲ್ಲಿ ಹೋಗನು" ಅಂದ.

"ತಂಗಿ, ಹೆರಿಗೆ ಅಂದ್ರ ಹುಡಗಾಟ ಅಲ್ಲವ್ವ. ನಿರ್ವಾಯಿಲ್ಲ. ಸರ್ಕಾರದ ದವಾಖಾನಿ ಹೋಗಿ ಅಲ್ಲಿ ಇದ್ರ ಆ ಮಾತು ಬ್ಯಾರೆ! ಸೊಸೆ ಎಲ್ಲ ಇಂತಜಾಮ್ ಮಾಡಿರ್ತಾಳ" ಅಂದಳು ರಾಮಕ್ಕ.

"ಯಾ...! ಡ್ಯಾಡಿಗೆ ಫೋನ್ ಮಾಡಿದ್ದೆ. ಅವರು ಊರಲಿಲ್ಲ. ಡಾಕ್ಟರ್‌ಗೆ ಫೋನ್ ಮಾಡಿ ಹೇಳಿ ಒಪ್ಪಿಸ್ತಾರಂತೆ. ಕಾಲ್ ಮಾಡು ಒಂದು ಸಲ" ಅಂದಳು ಮುನಿಸಿನಿಂದ. ಹಸನ್ ಅಲಿ, ರಾಮಕ್ಕ ಒಬ್ಬರ ಮುಖ ಒಬ್ಬರು ನೋಡಿಕೊಂಡು ಗಾಬರಿಯಾಗಿ ನಿಂತರು.

ಅರ್ಧಗಂಟೆಯ ಮೇಲೆ ರಿಂಗ್ ಆಯ್ತು. ಸಾನಿಯಾಳೇ ಎತ್ತಿಕೊಂಡಳು.

"ಹ್ಞಾಂ ಪಪ್ಪಾ, ಹ್ಞಾಂ... ಹೌದಾ? ಹೇಳ್ತಾರಂತೇನು...? ನನ್ಗ ಭಯ...ಪಪ್ಪಾ..." ಸಾನಿಯಾ ತಂದೆಯ ಫೋನ್ ಕೊಟ್ಟಳು. "ಸಲಾಂ ಆಲಕುಂ" ಅಂದ. ವಿಷಯ ಹೇಳಿದರು. ಕೇಳಿಸಿಕೊಂಡು "ಆಯ್ತು, ಹೋಗ್ತೀವಿ" ಎಂದು ಮೊಬೈಲ್ ಸಾನಿಯಾಗೆ ಕೊಟ್ಟ.



ಗುಂಡಿ ಇನ್ನೂ ದೊಡ್ಡದಾದ್ರೆ ಇದರಲ್ಲೇ ಸತ್ತವರನ್ನು ಹಾಕಿ ಮಣ್ಣು ಮಾಡಿದರೂ ಗೊತ್ತಾಗಲ್ಲ! ಬೇಗ ಮುಚ್ಚಬೇಕು ಕಣೋ

"ನಮ್ಮ ಫ್ಯಾಮಿಲಿ ಡಾಕ್ಟರ್ ಸರ್ಕಾರಿ ದವಾಖಾನೆಯಲ್ಲಿ, ಪರಿಚಯದ ಡಾಕ್ಟರ್‌ಗೆ ಹೇಳಿ ವ್ಯವಸ್ಥೆ ಮಾಡ್ತಾರಂತೆ. ಅಪ್ಪನಿಗೆ ಹೇಳಿದ್ದಾರೆ. ಹೋಗಬಹುದ?" ಎಂದು ಕೇಳಿದ.

"ಯಾ...ಆಯ್ತು" ಅಂದಳು ಎಲ್ಲಿಲ್ಲದ ಬೇಸರದಿಂದ.

೪

ವ್ಯಾನ್ ಸರ್ಕಾರಿ ಆಸ್ಪತ್ರೆಯ ಮುಂದೆ ನಿಂತಿತು. ಗೇಟ್ ದಾಟಿ ಕಾಂಪೌಂಡ್ ಒಳಗೆ ಹೋಗಲು ಸಾಧ್ಯವಾಗಲಿಲ್ಲ. ಚಿಕಿತ್ಸೆ ಪಡೆಯಲು ನಗರದ ಜನರು ಬಂದಿದ್ದರು. ಖಾಸಗಿ ಆಸ್ಪತ್ರೆಗಳು ಬಂದ್ ಆಗಿ ಮೂರು ದಿನಗಳಾಗಿದ್ದವು. ರಾಮಕ್ಕ, ಆಕೆಯ ಸೊಸೆ ಸಾವಿತ್ರಿ ಕೆಳಗಿಳಿದು ನಿಂತರು. ಹಸನ್ ಅಲಿ ಹೆಂಡತಿ ಜತೆಗೆ ವ್ಯಾನಿನಲ್ಲೇ ಕುಳಿತಿದ್ದ. ಸಾವಿತ್ರಿಗೆ ಗಾಬರಿಯಾಯ್ತು ರೋಗಿಗಳನ್ನು ನೋಡಿ. "ಅತ್ತೆ, ನಾನು ಒಳಗೋಗಿ ನರ್ಸಕ್ಕನ ಕಂಡು, ಜಾಗ ನೋಡಿ ಬರ್ತೀನಿ. ನೀವು ಇಲ್ಲೇ ಇರ್ರಿ" ಎಂದು ಹೋದಳು. ರಾಮಕ್ಕ, ಸೊಸೆ ಒಳ ಹೋದ ವಿಷಯ ಹೇಳಿ ಆಸ್ಪತ್ರೆಯ ಗೇಟಿಗೇ ನಿಂತಳು. ವ್ಯಾನ್ ಸೈಡಿಗೆ ನಿಲ್ಲಲು ಮೆಲ್ಲಗೆ ಹೋಯಿತು. ತಮ್ಮ ತಮ್ಮ ರೋಗಿಗಳನ್ನು ನಡೆಸಿಕೊಂಡು ಬರುವವರು, ಹೊತ್ತುಕೊಂಡು ಬರುವವರು, ಸೈಕಲ್ ರಿಕ್ಷಾದಲ್ಲಿ ಕೂಡಿಸಿಕೊಂಡು ಬರುವವರು, ಆಟೋದಲ್ಲಿ, ಕಾರುಗಳಲ್ಲಿ ಬರುತ್ತಿದ್ದವರನ್ನು ನೋಡಿ ಬುಗುಲು ಬಿದ್ದಳು. ಒಳಗೆ ಜಾಗವಿಲ್ಲದೇ ರೋಗಿಗಳನ್ನು ಕಾಂಪೌಂಡಿನ ಒಳಗೆ ಎಲ್ಲಿ ಬೇಕಲ್ಲಿ ಕೂಡಿಸಿದ್ದರು. ಮಲಗಿಸಿದ್ದರು. ರೋಗಿಗಳನ್ನು ನೋಡಿಕೊಳ್ಳುವವರಂತೂ ಬಾಯಿಗೆ ಬಂದಂತೆ ಬಯ್ಯುತ್ತಿದ್ದರು. ಯಾರಿಗೆ ಬಯ್ಯುತ್ತಾರೆಂದೇ ತಿಳಿಯುತ್ತಿರಲಿಲ್ಲ. "ಸಾಯದು ಸಾಯ್ತಾರ! ಇಲ್ಲ್ಯಾಕ ಸಾಯಬೇಕು? ಮನ್ಯಾಗ ಸತ್ರಾಯ್ತು!" ಅಂತ ಒಬ್ಬ ಹೆಂಗಸು ತನ್ನ ಗಂಡನಿಗೆ ಚಿಕಿತ್ಸೆ ಸಿಗದೆ ಸೈಕಲ್ ರಿಕ್ಷಾದಲ್ಲಿ ವಾಪಾಸ್ ಹೊರಟಿದ್ದಳು ಬಯ್ಯುತ್ತ. ಅದನ್ನು ಕಂಡ ಒಬ್ಬ "ಔಷಧ ಸಿಗದನೆ ಏಳೆಂಟು ಜನ ಈ ಊರಲ್ಲೇ ಸತ್ರಂತ" ಅಂದ ಕೆಮ್ಮುತ್ತ. ಎಲ್ಲರನ್ನು ನೂಕುತ್ತ ಕುಟುಂಬ ಒಂದು ಎದೆಎದೆ ಬಡಕಂಡು ಅಳುತ್ತ ಒಳ ನುಗ್ಗಿತು. "ಒಳಗ ಯಾರೋ ಸತ್ತಿರಬೇಕು" ಎಂದ ಒಬ್ಬ. ರಾಮಕ್ಕನಿಗೆ ಭಯ ಜಾಸ್ತಿ ಆಯಿತು. ಸಾನಿಯಾ ಸರ್ಕಾರಿ ದವಾಖಾನೆಗೆ ಬರುವುದಿಲ್ಲ ಅಂತ ಹಠ ಹಿಡಿದದ್ದು ಇದಕ್ಕೆ ಇರಬೇಕೆಂದು ಚಿಂತಿತಳಾದಳು. ಹೊತ್ತು ಹೋದದ್ದೇ ಗೊತ್ತಾಗಲಿಲ್ಲ. ಸಾವಿತ್ರಿ ಒಂದು ತಾಸಿನ ಮ್ಯಾಲೆ ಬಂದಳು. "ಬರ್ರಿ ಅತ್ತೆ. ಒಂದು ಬೆಡ್ ಖಾಲಿ ಆಗ್ತದಂತ. ಹೇಳಿ ಕಾಯ್ದಿರಿಸಲು ಒಬ್ಬರನ್ನು ಬಿಟ್ಟು ಬಂದಿದ್ದೀನಿ" ಎಂದು ಗಡಬಡಿಸಿದಳು.

ಒಳಗಿದ್ದ ಹಸನ್ ಅಲಿ, ಸಾನಿಯಾ ಕುರಿತು, ಮಾಮ ಹೇಳಿದ್ದ ಪರಿಚಯಸ್ಥ ಡಾಕ್ಟರ್‌ಗೆ ಫೋನ್ ಮಾಡಲು ಪ್ರಯತ್ನಿಸಿ ಸಂಪರ್ಕ ಸಿಗದೆ ನಿರಾಸೆ ಹೊಂದಿದ್ದ. ರಾಮಕ್ಕ, ಸಾವಿತ್ರಿ ಬಂದು ಕರೆದದ್ದೇ ತಡ, ಹೂವಿನಂತೆ ಸಾನಿಯಾಳನ್ನು ವ್ಯಾನಿನಿಂದ ಇಳಿಸಿದರು. ನಿಂತುಕೊಂಡ ಸಾನಿಯಾ ಸುತ್ತಲು ನೋಡಿ ಗಾಬರಿ ಬಿದ್ದಳು. "ನೀನು ಸುಮ್ಮನಿರು ತಂಗಿ" ಅಂದು ಮೆಲ್ಲಗೆ ತೋಳಿಡಿದು ನಡೆಸಿದರು. ಹೋಗುವ, ಬರುವ ಜನರು ತಿವಿಯುತ್ತಲೇ ಇದ್ದರು. ಎಷ್ಟು ನಾಜೂಕದಿಂದ ನಡೆಸಿದರೂ ಜನರಿಂದ ತಿವಿಸಿಕೊಳ್ಳುವುದು ತಪ್ಪಲಿಲ್ಲ. ಹೆರಿಗೆ ವಾರ್ಡಿಗೆ ಹೋಗಲು ಅರ್ಧಗಂಟೆ ಹಿಡಿಯಿತು. ನಾನಾ ರೋಗಿಗಳನ್ನು ದಾರಿಯಲ್ಲೇ ಮಲಗಿದವರನ್ನು ದಾಟುತ್ತ ವಾರ್ಡಿಗೆ ಬಂದರೆ, ಗೊತ್ತು ಮಾಡಿದ ಕಾಟ್ ಇನ್ನೂ ಖಾಲಿಯಾಗಿರಲಿಲ್ಲ. ಸಾವಿತ್ರಿ ಹೋಗಿ ನರ್ಸ್ ಒಬ್ಬಳನ್ನು ಕರೆತಂದಳು. "ಇಲ್ಲೇ ಮಲಗಿಸಿ. ಈಗ ಖಾಲಿ ಆಗ್ತದೆ. ೯ನೇ ಹಾಸಿಗೆ" ಅಂತ ಹೇಳಿದಳು. ತಿರುಗಾಡುವ ನೆಲದಲ್ಲಿ ಬಸುರಿ ಹೆಂಗಸು ಮಲಗಿದ್ದನ್ನು ಸಾನಿಯಾ ನೋಡಿ, "ನಾನು ಒಲ್ಲೆ. ಇಲ್ಲಿ ಬ್ಯಾಡ". ಅಂತ ಒದರಿದಳು. ತೋಳಿಡಿದವರನ್ನು ನೂಕಿದಳು. "ನರ್ಸ್, ಡಾ॥ ಗೌಸ್ ಎಲ್ಲಿ? ಸಿಗ್ತಾರೇನು?" ಹಸನ್ ಕೇಳಿದ.

'ಅವರೇ ಹೆಡ್. ಎಲ್ಲ ಮ್ಯಾನೇಜ್ ಮಾಡ್ತಿದ್ದಾರೆ. ಈಗ ಸಿಗದಿಲ್ಲ. ಶಾಸಕರು ಬಂದಿದ್ದಾರೆ. ಮೀಟಿಂಗ್‌ನಲ್ಲಿದ್ದಾರೆ' ಅಂದಳು. "ಹಸನ್, ಮನೆಗೆ ನಡಿ. ಪೇನ್ ಇಲ್ಲ" ಅಂತ ಸಾನಿಯಾ ಗಂಡನ ಅಂಗಿ ಹಿಡಿದೇ ನಿಂತಳು. "ನಡಿರವ್ವ ಮನಿಗೆ" ಅಂದ. "ಅಯ್ಯ, ರ್‍ರೀ ಸ್ವಲ್ಪ ಹೊತ್ತು ತಡದ್ರ ಬೆಡ್ ಸಿಗ್ತದ. ಎಲ್ಲ ಸರಿಹೋಗ್ತದ. ನೋವು ಕಾಣಿಸಿಕೊಂಡ್ರ ಗತಿಯೇನು?" ಸಾವಿತ್ರಿ ಹೌಹಾರಿ ಅಂದಳು. "ಅಕ್ಕ, ಬ್ಯಾಡಕ್ಕ, ನಡಿ ಮನೆಗೆ" ಅಂತ ಎಲ್ಲರೂ ನಡೆಸಿಕೊಂಡು ಹೊರಟರು. ವ್ಯಾನಿಗೆ ಬರುವುದರಲ್ಲಿ ಮುಕ್ಕಾಲು ಗಂಟೆ ಹಿಡಿಯಿತು. ವ್ಯಾನಿನಲ್ಲಿ ಕುಂತಾಗ ಎಲ್ಲರೂ ಬೆವತುಹೋಗಿದ್ದರು. ಖಾಸಗಿ ಆಸ್ಪತ್ರೆಯ ಡಾಕ್ಟರ್‌ಗಳನ್ನು ಬಯ್ದದ್ದೇ ಬಯ್ದದ್ದು! ಮನೆ ತಲುಪಿದಾಗ ಸಂಜೆ ಐದಾಗಿತ್ತು! ಎಲ್ಲ ಸಾಮಾನುಗಳನ್ನು ಒಳ ಸೇರಿಸಿದರು.

"ರ್‍ರೀ ಅಣ್ಣ, ಈಕೆ ನನ್ನ ತಂಗಿ ಇದ್ದಂಗನ. ರಾತ್ರಿ ಬ್ಯಾನೆ ಕಾಣಿಸಿಕೊಂಡ್ರ ಗತಿಯೇನು? ಊರಾಗ ಖಾಸಗೀ ಆಸ್ಪತ್ರೆಯಲ್ಲೇ ಕೆಲ್ಸ ಮಾಡುವ ಒಬ್ಬ ಹೆಂಗಸು ನನ್ಗ ಗೊತ್ತು. ಆಕೆ ಸೂಲಗಿತ್ತಿ. ಈ ರಾತ್ರಿ ಕರಕೊಂಡು ಬಂದು ಇಟ್ಟುಕೊಳ್ಳುವುದು ಪಾಡ" ಎಂದು ಸಲಹೆ ನೀಡಿದಳು ಸಾವಿತ್ರಿ.

"ಸಾವಿತ್ರಿ ಇದೇ ವ್ಯಾನಿನಲ್ಲಿ ಹೋಗಿ ಕೇಳಿ ನೋಡು." ರಾಮಕ್ಕ ಹೇಳಿದ್ದಕ್ಕೆ ಹಸನ್ ಅಲಿ ಮರುಮಾತಾಡದೆ ಒಪ್ಪಿಕೊಂಡು "ಒಂದು ವ್ಯಾಳೆ ರಾತ್ರಿ ಪೇನ್ ಬಂದರೆ, ಹೆರಿಗೆ ಆದ್ರೆ ಅದ್ಕ ಬೇಕಾದದ್ದನ್ನು ಆ ಸೂಲಗಿತ್ತಿ ತಾಯಿಗೆ ತರಲು ಹೇಳಿ ಬಿಡವ್ವ. ಒಂದು ವೇಳೆ ಏನೂ ಆಗದಿದ್ದರೂ, ನಾಳೆ ಖಾಸಗಿ ದವಾಖಾನೆಗಳು ನಮ್ಮ ಪುಣ್ಯಕ್ಕೆ ಕೆಲ್ಸ ಮಾಡಲು ತೊಡಗಿದರೆ ನಮ್ಗೆ ಚಿಂತೆಯಿಲ್ಲ" ಎಂದು ಒಂದಷ್ಟು ಹಣಕೊಟ್ಟು ಕಳಿಸಿದ. ರಾಮಕ್ಕ ಒಳಬಂದು ಸಾನಿಯಾಳ ಉಪಚಾರಕ್ಕೆ ನಿಂತಳು.

೫

ಆ ರಾತ್ರಿ ಹನ್ನೊಂದು ಗಂಟೆಯ ಹೊತ್ತಿನಲ್ಲಿ ಸಾನಿಯಾ ನೋವಿನಿಂದ ಒದ್ದಾಡಲು ತೊಡಗಿದಳು. ಹಸನ್ ಅಲಿ ಸಾವಿತ್ರಿ, ರಾಮಕ್ಕನಿಗೆ ಫೋನ್ ಮಾಡಿದ. ಅವರಿಬ್ಬರು ಸೂಲಗಿತ್ತಿಯನ್ನು ಒಪ್ಪಿಸಿ ಅದೇ ತಾನೆ ಮನೆಗೆ ಕರೆತಂದಿದ್ದನ್ನು ತಿಳಿಸಿ, 'ಹತ್ತು ನಿಮಿಷದಾಗ ಬರ್ತೀವಿ' ಎಂದರು. ಸಾನಿಯಾ ಮಾತಾಡದೆ ಉಸಿರು ಬಿಗಿಡಿದು, ಬಿಟ್ಟು ಮಾಡುತ್ತ ನೋವನ್ನು ತಡೆದುಕೊಳ್ಳಲು ಯತ್ನಿಸುತ್ತಿದ್ದಳು. "ಸಾನಿಯಾ, ಎಕ್ಸ್‌ಪಿರಿಯನ್ಸ್ ಸೂಲಗಿತ್ತಿ ಸಿಕ್ಕಿದ್ದಾಳಂತ. ಆಟೋದಲ್ಲಿ ಬರುತ್ತಿದ್ದಾಳೆ. ನೀನು ಅಂಜಬ್ಯಾಡ" ಎಂದು ಕಾಟ್ ಮೇಲೆಯೇ ಕುಳಿತು ಧೈರ್ಯ ತುಂಬಿದ. "ಹಸನ್, ನಾನು ಸತ್ರು ಪರವಾಗಿಲ್ಲ. ಮಗು ಬದುಕ್ಲಿ. ನೀನು ಸಾಕು" ಅಂತ ಹೇಳಿದಳು. ಹಸನ್ ಅಲಿಗೆ ಅಳು ಬಂದಿತು. ಕಣ್ಣೀರು ಒರೆಸಿಕೊಂಡ. ಅಷ್ಟರಲ್ಲಿ ಆಟೋ ಬಂತು. ಹೊರಗೆ ಓಡಿ ಹೋಗಿ ನಿಂತ. ಆಟೋದಿಂದ ಮೂವ್ವರು ಮಹಿಳೆಯರು ಕೈಚೀಲ ಹಿಡಿದು ಇಳಿದರು. "ಹಸನ್" ಎಂದು ಸಾನಿಯಾ ಕೂಗಿದಳು. ಹಸನ್ "ಅಕ್ಕ ಜಲ್ದಿ ಬರ್‍ರಿ" ಅಂತ ಹೇಳಿ ಒಳಹೋದ. ಸಾನಿಯಾ ಒದ್ದಾಡುತ್ತಿದ್ದಳು. ಬೆನ್ನ ಹಿಂದೆಯೇ ಮೂವ್ವರು ಬಂದರು. "ನೀನು ಹೊರಗ ಇರಪ್ಪ" ಅಂತ ರಾಮಕ್ಕ ಹೇಳಿದಳು. ಮೂವ್ವರೂ ಸಾನಿಯಾಳನ್ನು ಮುತ್ತಿದರು. ಹಸನ್ ಹೊರಗೆ ನಿಂತ. ಎದೆ ಹೊಡೆದುಕೊಂಡಿತು. ಕೈಕಾಲು ನಡುಗುತ್ತಿದ್ದವು. ಮೈಯಲ್ಲಿ ಶಕ್ತಿಯೇ ಬತ್ತಿ ಹೋಗಿತ್ತು. ಅಷ್ಟರೊಳಗೇ ಫೋನ್ ರಿಂಗಾಯಿತು. "ಹಲೋ, ನಾನು..." ಅಂದು ಏನೋ ಹೇಳಲು ಹಸನ್ ನೋಡುತ್ತಿದ್ದ. ಆ ಕಡೆಯಿಂದ "ಹಸನ್, ಪ್ರೈವೆಟ್ ಡಾಕ್ಟ್ರನ್ನು ವಿಚಾರಿಸಿದ್ದೀನಿ, ಫೀಸ್ ಜಾಸ್ತಿ ಕೊಟ್ರ ಮಾಡಬಹುದಂತ ಅನಸ್ತದ. ನೀನು ಬಂದ್ರ ಮಾತಾಡಬಹುದು. ಜಲ್ದಿ ಬಾ" ಅಂತ ಕರೆದ. ಕಿವಿಗೊಡದೆ ಮನೆಯೊಳಗೆ ಏನು ನಡಿತಿದೆ ಎಂಬುದನ್ನು ನಿಂತು ಆಲಿಸಿದ. ಸಾನಿಯಾಳ ನರಳಾಟ. ಮೂವ್ವರ ಸಲಹೆಗಳು, ಮಾತುಗಳು ಕೇಳಿದವು. ಹಸನ್ ತನಗೆ ಗೊತ್ತಿದ್ದ ದೈವಗಳನ್ನು ನೆನೆಯುತ್ತ ಹೊರಗೆ ಕಟ್ಟಿಯ ಮ್ಯಾಲೆ ಕುಳಿತ...

"ಹೆರಿಗೆ ಆಯ್ತು ತಮ್ಮ. ಬೇಟಾ ಹುಟ್ಟಿದ್ದಾನೆ. ಸಾನಿಯಾ ಆರಾಮಿದ್ದಾಳೆ" ಅಂತ ರಾಮಕ್ಕ ಒಳಹೋಗಿ ಒಂದು ಗಂಟೆ ತಡೆದು ಬಂದು ಹೇಳಿದಳು. ಹಸನ್ ಅಲಿ ಕೈ ಮುಗಿದು ದೊಡ್ಡ ನಿಟ್ಟುಸಿರುಬಿಟ್ಟ. ಹಿಂದಿನಿಂದ ಸಾವಿತ್ರಿ ಬಂದು "ಹೊಸ ಬ್ಲೇಡ್ ಕೊಡಣ್ಣ" ಅಂತ ಅವಸರ ಮಾಡಿ ಕೇಳಿದಳು. ಹಸನ್ ಓಡಿ ಮನೆಯಲ್ಲಿ ನುಗ್ಗಿ, ಹುಡುಕಿ ಕೊಟ್ಟು ಮತ್ತೆ ಹೊರಬಂದು ನಿಂತ. ಮಗು ಚೀರಿದ್ದು ಕೇಳುತ್ತಿತ್ತು. ಬೆವರು ಬರುತ್ತಿದ್ದರೂ ಮುಖದಲ್ಲಿ ಸಂತಸ ಮೂಡಿತು. ಮೈಯಲ್ಲಿ ಉಮೇದಿ ತುಂಬಿತು. ಹೆರಿಗೆಯಾಗಿ ಎರಡು ತಾಸು ಆದರೂ ಆ ಮೂವರು ಬಾಗಿಲು ಹಾಕಿಕೊಂಡು ಕೆಲಸ ನಡೆಸಿದ್ದರು. ಹೊರಗೆ ಆಟೋ ಬಂದು ನಿಂತಿತು. ಆಗ ರಾತ್ರಿ ಎರಡು ಗಂಟೆ ಮೇಲಾಗಿತ್ತು. ಆ ಮೂವ್ವರು ಮಹಿಳೆಯರು ಬಾಗಿಲು ತೆಗೆದು ಹೊರಬರುತ್ತ, "ನೀನು ಹೋಗಪ್ಪ! ನಾವು ಮನೆಗೆ ಹೋಗ್ತೀವಿ. ಮುಂಜಾನೆ ಬಂದು ಮಾತಾಡಮಿ" ಅಂದಳು ರಾಮಕ್ಕ. ಹೆರಿಗೆ ಕೆಲಸ ಮುಗಿಸಿದ್ದೇ ತಡ ಸಾವಿತ್ರಿ ಆಟೋದವನಿಗೆ ಬರಲು ಫೋನ್ ಮಾಡಿದ್ದಳು. ಅವರು ಮೂವರು ಹೊರಟರು. ಹಸನ್ ಅಲಿ ಒಳ ಬಂದಾಗ ಮಂಚದ ಮೇಲೆ ಸಾನಿಯಾ ಮಲಗಿ ನಿದ್ದೆ ಹೋಗಿದ್ದಳು. ಮಗು ಕೂಡ ಮಲಗಿತ್ತು. ರೂಮ್ ಗವ್ವ್ ಅನ್ನುವ ನಿಶ್ಶಬ್ದದಿಂದ ತುಂಬಿತ್ತು. ಸುಮ್ಮನೆ ಕುಂತ! ಹೆರಿಗೆ ಮಾಡಿಸಿದ ಸೂಲಗಿತ್ತಿಯನ್ನು ಸರಿಯಾಗಿ ನೋಡದಿದ್ದರೂ ಬಹುಪರಿಚಿತಳಂತೆ, ಅನಿಸಿತು. ನೆನೆದಂತೆ ಮನದಲ್ಲಿ ಸಂಕಟವಾಗತೊಡಗಿತು!

ಹಸನ್ ಅಲಿ ಹೆಂಡತಿ, ಮಗು ಇದ್ದಲ್ಲೇ ಒಂದು ಛೇರ್ ತಂದು ಕುಳಿತ. ನಿದ್ದೆ ಹೋದರೂ ಅದು ನಿದ್ದೆ ಅನ್ನುವಂಗಿರಲಿಲ್ಲ. ಹಳವಂಡವಾಗಿತ್ತು. ಬೆಳಗ್ಗೆ ಎಚ್ಚರವಾಗುವುದೇನು? ಆಗಾಗ ಎಚ್ಚರ, ಕನಸು ನಿದ್ದೆ ಕಲಸಿಕೊಂಡಿದ್ದವು. ಆರೂವರೆಗೆ ಎದ್ದು ನಿತ್ಯಕರ್ಮಗಳನ್ನು ಮುಗಿಸುವ ಮುನ್ನವೆ ಸಾವಿತ್ರಿಯ ಫೋನ್ ಬಂತು. "ಹಲ್ಲೋ...ಖಾಸಗಿ ಆಸ್ಪತ್ರೆಗಳು ಬೆಳಗ್ಗೆಯಿಂದ ಕೆಲಸ ಮಾಡ್ತಾವಂತೆ. ನಿಮ್ಮ ಆಸ್ಪತ್ರೆಗೆ ಕರೆದುಕೊಂಡು ಹೋಗ್ರಿ" ಎಂದು ಎಚ್ಚರಿಸಿದಳು. "ಆಯ್ತು ಅಕ್ಕ, ನೀವೂ ಬನ್ನಿ, ವ್ಯಾನನ್ನು ಕರಸ್ತಿನಿ" ಅಂದ. ಅದಕ್ಕವರು ಒಪ್ಪಿಕೊಂಡು ಬಂದರು. ಫ್ಯಾಮಿಲಿ ಡಾಕ್ಟರ್ ಬಳಿ ಸಾನಿಯಾಳನ್ನು ಕರೆದುಕೊಂಡು ಹೋಗಿ ಅಡ್ಮಿಟ್ ಮಾಡಿದರು. ಅದರಿಂದ ಸಾನಿಯಾಗೂ, ಹಸನ್‌ಗೂ ಖುಷಿಯಾಯ್ತು. ಮೂರು ದಿನ ಇರಲು ಹೇಳಿದರು. ಆಸ್ಪತ್ರೆಯಲ್ಲಿ ರೋಗಿಗಳು ತುಂಬುತ್ತಿದ್ದರು. ಸಾನಿಯಾಳ ಹೆರಿಗೆಯನ್ನು ಸೂಲಗಿತ್ತಿಯೊಬ್ಬರು ಮಾಡಿಸಿದರು ಎಂಬುದು ಆಸ್ಪತ್ರೆಯಲ್ಲಿ ಸುದ್ದಿಗೆ ಕಾರಣವಾಯ್ತು! ಹಸನ್‌ಗೆ ಆ ಸೂಲಗಿತ್ತಿಯನ್ನು ಕಂಡು ಮಾತಾಡಿಸಬೇಕು ಅನ್ನಿಸಿತೆ ಹೊರತು, ಖುಷಿ ಕೊಟ್ಟು ಕೈ ತೊಳೆದುಕೊಳ್ಳಬೇಕು ಅನ್ನಿಸಲಿಲ್ಲ. ರಾಮಕ್ಕ ಜತೆಗೇ ಇದ್ದಳು. ಸಾವಿತ್ರಿ ಆಗಾಗ ಬಂದು ಹೋಗುತ್ತಿದ್ದಳು. ಆಸ್ಪತ್ರೆಯಲ್ಲಿ ಸಾನಿಯಾ ಸಮಾಧಾನದಿಂದಿದ್ದಳು. ಹೆರಿಗೆಯಾದ ಮೇಲಾದರೂ ಆಸ್ಪತ್ರೆಗೆ ಬಂದ ಖುಷಿಯಿತ್ತು. ಹಸನ್ ಅಲಿಗೆ ಆ ಸೂಲಗಿತ್ತಿ ಕಾಡುತ್ತಿದ್ದಳು. ಆಕೆ ಆಟೋ ಇಳಿದು ಮನೆಗೆ ಬಂದದ್ದನ್ನು, ಹೆರಿಗೆ ಮುಗಿಸಿ ಮಧ್ಯರಾತ್ರಿ ಪುನಃ ಹೋದದ್ದನ್ನು ಅಸ್ಪಷ್ಟವಾಗಿ ಅದೂ ಉದ್ವೇಗದಲ್ಲಿ ನೋಡಿದ್ದರೂ ಮತ್ತೆ ಮತ್ತೆ ನೆನಪಾಗಿದ್ದಳು. ಮೂರು ದಿನ ಆಸ್ಪತ್ರೆಯಲ್ಲಿದ್ದು ಸಾನಿಯಾಳನ್ನು ಮನೆಗೆ ಕರೆತಂದರು. ಫ್ಯಾಮಿಲಿ ಡಾಕ್ಟರ್, ಫ್ಯಾಮಿಲಿ ಆಸ್ಪತ್ರೆ ಅಂತ ವಿಶ್ವಾಸವಿರಿಸಿಕೊಂಡಿದ್ದರೂ, ಹೆರಿಗೆಯಾದ ಮೇಲೆ ಹೋಗಿದ್ದರೂ ಚಾರ್ಜ್ ಮಾತ್ರ ಗಾಬರಿಯಾಗುವಂತೆ ಮಾಡಿದ್ದರು.

"ತಮ್ಮ ಆ ಸೂಲಗಿತ್ತಿ ಎಷ್ಟು ಕರೆದರೂ ಮನೆಗೆ ಬರಲಿಲ್ಲಪ್ಪ. ಸೊಸೆ ನಾನು ಸೇರಿ ಮತ್ತೊಮ್ಮೆ ಹೋಗಿ ಬಂದೆವು. ಹೆರಿಗೆ ಮಾಡಿಸುವುದು ನಾನಲ್ಲಮ್ಮ, ಅಲ್ಲಾನ ದಯ. ನಮ್ಮಿಂದ ಮಾಡಸ್ತಾನಮ್ಮ ಅಂದಳಪ್ಪ" ಎಂದು ರಾಮಕ್ಕ ಬಂದು ಹೇಳಿದಳು. ಹಸನ್ ಅಲಿ ಆಕೆ ಇರುವ ವಿಳಾಸ ಕೇಳಿಕೊಂಡು ಬಂದ. ಅದೊಂದು ಹೆರಿಗೆ ಆಸ್ಪತ್ರೆ. ವರ್ಷದ ಹಿಂದೆ ನೋಡಿದ್ದ. ಗಮನ ಹೋಗಿರಲಿಲ್ಲ. ಅಲ್ಲಿದ್ದ ನರ್ಸುಗಳನ್ನು ಕೇಳಿದ. "ಆಕೆ ನಮ್ಮ ಡಾಕ್ಟರ್ ಊರಿನವಳು. ಅವರೇ ಕರಕೊಂಡ ಬಂದಾರ. ನರ್ಸ ಅಲ್ಲ. ವಾರ್ಡ್‌ಗಳಲ್ಲಿ ಕೆಲ್ಸ ಮಾಡ್ತಾಳ. ಆಸ್ಪತ್ರೆ ಇಂದ ಕಾಂಪೌಂಡ್ ಒಳಗೇ ಸೆಡ್ ಇದೆ. ಅಲ್ಲಿರ್‍ತಾಳ" ಎಂದು ದಾರಿಯನ್ನು ತೋರಿಸಿದಳು. ಹಸನ್ ವಾರ್ಡ್‌ಗಳನ್ನು ದಾಟಿ ಹೋದ. ಹಿಂದಿನ ಬಾಗಿಲು ತೆರೆದಿತ್ತು. ಬಾಗಿಲಿನಿಂದ ಹಿತ್ತಲಿಗೆ ಬಂದ. ಸೆಡ್ ಇತ್ತು. ಸ್ವಚ್ಛವಾಗಿತ್ತು ಅಲ್ಲಿನ ಪರಿಸರ. ಯಾರೂ ಇನ್ನೂ ಬಂದಿರಲಿಲ್ಲ. ಹೋಗಿ "ಯಾರಿದ್ದೀರಿ?" ಎಂದು ಕರೆದ. "ಯಾರು? ಯಾರಂತ...?" ಎಂದು ಹೊರಬಂದಳು ಆ ಸೂಲಗಿತ್ತಿ. ಹಸನ್ ಅಲಿ ನೋಡಿ ದಂಗಾದ! ಎದೆ ಹೊಡೆದುಕೊಂಡಿತು! ಕೈಕಾಲು ನಡುಗುತ್ತಿದ್ದವು. ಆಕೆಯೂ ನೋಡಿ ಮಾತಿಲ್ಲದೆ ನಿಂತಳು. ತಲೆ ತುಂಬ ಸೆರಗು ಹಾಕಿಕೊಂಡಳು.

"ದೊಡ್ಡಮ್ಮ" ಅಂತ ಕರೆದ.

"ಮಗ, ನನ್ನ ಮೊಮ್ಮಗ ಹೆಂಗಿದ್ದಾನ? ಸೊಸೆ? ಸುಂದರಿಯಾಗಿದ್ದಾಳಪ್ಪ.

ಈಗ ಅರಾಮಿದ್ದಾರಲ್ಲ?" ಎಂದು ಕೇಳಿದಳು. ಹಸನ್ ಅಲಿ ಧಾವಿಸಿ ಬಂದು ಕಾಲಿಗೆ ನಮಸ್ಕರಿಸಿದ. ಆಕೆ "ಅಯ್ಯ, ಹಸನ" ಅಂತ ಎತ್ತಿ ಅಪ್ಪಿಕೊಂಡೇ ಬಿಟ್ಟಳು! ಮುಖಗಳು ವಿರುದ್ಧ ದಿಕ್ಕಿನಲ್ಲಿದ್ದರೂ, ಹೃದಯಗಳು ಅಪ್ಪಿಕೊಂಡಿದ್ದವು. ಇಬ್ಬರ ಕಣ್ಣಲ್ಲಿ ನೀರೇ ನೀರು!

೬

ಹಸನ್ ಅಲಿ ದೊಡ್ಡಮ್ಮನನ್ನು ನೋಡಿದ ಮೇಲೆ ಚಿಂತೆಯಿಂದ ಪಶ್ಚಾತ್ತಾಪದಿಂದ ಕುದ್ದು ಒಂದೇ ದಿನದಲ್ಲಿ ಮುದುರಿಹೋಗಿದ್ದ. ಸಾನಿಯಾಗೂ ಹೇಳಲಿಲ್ಲ. ರಾಮಕ್ಕ, ಸಾವಿತ್ರಿಗೂ ಹೇಳಲಿಲ್ಲ. ಮಹಾತಪ್ಪು ತನ್ನಿಂದಲೇ ಆಗಿದ್ದರಿಂದ ಹೇಳಲಿಲ್ಲ. ಹೇಳಿದ್ದರೆ ಅವರೆಲ್ಲರ ಮುಂದೆ ಸಣ್ಣವನಾಗುತ್ತೇನೆಂಬ ಅಳುಕು ಕಾಡಿತು. ಸಾನಿಯಾ ಹೇಗೆ ಪ್ರತಿಕ್ರಿಯೆ ಮಾಡ್ತಾಳಂತ ತಿಳಿಯದೇ ಮೂಕನೋವು ಅನುಭವಿಸಿದ್ದ. ನಾರ್ಮಲ್ ಹೆರಿಗೆ ಮಾಡಿಸಿದ್ದರಿಂದ ಆ ಸೂಲಗಿತ್ತಿಗೆ ಖುಷಿಯಾಗುವಷ್ಟು 'ಖುಷಿ'ಯನ್ನು ಹಣದ ರೂಪದಲ್ಲಿ ಕೊಡಲು ಉಮೇದಿ ಹೊಂದಿದ್ದ. ಆ ಸೂಲಗಿತ್ತಿ ದೊಡ್ಡಮ್ಮನೇ ಆಗಿದ್ದರಿಂದ 'ಖುಷಿ' ಕೊಡುವುದು ಕ್ಷುಲ್ಲಕ ಸಂಗತಿಯಾಗಿ ಕಂಡಿತು. "ಆ ಸೂಲಗಿತ್ತಿಯಮ್ಮನನ್ನು ಕರಕೊಂಡು ಬಾ. ಜೀವ ಉಳಿಸಿದ್ದಾಳೆ ಆಕೆ. ಈ ಕೂಸನ್ನ ಕೊಟ್ಟಿದ್ದಾಳೆ' ಅಂತ ಸಾನಿಯಾ ಐದಾರು ಸಲ ಹೇಳಿದ್ದಳು. ರಾಮಕ್ಕ 'ಆಕೆ ಬರದಿಲ್ಲಂತಾಳ, ಬುಡವ್ವ' ಅಂತ ಬೇಸರ ಮಾಡಿಕೊಂಡು ಅಂದಿದ್ದಳು. 'ನಾವು ಮುಸ್ಲಿಮರಂತ ಆಕೆಗೆ ಗೊತ್ತಿರಲಿಲ್ಲವೇನೋ...' ಅಂತ ಸಹಜವಾಗಿ ಅಂದಿದ್ದಳು. ಹಸನ್ ಅಲಿ ಕುಸಿದಿದ್ದರಿಂದ ಸಾನಿಯಾ 'ಎಲ್ಲ ಸರಿ ಹೋಯ್ತಲ್ಲ? ಮತ್ಯಾಕ ಚಿಂತೆ? ಪಪ್ಪಾನೇ 'ನಿನ್ನ ಗಂಡ ದೇವರಂಥವನು ಅಂತ ಹೇಳಿದ್ದಾನೆ' ಅಂತ ಹೇಳಿದ್ದಳು. ಸಾನಿಯಾಗೆ ಹೆರಿಗೆ ರಜೆ ಸಿಕ್ಕಂತೆ ಗಂಡನಾದ ಹಸನ್ ಅಲಿಗೂ ಕೆಲವು ದಿನ ನಿಯಮದಂತೆ ರಜೆಗಳು ಮಂಜೂರಾಗಿದ್ದವು. ಹಾಗಾಗಿ ಮನೆಯಲ್ಲಿದ್ದ. ಮೇಲಾಗಿ ಈ ದಿನ ಮನೆಗೆ ದೊಡ್ಡಮ್ಮ ಬರ್ತಾಳೆ ಅಂತ ಕಾಯ್ತಿದ್ದ. ಹೇಳಿ ಒಪ್ಪಿಗೆ ತಗೊಂಡೇ ಬಂದಿದ್ದ. ಕರೆ ತರಲು ಆಟೋ ರಿಕ್ಷಾದವನನ್ನೂ ಗೊತ್ತು ಮಾಡಿದ್ದ.



"ಸಾನಿಯಾ, ನಾನು ತಪ್ಪು ಮಾಡಿದ್ದೀನಿ. ನಮ್ಮೂರಲ್ಲಿ ನನ್ನ ಅಪ್ಪ, ಅಮ್ಮನಿಗೆ ನಾನೊಬ್ಬನೇ ಮಗ. ನಮ್ಗ ಜಮೀನು ಇರ್ಲಿಲ್ಲ. ಅಪ್ಪ, ಅಮ್ಮ ಸೇರಿ ಕೆಲವು ಕುರಿ–ಆಡು ಸಾಕಿಕೊಂಡಿದ್ದರು. ಒಂದು ಎರಡು ಮಾರುವುದು ಜೀವನ ನಡೆಸುವುದು. ಮರಿಗಳನ್ನು ಬೆಳೆಸುವುದು ದೊಡ್ಡವಾದವುಗಳನ್ನು ಮಾರುವುದು. ಹೀಗೆ ಬದುಕು ಸಾಗಿಸುವುದು ಮಾಡುತ್ತ ಚಂದ ಇದ್ದರು. ನನ್ಗೆ ಮೂರು ತುಂಬಿ ನಾಲ್ಕನೇ ವರ್ಷ ಇರುವಾಗ ಅವ್ವ ಯಾವುದೋ ಕಾಯಿಲೆಯಿಂದ ಹಾಸಿಗೆ ಹಿಡಿದಳು. ಒಳ್ಳೆಯ ಡಾಕ್ಟರ್ ಹತ್ತಿರ ತೋರಿಸಲು ಅಪ್ಪನಿಗೆ ತಿಳಿಯಲಿಲ್ಲ. ಅಮ್ಮ ಸತ್ತಳು! ಅಪ್ಪನಿಗೆ ದಿಕ್ಕು ತೋಚಲಿಲ್ಲ. ಅವ್ವನ ಅಕ್ಕ ಒಬ್ಬಳು ವಿಧವೆಯಾಗಿ ಮನೆಯಲ್ಲಿದ್ದಳು. ಆಕೆಯನ್ನು ಕರೆಸಿ ನನ್ನನ್ನು ಸಾಕಲು ಒಪ್ಪಿಸಿದ. ಕುರಿ–ಆಡುಗಳನ್ನು ಸಾಕುತ್ತಲೇ ದಿನ ನೂಕಿದ ಅಪ್ಪ, ನನ್ನನ್ನು ಸಾಲಿಗೆ ಓದಲೆಂದು ಊರಲ್ಲೇ ಕಳಿಸಿದ. ಮೂರು ವರ್ಷವಾಗಿರಲಿಲ್ಲ. ಕೆಲವು ಕುರಿ, ಆಡುಗಳನ್ನು, ದೊಡ್ಡಮ್ಮನಿಗೆ ಒಪ್ಪಿಸಿ, "ನಾನು ಬೇರೆ ದಂಥೆ ಮಾಡ್ತಿನಿ. ನೀನು ಈ ಮಗನ್ನ ಸಾಕು. ಈ ಕುರಿ, ಆಡುಗಳನ್ನು ಸಾಕು" ಅಂತ ಹೇಳಿ ಹೋದ ಅಪ್ಪ ಮರಳಿ ಬರಲಿಲ್ಲ. ಮತ್ತೆ ಬರ್ತಾನಂತ ಜೀವನ ನಡೆಸಿದ್ದಳು. ದೊಡ್ಡಮ್ಮನಿಗೆ ನಾನೇ ಮಗನಾಗಿದ್ದೆ. ಮಮತೆಯಿಂದ ನೋಡಿಕೊಂಡಳು. ಊರಲ್ಲಿ ಶಾಲೆ ಮುಗಿತು. ಪಕ್ಕದೂರಿನಲ್ಲಿ ಹೈಸ್ಕೂಲ್ ಇತ್ತು. ಅಲ್ಲಿ ಓದಿದೆ. ಕಾಲೇಜು ಸೇರಿದೆ. ಸರ್ಕಾರಿ ಹಾಸ್ಟೆಲ್‌ನಲ್ಲಿ ನನ್ನ ಜೀವನ. ಆ ವರ್ಷ ದೊಡ್ಡಮ್ಮನ ಆಡು–ಕುರಿಗಳಿಗೆ ಕಾಯಿಲೆ ಬಂದು ವಾರದಲ್ಲಿ ಇದ್ದ ಏಳೆಂಟು ಸತ್ತವಂತೆ. ಜೀವನಕ್ಕೆ ಆಸರೆ ತಪ್ಪಿತು. ಊರಲ್ಲಿ ಬಾಣಂತಿತನ ಮಾಡುತ್ತ, ಕೂಸುಗಳ ಹೇಲ್ಬಟ್ಟೆಗಳನ್ನು ಹಳ್ಳಕ್ಕೆ ಒಯ್ದು ತೊಳೆಯುವ ಕೆಲಸಕ್ಕೆ ತೊಡಗಿ ಜೀವನ ಸಾಗಿಸಿದಳು. ಬರುಬರುತ್ತ ದೊಡ್ಡಮ್ಮನಿಗೆ ಮನೆಯೆಂಬುದೇ ಇರಲಿಲ್ಲ. ಹೆರಿಗೆಯಾದವರ ಮನೆಯಲ್ಲೇ ವಾಸವಾಯ್ತಂತೆ. ನಾನು ಊರಿಗೆ ಬಂದರೆ ಪ್ರೀತಿ ಮಾಡುತ್ತ, ಹಣ ಕೊಡುತ್ತಲೇ ಇದ್ದಳು. ಮನೆಯಿಲ್ಲದ ಕಾರಣ ನನಗೆ ಊರಿಗೆ ಹೋಗಲು ಮನಸ್ಸು ಬರಲಿಲ್ಲ. ಆದ್ರೆ ಆಕೆಯೇ ನನ್ನ ಹಾಸ್ಟೆಲಿಗೆ ಬಂದು, ಅವರಿವರ ಮನೆಯಲ್ಲಿದ್ದರೂ ಸಿಹಿ ತಿಂಡಿ ಮಾಡಿಸಿಕೊಂಡು ಬಂದು ಕೊಡುತ್ತಿದ್ದಳು. ದೊಡ್ಡಮ್ಮನಿಗೆ ಮನೆಯೊಂದು ಬೇಕು ಅಂತ ನನ್ಗ ಅನ್ನಿಸಿದ್ರೂ ನನ್ನಿಂದ ಏನು ಸಾಧ್ಯ? ಅಸಹಾಯಕನಾಗಿದ್ದೆ. ಬಿ.ಎ. ಓದುವಾಗ ಕೊನೆ ಕೊನೆಗೆ ದೊಡ್ಡಮ್ಮ ಮೂರು ನಾಲ್ಕು ತಿಂಗಳಿಗೊಮ್ಮೆ ಸಿಹಿ ತಿನಿಸು ತರುತ್ತಿದ್ದಳಲ್ಲ, ಅವುಗಳನ್ನು ಗೆಳೆಯರು ತಿನ್ನಲಿಲ್ಲ. ಏನೇನೋ ನೆಪ ಹೇಳಿ ತಪ್ಪಿಸಿಕೊಂಡರು. ನನಗೆ ಖಜಿಲಾಯಿತು. ಕಾರಣ ತಿಳಿಯಿತು. ಅದಕ್ಕಾಗಿ ಸಿಹಿ ತಿನಿಸುಗಳನ್ನು ಮುಟ್ಟಲಿಲ್ಲ. ನನ್ಗೆ ಅವಮಾನವಾಯ್ತು. 'ತರಬೇಡ' ಅಂತ ದೊಡ್ಡಮ್ಮನಿಗೆ ತಾಕೀತು ಮಾಡಿದೆ. ನನ್ಗೂ ದೊಡ್ಡಮ್ಮನ ಮ್ಯಾಲೆ ಜಿಗುಪ್ಸೆ ಬಂತು.

"ನಂತರ ಊರಲ್ಲಿ ಸಾಹುಕಾರ ಸೋಮನಗೌಡನ ಮನೆಯಲ್ಲಿ ಬಾಣಂತಿತನ ಮಾಡುತ್ತ, ಆತನ ಜೊತೆಗಿದ್ದಳೆಂದೂ ಊರಲ್ಲಿ ಸುದ್ದಿಯಿತ್ತು. ಅದು ನನ್ಗೂ ಕಿವಿಗೆ ಬಿತ್ತು. ನಾನು ದೊಡ್ಡಮ್ಮನಿಂದ ದೂರಾದೆ. ಆದ್ರೂ ದೊಡ್ಡಮ್ಮ ಊರವರಿಂದ ನನ್ನ ಬಗ್ಗೆ ಕೇಳಿ ತಿಳಿದುಕೊಂಡು ಖುಷಿಪಡುತ್ತಿದ್ದಳಂತೆ. ಖರ್ಚಿಗೆ ಹಣವನ್ನೂ ಕೊಟ್ಟು ಕಳಿಸುತ್ತಿದ್ದಳು. ಆದ್ರೆ ನಾನು ಅದನ್ನು ವಾಪಾಸು ಕಳಿಸಿದೆ. ನಂತರ ನನ್ನ–ನಿನ್ನ ಲವ್, ನಂತರ ಮದುವೆ, ನಿನ್ನ ಶ್ರೀಮಂತ ಅಪ್ಪನ ವರ್ಚಸ್ಸು, ನನಗೂ, ನಿನ್ಗೂ ನೌಕರಿ ಕೊಡಿಸಿದ. ದೊಡ್ಡಮ್ಮನ ಕೆಲ್ಸ ಕೇಳಿ ಜನ, ನಿಮ್ಮ ಮನೆ ಮಂದಿ ಏನಂತಾರೋ ಅಂತ ಭಯ ನಿನ್ನ ಸ್ವಭಾವ...? ದೊಡ್ಡಮ್ಮನನ್ನು ಮರೆತುಬಿಟ್ಟೆ..." ಹಸನ್ ಅಲಿ ಅಳತೊಡಗಿದ.

"ಈಗೇನು? ಟ್ರ್ಯಾಜಿಡಿಯಾ...?" ಸಾನಿಯಾ ಎಳೆದುಕೊಂಡು ಕೇಳಿದಳು. "ತೀರಿಕೊಂಡಳೇನು" ಅನುಮಾನದಿಂದ ಕೇಳಿದಳು. ಹಸನ್ ಅಲಿ ಕಣ್ಣೀರು ಒರೆಸಿಕೊಂಡು, ದುಃಖ ತಡೆದುಕೊಂಡು "ಇಲ್ಲ ಸಾನಿಯಾ, ಇಲ್ಲ. ನಿನ್ನ ಹೆರಿಗೆ ಮಾಡಿಸಿ ಹೋದಳಲ್ಲ. ಆಕೆಯೇ ನನ್ನ ದೊಡ್ಡಮ್ಮ!" ಅಂದ.

"ಯಾ... ಅಲ್ಲಾ...!" ಅಂದು ಎದ್ದು ಕುಂತಳು.

"ಇಲ್ಲಿ, ಈ ಊರಲ್ಲಿ ಇದ್ದಾಳೇನು?..."

"ಹೂಂ! ನಮ್ಮೂರ ಸಾಹುಕಾರ ಸೋಮನಗೌಡನ ಕೊನೆಯ ಮಗ ಡಾಕ್ಟರ್ ಆಗಿದ್ದಾನ. ಸೊಸೆನೂ ಡಾಕ್ಟರ್. ಹೆರಿಗೆ ಆಸ್ಪತ್ರೆ ಓಪನ್ ಮಾಡಿ ಮೂರು ವರ್ಷ ಆಯ್ತಂತ. ಊರಲ್ಲಿ ದೊಡ್ಡಮ್ಮನ ಸೂಲಗಿತ್ತಿತನ, ಬಾಣಂತಿತನ ನೋಡಿದ್ದ ಮಗನೇ ಸುಮ್ಮನೆ ಇರಲು, ಹೆರಿಗೆಗೆ ಬಂದವರ ಮೇಲೆ ನಿಗಾ ಇಡಲು ಕರೆತಂದು ಆಶ್ರಯ ನೀಡಿದ್ದಾನೆ" ಎಂದು ಹೇಳಿದ.

✳ ✳ ✳

ಆ ಮಧ್ಯಾಹ್ನ ಸಾವಿತ್ರಿ ಜತೆ, ದೊಡ್ಡಮ್ಮ ಮನೆಗೆ ಬಂದಳು. ಸಾನಿಯಾ ನಮಸ್ಕಾರ ಮಾಡಿ, ಅಪ್ಪಿಕೊಂಡಳು. 'ಮಾ...' ಅಂದಳು. ದೊಡ್ಡಮ್ಮನಿಗೆ ವಯಸ್ಸಾಗಿದ್ದರೂ ಉಮೇದಿ ಕಂಡಿತು. ಮೊಮ್ಮಗನನ್ನು ಎತ್ತಿಕೊಂಡು ಮುದ್ದಿಸಿದಳು. ಹಸನ್ ಅಲಿಯ ಕಣ್ಣೀರು ನಿಲ್ಲಲಿಲ್ಲ. "ಅವ್ವ, ಒಂದು ಚಂದದ ಹೆಸರು ಇಟ್ಟು, ಕರಿ ನೀನು" ಅಂತ ಹೇಳಿದ.

"ನೀವು ಹೊಸ ಹೊಸ ಹೆಸರು ಇಡುವವರು. ನನ್ಗೇನು ಗೊತ್ತು? ನನ್ಗ ಗೊತ್ತಿರುವುದು ಒಂದೇ ಹೆಸರು 'ಹೊನ್ನೂರ ಅಲಿ' ಅಂದಳು ಸಹಜವಾಗಿ.

"ಹೊನ್ನೂರ್... ವಾಹ್ವ್!" ಅಂದಳು ಸಾನಿಯಾ. ಅದು ದೊಡ್ಡಮ್ಮನ ಗಂಡನ ಅಂದ್ರೆ ಹಸನ್ ಅಲಿ ತಾತನ ಹೆಸರು ಅಂತ ಹಸನ್ ಅಲಿಗೆ ಮಾತ್ರ ಅರಿವಿಗೆ ಬಂತು!

**ಅಮರೇಶ ನುಗಡೋಣಿ**
ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ – ೫೮೩ ೨೭೬, ಬಳ್ಳಾರಿ ಜಿಲ್ಲೆ

# ನೆನಪುಗಳ ನಾಶ : ಹಿಂಸೆಗೆ ಸಮ್ಮತಿ

ಜಿ. ರಾಜಶೇಖರ

ಗಾಂಧೀಜಿ ತಮ್ಮ ಇಳಿವಯಸ್ಸಿನಲ್ಲಿ ಕೈಕೊಂಡ ಒಂದು ಸತ್ಯಾಗ್ರಹ ಈಗ ಪವಾಡದಂತೆ ಕಾಣುತ್ತದೆ. ಆದರೆ ಸತ್ಯಾಗ್ರಹವನ್ನು ನಿಲ್ಲಿಸಲು ಅವರು ಹಾಕಿದ ಷರತ್ತುಗಳನ್ನು ಸೂಕ್ಷ್ಮವಾಗಿ ಪರಿಶೀಲಿಸಿದರೆ ಅವರು ಪ್ರಜೆಗಳು ಮತ್ತು ಸರಕಾರದಿಂದ ನಡೆಸಿಕೊಡಲು ಅಸಾಧ್ಯವಾದ ಏನನ್ನೂ ಬಯಸಿರಲಿಲ್ಲ ಎಂಬುದು ಸ್ಪಷ್ಟವಾಗುತ್ತದೆ. ತನ್ನ ಷರತ್ತುಗಳ ಮುಖಾಂತರ ಪ್ರಜಾಪ್ರಭುತ್ವವೊಂದರಲ್ಲಿ ಪ್ರಜೆಗಳು ಮತ್ತು ಪ್ರಭುತ್ವ ಪಾಲಿಸಲೇಬೇಕಾದ ಕೆಲವು ಕರ್ತವ್ಯಗಳನ್ನು ಮಾತ್ರ ಅವರು ವಿಧಿಸಿದ್ದರು. ದೆಹಲಿಯ ಮುಸ್ಲಿಮರನ್ನು ಅವರು ಅನ್ಯರೆಂದಾಗಲೀ ಅನ್ಯಮತೀಯರೆಂದಾಗಲೀ ಭಾವಿಸಲಿಲ್ಲ. ಸರಕಾರ ಮತ್ತು ದೆಹಲಿಯ ಹಿಂದುಗಳು ಅಲ್ಲಿನ ಮುಸ್ಲಿಮ್ ನಿವಾಸಿಗಳನ್ನು ಪ್ರಜೆಗಳೆಂದೇ ನಡೆಸಿಕೊಳ್ಳಬೇಕು ಎಂಬುದು ಗಾಂಧೀಜಿಯವರ ಆಗ್ರಹವಾಗಿತ್ತು.



**೨೦೧೭ರ** ಗುಜರಾತ್ ವಿಧಾನಸಭಾ ಚುನಾವಣೆ ಕುರಿತು ಬರೆಯುತ್ತ ಖ್ಯಾತ ಚಿಂತಕ ಶಿವ್ ವಿಶ್ವನಾಥನ್, ಈ ಚುನಾವಣೆಯಲ್ಲಿ ಜನತಂತ್ರ ಅನುಭವಿಸಿದ ಮೂರು ಸೋಲುಗಳ ಬಗ್ಗೆ ಹೇಳುತ್ತಾರೆ (ದ ಅದರ್ ಸೈಡ್ ಆಫ್ ಏನ್ ಎಲೆಕ್ಷನ್ – ಶಿವ್ ವಿಶ್ವನಾಥನ್ – ದಿ ಹಿಂದು – ನವೆಂಬರ್ ೨೦, ೨೦೧೭ ಪುಟ ೮). ಆ ಪೈಕಿ ಅವರು ಮೊದಲಿಗೆ ಪ್ರಸ್ತಾಪಿಸುವುದು ಗುಜರಾತ್ – ೨೦೦೨ರ ಹಿಂಸೆಯ ಬಗ್ಗೆ. ಬಿ.ಜೆ.ಪಿ. ಮಾತ್ರವಲ್ಲ, ಕಾಂಗ್ರೆಸ್ ಸೇರಿದಂತೆ ಉಳಿದ ಅಷ್ಟೂ ರಾಜಕೀಯ ಪಕ್ಷಗಳು ತಳೆದಿರುವ ಮೌನ ಆ ಹಿಂಸಾಕಾಂಡದ ನೆನಪುಗಳನ್ನು ಸರ್ವಾನುಮತಿಯಿಂದ ಅಳಿಸಿಹಾಕಿರುವುದೇ ಪ್ರಸ್ತುತ ಚುನಾವಣೆಯ ಹೆಗ್ಗುರುತು ಎಂದು ಶಿವ್ ಭಾವಿಸುತ್ತಾರೆ. ಆದರೆ ಆ ರಾಜ್ಯದಲ್ಲಿ ೨೦೦೨ರ ಫೆಬ್ರವರಿ ತಿಂಗಳ ಕೊನೆಗೆ ಮುಸ್ಲಿಮ್ ಸಮುದಾಯದ ಮೇಲೆ ನಡೆದ ಹಿಂಸೆಯ ವ್ಯಾಪಕತೆ ಮತ್ತು ತೀವ್ರತೆಗಳನ್ನು ಅಳಿಸಿಹಾಕುವುದು ಅಷ್ಟು ಸುಲಭವಲ್ಲ. ಈ ಮಾತಿಗೆ ಶಿವ್ ಗುಜರಾತ್‌ನಲ್ಲಿ ತಾನು ಕಂಡ ಕೆಲವು ವಿಲಕ್ಷಣ ಸಂಗತಿಗಳನ್ನು ಉದಾಹರಿಸುತ್ತಾರೆ. ಅವರಿಗೆ ಪರಿಚಯವಿರುವ ಅಹ್ಮದಾಬಾದ್‌ನ ಓರ್ವ ಅಧ್ಯಾಪಿಕೆಗೆ ಇಬ್ಬರು ಮಕ್ಕಳು. ಆ ಪೈಕಿ ಹಿರಿಯವಳಿಗೆ ೧೨ ವರ್ಷ; ಅವಳಿಗೊಬ್ಬ ತಮ್ಮನಿದ್ದಾನೆ. ಒಮ್ಮೆ ಅವರಿಬ್ಬರ ನಡುವೆ ಜಗಳ ಹತ್ತಿಕೊಂಡು ಮಾತಿಗೆ ಮಾತು ಬೆಳೆದು ತಮ್ಮ ಅಕ್ಕನಿಗೆ "ಮುಸ್ಲಿಮರಿಗೆ ಹಿಂದುಗಳು ಏನು ಮಾಡಿದರೋ ಅದನ್ನೇ ನಿನಗೂ ಮಾಡಿಬಿಡುತ್ತೇನೆ ನೋಡು" ಎಂದು ಧಮ್ಕಿ ಹಾಕುತ್ತಾನೆ. ಇಷ್ಟಕ್ಕೂ ಅವನಿಗಿನ್ನೂ ೧೦ ವರ್ಷಗಳು ! ಹಿಂಸೆ ಇಷ್ಟು ಸರ್ವೇ ಸಾಮಾನ್ಯವಾಗುವುದರ ಅರ್ಥವೇನು ? ರಾಜಕೀಯ ಪಕ್ಷ ಮತಮಾನ್ಯ ಮತ್ತಿತರ ಸಂಸ್ಥೆಗಳು ನೆನಪುಗಳನ್ನು ಅಳಿಸಿಹಾಕುವ ಪ್ರಯತ್ನಗಳನ್ನು



ನಿರಂತರವಾಗಿ ನಡೆಸುತ್ತವೆ. ಆದರೆ ಜನಸಮುದಾಯಗಳಿಗೆ ಆ ಪ್ರಮಾಣದ ಹಿಂಸೆಯ ನೆನಪುಗಳಿಂದ ಬಿಡುಗಡೆ ಇಲ್ಲ. ಹಿಂಸೆ ನಮ್ಮ ಭಾಷೆಯನ್ನು ಸಹ ಸುಡುತ್ತದೆ. ತನ್ನ ಲೇಖನದಲ್ಲಿ ಶಿವ್ ವಿಶ್ವನಾಥನ್ ಕೊಡುವ ಎರಡನೆಯ ಉದಾಹರಣೆ ಗುಜರಾತ್ ರಾಜಧಾನಿ ಅಹ್ಮದಾಬಾದ್‌ನ ಒಬ್ಬ ಟ್ಯಾಕ್ಸಿ ಡ್ರೈವರ್‌ನದ್ದು. ನಗರದ ವಿವಿಧ ಬಡಾವಣೆಗಳಿಗೆ ಶಿವ್ ಅವರನ್ನು ಒಯ್ಯುತ್ತಿದ್ದ ಆ ಡ್ರೈವರ್ ಕ್ರಮೇಣ ಅವರಿಗೆ ಪರಿಚಿತನಾದ. ಶಿವ್, ಆ ನಗರದ ಜನಸಾಮಾನ್ಯರ ಜೊತೆ ನಡೆಸುತ್ತಿದ್ದ ಮಾತುಕತೆಯನ್ನು ಆತ ಕಿವಿಗೊಟ್ಟು ಕೇಳುತ್ತಿದ್ದ. ೨೦೦೨ರ ಹಿಂಸೆಯ ದಿನಗಳಲ್ಲಿ ಮುಸ್ಲಿಮರ ಮೇಲೆ ಹಲ್ಲೆ ಮಾಡಿದ ಗುಂಪುಗಳ ಜೊತೆ ಅವನೂ ಸೇರಿಕೊಂಡಿದ್ದ. ಒಮ್ಮೆ ನಗರದಲ್ಲಿ ಸಂಚರಿಸುತ್ತಿದ್ದಾಗ ಇದ್ದಕ್ಕಿದ್ದಂತೆ ಗಾಡಿ ನಿಲ್ಲಿಸಿ ಅವನು ಶಿವ್ ಅವರತ್ತ ತಿರುಗಿ, "ನಾನು ಕೂಡ ಅವರಲ್ಲಿ ಒಬ್ಬನಾಗಿದ್ದೆ. ಈಗ ನಾನು ಏನು ಮಾಡಬೇಕು ?" ಎಂದು ಕೇಳಿದ. ಹಿಂಸೆಗೊಳಗಾದವರು ಮಾತ್ರವಲ್ಲ, ಹಿಂಸೆ ಎಸಗಿದವರೂ ಅದರ ಭಾರದಡಿ ನರಳುತ್ತಾರೆ. ೨೦೦೨ರ ನಂತರ ಗುಜರಾತ್ 'ಸಹಜ ಸ್ಥಿತಿ'ಗೆ ಮರಳಲೇ ಇಲ್ಲ. ಅದಕ್ಕೆ ಬದಲಾಗಿ ಒಂದು ಕೃತಕವಾದ ಸಹಜ ಸ್ಥಿತಿಯನ್ನು ಅಲ್ಲಿ ಸೃಷ್ಟಿಸಲಾಗಿದೆ. ಹಿಂಸೆಯಲ್ಲಿ ನೊಂದವರನ್ನು 'ಆದದ್ದು ಆಗಿ ಹೋಯಿತು ; ಮರೆತು ಬಿಡಿ' ಎಂದು ಬಲಾತ್ಕರಿಸುವುದು ಮತ್ತು ಬಾಯಿ ಮುಚ್ಚಿಸುವುದು ರಾಜ್ಯದಲ್ಲಿ ನಡೆದಿದೆ. ಇಂತಹ 'ಸಹಜಸ್ಥಿತಿ'ಯಿಂದಾಗಿ ಸಮಾಜವೇ ಸರ್ರಿಯಲ್ ಆಗಿ ಕಾಣುತ್ತಿದೆ ಎಂದು ಶಿವ್ ಹೇಳುತ್ತಾರೆ.

ಶಿವ್ ತನ್ನ ಬರಹದಲ್ಲಿ ಗುಜರಾತ್‌ನ ಅತ್ಯಂತ ಹಿರಿಯ ಪೊಲೀಸ್ ಅಧಿಕಾರಿಗಳಲ್ಲಿ ಒಬ್ಬರಾಗಿದ್ದ ಶ್ರೀಕುಮಾರ್ ಬಗ್ಗೆಯೂ ಹೇಳುತ್ತಾರೆ. ಗುಜರಾತ್ ಪೊಲೀಸ್ ಇಲಾಖೆಯಲ್ಲಿ ಅಡಿಷನಲ್ ಡೈರೆಕ್ಟರ್ ಜನರಲ್ ಆಗಿದ್ದ ಶ್ರೀಕುಮಾರ್, ೨೦೦೨ರ ಹಿಂಸೆಯ ದಿನಗಳಲ್ಲಿ ತನ್ನ ಕರ್ತವ್ಯವನ್ನು ಪ್ರಾಮಾಣಿಕವಾಗಿ ನಿರ್ವಹಿಸಿದವರು. ದೇಶದ ಕಾನೂನು ಮತ್ತು ಸಂವಿಧಾನಕ್ಕೆ ಮಾತ್ರ ನಿಷ್ಠೆಯಿಂದ ನಡೆದುಕೊಂಡ ಶ್ರೀಕುಮಾರ್ ಆ ಕಾರಣಕ್ಕೇನೆ, ತನ್ನ ಮೇಲಧಿಕಾರಿಗಳ ಅವಕೃಪೆಗೂ ಪಾತ್ರರಾದರು (ಈಗ ನಿವೃತ್ತರಾಗಿರುವ ಶ್ರೀಕುಮಾರ್ ಅವರ ಆ ದಿನಗಳ ಅನುಭವ ಕಥನ ಕನ್ನಡದಲ್ಲೂ ಲಭ್ಯವಿದೆ 'ಗುಜರಾತ್ : ಧರ್ಮದ ಹೆಸರಿನಲ್ಲಿ' – ಅನುವಾದ – ಸಾರಾ ಅಬೂಬಕರ್, ಚಂದ್ರಗಿರಿ ಪ್ರಕಾಶನ, ೨೦೧೯). ಯಾವ ಮುಲಾಜಿಗೂ ಒಳಗಾಗದೆ ಶ್ರೀಕುಮಾರ್ ನ್ಯಾಯಾಲಯಗಳ ಮುಂದೆ, ಗುಜರಾತ್ ರಾಜ್ಯ ಸರಕಾರದ ವಿರುದ್ಧ ಅಫಿದಾವಿತ್‌ಗಳನ್ನು ಸಲ್ಲಿಸಿದರು ಮತ್ತು ತನ್ನ ವೃತ್ತಿಜೀವನದಲ್ಲಿ ಎಲ್ಲರ ಸ್ನೇಹಕ್ಕೂ ಎರವಾಗಿ ಒಂಟಿಯಾದರು. ಅಹ್ಮದಾಬಾದ್‌ನ ಪಾರ್ಕುಗಳಿಗೆ ಅವರು ಬೆಳಿಗ್ಗೆ ವಾಕ್ ಹೋದರೆ, ಅಲ್ಲಿ ಅವರ ಸಹೋದ್ಯೋಗಿಗಳು ಅವರ ಕಣ್ಣು ತಪ್ಪಿಸುತ್ತಿದ್ದರಂತೆ. 'ಗುಜರಾತ್‌ನಲ್ಲಿ ಈಗ ಜನ ಹಿಂಸೆಗೆ ಭಯ ಪಡುತ್ತಾರೆ ; ಹಿಂಸೆಯ ಕುರಿತು ಮಾತನಾಡುವುದಕ್ಕೂ ಭಯ ಪಡುತ್ತಾರೆ. ನೋವನ್ನು ನಾವು ಕ್ರಮೇಣ ಮರೆಯಲೇ ಬೇಕು ; ಬದುಕು ಹೇಗೋ ಮುಂದೆ ಸಾಗಬೇಕು. ಆದರೆ ಹಿಂಸೆ ಮತ್ತು ನೋವಿನ ನೆನಪುಗಳನ್ನು ಮರೆಮಾಚುವುದು ಸಹಜ ಪ್ರಕ್ರಿಯೆಯಲ್ಲ ಅದು ಹಿಂಸೆಯನ್ನು ಯಾರೂ ಗಮನಕ್ಕೆ ತಂದುಕೊಳ್ಳದ, ಗಮನಿಸಿದರೂ ಅಲಕ್ಷಿಸಿಬಿಡುವಂತಹ ಸಹಜ ಸ್ಥಿತಿಯನ್ನಾಗಿಸುತ್ತದೆ' ಎಂದು ಶಿವ್ ಹೇಳುತ್ತಾರೆ.

ಶಿವ್ ವಿಶ್ವನಾಥನ್ ಅವರ ಪ್ರಕಾರ, ೨೦೧೭ರ ಗುಜರಾತ್ ವಿಧಾನಸಭಾ ಚುನಾವಣೆಯ ಇನ್ನೊಂದು ಸೋಲು ಅಂದರೆ, ಎಲ್ಲ ರಾಜಕೀಯ ಪಕ್ಷಗಳೂ ಸೆಕ್ಯುಲರಿಸಂನ ವಿಚಾರವನ್ನು ಚುನಾವಣಾ ಪ್ರಚಾರದಿಂದ ಪೂರ್ತ ಹೊರಗಿಟ್ಟಿರುವುದು. ಗುಜರಾತ್ ೨೦೦೨ರ ನೆನಪುಗಳನ್ನು ಉಜ್ಜಿ ತೆಗೆದಿರುವುದು ಮತ್ತು ಪ್ರಸ್ತುತ ಚುನಾವಣೆಯಲ್ಲಿ ಸೆಕ್ಯುಲರಿಸಂಅನ್ನು ಕೈ ಬಿಟ್ಟಿರುವುದು ಇವೆರಡೂ ಒಂದು ಇನ್ನೊಂದಕ್ಕೆ ಪೂರಕವಾದ ಬೆಳವಣಿಗೆಗಳು. ಇದರ ಬೇರುಗಳು ಕಳೆದ ಶತಮಾನದ ೮೦ರ ದಶಕದ ರಾಮಜನ್ಮಭೂಮಿ ಚಳುವಳಿಯಷ್ಟು ಹಿಂದಕ್ಕೆ ಚಾಚಿಕೊಳ್ಳುತ್ತವೆ. 'ಮಂದಿರವಲ್ಲೇ ಕಟ್ಟುವೆವು' ಎಂಬ ಸಂಘ ಪರಿವಾರದ ಹಠದಲ್ಲಿ ಹುಟ್ಟಿದ್ದು ರಾಮಜನ್ಮಭೂಮಿ ಚಳುವಳಿ. ಅದು ಬಲಿ ತೆಗೆದುಕೊಂಡ ಜೀವಗಳ ಸಂಖ್ಯೆ ಏನೂ ಸಣ್ಣದಲ್ಲ. ಗುಜರಾತ್ – ೨೦೦೨ ಸಹ ರಾಮಜನ್ಮಭೂಮಿ



ಚಳುವಳಿಯದ್ದೇ ಮುಂದಿನ ಅಧ್ಯಾಯ. ಗೆಲ್ಲುವ ಕುದುರೆ ಯಾವುದು ಎಂದು ಬಾಜಿ ಕಟ್ಟಿ ಫಲಿತಾಂಶಕ್ಕಾಗಿ ಉಸಿರು ಬಿಗಿ ಹಿಡಿದು ಕಾಯುವ ಕುದುರೆ ರೇಸಿನ ಹಾಗೆ ಚುನಾವಣೆಗಳನ್ನು ಮಾಧ್ಯಮಗಳು ಬಿಂಬಿಸುತ್ತವೆ. ಆದರೆ ರಾಜಕೀಯ ಪಕ್ಷಗಳೂ ಸಹ ಚುನಾವಣೆಯನ್ನು ವಿವಿಧ ಹಿತಾಸಕ್ತಿಗಳ ನಡುವಿನ ಕಿತ್ತಾಟದ ಮಟ್ಟಕ್ಕೆ ಇಳಿಸಿರುವುದರ ಬಗ್ಗೆ ಶಿವ್ ವಿಷಾದಿಸುತ್ತಾರೆ. ಜೊತೆಗೆ, ಈ ಚುನಾವಣೆಯಲ್ಲಿ ಗಾಂಧೀಜಿಯವರ ವ್ಯಕ್ತಿತ್ವದ ಸಂಪೂರ್ಣ ಗೈರು ಹಾಜರಿಯನ್ನು ಶಿವ್ ಗುರುತಿಸುತ್ತಾರೆ. ಸಮಾಜದ ಭವಿಷ್ಯ ಹೇಗಿರಬೇಕು ಎಂಬ ಚರ್ಚೆಯೇ ಗುಜರಾತ್‌ನ ಪ್ರಸಕ್ತ ಚುನಾವಣೆಯಲ್ಲಿ ನಾಪತ್ತೆಯಾಗಿದೆ. ರಾಜ್ಯದ ಇಡೀ ಕರಾವಳಿ ಬಂಡವಾಳಶಾಹಿಗಳಿಗೆ ಒತ್ತೆಯಾಗಿರುವುದರ ಬಗ್ಗೆ, ಅಲ್ಲಿ ತಲೆ ಎತ್ತುತ್ತಿರುವ ಖಾಸಗಿ ಬಂದರುಗಳ ಬಗ್ಗೆ, ಅದಾನಿ ಮತ್ತಿತರ ಉದ್ಯಮಿಗಳ ಲಾಭಬಡುಕ ದಂಧೆಗಳ ಬಗ್ಗೆ ಯಾವ ರಾಜಕೀಯ ಪಕ್ಷವೂ ಸೊಲ್ಲೆತ್ತುತ್ತಿಲ್ಲ.

ಗುಜರಾತ್ ೨೦೦೨ರ ಹಿಂಸೆಯ ಅಗಾಧತೆ ಮತ್ತು ರಾಜ್ಯವನ್ನು ಕಾಡುತ್ತಿರುವ ಹತ್ತು ಹಲವು ಸಮಸ್ಯೆಗಳ ಬಗ್ಗೆ ಈಗ ಕಂಡುಬರುತ್ತಿರುವ ಮಹಾಮೌನ ಹಠಾತ್ತನೆ ನಮಗೆ ಎದುರಾದ ವಿದ್ಯಮಾನವಲ್ಲ. ಗುಜರಾತ್ ೨೦೦೨ರ ಹಿಂಸೆ ಸಂಭವಿಸಿ ಈಗ ೧೫ ವರ್ಷಗಳಾದವು. ಅದಕ್ಕೂ ೧೦ ವರ್ಷಗಳ ಮೊದಲು, ೧೯೯೨ರ ಡಿಸೆಂಬರ್ ೬ರಂದು, ಉತ್ತರಪ್ರದೇಶದ ಅಯೋಧ್ಯೆಯಲ್ಲಿ ಬಾಬರಿ ಮಸೀದಿ ಧ್ವಂಸಗೊಂಡಿತು. ಅದೇ ದಿನ ಇಳಿಸಂಜೆ ಮುಂಬಯಿ ಶಹರದಲ್ಲಿ ಮುಸ್ಲಿಮ್ ನಿವಾಸಿಗಳ ಮೇಲೆ ಬಿ.ಜೆ.ಪಿ. ಮತ್ತು ಶಿವಸೇನೆಗಳ ನಾಯಕತ್ವದಲ್ಲಿ ಭಾರೀ ಪ್ರಮಾಣದ ಗುಂಪು ಹಿಂಸೆ ನಡೆಯಿತು. ಈ ಹಿಂಸಾಚಾರದಲ್ಲಿ ಸತ್ತವರ ಸಂಖ್ಯೆಯೇ ಹತ್ತಿರ ಹತ್ತಿರ ೧೦೦೦ದಷ್ಟು. ೧೯೯೩ರ ಜನವರಿ ಮತ್ತು ಫೆಬ್ರವರಿ ತಿಂಗಳುಗಳಲ್ಲಿಯೂ ಮುಂದುವರಿದ ಈ ಸರಣಿ ಹಿಂಸಾಚಾರದ ಬಗ್ಗೆ ಸಮಗ್ರವಾದ ಒಂದು ನ್ಯಾಯಾಂಗ ವಿಚಾರಣೆ ನಡೆಸಲು ಮಹಾರಾಷ್ಟ್ರ ರಾಜ್ಯ ಸರಕಾರವೇ ನ್ಯಾಯಮೂರ್ತಿ ಬಿ. ಎನ್. ಶ್ರೀಕೃಷ್ಣ ಅವರ ನೇತೃತ್ವದಲ್ಲಿ ಒಂದು ಆಯೋಗವನ್ನು ರಚಿಸಿತು. ಶ್ರೀಕೃಷ್ಣ ಆಯೋಗ ಸರಕಾರಕ್ಕೆ ಸಲ್ಲಿಸಿದ ವರದಿಯನ್ನು ಮಹಾರಾಷ್ಟ್ರದಲ್ಲಿ ೧೯೯೨ರಿಂದ ಈಚೆಗೆ ಆಳಿದ ಕಾಂಗ್ರೆಸ್, ಕಾಂಗ್ರೆಸ್ ನೇತೃತ್ವದ ಒಕ್ಕೂಟ ಸರಕಾರಗಳಾಗಲೀ ಬಿ.ಜೆ.ಪಿ. ಶಿವಸೇನೆಗಳ ಮೈತ್ರಿಕೂಟದ ಸರಕಾರವಾಗಲೀ ಜಾರಿಗೆ ತರುವ ಪ್ರಯತ್ನ ಹಾಗಿರಲಿ, ತೋರಿಕೆಗಾದರೂ ಆ ವರದಿ ಬಗ್ಗೆ ತಲೆ ಕೆಡಿಸಿಕೊಳ್ಳಲಿಲ್ಲ. ಬೆರಳೆಣಿಕೆಯಷ್ಟು ಮಾನವ ಹಕ್ಕು ಹೋರಾಟಗಾರರನ್ನು ಬಿಟ್ಟರೆ, ನಾಗರಿಕ ಸಮಾಜದಲ್ಲಿ ಬೇರೆ ಯಾರನ್ನೂ ಮುಂಬಯಿ ಹಿಂಸೆ ಕಾಡಿದಂತೆ ಕಾಣುವುದಿಲ್ಲ. ಇದು ಕೂಡ ಶಿವ್ ವಿಶ್ವನಾಥನ್ ಹೇಳುವ, ಹಿಂಸೆಯನ್ನು ಸಹಜ ಮತ್ತು ಸರ್ವೇಸಾಧಾರಣಗೊಳಿಸುವ ಪ್ರಕ್ರಿಯೆ ಅಲ್ಲವೆ ?

ಜನಸಾಮಾನ್ಯರಿಗೆ ನೆನಪು ಮತ್ತು ಮರೆವು ಪ್ರಜ್ಞಾಪೂರ್ವಕವಾದ ಕ್ರಿಯೆಗಳಲ್ಲ. ಸಂಕಲ್ಪ ಬಲವಿಲ್ಲದೆ ನಾವು ಏನನ್ನೂ ನೆನಪಿನಲ್ಲಿ ಉಳಿಸಿಕೊಳ್ಳಲಾರೆವು. ಮರೆಯುವುದಂತೂ ಪ್ರಯತ್ನದಿಂದ ಆಗುವಂತಹದ್ದೇ ಅಲ್ಲ. ಆದರೆ ಸರಕಾರ, ಶಿಕ್ಷಣ ಸಂಸ್ಥೆಗಳು, ನ್ಯಾಯಾಲಯ ಮುಂತಾದವು ನೆನಪುಗಳನ್ನು ದಾಖಲೆ ರೂಪದಲ್ಲಿ ಸಂರಕ್ಷಿಸಿ ಇಡುವಂತೆಯೇ ಅಳಿಸಿಯೂ ಹಾಕುತ್ತವೆ. ಈಚೆಗೆ ಕೇಂದ್ರದಲ್ಲೂ, ಹಲವು ರಾಜ್ಯಗಳಲ್ಲೂ ಬಿ.ಜೆ.ಪಿ. ಸರಕಾರ ಅಧಿಕಾರಕ್ಕೆ ಬಂದಮೇಲೆ ನೆನಪುಗಳನ್ನು ಸೃಷ್ಟಿಸುವ, ರೂಪಾಂತರಿಸುವ ತಿದ್ದಿ ಸರಿಪಡಿಸುವ ಮತ್ತು ಕೆಲವು ನೆನಪುಗಳನ್ನು ಅಳಿಸಿಬಿಡುವಂತಹ ಕೆಲಸಗಳು 'ಅಧಿಕೃತ'ವಾಗಿಯೇ ನಡೆಯುತ್ತಿವೆ. ೧೯೯೨ರ ಡಿಸೆಂಬರ್ ೬ರ ಘಟನೆಯೇ ನೆನಪುಗಳನ್ನು ಅಳಿಸಿಹಾಕುವ ಒಂದು ಬೃಹತ್ ಕಾರ್ಯಾಚರಣೆಯಾಗಿದ್ದಿತು! ಕರ್ನಾಟಕದಲ್ಲಿ ಬಾಬಾ ಬುಡನ್‌ಗಿರಿ ಮತ್ತು ಟಿಪ್ಪೂ ಸುಲ್ತಾನ್ ಕುರಿತು ಸಂಘಪರಿವಾರ ಹುಟ್ಟುಹಾಕಿರುವ ವಿವಾದ ಸಹ ಗತಕಾಲದ ದಾಖಲೆ ಅಳಿಸಿ, ಚರಿತ್ರೆಯನ್ನು 'ಸರಿಪಡಿಸುವ' ಒಂದು ಕಾರ್ಯಕ್ರಮ.

ನೆನಪುಗಳನ್ನು ನಾಶಪಡಿಸುವುದು, ರೂಪಾಂತರಿಸುವುದು ಮತ್ತು ತಿದ್ದುವುದು – ಇವೆಲ್ಲ ಒಂದು ಪ್ರಮಾಣದ ಜನಬೆಂಬಲ ಮತ್ತು ಭಾಗೀದಾರಿಕೆಗಳಿಲ್ಲದೆ ಸಾಧ್ಯವಾಗುವಂತಹದ್ದಲ್ಲ. ಗುಜರಾತ್ ೨೦೦೨ರ ಹಿಂಸೆಯ ಬಗ್ಗೆ ರಾಜಕೀಯ ಪಕ್ಷಗಳ ಗಾಢ ಮೌನದ ಹಿಂದೆ, ಆ ಹಿಂಸೆಯನ್ನು ಅನುಮೋದಿಸುವ ಜನಸಮುದಾಯವಿದೆ. ಗುಜರಾತ್ – ೨೦೦೨ರ ಹಾಗೆ ಬಾಬರಿ ಮಸೀದಿ ಧ್ವಂಸ ಕೂಡ ದೊಡ್ಡ ಸಂಖ್ಯೆಯಲ್ಲಿ ಜನರು ಭಾಗವಹಿಸಿದ ಚಳುವಳಿಯೂ ಸಾರ್ವಜನಿಕ ದೇಖಾವೆಯೂ ಆಗಿತ್ತು. ಸ್ವಂತಕ್ಕೆ ಯಾವ ಲಾಭವಿಲ್ಲದೆಯೂ ಜನ ಹಿಂಸೆಯಲ್ಲಿ ಭಾಗಿಯಾಗುವುದರ ಹಿಂದೆ ಇರುವ ಒತ್ತಡ, ಒತ್ತಾಸೆಗಳು ಸರಳ ವಿವರಣೆಗೆ ನಿಲುಕುವಂತಹದ್ದಲ್ಲ. ರಾಜಕೀಯ ಹಿಂಸೆಯ ಈ ಸಂಕೀರ್ಣತೆಯನ್ನು ಶೋಧಿಸುವ ಪ್ರಸನ್ನ ಅವರ 'ಕೊಂದವರಾರು' ನಾಟಕದಲ್ಲಿ (ಒಂಟಿ ದನಿ ಪ್ರಕಾಶನ, ಹೆಗ್ಗೋಡು, ೨೦೦೯) ಒಂದು ದೃಶ್ಯ ಬರುತ್ತದೆ. ಆ ದೃಶ್ಯದಲ್ಲಿ ಚಿತ್ರಿತವಾಗಿರುವ ಹಿಂಸೆಗೆ ನಾವು ಪ್ರೇಕ್ಷಕರಷ್ಟೇ ಅಲ್ಲ, ಆ ಹಿಂಸೆಯಲ್ಲಿ ಭಾಗಿದಾರರೂ, ಬಲಿಪಶುಗಳೂ ಆಗಿದ್ದೇವೆ ಎಂದು ಅನ್ನಿಸಿ ಆಘಾತವಾಗುತ್ತದೆ. ಮನುಷ್ಯ ಮಾತ್ರರಾದ ನಾವು ಹಿಂಸೆಗೆ ಕೇವಲ ಪ್ರೇಕ್ಷಕರಷ್ಟೇ ಆಗುವುದು ಸಾಧ್ಯವೇ ಎಂದು ನಾಟಕ ನಮಗೆ ಸವಾಲು ಹಾಕುವಂತಿದೆ. ಪ್ರಸನ್ನ ಅವರೇ ಹೇಳಿರುವ ಹಾಗೆ, ಈ ನಾಟಕಕ್ಕೆ ಬಾಬರಿ ಮಸೀದಿ ಧ್ವಂಸವೇ ಪ್ರೇರಣೆಯಾಗಿತ್ತು. ನಾಟಕದ ವಸ್ತು ಗಾಂಧೀಜಿಯವರ ಬದುಕು ಮತ್ತು ದೇಹಾಂತ್ಯಗಳ ಕುರಿತ 'ಸತ್ಯ ಶೋಧನೆ'. ಈ ನಾಟಕದ ಒಂದು ಸ್ಫೋಟಕ ದೃಶ್ಯದಲ್ಲಿ ನ್ಯಾಯಾಲಯದ ಮುಂದೆ ಗಾಂಧೀಜಿ ಕೊಲೆ ಮೊಕದ್ದಮೆಯ ವಿಚಾರಣೆ ನಡೆಯುತ್ತಿದೆ. ಅದರಲ್ಲಿ ನತ್ತೂರಾಮ ಗೋಡ್ಸೆಯ ಪಾತ್ರವನ್ನು ಅಭಿನಯಿಸುವ ನಟ ತನಗೆ ಕೊಟ್ಟ ಡಯಲಾಗನ್ನು ಒಪ್ಪಿಸುವ ಬದಲು ಖುದ್ದು ಗೋಡ್ಸೆಯನ್ನೇ ಮೈಮೇಲೆ



ಬರಿಸಿಕೊಂಡು 'ನಾನು ಶವವಲ್ಲ, ನಾನು ಜೀವಂತ ವ್ಯಕ್ತಿ' ಅಯೋಧ್ಯೆಯಲ್ಲಿ ರಾಮ ಮಂದಿರ ಕಟ್ಟಿಯೇ ತೀರುವೆವು' ಎಂದು ಘೋಷಿಸುತ್ತಾನೆ. ಅದು ಅಸಲಿ ಗೋಡ್ಸೆಯ ಮಾತು ಅಲ್ಲವೇ ಅಲ್ಲ. ಆದರೆ ನ್ಯಾಯಾಲಯದ ಎದುರು ಗೋಡ್ಸೆ ಮಂಡಿಸಿದ ವಾದದ ಮುಂದುವರಿಕೆಯೇ ಬಾಬರಿ ಮಸೀದಿ ಧ್ವಂಸ ಎಂಬುದನ್ನು ಯಾರೂ ಅಲ್ಲಗಳೆಯುವ ಹಾಗಿಲ್ಲ. ಗಾಂಧೀಜಿಯವರ ಕೊಲೆ ಕೇವಲ ನತ್ತೂರಾಮ ಗೋಡ್ಸೆ ಎಂಬ ವ್ಯಕ್ತಿಯ ಸಂಕಲ್ಪವಲ್ಲ. ಅದು ಸಾಕಷ್ಟು ಜನರ ಮನದಾಳದ ಬಯಕೆಯಾಗಿತ್ತು. ಈ ಸತ್ಯವನ್ನು ಪ್ರಸನ್ನ ಅವರ ನಾಟಕ ನಮಗೆ ಮನವರಿಕೆ ಮಾಡಿಕೊಡುತ್ತದೆ. ಗೋಡ್ಸೆಯ ಕೃತ್ಯಕ್ಕೆ ಪ್ರೇರಣೆ ನೀಡಿದ್ದು ಸ್ವತಃ ಅವನೂ ಒಬ್ಬ ಸಕ್ರಿಯ ಕಾರ್ಯಕರ್ತನಾಗಿದ್ದ ಹಿಂದುತ್ವದ ಸಿದ್ಧಾಂತ. ಗಾಂಧೀಜಿಯವರ ಕೊಲೆಯ ಈ ಸಫಲ ಹಾಗೂ ಅಂತಿಮ ಪ್ರಯತ್ನಕ್ಕೆ ಮೊದಲು ಅವರನ್ನು ಕೊಲ್ಲಲು ೫ ಪ್ರಯತ್ನಗಳು ನಡೆದಿದ್ದವು. ಅವೆಲ್ಲವೂ ಹಿಂದುತ್ವ ಸಿದ್ಧಾಂತದ ಸಂಘಟಿತ ಪ್ರಯತ್ನಗಳೇ ಆಗಿದ್ದವು. ಗಾಂಧೀಜಿ ಕೊಲೆ ನಡೆದ ಕಾಲ ಅಂದರೆ ಸ್ವಾತಂತ್ರ್ಯದ ಮೊದಲ ದಿನಗಳಲ್ಲೂ ಸಹ ಆ ಕೊಲೆಯನ್ನು ಸಮರ್ಥಿಸುವವರು ದೊಡ್ಡ ಸಂಖ್ಯೆಯಲ್ಲಿದ್ದರು. ಗಾಂಧಿ ಕೊಲೆ ಮೊಕದ್ದಮೆಯ ವಿಚಾರಣೆಗೆಂದೇ ಸಂಯೋಜಿತವಾಗಿದ್ದ ವಿಶೇಷ ನ್ಯಾಯಾಲಯದಲ್ಲಿ ತನ್ನ ಕೃತ್ಯಕ್ಕೆ ವಿವರಣೆ ನೀಡಿ ಗೋಡ್ಸೆ ಮಾಡಿದ ಭಾಷಣವನ್ನು ಆಲಿಸಿದವರಲ್ಲಿ ಹಲವರು ಕಣ್ಣು ಹನಿಗೂಡುವಷ್ಟು ಭಾವಾವಿಷ್ಟರಾದರಂತೆ ಬಲಿಷ್ಠ ಭಾರತ ನಿರ್ಮಾಣಕ್ಕಾಗಿ ಗಾಂಧೀಜಿಯವರನ್ನು ಕೊನೆಗಾಣಿಸುವುದು ಅನಿವಾರ್ಯ, ಗಾಂಧೀಜಿಯವರ ನಾಯಕತ್ವದಲ್ಲಿ ಭಾರತ ನಿತ್ರಾಣಿಯೂ ಹೆಂಬೇಡಿಯೂ ಆದ ರಾಷ್ಟ್ರವಾಗಿಬಿಡುತ್ತದೆ ಎಂದು ಗೋಡ್ಸೆ ಭಾವಿಸಿದ್ದ. ಅವನು ನಿಷ್ಠಾವಂತ ಕಾರ್ಯಕರ್ತನಾಗಿದ್ದು ಆಗ ಆರ್.ಎಸ್.ಎಸ್.ನ ರಾಷ್ಟ್ರೀಯವಾದವೇ ಗೋಡ್ಸೆಯ ಕೃತ್ಯಕ್ಕೆ ಪ್ರೇರಣೆ ನೀಡಿತ್ತು. ಗಾಂಧಿ ಕೊಲೆ ಮೊಕದ್ದಮೆ ವಿಶೇಷ ನ್ಯಾಯಾಲಯದ ಮುಂದೆ ಗೋಡ್ಸೆ ಮಾಡಿದ ಭಾಷಣವೂ ಇದೇ ರಾಷ್ಟ್ರೀಯವಾದದ ತಾತ್ವಿಕತೆ ಮತ್ತು ತರ್ಕಗಳನ್ನು ಆಧರಿಸಿದೆ. ಅದು ಆಧುನಿಕ ಐರೋಪ್ಯ ರಾಷ್ಟ್ರೀಯವಾದದ ನಕಲಾಗಿದ್ದು ಈಗ ಎಲ್ಲೆಡೆ ಮನ್ನಣೆ ಗಳಿಸಿಕೊಂಡಿದೆ. 'ರಾಷ್ಟ್ರ ಮತ್ತು ಪ್ರಭುತ್ವಗಳ ಕಾರಣ'ಕ್ಕಾಗಿ ನಡೆಸುವ ಜೀವಹತ್ಯೆ ಹಿಂಸೆ ಅಲ್ಲ. ಅದು ಚರಿತ್ರೆಯ ಅನಿವಾರ್ಯತೆ' ಎಂಬುದು ಈ ರಾಷ್ಟ್ರೀಯವಾದದ ಹೂರಣ. ನತ್ತೂರಾಮ ಗೋಡ್ಸೆ ಅಂದು ನ್ಯಾಯಾಲಯದಲ್ಲಿ ಪ್ರತಿಪಾದಿಸಿದ್ದು ಇದೇ ರಾಷ್ಟ್ರೀಯವಾದವನ್ನು. ಅದಕ್ಕೆ ಪ್ರತಿಯಾಗಿ ಗಾಂಧೀಜಿ ಹಿಂಸೆ ಮಾತ್ರವಲ್ಲ ಅದರ ತರ್ಕ ಮತ್ತು ತಾತ್ವಿಕತೆಗಳನ್ನು ಸಹ ಸಾರಾಸಗಟಾಗಿ ತಿರಸ್ಕರಿಸಿದ್ದರು. ರಾಷ್ಟ್ರಕ್ಕಾಗಿ ಹಿಂಸೆ, ಕಾಲದ ಅನಿವಾರ್ಯತೆಯಾಗಿ ಹಿಂಸೆ, ಸಂದರ್ಭೋಚಿತವಾದ ಹಿಂಸೆ, ಆಪದ್ಧರ್ಮವಾಗಿ ಹಿಂಸೆ – ಹಿಂಸೆಯ ಈ ಎಲ್ಲ ಸಮಜಾಯಿಷಿಗಳನ್ನೂ ಗಾಂಧೀಜಿ ತಿರಸ್ಕರಿಸಿದ್ದರು. ಆದರೆ ಅವರ ಎದುರಾಳಿ ಗೋಡ್ಸೆ ರಾಷ್ಟ್ರಕ್ಕಾಗಿ ಜೀವ ಬಲಿಕೊಡಲು ಸಿದ್ಧನಾಗಿದ್ದ. ಅಂತಹವರು ಜೀವ ಬಲಿ ತೆಗೆದುಕೊಳ್ಳಲು ಸಹ ಹಿಂದೆ ಮುಂದೆ ನೋಡುವವರಲ್ಲ. ೧೯೯೨ರಲ್ಲಿ ಪ್ರಸನ್ನರ ನಾಟಕವನ್ನು ದೆಹಲಿಯ ನಾಟಕಶಾಲೆಯ ವಿದ್ಯಾರ್ಥಿಗಳು ಅಭಿನಯಿಸಿದಾಗ, ಅದನ್ನು

ನೋಡಲು ಬಂದಿದ್ದ ಖ್ಯಾತ ಸಮಾಜವಾದಿ ನೇತಾರ ಮಧು ಲಿಮಯೆ, ಪ್ರಸನ್ನರಿಗೆ, "ನಿನ್ನ ನಾಟಕದಲ್ಲಿ ಹಿಂಸೆ ಎಂಬುದು ಆಕರ್ಷಕವಾಗಿ ಚಿತ್ರಿತವಾಗಿಬಿಡುವ ಸಾಧ್ಯತೆ ಇದೆ ಎಚ್ಚರ!"ಎಂದು ಹೇಳಿದ್ದರಂತೆ. ಆನಂತರ ತಾನು ನಾಟಕದಲ್ಲಿ ಹಲವು ಬದಲಾವಣೆಗಳನ್ನು ಮಾಡಿದ್ದಾಗಿ ಪ್ರಸನ್ನ ಹೇಳಿಕೊಂಡಿದ್ದಾರೆ.

'ಕೊಂದವರಾರು' ನಾಟಕದಲ್ಲಿ ಮೇಲುನೋಟಕ್ಕೆ ಸಿದ್ಧಾಂತ ಮತ್ತು ಕ್ರಿಯೆಗಳ ನಡುವೆ ಸಾಂಗತ್ಯ, ಸಾತತ್ಯ ಎರಡೂ ಇರುವಂತೆ ಭಾಸವಾಗುತ್ತದೆ. ನತ್ತೂರಾಮ ಗೋಡ್ಸೆ ಹಿಂದೂ ಮಹಾಸಭಾದ ಪಿಸ್ತೂಲು ವೀರನಾಗುವ ಮೊದಲು ಪುಣೆಯಲ್ಲಿ ಆರ್.ಎಸ್.ಎಸ್.ಗೆ ನಿಷ್ಠೆಯಿಂದ ನಡೆದುಕೊಂಡವ. ಆರ್.ಎಸ್.ಎಸ್.ನ ಹಿಂದುತ್ವ ಮೃದು ಎಂದು ಆತ ಭಾವಿಸಿ, ತನ್ನ ನಿಷ್ಠೆಯನ್ನು ಹಿಂದೂ ಮಹಾಸಭಾಕ್ಕೆ ವರ್ಗಾಯಿಸಿಕೊಂಡ. ಸಾವರ್ಕರ್ ಅವರ ಶಿಷ್ಯನೂ ಆಪ್ತನೂ ಆಗಿದ್ದ ಗೋಡ್ಸೆಯ ಬದುಕಿನಲ್ಲಿ ಸಿದ್ಧಾಂತ ಮತ್ತು ಕ್ರಿಯೆಗಳ ನಡುವೆ ಬಿರುಕು ಇರಲಿಲ್ಲ. ಗಾಂಧೀಜಿಯವರನ್ನು ಹತ್ಯೆಗೈಯುವುದರ ಮುಖಾಂತರ, ಗೋಡ್ಸೆ ಹಿಂದುತ್ವವನ್ನು ಕಾರ್ಯಗತಗೊಳಿಸಿದ, ದೇಶದ ಕ್ರಿಮಿನಲ್ ಕಾನೂನು ರೀತ್ಯಾ ಅವನಿಗೆ ಶಿಕ್ಷೆಯೂ ಆಯಿತು. ಆದರೆ ಹಿಂದುತ್ವದ ಆದ್ಯ ಪ್ರವರ್ತಕ ಸಾವರ್ಕರ್, ಪ್ರತ್ಯಕ್ಷವಾಗಿ ಗಾಂಧೀಜಿ ಕೊಲೆಯ ಅಪರಾಧದಲ್ಲಿ ಭಾಗಿಯಾಗಿರಲಿಲ್ಲ ಎಂಬ 'ತಾಂತ್ರಿಕ ಕಾರಣ'ಕ್ಕಾಗಿ ಶಿಕ್ಷೆಯಿಂದ ಬಚಾವಾದರು. ಕಾಲಾನುಕ್ರಮದಲ್ಲಿ ಅವರ ಭಾವಚಿತ್ರ ಲೋಕಸಭೆಯನ್ನು ಅಲಂಕರಿಸಿತು! ಹಿಂದುತ್ವದ ಸಿದ್ಧಾಂತ ಮತ್ತು ಗಾಂಧೀಜಿ ಕೊಲೆ – ಈ ಎರಡರ ನಡುವೆ ಬಿರುಕು ಇರಲಿಲ್ಲ ನಿಜ. ಆದರೆ ಶ್ರಮ ವಿಭಜನೆ ಇತ್ತು. ಈಗಂತೂ ಸಂಘ ಪರಿವಾರ ಅದರಲ್ಲಿ ಪರಿಪೂರ್ಣತೆಯನ್ನೇ ಸಾಧಿಸಿದೆ. ಹಿಂದುತ್ವವನ್ನು ಬೆಂಬಲಿಸುವ ರಾಜಕಾರಣಿಗಳು, ಸಾಮಾಜಿಕ ಧುರೀಣರು, ಅಧ್ಯಾಪಕರು, ದೇವಾಲಯಗಳ ಮೊಕ್ತೇಸರರು, ಮಠಾಧಿಪತಿಗಳು ಒಂದು ಕಡೆ ಹಾಗೂ ಆ ಸಿದ್ಧಾಂತವನ್ನು ಬೀದಿಗಳಲ್ಲಿ ಚಾಕು, ಚೂರಿ, ಬಡಿಗೆಗಳ ನೆರವಿನಿಂದ ಕಾರ್ಯಗತಗೊಳಿಸುತ್ತಿರುವ ಭಜರಂಗದಳ, ಎಬಿವಿಪಿ ಮತ್ತು ಹಲವು ಸೇನೆಗಳ ದೊಣ್ಣೆ ನಾಯಕರು ಇನ್ನೊಂದೆಡೆಗೆ – ಹೀಗೆ ಯಾರಿಗೆ ಏನು ಕೆಲಸ, ಯಾವ ಪಾತ್ರ, ಎಂತಹ ಡಯಾಲಾಗು ಎಂಬ ವಿಭಜನೆ ಹೊಡೆದು ಕಾಣುವಷ್ಟು ಸ್ಪಷ್ಟವಾಗಿದೆ! ೧೯೯೨ರ ಡಿಸೆಂಬರ್ ೬ರಂದು ಬಾಬರಿ ಮಸೀದಿಯ ಎದುರು ನೆರೆದಿದ್ದ ಸಾವಿರಾರು ಕರಸೇವಕರು, ಅವರ ಮುಂಚೂಣಿಯಲ್ಲಿ ಬಿಜೆಪಿ ಮುಖಂಡರು, ಸಂಘಪರಿವಾರದ ಕಟ್ಟಾಳುಗಳು ಮತ್ತು ಕಾಲಾಳುಗಳು, ಮಠಾಧಿಪತಿಗಳು, ಸಂತರು, ಸಾಧ್ವಿಯರು – ಇವರ ಪೈಕಿ ನಡೆದ ಘಟನೆಗೆ ಯಾರೂ ಉತ್ತರದಾಯಿಯಲ್ಲ! ಹಿಂದುತ್ವದ ಹಿಂಸೆಯ ಅತಿ ದೊಡ್ಡ ನೈತಿಕ ಸಮಸ್ಯೆ ಅದೇ – ಹೊಣೆಗಾರಿಕೆ ಮತ್ತು ಉತ್ತರದಾಯಿತ್ವಗಳಿಂದ ಕಳಚಿಕೊಂಡಿರುವ ಹಿಂಸೆ ಅದು! ಪ್ರಸನ್ನ ಅವರ ನಾಟಕ ನಮಗೆ ಹಿಂಸೆಯ ಈ ಮುಖವನ್ನು ನಿಚ್ಚಳವಾಗಿ ಕಾಣಿಸುತ್ತದೆ. ನಾಟಕದ ಶೀರ್ಷಿಕೆಯೇ ಉತ್ತರವಿಲ್ಲದ ಒಂದು ಪ್ರಶ್ನೆ 'ಕೊಂದವರಾರು?' ಅದನ್ನು ನಾವು 'ಗಾಂಧೀಜಿ'ಯವರನ್ನು 'ಕೊಂದವರಾರು?' ಎಂದು ಓದುವುದರ ಜೊತೆಗೆ ಬಾಬರಿ ಮಸೀದಿಯನ್ನು ಕೆಡವಿದ್ದು ಯಾರು, ಮುಂಬಯಿ – ೧೯೯೨–೧೯೯೩ ಮತ್ತು ಗುಜರಾತ್ ೨೦೦೨ರ ಹಿಂಸೆಯ ಅಪರಾಧಿಗಳು ಯಾರು, ಒರಿಸ್ಸಾದ ಕಂದಮಾಲ್‌ನಲ್ಲಿ ಕ್ರೈಸ್ತರ ಮೇಲೆ ದೌರ್ಜನ್ಯ ನಡೆಸಿದವರು ಯಾರು, ೨೦೧೩ರಲ್ಲಿ ಉತ್ತರಪ್ರದೇಶದ ಮುಜಾಫರ್ ನಗರದಲ್ಲಿ ಹಿಂಸೆ ನಡೆಸಿದವರು ಯಾರು, ಎಂದು ಮುಂತಾಗಿ ಸಹ ಓದಬಹುದಾಗಿದೆ.

ಪ್ರಾಯಶಃ ಈ ಪ್ರಶ್ನೆಗಳಿಗೆ ಸಿದ್ಧ ಉತ್ತರಗಳೂ ಇಲ್ಲ. ಪರಿಹಾರಗಳೂ ಇಲ್ಲ. ನಾವು ಅವನ್ನು 'ಆಗಿಸಿಕೊಳ್ಳಬೇಕು'. ಹಿಂಸೆಯಿಂದ ಬಿಡುಗಡೆ ಹಿಂಸೆಗೊಳಗಾದವರಿಗೆ ಮಾತ್ರವಲ್ಲ, ಹಿಂಸೆ ಎಸಗುವವರಿಗೆ ಕೂಡ ಅಗತ್ಯವಾಗಿ ಬೇಕು. ಗಾಂಧೀಜಿಯವರ ಕಟ್ಟಕಡೆಯ ಉಪವಾಸ ಸತ್ಯಾಗ್ರಹ ಈ ಸತ್ಯವನ್ನು ನಮಗೆ ಮನಗಾಣಿಸುತ್ತದೆ. ೧೯೪೮ರ ಜನವರಿ ೧೩ರಂದು ಗಾಂಧೀಜಿ ತನ್ನ ಈ ಉಪವಾಸ ಸತ್ಯಾಗ್ರಹವನ್ನು ಪ್ರಾರಂಭಿಸಿದರು. ದೇಶಕ್ಕೆ ಸ್ವಾತಂತ್ರ್ಯ ಬಂದು ೫ ತಿಂಗಳೂ ಆಗಿರಲಿಲ್ಲ. ಆಗಲೇ ದೇಶದ ರಾಜಧಾನಿಯಲ್ಲಿ ಮುಸ್ಲಿಮ್ ಪ್ರಜೆಗಳಿಗೆ ರಕ್ಷಣೆ ನೀಡಲು ಸರಕಾರ ವಿಫಲವಾಗಿದೆ ಎಂದು ಆರೋಪಿಸಿ ಗಾಂಧೀಜಿ ಉಪವಾಸ ಕೂತರು. ದೆಹಲಿ ಮಾತ್ರವಲ್ಲ, ಉತ್ತರ ಭಾರತವಿಡೀ ದೇಶ ವಿಭಜನೆಯ ಹಿಂಸೆಯಿಂದ ತತ್ತರಿಸಿ ಹೋಗಿತ್ತು. ಮುಸ್ಲಿಮ್ ಮತೀಯವಾದಿಗಳಿಂದ ಹಿಂಸೆಗೆ ಒಳಗಾದ ಹಿಂದೂ ನಿರಾಶ್ರಿತ ಕುಟುಂಬಗಳು ದೆಹಲಿಯಲ್ಲಿ ಕಿಕ್ಕಿರಿದು ನೆರೆದಿದ್ದವು. ಗಡಿರಾಜ್ಯಗಳಾದ ಪಂಜಾಬ್ ಮತ್ತು ಬಂಗಾಳಗಳಲ್ಲಿ ಹಿಂದೂಗಳ ಹಾಗೆ ಸಿಖ್ ಮತ್ತು ಮುಸ್ಲಿಮ್ ಸಮುದಾಯದವರು ಸಹ ಕೋಮು ಹಿಂಸೆಗೆ ಬಲಿಯಾಗಿದ್ದರು. ಇಂತಹ ಪ್ರಕ್ಷುಬ್ಧ ಸ್ಥಿತಿಯಲ್ಲಿ ಗಾಂಧೀಜಿ ತನ್ನ ಸತ್ಯಾಗ್ರಹ ಪ್ರಾರಂಭಿಸಿದ್ದು ಕಾಂಗ್ರೆಸ್ ಪಕ್ಷದ ನಾಯಕರನ್ನು ಅಸ್ವಸ್ಥಗೊಳಿಸಿತು. ಆದರೆ ಗಾಂಧೀಜಿ ತನ್ನ ಸತ್ಯಾಗ್ರಹವನ್ನು ಕೈಬಿಡಲಿಲ್ಲ. ಅದನ್ನು ಕೊನೆಗಾಣಿಸಲು ಗಾಂಧೀಜಿ ವಿಧಿಸಿದ ಷರತ್ತುಗಳು ಹೀಗಿದ್ದವು:

೧) ದೆಹಲಿಯ ಮುಸ್ಲಿಮ್ ಕುಟುಂಬಗಳನ್ನು ಬಲಾತ್ಕಾರದಲ್ಲಿ ಹೊರದಬ್ಬುವ ಪ್ರಯತ್ನಗಳು ನಡೆದಿವೆ. ಅವು ನಿಲ್ಲಬೇಕು.
೨) ದೆಹಲಿಯ ಖ್ವಾಜಾ ಕುತುಬುದ್ದೀನ್ ದರ್ಗಾದ ಉರೂಸ್‌ಅನ್ನು ನಗರದಲ್ಲಿ ತಲೆದೋರಿರುವ ಅಶಾಂತಿಯ ಕಾರಣಕ್ಕೆ ತಡೆಹಿಡಿಯಲಾಗಿದೆ. ಉರೂಸ್ ಒಂದು ಧಾರ್ಮಿಕ ಆಚರಣೆಯಾಗಿದ್ದು, ಅದು ನಿಗದಿಯಾದ ದಿನದಂದೇ ನಡೆಯಗೊಡಬೇಕು.
೩) ದೆಹಲಿಯ ಹಲವು ಮಸೀದಿಗಳನ್ನು ಜುಲುಮೆಯಲ್ಲಿ ದೇವಾಲಯ ಅಥವಾ ಗುರುದ್ವಾರಗಳನ್ನಾಗಿ ಮಾರ್ಪಡಿಸಲಾಗಿದೆ. ಅವುಗಳನ್ನು ಮುಸ್ಲಿಮ್ ಸಮುದಾಯಕ್ಕೆ ಮರಳಿಸಬೇಕು.
೪) ಮುಸ್ಲಿಮ್ ಪ್ರಜೆಗಳಿಗೆ ತಮ್ಮ ಮನೆಗಳಲ್ಲಿ ಕೂಡ ರಕ್ಷಣೆ ಇಲ್ಲದಂತಹ ಪರಿಸ್ಥಿತಿ ಇದೆ. ಸರಕಾರ ಕೂಡಲೇ ಆ ಸಂತ್ರಸ್ತರಿಗೆ ರಕ್ಷಣೆ ಕೊಡಬೇಕು.
೫) ದೆಹಲಿಯಲ್ಲಿ ಮುಸ್ಲಿಮರ ಮೇಲೆ ವಿಧಿಸಲಾಗಿರುವ ಆರ್ಥಿಕ ಬಹಿಷ್ಕಾರ ತಕ್ಷಣ ಕೊನೆಯಾಗಬೇಕು.
೬) ದೇಶ ವಿಭಜನೆಯ ಒಪ್ಪಂದದ ಪ್ರಕಾರ ಭಾರತವು ಪಾಕಿಸ್ತಾನಕ್ಕೆ ೫೫ ಕೋಟಿ ರೂಪಾಯಿಗಳನ್ನು ಪಾವತಿಸಬೇಕಿತ್ತು. ಆದರೆ ಕಾಶ್ಮೀರದೊಳಗೆ ಪಾಕಿಸ್ತಾನ ಆಕ್ರಮಣ ನಡೆಸಿದ್ದರಿಂದ ಸರಕಾರ ಈ ಪಾವತಿಯನ್ನು ತಡೆಹಿಡಿದಿತ್ತು. ಭಾರತ ಒಪ್ಪಂದದ ಪ್ರಕಾರ ತಕ್ಷಣ ಪಾಕಿಸ್ತಾನಕ್ಕೆ ಹಣ ಪಾವತಿಸಬೇಕು.

ಗಾಂಧೀಜಿ ತಮ್ಮ ಇಳಿವಯಸ್ಸಿನಲ್ಲಿ ಕೈಕೊಂಡ ಈ ಸತ್ಯಾಗ್ರಹ ಈಗ ಪವಾಡದಂತೆ ಕಾಣುತ್ತದೆ. ಆದರೆ ಸತ್ಯಾಗ್ರಹವನ್ನು ನಿಲ್ಲಿಸಲು ಅವರು ಹಾಕಿದ ಷರತ್ತುಗಳನ್ನು ಸೂಕ್ಷ್ಮವಾಗಿ ಪರಿಶೀಲಿಸಿದರೆ ಅವರು ಪ್ರಜೆಗಳು ಮತ್ತು ಸರಕಾರದಿಂದ ನಡೆಸಿಕೊಡಲು ಅಸಾಧ್ಯವಾದ ಏನನ್ನೂ ಬಯಸಿರಲಿಲ್ಲ ಎಂಬುದು ಸ್ಪಷ್ಟವಾಗುತ್ತದೆ. ತನ್ನ ಷರತ್ತುಗಳ ಮುಖಾಂತರ ಪ್ರಜಾಪ್ರಭುತ್ವವೊಂದರಲ್ಲಿ ಪ್ರಜೆಗಳು ಮತ್ತು ಪ್ರಭುತ್ವ ಪಾಲಿಸಲೇಬೇಕಾದ ಕೆಲವು ಕರ್ತವ್ಯಗಳನ್ನು ಮಾತ್ರ ಅವರು ವಿಧಿಸಿದ್ದರು. ದೆಹಲಿಯ ಮುಸ್ಲಿಮರನ್ನು ಅವರು ಅನ್ಯರೆಂದಾಗಲೀ ಅನ್ಯಮತೀಯರೆಂದಾಗಲೀ ಭಾವಿಸಲಿಲ್ಲ. ಸರಕಾರ ಮತ್ತು ದೆಹಲಿಯ ಹಿಂದುಗಳು ಅಲ್ಲಿನ ಮುಸ್ಲಿಮ್ ನಿವಾಸಿಗಳನ್ನು ಪ್ರಜೆಗಳೆಂದೇ ನಡೆಸಿಕೊಳ್ಳಬೇಕು ಎಂಬುದು ಗಾಂಧೀಜಿಯವರ ಆಗ್ರಹವಾಗಿತ್ತು. ದೆಹಲಿಯ ರಾಜಕಾರಣಿಗಳು, ಸಾಮಾಜಿಕ ಮುಖಂಡರು, ಆರ್.ಎಸ್.ಎಸ್., ಹಿಂದೂ ಮಹಾಸಭಾ ಮತ್ತಿತರ ಸಂಘಟನೆಗಳ ನೇತಾರರು ಗಾಂಧೀಜಿಯವರ ಷರತ್ತುಗಳನ್ನು ತಾವು ಪಾಲಿಸುವುದಾಗಿ ಮಾತು ಕೊಟ್ಟ ಮೇಲೆ ೧೯೪೮ರ ಜನವರಿ ೧೮ರಂದು ಗಾಂಧೀಜಿ ತನ್ನ ಸತ್ಯಾಗ್ರಹವನ್ನು ನಿಲ್ಲಿಸಿದರು. ಅದೇ ಜನವರಿ ೩೦ರಂದು ಅವರ ಹತ್ಯೆ ಆಯಿತು.

ಜಿ. ರಾಜಶೇಖರ
'ವಿಷ್ಣು ನಂದನ', ಚಾಕೋಲೇಟ್ ಫ್ಯಾಕ್ಟರಿ ಹತ್ತಿರ, ಕೊಳಂಬೆ, ಉಡುಪಿ – ೫೭೬ ೧೦೧

## ವಿನಂತಿ

ಕತ್ತಲೆಯೇ !
ಕ್ಷಮಿಸೆನ್ನ
ಉಸಿರುಕಟ್ಟದೆ
ಹಗಲಾಗೆ
ಕಳುಹಿಸೋ ಮುನ್ನ !

ವ. ಉಮೇಶ ಕಾರಂತ
ಮಂಗಳೂರು – ೫೭೫ ೦೦೧




# ಕುಸ್ಕೊ – 'ಮರ್ಕ್ಯಾಡೊ ಸ್ಯಾನ್ ಪೆಡ್ರೊ' ಎಂಬ ವಿಸ್ಮಯ ಲೋಕ

**ಡಾ॥ ಎಚ್. ಎಸ್. ಅನುಪಮಾ**

**ಯಾ**ವ ಊರಿಗೇ ಹೋಗಲಿ, ಅಲ್ಲಿಯ ಮಾರುಕಟ್ಟೆಗೆ ಹೋಗದಿದ್ದರೆ ಊರು ನೋಡಿದಂತೆ ಆಗುವುದಿಲ್ಲ. ಭಾಷೆ, ದಿರಿಸು, ಚೌಕಾಸಿ, ಜಗಳ, ಅಚ್ಚುಕಟ್ಟು, ಕೊಳಕುತನ, ಜಿಗುಟುತನಗಳೆಲ್ಲ ಢಾಳಾಗಿ ಕಾಣಿಸುವ ಮಾರುಕಟ್ಟೆಯಲ್ಲಿ ಸ್ಥಳೀಯ ಸಾಂಸ್ಕೃತಿಕ, ಸಾಮಾಜಿಕ ಪರಿಚಯ ದೊರಕಿಬಿಡುತ್ತದೆ. ನಮ್ಮ ಪ್ರವಾಸಿತನದ ಬಗೆಗೆ ಕೇರ್ ಮಾಡದ ವ್ಯಾಪಾರ ಮನೋಧರ್ಮದಿಂದ 'ಲೋಕಲ್' ಸ್ಪರ್ಶ ಅನುಭವಕ್ಕೆ ಸಿಗುತ್ತದೆ. ಎಂದೇ ದಕ್ಷಿಣ ಅಮೆರಿಕದ ಪೆರು ದೇಶದ ಕುಸ್ಕೊಗೆ ಹೋದವರು ಅಲ್ಲಿಯ 'ಮರ್ಕ್ಯಾಡೊ ಸ್ಯಾನ್ ಪೆಡ್ರೊ' ಮಾರುಕಟ್ಟೆಗೆ ಹೋದೆವು. ಪವಿತ್ರ ಕಣಿವೆಯ ನೆಲಸಿರಿಯೆಲ್ಲ ಸೂರೆಗೊಂಡಂತಿರುವ ಸ್ಯಾನ್ ಪೆಡ್ರೊ ಮಾರ್ಕೆಟ್ ವಾರದ ಏಳು ದಿನವೂ ತೆರೆದಿರುತ್ತದೆ. ತಾಜಾ, ವೈವಿಧ್ಯಮಯ, ಕಡಿಮೆ ಬೆಲೆಯ 'ಫಿಕ್ಸೆಡ್' ದರದ ವಸ್ತುಗಳಿಗಾಗಿ ದಕ್ಷಿಣ ಅಮೆರಿಕದಲ್ಲೇ ಅದು ಪ್ರಖ್ಯಾತವಾಗಿದೆ.

ಬನ್ನಿ, ಆ ಮಾರ್ಕೆಟ್ಟಿನಲ್ಲೊಂದು ಸುತ್ತು ಹಾಕಿ ಬರುವ...

ನಮಗರ್ಥವಾಗದ ಕೆಚುಆ ಮತ್ತು ಅಯ್ಮಾರಾ ಭಾಷೆಗಳಲ್ಲಿ ಗಟ್ಟಿಯಾಗಿ ಕರೆಯುವ ಬುಡಕಟ್ಟು ಚಹರೆಯ ಜನರು ವಿಸ್ಮಯ ಲೋಕಕ್ಕೊಂದು ಉತ್ಸಾಹದ ಪ್ರವೇಶ ಒದಗಿಸುತ್ತಾರೆ. ಗಾಢ ಬಣ್ಣದ ಚಿತ್ರವಿಚಿತ್ರ ವಸ್ತುಗಳು, ಅಲ್ಲಿನ ಸ್ವಚ್ಛತೆ, ವೈಶಾಲ್ಯ ಮೊದಲ ನೋಟಕ್ಕೇ ಗಮನ ಸೆಳೆಯುತ್ತವೆ. ಒಂದು ಬಡಾವಣೆಯಷ್ಟು ಉದ್ದ, ಮೂರು ಬಡಾವಣೆಗಳಷ್ಟು ಅಗಲ ಇರುವ ಆ ಮಾರುಕಟ್ಟೆಯಲ್ಲಿ ಸಿಗದ ವಸ್ತುವಿಲ್ಲ. ಚೌಕಾಸಿಗೆ ಅವಕಾಶವೇ ಇಲ್ಲ. ಕೊಳ್ಳದೇ ಸುಮ್‌ಸುಮ್ಮನೆ ಫೋಟೋ ತೆಗೆಯುತ್ತ ನಿಲ್ಲುವುದು ಇಷ್ಟವಾಗುವುದಿಲ್ಲ. ನಮ್ಮ ಉತ್ತರಕನ್ನಡದ ಹಾಲಕ್ಕಿ – ಮೀನುಗಾರ ಹೆಣ್ಮಕ್ಕಳ ಮಾರಾಟ ಕೌಶಲ, ಮಣಿಪುರದ 'ಇಮಾ ಮಾರ್ಕೆಟ್' (ಮಹಿಳಾ ಮಾರುಕಟ್ಟೆ) ನೆನಪಾಗುವಷ್ಟು ಇಡಿಯ ಮಾರ್ಕೆಟ್ಟಿನಲ್ಲಿ ಮಹಿಳೆಯರೇ ವ್ಯವಹರಿಸುತ್ತಿದ್ದರು. ಪರ್ವತ ಪ್ರದೇಶಗಳ ಜನರ ಮುಖಚಹರೆಗಳ ನೋಡುತ್ತ ಅಲ್ಲಿ ಒಂದು ಸುತ್ತು ಅಡ್ಡಾಡಿ ಬಂದರೆ ಯಾಕೆ ಆ ಕಣಿವೆಯ ಸುತ್ತಮುತ್ತಲ ಪ್ರದೇಶವನ್ನು 'ಪವಿತ್ರ ಕಣಿವೆ' ಎನ್ನುತ್ತಾರೆಂದು ಅರ್ಥವಾಗುತ್ತದೆ. ಅವರು ಗ್ಲೋಬಲೈಸ್ ಆಗುವುದಿರಲಿ, ಕಲೊನಿಯಲೈಸ್ ಕೂಡ ಆಗಲಿಲ್ಲ ಎನಿಸಿಬಿಡುತ್ತದೆ.

ಅಲ್ಲಿ ಏನಿದೆ ಏನಿಲ್ಲ? ಇಂಥದೆಂದು ಪಟ್ಟಿ ಮಾಡಲಾಗದಂಥ ರಾಶಿಗಟ್ಟಲೆ ಎಂತೆಂಥದೋ... ಭೂಮ್ಯಾಕಾಶದ ಮೇಲಿನ ಬಣ್ಣ – ಆಕಾರಗಳೆಲ್ಲ ಮೈವೆತ್ತುಬಂದು ಅಲ್ಲಿ ಹಣ್ಣು, ಕಾಳು, ತರಕಾರಿ, ಬಟ್ಟೆ, ತಿನಿಸುಗಳಾಗಿ ಆವಿರ್ಭವಿಸಿದಂತೆ.. ಮಣ್ಣು ಮುಟ್ಟದ ಯಂತ್ರಮನುಷ್ಯರಾದ ನಮ್ಮ ಹೊಟ್ಟೆಗಳಿಗೆ ತಮ್ಮ ಶಕ್ತಿಯುಕ್ತಿಯನ್ನೆಲ್ಲ ಬಳಸಿ ಅವರು ದುಡಿದುದನ್ನು ತಂದಿರಿಸಿಕೊಂಡು ಹಂಚುತ್ತಿರುವಂತೆ...

ಹಲ್ಲು – ಕಾಲು – ಬಾಲ ಸಮೇತ ರೋಸ್ಟ್ ಮಾಡಿದ ಇಡಿಇಡಿ ಗಿನಿಪಿಗ್‌ಗಳನ್ನು ಪ್ರವೇಶದ್ವಾರದಲ್ಲೇ ಇಟ್ಟುಕೊಂಡು ಮಾರುತ್ತಿದ್ದರು. ಗಿನಿಪಿಗ್ ಅವರ ನೆಚ್ಚಿನ ಆಹಾರ. ಉಪ್ಪಿನಕಾಯಿ ಆಗಿರುವ ಹಾವುಗಳು ಡಬ್ಬಿಯಲ್ಲಿ ಕಂಡವು. ಕಡಿದ ದನ / ಕುದುರೆ / ಕತ್ತೆಯ ಮೂತಿಯ ತುದಿಗಳೆಲ್ಲ ಮಸಾಲೆ ಸವರಿಕೊಂಡು 'ರೆಡಿ ಟು ಈಟ್' ಆಹಾರವಾಗಿ ಬಕೆಟು, ಬುಟ್ಟಿಗಳಲ್ಲಿ ಕೂತು ಬೆಚ್ಚಿಬೀಳಿಸಿದವು. ಗೊರಸಿನ ಸಮೇತ ಕಡಿದ ಕಾಲುಗಳ ರೋಸ್ಟ್ ಮಾಡಿದ್ದನ್ನು ಈಜಿಪ್ಟಿನಲ್ಲಿ ನೋಡಿದ್ದೆವು. ಆದರೆ ಹಲ್ಲುಬಿಟ್ಟು ಅಣಕಿಸುತ್ತಿರುವಂತೆ ಭಾಸವಾಗುವಂತೆ ಮೂತಿ ತುದಿ ಕತ್ತರಿಸಿಟ್ಟಿದ್ದನ್ನು ಮೊದಲೆಲ್ಲೂ ನೋಡಿರಲಿಲ್ಲ. ಈ ಹಲ್ಲು – ದವಡೆ – ಮೂಗನ್ನು ತಿನ್ನುವುದಾದರೂ ಹೇಗೆ? ನಮ್ಮ ದಿಗ್ಭ್ರಮೆಯ ಕಣ್ಣುಗಳ ನೋಡಿಯೇ ಇವರು ಕೊಳ್ಳುವವರಲ್ಲವೆಂದು ಅವರಿಗೆ ತಿಳಿದಿರಬೇಕು, ಹಚಹಚ ಎಂದು ಸಾಗಹಾಕಿದರು. ಕಡಿದಿಟ್ಟ ಹಂದಿಯ ತಲೆಗಳೂ ಕಂಡವು. ಹಂದಿಗಳಾದರೂ ಹೇಗಿವೆ? ತಲೆ, ಪಾದ ಕತ್ತರಿಸಿಕೊಂಡ ಮಾಂಸಲ ದೇಹಗಳ ರಾಶಿ ಕೆಂಪಗೆ ಸೇಬು ಹಣ್ಣಿನಂತೆ ಕ್ಲೀನಾಗಿ ಹೊಳೆಯುತ್ತಿವೆ! ಬೃಹತ್ ಮೀನು ರಾಶಿ, ಏಡಿರಾಶಿ.

*ಗೋಮುಖ?* *ರೋಸ್ಟ್ ಆಗಿರುವ ಗಿನಿಪಿಗ್* *ಹುಣಿಸೆ ಕಾಯಿ ಆಕಾರದ ಆಲೂಗೆಡ್ಡೆ*

ನೇರಿಳೆಹಣ್ಣಿನಂತೆಯೇ ಕಾಣುತ್ತಿದ್ದ, ಆದರೆ ಮೂಗಿಟ್ಟುಕೊಳ್ಳದಷ್ಟು ವಾಸನೆ ಸೂಸುತ್ತಿದ್ದ ಬಕೆಟಿನಲ್ಲಿದ್ದದ್ದು ಮೀನಿನ ಮೊಟ್ಟೆ! ಅಲ್ಪಾಕ ಪ್ರಾಣಿಯ ಮಾಂಸವನ್ನು ಒಣಗಿಸಿ ದಪ್ಪ ಚಾದರಗಳಂತೆ ಮಡಚಿ ಪೇರಿಸಿದ ರಾಶಿ. ಬೇಯಿಸಿದ ಕೆಂಪು ಕ್ವೇಲ್ ಮೊಟ್ಟೆಯನ್ನು ಅಲ್ಲೇ ಆಗಲೇ ಸುಲಿದುಕೊಂಡು ಕಡ್ಡಿ ಚುಚ್ಚಿ ತಿನ್ನುತ್ತಿದ್ದರು. ಕಪ್ಪೆಯ ಸುಲಿದ ತೊಡೆ, ಕಾಲುಗಳು ಮಾರಾಟಕ್ಕಿದ್ದವು. ಕೈಗವಸು ಹಾಕಿಕೊಂಡು ಬೃಹತ್ ಮಾಂಸದ ರಾಶಿ ಮುಂದೆ ಕೂತು ಕೇಳಿದಷ್ಟು ಕಡಿದುಕೊಡಲು ಸಿದ್ಧರಾಗಿದ್ದ ಕಟ್ಟುಮಸ್ತು ಹೆಂಗಳೆಯರು ಕಂಡರು. ಅಷ್ಟಾದರೂ ಎಲ್ಲೂ ಗುಂಯ್ಗುಡುವ ನೊಣ ಇಲ್ಲ. ಸ್ವಚ್ಛ, ಶುದ್ಧ..

ಇದು ಮಾಂಸದ ಸೆಕ್ಷನ್. ಇದು ಸ್ಥಳೀಯ ರುಚಿ ನೋಡುವ ಉಮೇದಿನ ಪ್ರವಾಸಿಗಳಿಗೆ ಅಸಂಖ್ಯ ರೆಸ್ಟುರಾಗಳಿರುವ ಜಾಗ.

ಮುಂದಿನದು ಸೊಪ್ಪುಸದೆ ಸೆಕ್ಷನ್.

ಒಂದೊಂದು ಹಣ್ಣಿನಂಗಡಿಯಲ್ಲೂ ನಾನಾ ನಮೂನೆಯ ಬಣ್ಣಬಣ್ಣದ ತಾಜಾತಾಜಾ ಹಣ್ಣುಗಳ ರಾಶಿ. ಗೊತ್ತಿರುವ, ಗೊತ್ತಿಲ್ಲದಿರುವ, ಫಳಫಳ ಹೊಳೆವ, ಚಿತ್ರವಿಚಿತ್ರ ಪರಿಮಳದ ಫಲಾವಳಿ. ಲಾಮಾಗಳಿಗೋ, ಮನುಷ್ಯರಿಗೋ ಎಂದು ಅನುಮಾನವಾಗುವಷ್ಟು ದೊಡ್ಡ ಸೊಪ್ಪಿನ ಹೊರೆಗಳು. ಒಂದೆರಡರ ಹೆಸರು ಕೇಳಿ, ತುಟಿ–ಬಾಯಿ–ನಾಲಿಗೆ ಎಲ್ಲವನ್ನು ತಿರುವಿದರೂ ಹೆಸರು ಉಚ್ಚರಿಸಲಾಗದೇ ಸುಸ್ತಾದೆವು. ನಾವು ಕವಳ ಜಗಿದಂತೆ ಅವರು ಜಗಿಯುವ ಕೋಕಾ ಎಲೆ ತುಂಬಿಕೊಂಡ ಚೀಲ, ಪಿಂಡಿಗಳೂ ಅಲ್ಲಲ್ಲಿ ಇದ್ದವು. ಒಂದು ಸ್ಟೂಲು–ಟೇಬಲ್ ಎರಡೇ ಇಟ್ಟುಕೊಂಡು, ತಾನು ಕಾಣದಷ್ಟು ಎತ್ತರದವರೆಗೂ ಭರ್ತಿ ತಿನಿಸು ಪೇರಿಸಿಟ್ಟುಕೊಂಡು ಮಾರುವ ಚಾಟ್ ಅಂಗಡಿ, ಕಾಫಿ ಶಾಪುಗಳು, ಹೋಂಮೇಡ್ ಚಾಕೊಲೇಟು ಮಾರುವವರು ಎಲ್ಲೆಲ್ಲೂ ಕಂಡರು. ತರಹೇವಾರಿ ಕಾಳು–ಬೇಳೆ–ಧಾನ್ಯಗಳ ಕಿರಾಣಿ ಅಂಗಡಿಗಳಿದ್ದವು. ವರ್ತುಲ, ಚೌಕ, ಆಯತ, ಶಂಕು, ಸಿಲಿಂಡರಿಕಲ್ ಹೀಗೆ ನಾನಾ ಆಕಾರಗಳಲ್ಲಿ ಕಾಣುವ ಬೆಣ್ಣೆಯ ಗಟ್ಟಿಗಳು ಇದ್ದವು. ಅದರ ಬಣ್ಣದ ವ್ಯತ್ಯಾಸದಲ್ಲಿ ಯಾವ ಪ್ರಾಣಿಯದು, ಎಷ್ಟು ತಾಜಾ ಎಂದು ಗೊತ್ತಾಗುವುದಂತೆ. ಬೃಹದಾಕಾರದ ಕುಕ್ಕೆಯಷ್ಟು ದೊಡ್ಡ ಬ್ರೆಡ್ಡು, ನಮುನಮೂನೆಯ ಚಿತ್ತಾರ ಮೈಮೇಲೆ ಹೊತ್ತ ಪಾಸ್ಟ್ರಿ, ತಾಜಾ ಹಣ್ಣಿನ ರಸ, ಮಸಾಲೆಮೆಣಸು ಅರೆದು ಮಾಡಿಟ್ಟ ದೋ... ... ಡ್ಡ ಕೋಡುಬಳೆಗಳು, ನಾನಾ ಬಣ್ಣದ ಬೇಯಿಸಿದ ಮೆಕ್ಕೆಜೋಳ ರಾರಾಜಿಸುತ್ತಿದ್ದವು. ಕೆಂಪುಬಣ್ಣದ ದ್ರವವು ಒಂದು ಮರದ ತೊಗಟೆಯಿಂದ ಸೂಸುವ ರಸವಂತೆ, ಡ್ರಾಗನ್ ಬ್ಲಡ್ ಹೆಸರಿನಲ್ಲಿ ತುಂಬಿಟ್ಟಿದ್ದರು. ಅದು ವೀರ್ಯವರ್ಧಕ, ಗಾಯಮಾಯಿಸುವ ರಕ್ತ ಪರಿಶೋಧಕ ಅಂದರು. ಮಕಾ ಎನ್ನುವುದು ಮೂಲಂಗಿ ತರಹದ ಒಂದು ಗೆಡ್ಡೆ. ಅದು ವಯಾಗ್ರಾದ ಪೆರು ವರ್ಷನ್. ಮಕಾ ಮತ್ತದರ ಪುಡಿಯೂ ಇತ್ತು.

ಕೊಂಚ ಮುಂದೆ ಹೋದೆವು. ಎಲ್ಲೆಲ್ಲಿ ನೋಡಿದರೂ ಪೇರಿಸಿದ್ದ ಗೆಡ್ಡೆಗಳ ರಾಶಿ. ಪ್ರತಿ ಗುಡ್ಡೆಯ ಮೇಲೂ ಬೇರೆಬೇರೆ ದರ, ಹೆಸರು, ಸಂಖ್ಯೆ ಬರೆದುಕೊಂಡು ಬಿರುಸಿನ ವ್ಯಾಪಾರ ಸಾಗಿತ್ತು. ಕರಿ, ಕಂದು, ನೇರಿಳೆ, ಕೇಸರಿ, ಕೆಂಪು, ಹಳದಿ, ಬಿಳಿ, ಕೆನೆ ಬಣ್ಣ, ಗೋಧಿ ಬಣ್ಣದ ಗೆಡ್ಡೆಗಳಿದ್ದವು. ಅವು ಎಲ್ಲವೂ ಆಲೂಗೆಡ್ಡೆಯ ಬೇರೆಬೇರೆ ವೆರೈಟಿಗಳಂತೆ!

ಎಲ ಎಲಾ! ಕೆಸು, ಸುವರ್ಣ, ಸಾಂಬ್ರಾಣಿ ಎಲ್ಲಾ ಗೆಡ್ಡೆಗಳ ಒಟ್ಟುಹಾಕಿ ಇವರು ಆಲೂ ಅನ್ನುತ್ತಿರುವರೋ ಹೇಗೆ? ಅನುಮಾನಿಸುತ್ತ ಮುಂದೆ ಸಾಗಿದೆವು. ಅವನ್ನೆಲ್ಲ ರಾಶಿಗೊಂದರಂತೆ ಅಡ್ಡಡ್ಡ, ಉದ್ದುದ್ದ ಕತ್ತರಿಸಿ ಅಂತರಂಗವನ್ನು ಬಹಿರಂಗಗೊಳಿಸಿ ಇಟ್ಟಿದ್ದರು. ಅವೆಲ್ಲ ಆಲೂಗೆಡ್ಡೆಯೇ. ದುಂಡನೆಯ, ಉರುಟುರುಟು, ಉದ್ದ, ಅಗಲ, ಬೆರಳಿನಾಕಾರದ, ಶುಂಠಿಯಂತಹ, ಹುಣಿಸೆ ಕಾಯಿ ಆಕಾರದ ಆಲೂಗೆಡ್ಡೆ. ಮೈಮೇಲೆ ನಯಸಿರುವ, ಹೊಂಡಗುಂಡಿಯಿರುವ, ನಡುವೆ ಕುಕ್ಕಿದಂತೆ ಮೊಟಕಿದಂತೆ ಇರುವ, ಒತ್ತಿಟ್ಟಂತೆ ಅಡ್ಡಾದಿಡ್ಡಿ ಕುಬ್ಜವಾಗಿರುವ ಆಲೂಗೆಡ್ಡೆ ! ಬಣ್ಣ, ರುಚಿ, ಪರಿಮಳ, ಮೃದುತ್ವ, ಆಕಾರ, ಗಾತ್ರ, ತಿರುಳುಗಳಲ್ಲಿ ಭಿನ್ನವಾದ ೩,೮೦೦ ವಿಧದ ಆಲೂಗೆಡ್ಡೆ ಪೆರುವಿನಲ್ಲಿ ಇವೆಯಂತೆ! ಅಲ್ಲಿ ಒಣಗಿಸಿಟ್ಟ ಆಲೂ ಕೂಡ ಇತ್ತು. ಒಣ ಆಲೂ ತಯಾರಿಸುವ, ಸಂಸ್ಕರಿಸುವ ವಿಧಾನದ ಮೇಲೆ ಅದರ ರುಚಿ, ಬಣ್ಣವೂ ಭಿನ್ನವಂತೆ.

೩೮೦೦ ಜಾತಿಯ ಆಲೂ!! ಭೂಮ್ತಾಯಿ ಪಚಮಾಮಾ, ಬಹುರಾಷ್ಟ್ರೀಯ ಬೀಜ ಕಂಪನಿಯ ಖಳರಿಗೆ ದಯವಿಟ್ಟು ಈ ದಾರಿ ತೋರಿಸಬೇಡ.

ಅಕ್ಸೊ ಮಾಮಾ (ಆಲೂಅಮ್ಮ) ಅಲ್ಲಿ ಒಂದು ದೇವತೆ. ತಲೆತಲಾಂತರಗಳಿಂದ





ಅಲ್ಪಾಕ ಪ್ರಾಣಿಯ ಮಾಂಸ



ಆಂಡೀಸ್ ಜನರ ಮುಖ್ಯಾಹಾರ ಆಲೂ. ಆಲೂಗೆಡ್ಡೆಯ ಮೂಲನೆಲೆ ದಕ್ಷಿಣ ಅಮೆರಿಕ. ಅದರಲ್ಲೂ ಪೆರುವಿನ ಟಿಟಿಕಾಕಾ ಸರೋವರದ ಸುತ್ತಮುತ್ತ ಅದರ ಮೊದಲ ಕೃಷಿ ಶುರುವಾಯಿತು. ಆಂಡೀಸ್ ತಪ್ಪಲಿನ ಜನ ೧೦ ಸಾವಿರ ವರ್ಷಗಳ ಕೆಳಗೆ ಕಾಡು ಆಲೂಗೆಡ್ಡೆಯನ್ನು ಕೃಷಿಯೋಗ್ಯವನ್ನಾಗಿಸಿ ಬೆಳೆದು ತಿನ್ನಲು ಶುರು ಮಾಡಿದರು. ಸ್ಪ್ಯಾನಿಶ್ ವಸಾಹತುಶಾಹಿಗಳೊಂದಿಗೆ ಆಲೂ ಯೂರೋಪ್, ಇಂಗ್ಲೆಂಡನ್ನು ಪ್ರವೇಶಿಸಿತು. ಬರಿಯ ೪೦೦ ವರ್ಷದಲ್ಲಿ ಇಡಿಯ ಜಗತ್ತು ಆಲೂಗೆಡ್ಡೆ ಬಳಸುತ್ತಿದೆ. ಭತ್ತ, ಗೋಧಿ, ಮೆಕ್ಕೆಜೋಳದ ನಂತರದ ಪ್ರಪಂಚದಲ್ಲಿ ನಾಲ್ಕನೆಯ ಅತಿ ಹೆಚ್ಚು ಬೆಳೆಯಲ್ಪಡುವ, ಒಂದು ಬಿಲಿಯನ್ ಜನ ಸೇವಿಸುವ ಆಹಾರವಾಗಿದೆ.

ಕುಸ್ಕೊ ನಗರ ದಾಟಿ ಪವಿತ್ರ ಕಣಿವೆಯಲ್ಲಿ ಹೋಗುವಾಗ ಪರ್ವತಗಳ ಇಳಿಜಾರಿನಲ್ಲಿ ಮೆಟ್ಟಿಲುಗಳೂ, ಅವುಗಳ ತಪ್ಪಲಿನಲ್ಲಿ ವಿಸ್ತಾರ ಹೊಲಗಳೂ, ದಾರಿ ಪಕ್ಕ ನೆಲವೇ ಮೈಯರಳಿ ನಿಂತಂತೆ ಹಸಿರು, ಹಳದಿ, ನೇರಿಳೆ, ಬಿಳಿ ಬಣ್ಣದ ಹೂಗಳೂ ಕಂಡಿದ್ದವು. ಅಲ್ಲಿ ನಾನಾ ತೆರನ ಗಿಡ, ಹೂವುಗಳು ಕಾಣಿಸುತ್ತಿದ್ದರೂ ಗೈಡ್ ಎಲ್ಲವೂ ಆಲೂಗೆಡ್ಡೆ ಗಿಡ ಎನ್ನುತ್ತಿದ್ದ. ಆತನೆಲ್ಲೋ ರೈಲು ಬಿಡುತ್ತಿದ್ದಾನೆ ಅಂದುಕೊಂಡಿದ್ದೆವು. ಇಲ್ಲಿ ಆಲೂ ವೈವಿಧ್ಯ ನೋಡುವಾಗ ಗೈಡಿನ ಮಾತು ನಿಜವಿರಬಹುದೆನಿಸಿತು. ಅಷ್ಟು ವೈವಿಧ್ಯಮಯ ಪಚಮಾಮಾನ ಆಲೂ ಸಾಮ್ರಾಜ್ಯ!

**ಹಿಡಿಯಿರಿ ತಕಲಿ, ಹಿಡಿಯಿರಿ ಹಂಜಿ...**

ಹಾಗೇ ಸ್ವಲ್ಪ ಮುಂದೆ ಹೋದರೆ ಬಟ್ಟೆ ಅಂಗಡಿಗಳ ಸಾಲು ಕಂಡವು. ಪೆರುವಿಯನರು ಒಳ್ಳೆಯ ನೇಕಾರರು. ಬಟ್ಟೆ ನೇಯುವುದರಲ್ಲಿ ಸಿದ್ಧ ಹಸ್ತರು. ಕುಸ್ಕೊ ಸ್ಮಾರಕಗಳ ಬಳಿ, ಮಾರ್ಕೆಟ್ಟುಗಳಲ್ಲಿ ಕೂತಲ್ಲಿ, ನಿಂತಲ್ಲಿ ಕಾಲಿಗೆ, ಗೂಟಕ್ಕೆ ಕೋಲು ಸಿಗಿಸಿ ಬಟ್ಟೆ ನೇಯುತ್ತ ಕುಳಿತ ಹೆಣ್ಮಕ್ಕಳು ಕಂಡಿದ್ದರು. ಚೀಲ, ಶಾಲು, ಟೋಪಿ, ಪರ್ಸು, ಬೊಂಬೆ, ರಗ್ಗು, ಟವೆಲು, ಕರವಸ್ತ್ರ, ಕಾರ್ಪೆಟ್, ಸುತ್ತುವ ಲಂಗ, ಕೊರಳಿಗೆ ಕಟ್ಟುವ ಬಟ್ಟೆ – ಹೀಗೇ ಏನೇನೋ ತರಹದ ಗಾಢಬಣ್ಣಗಳ ಬಟ್ಟೆಗಳನ್ನು ಮಾರುತ್ತ, ನೇಯುತ್ತ ಇದ್ದರು. ಅತಿ ಹಗುರ ಅಲ್ಪಾಕ – ಲಾಮಾದ ಉಣ್ಣೆಯಿಂದ ಹಿಡಿದು ಹತ್ತಿಬಟ್ಟೆಯ ತನಕ ಬೇರೆಬೇರೆ ವಸ್ತುಗಳಲ್ಲಿ ನೇಯುವಿಕೆ ನಡೆದಿತ್ತು.

ಸೂಟ್‌ಕೇಸಿನಲ್ಲಿ ಉಳಿದಿರುವ ಜಾಗ ಲೆಕ್ಕ ಹಾಕುತ್ತ ಬಣ್ಣಬಣ್ಣದ ಚೀಲ, ಟೋಪಿ, ಬಟ್ಟೆ, ಬೊಂಬೆ ಕೊಂಡೆವು. ಆ ಬಟ್ಟೆಗಳ ದಟ್ಟ ಬಣ್ಣ, ಅದರಲ್ಲೂ ಗಾಢ ಕೆಂಪು ಗಮನ ಸೆಳೆಯಿತು. ಅವರ ಪ್ರಕಾರ ಪೆರುವಿಯನರು 'ಕೊಕಿನಿಯಲ್ ಬಗ್' ಎಂಬ ಕೀಟವನ್ನು ಬಟ್ಟೆಗಳಿಗೆ ಬಣ್ಣಹಾಕಲು ಬಳಸುತ್ತಾರೆ! ಅದು ಕೆಂಪು ಬಣ್ಣ ಕೊಡುವ ತಿಗಣೆ. ಆ ಕೆಂಪು ಆಧಾರವಾಗಿಟ್ಟುಕೊಂಡು ಉಳಿದ ಬಣ್ಣ ಮತ್ತು ಶೇಡ್‌ಗಳು ತಯಾರಾಗುತ್ತವೆ. ಜೊತೆಗೆ ಗಿಡಮರಗಳ ತೊಗಟೆ, ಬೇರು, ಬೀಜ, ಹೂವುಗಳಿಂದಲೂ ಬಣ್ಣ ತಯಾರಿಸುತ್ತಾರೆ.

ಕೀಟದಿಂದ ಬಟ್ಟೆಗಳಿಗೆ ಬಣ್ಣವೆ!? ಹೌದು. ಕೊಕಿನಿಯಲ್ ಎಂಬ ಕೀಟವನ್ನು ಕೆಂಪು ಬಣ್ಣ ಕಾರ್ಮಿನ್ ತಯಾರಿಗೆ ಬಳಸುತ್ತಾರೆ. ಕ್ಯಾಕ್ಟಸ್ ಗಿಡಗಳ ಮೇಲಿರುವ ಈ ತಿಗಣೆಯ ದೇಹ ಮತ್ತು ಮೊಟ್ಟೆಗಳ ಕಾಲು ಭಾಗ ಕಾರ್ಮಿನಿಕ್ ಆಸಿಡ್‌ನಿಂದ ತುಂಬಿದೆ. ಮುಳ್ಳುಮಯ ಕ್ಯಾಕ್ಟಸ್‌ನ ಅಗಲ ಎಲೆಗಳ ಮೇಲೆ ಹೆಣ್ಣು ತಿಗಣೆಗಳು ಗುಂಪುಗೂಡಿ ಎಲೆಯ ರಸ ಹೀರುತ್ತ ನಿಶ್ಚಲವಾಗಿರುತ್ತವೆ. ಕ್ಯಾಕ್ಟಸ್ ಕೆರೆದು ಅಮ್ಮ, ಮಕ್ಕಳನ್ನು ಉದುರಿಸಿ, ಒಣಗಿಸಿ, ಪುಡಿ ಮಾಡಿ, ಅಲ್ಯುಮಿನಿಯಂ ಅಥವಾ ಕ್ಯಾಲ್ಸಿಯಂ ಲವಣದೊಡನೆ ಬೆರೆಸಿದರೆ ಕಡುಕೆಂಪುಬಣ್ಣ ತಯಾರು. ಲಿಪ್‌ಸ್ಟಿಕ್ ಹಾಗೂ ಆಹಾರ ತಯಾರಿಯಲ್ಲೂ ಕಾರ್ಮಿನ್ ಬಳಕೆಯಾಗುವುದಂತೆ!

ಮಾಯಾ ಮತ್ತು ಅಜಟೆಕ್ ಜನರಿಗೆ ಇದರ ಬಳಕೆ ಮೊದಲಿನಿಂದ ತಿಳಿದಿತ್ತು; ನಂತರ ಇತರ ಪ್ರದೇಶಗಳಿಗೂ ಹರಡಿತು ಎಂದ ನಮ್ಮ ಗೈಡಿನ ದೋಸ್ತನಾಗಿದ್ದ ಒಬ್ಬ ಅಂಗಡಿಕಾರ. ಆದರೆ ಈಗ ಅನಿಲಿನ್ ಡೈ, ಸಿಂಥೆಟಿಕ್ ಡೈ, ಸಿಂಥೆಟಿಕ್ ಯಾರ್ನ್ ಸಹಾಯದಿಂದ ಬಹು ಸುಲಭದಲ್ಲಿ ಬಣ್ಣ ಹಾಕಿ, ಬಟ್ಟೆ ನೇಯ್ದು, ಹೆಚ್ಚೆಚ್ಚು ತಯಾರಿಸುವ ಆಧುನಿಕ ವಿಧಾನ ಲಭ್ಯವಿದೆ. ಅವು ಬಂದಮೇಲೆ ಪ್ರಾಕೃತಿಕ ಬಣ್ಣದ ಬೇಡಿಕೆ ಕಮ್ಮಿಯಾಗಿತ್ತು. ಆದರೆ ಕೃತಕ ಬಣ್ಣಗಳ ಸುರಕ್ಷೆ ಬಗ್ಗೆ ಅನುಮಾನಗಳೆದ್ದು ಪ್ರಾಕೃತಿಕ ಡೈ ಮತ್ತೆ ಜನಪ್ರಿಯವಾಗತೊಡಗಿದೆ ಎಂದಾತ ಹೇಳಿದ.

ನಾವು ರಾಶಿರಾಶಿ ಬಟ್ಟೆ ಕೊಳ್ಳತೊಡಗಿದ್ದು ನೋಡಿ, 'ಅತಿರಂಗಿನ ಬಟ್ಟೆ ನೈಸರ್ಗಿಕ ಬಣ್ಣದ್ದಲ್ಲದಿರುವ ಸಾಧ್ಯತೆ ಇದೆ. ಅದನ್ನು ಇಲ್ಲೇ ಧರಿಸಿ ಮಳೆಯಲ್ಲಿ ಹೊರಹೋದೀರಿ ಜೋಕೆ, ಪೆರುವಿನ ಬಣ್ಣದ ಗುಟ್ಟು ದೇಶ ಬಿಡುವುದರಲ್ಲಿ ಬಯಲಾದೀತು' ಎಂದು ಗೈಡ್ ತಮಾಷೆ ಮಾಡಿದ. ಆದರೆ, 'ತನ್ನ ಅಂಗಡಿಯ ಬಟ್ಟೆ ಪ್ರಾಕೃತಿಕ ಬಣ್ಣದ್ದು. ಎಷ್ಟು ತೊಳೆದರೂ ಹೋಗುವುದಿಲ್ಲ, ಮಳೆಯಲ್ಲಿ ಧೈರ್ಯವಾಗಿ ಹೋಗಿಬನ್ನಿ' ಎಂದು ಅಂಗಡಿಯವ ಎದೆಯುಬ್ಬಿಸಿದ್ದ.

ಇಷ್ಟೇ ಅಲ್ಲ, ನಮ್ಮ ಭವಿಷ್ಯ ಹೇಳಲು ಮಾರ್ಕೆಟ್ಟಿನಲ್ಲಿ 'ವಿಚಸ್' (ಮಾಟಗಾತಿಯರು) ಇದ್ದರು. ಮರದಿಂದ ಮಾಡಿದ ಕೈಕಸುಬುದಾರಿಕೆಯ ವಸ್ತುಗಳು; ಹೆಣೆದ, ಕೆತ್ತಿದ, ನೇಯ್ದ ಇನ್ನೂ ಏನೇನೋ ಅಲ್ಲಿದ್ದವು. ಮಾರ್ಕೆಟ್ಟಿನ ಹೊರಗೂ ಹೆಂಗಳೆಯರು, ಮಕ್ಕಳು ಬಟ್ಟೆ ಹಾಸಿ ವ್ಯಾಪಾರ ಮಾಡುತ್ತಿದ್ದರು. ಒಳಗೆ ಇಂಚಿಂಚೂ ಜ್ಯಾಮ್‌ಪ್ಯಾಕ್ ಆದಂತೆ ಜನ. ನಾವೇನು ಕಡಿಮೆ ಎಂದು ಒಳನುಗ್ಗಿ ಅಲ್ಲಲ್ಲಿ ಕೈಕಾಲಾಡಿಸಿ ಕೆಲವಷ್ಟೇ ಫೋಟೋ ತೆಗೆದು, ಬೃಹದ್ಗಾತ್ರದ ಮಾವಿನ ಹಣ್ಣು (ಅದು ವರ್ಷದ ಮೊದಲ ಮಾವಿನಹಣ್ಣು), ಕಿತ್ತಳೆ, ಐಸ್ಕ್ರೀಂ ಫ್ರುಟ್ (ನಮ್ಮ ಸೀತಾಫಲದ ವೇರಿಯಂಟ್) ಕೊಂಡೆವು. ಒಂದಷ್ಟು ಹೊತ್ತು ಸುಮ್ಮನೆ ತಿರುಗಿ, ಕಣ್ಣರಳಿಸಿ, ಮೂಗರಳಿಸಿ ಎಲ್ಲವನ್ನು ಒಳಬಿಟ್ಟುಕೊಂಡೆವು.

ಹೀಗೆ ಅಚ್ಚರಿಗೊಂಡು ಸುಸ್ತಾಗುವಷ್ಟು ರುಚಿವೈವಿಧ್ಯ, ನೋಟವೈವಿಧ್ಯ, ವಾಸನೆ ವೈವಿಧ್ಯ ಅಲ್ಲಿತ್ತು. ಪ್ರತಿ ಅಂಗಡಿಯ ಮುಂದೆ ನಿಂತು ದಿನಗಟ್ಟಲೆ ಕಾಲ ಕಳೆಯಬಹುದು, ಅಷ್ಟೊಂದು 'ಚೆಲುವು–ತಿಳಿವು' ಅಲ್ಲಿತ್ತು.

ಕೊಸ್ಕೊ ನಗರ ಭೂಮಿಯ ಹೊಕ್ಕುಳು ಎನ್ನುವುದು ಇಂಕಾಗಳ, ಕೊಸ್ಕೊವಾಸಿಗಳ ನಂಬಿಕೆ. ಹಾಗಿದ್ದರೆ, ಈ ಮಾರುಕಟ್ಟೆಗೆ ಹೊಕ್ಕುಳ ಹೂವೆನ್ನುವುದು ಸರಿಯಾದ ಶಿರೋನಾಮೆ.

ಸೃಷ್ಟಿಕರ್ತ ವಿರಕೋಹಾ!! ನಿನ್ನ ಸೃಷ್ಟಿಯ ನೆಲ ಅದ್ವಿತೀಯ...
ಭೂಮ್ತಾಯಿ ಪಚಮಾಮಾ! ನಿನ್ನ ಪ್ರೀತಿಸದಿದ್ದರೆ ನಾವು ಕ್ಷುದ್ರ.

**ಡಾ|| ಎಚ್. ಎಸ್. ಅನುಪಮಾ**
ಜಲಜಾ ಜನರಲ್ ಮತ್ತು ಹೆರಿಗೆ ಆಸ್ಪತ್ರೆ, ಕವಲಕ್ಕಿ ಅಂಚೆ
ಹೊನ್ನಾವರ ತಾಲ್ಲೂಕು, ಉತ್ತರ ಕನ್ನಡ ಜಿಲ್ಲೆ – ೫೮೧ ೩೩೧



# ಬಾ ಗೌರಿಚಂಡಿಕೆಯೆ




**‘ಬಾ** ಗೌರಿಚಂಡಿಕೆಯೆ’
ನಿನ್ನ ಮಾತುಗಳಿಗೆ ಕಿವಿಯಾದವರೆಲ್ಲ ಒಪ್ಪಿದ್ದರು
ಸ್ವಾತಂತ್ರ್ಯದ ಅಭಿವ್ಯಕ್ತಿಗೆ ರಕ್ಷಣೆ ಇದೆ
ಬಲವಿದೆ ಭಾರತಕ್ಕೆ ಸಂವಿಧಾನ ಒಂದೇ
ಭಗವದ್‌ಗೀತೆ ಕಟ್ಟಕಡೆಯವನನ್ನು
ಮುಟ್ಟೋದಿದ್ದರೆ ಅದೊಂದೆ ವಿಧಾನ
ಸಂವಿಧಾನ ಸಂವಿಧಾನ

ಅಭಿಮತವೋ ಸಹಮತವೋ ಪ್ರತಿಮತವೋ
ವಿರೋಧಮತವೋ ಮತದಾನದಿಂದಲೇ
ಸಂವಿಧಾನಕ್ಕೆ ಜೀವ ಸಂಚಲನವೆಂದೆ
ಮುಚ್ಚುಮರೆ ಇಲ್ಲದೆ ಎಲ್ಲರೂ ಬೆಚ್ಚುವಂತೆ
ಸಹಜವಾಗಿಯೆ ನೀನು ಮೈಕಿನ ಮುಂದೆ
ಮಾತನಾಡಿದರೆ ಸಾಕು ಸತ್ಯದ ಸ್ವರ ಏರುತಿತ್ತು.

ಹಿಂಸಕನೆಂದರೆ ಸರಕಾರ
ಹಿಂಸಕನೆಂದರೆ ಅಧಿಕಾರ
ನಿರಂಕುಶ ಸರ್ವಾಧಿಕಾರ ಧಿಕ್ಕಾರ ಧಿಕ್ಕಾರ
ಕಣಿವೆಕಾಡು ಹಾಡಿಗಳಲ್ಲಿ
ಬಡರೈತರ ಜೋಪಡಿಗಳಲ್ಲಿ
ಹಿಂಸೆ ಕಂಡಲ್ಲಿ ಕೊಳಕ್ಕೆ ಎಸೆದ ಕಲ್ಲಿನಂತೆ
ಅರಿವಿನೆಚ್ಚರದ ಅಲೆಗಳೆಬ್ಬಿಸಿದೆ.

ದೀನರಿಗೆ ದಲಿತರಿಗೆ ಜಾಗವಿರದ
ಚರಿತ್ರೆಯನೆ ನೀ ಖಂಡಿಸಿದೆ
‘ಯಾರು ಹಿಂದು ? ಯಾರು ಹಿಂದು ?
ಹೇಗೆ ಹಿಂದು ?’ ನೀ ಕೇಳಿದೆ
ಅವರಲ್ಲಿ ನಮ್ಮೆಲ್ಲರನ್ನು ಒಳಗೊಳ್ಳುವ
ಉತ್ತರವಿರಲಿಲ್ಲ
ಮೂಲಭೂತ ಮತೀಯರ ಸೋಲನ್ನು
ನಿನ್ನ ಜೊತೆಗೆ ನಾವೆಲ್ಲರೂ ಆಸೆ ಪಟ್ಟಿದ್ದೆವು

ಅವರು ಹೆದರಿದರು – ಪಟ್ಟ ಭದ್ರ ಹಿತಾಸಕ್ತರು
ತಲೆತಿರುಕರು ಮನಮುರುಕರು ಕೊಲೆಗಟುಕರು
ಗುಂಡಿಟ್ಟು ನಿನ್ನ ನೆಲಕ್ಕೆ ಕೆಡವಿದರು
ನಿನ್ನಲ್ಲಿತ್ತು ಸಮುದಾಯದ ವಿವೇಕ
ನ್ಯಾಯಾನ್ಯಾಯಗಳ ತೂಕ
ಪ್ರತಿಭಟನೆ ಪ್ರತಿಭಟನೆ ಶತಮಾನಗಳ
ನಿದ್ದೆಯನು ಬಡಿದೆಬ್ಬಿಸುವ ಹೋರಾಟ
ಕೈ ಜೋಡಿಸಿದವರೆಲ್ಲ ಒಕ್ಕಲು ಬಳಗ

ನೀ ಕೇಳಿದೆ ‘ಗುಜರಾತಿನ ಜನ
ದೇಶದ ಉಳಿದ ಜನರಿಗಿಂತ
ಯಾವ ರೀತಿಯಲಿ ಬೇರೆ?’
ಇರುವ ನಮ್ಮಲ್ಲಿ ಯಾರು ಹೊರಗಿನವರು
ಒದ್ದವರು ಒದೆತತಿಂದವರು
ನಕ್ಸಲೀಯರು ನ್ಯಾಯಕ್ಕಾಗಿಯೇ ಬಲಿಗಳಾದವರು
ಸತ್ಯಕ್ಕಾಗಿ ಪಣತೊಟ್ಟು ಪೆನ್ನು ಹಿಡಿದು
ಪತ್ರಿಕೆಯ ಪುಟಪುಟ ಪದಪದಗಳಲ್ಲಿ ಧ್ವನಿ ಬಸಿದು
ನೀನು ಸಿಡಿಸಿದ ಸತ್ಯದಗುಂಡು
ಅವರನೆಂದೂ ಮುಗಿಸಿತ್ತು.

ಕನ್ನಡವೂ ಭಾರತವೂ ಜಗವೆಲ್ಲವೂ
ಅಚ್ಚರಿಗೊಂಡಿತು
ಮುಖೇಡಿಗಳ ಮುಂದೆ ಕೂರಿಸಿಯೆ ಮಾತಿನ
ಬೆಂಕಿ ಉಗುಳಿದೆ
ಸಾಲು ಸಾಲಿಗೆ ಸಿಗುವ ಸಿಳ್ಳು ಚಪ್ಪಾಳೆಯ ಸದ್ದಿಗೆ
ಸಾಗರದಂತೆ ಕರಾವಳಿ ಮಲೆನಾಡು ಬಯಲು
ಸೀಮೆಯ
ಪ್ರಜ್ಞಾವಂತ ಮನಸ್ಸುಗಳು ಸಂಭ್ರಮಿಸಿದವು

ಬಹಳಷ್ಟು ನಿರೀಕ್ಷೆ ಬಹಳಷ್ಟು ಪ್ರತೀಕ್ಷೆ
ನಿನ್ನ ಬೆನ್ನು ಕಾಯುತ್ತಿರುವಾಗಲೇ
ಗುಂಡಿಟ್ಟು ಕೊಂದು ನಿನ್ನ ಮಾಂಸವ ತಿಂದು
ತೇಗಿದ ಮಹಾಯಜ್ಞದ ತರ್ಪಣ ಸೂರೆಯ
ಅಮಲಿನಲಿ ಅವರಿದ್ದಾರೆ

ಬಾ ಗೌರಿಚಂಡಿಕೆಯೇ
ಕೊಂದವರ ಮಗಳಾಗಿ ಹುಟ್ಟಿ ಬಾ
ಗುಂಡಿಕ್ಕುವ ಸಂಸ್ಕಾರವ ಅಳಿಸ ಬಾ
ಕುಂದಿದೆಯ ದೀನರದಾಸ್ಯವೆದೆಯ ದಲಿತರ
ಸ್ವಾತಂತ್ರ್ಯದ ಕಹಳೆಯಾಗಿ ಮೊಳಗು ಬಾ
ಮಹಿಳೆಯರ ಮಾನವಾಗಿ ಹುಟ್ಟಿ ಬಾ
ಅಭಿವ್ಯಕ್ತಿಯ ತ್ರಾಣವಾಗಿ ಉದಿಸಿ ಬಾ
ಲೇಖನಿಯ ರಕ್ಷಣೆಗೆ ಮರಳಿ ಬಾ
ಬಾ ಗೌರಿಚಂಡಿಕೆಯೆ

**ಬಿ. ಆರ್. ಕವಿತಾರೈ**
ಕನ್ನಡ ಅಧ್ಯಯನ ವಿಭಾಗ, ಕೊಣಾಜೆ – ೫೭೪೧೯೯
ಮಂಗಳಗಂಗೋತ್ರಿ, ಮಂಗಳೂರು




ಸಂದರ್ಶಕರು

**ಡಾ॥ ಬಿ. ಆರ್. ಮಂಜುನಾಥ್, ಡಾ॥ ವಿಜಯಾ ಮತ್ತು ಕೆ. ಎಸ್. ಪಾರ್ಥಸಾರಥಿ**

ಭಾರತೀಯ ರಂಗಭೂಮಿಯ ಹಿರಿಯ ಚೇತನಗಳಲ್ಲಿ ಒಬ್ಬರಾದ ಎಂ. ಎಸ್. ಸತ್ಯುರವರನ್ನು 'ಹೊಸತು' ವಾರ್ಷಿಕ ವಿಶೇಷಾಂಕಕ್ಕಾಗಿ ಸಂದರ್ಶನ ಮಾಡಬೇಕೆಂದು ಡಾ॥ ವಿಜಯಾ, ಕೆ. ಎಸ್. ಪಾರ್ಥಸಾರಥಿ ಹಾಗೂ ಡಾ॥ ಬಿ. ಆರ್. ಮಂಜುನಾಥ್ ಇವರನ್ನೊಳಗೊಂಡ ತಂಡ ಪ್ರಯತ್ನಿಸಿತು. ಬಹಳ ಸಂತೋಷವಾಗಿ ಒಪ್ಪಿಕೊಂಡ ನಮ್ಮ ಆತ್ಮೀಯ 'ಸತ್ಯು' ಸಂದರ್ಶನಕ್ಕೆಂದು 'ಹೊಸತು' ಕಛೇರಿಗೆ ಬಂದರು. ವಾಹನ ಕಳಿಸುತ್ತೇವೆಂದು ಕಛೇರಿಯಲ್ಲಿದ್ದ ಸಂಗಾತಿಗಳು ಹೇಳಿದರೂ ಒಪ್ಪದೆ ಸರಿಯಾದ ಸಮಯಕ್ಕೆ ನಡೆದು ಬಂದೇ ಬಿಟ್ಟರು. ೮೮ನೆಯ ವಯಸ್ಸು ಎನ್ನುವಂಥ ಯಾವ ಲಕ್ಷಣವೂ ಇರಲಿಲ್ಲ. ದೃಢವಾದ ನಡಿಗೆ, ಸ್ಥಿರವಾದ ದನಿ, ನಿರ್ಭಯವಾದ ಅಭಿಪ್ರಾಯಗಳು, ಸಮಕಾಲೀನವಾದ ತುಡಿತ ಇವೆಲ್ಲಾ ಇರುವ ಸತ್ಯು ತರುಣರಲ್ಲಿ ಒಂದಿಷ್ಟು ಸ್ಫೂರ್ತಿಯನ್ನು (ಈರ್ಷ್ಯೆಯನ್ನು !) ಹುಟ್ಟಿಸಬಹುದು ಎನ್ನುವಂತಿದ್ದಾರೆ. ಸುಮಾರು ಎರಡೂವರೆ ಘಂಟೆಗಳ ಕಾಲ ನಡೆದ ಸಂದರ್ಶನ - ಅನೌಪಚಾರಿಕ ಹರಟೆಯ ಮುಖ್ಯಾಂಶಗಳನ್ನು ಕೆಳಗೆ ನೀಡಿದ್ದೇವೆ.

ನವೆಂಬರ್ ತಿಂಗಳ ಒಂದು ಬೆಳಿಗ್ಗೆ. ಇನ್ನೂ ಬೆಂಗಳೂರಿಗೆ ಚಳಿ ಕಾಲಿಡದ ಹಿತವಾದ ವಾತಾವರಣದಲ್ಲಿ ನಾವು ಕಛೇರಿಯಲ್ಲಿ ಕುಳಿತಿದ್ದೆವು. ಹನ್ನೊಂದು ಘಂಟೆ ಆಯಿತೇನೋ ಎಂದು ನಾವು ಸಂದರ್ಶಕರು ಸಮಯ ನೋಡಿಕೊಳ್ಳುವ ವೇಳೆಗೆ ನಿಃಶಬ್ದವಾಗಿ ಸತ್ಯು ಕಛೇರಿಯೊಳಗೆ ಪ್ರವೇಶಿಸಿಯೇ ಬಿಟ್ಟರು. ಎತ್ತರವಾದ, ತೆಳುವಾದ ದೇಹ. ಬೆಳ್ಳಿ ಗಡ್ಡ, ತಲೆಗೂದಲು, ಆಕರ್ಷಕವಾದ ಸೌಮ್ಯ ಮುಖ, ಮೆಲುದನಿ. ಬನ್ನಿ ಮೇಲೆ ಹೋಗೋಣ ಎಂದು ಹೊರಟೆವು. ನಗುತ್ತಾ, ಹರಟುತ್ತಾ ಬಂದೇಬಿಟ್ಟರು.

ನಮ್ಮ ಪಾರ್ಥಸಾರಥಿಯವರ ಊರು ಹೆಗ್ಗಡದೇವನ ಕೋಟೆ ಎಂದಕೂಡಲೇ ತಮ್ಮ ಕಾಕನಕೋಟೆಯ ನೆನಪುಗಳನ್ನು ಸತ್ಯು ಹಂಚಿಕೊಳ್ಳಲಾರಂಭಿಸಿದರು. ಅಲ್ಲಿ ಹಿಂದಿ ಚಿತ್ರರಂಗದ ಖ್ಯಾತ ಲೇಖಕ ಕೆ. ಎ. ಅಬ್ಬಾಸ್ 'ಬ್ಲಾಕ್ ಮೌಂಟೆನ್' ಎಂಬ ಸಿನಿಮಾ ಮಾಡಿದ್ದು, ಆಮೇಲೆ ಇನ್ನೊಬ್ಬ ಫ್ರೆಂಚ್ ನಿರ್ದೇಶಕನೊಂದಿಗೆ ಅಲ್ಲಿಗೆ ಹೋಗಿದ್ದದ್ದು, ಮಾರನೆಯ ಬಾರಿ 'ಕಾಕನಕೋಟೆ' ಸಿನಿಮಾದ್ದೇ ಚಿತ್ರೀಕರಣವಾದದ್ದು, ಅಲ್ಲಿ ನಡೆದ ಒಂದು 'ಖೆಡ್ಡಾ' ಕಾರ್ಯಾಚರಣೆ ಎಲ್ಲವನ್ನೂ ನೆನಪಿಸಿಕೊಂಡರು. ಡಾ॥ ವಿಜಯಾ ಈಗ ಪ್ರಶ್ನೆಯೊಂದನ್ನು ಎಸೆದರು.

# ರಂಗಭೂಮಿಯ ತರುಣ ಚೇತನ

# ಎಂ. ಎಸ್. ಸತ್ಯು



**ಡಾ॥ ವಿಜಯಾ :** ನಿಮ್ಮ ಪ್ರಯಾಣ ಬಹಳ ದೀರ್ಘವಾದದ್ದು. ರಂಗಭೂಮಿ, ಸಿನಿಮಾ, ನೃತ್ಯ ಇತ್ಯಾದಿ ಎಷ್ಟೊಂದು ಚಟುವಟಿಕೆಗಳು. ಎಲ್ಲಿಂದ ಪ್ರಾರಂಭಿಸೋಣ.

**ಸತ್ಯು :** ನಾನು ಬೆಳೆದದ್ದು ಮೈಸೂರಿನಲ್ಲಿ. ಅಲ್ಲಿಂದ ಶುರು ಮಾಡೋಣ.

**ಪಾರ್ಥಸಾರಥಿ :** ಒಂಟಿಕೊಪ್ಪಲ್.

**ಸತ್ಯು :** ಅಲ್ಲ ನಾವು ನರಸಿಂಹರಾಜ ಮೊಹಲ್ಲಾದಲ್ಲಿದ್ದೆವು. ನಾನು ಇಂಟರ್‌ಮೀಡಿಯಟ್ ಕಾಲೇಜಿನಲ್ಲಿ ಓದಿದೆ. ಚಿಕ್ಕ ವಯಸ್ಸಿನಿಂದಲೂ ನಾಟಕದ ಗೀಳು ಇತ್ತು. ತುಂಬಾ ನೋಡ್ತಿದ್ದೆ. ಇನ್ನು ಡ್ಯಾನ್ಸ್ ಬಗ್ಗೆ ಕೇಳಿದ್ರಲ್ಲ. ನಾನು ಉದಯಶಂಕರ್‌ರವರ 'ಕಲ್ಪನಾ' ಸಿನಿಮಾ ನೋಡಿ ನೃತ್ಯಕ್ಕೆ ಆಕರ್ಷಿತನಾದೆ. ವರಿಯರ್ ಅನ್ನೋರ ಹತ್ತಿರ ಮೂರು ವರ್ಷ ಕಥಕ್ಕಳಿ ಕಲಿತೆ. ಆಮೇಲೆ ಬೆಂಗಳೂರಿನಲ್ಲಿ ಶೇಷಾದ್ರಿಪುರದಲ್ಲಿ ಒಬ್ಬರ ಹತ್ತಿರ ಎರಡು ವರ್ಷ ಕಥಕ್ ಕೂಡ ಕಲಿತೆ. ಆ ದಿನಗಳಲ್ಲಿ ಬೆಂಗಳೂರಿನಲ್ಲಿ ಟೌನ್ ಹಾಲ್‌ನಲ್ಲೇ ಒಂದು ನೃತ್ಯ ಪ್ರದರ್ಶನಾನೂ ಕೊಟ್ಟಿದ್ದೆ (ನಗುತ್ತಾರೆ).

**ಡಾ॥ ಮಂಜುನಾಥ್ :** ಯಾವಾಗ, ೧೯೫೧ ಇರಬಹುದೇ? ಆಗ ಇಲ್ಲಿ ಓದುತ್ತಾ ಇದ್ರೇನೋ.

**ಸತ್ಯು :** ಹೌದು, ಸೆಂಟ್ರಲ್ ಕಾಲೇಜಿನಲ್ಲಿ ಓದುತ್ತಿದ್ದೆ. ವಿಜ್ಞಾನದ ವಿಷಯ, ಕೆಮಿಸ್ಟ್ರಿ, ಬಾಟನಿ, ಜಿಯಾಲಜಿ. ನನಗೆ ಅದರಲ್ಲೇನೂ ಆಸಕ್ತಿ ಇರಲಿಲ್ಲ. ಶಾ. ಬಾಲೂರಾವ್ ನನ್ನ ಆಪ್ತಮಿತ್ರರು. ಅವರು 'ಲೇಖಕ' ಅನ್ನೋ ಪತ್ರಿಕೆ ನಡೆಸ್ತಿದ್ರು. ನಾನೂ ಅದಕ್ಕೆ ಬರೀತಿದ್ದೆ. ಒಟ್ನಲ್ಲಿ ನನ್ನ ಮನಸ್ಸು ಕಲಾಪ್ರಪಂಚದ ಕಡೆಗೇ ಎಳೀತಿತ್ತು. ಆದ್ರೆ ಅಪ್ಪ ಯಾತಕ್ಕೂ ಒಂದು ಡಿಗ್ರಿ ಮುಗಿಸು ಅಂತಿದ್ರು. ಅವರು ಮೈಸೂರಿನ ಕೃಷ್ಣರಾಜ ಮಿಲ್‌ನಲ್ಲಿ ಮೆಕಾನಿಕಲ್ ಎಂಜಿನಿಯರ್ ಆಗಿದ್ರು. ಜಿಎಮ್‌ಓ ಆದರು. ನಾನು ಒಂದು ಆರು ತಿಂಗಳಾದ್ರೂ ಬಾಂಬೆಗೆ ಹೋಗಿ ಕಲಾಪ್ರಪಂಚ ನೋಡಿಬರೋಕೆ ಬಿಡಿ ಅಂತ ಹೇಳಿಹೋದೆ.

ಅಲ್ಲಿ ಕೆ. ಎ. ಅಬ್ಬಾಸ್, ಹಬೀಬ್ ತನ್ವೀರ್ ಅವರುಗಳ ಪರಿಚಯ ಆಯ್ತು. ನಂಗೆ ಅಲ್ಲಿ ಅವರುಗಳು ಮಾತಾಡ್ತಿದ್ದ ಯಾವ ಭಾಷೆಯೂ ಬರ್ತಿರಲಿಲ್ಲ – ಮರಾಠಿ, ಗುಜರಾತಿ, ಹಿಂದಿ, ಉರ್ದು. ನಂಗೆ ಬರ್ತಾ ಇದ್ದಿದ್ದು ಕನ್ನಡ, ಇಂಗ್ಲಿಷ್, ಸ್ವಲ್ಪ ತಮಿಳು ಅಷ್ಟೇ. ಮೊದಲಿಗೆ ಬ್ಯಾಕ್ ಸ್ಟೇಜ್ ಕೆಲಸ ಶುರು ಮಾಡ್ಕೊಂಡೆ. ಸ್ವಲ್ಪ ಪೇಂಟಿಂಗ್ ಬರ್ತಾ ಇತ್ತು.

**ಡಾ॥ ವಿಜಯಾ :** ನಿಮ್ಮ ಸ್ನೇಹಿತ ಕಾರ್ಟೂನಿಸ್ಟ್ ಆರ್. ಎಸ್. ನಾಯಡು ಅವರ ಪ್ರಭಾವ ನಿಮ್ಮ ಮೇಲೆ ಇತ್ತು ಅನಿಸುತ್ತೆ.

**ಸತ್ಯು :** ಇರಬಹುದು. ನಾನೂ ಹಬೀಬ್, ದೀನಾ ಪಾಠಕ್ ಅವರ ಫ್ಲಾಟ್‌ನಲ್ಲಿ ಸ್ವಲ್ಪಕಾಲ ಇದ್ವಿ. ಹಬೀಬ್ ಆಗತಾನೆ ಮಧ್ಯಪ್ರದೇಶದಿಂದ ಬಂದಿದ್ದ. ಸ್ವಲ್ಪ ರೀಡೆಬಲ್ ಪೊಯಟ್ರಿ ಬರೀತಿದ್ದ. ಇನ್ನೂ ಹೆಸರುವಾಸಿಯಾಗಿರಲಿಲ್ಲ. ನಮ್ಮ ಪರಿಸ್ಥಿತಿ ಏನೂ ಇಂಪ್ರೂವ್ ಆಗಲಿಲ್ಲ. ಯಾರೋ ದೆಹಲಿಗೆ ಹೋಗಿ ಅಂದ್ರು, ಹೋದ್ವಿ.

ದೆಹಲಿಯ ಜಾಮಿಯಾದಲ್ಲಿ, ಜಖ್ನಾ ಅನ್ನೋ ಕಡೆ ಒಬ್ಬ ಸ್ನೇಹಿತನ ಮನೆ ಅಂದ್ರೆ ಗುಡಿಸಿಲಿನಲ್ಲಿ ಹುಡುಗರನ್ನು ಸೇರಿಸಿಕೊಂಡು ನಾಟಕ ಅಭ್ಯಾಸ ಮಾಡ್ತಿದ್ವಿ. ಆಗ ಹಬೀಬ್ 'ಆಗ್ರಾ ಬಜಾರ್' ಅನ್ನೋ ನಾಟಕ ಬರೆದ. ಅದು ಒಬ್ಬ ಜನಗಳ ಕವಿ ನಜೀರ್ ಅಕ್ಬರಾಬಾದಿ ಅನ್ನೋವರ ಬಗ್ಗೆ. ಆತ ಪದ್ಯ ಬರೀತಿರಲಿಲ್ಲ. ನೇರವಾಗಿ ರಿಸೈಟ್ ಮಾಡ್ತಿದ್ದ. ರಸ್ತೇಲಿ ಸೌತೆಕಾಯಿ ಮಾರೋನ ಮೇಲೂ ಬರೀತಿದ್ದ. ಅದನ್ನು ಆ ಜನಗಳೇ ಹಾಡ್ತಿದ್ರು. ಅಂಥವನ ಬಗ್ಗೆ ನಾಟಕ ಅದು. ಆ ನಾಟಕಾನ ಕಾಂಗ್ರೆಸ್ ಕನ್ವೆನ್‌ಶನ್ ಹತ್ತಿರ ಏನೋ ಆಡಿದ್ವಿ. ಜಕೀರ್ ಹುಸೇನ್ ಅದನ್ನು ನೋಡಿ ಹಬೀಬಗೆ ಉತ್ತೇಜನ ಕೊಟ್ರು. ಅವನಿಗೆ ಇಂಗ್ಲೆಂಡಿನ ರಾಯಲ್ ಅಕಾಡೆಮಿ ಆಫ್ ಡ್ರಮಾಟಿಕ್ ಆರ್ಟ್ಸ್‌ಗೆ ಹೋಗಬೇಕೂಂತ ಇತ್ತು. ಸ್ಕಾಲರ್‌ಶಿಪ್ ಸಿಕ್ಕಿ ಅವನು ಹಾರಿಹೋದ. ನಾನು ಒಂಟಿಯಾದೆ (ನಗು).

**ಡಾ॥ ವಿಜಯಾ :** ಆಮೇಲೆ ಹಿಂದೂಸ್ತಾನಿ ಥಿಯೇಟರ್?

**ಸತ್ಯು :** ಅಲ್ಲಿ ನಾನು ಬೇಗಂ ಖುದ್‌ಸಿಯಾ ಜೈದಿಯವರನ್ನು ಭೇಟಿಯಾದೆ. ನಾಟಕದಲ್ಲಿ ಅವರಿಗೆ ತುಂಬಾ ಆಸಕ್ತಿಯಿತ್ತು. ಅವರು ಸಂಸ್ಕೃತ ನಾಟಕಗಳನ್ನು ಉರ್ದುಗೆ ಅನುವಾದ ಮಾಡ್ತಿದ್ರು. 'ಅಭಿಜ್ಞಾನ ಶಾಕುಂತಲ', 'ಮುದ್ರಾರಾಕ್ಷಸ' ಅದನ್ನೆಲ್ಲಾ ಅನುವಾದ ಮಾಡಿದ್ರು. ಸ್ವತಃ 'ಆಮ್ರಪಾಲಿ' ನಾಟಕಾನ ಬರೆದ್ರು. ಹಬೀಬ್ ಹೊರಟೋಗಿದ್ದ. ನಾನು ಸ್ಟೇಜ್ ಮ್ಯಾನೇಜರ್ ಆದೆ. ವೇನಿಕಾ ಮಿಶ್ರಾ ಅನ್ನೋರು ನನಗೆ ಪರಿಚಯ ಇದ್ರು. ಅವರನ್ನ ಬಾಂಬೆಯಿಂದ ಕರೆಸಿದ್ವಿ.

ಅಷ್ಟರಲ್ಲಿ ಹಬೀಬ್ ಬಂದ. 'ಮೃಛ ಕಟಿಕಾ' ನಾಟಕವನ್ನು ಆಡಿದ್ವಿ. ಅವನು ಜರ್ಮನಿಯಲ್ಲಿ ಬ್ರೆಷ್ಟ್‌ನ ಥಿಯೇಟರ್ ನೋಡಿ ಬಂದಿದ್ದ. ಅವನಿಗೆ ಅರ್ಥವಾದ ಬ್ರೆಷ್ಟ್‌ನ ನಮಗೆ ಹೇಳ್ದ. ನಮಗೆ ಅರ್ಥವಾದ ಬ್ರೆಷ್ಟ್‌ನ ನಾವು ಮಾಡಿದ್ವಿ. ಒಟ್ನಲ್ಲಿ ಆ ಪ್ರೊಡಕ್ಷನ್ ಬ್ರೆಷ್ಟ್ ಆಯ್ತೋ, ಭ್ರಷ್ಟ ಆಯ್ತೋ ಗೊತ್ತಿಲ್ಲ (ಜೋರಾಗಿ ನಗು).

ಆಮೇಲೆ ಹಬೀಬ್ 'ಚೋರ ಚರಣದಾಸ' ಬರೆದ. ಛತ್ತೀಸ್‌ಗಢದಿಂದ ನಟರನ್ನ ಕರೆತಂದ. ಬುಡಕಟ್ಟು ಜನರ ಕೈಲಿ ನಗರದ ವಾತಾವರಣದಲ್ಲಿ ನಾಟಕ ಆಡಿಸಿದ ಮೊದಲ ಪ್ರಯತ್ನ ಅದು. ಹಾಗೇನೇ ತೀಜನ್ ಬಾಯಿಯಂಥ ಕಲಾವಿದರು ಸೃಷ್ಟಿಯಾದರು. ಅವರು ಏಕತಾರಿ ಹಿಡಿದು ಹಾಡುತ್ತಾ ಅಭಿನಯಿಸಿಬಿಡುತ್ತಿದ್ರು. ನಮ್ಮ 'ಹರಿಕಥೆ' ತರಹ. ಅಷ್ಟರಲ್ಲಿ ದೂರದರ್ಶನ ಆರಂಭ ಆಯ್ತು. ದಿನದಲ್ಲಿ ಒಂದೆರಡು ಘಂಟೆ ಮಾತ್ರ ಟೆಲಿಕಾಸ್ಟ್ ಮಾಡ್ತಿದ್ರು. ರೆಕಾರ್ಡಿಂಗ್ ಸೌಲಭ್ಯ ಆಗ ಇರಲಿಲ್ಲ. ಆದ್ದರಿಂದ ಚೆನ್ನಾಗಿ ರಿಹರ್ಸಲ್ ಮಾಡಿ, ಎಲ್ಲಾ ಲೈವ್ ಮಾಡ್ಬೇಕಾಗ್ತಿತ್ತು. ನಾನು ಅಲ್ಲೇ ಒಂದು ಸಣ್ಣ ಸ್ಟೈಪೆಂಡ್‌ಗೆ ಕೆಲಸ ಮಾಡ್ತಿದ್ದೆ. ಅಲ್ಲೇ ಉಳಿದಿದ್ರೆ ಡೈರೆಕ್ಟರ್ ಆಗಿರ್ತಿದ್ದೆ. ಆದರೆ ನನಗೆ ಸರ್ಕಾರಿ ನೌಕರಿ ಇರಲಿ, ಯಾವುದೇ ನೌಕರಿ ಒಗ್ಗೋದಿಲ್ಲ ನೋಡಿ (ನಗುತ್ತಾರೆ).

**ಡಾ॥ ವಿಜಯಾ :** ಅಲ್ಲಿ ನೀವು ಶಾ. ಬಾಲೂರಾವ್ ಎಲ್ಲ ಸೇರಿ 'ಕನ್ನಡ ಭಾರತಿ' ಮಾಡಿದ್ರಿ ಅಲ್ವೇ ?

**ಸತ್ಯು :** ಹೌದು ಗಿರೀಶ್ ಕಾರ್ನಾಡರ 'ತುಘಲಕ್'ನ ಮೊದಲು ನಾವೇ ಮಾಡಿದ್ದು. ಬಿ. ವಿ. ಕಾರಂತರು ನಿರ್ದೇಶನ ಮಾಡಿದ್ರು.

**ಡಾ॥ ಮಂಜುನಾಥ್ :** ಅದು ಇನ್ನೂ ಮುಂದುವರೀತಿದ್ಯಾ?

**ಸತ್ಯು :** ಇಲ್ಲಿ ಯಾರೋ ಮಾಡ್ತೀವಿ ಅಂದ್ರು. ಮುಂದುವರೆಸಲಿಲ್ಲ. ಅದಕ್ಕೆ ಪ್ಯಾಶನ್–ಹುಚ್ಚು ಬೇಕು ನೋಡಿ. ಮೊನ್ನೆ ಸಾಣೆಹಳ್ಳಿಗೆ ಹೋಗಿದ್ದೆ. ಅಲ್ಲಿ ಸ್ವಾಮೀಜಿಗೆ ರಂಗಭೂಮೀಲಿ ಅದೆಂಥಾ ಆಸಕ್ತಿ. ನಂಗೆ ಕಾರಂತ್ ಪುರಸ್ಕಾರ ಕೊಡ್ತಾರೆ ಸರ್ಕಾರದೋರು ಅಂದಾಗ ಮೊದಲು ಅಭಿನಂದನೆ ಮಾಡಿ ಫೋನ್ ಬಂದದ್ದು ಅವರಿಂದ. ರಂಗಭೂಮಿ ಬಗ್ಗೆ ಎಷ್ಟು ಹುಚ್ಚು ಇರಬೇಕು ನೋಡಿ ಅವರಿಗೆ.

**ಪಾರ್ಥಸಾರಥಿ :** ಮತ್ತೆ ದೆಹಲಿಯಿಂದ ಮುಂದಕ್ಕೆ?

**ಸತ್ಯು :** ಖುದ್‌ಸಿಯಾ ತೀರಿಕೊಂಡ್ರು. ಶಿ ವಾಸ್ ಓನ್ಲಿ ಫಾರ್ಟಿಸಿಕ್ಸ್. ಇನ್‌ಫ್ಯಾಕ್ಟ್, ಶಮಾ ಜೈದಿ, ನನ್ನ ಮಡದಿ ಅವರ ಮಗಳು. ಸ್ವಲ್ಪ ದಿನ ಮುಂದುವರಿಸೋಕೆ ಪ್ರಯತ್ನಿಸಿದ್ವಿ.

ನಾನು ಸ್ವಲ್ಪಕಾಲ ಪೇಟ್ರಿಯಟ್ ಪತ್ರಿಕೆಗೂ ಕೆಲಸ ಮಾಡಿದ್ದೆ. ಅರುಣಾ

ಅಸಫ್ ಅಲಿಯವರು ಶುರು ಮಾಡಿದ್ರು. ಅವರು ಟ್ಯಾಗೋರ್ ಮನೆತನದವರು ಆಮೇಲೆ ಕಾಂಗ್ರೆಸ್‌ನಲ್ಲಿದ್ದ ಆಸಿಫ್ ಅಲಿಯವರನ್ನು ಮದುವೆಯಾಗಿದ್ರು. ಅಲ್ಲಿಗೆ ಬಂದು ಚೇತನ್ ಆನಂದ್ ಸಿನಿಮಾಗೆ ಕೆಲಸ ಮಾಡಕ್ಕೆ ಕರೆದ್ರು. ನಾನು ಅರುಣಾನ ಕೇಳಿದೆ. ಅವರು ಹೋಗು ಅಂದ್ರು. ನಾನು ಹೊರಟೆ. ಅದು ೧೯೬೩. ಯುದ್ಧ ಮುಗಿದಿತ್ತು. ನಾವು ಲಡಖ್, ಕಾರ್ಗಿಲ್ ಅಲ್ಲೆಲ್ಲಾ ಸಿಕ್ಕಾಪಟ್ಟೆ ಶೂಟ್ ಮಾಡಿದ್ವಿ. ಸುಮಾರು ಒಂದು ಲಕ್ಷ ಫುಟೇಜ್ ಇತ್ತು. ಆದರೆ ಬಾಂಬೆಗೆ ಬಂದು ನೋಡಿದ್ರೆ ಅದರಲ್ಲಿ ಕಥೇನೇ ಇರಲಿಲ್ಲ. We were simply excited with the landscape ಸಿಕ್ಕಾಪಟ್ಟೆ ಶೂಟ್ ಮಾಡಿಬಿಟ್ಟಿದ್ವಿ.

ಸರಿ ಚೇತನ್ ಮತ್ತೆ ಶೂಟ್ ಮಾಡೋಣ ಅಂದ್ರು. ನಾನು ಪುನಃ ಲಡಖ್‌ಗೆ ಹೋಗಬೇಕಾ ಅಂದೆ. ಅವರು, ಇಲ್ಲ ಇಲ್ಲೇ ಸೆಟ್ ಹಾಕು ಅಂದ್ರು. ನನಗೆ ಭಯ. ಅಯ್ಯೋ ಇದು ಹೇಗೆ ಸಾಧ್ಯ ಅಂದೆ. ಫಿಲಂ, ಇದ್ದದ್ದು ಬ್ಲಾಕ್ ಅಂಡ್ ವೈಟ್‌ನಲ್ಲಿ. ಕಡೆಗೆ ಎರಡು ಕಡೆ ಸೆಟ್ ಹಾಕಿದ್ವಿ. ಚಿತ್ರ ಮುಗೀತು.

ಆ ದಿನಗಳಲ್ಲಿ ನಾನು ನನ್ನ ಅಕ್ಕನ ಮನೇಲಿ ಇರ್ತಿದ್ದೆ. ಒಂದು ದಿನ ಬೆಳಿಗ್ಗೆ ನನ್ನ ಸ್ನೇಹಿತ ಹರಿದತ್ ಅಂತ ಇಪ್ಪಾದವನು, ಬೆಳಗಿನ ಝಾವ ರೋಡಲ್ಲಿ ನಿಂತುಕೊಂಡು 'ಸತ್ಯು, ಸತ್ಯು' ಅಂತ ಕೂಗ್ತಿದ್ದ. ನಮ್ಮ ಭಾವ ನನ್ನ ಎಬ್ಬಿಸಿ 'ಏನು ವಿಷಯಾನೋ ನೋಡು' ಅಂದ್ರು. ಅವನಿಗೆ ನನ್ನ ಮನೆ ಗೊತ್ತಿಲ್ಲದೆ ರೋಡ್ ಮಧ್ಯದಲ್ಲೇ ನಿಂತು ಕೂಗ್ತಿದ್ದ, "ಅವಾರ್ಡ್ ಬಂದಿದೆ ಕಣೋ ನಿಂಗೆ" ಅಂತ.

ಬೆಸ್ಟ್ ಆರ್ಟ್ ಡೈರೆಕ್ಟರ್ ಅಂತ ಫಿಲಂ ಫೇರ್ ಅವಾರ್ಡ್ ಬಂದಿದ್ದದ್ದು ನನಗೆ ಗೊತ್ತಾದ ಕಥೆ ಇದು. ಹೀಗೆ ನನ್ನ ಜೀವನದಲ್ಲಿ ಆಕಸ್ಮಿಕಗಳಿಗೆ ತುಂಬಾ ದೊಡ್ಡ ಪಾತ್ರ ಇದೆ.

**ಡಾ॥ ವಿಜಯಾ :** ಮತ್ತೆ IPTA ಬಗ್ಗೆ ಹೇಳ್ತೀರಾ?

**ಸತ್ಯು :** ಬಹಳ ಜನಕ್ಕೆ ಗೊತ್ತಿಲ್ಲ. ಇಂಡಿಯನ್ ಪೀಪಲ್ಸ್ ಥಿಯೇಟರ್ ಅಸೋಸಿಯೇಶನ್‌ನ ಆರಂಭವಾದದ್ದು ಬೆಂಗಳೂರಿನಲ್ಲೇ.

**ಪಾರ್ಥಸಾರಥಿ :** ಬಾಂಬೇನಲ್ಲಲ್ವೇ?

**ಸತ್ಯು :** ಅಲ್ಲ ಮೊದಲು ಬೆಂಗಳೂರಿನಲ್ಲಿ ೧೯೪೦ರಲ್ಲಿ ಪ್ರಯತ್ನ ಶುರು ಆಯ್ತು. ಇಂಡಿಯನ್ ಇನ್‌ಸ್ಟಿಟ್ಯೂಟ್ ಆಫ್ ಸೈನ್ಸ್‌ನಲ್ಲಿ. ಆಗ ಅಲ್ಲಿ ಹೋಮಿ ಜಹಾಂಗಿರ್ ಭಾಭಾ ಅವರು ನಿರ್ದೇಶಕರಾಗಿದ್ರು. ಬೆಂಗಳೂರಿನಲ್ಲಿ ಜರುಗಿದ ಮೊದಲ ಸಭೇನಲ್ಲಿ ಕಮಲಾದೇವಿ ಚಟ್ಟೋಪಾಧ್ಯಾಯ, ಹರೀಂದ್ರನಾಥರು, ಹಾಸನ ರಾಜಾರಾಯರು... ಅಂದ್ರೆ...

**ಡಾ॥ ಮಂಜುನಾಥ್ :** ಸಾಹಿತಿಗಳು, 'ಕಾಂತಾಪುರ' ಬರೆದವರು

**ಸತ್ಯು :** ಅವರೇ. ಇವರೆಲ್ಲಾ ಸೇರಿದ್ರು. ಅದಕ್ಕೆ

## ಸತ್ಯು ಮತ್ತು ಚಲನಚಿತ್ರಗಳು...

ಹಿಂದಿ, ಕನ್ನಡ ಎರಡೂ ಭಾಷೆಯಲ್ಲಿ ತಯಾರಾದ 'ಕನ್ನೇಶ್ವರ ರಾಮ' ವ್ಯಂಗ್ಯ ಚಿತ್ರಕಾರ ಎಸ್. ಕೆ. ನಾಡಿಗ್‌ರವರ ಕಾದಂಬರಿಯನ್ನು ಆಧರಿಸಿತ್ತು. ಬ್ರಿಟಿಷ್ ಕಾಲದ ಕತೆಯಲ್ಲಿ ರಾಮನದ್ದು ರಾಬಿನ್ ಹುಡ್ ಮಾದರಿಯ ಪಾತ್ರ. ಅನಂತ ನಾಗ್, ಅಮೋಲ್ ಪಾಲೇಕರ್, ಶಬಾನಾ ಅಜ್ಮಿ ಅಭಿನಯಿಸಿದ್ದ ಚಿತ್ರದಲ್ಲಿ ರಾಷ್ಟ್ರ ಮತ್ತು ರಾಜ್ಯಮಟ್ಟದ ಪ್ರತಿಭೆಗಳು ಒಂದಾಗಿದ್ದರು. ಇಶಾನ್ ಆರ್ಯ ಆರ್ರಿ ಫಿಲಂನಲ್ಲಿ ಶೂಟ್ ಮಾಡಿದ್ದರು. ಬಿ. ವಿ. ಕಾರಂತರು ಡಕಾಯಿತನ ಪಾತ್ರದಲ್ಲಿ ನಟಿಸಿದರು ಮತ್ತು ಬಾಳಪ್ಪ ಹುಕ್ಕೇರಿಯವರು ಹಾಡುತ್ತಾ ಕಾಣಿಸಿಕೊಂಡರು ಎಂಬುದು ಚಿತ್ರದ ವೈಶಿಷ್ಟ್ಯ. ಸ್ಥಿರ ಛಾಯಾಚಿತ್ರಗ್ರಾಹಕ ಬಸವರಾಜ್ ವಾಲಿ ಒಂದು ದೃಶ್ಯದಲ್ಲಿ ಮದುವೆ ಗಂಡಾಗಿ ಅಭಿನಯಿಸಿದ ಮೇಲೆ, ಹೆಂಡತಿ ಆಗಿದ್ದಾಕೆ 'ನೀನೇ ನನ್ನ ಗಂಡ' ಎಂದು ಪಟ್ಟು ಹಿಡಿದ ಪ್ರಸಂಗವೂ ಜರುಗಿತು!

'ಚಿತೆಗೂ ಚಿಂತೆ' ಚಿತ್ರವನ್ನು ಸತ್ಯು, ಜಿ. ಎನ್. ಲಕ್ಷ್ಮೀಪತಿಯವರಿಗೆ ಮಾಡಿಕೊಟ್ಟರು. ಸತ್ಯು ನಾಯಕನಿಗೇ ಆಗಲಿ, ಸಾಮಾನ್ಯ ಲೈಟ್ ಬಾಯ್‌ಗೇ ಆಗಲಿ ಒಂದೇ ರೀತಿ ಊಟ ಕೊಡಬೇಕು ಎಂದಾಗ ಅದನ್ನು ಮನ್ನಿಸಲು ಹೆಣಗಾಡಬೇಕಾಯಿತು! ಚಿತ್ರದ ತೀಕ್ಷ್ಣ ವಿಡಂಬನೆ ಅಂದಿನ ಪ್ರೇಕ್ಷಕರಿಗೆ ತಲುಪುವುದು ಕಷ್ಟವಾಗಿರಬೇಕು. ಆದರೆ ಅದು ಅದ್ಭುತವಾದ ಮೆಟಫರ್‌ಗಳ ಮೂಲಕ ಸರ್ವಾಧಿಕಾರಿಗಳನ್ನು, ಪೊಳ್ಳಾದ ನಾಯಕರನ್ನು ಗೇಲಿ ಮಾಡಿತ್ತು. ಖ್ಯಾತ ಹಿಂದಿ ಚಿತ್ರ ಸಾಹಿತಿ ಜಾವೆದ್ ಚಿತ್ರಕಥೆ ಬರೆದಿದ್ದರು.ಸುಗಮ ಸಂಗೀತಗಾರ ಬಿ.ಜಿ. ರಾಮನಾಥ್ ಹಾಡಿದ್ದರು. ವಿ. ಎಸ್. ಆಚಾರ್ ರೋಗಗ್ರಸ್ತ ನಾಯಕನ ಪಾತ್ರದಲ್ಲಿ ಸೊಗಸಾದ ಅಭಿನಯ ನೀಡಿದ್ದರು.

'ಬರ' ಸತ್ಯು ಅವರ ಅತ್ಯಂತ ಯಶಸ್ವಿ ಚಿತ್ರ. ಅದೇ ಸಮಯದಲ್ಲಿ 'ಅಂತ' ಚಿತ್ರವೂ ಬಿಡುಗಡೆ ಆದ್ದರಿಂದ 'ಬರ'ಕ್ಕೆ ಚಿತ್ರ ಮಂದಿರಗಳು ಸಿಗಲಿಲ್ಲ. ಹಾಗಾಗಿ ಸಾಲಕ್ಕೆ ಬಡ್ಡಿ ಕಟ್ಟಬೇಕಾಗಿ ನಷ್ಟವಾಯಿತು. ರಾಜಕೀಯ ಒತ್ತಡದಡಿಯಲ್ಲಿ ಕಾರ್ಯಾಂಗ ಹೇಗೆ ನಿಷ್ಕ್ರಿಯವಾಗುತ್ತದೆ ಎಂಬುದನ್ನು ತೋರಿಸಲು ಸುಮಾರು ನೂರು ಜನ ಐಎಎಸ್ ಅಧಿಕಾರಿಗಳಿಗೆ ಮದ್ರಾಸ್‌ನಲ್ಲಿ ಪ್ರದರ್ಶನವನ್ನು ಏರ್ಪಡಿಸಲಾಗಿತ್ತು. ಅದರ ಹಿಂದಿ ಅವತರಣಿಕೆ 'ಸೂಕ'ದ ಕಾಪಿ ಮಸ್ಸೂರಿಯಲ್ಲಿನ ಅಧಿಕಾರಿಗಳ ತರಬೇತಿ ಕೇಂದ್ರದಲ್ಲಿ ಇಂದಿಗೂ ಲಭ್ಯವಿದೆ.

ಭಯೋತ್ಪಾದನೆಯನ್ನು ಪ್ರೀತಿಯ ಮೂಲಕ ಗೆಲ್ಲಬೇಕೆಂದು ಹೇಳಲು ಹೊರಟ 'ಗಳಿಗೆ' ಸಿನಿಮಾದಲ್ಲಿ ಸೆಕ್ಯುಲರಿಸಮ್, ಅಡಿಗ, ರಾಜರತ್ನಂ, ರಾಮಮಂದಿರ, ಪೊಲೀಸ್, ಡಂಕೆಲ್ ಎಲ್ಲಾ ಬಂದು ಹೋಗುತ್ತವೆ.

ಕತೆಗಾರ ಆನಂದರ (ಸೀತಾರಾಂ) 'ನಾನು ಕೊಂದ ಹುಡುಗಿ'ಯನ್ನು ಸಹ ಸತ್ಯು ಚಿತ್ರಿಸಿದರು. ದೂರದರ್ಶನಕ್ಕೂ ಸತ್ಯು ಅನೇಕ ಧಾರಾವಾಹಿಗಳನ್ನು ಮಾಡಿಕೊಟ್ಟರು. ಮಾಸ್ತಿ ವೆಂಕಟೇಶ ಅಯ್ಯಂಗಾರ್‌ರವರ ಸಣ್ಣಕಥೆಗಳನ್ನು ಕನ್ನಡ, ತಮಿಳು ಎರಡರಲ್ಲೂ ಮಾಡಿದರು. ತಕಳಿಯವರ 'ಕಾಯರ್'ಅನ್ನು ಮಲೆಯಾಳಿಯಲ್ಲಿ, ಹಿಂದಿಯಲ್ಲಿ ಮಕ್ಕಳಿಗೆ 'ಸ್ವರ್ಣ ದ್ವೀಪ್' ಅನ್ನು ಮಾಡಿದ್ದಾರೆ.

ಈ ವರ್ಷ ಕರ್ನಾಟಕ ಸರ್ಕಾರದಿಂದ ಜೀವಮಾನ ಸಾಧನೆಗಾಗಿ ಬಿ. ವಿ. ಕಾರಂತ ಪ್ರಶಸ್ತಿ ಪಡೆದ ಎಂ. ಎಸ್. ಸತ್ಯು ಅವರಿಗೆ 'ಹೊಸತು' ಹಾರ್ದಿಕ ಅಭಿನಂದನೆಗಳನ್ನು ಸಲ್ಲಿಸುತ್ತದೆ.



ಶ್ರೀಲಂಕಾದಿಂದ ಅನಿಲ್ ಸಿಲ್ವಾ ಅನ್ನೋ ಕಮ್ಯುನಿಸ್ಟ್ ಅವರೂ ಬಂದಿದ್ರು. ಜವಹರಲಾಲ್ ನೆಹರೂ ಅದಕ್ಕೆ ಸಂದೇಶ ಕಳಿಸಿದ್ರು. ಅವರಿಗೆ ಇಂಡಿಪೆಂಡೆನ್ಸ್ ಮೂವ್‌ಮೆಂಟ್‌ಗೆ ಪೂರಕವಾದ ಸಾಂಸ್ಕೃತಿಕ ಸಂಘಟನೆ ಬೇಕು ಅಂತ ಅನಿಸಿತ್ತಂತೆ. ಬ್ರಜಿಲ್‌ನಲ್ಲಿ, ಚೀನಾದಲ್ಲಿ ಎಲ್ಲಾ ಅಂಥದ್ದು ನಡೆದಿತ್ತು.

**ಡಾ॥ ಮಂಜುನಾಥ್ :** ಆ ಪತ್ರ ಇದೆಯಾ?

**ಸತ್ಯು :** ಇಪ್ಟಾದ ಆರ್ಕೈವ್ಸ್‌ನಲ್ಲಿ ಇರಬೇಕು. ಆಗ ನೋಡಿ ಮೈಸೂರು ಮಹಾರಾಜರು ಇಪ್ಟಾಗೆ ಅಂತ ಬೆಂಗಳೂರಿನ ಚಾಮರಾಜಪೇಟೆನಲ್ಲಿ ಜಾಗ ಕೊಟ್ರು. ಅದನ್ನ ಯಾರೋ ಸಾಮಿಲ್‌ನೋನು usurp ಮಾಡಿಕೊಂಡ. ಈಗಲೂ ಅಲ್ಲಿ ಸಾ ಮಿಲ್ ಇರಬಹುದು.

ಆಗ ಮಲ್ಲೇಶ್ವರದ ರೈಲ್ವೇ ಲೈನ್ ಪಕ್ಕದಲ್ಲಿ ಸ್ಟಾರ್ ಹೌಸ್ ಅಂತ ಇತ್ತು. ಈಗಿನ ಕ್ಲೂನಿ ಕಾನ್‌ವೆಂಟ್ ಹತ್ತಿರ. ಈಗ್ಲೂ ಆ ಬಂಗ್ಲೆ ಇರಬಹುದು. ಅದೊಂದು ಸಾಂಸ್ಕೃತಿಕ ಕೇಂದ್ರ. ಹಾಡು, ನೃತ್ಯ ಎಲ್ಲ ನಡೆಯೋದು. ಅಲ್ಲಿಗೆ ಮೃಣಾಲಿನಿ ಬರ್ತಾ ಇದ್ರು. ಅವರನ್ನ ನೋಡಕ್ಕೆ ಟಾಟಾ ಇನ್‌ಸ್ಟಿಟ್ಯೂಟ್‌ನಿಂದ ವಿಕ್ರಮ್ ಸಾರಾಭಾಯ್ ಬರ್ತಿದ್ರು. ಎಂ. ಆರ್. ಗೌತಮ್ ಅಂತ ಸಂಗೀತಗಾರರು, ಅಚ್ಯುತ್ ಪಟವರ್ಧನ್ – ನಮ್ಮ ಸಾಕ್ಷ್ಯಚಿತ್ರ ಮಾಡ್ತಾರಲ್ಲ ಆನಂದ್ ಪಟವರ್ಧನ್ ಅವರು ಅಚ್ಯುತ್ ಅವರ ಸೋದರನ ಮಗ – ಅವರ ಮಡದಿ ಸುನಂದಾ ಎಲ್ಲಾ ಅಲ್ಲಿ ಸೇರ್ತಾ ಇದ್ರು. ಇದೆಲ್ಲಾ ಹಿನ್ನೆಲೆ ಇದೆ.

**ಪಾರ್ಥಸಾರಥಿ :** ಸರಿ, ಆಮೇಲೆ ಇಪ್ಟಾ ಮುಂಬೈನಲ್ಲಿ ಶುರುವಾದದ್ದು?

**ಸತ್ಯು :** ಬಾಂಬೆನಲ್ಲಿ ಒಬ್ಬ ಗುಜರಾತಿ ಬಿಸಿನೆಸ್ ಮ್ಯಾನ್ ಇದ್ರು. ಆದರೆ ಒಳ್ಳೆ ರಾಜಕೀಯ ನಿಲುವು ಇದ್ದ ವ್ಯಕ್ತಿ ಅವರು. ಅವರು ಒಂದು ಮನೇನ IPTAಗೆ ಕೊಟ್ರು. ಅಂಧೇರಿನಲ್ಲಿ ಈಗ್ಲೂ ಆ ಬಿಲ್ಡಿಂಗ್ ಇರಬೇಕು. ಅಲ್ಲೊಂದು ಮರದ ಕೆಳಗೆ ನಾಟಕ ಪ್ರಾಕ್ಟೀಸ್ ಮಾಡ್ತಿದ್ವಿ. ಅಲ್ಲಿ IPTAದು ಕಮ್ಯೂನ್ ಆರಂಭ ಆಯ್ತು.

**ಡಾ॥ ಮಂಜುನಾಥ್ :** ಶಬಾನಾ ಅಜ್ಮಿ ನಾನೊಂದು ಕಮ್ಯೂನ್‌ನಲ್ಲೇ ಬೆಳೆದೆ ಅಂತ ಹೇಳ್ತಾರೆ. ಅದು?

**ಸತ್ಯು :** ಹೌದು. ಮದುವೆ ಆದಮೇಲೆ ಕೈಫಿ ಅಜ್ಮಿ, ಶೌಕತ್ ಅಜ್ಮಿ, ಅಲ್ಲಿ ವಾಸವಾಗಿದ್ರು. ಕೈಫಿ ಅಜ್ಮಿ ಕಾನ್ಪುರದಲ್ಲಿ ಯೂನಿಯನ್ ಲೀಡರ್ ಆಗಿದ್ದೋರು.

**ಪಾರ್ಥಸಾರಥಿ :** ಹೌದೇನು, ಹಾಗಿದ್ದರೆ ಅವರು ಕಾರ್ಮಿಕ ಚಳುವಳಿಯ ಪ್ರಾಡಕ್ಟ್?

**ಸತ್ಯು :** ಹೌದ್ಹೌದು. ಆಮೇಲೆ ಬಹಳ ವರ್ಷ ಆದಮೇಲೆ ನಾನು 'ಗರಂ ಹವಾ' ಮಾಡಿದಾಗ ಅದರ ಚಿತ್ರಕಥೆ–ಸಂಭಾಷಣೆಗೆ ನೆರವಾಗಲಿಕ್ಕೆ ಕೈಫಿ ಅವರನ್ನು ಕೇಳಿಕೊಂಡೆ. ಆಗ ಅವರು ತಮ್ಮ ಚರ್ಮದ ಕೈಗಾರಿಕೆಗೆ ಸಂಬಂಧಿಸಿದ ಅನುಭವದಿಂದ ನಮ್ಮ ಚಿತ್ರಕತೇನೇ ಬದಲಾಯಿಸಿಬಿಟ್ರು (ನಗು). ಇಸ್ಮತ್ ಚುಗ್ತಾಯಿ ಅವರ ಒರಿಜಿನಲ್ ಕಥೇನಲ್ಲಿ ಕಥಾನಾಯಕ ಬಲರಾಜ್ ಸಾಹ್ನಿ ಒಬ್ಬ ರೈಲ್ವೇ ಸ್ಟೇಶನ್ ಮಾಸ್ಟರ್. ಪ್ರತಿದಿನಾನೂ ಜನ ಪಾಕಿಸ್ತಾನಕ್ಕೆ ಹೋಗೋದನ್ನ ನೋಡ್ತಿರ್ತಾನೆ. ಆದರೆ ಕೈಫಿಯವರು ನಮ್ಮ ಸಿನಿಮಾದಲ್ಲಿ ಆತನನ್ನ ಒಂದು ಚಿಕ್ಕ ಚಪ್ಪಲಿ ಕಾರ್ಖಾನೆ ಮಾಲಿಕ ಮಾಡಿದ್ರು. ಅದು ನಿಜವಾಗಲೂ ಕತೆ ಹೇಳಬೇಕಾದ ಅಂದಿನ ರಾಜಕೀಯ ಸನ್ನಿವೇಶಕ್ಕೆ ಸಂಬಂಧಿಸಿದ ವಿಷಯಗಳಿಗೆ ಪೂರಕ ಆಯ್ತು. ಒಳ್ಳೆಯ ಬದಲಾವಣೆ. ಆಗಿನ ಕಾಲದ ಬಹುತೇಕ ಉರ್ದು ಲೇಖಕರು, ಇಸ್ಮತ್ ಚುಗ್ತಾಯಿ ಸಹ ಸೇರಿದಂತೆ, ಎಲ್ಲ ಎಡಪಂಥೀಯರಾಗಿದ್ರು. ಅನೇಕರು ಪಾರ್ಟಿ ಮೆಂಬರ್ಸ್ ಆಗಿದ್ರು ಸಹ. ಪಾರ್ಟಿಯ ವಿಭಜನೆಯಿಂದ ತುಂಬಾ ನಷ್ಟ ಆಯ್ತು.

**ಪಾರ್ಥಸಾರಥಿ :** ಆದರೆ ಅದಕ್ಕೆ ಮುಂಚೇನೆ, ಅಂದರೆ ೧೯೫೦ರ ಹೊತ್ತಿಗೇನೆ IPTA ಸಾಕಷ್ಟು ನಿಷ್ಕ್ರಿಯ ಆಗಿತ್ತೇನೋ.

**ಸತ್ಯು :** ಹಾಗೇನಿಲ್ಲ ೧೯೬೯ರಲ್ಲಿ ಘಾಲಿಬ್ ಮರಣ ಶತಾಬ್ದಿಗೋಸ್ಕರ ನಾವೊಂದು ನಾಟಕ ಮಾಡಿದ್ದಿ. ಕೈಫಿ ಅಜ್ಮಿ ಅದನ್ನು ಬರೆದಿದ್ರು. ಫರ್‌ಹತ್ ಉಲ್ಲಾ ಬೇಗ್ ಅಂತ ಒಬ್ಬ ಜನರ ಕವಿ. ಅವನು ಕವನ ವಾಚಿಸ್ಕೊಂಡು ಹೋಗ್ತಿದ್ದ. ಬರೀಲಿಲ್ಲ. ಜನರ ಬಗ್ಗೆ, ಉದಾಹರಣೆಗೆ ಸೌತೆಕಾಯಿ ಮಾರೋನ ಬಗ್ಗೆ. ಆ ಜನಾನೆ ಅವನ ಕವಿತೇನ ಹಾಡ್ತಾ ಉಳಿಸಿದ್ರು. ಆತ 'ದಿಲ್ಲಿ ಕಾ ಆಖ್ರಿ ಯಾದಗರ್ ಮುಷಾಯಿರಾ' ಅಂತ ಉರ್ದು ಸಾಹಿತ್ಯದ ಸುವರ್ಣ ಯುಗದ ಬಗ್ಗೆ ಏನೋ



ಒಂದು ಪ್ರಬಂಧದ ಥರಾ ಬರೆದಿದ್ದನ್ನು ನಾವು ತಗೊಂಡಿದ್ವಿ. ನಾನು ಮತ್ತೆ ಆರ್. ಎಮ್. ಸಿಂಗ್ ಅನ್ನೋರು ನಿರ್ದೇಶಿಸಿದ್ವಿ. ಬಲರಾಜ್ ಸಾಹ್ನಿ ಘಾಲಿಬ್ ಆಗಿದ್ರು. ಎ. ಕೆ. ಹನಗಲ್ ಮುಹಮ್ಮದ್ ಜೌಕ್ ಅನ್ನೊ ಕವಿಯಾಗಿದ್ರು. ೧೮೫೭ರ ಹೋರಾಟದ ಹಿನ್ನೆಲೆಯೂ ಇತ್ತು. ಹೀಗೆ IPTA ನಡೆದಿತ್ತು.

**ಪಾರ್ಥಸಾರಥಿ :** ಈಗ IPTA ಅವಶ್ಯಕತೆ ಇದೆಯಾ?

**ಸತ್ಯು :** ಖಂಡಿತಾ ಇದೆ. ಒಂದಲ್ಲ, ಅನೇಕ IPTAಗಳು ಬೇಕಾಗಿವೆ. ಥಿಯೇಟರ್ ಬರೇ ಎಂಟರ್‌ಟೈನ್‌ಮೆಂಟ್‌ಗೆ ಅಲ್ವಲ್ಲಾ. ಅದಕ್ಕೊಂದು ವೈಚಾರಿಕತೆ ಬೇಕು. ಉದ್ದೇಶ ಬೇಕು. ನೀವು ಅದರ ಬಗ್ಗೆ ಬರೇ ಚರ್ಚೆ ಮಾಡ್ತೀರ. ಸಿದ್ದಣ್ಣ ಪ್ರಯತ್ನಿಸ್ತಾರೆ ಪಾಪ, ಆದರೆ ನೀವು ಮಾಡಬೇಕಾದ್ದೇನು ಅಂದ್ರೆ, ನಾಟಕ ಆಡಕ್ಕೆ ಶುರು ಮಾಡಿ. ಅದಕ್ಕೆ ನಾಟಕ ಬರೀರಿ ಅಥವಾ ಇರೋದನ್ನ ಆಡಿ. 'ಸಮುದಾಯ' ಅಂಥದ್ದೇ ತಂಡ. ಆದರೆ ಏನಾಗ್ತಿದೆ ನೋಡಿ. ಎಲ್ಲಾ ಕಡೇನೂ ಇವರೇ ಸ್ಪ್ಲಿಟ್ ಆಗ್ತಿದಾರೆ.

**ಡಾ॥ ವಿಜಯಾ :** ನೀವು ಎರಡು ವರ್ಕ್‌ಶಾಪ್ ಸಹ ಮಾಡಿಕೊಟ್ರಿ.

**ಪಾರ್ಥಸಾರಥಿ :** ಆಯ್ತು. ಜನ ಸೇರಿಸೋಣ, ಸಂಪನ್ಮೂಲ ಒದಗಿಸೋಣ. ನೀವು ನಾಟಕ ಆಡಿಸಿ. ಸಾವಿರ ಜನ ಕೂತ್ಕೊಳೋ ಅಂಥ ಬಯಲು ರಂಗಮಂದಿರಾನೂ ನಮ್ಮ ಬಳಿ ಇದೆ.

**ಸತ್ಯು :** ಅದಕ್ಕೇನು ಎರಡು ತಿಂಗಳು ಸಮಯ ಇದ್ರೆ ಈಗಲೂ ಆಡಿಸಬಹುದು.

**ಡಾ॥ ವಿಜಯಾ :** ನೋಡೋಕೆ ಸಾವಿರ ಜನ ! ಈ ನಡುವೆ ಸೇರಿಸೋದು ಕಷ್ಟ.

**ಡಾ॥ ಮಂಜುನಾಥ್ :** ಒಂದು ಜನಾನ ಸೇರಿಸೋದು. ಇನ್ನೊಂದು ನಾವೇ ಜನ ಇರೋ ಕಡೆ ಹೋಗಿ ಆಡೋದು. ಬೀದಿ ನಾಟಕ ಆಡೋದು.

**ಡಾ॥ ವಿಜಯಾ :** ಹೌದು, ಬೀದಿ ನಾಟಕದ ಬಗ್ಗೆ ನಿಮ್ಮ ಅನಿಸಿಕೆ ಹೇಳಿ.

**ಸತ್ಯು :** IPTAನೇ ಬೀದಿ ನಾಟಕ ಆರಂಭ ಮಾಡಿದ್ದು. ಬಾಂಬೇಲಿ ಬಹಳ ಟೆಕ್ಸ್‌ಟೈಲ್ ಮಿಲ್ಸ್ ಇತ್ತು. ಶಿಫ್ಟ್‌ಗಳು ಬದಲಾಗೋ ಸಮಯದಲ್ಲಿ ಗೇಟ್ ಹತ್ರ ಕಾರ್ಮಿಕರು ಸಿಗೋರು. ಹೀಗಾಗಿ ಗೇಟ್ ಮೀಟಿಂಗ್ ತರಹ ಬೀದಿ ನಾಟಕ ಆರಂಭ ಆಯ್ತು. ಸ್ವತಃ ಬಲರಾಜ್ ಸಾಹ್ನಿ ಕಾರ್ಮಿಕರ ತರಹಾನೆ ಬರೋರು. ನಾಟಕದ ವಾದವಿವಾದದಲ್ಲಿ ಕಾರ್ಮಿಕರೂ ಸೇರಿಕೊಂಡು ಬಿಡೋರು. ಉದಾಹರಣೆಗೆ ನಾಟಕದ ವಸ್ತು ಬೋನಸ್ ಆಗಿರೋದು. ಕಾರ್ಮಿಕರೂ ಅಭಿಪ್ರಾಯ ಹೇಳಕ್ಕೆ ಶುರು ಮಾಡ್ತಿದ್ದರು. ನಾಟಕ ಬೆಳೀತಾ ಹೋಗೋದು. ಮ್ಯಾನೇಜ್‌ಮೆಂಟ್‌ನೋರು ಪೊಲೀಸಿಗೆ ಫೋನ್ ಮಾಡೋರು. ಅವರು ಬರೋ ಅಷ್ಟರಲ್ಲಿ ನಮ್ಮ ನಟರೇ ಪೊಲೀಸರ ತರಹ ಜನಾನ ಚದುರಿಸಿ ನಾಟಕ ಮುಗಿಸಿರೋರು. ನಿಜವಾದ ಪೊಲೀಸರು ಬರೋ ಹೊತ್ತಿಗೆ ಅಲ್ಲಿ ಯಾರೂ ಇರುತ್ತಿರಲಿಲ್ಲ (ನಗುತ್ತಾರೆ).

ಈಗೆಲ್ಲಾ ಪೊಲೀಸಿನೋರ ಹತ್ತಿರ ಪರ್ಮಿಶನ್ ತಗೊಂಡು ನಾಟಕ ಆಡ್ತಾರೆ. ಅದು ಬೀದಿ ನಾಟಕ ಅಲ್ಲ. ಕೋತಿ ಆಡಿಸೋನು, ಹಾವಾಡಿಗರೋನು ಅನುಮತಿ ತಗೋತಾರಾ? ಬೀದಿ ನಾಟಕದ ರೂಪ ಹಾಗೇನೆ. ಅದೇನದು 'ಕಲಾಕ್ಷೇತ್ರದ ಹೊರ ಆವರಣದಲ್ಲಿ ಬೀದಿ ನಾಟಕ' ಅಂತ ಅನೌನ್ಸ್ ಮಾಡೋದು (ನಗು).

ಆಮೇಲೆ ಹಶ್ಮಿ ಬಳ್ಳೀ ಪ್ರಯತ್ನ ಮಾಡಿದ್ರು. ತಮಿಳುನಾಡಿನ 'ಏವಂ' ತಂಡ ಪರವಾಗಿಲ್ಲ.

**ಪಾರ್ಥಸಾರಥಿ :** ಈಗ ಏನ್ಮಾಡ್ತಿದೀರ ?

**ಸತ್ಯು :** ಈಗ ಕಲರಿಪಯಿಟ್ಟು ಬಗ್ಗೆ ಒಂದು ಸಿನಿಮಾ ಮಾಡ್ತೀನಿ. ಹುಡುಗಿಯರಿಗೆ ಆತ್ಮರಕ್ಷಣೆ ವಿಧಾನ ಗೊತ್ತಿರಬೇಕಲ್ಲ. ಒಬ್ಬ ಹುಡುಗಿ ತನ್ನದೇ ಕೆಟ್ಟ ಅನುಭವ ಒಂದರಿಂದನೊಂದು self defence ಗೋಸ್ಕರ ಅದನ್ನು ಕಲಿಯಕ್ಕೆ ಇಷ್ಟಪಡುತ್ತಾಳೆ. ಆದರೆ ಸಾಂಪ್ರದಾಯಿಕ ಮನೋಭಾವ ಅದಕ್ಕೆ ಅಡ್ಡಿ ಬರುತ್ತೆ ಇತ್ಯಾದಿ. ಅನಿತಾ ನಾಯರ್ ಕತೆ ಬರೀತಿದಾರೆ.

**ಡಾ॥ ವಿಜಯಾ :** ನಿಮ್ಮ 'ಕನ್ನೇಶ್ವರ ರಾಮ' ಬಗ್ಗೆ ಒಂದು ತಕರಾರಿದೆಯಲ್ಲ. ವಾಸ್ತವದಲ್ಲಿ ಅವನು ದರೋಡೆಕೋರ ಅಂತ. ಈಗಲೂ ಇತಿಹಾಸದ ಎಷ್ಟೋ ವ್ಯಕ್ತಿಗಳನ್ನು ಹೀಗೇ ಬದಲಾಯಿಸಿಬಿಡ್ತಾರೆ ಅಂತ.

**ಸತ್ಯು :** ಅವನು ರಾಬಿನ್ ಹುಡ್ ತರದವನು. ತಾನು ದೋಚಿದ್ದನ್ನು ಜನಗಳಿಗೇ ತುಂಬಾ ಹಂಚಿಬಿಡ್ತಿದ್ದ. ಮತ್ತೆ ಬ್ರಿಟಿಷರ ಆಡಳಿತ ಇರುತ್ತೆ. ಸ್ವಾತಂತ್ರ್ಯ ಹೋರಾಟಗಾರರನ್ನು ನೋಡಿದಾಗ ಅವನಿಗೊಂದು ತರಹ ಆಕರ್ಷಣೇನೂ ಬರುತ್ತೆ. ಇವರೆಂಥ ಜನ ಒಂದು ಬಾವುಟಕ್ಕೆ ಹೇಗೆ ಪ್ರಾಣ ಕೊಡ್ತಾರೆ ಅಂತ. ತನಗೂ ಬಾವುಟ ಬೇಕು ಅನಿಸುತ್ತೆ. ಇದನ್ನೆಲ್ಲಾ ತೋರಿಸಿದೀನಿ.

**ಡಾ॥ ಮಂಜುನಾಥ್ :** ಇವತ್ತಿನ ಪರಿಸ್ಥಿತಿ ಬಗ್ಗೆ ಏನು ಹೇಳ್ತೀರ ಸರ್. ಕಲಾವಿದರು ಮಾತನಾಡೋ ಹಾಗಿಲ್ಲ. ಕಮಲಹಾಸನ್‌ನಂಥವರನ್ನೂ ಬೆದರಿಸ್ತಾರೆ.

**ಸತ್ಯು :** ಈಗ ಕೇಂದ್ರದಲ್ಲಿರೋದು ಫ್ಯಾಸಿಸ್ಟ್ ಸರ್ಕಾರ. ಅವರಿಗೆ ಅವರದ್ದೇ ಆದ ಅಜೆಂಡಾ ಇದೆ.

**ಪಾರ್ಥಸಾರಥಿ :** ಫ್ಯಾಸಿಸ್ಟ್ ಟೆಂಡೆನ್ಸಿ ಅಂತೀರೋ ಅಥವಾ ಫ್ಯಾಸಿಸಮ್ಮೇ ಅಂತೀರೋ.

**ಸತ್ಯು :** ಈಗ ಬರ್ತಾ ಇರೋದು ಫ್ಯಾಸಿಸಮ್ಮೇ ಅನಿಸುತ್ತೆ. ಇವರು ಬರೇ ವಿರೋಧ ಅಲ್ಲ ಭಿನ್ನಾಭಿಪ್ರಾಯಾನೂ ಸಹಿಸಿಕೊಳ್ಳಲ್ಲ. ನೋಡಿ ಗೌರಿ ಹತ್ಯೆ ಬಗ್ಗೆ ಪಿ. ಎಂ. ಏನೂ ಹೇಳಿಲ್ಲ. ಯಾರೋ ಅಂತಾನೆ ಪಿ. ಎಂ. ಎಲ್ಲಾದಕ್ಕೂ ಪ್ರತಿಕ್ರಿಯಿಸಬೇಕಾ ಅಂತ.

**ಡಾ॥ ಮಂಜುನಾಥ್ :** ಆದರೆ ಅವರು insignificant ವಿಷಯಗಳಿಗೂ ಪ್ರತಿಕ್ರಿಯಿಸ್ತಿರ್ತಾರೆ.

**ಸತ್ಯು :** ಅದೇನೇ. ಮತ್ತೆ ಜನ ವೋಟ್ ಹಾಕಿದಾರೆ ಅಂತಾರೆ. ಸರಿಯಾಗಿ ೩೧% ಮತಾ ಹಾಕಿಲ್ಲ.

ಸಂದರ್ಶನದ ಸಮಯ ಮುಗಿಯುತ್ತಾ ಬಂದಿತ್ತು. ಅನೌಪಚಾರಿಕವಾದ ಹರಟೆ ಮುಂದುವರಿದಿತ್ತು. ಸತ್ಯು ಅಂಧೇರಿಯಲ್ಲಿದ್ದ ಕಮ್ಯೂನ್‌ನನ್ನು ನೆನಪಿಸಿಕೊಂಡರು. ಅದರ ವೈಫಲ್ಯದ ಬಗ್ಗೆ ಹೇಳಿ ಮುಂದೆ ಹೊರಟರು. ಮತ್ತೆ ಕಮ್ಯುನಿಸ್ಟ್ ಪಾರ್ಟಿಗಳು ಸಾಹಿತಿ ಕಲಾವಿದರನ್ನು ಹೇಗೆ ನೋಡಬೇಕು ಅನ್ನೋದನ್ನೂ ಹೇಳಿದರು.

**ಸತ್ಯು :** ಇಪ್ಟಾ ಮಾಡಿದ ಒಂದು ತಪ್ಪು ಅಂದ್ರೆ ಅವರು ಇಂಡಿವಿಜುಯಲ್‌ಗೆ ಪ್ರಾಮುಖ್ಯತೆ ಕೊಡಲೇ ಇಲ್ಲ. ಸೋವಿಯತ್ ಪಾರ್ಟಿ ಕೂಡ ಅನ್ನಾ ಪಾವ್ಲೊವಾ ಅಂತಹ ದೊಡ್ಡ ಕಲಾವಿದೆಗೆ ಪ್ರಾಮುಖ್ಯತೆ ಕೊಟ್ಟಿದ್ರು. ಏನೂ ರೆಕಗ್ನಿಶನ್ ಕೊಡಲ್ಲ ಅಂದ್ರೆ ಸರಿಹೋಗಲ್ಲ.

**ಪಾರ್ಥಸಾರಥಿ :** Powerful individuals ಯಾವತ್ತೂ movement ಗೆ threat ಅಲ್ಲ. ಆದರೆ ಕೆಲವರು ಹಾಗಂತ ಹೆದರಿಕೊಂಡುಬಿಡ್ತಾರೆ.

**ಡಾ॥ ಮಂಜುನಾಥ್ :** 'ಪದ್ಮಾವತಿ' ವಿವಾದದ ಬಗ್ಗೆ ಹೇಳಿ.

**ಸತ್ಯು :** ಪದ್ಮಾವತಿ ಚಾರಿತ್ರಿಕ ವ್ಯಕ್ತಿ ಅಂತಾನೇ ಅಂದ್ಕೊಳ್ಳಿ. ಆದರೆ ಕಲೆಯಲ್ಲಿ ನಾವು ನಮಗೆ ಬೇಕಾದ ಹಾಗೆ ಸೃಜನಶೀಲ ರೀತೀಲಿ ತೋರಿಸ್ತೀವಿ. ಷೇಕ್ಸ್‌ಪಿಯರ್ ಅನೇಕ ಚಾರಿತ್ರಿಕ ವಸ್ತುಗಳನ್ನು ತಗೊಂಡು ಇಷ್ಟಬಂದ ಹಾಗೆ ಚಿತ್ರಿಸಿದ. ಭಾಸ, ಕಾಳಿದಾಸ ಎಲ್ಲಾರೂ ಪುರಾಣಗಳನ್ನು ಬದಲಾಯಿಸಿದ್ರು.

**ಡಾ॥ ಮಂಜುನಾಥ್ :** ದುಬಾರಿಯಾಗದ ಹಾಗೆ ನಾಟಕ ಮಾಡೋದು

# ವಿಫಲ ನಟ ಸತ್ಯು !

೧೯೪೯–೫೦ರ ಸುಮಾರು. ಬೆಂಗಳೂರು ಸೆಂಟ್ರಲ್ ಕಾಲೇಜಿನಲ್ಲಿ ಒಂದು ನಾಟಕ. ಬುದ್ಧನ ಪಾತ್ರಧಾರಿಯು ಕುವೆಂಪುರವರ ಹಳೆಗನ್ನಡದ ಸಂಭಾಷಣೆಯನ್ನು ಹೇಳಲಾರದೆ ಒಂದೇ ಒಂದು ಸಾಲು ಸಂಭಾಷಣೆಗೆ ಕಚ್ಚಿಕೊಂಡುಬಿಟ್ಟ. ಆದರೆ ನಾಟಕದ ಹುಚ್ಚು ಆತನನ್ನು ಬಿಡಲಿಲ್ಲ. ಹೀಗಾಗಿ ತನ್ನನ್ನೇ ಅತ್ಯಂತ ಸಮರ್ಥ ಕಲಾನಿರ್ದೇಶಕನಾಗಿ, ಪ್ರಖ್ಯಾತ ನಾಟಕ–ಚಲನಚಿತ್ರ ನಿರ್ದೇಶಕನಾಗಿ ರೂಪಿಸಿಕೊಂಡ. ದೇಶದಾದ್ಯಂತ ಹೆಸರುವಾಸಿಯಾದ ಆ ತರುಣನೇ ಎಂ. ಎಸ್. ಸತ್ಯು.

ಸತ್ಯು ನಿರ್ದೇಶನದ 'ಗರಂ ಹವಾ' (೧೯೭೪)ಗೆ ರಾಷ್ಟ್ರ ಪ್ರಶಸ್ತಿ ಬಂದು ಅದು ಭಾರತದಿಂದ ಆಸ್ಕರ್ ಪ್ರಶಸ್ತಿಗೆ ನಾಮಕರಣ ಹೊಂದಿತು. 'ಕನ್ನೇಶ್ವರ ರಾಮ' ಮತ್ತು 'ಬರ' ಕನ್ನಡ ಚಿತ್ರಗಳಿಗೆ ರಾಜ್ಯ ಮತ್ತು ರಾಷ್ಟ್ರ ಪ್ರಶಸ್ತಿ ಬಂದವು. ಪದ್ಮಶ್ರೀ ಪ್ರಶಸ್ತಿ ಪಡೆದ ಸತ್ಯು ರಂಗಭೂಮಿ, ಚಲನಚಿತ್ರ ಮಾತ್ರವಲ್ಲದೆ ಕಿರುತೆರೆಗೂ ಸಾಕಷ್ಟು ದುಡಿದಿದ್ದಾರೆ. ಚಿತ್ರ ಹಾಗೂ ಧಾರಾವಾಹಿಗಳೆರಡನ್ನೂ ಸೃಷ್ಟಿಸಿದ್ದಾರೆ. ಮಕ್ಕಳಿಗೂ ಅನೇಕ ನಾಟಕಗಳನ್ನೂ ಆಡಿಸಿದ್ದಾರೆ.

ಮಡದಿ ಶಮಾ ಜೈದಿ ಕಂಡಾ ಕಲಾಜಗತ್ತಿನಲ್ಲಿ ತನ್ನನ್ನೇ ಸಕ್ರಿಯವಾಗಿ ತೊಡಗಿಸಿಕೊಂಡವರು. ಹಿಂದೂ–ಮುಸ್ಲಿಂ ಕುಟುಂಬಗಳಿಂದ ಬಂದ ಇಬ್ಬರೂ ಧರ್ಮ ಬದಲಾಯಿಸಿಕೊಳ್ಳದೆ ಬಾಳಿ ಬದುಕಿದ್ದಾರೆ. ಇಬ್ಬರು ಹೆಣ್ಣುಮಕ್ಕಳು ಸೀಮಾ ಮತ್ತು ಶೈಲಿ.



ಅವಶ್ಯಕ ಅಲ್ವಾ ಸರ್. ಎಲ್ಲೆಲ್ಲಿಂದಲೋ ಹಣ ತರೋ ಹಾಗೆ ಆಗಬಾರದು.

**ಸತ್ಯು :** ಬಾಂಬೆಯ ಇಪ್ಟಾ ಅನುಭವ ಹೇಳ್ಬೇಕು ಅಂದ್ರೆ ನಾವು ಟಿಕೆಟ್‌ಗಳಲ್ಲೇ ನಾಟಕ ಮಾಡ್ತಿದೀವಿ. ಕೆಲವೊಮ್ಮೆ ಯಾರಾದ್ರೂ ಎಲ್ಲ ಟಿಕೆಟ್ ಹಣ ಕೊಟ್ಟು ಶೋ ತಗೋಳ್ಳೋದು ಉಂಟು. ಆದರೆ ನಾನಂತೂ ಎಲ್ಲರಿಗೂ ಸಮಾನವಾಗಿ ಹಣ ಕೂಡ ಕೊಡಿಸ್ತೀನಿ. ನಟರಿಗೆ, ಬ್ಯಾಕ್ ಸ್ಟೇಜ್‌ನವರಿಗೆ ಎಲ್ಲರಿಗೂ. Nominal amount ಇರಬಹುದು. ಆದರೆ ಒಂದು ಸಣ್ಣ ಮೊತ್ತ ಕೊಡಬೇಕು. ಹುಡುಗರು ಕಷ್ಟಪಟ್ಟು ಬಂದಿರ್ತಾರೆ. ಊಟ ತಿಂಡಿ ಖರ್ಚಿರುತ್ತೆ. ನಾನಿದೆಲ್ಲಾ ಅನುಭವಿಸಿದೀನಲ್ಲ.

ನಾವಂತೂ ಬಾಂಬೆ ಇಪ್ಟಾದಲ್ಲಿ ಒಂದಿಷ್ಟು ಹಣ ಯಾವಾಗ್ಲೂ ಉಳಿಸಿರ್ತೀವಿ. ಎಷ್ಟು ಚೆನ್ನಾಗಿ ಕೆಲಸ ಆಗ್ತಿದೆ ನೋಡಿ. ನಲವತ್ತು ವರ್ಷದಿಂದ ಅಂತರ ಕಾಲೇಜು ಸ್ಪರ್ಧೆ ನಡೀತಿದೆ. ಈ ವರ್ಷಾನೂ ೨೨ ತಂಡ ಬಂದಿದ್ವು. ಒಟ್ಟಿನಲ್ಲಿ ಹೀಗೆ ಮುಂದುವರಿಸಿಕೊಂಡು ಹೋಗ್ತೀವಿ. ಹೋಗಕ್ಕೆ ಸಾಧ್ಯ ಇದೆ.

*  *  *

ಊಟದ ಸಮಯವಾದರೂ ೮೮ ವರ್ಷದ ತರುಣ ಸತ್ಯು ಮಾತನಾಡುತ್ತಲೇ ಇದ್ದರು. ಡಾ॥ ವಿಜಯಾ, ಅವರ ಟೆಲಿಫಿಲಂಗಳ ಬಗ್ಗೆ ಪ್ರಸ್ತಾಪಿಸಿದರು. ಸತ್ಯು ಮಾಸ್ತಿಯವರ ಕತೆಗಳನ್ನು ಫಿಲಂ ಮಾಡಿದ್ದನ್ನು ನೆನಪಿಸಿಕೊಂಡರು. ಸಂಪ್ರದಾಯವಾದಿ ಹಾಗೆ ಕಾಣುವ ಮಾಸ್ತಿ ಎಷ್ಟು ಉದಾರ ಮನಸ್ಸಿನವರಾಗಿದ್ರು ಅನ್ನೋದನ್ನ ಸಂಭ್ರಮದಿಂದ ಹೇಳಿದರು. 'ಚಿಕವೀರರಾಜೇಂದ್ರ' ವಿವಾದದ ಬಗ್ಗೆ ಮಾತನಾಡ್ತಾ ಕೊಡವರ ಇತಿಹಾಸವನ್ನು ಸೂಕ್ಷ್ಮ ವಿವಾದಗಳೊಂದಿಗೆ ಬಿಚ್ಚಿಡುತ್ತಾ ಹೋದದ್ದು ನಮಗೆ ಅಚ್ಚರಿಯ ವಿಷಯವೆನಿಸಿತು.

ಕಡೆಗೂ ಸಂದರ್ಶನ ಮುಗಿದಾಗ ಅವರೊಂದಿಗೆ ಮತ್ತೆ ಮಾತು ಮುಂದುವರಿಸಬೇಕು, ನಾಟಕ ಮಾಡಿಸಬೇಕು ಅನ್ನುವ ಭಾವನೆಗಳು ಕಾಡುತ್ತಿದ್ದವು. ಬಿಚ್ಚುಮನಸ್ಸಿನ, ನಿರ್ಭಯ ಮಾತಿನ ಸತ್ಯು, ಸತ್ಯನಿಷ್ಠುರ ಸತ್ಯು ಹೇಗೆ ಸಂದರ್ಶನಕ್ಕೆ ಬಂದರೋ ಹಾಗೇ ಅಷ್ಟೇ ಸರಳವಾಗಿ, ಸದ್ದಿಲ್ಲದೆ, ನಗುನಗುತ್ತಾ ಮನೆಯ ಕಡೆ ನಡೆದುಕೊಂಡು ಹೊರಟುಹೋದರು.

ಲೇಖನ ಸಿದ್ಧಪಡಿಸಿದವರು : **ಡಾ॥ ಬಿ. ಆರ್. ಮಂಜುನಾಥ್**
ನಂ. ೬೧, ೪ನೇ ಕ್ರಾಸ್, ಅಶೋಕ ನಗರ
ಎನ್. ಆರ್. ಕಾಲೋನಿ ಹತ್ತಿರ, ಬೆಂಗಳೂರು – ೫೬೦ ೦೫೦



# ಕನ್ನಡ ಮಹಿಳಾ ಪತ್ರಿಕೆಗೆ ನೂರರ ಸಂಭ್ರಮ

# 'ಸರಸ್ವತಿ'ಯ ಸಾರಸ್ವತ

**ಪ**ತ್ರಿಕೆಯೊಂದನ್ನು ಹೊರತರುವುದು ಒಂದು ಉದ್ಯಮವಾಗಿರದೆ, ಅದು ಜನರಲ್ಲಿ ಜ್ಞಾನ ಪ್ರಸಾರ ಮಾಡುವ ಆದರ್ಶಪ್ರಾಯ ಸಾಮಾಜಿಕ ಸೇವೆ ಎಂದು ನಂಬುತ್ತಿದ್ದ ಕಾಲವೊಂದಿತ್ತು. ಅಂಥ ಕಾಲಘಟ್ಟದಲ್ಲಿ ಕಳೆದ ೨೦ನೆಯ ಶತಮಾನದ ಎರಡನೆಯ ದಶಕದಲ್ಲಿ ಕನ್ನಡದ ಎರಡು ಮಹಿಳಾ ಪತ್ರಿಕೆಗಳು ಜನ್ಮತಳೆದವು. ೧೯೧೬ರಲ್ಲಿ ನಂಜನಗೂಡು ತಿರುಮಲಾಂಬಾ "ಕರ್ನಾಟಕ ನಂದಿನಿ" ಎಂಬ ಪತ್ರಿಕೆಯನ್ನು 'ಮಹಿಳೆಯರಿಂದ ಮಹಿಳೆಯರಿಗಾಗಿ' ಎಂಬ ಗಟ್ಟಿ ನಿರ್ಧಾರದಿಂದ ಹೊರತಂದರು. ಆ ಪತ್ರಿಕೆ ಮುನ್ನೂರು ಬಗೆಯ ಮುಗ್ಗಟ್ಟುಗಳನ್ನು ಎದುರಿಸುತ್ತಾ ಹೇಗೋ ಮೂರು ವರ್ಷಗಳ ಕಾಲ ನಡೆದು ನಿಂತಿತು. ಆದರೂ ಕನ್ನಡದ ಮೊತ್ತಮೊದಲ ಪತ್ರಿಕೆಯೆಂಬ ಕೀರ್ತಿ ಅದಕ್ಕೆ ಸಂದಿರುತ್ತದೆ.

ಅದರ ಮರುವರ್ಷ ಅಂದರೆ ೧೯೧೭ರಲ್ಲಿ ಬೆಂಗಳೂರಿನ ಆರ್. ಕಲ್ಯಾಣಮ್ಮನವರು "ಸರಸ್ವತಿ" ಎಂಬ ಮಹಿಳಾ ಪತ್ರಿಕೆಯನ್ನು ಹೊರತಂದರು. ಅದಕ್ಕೂ ನೂರು ಬಗೆಯಲ್ಲಿ ಬಿಕ್ಕಟ್ಟುಗಳು ಒದಗಿಬಂದು ಪಕ್ಷಪತ್ರಿಕೆಯಾಗಿದ್ದ ಆ ಸರಸ್ವತಿ ಒಂದೆರಡು ವರ್ಷಗಳಲ್ಲಿ ನಿಂತುಹೋಯಿತು. ಆದರೂ ಛಲಬಿಡದ ಕಲ್ಯಾಣಮ್ಮನವರ ಕ್ರಿಯೋತ್ಸಾಹ ಮತ್ತು ದೃಢಸಂಕಲ್ಪದಿಂದ ೧೯೨೧ರಲ್ಲಿ "ಸರಸ್ವತಿ" ಮಾಸ ಪತ್ರಿಕೆಯಾಗಿ ಮತ್ತೆ ಆರಂಭಗೊಂಡಿತು. ಈ ಬಾರಿ ಅದು ಹಿಂದಿರುಗಿ ನೋಡಲಿಲ್ಲ. ಸುಮಾರು ೪೨ ವರ್ಷಗಳು ನಿರಂತರವಾಗಿ ನಡೆದು ಕನ್ನಡದ ಪತ್ರಿಕಾರಂಗದಲ್ಲೇ ಅಪರೂಪದ್ದಾದ ದಾಖಲೆಯನ್ನು ಸೃಷ್ಟಿಸಿದ ಹಿರಿಮೆ ಅದರದು.

ದೇಶದಲ್ಲಿ ಸ್ವಾತಂತ್ರ್ಯ ಹೋರಾಟ ವ್ಯಾಪಕವಾಗಿ ಹಬ್ಬುತ್ತಿದ್ದ ಕಾಲದಲ್ಲಿ "ಕರ್ನಾಟಕ ನಂದಿನಿ" ಹೆಚ್ಚು ಕಾಲ ಬದುಕದೆ ಹೋದರೂ "ಸರಸ್ವತಿ" ದೇಶಕ್ಕೆ ಸ್ವಾತಂತ್ರ್ಯ ಬಂದ ಬಳಿಕವೂ ಎರಡು ದಶಕಗಳ ಕಾಲ ಕ್ರಿಯಾಶೀಲವಾಗಿತ್ತು. ಇಂಥ ಅಪರೂಪದ ಪತ್ರಿಕೆಯನ್ನು ಈಗ ಕಾಣಲು ಉಳಿದಿರುವುದು ಕೇವಲ ಬೆರಳೆಣಿಕೆಯಷ್ಟು ಸಂಚಿಕೆಗಳು ಮಾತ್ರ. ಅದೂ ಕನ್ನಡ ಸಾಹಿತ್ಯ ಪರಿಷತ್ತಿನ ಗ್ರಂಥಭಂಡಾರ ಹಾಗೂ ಆರ್. ವಿ. ಮಹಿಳಾ ಕಾಲೇಜಿನ 'ಶಾಶ್ವತೀ ವಸ್ತುಸಂಗ್ರಹಾಲಯದಲ್ಲಿ. ಹಾಗಿದ್ದೂ ಆ ಅಳಿದುಳಿದ ಪತ್ರಿಕಾ ಪುಟಗಳತ್ತ ಒಮ್ಮೆ ಕಣ್ಣುಹಾಯಿಸಿದರೆ, ಆ ಇಡೀ ಕಾಲದ ಸಾಂಸ್ಕೃತಿಕ ಚರಿತ್ರೆಯ ಒಂದು ಸೀಳು ನಮ್ಮೆದುರು ತೆರೆದುಕೊಳ್ಳುತ್ತದೆ. ತಿರುಮಲಾಂಬಾ, ಕಲ್ಯಾಣಮ್ಮ ಮಾತ್ರವಲ್ಲ, ಅವರಂತೆಯೇ ಮಹಿಳೆಯರ ಏಳ್ಗೆಗಾಗಿ ಬದುಕನ್ನೇ ಮುಡಿಪಾಗಿಟ್ಟ ಎಲ್ಲ ಧೀಮಂತ ಚೇತನಗಳಿಗೂ ನಾಡು ತನ್ನ ಕೃತಜ್ಞತೆ ಸಲ್ಲಿಸುವ ಏಕಮಾತ್ರ ದಾರಿ ಎಂದರೆ ಅವರ ಸಿದ್ಧಿ, ಸಾಧನೆಗಳನ್ನು ಮರೆಯಗೊಡದೆ ನೆನೆಯುವುದೇ ಆಗಿದೆ.

"ಸರಸ್ವತಿ" ಪತ್ರಿಕೆಯ ಸಮಸ್ತ ಚೇತನವಾಗಿದ್ದ ಕಲ್ಯಾಣಮ್ಮನವರ ವ್ಯಕ್ತಿತ್ವ, ಅವರ ಬದುಕು ಹಾಗೂ ವಿಚಾರಗಳೆಲ್ಲ ಆ ಪತ್ರಿಕೆಯ ಸ್ವರೂಪವನ್ನು ಪ್ರಭಾವಿಸಿರುತ್ತವೆ. ಆದ್ದರಿಂದ ಅವರ ಸ್ವಂತದ ಲಕ್ಷಣಗಳ ಕಿಂಚಿತ್ ಅರಿವು ಆ ಪತ್ರಿಕೆಯನ್ನು ಅರ್ಥಮಾಡಿಕೊಳ್ಳಲು ಅಗತ್ಯವಾಗುತ್ತದೆ. ಮಧ್ಯಮ ಆದಾಯದ, ತುಂಬು ಸಂಪ್ರದಾಯಸ್ಥ ಕುಟುಂಬ ಅವರದು. ತಂದೆ ರಾಮಸ್ವಾಮಿ ಅಯ್ಯಂಗಾರ್ ರೈಲ್ವೆ ಇಲಾಖೆಯಲ್ಲಿ ಅಧಿಕಾರಿ. ತಾಯಿ ಜಾನಕಮ್ಮ ಅವರ ಅಪ್ಪಟ ಸಹಧರ್ಮಿಣಿ. ಇವರ ಎಂಟು ಮಕ್ಕಳ ಪೈಕಿ ಏಳುಜನ ಹೆಣ್ಣು ಮಕ್ಕಳು ಮತ್ತು ಒಬ್ಬನೇ ಮಗ. ಆ ಮಕ್ಕಳ ಪೈಕಿ ಎರಡನೆಯವರಾಗಿ ಕಲ್ಯಾಣಮ್ಮ ೧೮೯೪ರಲ್ಲಿ ಜನಿಸಿದರು. ಆ ಕಾಲದ ರೂಢಿಯಂತೆ ಹತ್ತನೇ ವಯಸ್ಸಿಗೇ ಕಲ್ಯಾಣಮ್ಮನವರ ಮದುವೆ ಆಯಿತು. ಅದಾಗಿ ಮೂರೇ ತಿಂಗಳಲ್ಲಿ ಅವರಿಗೆ ವೈಧವ್ಯವೂ ಎದುರಾಯಿತು. ಗಂಡ ತೀರಿದರೆ ತಾನು ಏಕೆ ಅಳಬೇಕು ಎಂದು ಕೇಳುವ ಆ ಮುಗ್ಧ ಕಿಶೋರಿಯ ಬದುಕು ಅಂದಿನ ಎಲ್ಲಾ ಬಾಲವಿಧವೆಯರಂತೆ ಕಣ್ಣೀರಿನಲ್ಲಿ ಕೈತೊಳೆವ ಸ್ಥಿತಿಗಿಂತ ಬೇರೆ ಆಗಿದ್ದರೆ ಅದಕ್ಕೆ ಮುಖ್ಯ ಕಾರಣ ಅವರ ಚಿಕ್ಕಪ್ಪನವರ ಒತ್ತಾಸೆ. ಆ ಚಿಕ್ಕಪ್ಪ ಕೆ. ಎಸ್. ಕೃಷ್ಣಯ್ಯಂಗಾರ್ ಆಗ ಸೆಂಟ್ರಲ್ ಕಾಲೇಜಿನಲ್ಲಿ (ಆ ಕಾಲಕ್ಕೆ ಅದು ಮದರಾಸು ವಿಶ್ವವಿದ್ಯಾಲಯಕ್ಕೆ ಸೇರಿದ್ದುದಾಗಿತ್ತು.) ಇತಿಹಾಸದ ಪ್ರಾಧ್ಯಾಪಕರು. ಅವರು ಕಲ್ಯಾಣಿಯ ತಾಯ್ತಂದೆಗಳಿಗೆ 'ಈಕೆ ಎಲ್ಲರಂತಲ್ಲ. ತುಂಬ ಸೂಕ್ಷ್ಮಮನಸ್ಸಿನ ಚುರುಕು ಬುದ್ಧಿಯ ಬಾಲೆ. ಇವಳ ಓದು ನಿಲ್ಲಿಸಿ ಮೂಲೆಯಲ್ಲಿ ಕೂರಿಸಬೇಡಿ' ಎಂದು ತಿಳಿವಳಿಕೆ ಹೇಳಿದರು. ಅದರಿಂದಾಗಿ ಕಲ್ಯಾಣಮ್ಮ ಮನೆಯಲ್ಲೇ ಓದಿ ಲೋಯರ್ ಸೆಕೆಂಡರಿ ಪರೀಕ್ಷೆಗೆ ಕೂತು ಉತ್ತೀರ್ಣರಾದರು. ಅವರ ಔಪಚಾರಿಕ ಶಿಕ್ಷಣ ಇನ್ನೂ ಮುಂದುವರೆಸಲು ಮನೆಯ ಪರಿಸ್ಥಿತಿ ಸಹಕರಿಸಲಿಲ್ಲ. ಆದರೂ ಕನ್ನಡ, ಸಂಸ್ಕೃತ, ತಮಿಳು ಭಾಷೆಗಳ ಪ್ರಾಚೀನ ಗ್ರಂಥಗಳ ಸ್ವಾಧ್ಯಾಯಕ್ಕೆ ತೊಡಗಿದರು. (ಈ ಅಭ್ಯಾಸ ಜೀವನವಿಡೀ ಮುಂದುವರೆದಿತ್ತು.)

ಸ್ವಂತದ ಈ ಓದುಗಾರಿಕೆ ಅವರನ್ನು ತಮ್ಮ ಪರಿಸರದ, ನಾಡಿನ, ದೇಶದ ಹಾಗೂ ಜಾಗತಿಕ ಆಗುಹೋಗುಗಳನ್ನು ಸೂಕ್ಷ್ಮವಾಗಿ ಗಮನಿಸಿ ಚಿಂತಿಸಲು ಪ್ರೇರೇಪಿಸಿತು. ಬಾಲ ವಿಧವೆಯರ, ನಿರ್ಗತಿಕ ಮಹಿಳೆಯರ, ಬಡ ಹೆಣ್ಣುಮಕ್ಕಳ ಶೋಚನೀಯ ಸ್ಥಿತಿಗತಿ ಅವರನ್ನು ಬಹುವಾಗಿ ಕಾಡಿಸುತ್ತಿದ್ದವು. ಆ ಕುರಿತು ತಮ್ಮ ವಿಚಾರಗಳನ್ನು ಲೇಖನಗಳಾಗಿ ಬರೆದು ಪತ್ರಿಕೆಗಳಿಗೆ ಕಳಿಸತೊಡಗಿದರು. ಸ್ತ್ರೀಯರು ಅವಿದ್ಯಾವಂತೆಯರಾಗಿ ಇರುವುದೇ ಅವರನ್ನು ಅಜ್ಞಾನ, ಮೌಢ್ಯಗಳಲ್ಲಿ ಬಂಧಿಸಿಟ್ಟಿರುತ್ತದೆ. ಹಣಕಾಸಿನ ಯಾವ ಬೆಂಬಲವೂ ಇಲ್ಲದೆ ಎಲ್ಲದಕ್ಕೂ ಪುರುಷರನ್ನೇ

ಡಾ॥ ಬಿ. ಎನ್. ಸುಮಿತ್ರಾಬಾಯಿ

ಅವಲಂಬಿಸುವ ಸ್ಥಿತಿಯಿದೆ. ಈ ಅವಲಂಬನೆಯೇ ಅವರನ್ನು ಬೌದ್ಧಿಕ, ಮಾನಸಿಕ ದಾಸ್ಯಕ್ಕೆ ದೂಡಿರುವುದು. ಆದ್ದರಿಂದ ಉತ್ತಮ ಶಿಕ್ಷಣ, ಉಪಕಸಬುಗಾರಿಕೆಗೆ ತರಬೇತಿಗಳು ಲಭಿಸಿದಲ್ಲಿ ಹೆಣ್ಣುಮಕ್ಕಳು ದುರವಸ್ಥೆಯಿಂದ ಹೊರಬಂದು ಸ್ವಾಭಿಮಾನ ಮತ್ತು ಸ್ವಾವಲಂಬನೆಗಳಿಂದ ಬದುಕಲು ಸಾಧ್ಯ ಎಂದು ಅವರ ಸ್ಪಷ್ಟ ವಿಚಾರವಿತ್ತು. ಈ ವಿಚಾರಗಳನ್ನು ಕಾರ್ಯರೂಪಕ್ಕೆ ತರುವ ಯತ್ನವಾಗಿಯೇ ೧೯೧೩ರಲ್ಲಿ ಬೆಂಗಳೂರಿನ ಚಾಮರಾಜ ಪೇಟೆಯ "ಶಾರದಾ ಸ್ತ್ರೀ ಸಮಾಜ"ವನ್ನು ಅವರು ಸ್ಥಳೀಯ ಗಣ್ಯರ ನೆರವಿನಿಂದ ಸ್ಥಾಪಿಸಿದರು. ೧೯೧೩ರಿಂದ ೧೯೨೬ರವರೆಗೆ ಹದಿಮೂರು ವರ್ಷ ಆ ಸಮಾಜವನ್ನು ಬೆಳೆಸಿ ಮುನ್ನಡೆಸಲು ಹಗಲಿರುಳು ದುಡಿದರು. ಕೊನೆಗೆ ಅವರ ಸಮಾಜದ ಸಹೋದ್ಯೋಗಿಗಳ ಕಿರುಕುಳ, ಕುತಂತ್ರಗಳಿಂದ ನೊಂದು ಆ ಸಂಸ್ಥೆಯಿಂದ ಹೊರಬಂದರು.

ವಿಧವೆಯರು, ನಿರ್ಗತಿಕ ಹೆಣ್ಣುಮಕ್ಕಳು ಹಾಗೂ ಬಡವರನ್ನು ಶೈಕ್ಷಣಿಕವಾಗಿ ಮೇಲಕ್ಕೆತ್ತುವುದು ಹಾಗೂ ನೂಲುವುದು, ಹೊಲಿಗೆ, ಬೆತ್ತದ ಹೆಣಿಗೆ, ಕಸೂತಿಗಳಲ್ಲಿ ತರಬೇತಿ ನೀಡಿ ಅವರು ಸ್ವ–ಉದ್ಯೋಗಿಗಳಾಗಲು ನೆರವಾಗುವುದು ಈ ಸಮಾಜದ ಮೂಲ ಧ್ಯೇಯವಾಗಿತ್ತು. ಆ ನಿಟ್ಟಿನಲ್ಲಿ ಅದು ಯಶಸ್ವಿಯಾಗಿ ಮುನ್ನಡೆಯುತ್ತಿದ್ದಾಗ ೧೯೧೭ರಲ್ಲಿ ಅದರ ನಾಲ್ಕನೆಯ ವಾರ್ಷಿಕೋತ್ಸವವನ್ನು ಹಮ್ಮಿಕೊಳ್ಳಲಾಗಿತ್ತು. ಆ ಸಮಾರಂಭಕ್ಕೆ ಶ್ರೀಮತಿ ನಳಿನೀದೇವಿ ಬ್ಯಾನರ್ಜಿಯವರನ್ನು (ಅಂದಿನ ಮೈಸೂರು ಸಂಸ್ಥಾನದ ಮಂತ್ರಾಲೋಚನಾಸಭೆಯ ಕೌನ್ಸಿಲರ್ ಎ. ಆರ್. ಬ್ಯಾನರ್ಜಿಯವರ ಪತ್ನಿ) ಅಧ್ಯಕ್ಷತೆಗಾಗಿ ನಿಮಂತ್ರಿಸಿದ್ದರು. ಆಕೆ ತಮ್ಮ ಭಾಷಣದಲ್ಲಿ ಬಂಗಾಳದಲ್ಲಿ ಶ್ರೀಮತಿ ಸ್ವರ್ಣಕುಮಾರೀ ದೇವಿಯವರು (ರವೀಂದ್ರನಾಥ ಠಾಗೋರರ ಸಹೋದರಿ) ನಡೆಸುತ್ತಿದ್ದ "ಭಾರತಿ" ಎಂಬ ಪತ್ರಿಕೆಯ ರಚನಾಕ್ರಮವನ್ನು ಅನುಸರಿಸಿ ಕನ್ನಡದಲ್ಲೂ ಯಾರಾದರೂ ಪತ್ರಿಕೆಯೊಂದನ್ನು ನಡೆಸಿದಲ್ಲಿ ಅದಕ್ಕೆ ತಾವು ನೂರು ರೂ.ಗಳ ಸಹಾಯಧನ ನೀಡುವುದಾಗಿ ಹೇಳಿದರು. ಕಲ್ಯಾಣಮ್ಮನವರ ಮನದಲ್ಲಿ ಮಹಿಳೆಯರಿಗಾಗಿ ಒಂದು ಪತ್ರಿಕೆ ತರುವ ಅಗತ್ಯವಿದೆ ಎಂದು ಎಂದಿನಿಂದಲೋ ಇದ್ದ ವಿಚಾರಕ್ಕೆ ಹೊರಗೆ ಕ್ರಿಯಾರೂಪ ನೀಡಲು ಈ ಘಟನೆ ಪ್ರೇರಣೆ ನೀಡಿತು. ಪತ್ರಿಕೆಯನ್ನು ತರಲು ಬೇಕಾದ ಹಣದ ಸೌಕರ್ಯವನ್ನು ಶಾರದಾ ಸ್ತ್ರೀ ಸಮಾಜದ ಸಭೆಯಲ್ಲಿ ಚರ್ಚಿಸಿ ತೀರ್ಮಾನವನ್ನೂ ಕೈಗೊಳ್ಳಲಾಯಿತು. ಕೆಲವು ಹಿತೈಷಿಗಳ ಪ್ರೋತ್ಸಾಹದೊಂದಿಗೆ, ಎಲ್ಲರ ಸಹಕಾರದ ನಿರೀಕ್ಷೆಯೊಂದಿಗೆ ೧೯೧೭ರಲ್ಲೇ "ಸರಸ್ವತಿ"ಯ ಮೊತ್ತ ಮೊದಲ ಸಂಚಿಕೆಯನ್ನು ಬೆಳಕಿಗೆ ತಂದದ್ದೂ ಆಯಿತು. ಆದರೆ ಆರ್ಥಿಕ ದುಸ್ಥಿತಿಯಿಂದ, ಚಂದಾದಾರರ ಅಭಾವದಿಂದ ಬಹುಕಷ್ಟದಿಂದ ಎರಡು ಮೂರು ವರ್ಷ ನಡೆದರೂ ನಿಲ್ಲುವ ಸ್ಥಿತಿ ಬಂದಿತು. ಆಮೇಲೆ ೧೯೨೧ರಲ್ಲಿ ಅದನ್ನು ಮಾಸಪತ್ರಿಕೆಯಾಗಿ ಪುನಶ್ಚೇತನಗೊಳಿಸಿ ಪ್ರಕಟಿಸಲಾರಂಭಿಸಿದ್ದು ಇತಿಹಾಸವಾಗಿದೆ.

ಕಲ್ಯಾಣಮ್ಮನವರಿಗೆ ಧ್ಯೇಯ, ಕ್ರಿಯೆ ಹಾಗೂ ಬೌದ್ಧಿಕ ಸಾಮರ್ಥ್ಯಗಳೇ ಬಹುದೊಡ್ಡ ಶಕ್ತಿ. ಇಡೀ ರಾಜ್ಯದಲ್ಲಿ ಪ್ರಸಾರವಾಗಲೆಂಬ ಆಶಯವಿದ್ದ "ಸರಸ್ವತಿ"ಯ ನಿರ್ಮಾಪಕಿ ತಾನೆಂಬ ಹೆಮ್ಮೆಯ ಲೇಶವೂ ಅವರಲ್ಲಿರಲಿಲ್ಲ. ಬಿ. ಎ. ಮುಂತಾದ ಪದವಿ ಪಡೆದ ಪ್ರೌಢ ವಿದ್ಯಾವತಿಯರೂ ಶ್ರೀಮಂತಿನಿಯರೂ ಆದ ಮಹಿಳೆಯರ್‍ಯಾರಾದರೂ ವಹಿಸಬೇಕಾದ ಈ ಘನಕಾರ್ಯವನ್ನು ಅಲ್ಪಜ್ಞಳಾದ ತಾವು ಕೈಹಿಡಿದಿರುವುದಾಗಿ ಹೇಳುವ ವಿನಯ ಅವರದು. "ಸ್ತ್ರೀಯರಿಗೆ ಉಪಯುಕ್ತವೂ, ಸ್ತ್ರೀಯರ ಉನ್ನತಿಯನ್ನು ಕೋರಿ ಬರೆದಂಥವುಗಳೂ ಆದ ಲೇಖನಗಳಿಗೆ" ಆ ಪತ್ರಿಕೆಯಲ್ಲಿ ಎಡೆಕೊಟ್ಟರು. ಈ ಉದಾರ ದೃಷ್ಟಿಯಿಂದ ಪುರುಷರು ಬರೆದ ಲೇಖನಗಳನ್ನು "ಸರಸ್ವತಿ" ಹೊರಗಿಡಲಿಲ್ಲ.

ಚಂದಾದಾರರನ್ನು ಹೊಂದಿಸುವುದು, ನಿರಂತರವಾಗಿ ಲೇಖನಗಳನ್ನು ಬರೆಯಿಸುವುದು, ಸಂಪಾದಿಸುವುದು ಅತ್ಯಂತ ಕಠಿಣವಾದ ಹೊಣೆಯಾಗಿರುತ್ತದೆ. ಕಿರುಪತ್ರಿಕೆಗಳು ನಿರ್ದಿಷ್ಟವಾದ ತಾತ್ತ್ವಿಕ ಆದರ್ಶಗಳನ್ನು ಇಟ್ಟುಕೊಂಡರಂತೂ ಈ ಹೊಣೆ ಇನ್ನೂ ಭಾರದ್ದಾಗಿರುತ್ತದೆ. ಪತ್ರಿಕೆಗೆ ಅಗತ್ಯವಿದ್ದ ಪೇಪರ್ ಹೊಂದಿಸುವುದು, ಮುದ್ರಣ, ಒಳಗಿನ ವಿಷಯಗಳ ಸಂಯೋಜನೆ, ಯೋಗ್ಯ

ಬರಹಗಳನ್ನು ನಿರ್ಧರಿಸಬೇಕಾದ ಎಚ್ಚರ, ಜೊತೆಗೆ ಪತ್ರಿಕೆ ಅಂದವಾಗಿಯೂ ವೈವಿಧ್ಯಮಯವಾಗಿಯೂ ಇದ್ದು ಎಲ್ಲ ಸ್ತರದವರನ್ನೂ ತಲುಪಬೇಕೆಂಬ ಹೆಬ್ಬಯಕೆ ಇವೆಲ್ಲವೂ "ಸರಸ್ವತಿ"ಯ ಹೊಣೆಹೊತ್ತ ಕಲ್ಯಾಣಮ್ಮನವರ ಜವಾಬ್ದಾರಿಗಳೇ ಆಗಿದ್ದವು. ಜೊತೆಗೆ ಹಣದ ಮುಗ್ಗಟ್ಟನ್ನು ನಾಲ್ಕು ದಶಕಗಳಲ್ಲೂ ಈಕೆ ಎದುರಿಸುತ್ತಲೇ ಛಲಬಿಡದ ತ್ರಿವಿಕ್ರಮಳಾಗಿ ಅದನ್ನು ಮುನ್ನಡೆಸಿದ ಸಾಹಸಕ್ಕೆ ಉಘೇ ಎನ್ನಲೇಬೇಕು.




ಪತ್ರಿಕೆಯ ಗುಣಮಟ್ಟ ಮತ್ತು ವೈವಿಧ್ಯವನ್ನು ಹೆಚ್ಚಿಸಲು ಅನುಕೂಲವಾಗುವಂತೆ, ಕುಸುಮಕುಂಜ, ಗೃಹವಿಜ್ಞಾನ, ವನಿತಾವಿನೋದ, ಮುತ್ತಿನ ಮಾಲೆ, ಚಾರುಚರಿತಾವಳಿ, ಸಾಹಿತ್ಯ ಸರೋಜ, ಕನ್ಯಾ ಕೈಪಿಡಿ, ಸ್ತ್ರೀ ಸಂಸಾರ ಮುಂತಾದ ಹಲವು ನಿಟ್ಟಿನ ಲೇಖನಭಾಗಗಳನ್ನು ಸ್ಥಿರಶೀರ್ಷಿಕೆಗಳಾಗಿಸಿ, ಇವುಗಳನ್ನು ಹೊರತುಪಡಿಸಿ ೪೦ ಪುಟಗಳನ್ನು ಇತರ ರೀತಿಯ ವಿಷಯಗಳಿಗೆ ಮೀಸಲಾಗಿಡುವ ಬಗ್ಗೆ ಕಲ್ಯಾಣಮ್ಮ ಒಂದೆಡೆ ಪ್ರಸ್ತಾಪಿಸಿರುತ್ತಾರೆ. ಈ ಪತ್ರಿಕೆಗೆ ಲೇಖನವನ್ನು ಕೊಡಲು ಒಪ್ಪಿದವರಲ್ಲಿ ಕೊಚ್ಚಿಯ ಲೆಜಿಸ್ಲೇಟಿವ್ ಅಸೆಂಬ್ಲಿಯ ಶ್ರೀಮತಿ ಮಾಧವಿ ಅಮ್ಮನವರು, ಮದ್ರಾಸ್ 'ಚಿಂತಾಮಣಿ' ಪತ್ರಿಕೆ ಸಂಪಾದಕರಾದ ಶ್ರೀಮತಿ ಬಾಲಮ್ಮಾಳ್, ಪ್ರೇಮಾಯತನದ ಪಂಡಿತ ತಾರಾನಾಥ ಯೋಗಿಗಳು, ಶ್ರೀ ದೇವುಡು ನರಸಿಂಹಶಾಸ್ತ್ರಿಯವರು, 'ವಿಶ್ವ ಕರ್ನಾಟಕ'ದ ಸಂಪಾದಕರಾದ ಶ್ರೀ ತಿರುಮಲೆ ತಾತಾಚಾರ್ಯ ಶರ್ಮ, 'ರಂಗಭೂಮಿ' ಪತ್ರಿಕೆಯ ಸಂಪಾದಕರಾದ ದತ್ತಾತ್ರೇಯ ಕೃಷ್ಣ ಭಾರದ್ವಾಜರು, 'ಜಯಕರ್ನಾಟಕ'ದ ಸಂಪಾದಕರಾದ ಆಲೂರು ವೆಂಕಟರಾವ್, ಶಿವಾನಂದ ಕೆರೋಡಿ ಸುಬ್ಬರಾವ್, ಟಿ. ಪಿ. ಕೈಲಾಸಂ, ಶ್ರೀಮತಿ ಬಿ. ಕನಕಲಕ್ಷ್ಮಮ್ಮ, ಆರ್. ರಾಘವೇಂದ್ರರಾವ್ ಜಾಕಲಬ್ಬಿ, ವಿ. ಬಿ. ಪುರಾಣಿಕ್ ಮುಂತಾದವರ ದೊಡ್ಡ ಪಟ್ಟಿಯೇ ಕಾಣಸಿಗುತ್ತದೆ. ಕಲ್ಯಾಣಮ್ಮನವರ ಜನಸಂಪರ್ಕ ಸಾಮರ್ಥ್ಯ, ಅವರು ಗಳಿಸಿದ್ದ ಜನಾದರಣೆ ಹಾಗೂ "ಸರಸ್ವತಿ" ಪತ್ರಿಕೆ ಗಳಿಸಿದ್ದ ಗೌರವ ಮಾನ್ಯತೆಗಳು ಎಷ್ಟು ವಿಶಾಲವಾಗಿ ನಾಡಿನಲ್ಲಿ ಹರಡಿದ್ದವು ಎಂಬುದನ್ನು ಇದರಿಂದ ಊಹಿಸಬಹುದಾಗಿದೆ.

"ಸರಸ್ವತಿ"ಯ ಪುಟಗಳಲ್ಲಿ ಬಿತ್ತರಗೊಂಡಿರುವ ಕಲ್ಯಾಣಮ್ಮನವರ ಸ್ವತಂತ್ರ ವಿಚಾರಧಾರೆಗೆ ಒಂದೆರಡು ನಿದರ್ಶನಗಳಿವು:

"... ಹಿಂದೂ ದೇಶದ ಅಭಿವೃದ್ಧಿಗೂ ನಾಗರಿಕತೆಗೂ ಮುಖ್ಯಾಧಾರವಾಗಿರ ತಕ್ಕವರು ಪುರುಷರೇ ಎಂದು ಹೇಳಲಾಗುವುದಿಲ್ಲ. ಎಷ್ಟೆಷ್ಟೋ ಮಹತ್ಕಾರ್ಯಗಳನ್ನು ಪುರುಷರು ಮಾಡಿರುವುದನ್ನು ಒಪ್ಪಿಕೊಳ್ಳಬೇಕಾದರೂ ಸ್ತ್ರೀಯರೂ ಕೂಡ ಎಷ್ಟೋ ಸಾಹಸ ಕೃತ್ಯಗಳನ್ನಾಚರಿಸಿ ಕೀರ್ತಿ ಹೊಂದಿರುವರು. ಸ್ತ್ರೀಯರ ಆಶ್ಚರ್ಯ ಕಾರ್ಯಗಳೂ, ತಮ್ಮ ಪಾತಿವ್ರತ್ಯ ರಕ್ಷಣೆಗಾಗಿ ಅವರು ತೋರ್ಪಡಿಸಿದ ಸಾಹಸವೂ ಕಾರ್ಯದಕ್ಷತೆಯೂ ಈ ಭರತ ಖಂಡಕ್ಕೆ "ಪುಣ್ಯ ಭೂಮಿ" ಎಂಬ ಅನ್ವರ್ಥನಾಮವನ್ನುಂಟುಮಾಡಿದವು. ಆದ್ದರಿಂದ ಅವರ ಚರಿತ್ರೆಯಿಂದ ನಾವು ಕಲಿಯಬೇಕಾದ ನೀತಿಗಳನ್ನೂ ಈ 'ಸರಸ್ವತಿ' ಗ್ರಂಥದಲ್ಲಿ ಆಗಾಗ್ಗೆ ಪ್ರಕಟಿಸಲಾಗುತ್ತದೆ..."

"ನೀವು ಯಾರು?" ಎಂಬ ಒಂದು ಸಂಪಾದಕೀಯದಲ್ಲಿ ಇಂಥ ಭಾರತದ ಪ್ರಾಚೀನ ಸ್ತ್ರೀಯರ ಲಕ್ಷಣ ಸ್ವರೂಪವೇನು ಎಂಬುದನ್ನು ಕಾಣಬಹುದು:

"... ಈಗಿನಂತೆ ಸಭೆಗಳು, ವೃತ್ತಪತ್ರಿಕೆ, ಮಾಸ ಪತ್ರಿಕೆಗಳ ಮುದ್ರಣಕ್ಕೆ ಅವಕಾಶವಿಲ್ಲದ ಕಾಲದಲ್ಲಿಯೂ ... ಮನೆಯಲ್ಲಿ ಮಕ್ಕಳಿಗೆ ಬೇಕಾದ ಉಡುಗೆ ತೊಡುಗೆಗಳನ್ನು ಸಿದ್ಧಮಾಡುವುದು, ರೋಗಿಗಳನ್ನು ಪಥ್ಯ, ಔಷಧಗಳಿಂದ ಉಪಚರಿಸುವುದು, ನೆರೆಹೊರೆಯವರ ಕಷ್ಟಸುಖಗಳನ್ನು ವಿಚಾರಿಸಿ ಅವರಿಗೆ ಸಹಾಯ ಮಾಡುವುದು, ಧರ್ಮದೇವತೆಯಂತೆ ತನ್ನ ಕಷ್ಟವನ್ನು ಲಕ್ಷ್ಯಮಾಡದೆ ನಿದ್ರಾಹಾರ ವರ್ಜಿತರಾಗಿ ತಮಗೆ ತಿಳಿದಿರುವ ಅಲ್ಪಸ್ವಲ್ಪ ಔಷಧಗಳ ಪ್ರಯೋಗದಿಂದ ರೋಗಿಗಳನ್ನು ಉಪಚರಿಸುವುದು, ಮನೆಗೆ ಬಂದ ಅತಿಥಿಗಳನ್ನು ಆದರದಿಂದ ಕಾಣುವುದು ಇವೇ ಮೊದಲಾದವುಗಳು ಅವರ ನೈಮಿತ್ತಿಕ ಕರ್ಮಗಳಾಗಿದ್ದವು..."

ಈ ಮಾತುಗಳಲ್ಲಿ ಹೆಣ್ಣಿನ ಸಾಂಪ್ರದಾಯಿಕ ಜೀವನಕ್ರಮದ ಬಗ್ಗೆಯೇ ಹೇಳಿದ್ದಾರೆಂದು ಕಲ್ಯಾಣಮ್ಮನವರನ್ನು ಭಾರಿ ಸಂಪ್ರದಾಯಸ್ಥ ಮನೋಧರ್ಮದವರು ಎಂದು ತಿಳಿಯಬೇಕಿಲ್ಲ. ಯಾವ ಪರಂಪರಾಗತ ಸ್ತ್ರೀ ಜೀವನವನ್ನು ಗೃಹಕೃತ್ಯವೆಂದು, ಆರ್ಥಿಕವಾಗಿ ಅನುತ್ಪಾದಕವೆಂದು, ನಿಕೃಷ್ಟವೆಂದು ಹೀನೈಸಲಾಗುತ್ತಿತ್ತೋ ಆ ಜೀವನ ಕ್ರಮವನ್ನೂ ಇಲ್ಲಿ ಮೌಲಿಕಗೊಳಿಸಿದ್ದು, ಆ ಬದುಕಿನಲ್ಲೂ ಕೌಟುಂಬಿಕ, ಸಾಮಾಜಿಕ ಉಪಯುಕ್ತತೆ ಇದೆ ಎಂಬುದನ್ನು ಕಲ್ಯಾಣಮ್ಮ ಸೂಚಿಸುತ್ತಾರೆಂಬುದನ್ನು ಗಮನಿಸಬೇಕು. ಆದ್ದರಿಂದ ಒಂದು ದೃಷ್ಟಿಯಿಂದಷ್ಟೇ ನೋಡಿದಾಗ ತಮ್ಮ ಸಮಕಾಲೀನ ರಾಷ್ಟ್ರೀಯವಾದಿಗಳು ಪ್ರಚಾರ ಮಾಡುತ್ತಿದ್ದ "ಭಾರತೀಯ ನಾರಿ" ಹಾಗೂ "ಆರ್ಯ ಮಹಿಳೆ"ಯ ಮೂಲಮಾದರಿಗಳನ್ನೇ ಕಲ್ಯಾಣಮ್ಮನವರೂ ಎತ್ತಿಹಿಡಿಯುವಂತೆ ಕಾಣಬಹುದು. ಆದರೆ ಇಂದು ನಾವು ಗತಸಂಸ್ಕೃತಿಯ ಒಳಿತನ್ನು, ಸತ್ವವನ್ನು ಮತ್ತೆ ಹುಡುಕಿಕೊಳ್ಳುತ್ತಿರುವ ಹೊತ್ತಿನಲ್ಲಿ ಕಲ್ಯಾಣಮ್ಮನವರ ವಿಚಾರಗಳು ಕೇವಲ ಸಾಂಪ್ರದಾಯಿಕ ಗೊಡ್ಡುತನದ ವೈಭವೀಕರಣಕ್ಕೆ ಯತ್ನಿಸುವಂಥವಲ್ಲ ಎಂಬುದು ಅರಿವಾಗಬಲ್ಲದು.

ತಮ್ಮ ಸಮಕಾಲದ "ಪ್ರಗತಿಪರ" ಎಂದು ಪ್ರತಿಪಾದಿತವಾಗುತ್ತಿದ್ದ ವಿಚಾರಗಳನ್ನು ಕೂಡ ಹೀಗೆಯೇ ವಿಮರ್ಶಿಸುತ್ತಿದ್ದರು; ಸುಮ್ಮನೆ 'ಗಾಳಿಬಂದತ್ತ ತೂರಿಕೊಳ್ಳುವ' ಇಂದಿನವರ ಜಾಣತನದ ಅವಕಾಶವಾದ ಕಲ್ಯಾಣಮ್ಮನವರಲ್ಲಿ ಕಾಣಲಾರೆವು. ರಾವ್ ಸಾಹೇಬ್ ಶ್ರೀಹರಿವಿಲಾಸ ಶಾರದಾ ಅವರು ಹಿಂದೂ ವಿವಾಹ ವಯೋಮಿತಿಯನ್ನು ಹೆಚ್ಚಿಸುವ ಕುರಿತು ಮಂಡಿಸಿದ್ದ ಮಸೂದೆಯು ದೇಶದ ಅಸೆಂಬ್ಲಿಯಲ್ಲಿ ಸ್ವೀಕೃತವಾದಾಗ, ಸನಾತನವಾದಿಗಳು ಅದನ್ನು ಪ್ರತಿಭಟಿಸಿದ ಹೊತ್ತಿನಲ್ಲಿ ಕಲ್ಯಾಣಮ್ಮ '... ಯಾವ ಕಾಲದಲ್ಲೋ ಯಾರಿಂದಲೋ ಏತಕ್ಕೋ ರಚಿತವಾದ ಶಾಸ್ತ್ರಪುರಾಣಗಳನ್ನು ಅಕ್ಷರಶಃ ಪಾಲಿಸಬೇಕೆಂಬ ಅಂಧಶ್ರದ್ಧೆಗೆ ಅರ್ಥವೇ ಇಲ್ಲ. ಪ್ರಗತಿಯನ್ನು ಪ್ರತಿರೋಧಿಸುವ ಶಾಸ್ತ್ರಗಳು ಸೂರ್ಯನ ಪ್ರಖರ ಕಿರಣಕ್ಕೆ ಮೈಯೊಡ್ಡುವಂಥಾ ಹಿಮಕಣಗಳಂತೆಯೇ ಸರಿ.. ಸರ್ವೋಪರಿ ಸಾಮಾಜಿಕ ಸುಧಾರಣೆಯು ಆಗಿಯೇ ತೀರಬೇಕು...' ಎಂದು ದಿಟ್ಟವಾಗಿ ಆ ಶಾರದಾಬಿಲ್‌ಅನ್ನು ಬೆಂಬಲಿಸುತ್ತಾರೆ. ಏಕೆಂದರೆ ಬಾಲ್ಯವಿವಾಹ, ಅದರ ಫಲವಾದ ಸಂಕಟಗಳು ಅವರ ಸ್ವಂತ ಅನುಭವಕ್ಕೆ ಒದಗಿದ್ದುದು ಮಾತ್ರವಲ್ಲ; ಅಥವಾ ಅವರ ಮನೆಯಲ್ಲೇ ಐವರು ಸಹೋದರಿಯರು ಇಂಥ ವೈಧವ್ಯದಲ್ಲೇ ಬದುಕುತ್ತಿದ್ದರು ಎಂಬುದೂ ಕಾರಣವಲ್ಲ. ಇಡೀ ಸಮಾಜದ ಎಲ್ಲ ವಿಧವೆಯರ ಸಂಕಟಗಳಿಗೆ ಅವರು ಮರುಗಿದ್ದವರು, ಆ ಸ್ಥಿತಿಯಿಂದ ಸ್ತ್ರೀಯರನ್ನು ಪಾರುಮಾಡಲು ನಿರಂತರವಾಗಿ ಕ್ರಿಯಾಶೀಲರೂ ಆಗಿದ್ದವರು ಎಂಬುದನ್ನು ನೆನೆಯಬೇಕು.

'ಸ್ತ್ರೀಯರ ಪ್ರಗತಿ' ಎಂಬುದನ್ನು ಪಾಶ್ಚಾತ್ಯರ ದೃಷ್ಟಿಯಿಂದಲೇ ಅರ್ಥೈಸುವುದು ಮತ್ತು ಪಾಶ್ಚಾತ್ಯ ಸಂಸ್ಕೃತಿಯ ಅನುಕರಣೆಯೇ ಅಭಿವೃದ್ಧಿಯ ಲಕ್ಷಣವೆಂದು ನಂಬುವುದನ್ನು ಕಲ್ಯಾಣಮ್ಮ ಬಲವಾಗಿ ವಿರೋಧಿಸುತ್ತಿದ್ದರು. ಸ್ತ್ರೀ ಸ್ವಾತಂತ್ರ್ಯದ ಬಗೆಗಿನ ಅವರ ವಿಚಾರಗಳು ಗಾಂಧೀಜಿಯವರ ವಿಚಾರಗಳಲ್ಲಿನ ನಂಬಿಕೆಯಿಂದ ಬೆಳೆದಂಥವೂ ಆಗಿದ್ದವು.

'ಸರೋಜಿನಿ ನಾಯ್ಡು ಅವರನ್ನು ಅಖಿಲ ಭಾರತ ರಾಷ್ಟ್ರೀಯ ಮಹಾ ಪರಿಷತ್ತಿಗೆ ಅಧ್ಯಕ್ಷೆಯನ್ನಾಗಿ ಆರಿಸಿದ್ದನ್ನು ಸಮಸ್ತ ಸ್ತ್ರೀ ಸಮುದಾಯವನ್ನು ಗೌರವಿಸಿದಂತಾಗಿದೆ' ಎಂದು ಅನುಮೋದಿಸುವ ಕಲ್ಯಾಣಮ್ಮ, ಆ ಆಯ್ಕೆಯನ್ನು ಟೀಕಿಸಿದ್ದ ಡಿ. ವಿ. ಗುಂಡಪ್ಪನವರಂಥ ಅಂದಿನ ವಿಖ್ಯಾತ ಲೇಖಕರನ್ನು ಪ್ರಶ್ನಿಸಲು

ಹಿಂಜರಿದಿಲ್ಲ. ಸರೋಜಿನಿ ನಾಯ್ಡು ಒಬ್ಬ ಬಂಗಾಲಿ ಸ್ತ್ರೀ, ಒಬ್ಬ ಕವಯಿತ್ರಿ, ರಾಜಕೀಯ ಅನುಭವವುಳ್ಳ ಮುತ್ಸದ್ದಿಗಳಿಂದ ನಿರ್ದೇಶಿಸಲ್ಪಡಬೇಕಾದ ಅಧ್ಯಕ್ಷ ಪದವಿಗೆ ಆಕೆಗಿರುವ ಅರ್ಹತೆಯೇನು? ಎಂದು ಡಿ. ವಿ. ಜಿ. ಅವರು ಪ್ರಶ್ನಿಸಿದ್ದರು. ಕಲ್ಯಾಣಮ್ಮ ಬರೆಯುವ ರೀತಿ ಹೀಗಿದೆ:

'...ಶ್ರೀಮಾನ್ ಗುಂಡಪ್ಪನವರ ಈ 'ವಿಮರ್ಶಾ ವೈಶಿಷ್ಟ್ಯ'ವು ನಿಜವಾಗಿ ರಾಷ್ಟ್ರಹಿತಕ್ಕೆ ಮತ್ತು ಸಾಮಾಜಿಕ ಹಿತಕ್ಕೆ ಘಾತಕವೆಂದು ಅದಾಗಲೇ ಅನೇಕ ಪತ್ರಿಕೆಗಳು ಸಾರಿ ಹೇಳಿವೆ. ನಾವಾದರೂ ಆ ರೀತಿಯ ಖಂಡನೆಯನ್ನು ಸ್ತ್ರೀ ಸಮುದಾಯಕ್ಕೇನೇ ಬಿಟ್ಟುಕೊಟ್ಟಿರುವೆವು ಮತ್ತು ಸಮಾಜಕ್ಕೆ ಘಾತಕವಾದ ಮಾತುಗಳಿದ್ದರೆ ಅದನ್ನು ಹಿಂತೆಗೆಯಬೇಕೆಂದು ಅವರಲ್ಲಿ ಸವಿನಯ ವಿನಂತಿ ಮಾಡಿಕೊಳ್ಳುತ್ತೇವೆ...'




ಪತ್ರಿಕೆಯೊಂದರ ಯೋಗ್ಯತೆ ಕೇವಲ ಅದು ತನ್ನನ್ನು ತತ್ವನಿಷ್ಠವೆಂದು ಕರೆದುಕೊಂಡಷ್ಟಕ್ಕೇ ಹೆಚ್ಚಿಬಿಡುವುದಿಲ್ಲ. ಅವರ ವಿಚಾರಗಳು ವಿವೇಕಯುಕ್ತವಾಗಿ, ಜನರೆಲ್ಲರ ಹಿತಾಹಿತಗಳ ಬಗೆಗಿನ ಎಚ್ಚರದೊಂದಿಗೆ ನಿಷ್ಪಕ್ಷವಾಗಿ ನ್ಯಾಯವಾದದ್ದನ್ನು ಎತ್ತಿಹಿಡಿಯುವಂತೆ ಇದ್ದರಷ್ಟೇ ಅಂಥ ಪತ್ರಿಕೆಯು ಉನ್ನತ ಸ್ತರದ್ದಾಗಲು ಸಾಧ್ಯ. ಹಾಗೆಯೇ ಒಂದು ಪತ್ರಿಕೆಗಾಗಿ ಅದರ ಸಂಪಾದಕರು ಬಳಸುವ ಭಾಷೆ ಕೂಡ ಭಾವೋದ್ರೇಕದ ಆಕ್ರೋಶಗಳಿಲ್ಲದಂತೆಯೂ ಮುಕ್ತವಾಗಿ ವಿಚಾರ ಹೇಳಬಲ್ಲ ಸಮತೋಲನ ಕಾಯ್ದುಕೊಳ್ಳಬೇಕಾಗುತ್ತದೆ. ಇಂದು ಪತ್ರಿಕೆಗಳು ಕಿರು ವೃತ್ತಾಂತ, ಪಾಕ್ಷಿಕ, ಮಾಸಿಕ, ಅರ್ಧವಾರ್ಷಿಕ, ವಾರ್ಷಿಕಾದಿ ನಾನಾ ಸ್ವರೂಪಗಳಲ್ಲಿ ಬೆಳೆದಿರುತ್ತವೆ. ಅವುಗಳಲ್ಲಿ ಉದ್ಯಮೀಕೃತ ಲಾಭಗಾರಿಕೆ, ಸ್ಪರ್ಧೆಗಳು ಕೆಲಸ ಮಾಡುವುದೇ ದೊಡ್ಡ ಸಮುದಾಯದಲ್ಲಿ ಕಂಡುಬರುತ್ತದೆ. ಎಲ್ಲೋ ಕೆಲವೇ ಪತ್ರಿಕೆಗಳು ಮಾತ್ರವೇ ತಾತ್ವಿಕವಾಗಿ ರಾಜಿಮಾಡಿಕೊಳ್ಳದೆ ತಮ್ಮತನವನ್ನು ಉಳಿಸಿಕೊಳ್ಳುತ್ತ ಬಂದಿರುತ್ತವೆ. ಇಂಥವು ಬೆರಳೆಣಿಕೆಯಷ್ಟೇ ಆದರೂ ಅವುಗಳೇ ನಿಜವಾಗಿ ಜನಮನವನ್ನು ಅವರ ಕ್ರಿಯಾ ಚೈತನ್ಯವನ್ನೂ ಎಚ್ಚರಿಸಲು ಸಮರ್ಥವಾಗಿರುವಂಥವು. ಕಲ್ಯಾಣಮ್ಮನವರ "ಸರಸ್ವತಿ" ನಾಲ್ಕು ದಶಕಗಳಕಾಲ ಸೋಲದೆ ಇಂಥ ಸೇವೆ ನಡೆಸಿತೆನ್ನುವುದು ಅದ್ಭುತ ಚರಿತ್ರೆಯೇ ಸರಿ.

ಈ ಪತ್ರಿಕೆಯಲ್ಲಿ ಪ್ರಕಟವಾಗಿರುವ ಬೇರೆ ಬೇರೆ ಲೇಖಕರ ವಿಚಾರಗಳೂ ಅವುಗಳ ಶೀರ್ಷಿಕೆಗಳೂ, ಕಲ್ಯಾಣಮ್ಮನವರ ಸಂಪಾದನಾ ದಕ್ಷತೆಗೆ ಕನ್ನಡಿ ಹಿಡಿಯಬಲ್ಲವು. ಹಾಗೆಯೇ ಒಂದು ಕಾಲಖಂಡದ ಸ್ತ್ರೀ ನಿಷ್ಠ ಚಿಂತನೆಯ ವಿಕಾಸವನ್ನು ಗುರುತಿಸಲೂ ಅವು ಒದಗಬಲ್ಲವು.

ಪಡುಕೋಣೆ ಸೀತಾದೇವಿಯವರ 'ಸ್ತ್ರೀ ವಿದ್ಯಾಭ್ಯಾಸ ಸ್ವರೂಪ', ಮಂದಾಕಿನಿ ಬಾಯಿ ಕಾಮತರ 'ಸ್ತ್ರೀ ವಿದ್ಯಾಭ್ಯಾಸ', ಕಾಮಾಕ್ಷಮ್ಮನವರ 'ಸ್ತ್ರೀ ಶಿಕ್ಷಣ ಮತ್ತು ಸಂತ ವಿನೋಬಾಜೀ', ಕೆ. ಡಿ. ರುಕ್ಮಿಣಮ್ಮನವರ 'ಹಿಂದೂ ದೇಶದ ಸ್ತ್ರೀಗೆ ಪ್ರೌಢಶಿಕ್ಷಣ ಬೇಕೆ?', ಎನ್. ಆರ್. ಗೌರಮ್ಮನವರ 'ಹಿಂದೂಸ್ಥಾನದಲ್ಲಿ ಸ್ತ್ರೀ ವಿದ್ಯಾಭ್ಯಾಸವೂ ಇಂಗ್ಲೀಷರೂ', ಜಿ. ಎನ್. ಕರಜಗಿಯವರ 'ಸಮಾಜದಲ್ಲಿ ಸ್ತ್ರೀ ಶಿಕ್ಷಣಕ್ಕಿರುವ ಅನಾನುಕೂಲತೆ', ಎಂ. ಮಲ್ಲಪ್ಪನವರ 'ಗಾಂಧೀ ಶಿಕ್ಷಣವೂ ಸ್ತ್ರೀಯರೂ' ಮುಂತಾಗಿ ಸ್ತ್ರೀ ವಿದ್ಯಾಭ್ಯಾಸವನ್ನೇ ಕೇಂದ್ರವಾಗಿಟ್ಟುಕೊಂಡು ಕರ್ನಾಟಕದ ಬೇರೆ ಬೇರೆ ಭಾಗಗಳ ಲೇಖಕರು ಬರೆದಿರುವ ಲೇಖನಗಳು ಆ ವಿಷಯದ ಚರ್ಚೆ ಹೇಗೆ ಹಲವು ನಿಟ್ಟಿನಿಂದ "ಸರಸ್ವತಿ"ಯಲ್ಲಿ ನಡೆದಿದೆ ಎಂಬುದರ ಸೂಚನೆ ನೀಡುತ್ತವೆ. ಆ ವಿಚಾರಗಳು ಸ್ಥಗಿತವಾಗಿ ಏಕರೂಪದ್ದಾಗಿಲ್ಲ. ಎನ್. ಆರ್. ಗೌರಮ್ಮನವರು ಸ್ತ್ರೀ ಪುರುಷರಿಬ್ಬರೂ ಶಿಕ್ಷಣಕ್ಕೆ ಸಮಾನ ಹಕ್ಕುದಾರರೇ ಆದರೂ ಪುರುಷರಿಗಿಂತ ಭಿನ್ನವಾದ ಆರ್ಯ ಮಹಿಳೆಯರ ಮಾದರಿಯನ್ನು ಸ್ತ್ರೀಯರಲ್ಲಿ ಬಿತ್ತಿಬೆಳೆಸಬಲ್ಲ ರೀತಿಯ ಶಿಕ್ಷಣ ಸ್ತ್ರೀಗೆ ಅಗತ್ಯವೆನ್ನುತ್ತಾರೆ. ಪಡುಕೋಣೆ ಸೀತಾದೇವಿ, ಶಿಕ್ಷಣ ಎಲ್ಲರಿಗೂ ಕಡ್ಡಾಯವಾಗಿ ಬೇಕೇ ಬೇಕೆಂದು ಸಾರಿ ಗತವೈಭವದ ಹಳಹಳಿಕೆಯಲ್ಲಿ ಮುಳುಗದೆ, ಆಧುನಿಕ ಯುಗದ ಕೊರತೆಗಳನ್ನೂ ಗ್ರಹಿಸಿ ಶೈಕ್ಷಣಿಕ ಸುಧಾರಣೆಯ ಅವಶ್ಯಕತೆಯನ್ನು ಮುಂದಿಡುತ್ತಾರೆ. ಅದೇ ಮಂದಾಕಿನೀ ಬಾಯಿ, ಇನ್ನೂ ಮುಂದುವರೆದು ಗಂಡಸಿನ ಹಕ್ಕು ಎಂದು ವಿದ್ಯೆಯನ್ನು ಜನ ಅವನಿಗೆ ಕಾಯ್ದಿಡುತ್ತಾರೆ, ಆದರೆ ಕಾಗದ ತುಟ್ಟಿಯಾಗಿರುವ ಈ ಕಾಲದಲ್ಲೂ ಹೆಂಗಸರ ವಿದ್ಯೆ ಬೇಕೆ ಬೇಡವೆ ಎಂಬ ಚರ್ಚೆಗೆ ಕೊರತೆಯಿಲ್ಲ ಎಂದು ಗೇಲಿ ಮಾಡಿ, ಸುಶಿಕ್ಷಿತ ಸ್ತ್ರೀಯರಿಂದ ಸಮಾಜಕ್ಕೆ ಆಗುವ ಲಾಭಗಳ ಬಗ್ಗೆ ತುಂಬು ಆತ್ಮವಿಶ್ವಾಸದಿಂದ ಬರೆಯುತ್ತಾರೆ. ಹೀಗೆ ಸರಸ್ವತಿ ಸ್ತ್ರೀ ಶಿಕ್ಷಣ ಕುರಿತ ಸಂಕಥನವನ್ನು ಕಟ್ಟಿ ಪ್ರಸಾರಮಾಡಿದ ಒಂದು ವೇದಿಕೆಯೂ ಆಗಿತ್ತೆಂಬುದು ಸ್ಪಷ್ಟವಿದೆ.

ವ್ಯಕ್ತಿಯಾಗಿ ಕಲ್ಯಾಣಮ್ಮ ಮಕ್ಕಳಕೂಟ, ಅಬಲಾಶ್ರಮ, ಪೌರಕಾರ್ಯ, ಶಿಕ್ಷಣ ಇಲಾಖೆ ಮುಂತಾದ ಅಸಂಖ್ಯ ಸಂಘಸಂಸ್ಥೆಗಳಲ್ಲಿ ದುಡಿದಿರುತ್ತಾರೆ. ಕೆಲವನ್ನು ಅವರೇ ಸ್ಥಾಪಿಸಿ ನಡೆಸಿದರೆ ಮತ್ತೆ ಕೆಲವು ಬೇರೆಯವರು ಸಂಘಟಿಸಿದ್ದಾಗಿರುತ್ತವೆ. ಅವರ ಈ ಬಹುಮುಖ ಸಾಮಾಜಿಕ ಕಾರ್ಯಾಸಕ್ತಿಗೆ ಅನುಗುಣವಾಗಿ ಆ ಎಲ್ಲ ಕ್ಷೇತ್ರ ಸಂಬಂಧಿತ ವಿಚಾರಗಳೂ ಸಾಹಿತ್ಯವೂ ಸರಸ್ವತಿಯೊಳಗೂ ಸ್ಥಾನಪಡೆದಿರುತ್ತವೆ. ಕಲ್ಯಾಣಮ್ಮನವರ ವ್ಯಕ್ತಿತ್ವ, ಅವರ ಸಾಧನೆಗಳು, "ಸರಸ್ವತಿ" ಪತ್ರಿಕೆಯೂ ಅವರ ಸಮಕಾಲೀನರಲ್ಲಿ ಗೌರವಾದರಗಳನ್ನು ಗಳಿಸಿದ್ದಂತೆ, ಅವರ ಟೀಕಾಕಾರರೂ, ದ್ವೇಷಿಸುವವರೂ ಇದ್ದುದು ತೀರ ಸಹಜವೇ, ಆದರೆ ಅವರ ಮುಂದಿನ ಪೀಳಿಗೆಯ ಲೇಖಕಿಯರಾದ ಶ್ಯಾಮಲಾದೇವಿ ಬೆಳಗಾಂವಕರ್, ಕೊಡಗಿನ ಗೌರಮ್ಮ ಹಾಗೂ ಸರಸ್ವತಿ ಬಾಯಿ ರಾಜವಾಡೆಯವರು ಕಲ್ಯಾಣಮ್ಮನವರನ್ನು ತಮ್ಮ ಒಂದು ಆದರ್ಶವೆಂದು ಭಾವಿಸಿ ಗೌರವಿಸುತ್ತಿದ್ದರು ಎಂಬುದು ಮಹಿಳಾ ಸಾಹಿತ್ಯ ಚರಿತ್ರೆಯು ನಿರಂತರವೆಂಬುದಕ್ಕೆ ಸಾಕ್ಷಿಯಾಗಿರುತ್ತದೆ.

ಇಂದು ಹಿಂತಿರುಗಿ ನೋಡಿದಲ್ಲಿ "ಸರಸ್ವತಿ" ಒಂದು ವಿಶ್ವಕೋಶದ ಹಾಗೆ ಕೆಲಸ ಮಾಡಿದ್ದುದನ್ನು ಕಾಣಬಹುದು. ಕಸೂತಿ, ಹೋಲಿಗೆ, ಅಡಿಗೆ, ಗರ್ಭಿಣಿಯರು, ಬಾಣಂತಿಯರ ಆರೋಗ್ಯ ರಕ್ಷಣೆಗಳ ವಿಷಯಗಳ ಜಾಹಿರಾತುಗಳು ಈ ಪತ್ರಿಕೆಯಲ್ಲಿರುತ್ತವೆ. ಸ್ತ್ರೀ ಸ್ವಾವಲಂಬನೆಯ ನೆಲೆಯಿಂದ ಕಾರ್ಖಾನೆಗಳ, ಹೊಲಿಗೆ ತರಗತಿಗಳ ಜಾಹಿರಾತುಗಳು, ದಿನನಿತ್ಯದ ಅಗತ್ಯಗಳಾದ ಸೋಪು, ಅಮೃತಾಂಜನ, ಕೇಶತೈಲ ಮುಂತಾದುವಲ್ಲದೆ ಆ ಕಾಲದ ಕೆಲವು ಚಲನಚಿತ್ರಗಳ ಜಾಹಿರಾತುಗಳೂ ಈ ಪತ್ರಿಕೆಯಲ್ಲಿ ಕಾಣಿಸಿಕೊಂಡಿವೆ! ಇಪ್ಪತ್ತಾರು ಸ್ಥಿರ ಶೀರ್ಷಿಕೆಗಳು ಒಂದಾದರೆ ಅವುಗಳಾಚೆಗೆ ಸುಭಾಷಿತಗಳು, ಹಾಸ್ಯಲಹರಿ, ಗೃಹವಿಜ್ಞಾನ, ಬಿಡಿನುಡಿಗಳು, ಅಮೃತಬಿಂದು, ವನಿತಾವಿನೋದ, ಮುಂತಾದ ಫಿಲ್ಲರ್‌ಗಳೂ ಲೆಕ್ಕವಿಲ್ಲದಷ್ಟಿವೆ. ಗಂಭೀರ ವೈಚಾರಿಕ ಲೇಖನಗಳಲ್ಲದೆ ಸಣ್ಣಕಥೆಗಳು, ಕವಿತೆಗಳು, ಕಾದಂಬರಿಗಳ ಧಾರಾವಾಹಿಗಳೂ ಈ ಪತ್ರಿಕೆಯನ್ನು ಆಹ್ಲಾದಕರ ವಾಗಿಸಿರುತ್ತವೆ. 'ಮಕ್ಕಳ ಕೂಟ'ದಂತೆ, "ಸರಸ್ವತಿ"ಯಲ್ಲೂ 'ಮಕ್ಕಳ ಪುಟಗಳು', 'ಕಂದನವನ', 'ಮಕ್ಕಳ ಬಾವುಟ' ಎಂಬ ವಿಭಾಗಗಳು ಮಕ್ಕಳನ್ನು ಉತ್ತಮ ನಾಗರಿಕ ಪ್ರಜೆಗಳಾಗಿ ಬೆಳೆಸಲು ಮೀಸಲಾಗಿರುತ್ತವೆ. ಒಟ್ಟಾರೆಯಾಗಿ ನೋಡುವಾಗ "ಸರಸ್ವತಿ" ಒಂದು ಕಾಲಘಟ್ಟದ ಸಾಂಸ್ಕೃತಿಕ ಮುಖವಾಣಿಯಾಗಿದ್ದೂ ಆ ಕಾಲದಾಚೆಗೂ ಅರ್ಥಪೂರ್ಣವಾಗುವಂಥ ಮಹತ್ತರವಾದ ರಾಜಕೀಯ, ಸಾಮಾಜಿಕ, ಸಾಂಸ್ಕೃತಿಕ ವಾಸ್ತವಾಂಶಗಳನ್ನು ಚಾರಿತ್ರಿಕವಾಗಿ ಕಟ್ಟಿಕೊಡುವ ವಿಶಿಷ್ಟ ಚಿಕ್ಕ ಪತ್ರಿಕೆಯಾಗಿ ಸಾರ್ಥಕತೆ ಪಡೆದಿರುತ್ತದೆ ಎನ್ನಬಹುದು.

**ಡಾ॥ ಬಿ. ಎನ್. ಸುಮಿತ್ರಾಬಾಯಿ**
ನಂ. ೩೩, ೭ನೇ ಮುಖ್ಯರಸ್ತೆ, ೫೦ ಅಡಿ ರಸ್ತೆ, ಪ್ರಮೋದ ಬಡಾವಣೆ
ನಾಯಂಡಹಳ್ಳಿ ಅಂಚೆ, ಬೆಂಗಳೂರು – ೫೬೦ ೦೩೯

# ಕರ್ನಾಟಕದಲ್ಲಿ ಮತೀಯ ಸನ್ನಿವೇಶ

**ಎಸ್. ಆರ್. ವಿಜಯಶಂಕರ**

ಎಲ್ಲಾ ದೇವರೂ ಒಂದೇ, ಎಲ್ಲಾ ಮತ ಧರ್ಮಗಳ ಮೂಲ ಸತ್ವವೂ ಮನುಷ್ಯನ ಒಳಿತನ್ನೇ ಬಯಸುತ್ತದೆ. ಎಲ್ಲಾ ಧರ್ಮಗಳ ಮೂಲ ಆಶಯಗಳು ಆಧ್ಯಾತ್ಮಿಕ ಸಮಾನತೆಯನ್ನೇ ಸಾರುತ್ತವೆ – ಇತ್ಯಾದಿ ಇತ್ಯಾದಿ ಎಷ್ಟೇ ಹೇಳಿದರೂ ವಾಸ್ತವದಲ್ಲಿ ಮತೀಯ ಸಂಘರ್ಷಗಳು ಸತತವಾಗಿ ನಡೆದಿವೆ. ಕರ್ನಾಟಕದ ಚಾರಿತ್ರಿಕ ಮತೀಯ ಸನ್ನಿವೇಶಗಳೂ ಇದಕ್ಕೆ ಹೊರತಲ್ಲ. ವೈಷ್ಣವರಿಗೂ – ಜೈನರಿಗೂ ನಡೆದ ಸಂಘರ್ಷದಲ್ಲಿ ಹೊಯ್ಸಳರ ಬುಕ್ಕರಾಯನ ತೀರ್ಪು ಚಾರಿತ್ರಿಕವಾಗಿ ಚರ್ಚಿಸಲ್ಪಟ್ಟಿದೆ. ಹಿಂದೂಗಳ ಒಳಗೇ ಶೈವರು ಹಾಗೂ ವೈಷ್ಣವರ ನಡುವಿನ ಹೋರಾಟಗಳ ದೊಡ್ಡ ಚರಿತ್ರೆಯೇ ಇದೆ. ಕರ್ನಾಟಕ ರಾಜ್ಯದಾದ್ಯಂತ ನಾವು ಹಾಳು ಬಿದ್ದ ಜೈನರ ಬಸದಿಗಳು ಮತ್ತು ಕಳೆದುಹೋದ ಬೌದ್ಧರ ಸ್ತೂಪಗಳನ್ನು ಗುರುತಿಸಬಹುದು. ಇನ್ನು ಹಲವು ಕಡೆ ರೂಪಾಂತರಗೊಂಡ ದೇವಾಲಯಗಳನ್ನು ಕಾಣಬಹುದು. ಇವೆಲ್ಲಾ ಒಂದು ಹಂತದ ಚಾರಿತ್ರಿಕವಾದ ಮತೀಯ ಚರಿತ್ರೆ. ಅದಕ್ಕಿನ್ನು ಲಿಂಗಾಯತ ಹಾಗೂ ವೀರಶೈವವೆಂಬ ಕಾನೂನು ರೀತ್ಯಾ ಧರ್ಮ ಪ್ರತ್ಯೇಕತೆಯ ಹೊಸ ಪುಟಗಳು ಬೇಗನೆ ಸೇರಲಿವೆ.

ಇನ್ನೊಂದು ನೆಲೆಯಲ್ಲಿ ನಮ್ಮಲ್ಲಿ ಮುಸ್ಲಿಂ ರಾಜ್ಯ ಸ್ಥಾಪನೆ, ಹಿಂದೂ ರಾಜರ ಆಡಳಿತ, ಬುಡಕಟ್ಟು ರಾಜರ ಪ್ರಾಧಾನ್ಯತೆ ಹೀಗೆ ಚರಿತ್ರೆಯ ಹಲವು ಆಯಾಮಗಳಿವೆ. ಬಹಮನಿ ಸುಲ್ತಾನರು, ವಿಜಯನಗರ ಸಾಮ್ರಾಜ್ಯ, ಶಿಥಿಲಗೊಂಡ ಮೊಗಲ ಪ್ರಭಾವ ಒಂದು ಕಡೆ. ಬ್ರಿಟಿಷರ ಆಗಮನದ ಸಂದರ್ಭದಲ್ಲಿ ಮೈಸೂರು ಪ್ರಾಂತ್ಯದಲ್ಲಿದ್ದ ಹೈದರ್ ಆಲಿ ಹಾಗೂ ಟಿಪ್ಪು ಸುಲ್ತಾನರುಗಳ ರಾಜ್ಯಾಡಳಿತಗಳ ಇನ್ನೊಂದು ಚರಿತ್ರೆ. ಅವುಗಳು ಅಲ್ಲದೆ ಕಾಲಕ್ರಮೇಣ ಬೆಳೆದ ಕ್ರಿಶ್ಚಿಯನ್ ಧರ್ಮ, ಅವರು ಸ್ಥಾಪಿಸಿದ ಶಾಲೆ, ಕಾಲೇಜು, ಆಸ್ಪತ್ರೆಗಳು, ಸೇವಾ ಸಂಸ್ಥೆಗಳು – ಇವುಗಳದ್ದು ಇನ್ನೊಂದು ಚರಿತ್ರೆ.

ಈ ರೀತಿಯಲ್ಲಿ ಇದ್ದ ಮತೀಯವಾದದ ಚರಿತ್ರೆ ಕರ್ನಾಟಕದಲ್ಲಿ ಸಮಕಾಲೀನ ಕಲಹಕ್ಕೆ ಮುಖ್ಯವಾದೊಂದು ವೇದಿಕೆಯಾಗಿದೆ. ಚರಿತ್ರೆಯ ವ್ಯಾಖ್ಯಾನಗಳು ಬಹುವೇಳೆ ಕಲಹದ ಮುಖ್ಯ ತಳಹದಿ. ಭಾರತದಾದ್ಯಂತ ರಾಮಜನ್ಮಭೂಮಿ ವಿವಾದದ ನೆಪದಲ್ಲಿ ಬೆಳೆಸಲ್ಪಟ್ಟ ಚಾರಿತ್ರಿಕ ವ್ಯಾಖ್ಯಾನಗಳು ಸಂಘರ್ಷದ ಮೂಲ ನೆಲೆ. ಅದು ಹಿಂದೂಗಳ ಅಸ್ಮಿತೆಯ ಹಾಗೂ ರಾಷ್ಟ್ರಾಭಿಮಾನದ ಸಂಕೇತವಾಗಿ ಮಾರ್ಪಟ್ಟಿರುವುದರಿಂದ ಭಾವನಾತ್ಮಕ ವಿಷಯವೂ ಆಗಿದೆ.

ಚಾರಿತ್ರಿಕ ಕಲ್ಪನೆ ಹಾಗೂ ವ್ಯಾಖ್ಯಾನಗಳ ಒಟ್ಟು ತಾತ್ಪರ್ಯ ಹೀಗಿದೆ: 'ನಮ್ಮದು ಸನಾತನವಾದ ಸಂಸ್ಕೃತಿ ಉಳ್ಳ ಹಿಂದೂ ದೇಶ. ಇಲ್ಲಿನ ಸನಾತನವಾದ ವೇದಗಳು ಜಗತ್ತಿನಲ್ಲೇ ಶ್ರೇಷ್ಠವಾದ ಸಕಲ ಜ್ಞಾನವನ್ನೂ ತನ್ನೊಳಗೆ ಹುದುಗಿಸಿ ಇರಿಸಿಕೊಂಡಿರುವ ಜ್ಞಾನ ರಾಶಿ. ಇಲ್ಲಿ ಸಮೃದ್ಧವಾಗಿದ್ದ ಹಿಂದೂ

ಚರಿತ್ರೆಯ ವ್ಯಾಖ್ಯಾನಗಳು ಬಹು ವೇಳೆ ಕಲಹದ ಮುಖ್ಯ ತಳಹದಿ.
ಭಾರತದಾದ್ಯಂತ ರಾಮಜನ್ಮಭೂಮಿ ವಿವಾದದ ನೆಪದಲ್ಲಿ ಬೆಳೆಸಲ್ಪಟ್ಟ ಚಾರಿತ್ರಿಕ
ವ್ಯಾಖ್ಯಾನಗಳು ಸಂಘರ್ಷದ ಮೂಲ ನೆಲೆ.
ಅದು ಹಿಂದೂಗಳ ಅಸ್ಮಿತೆಯ ಹಾಗೂ ರಾಷ್ಟ್ರಾಭಿಮಾನದ
ಸಂಕೇತವಾಗಿ ಮಾರ್ಪಟ್ಟಿರುವುದರಿಂದ
ಭಾವನಾತ್ಮಕ ವಿಷಯವೂ ಆಗಿದೆ.



ಸಂಸ್ಕೃತಿಯನ್ನು ಹಾಗೂ ಹಿಂದೂ ರಾಜ್ಯವನ್ನು ಮುಸ್ಲಿಮರು ಆಕ್ರಮಿಸಿದರು. ಅವರು ತಮ್ಮ ಧರ್ಮ ಪ್ರಸಾರಕ್ಕಾಗಿ ನಮ್ಮ ದೇವಾಲಯಗಳನ್ನು ನಾಶ ಮಾಡಿದರು. ಇಲ್ಲಿನ ಹಿಂದೂಗಳನ್ನು ಮುಸ್ಲಿಮರಾಗಿ ಮತಾಂತರಗೊಳಿಸಿದರು. ಇದು ಅನ್ಯಾಯ. ಈ ಅನ್ಯಾಯಕ್ಕೆ ಶಿಕ್ಷೆಯಾಗಬೇಕು. ಹಿಂದೆ ಮುಸ್ಲಿಮರಿಂದಾದ ಅನ್ಯಾಯದ ಹೊರೆ ಹೊರಬೇಕಾದವರು ಇಂದಿನ ಮುಸ್ಲಿಮರು. ಅದಕ್ಕೆ ಪ್ರಾಯಶ್ಚಿತ್ತವಾಗಿ ಅವರು ಹಿಂದೂಗಳಿಗೆ ಅಡಿಯಾಳಾಗಿ ಇರಬೇಕು. ಅಥವಾ ಅವರು ಹಿಂದೂಗಳಾಗಿ ಪರಿವರ್ತನೆ ಹೊಂದಬೇಕು. ಅಥವಾ ಈ ದೇಶವನ್ನು ತ್ಯಜಿಸಿ ಮುಸ್ಲಿಂ ರಾಷ್ಟ್ರಕ್ಕೆ ಹೋಗಬೇಕು. ಆ ತಪ್ಪನ್ನು ಸರಿಪಡಿಸುವುದಕ್ಕಾಗಿ ಆಕ್ರಮಿಸಿಕೊಂಡ ಹಿಂದೂಗಳ ಪವಿತ್ರ ಜಾಗಗಳನ್ನೆಲ್ಲಾ ಸ್ವ–ಪ್ರೇರಣೆಯಿಂದ ಹಿಂತಿರುಗಿಸಬೇಕು. ಹಾಗೆ ಅವುಗಳು ಹಿಂದೂಗಳ ಸುಪರ್ದಿಗೆ ಬಾರದಿದ್ದರೆ ದೇಶದ ಯಾವುದೇ ಕಾನೂನನ್ನಾದರೂ ಧಿಕ್ಕರಿಸಿ ಹಿಂದೂಗಳು ಆ ಪವಿತ್ರ ಸ್ಥಳಗಳನ್ನು ವಾಪಸ್ಸು ಪಡೆಯಬೇಕು. ಅದಕ್ಕಾಗಿ ಹಿಂದೂಗಳ, ಹಿಂದೂ ಸಂಸ್ಕೃತಿಯ ಪರವಾದ ಕಾನೂನುಗಳನ್ನು ಜಾರಿಗೆ ತರುವಂತೆ ಮಾಡಬೇಕು. ಈ ಕಾರ್ಯಕ್ಕಾಗಿ ಹಿಂದೂಗಳು ಆಡಳಿತ ಚುಕ್ಕಾಣಿ ಹಿಡಿಯಬೇಕು.'

ಇದು ಸ್ಥೂಲವಾಗಿ ಒಂದು ಸಮೂಹ ಪ್ರತಿಪಾದಿಸುತ್ತಿರುವ ವಾದ. ಈ ವಾದದಲ್ಲಿರುವ ಹಲವು ತೊಡಕುಗಳನ್ನು ಉದ್ದೇಶಪೂರ್ವಕವಾಗಿ ಕಡೆಗಣಿಸಲಾಗುತ್ತದೆ. ಅಂತಹ ತೊಡಕುಗಳೆಂದರೆ :

೧) ಭಾರತದಲ್ಲಿ ಚಾರಿತ್ರಿಕವಾಗಿ ಎಂದಿಗೂ ಏಕ ಶಿಲಾರೂಪದ ಅಂತಹ ಒಂದೇ ಒಂದು ಹಿಂದುತ್ವ ಎಂಬುದಿರಲಿಲ್ಲ. ವೈದಿಕ ವಿಧಿ, ವಿಧಾನ, ತತ್ವಗಳನ್ನು ಜೈನರು ಹಾಗೂ ಬೌದ್ಧರು ವಿರೋಧಿಸಿದರು. ನಮ್ಮ ದರ್ಶನಗಳಲ್ಲೂ ಹಲವು ಭಿನ್ನ ನಿಲುವುಗಳು ಬೆಳೆದವು. ಇವುಗಳಲ್ಲದೆ ನಮ್ಮ ಬುಡಕಟ್ಟು ಜನಾಂಗ, ಪ್ರಾದೇಶಿಕ ವ್ಯತ್ಯಾಸಗಳಲ್ಲಿ ಕೂಡ ಹಲವು ಭಿನ್ನತೆಗಳು ಇದ್ದು ಅವೆಲ್ಲವೂ ಬಹುರೀತಿಯ ಸಾಂಸ್ಕೃತಿಕ ಬದುಕಿಗೆ ಪೂರಕವಾಗಿದ್ದವು. ಈ ರೀತಿ ಬಹುತ್ವದಲ್ಲಿರುವ ಭಾರತವನ್ನು ಹಿಂದುಗಳೆಲ್ಲಾ ಒಂದು ಎನ್ನುವ ಅಗತ್ಯಕ್ಕಾಗಿ ಏಕತ್ವವೆಂಬ ಹಿಂದುತ್ವದ ಒಳಗೆ ಅಳವಡಿಸುವುದರಿಂದ ನಮ್ಮ ಸಂಸ್ಕೃತಿಯ ಮೂಲ ಸತ್ವವನ್ನೇ ಕಳೆದುಕೊಂಡಂತೆ ಆಗುತ್ತದೆ.

೨) ಯಾವುದೇ ನ್ಯಾಯ ಶಾಸ್ತ್ರದಲ್ಲೂ ತಪ್ಪಿನ ಶಿಕ್ಷೆಗೆ ಅವಧಿ ಎಂಬುದಿರುತ್ತದೆ. ಅದು ಸಮಯದ ಪರಿಕಲ್ಪನೆ. ಹಣ ಹಿಂತಿರುಗಿ ಪಡೆಯಲು ಮೂರು ವರುಷ, ಜೀವಾವಧಿ ಶಿಕ್ಷೆ ಹದಿನಾಲ್ಕು ವರುಷ, ಸರಕಾರದ ಕೆಲವು ನಿಯಮಗಳಲ್ಲಿ ಭೂಮಿಗೆ ಸಂಬಂಧಿಸಿದಂತೆ, ಇಪ್ಪತ್ತು ಇನ್ನು ಕೆಲವು ಕಡೆ ನಲವತ್ತು ಹಾಗೂ ಅತಿ ಹೆಚ್ಚೆಂದರೆ ಅರವತ್ತು ವರುಷಗಳ ಕಾಲದ ಅವಧಿ ಇರುತ್ತದೆ. (ಧಾರ್ಮಿಕವಾದ ಪಾಪ ಕಲ್ಪನೆಗಳಲ್ಲಿ ಅಂತಹ ಪಾಪಗಳು ತೊಳೆದು ಮುಗಿಯುವವರೆಗೆ ಮಾತ್ರ ಪುನರ್ ಜನ್ಮಗಳು ಎಂಬ ಕಾಲದ ಅವಧಿ ಇರುತ್ತದೆ.) ಆದರೆ ಚರಿತ್ರೆಯಲ್ಲಿ ನಡೆದ ಅನ್ಯಾಯಗಳಿಗೆ ಶಿಕ್ಷೆ ಆಗಬೇಕು ಎಂದಾಗ ಕಾಲದ ಅವಧಿ ಸೂಚಿತವಾಗಿರುವುದಿಲ್ಲ. ಐನೂರು ವರುಷಗಳ ಹಿಂದೆ ಮಾಡಲಾಗಿದೆ ಎಂದು ಆರೋಪಿಸಲಾದ ದೇವಸ್ಥಾನ ಕೆಡವಿದ ಅಪರಾಧಕ್ಕೆ ಇಂದು ಯಾರಿಗೆ ಹೇಗೆ ಶಿಕ್ಷೆ ಸಾಧ್ಯ ಎಂಬ ನ್ಯಾಯ ಕಲ್ಪನೆಯ ತೊಡಕುಂಟಾಗುತ್ತದೆ. ಅದಕ್ಕಾಗಿ ಟಿಪ್ಪು ಸುಲ್ತಾನ ಅಥವಾ ಇನ್ಯಾರೋ ಹಿಂದೆ ಮಾಡಿರಬಹುದಾದ ತಪ್ಪು ಇಂದು ಅಂದರೆ ಸಮಕಾಲೀನವಾಗಿ ಮುಂದುವರಿದಿರುವ ಅನ್ಯಾಯ ಎಂಬ ರೀತಿ ವ್ಯಾಖ್ಯಾನಿಸುವುದು ಅಂತಹ ವಾದಕ್ಕೆ ಅನಿವಾರ್ಯವಾಗುತ್ತದೆ. ಹಿಂದೆ ನಡೆದ ತಪ್ಪು ಇಂದು ಕೂಡ ಉಳಿದಿರುವುದರಿಂದ (ಅಂದರೆ ಮಸೀದಿ ಹಾಗೆಯೇ ಉಳಿದಿರುವುದರಿಂದ) ಅದು ಇಂದೂ ಕೂಡ ಇರುವ ತಪ್ಪಾಗಿದೆ ಎಂಬುದು ವಾದದ ಭಾವ. ಆದರೆ ಯಾವುದೇ ನ್ಯಾಯ ಪರಿಕಲ್ಪನೆ ಇಂತಹ ವಿಚಾರಗಳನ್ನು ಒಪ್ಪುವುದಿಲ್ಲ.

೩) ಇಂದು ನಾವು ರಾಷ್ಟ್ರ ಎಂದು ಪರಿಭಾವಿಸುವ ಭಾರತ ದೇಶ ಪಶ್ಚಿಮದಲ್ಲಿ ಹುಟ್ಟಿ ಬೆಳೆದ ವೆಲ್‌ಫೇರ್ ಸ್ಟೇಟ್ ಪರಿಕಲ್ಪನೆಯನ್ನು ಆತುಕೊಂಡಿದೆ. ಈ ದೇಶದ ಅಸ್ತಿತ್ವವೂ ನಾವೇ ಸೃಷ್ಟಿಸಿ ಸ್ವೀಕರಿಸಿದ ಭಾರತದ ಸಂವಿಧಾನವನ್ನು ಅವಲಂಬಿಸಿದೆ. ಭಾರತದ ಪ್ರಜೆಗಳಿಗೆ ಧರ್ಮ ನಿರಪೇಕ್ಷವಾದ ಸಂವಿಧಾನ; ಸಮಾನತೆಯನ್ನು ಮೂಲಭೂತ ಹಕ್ಕು ಎಂಬುದಾಗಿ ನೀಡಿ ಮಾನ್ಯ ಮಾಡಿದೆ. ಆದುದರಿಂದ ಹುಟ್ಟಿನಿಂದ ಬಂದಿರುವ ಧರ್ಮದ ಆಧಾರದಲ್ಲಿ ಸೃಷ್ಟಿಸುವ ಅಸಮಾನತೆಯನ್ನು ಸಂವಿಧಾನವು ಮಾನ್ಯ ಮಾಡುವುದಿಲ್ಲ. ಮಾತ್ರವಲ್ಲದೆ ಅಸಮಾನತೆಯ ಯಾವುದೇ ಕಾರ್ಯ ಕಾನೂನಿನ ಆಡಳಿತಕ್ಕೆ ವಿರೋಧವಾಗುತ್ತದೆ.

೪) ನಮ್ಮ ಇಂದಿನ ಚಾರಿತ್ರಿಕ ಪರಿಕಲ್ಪನೆ ಪಶ್ಚಿಮದಿಂದ ಬಂದುದು. ಕೇವಲ ವಾಸ್ತವಕ್ಕೆ ಕಟ್ಟುಬಿದ್ದು ಚರಿತ್ರೆಯನ್ನು ನೋಡುವುದು ಭಾರತದ ಕ್ರಮವಲ್ಲ. ನಮ್ಮದು ನೆನಪಿನ ಕ್ರಮ. ಅದಕ್ಕಾಗಿ ನಮಗೆ ಚರಿತ್ರೆಯ ದಾಖಲೆಗಳಿಂದ ಹೆಚ್ಚು 'ಸ್ಮೃತಿ' ಮುಖ್ಯವಾಗುತ್ತದೆ. ಅದು ಕಥನದ ರೂಪದಲ್ಲಿ ಪ್ರವಹಿಸುತ್ತದೆ. ಒಂದಕ್ಕೆ ಇನ್ನೊಂದು ಸೇರಿಕೊಂಡು ಮತ್ತೇನೋ ಹುಟ್ಟುತ್ತದೆ. ನಮ್ಮಲ್ಲಿ ಮುಸ್ಲಿಂ ಧರ್ಮ ಅರಬಸ್ಥಾನದ ರೂಪದಲ್ಲಿ ಉಳಿದಿಲ್ಲ. ಭಾರತದ ಭಕ್ತಿ ಪಂಥದ ಪ್ರಭಾವ ಸೇರಿದ ಸೂಫಿ ಪಂಥ ಇಲ್ಲಿದೆ. ಕ್ರಿಶ್ಚಿಯನ್ ಧರ್ಮದಲ್ಲಿ ಹಿಂದೂ ರೀತಿ ರಿವಾಜುಗಳು ಸೇರುತ್ತವೆ. ಹಲವಾರು ಹಿಂದೂ ಕಟ್ಟಳೆಗಳಲ್ಲಿ ಮುಸ್ಲಿಂ ಸಹಬಾಳ್ವೆ ಬೆಳೆದಿದೆ. ಆದರೆ ಇಂದು ಭಾರತದಾದ್ಯಂತ ವ್ಯಾಖ್ಯಾನಿಸಲ್ಪಡುತ್ತಿರುವ ಚಾರಿತ್ರಿಕ ಕಲ್ಪನೆಯಲ್ಲಿ ಪಶ್ಚಿಮದ ಚರಿತ್ರೆಯಲ್ಲಿ ಜ್ಞಾನ ಶಾಖೆಯ ಕ್ರಮಬದ್ಧತೆ ಅಥವಾ ಅಧ್ಯಯನ ಶಿಸ್ತು ಅಥವಾ ಭಾರತದ ಸ್ಮೃತಿ ಕಲ್ಪನೆಯ ಸಾಂಸ್ಕೃತಿಕ ನೆಲೆಗಳು – ಇವುಗಳಲ್ಲಿ ಯಾವೊಂದನ್ನೂ ಕ್ರಮಬದ್ಧವಾಗಿ ಅನುಸರಿಸುತ್ತಿಲ್ಲ. ರಾಜಕೀಯ ಪ್ರೇರಿತ ಧರ್ಮ ಕಲ್ಪನೆಯ ಅಂಗವಾಗಿ ಪ್ರಪಗಾಂಡ ಎನ್ನಬಹುದಾದ ಪ್ರಚಾರದ ತಂತ್ರಕ್ಕಾಗಿ ಚರಿತ್ರೆಯನ್ನು ತಿರುಚಿ ಬಳಸಿಕೊಳ್ಳಲಾಗುತ್ತಿದೆ. ಅಂದರೆ, ಮಾರುಕಟ್ಟೆಯ ಪರಿಭಾಷೆಯಲ್ಲಿ ಹೇಳುವುದಾದರೆ, ಚುನಾವಣೆಯ ಓಟುಗಳನ್ನು ಕೊಳ್ಳಲು ಬಳಸುವ ಭಾವನಾತ್ಮಕ ಬಂಡವಾಳವೇ – ಈ ಹೊಸ ಚಾರಿತ್ರಿಕ ಕಲ್ಪನೆಯಾಗಿದೆ. ಅವುಗಳು ಬಹುತೇಕ ಸುಳ್ಳಿನ ಮೇಲೆ ಅಥವಾ ಅರ್ಧ ಸತ್ಯದ ಮೇಲೆ ಅಥವಾ ಸತ್ಯವೆಂದು ಬಿಂಬಿಸಲಾಗುತ್ತಿರುವ ಕಾಲ್ಪನಿಕ ಸತ್ಯದ ಮೇಲೆ ನಿಂತಿವೆ.

ರಾಷ್ಟ್ರಮಟ್ಟದಲ್ಲಿ ನಡೆಯುತ್ತಿರುವ ಇಂತಹ ಒಂದು ಪ್ರಪಗಾಂಡದ ಪ್ರಭಾವ ಕರ್ನಾಟಕ ರಾಜ್ಯದ ಮತೀಯ ಸನ್ನಿವೇಶದ ಮೇಲೆ ಪ್ರಭಾವ ಬೀರಿದೆ. ರಾಷ್ಟ್ರದ ಈ ದೊಡ್ಡ ಚಿತ್ರದ ರಾಜ್ಯ ರೂಪವೇ ಕರ್ನಾಟಕದ ಮತೀಯ ಸನ್ನಿವೇಶಗಳ ಇಂದಿನ ಚಿತ್ರ. ಯೋಗಿ ಆದಿತ್ಯನಾಥ ಉತ್ತರ ಪ್ರದೇಶದಿಂದ ಬಂದು ಕರ್ನಾಟಕದ ಹುಬ್ಬಳ್ಳಿಯಲ್ಲಿ ಮಾತನಾಡುತ್ತಾ, 'ಕರ್ನಾಟಕದಲ್ಲಿ ಟಿಪ್ಪೂ ಪೂಜೆ ಬೇಡ. ಇಲ್ಲಿ ಹನುಮನ ಪೂಜೆ ಆಗಬೇಕು. ಹನುಮನುದಿಸಿದ ನಾಡು ಈ ಕರ್ನಾಟಕ. ಇಲ್ಲಿಗೆ ಬೇಕಾದ್ದು ಹನುಮ ಜಯಂತಿ. ಟಿಪ್ಪೂ ಜಯಂತಿ ಅಲ್ಲ. ನಾವು ಹನುಮನ ಪೂಜೆ ಮಾಡಬೇಕಾಗಿದೆ. ಆದರೆ ರಾಜ್ಯದಲ್ಲಿ ಟಿಪ್ಪೂ ಪೂಜೆ ನಡೆಯುತ್ತಿದೆ' ಎಂದರು.

ಎಲ್ಲಿ ಟಿಪ್ಪುವಿನ ಪೂಜೆ ನಡೆಯುತ್ತಿದೆ? ಟಿಪ್ಪು ಜಯಂತಿಯನ್ನು ಟಿಪ್ಪೂ ಪೂಜೆಗೆ ಸಮೀಕರಿಸಿ ಅದನ್ನು ಹನುಮನ ಪೂಜೆಗೆ ಎದುರಾಗಿ ಇರಿಸಿ ಭಾವನೆಗಳನ್ನು ಉದ್ರೇಕಿಸುವಾಗ, ಟಿಪ್ಪೂ ಜಯಂತಿ ಎಂದರೆ ಟಿಪ್ಪೂವಿನ ಪೂಜೆ ಹೇಗೆ ಆಗುತ್ತದೆ ಎಂಬ ಪ್ರಶ್ನೆಯನ್ನು ಯಾರೂ ಕೇಳುವುದಿಲ್ಲ. ಇದು ಸತ್ಯದ ಮುಖಕ್ಕೆ ಹೊಡೆದು ಮಿಥ್ಯೆಯನ್ನು ಮೆರೆಯಿಸುವ ಪ್ರಪಗಾಂಡಾದ ಕೆಲಸವಾಗುತ್ತದೆ. ಭಾಷೆಯ ಅರ್ಥ ಸಾಧ್ಯತೆಗಳನ್ನು ಅಥವಾ ರೂಪಕ ಶಕ್ತಿಯನ್ನು ಉದ್ದೇಶಪೂರ್ವಕವಾಗಿ ತಿರುಚಿದಾಗ ಅರ್ಥ ವಿರೂಪಗಳು ಉಂಟಾಗುತ್ತವೆ. ಅಂತಹ ವಿರೂಪಗಳನ್ನು ಸಹಜರೂಪಗಳೆಂದು ಪ್ರಚಾರ ಮಾಡುವುದು ಸೂಕ್ಷ್ಮವಾದ ಭಾಷಾ ದುರುಪಯೋಗವಾಗುತ್ತದೆ.

ಮರೆಮಾಚುವುದು ಮತೀಯ ಪ್ರಚೋದನೆಯ ಒಂದು ತಂತ್ರವಾಗಿದೆ. ಹಿಂದೂಗಳು ಹಾಗೂ ಮುಸ್ಲಿಮರು ಒಂದಾಗಿದ್ದ ಉದಾರ ಕ್ಷೇತ್ರಗಳನ್ನು ಕಡೆಗಣಿಸುವುದು ಕೂಡ ಹೀಗೆ ಮರೆಮಾಚುವ ಕೆಲಸದ ಒಂದು ಭಾಗವೇ ಆಗಿದೆ. ಇಂತಹ ಒಂದು ಭಾವನಾತ್ಮಕ ಚರ್ಚೆಯನ್ನು ಹುಟ್ಟು ಹಾಕಿದಾಗ ಅದಕ್ಕೆ ಉತ್ತರಿಸುವ ಇತರ ನಾಯಕರಿಗೂ ವಿವೇಚನೆಯನ್ನು ಬೆಳೆಸುವ ಮಾರ್ಗವನ್ನು ಆಯ್ಕೆ ಮಾಡಿಕೊಳ್ಳಲು ಅವಕಾಶವಿರುವುದಿಲ್ಲ. ಟಿಪ್ಪೂ ಜಯಂತಿಯನ್ನು ಟಿಪ್ಪು ಪೂಜೆಗೆ ಹುಬ್ಬಳ್ಳಿಯಲ್ಲಿ ಸಮೀಕರಿಸಿದ ಉತ್ತರ ಪ್ರದೇಶದ ಮುಖ್ಯಮಂತ್ರಿ ಯೋಗಿ ಆದಿತ್ಯನಾಥರಿಗೆ ಉತ್ತರ ನೀಡಿದ ಮುಖ್ಯಮಂತ್ರಿ ಸಿದ್ದರಾಮಯ್ಯನವರು ಹೇಳಿದ್ದು, ನಾವು ಟಿಪ್ಪು ಜಯಂತಿ ಮಾತ್ರವಲ್ಲ ಒಟ್ಟು ಇಪ್ಪತ್ತಾರು ಜಯಂತಿಗಳನ್ನು ಪ್ರಾರಂಭಿಸಿದ್ದೇವೆ ಎಂಬುದಾಗಿ. ಟಿಪ್ಪು ಜಯಂತಿ ಜೊತೆ, ಅಂಬೇಡ್ಕರ್, ಬಸವಣ್ಣ, ಕನಕದಾಸ, ವಾಲ್ಮೀಕಿ, ಶಿವಾಜಿ, ಹರಳಯ್ಯ, ಕೆಂಪೇಗೌಡ, ಮಹಾವೀರ, ಸೇರಿದಂತೆ ಒಟ್ಟು ೨೬ ಜಯಂತಿಗಳನ್ನು ಪ್ರಾರಂಭಿಸಿದ್ದೇವೆ. ಅವರ ಜೊತೆ ಸಮಾಜ ಸುಧಾರಕ ಬಸವಣ್ಣನವರ ಭಾವಚಿತ್ರವನ್ನು ಎಲ್ಲಾ ಸರ್ಕಾರಿ ಕಛೇರಿಗಳಲ್ಲಿ ಅಳವಡಿಸಲು ಆದೇಶ ಹೊರಡಿಸಿದ್ದೇನೆ ಎಂಬುದನ್ನು ಸಿದ್ದರಾಮಯ್ಯ ನೆನಪಿಸಿದರು.

ಅಂದರೆ ಮರೆಮಾಚಿ ಧಾರ್ಮಿಕ ಭಾವನೆಗಳನ್ನು ಕೆರಳಿಸಲು ಪ್ರಯತ್ನಿಸಿದಾಗ ಎದುರಾಳಿಗಳು ಇನ್ಯಾವುದನ್ನೋ ನೆಪಮಾಡಿ ಮತ್ತೇನನ್ನೋ ಮರೆಮಾಚುತ್ತಾರೆ. ಅಷ್ಟೇ ಅಲ್ಲ, ಕರ್ನಾಟಕದಲ್ಲಿ ಮತೀಯ ಅಸಹನೆಯನ್ನು ಎದುರಿಸಲು ಮರೆಮಾಚಿದ ಜಾತೀಯ ಭಾವನೆಗಳನ್ನು ಪ್ರೇರೇಪಿಸಲಾಗುತ್ತದೆ. ಸಮುದಾಯದ ಅಸ್ಮಿತೆಯನ್ನು ಜಾತಿಯ ನೆಲೆಗಳಲ್ಲಿ ಕಟ್ಟಿಕೊಡಲು ಪ್ರಯತ್ನಿಸಿದಾಗ ಅದಕ್ಕೆ ಬೇಕಾದ ಸಾಂಸ್ಕೃತಿಕ ಆವರಣವನ್ನು ಹೊಸದಾಗಿ ಕಟ್ಟಲಾಗುತ್ತದೆ. ಕರ್ನಾಟಕದಲ್ಲಿ ಇಂದು ಸರಕಾರಿ ಸಂಸ್ಥೆಗಳು ಪುರಂದರದಾಸರ ಪ್ರಸ್ತಾಪ ಮಾಡದೆ ದಾಸರ ಮೆರವಣಿಗೆಯಲ್ಲಿ ಕನಕದಾಸರನ್ನು ಮಾತ್ರ ಮುಂದೆ ನಿಲ್ಲಿಸುವ ಅಗತ್ಯ ಬಂದುದೂ ಇಂತಹ ರಾಜಕೀಯ ಪ್ರೇರಣೆಗಳಿಂದಲೇ.

ಹಿಂದೂಗಳಿಗಿಂತ ಮುಸ್ಲಿಮರ ಜನಸಂಖ್ಯೆ ಹೆಚ್ಚು ವೇಗವಾಗಿ ವೃದ್ಧಿಸುತ್ತಿದೆ ಎಂಬ ಒಂದು ಪ್ರಚಾರ ನಡೆಯುತ್ತಿದೆ. ಆದರೆ ಜನಸಂಖ್ಯಾ ಗಣತಿಯಲ್ಲಿ ಈ ಆರೋಪಕ್ಕೆ ಹುರುಳಿಲ್ಲ. ೨೦೦೧ ಹಾಗೂ ೨೦೧೧ ಎರಡೂ ಜನಗಣತಿಗಳಲ್ಲಿ ದೇಶದ ಮುಸ್ಲಿಮರ ಸಂಖ್ಯೆ ಒಟ್ಟು ಜನ ಸಂಖ್ಯೆಯ ೧೩.೪% ಇದೆ. ಹತ್ತು

## ಮಾಗಿ ಬಂತು ಮಾಗಿ



(೧)
**ಮಾ**ಗಿ ಬಂತು ಇಗೋ ಸಾಗಿ ಬಂತು,
ಬಿರು ಬಿಸಿಲಿಗೆ ಬೇಸತ್ತು ಬಂತು,
ಸುರಿ ಸುರಿವ ಮಳೆಗೆ ನಡುಗಿ ನಿಂತು,
ಕಷ್ಟದ ಬೆವರ ಸುರಿಸಿ ಮಾಗಿ ಬಂತು
ಮಾಗಿ ಬಂತು, ಮಾಗಿ ಬಂತು, ಬಂತು ಮಾಗಿ

(೨)
ಹೊಲವು ತುಂಬಿದೆ ತೂಗುತ್ತತೆನೆ,
ಹಸಿದ ಹಕ್ಕಿ ಹಾರುತಿವೆ ಇದುವೆ ಅವರ ಮನೆ,
ಹೆಪ್ಪುಗಟ್ಟಿ ಹಸಿರು ಎಲ್ಲೆಲ್ಲೂ ಮೊಸರು ಕೆನೆ,
ನೋಡಿ ನಗೆಯ ಸೂರಾಡಿದವ ಅವನು ರೈತನವನೆ
ಮಾಗಿ ಬಂತು, ಮಾಗಿ ಬಂತು, ಬಂತು ಮಾಗಿ

(೩)
ಬಂತು ಪೇಟೆಗೆಗೋ ಎಲ್ಲ ಹಬ್ಬ ಕುಣಿಕುಣಿದು
ಮೂಟೆ ಮೂಟೆಗಳು ಭತ್ತ ಜೋಳವ ಹೊತ್ತು
ಜಲ್ಲಿ ಜಲ್ಲಿ ಹಣ್ಣು, ತರಕಾರಿಯ ಸಾಲು,
ದುಡಿದ ರೈತನೊಡಲಿಗೆ ಬರೆಕೊಟ್ಟು ನಿಂತು
ಮಾಗಿ ಬಂತು, ಮಾಗಿ ಬಂತು, ಬಂತು ಮಾಗಿ

(೪)
ಕಲಿವ ಮಕ್ಕಳೇಳದ ಬೆಳಗು ಬಂತು
ಬಂತು ಪರೀಕ್ಷಾ ಪೀಡೆ, ತಂತು ತಲೆನೋವು
ಸುರಿಸುತ್ತ ಬಂತು ಅಪ್ಪ ಅವ್ವನ ಬೈಗುಳದ ಮಳೆ
ಬರಿದಾದ ಆಟದ ಬಯಲು ಭಣಗುಟ್ಟಿ ನಿಂತು
ಮಾಗಿ ಬಂತು, ಮಾಗಿ ಬಂತು, ಬಂತು ಮಾಗಿ.....

(೫)
ಮಾಗಲಾಗದೆ ಮನಸ್ಸು ಆಗುವನೆ ಮನುಷ್ಯ ?
ಹೋಗದೆ ಕಷ್ಟದ ಕಾಡು ಕಟ್ಟಬಹುದೆ ಭವಿಷ್ಯ ?
ತನ್ನ ನೋವುಗಳ ನುಂಗಿ ಪರರಿಗಾದವನು ಮಾಗಿ
ಆಗುವನವನೇ ಈ ನೆಲಕೆ ಯೋಗಿ !!
ಮಾಗಿ ಬಂತು, ಮಾಗಿ ಬಂತು, ಬಂತು ಮಾಗಿ

**ಡಾ|| ಮಾಲತಿ ಪಟ್ಟಣಶೆಟ್ಟಿ**
ನಂ. ೦೩, "ಗಣೇಶ ಅಪಾರ್ಟ್‌ಮೆಂಟ್ಸ್", ರಜತಗಿರಿ
ಧಾರವಾಡ ಜಿಲ್ಲೆ – ೫೮೦ ೦೦೪

ವರುಷಗಳಲ್ಲಿ ಮುಸ್ಲಿಮರ ಶೇಕಡಾವಾರು ಸಂಖ್ಯೆ ಹಿಂದೂಗಳಿಗಿಂತ ಹೆಚ್ಚು ಆಗಲಿಲ್ಲ. ಕರ್ನಾಟಕದಲ್ಲಿ ಹಿಂದೂಗಳ ಸಂಖ್ಯೆ ೮೪% ಹಾಗೂ ಮುಸ್ಲಿಮರ ಸಂಖ್ಯೆ ೧೨.೯೨% ಇದೆ. ಕರ್ನಾಟಕದಲ್ಲಿ ಕ್ರಿಶ್ಚಿಯನರು ೧.೮೭%, ಬೌದ್ಧರು ೦.೧೬%, ಜೈನರು ೦.೭೨% ಹಾಗೂ ಸಿಖ್ಖರು ೦.೦೫% ಇದ್ದಾರೆ. ಇತರ ಧರ್ಮದವರು ೦.೦೨% ಇದ್ದರೆ ಧರ್ಮದ ಹೆಸರು ಹೇಳದವರು ೦.೨೭% ಇದ್ದಾರೆ.

೨೦೧೧ರ ಜನಗಣತಿಯಲ್ಲಿ ಭಾರತದ ಒಟ್ಟು ಜನಸಂಖ್ಯೆ ೧೦೨ ಕೋಟಿಗೂ ಮಿಕ್ಕಿದೆ. (ಸೆನ್‌ಸಸ್ ಸಂಖ್ಯೆ : ೧೦೨,೮೬,೧೦,೩೨೮) ಇವರಲ್ಲಿ ಹಿಂದೂಗಳು ೮೦.೫%, ಮುಸ್ಲಿಮರು ೧೩.೪% ಹಾಗೂ ಕ್ರಿಶ್ಚಿಯನರು ೨.೩%, ಕರ್ನಾಟಕದಲ್ಲಿ ಮುಸ್ಲಿಮರು ಹಾಗೂ ಕ್ರಿಶ್ಚಿಯನರು ಭಾರತದ ಸರಾಸರಿ ಸಂಖ್ಯೆಗಿಂತ ಕಡಿಮೆ ಇರುವುದರಿಂದ ಇಲ್ಲಿ ಅಲ್ಪ ಸಂಖ್ಯಾತರು ಸಂಖ್ಯಾ ಬೆಳವಣಿಗೆಯನ್ನು ವಿಪರೀತ ಸಾಧಿಸಿಕೊಳ್ಳಲು ಸಾಧ್ಯವಿಲ್ಲ. ನನ್ನ ಪರಿಚಯದ ವಿದ್ಯಾರ್ಹತೆಯಿಂದ ಉದ್ಯೋಗಕ್ಕೆ ಸೇರಿದ ಯಾವ ಮುಸ್ಲಿಮರಿಗೂ ಎರಡು ಅಥವಾ ಮೂರಕ್ಕಿಂತ ಹೆಚ್ಚು ಮಕ್ಕಳಿಲ್ಲ. ವಿದ್ಯಾರ್ಹತೆಯಿಂದ ಉದ್ಯೋಗಕ್ಕೆ ಸೇರಿದ ಹೆಚ್ಚಿನ ಹಿಂದೂ ಅಥವಾ ಕ್ರಿಶ್ಚಿಯನ್ ಪರಿಚಿತರಿಗೂ ಎರಡು ಅಥವಾ ಮೂರರಿಂದ ಹೆಚ್ಚಿನ ಮಕ್ಕಳು ಇಲ್ಲ. ಇದರ ಅರ್ಥ ಮಕ್ಕಳ ಸಂಖ್ಯೆಗೂ ಧರ್ಮಕ್ಕೂ ಸಂಬಂಧವಿಲ್ಲ. ಅದರ ಹಿಂದೆ ಜೀವನ ವಿಧಾನ ಹಾಗೂ ಆರ್ಥಿಕತೆಯ ಒಂದು ಸೂತ್ರ ಇರಬಹುದೇ ಹೊರತು ಧಾರ್ಮಿಕವಾದ ಕಾರಣಗಳಿಲ್ಲವೆಂಬುದು ಸ್ಪಷ್ಟವಾಗುತ್ತದೆ.

ಈ ತನಕದ ವಿವರಣೆಯ ಉದ್ದೇಶ ಮತೀಯ ದ್ವೇಷವನ್ನು ಬಿತ್ತಿ ಬೆಳೆಸುವ ಪ್ರಚಾರ ಅಥವಾ ಪ್ರಪಗಾಂಡ ಸತ್ಯವನ್ನು ಮರೆಮಾಚುವ, ತಪ್ಪಾಗಿ ವ್ಯಾಖ್ಯಾನಿಸುವ ವಿನ್ಯಾಸ ಒಂದನ್ನು ಹೇಗೆ ಕ್ರಮಬದ್ಧವಾಗಿ ಅನುಸರಿಸುತ್ತಿದೆ ಎಂಬುದನ್ನು ಸೂಚಿಸುವುದಾಗಿದೆ. ಆದರೂ ಕರ್ನಾಟಕದಲ್ಲಿ ಮತೀಯ ಭಾವನೆಗಳನ್ನು ಕೆರಳಿಸಬಲ್ಲ ಶಕ್ತಿಗೆ ಎದುರಾಗಿ ವೈಚಾರಿಕ ಚಿಂತನೆಯನ್ನು ಸಮಂಜಸವಾಗಿ ಜನ ಮಾನಸದಲ್ಲಿ ಬೆಳೆಸುವಲ್ಲಿ ಎಡಪಂಥೀಯರೂ ಸೇರಿ ಹಲವಾರು ವೈಚಾರಿಕ ಚಿಂತಕರು ಯಶಸ್ವಿ ಆಗಲಿಲ್ಲ. ಈ ಸಂದರ್ಭದಲ್ಲಿ ಮತೀಯ ಭಾವನೆಗಳಿಗೆ ಎದುರಾಗಿ ಅಲ್ಪಸಂಖ್ಯಾತರು, ಹಿಂದುಳಿದವರು ಹಾಗೂ ದಲಿತರ ಸಾಮಾಜಿಕ ನಿಲುವುಗಳನ್ನು ಇಡಲಾಗುತ್ತಿದೆ. ಇದು ಲೋಹಿಯಾ ವಾದ, ಎಡಪಂಥೀಯ ಆಯ್ದ ವಿಚಾರಗಳು ಹಾಗೂ ದೇವರಾಜ ಅರಸರ ಸಾಂದರ್ಭಿಕ ತಂತ್ರಗಾರಿಕೆಗಳನ್ನು ಸಂಯುಕ್ತಗೊಳಿಸಲು ಪ್ರಯತ್ನಿಸುವ ಒಂದು ಪ್ರಯತ್ನ. ಇದು ತತ್ಕಾಲೀನವಾದ ಒಂದು ತಂತ್ರಗಾರಿಕೆ ಆದೀತೇ ಹೊರತು ದೀರ್ಘಕಾಲದ ತಾತ್ವಿಕ ತಳಹದಿಯನ್ನು ಸ್ಥಾಪಿಸಲು ಬೇಕಾದ ತಾತ್ವಿಕ ತಳಪಾಯವನ್ನು ಹೊಂದಿಲ್ಲ.

ಕನ್ನಡ ಕರಾವಳಿಯಲ್ಲಿ ನಿರಂತರವಾಗಿ ಇದ್ದ ಮತೀಯ ಸೌಹಾರ್ದ ಸಂದರ್ಭಗಳನ್ನು ಸತತವಾಗಿ ಕದಡಲಾಗುತ್ತಿದೆ. ಮಂಗಳೂರು, ಭಟ್ಕಳ, ಬಂಟ್ವಾಳ ಮೊದಲಾದ ಹಲವು ಉದಾಹರಣೆಗಳನ್ನು ನೀಡಬಹುದು. ಮಂಗಳೂರು ಪ್ರಾಂತ್ಯ ಭೂಮಸೂದೆಯಲ್ಲಿ ಅತ್ಯಂತ ಹೆಚ್ಚು ಲಾಭ ಪಡೆದ ಪ್ರದೇಶ. ೧೯೭೦-೮೫ರಲ್ಲಿ ಭೂಮಾಲಕತ್ವದ ಪ್ರಶ್ನೆಯಲ್ಲಿ ಎಡಪಂಥದ ಕಡೆಗೆ ಹಾಗೂ ವೈಚಾರಿಕ ಚಿಂತನೆಗೆ ಆಕರ್ಷಿತವಾದ ಪ್ರಗತಿಪರ ಜನ ಸಮುದಾಯವೊಂದು ಬೆಳೆಯಿತು. ಶ್ರೀಮತಿ ಇಂದಿರಾ ಗಾಂಧಿ ಅವರನ್ನು ನಾಯಕಿ ಎಂದು ಒಪ್ಪಿಕೊಂಡ ಆ ಸಂದರ್ಭದಲ್ಲಿ ಕಾಂಗ್ರೆಸ್ ಜೊತೆ ಇತರ ಹಲವಾರು ಪ್ರಗತಿಪರರೂ ಕೈ ಜೋಡಿಸಿದ್ದರು. ಅದೇ ವ್ಯಕ್ತಿಗಳ ಮುಂದಿನ ಪೀಳಿಗೆಯಲ್ಲಿ ಹೆಚ್ಚಿನವರು ಮತೀಯ ಸಂಘಟನೆಗಳಲ್ಲಿ ಕ್ರಿಯಾಶೀಲರಾಗಲು ಕಾರಣವೇನು, ಎಂಬುದನ್ನು ಈಗ ನಾವು ತಲಸ್ಪರ್ಶಿಯಾಗಿ ತಿಳಿಯ ಬೇಕಾದ ಕಾಲ ಬಂದಿದೆ. ಕರಾವಳಿಯ ಮೊಗವೀರರಲ್ಲಿ ವ್ಯಾಯಾಮ ಶಾಲೆಗಳು ಬಹು ಜನಪ್ರಿಯವಾಗಿದ್ದವು. ಈಗ ಅಂತಹ ಅನೇಕ ಜಾಗಗಳಲ್ಲಿ ಭಜನಾ ಮಂದಿರಗಳು ಜನಪ್ರಿಯವಾಗಿವೆ.




ಸ್ಥಳೀಯ ದೈವಾಚರಣೆಗಳಲ್ಲಿ ಇತರ (ವೈದಿಕ ಎನ್ನಬಹುದಾದ) ಪೂಜಾ ಕ್ರಮಗಳು ಹೆಚ್ಚಾಗಿವೆ. ಉದಾಹರಣೆಗೆ ಉಳ್ಳಾಲ್ತಿ ಎಂಬುದು ಭೂತಾರಾಧನೆಯಲ್ಲಿ ಕಾರಣಿಕ ಇರುವ ಹೆಣ್ಣು ದೈವ. ಭೂತಾರಾಧನೆಯ ತುಳು ಸಂಸ್ಕೃತಿಯ ಹಲವು ಪೂಜಾಕ್ರಮಗಳು ಅಲ್ಲಿದ್ದುದನ್ನು ನಾನು ಬಾಲ್ಯದಲ್ಲಿ ನೋಡಿದ್ದೇನೆ. ಆದರೆ ಈಚೆಗೆ ದೇವಸ್ಥಾನಗಳಲ್ಲಿ ದೇವಿ ಪೂಜಾಕ್ರಮದಲ್ಲಿ ಸೇರಿರುವ ಸಂಸ್ಕೃತ ಮಂತ್ರಗಳುಳ್ಳ ಕುಂಕುಮಾರ್ಚನೆ ಪೂಜಾ ವಿಧಾನ ದೈವ ಸ್ಥಾನದ ಉಳ್ಳಾಲ್ತಿ ಭೂತಕ್ಕೆ ನಡೆಯತೊಡಗಿದೆ. ಭೂತಗಳು ಆರಾಧನೆಗೊಳ್ಳುವ ದೈವಸ್ಥಾನಗಳು ಹೊಸದಾಗಿ ದೇವದೇವತೆಗಳು ಪೂಜೆಗೊಳ್ಳುವ ದೇವಸ್ಥಾನಗಳ ಆಚರಣೆಯನ್ನು ಅನುಸರಿಸತೊಡಗಿವೆ. ಇದು ಎಂ. ಎನ್. ಶ್ರೀನಿವಾಸ್ ಅವರು ಪ್ರಸ್ತಾಪಿಸಿದ ಕೇವಲ ಸಾಂಸ್ಕೃತೀಕರಣದ ಕ್ರಮವಲ್ಲ. ಈ ಸ್ವೀಕಾರದ ಹಿಂದೆ ಹಿಂದೂಗಳೆಲ್ಲ ಒಂದು ಎಂಬ ವಿಚಾರದ ಪರೋಕ್ಷ ಪ್ರಭಾವ ಇದೆ. ಆದರೆ ದೈವಾರಾಧನೆ ಬದಲಾದ ಕ್ರಮಕ್ಕೆ ಸಮಾನವಾದ ಪ್ರಮಾಣದಲ್ಲಿ ಸಮಾಜದಲ್ಲಿ ಅಂತರ್‌ಜಾತೀಯ ವಿವಾಹಗಳ ಮೂಲಕ ಜಾತಿಗಳು ಒಂದಾಗುವ ಕ್ರಿಯೆ ಹೆಚ್ಚು ಆಗುತ್ತಿಲ್ಲ ಎಂಬುದನ್ನು ಅಂಕೆ ಸಂಖ್ಯೆಗಳು ತೋರಿಸಿಕೊಡುತ್ತಿವೆ. ಇದು ಅಂತರಂಗದಲ್ಲಿ ಉಳಿದಿರುವ ಜಾತಿಯ ಬಣ್ಣಕ್ಕೊಂದು ಉದಾಹರಣೆ ಎಂದು ಕೂಡ ನಾವು ಗುರುತಿಸಬಹುದು.

ಮತೀಯ ಸನ್ನಿವೇಶಗಳು ಸಮಾಜದಲ್ಲಿ ಅಥವಾ ಆಡಳಿತದಲ್ಲಿ ಕೇವಲ ಧಾರ್ಮಿಕ ಉದ್ದೇಶ ಒಂದನ್ನೇ ಹೊಂದಿರುವುದಿಲ್ಲ ಎಂಬುದನ್ನು ನಾವು ಮರೆಯುವಂತಿಲ್ಲ. ಅದಕ್ಕೆ ಅನೇಕ ಸಲ ಸಾಂದರ್ಭಿಕ ರಾಜಕೀಯ ಕಾರಣಗಳು ಇರುತ್ತವೆ. ಚಾರಿತ್ರಿಕ ಉದಾಹರಣೆಯಾಗಿ ಶೃಂಗೇರಿ ಶಾರದಾ ಪೀಠದ ಪರವಾಗಿ ಟಿಪ್ಪು ಸುಲ್ತಾನ ಮಾಡಿದ ಕೆಲಸ. ಅದಕ್ಕೆ ಧಾರ್ಮಿಕ ಕಾರಣಗಳ ಜೊತೆ ಶೃಂಗೇರಿಯನ್ನು ಆಕ್ರಮಿಸಲು ಪ್ರಯತ್ನಿಸುತ್ತಿದ್ದ ನೆರೆಯ ಶತ್ರುಗಳಾದ ಮರಾಠರನ್ನು ತಡೆಯುವ ಉದ್ದೇಶವೂ ಇತ್ತು.

ರಾಜಕೀಯ ನೆಲೆಯಲ್ಲಿ ಮತೀಯ ಸಂದರ್ಭಗಳು ಕಪ್ಪು-ಬಿಳುಪು ವಿಂಗಡನೆ ಹೊಂದಿರುವುದಿಲ್ಲ. ಪರಮ ಆಸ್ತಿಕರಾದ ಮಾನವ ಪ್ರೀತಿಯ ಮಾಸ್ತಿ ವೆಂಕಟೇಶ ಅಯ್ಯಂಗಾರ್ ಅವರು ತಮ್ಮ ಒಂದು ಕತೆಯಲ್ಲಿ (ಬಿಳಿಗಿರಿಯ ರಂಗ) ಬರೆದಿರುವ ಈ ಕೆಳಗಿನ ಮಾತುಗಳು ಮನನಯೋಗ್ಯ. ಕಂದಾಯ ವಿಭಾಗದಲ್ಲಿ ಹಿರಿಯ ಅಧಿಕಾರಿಯಾಗಿ ಮೈಸೂರು ಪ್ರಾಂತ್ಯದ ನೂರಾರು ಹಳ್ಳಿಗಳಿಗೆ ಮಾಸ್ತಿಯವರು ಭೇಟಿ ನೀಡಿ ಜನ ಜೀವನವನ್ನು ಹತ್ತಿರದಿಂದ ಕಂಡವರು ಎಂಬುದನ್ನು ನೆನಪಿಸಿಕೊಂಡು ಈ ಕೆಳಗಿನ ಮಾಸ್ತಿ ವಾಕ್ಯಗಳನ್ನು ನಾವು ಓದಬೇಕು.

"....ಬೆಟ್ಟದ ಮೇಲೆ ಶ್ರೀನಿವಾಸನ ದೇವಾಲಯವಿದೆ. ಇವನೇ ಬಿಳಿಗಿರಿರಂಗ. ಟಿಪ್ಪು ಸುಲ್ತಾನ ತನ್ನ ಅಧಿಕಾರಿಗಳಿಗೆ 'ಯಾವ ಊರಿನಲ್ಲೇ ಆಗಲಿ ರಂಗನಾಥ ದೇವಾಲಯಕ್ಕೆ ತಂಟೆ ಮಾಡಬೇಡಿ' ಎಂದು ಹೇಳಿದ್ದನಂತೆ. ಮುಸ್ಲಿಂ ಅಧಿಕಾರಿ ಬಂದು ಇಲ್ಲಿ ಯಾವ ದೇವರು ಎಂದು ಕೇಳಿದಾಗ, ರಂಗನಾಥ ಎಂದರೆ ದೇವಾಲಯ ಉಳಿಯಿತು; ಶ್ರೀನಿವಾಸ ಎಂದರೆ ಉಳಿಯುವುದೋ ಇಲ್ಲವೋ ಸಂದೇಹ. 'ರಂಗನಿಗೇ ಶ್ರೀನಿವಾಸ ಎಂದು ಇನ್ನೊಂದು ಹೆಸರು, ಆದ್ದರಿಂದ ಇದೂ ರಂಗನಾಥನ ದೇವಾಲಯವೇ' ಎಂದು ವಿವರಿಸಿ ಹೇಳಬಹುದು. ಅಧಿಕಾರಿ ಒಪ್ಪಿದರೆ ಸಮ; 'ಸುಳ್ಳು ಹೇಳುತ್ತಿದ್ದೀರಿ' ಎಂದರೆ ಸಮರ್ಥನೆ ಯಾರು ಹೇಳಬೇಕು? ಶ್ರೀನಿವಾಸ ರಂಗನಾಥ ಎರಡೂ ಒಂದೇ ಆಗಿರುವಾಗ, ಶ್ರೀನಿವಾಸ ಎಂದು ಹೇಳಿ ಚರ್ಚೆಯಲ್ಲಿ ತೊಡಕಿಕೊಳ್ಳುವುದಕ್ಕಿಂತ ರಂಗನಾಥ ಎಂದು ಹೇಳಿ ಅದರಿಂದ ತಪ್ಪಿಸಿಕೊಳ್ಳುವುದು ಸುಖ ಎಂದು ಜನರಿಗೆ ಕಂಡಿತು. ಆದ್ದರಿಂದಲೇ ಬಿಳಿಗಿರಿ ಮಾಗಡಿ ದೇವಾಲಯಗಳ ಶ್ರೀನಿವಾಸರೂ ಶೀಬಿಯ ನರಸಿಂಹನೂ

ರಂಗನೆಂದು ಪ್ರಸಿದ್ಧರಾದರು." (ಬಿಳಿಗಿರಿ ರಂಗ ಎಂಬ ಮಾಸ್ತಿ ವೆಂಕಟೇಶ ಅಯ್ಯಂಗಾರ್ ಅವರ ಕತೆಯಿಂದ)

ಮತೀಯ ಸನ್ನಿವೇಶ ಎಂಬುದು ಕಪ್ಪುಬಿಳುಪು ಅಲ್ಲದ ಸಂಕೀರ್ಣವಾದೊಂದು ಸ್ಥಿತಿ, ಎಂಬುದು ಮೇಲಿನ ಮಾತುಗಳಿಂದ ಸ್ಪಷ್ಟವಾಗುತ್ತದೆ. ರಂಗನಾಥ ದೇವಾಲಯಗಳಿಗೆ ತೊಂದರೆ ಆಗಬಾರದು ಎಂದು ಟಿಪ್ಪು ಹೇಳುವುದರ ಹಿಂದಿನ ಪ್ರೇರೇಪಣೆ ಏನು ಎಂಬುದರ ಶೋಧ ಆ ಸಂಕೀರ್ಣತೆಯನ್ನು ತೋರಿಸಿಕೊಟ್ಟೀತು. ಇದು ಟಿಪ್ಪುವಿನ ಹಾಗೂ ಅಂದಿನ ಆಡಳಿತದ ಮಾತಾಯಿತು.

ಮತೀಯ ಸನ್ನಿವೇಶ ಎಂಬುದು ಜನರ ವ್ಯವಹಾರ ಪ್ರಜ್ಞೆಯನ್ನು ಬೆಳೆಸುವ ಕ್ರಮಕ್ಕೂ ಇಲ್ಲೊಂದು ಉದಾಹರಣೆ ಇದೆ. ಅದೆಂದರೆ *'ಚರ್ಚೆಯಲ್ಲಿ ತೊಡಗಿಕೊಳ್ಳುವುದಕ್ಕಿಂತ' 'ಅದರಿಂದ ತಪ್ಪಿಸಿಕೊಳ್ಳುವುದು ಸುಖ'* ಎಂದು *ಜನರಿಗೆ ಅನಿಸುವ ವಿಚಾರ. ತೊಡಗಿಕೊಳ್ಳುವುದಕ್ಕಿಂತ ತಪ್ಪಿಸಿಕೊಳ್ಳುವ ಸಾಮಾನ್ಯಜ್ಞಾನ ಜನಸಮುದಾಯಕ್ಕೆ ಸದಾ ಇರುತ್ತದೆ. ಆದರೆ ಇಂದಿನ ಸಾಮಾಜಿಕ ಸಂದರ್ಭ ತೊಡಗಿಕೊಳ್ಳದೆ ತಪ್ಪಿಸುವ ಅವಕಾಶಗಳು ಇಲ್ಲದಂತೆ ಜನರನ್ನು ನಿರಂತರವಾಗಿ ಭಾವನೆಗಳ ಹಾಗೂ ಮರೆಮಾಚಿದ ವೈಚಾರಿಕ ಸತ್ಯಗಳ ಒತ್ತಡದಲ್ಲಿ ಇಡುತ್ತದೆ ಎಂಬುದೇ ಸಮಸ್ಯೆಯಾಗಿದೆ. ಇದೇ ಸಂದರ್ಭದಲ್ಲಿ ಮುಸ್ಲಿಮರಿಗೆ ಸಂಬಂಧಿಸಿದಂತೆ ಮಾಸ್ತಿಯವರು ಬರೆದ ಇನ್ನೆರಡು ಕತೆಗಳಾದ, 'ಟಾಂಗಾ ಹುಸೇನಿ' ಹಾಗೂ 'ಸುಶೀಲಾ ರಜಾಕರ್' ಎಂಬ ಎರಡು ಕತೆಗಳನ್ನೂ ಪ್ರಸ್ತಾಪಿಸಬಹುದು.*

ಟಾಂಗಾ ಹುಸೇನಿ, ಮುಸ್ಲಿಂ ಸಜ್ಜನಿಕೆಯ ಕತೆ. ಟಾಂಗಾ ಹುಸೇನಿ ಕತೆ ನಡೆದ ಸ್ಥಳ ಉತ್ತರ ಕರ್ನಾಟಕದ ಒಂದು ಸಣ್ಣ ಸಂಸ್ಥಾನದ ಮುಖ್ಯಪಟ್ಟಣ. ಆ ಸಂಸ್ಥಾನದ ರಾಜರು ಮರಾಠಿ ಭಾಷಿಕರು. ಅಲ್ಲಿ ಟಾಂಗಾ ಹೊಡೆಯುವ ಹುಸೇನಿ ರಾಜಮನೆತನದ ನಿರ್ಣಯಗಳಿಂದ ಕಷ್ಟಕ್ಕೆ ಒಳಗಾದವನು. ಅರಮನೆ ಕುದುರೆ ಸಾರೋಟು ಓಡಿಸುವವ ಮೋಟಾರು ಕಾರು ಬಂದು ಕೆಲಸ ಕಳಕೊಳ್ಳುತ್ತಾನೆ. ಕೆಲಸ ಹೋದುದಕ್ಕಿಂತ ಹೆಚ್ಚು ತಲೆತಲಾಂತರಗಳಿಂದ ಅರಮನೆಯಲ್ಲಿ ಊಳಿಗಕ್ಕೆ ಇದ್ದ ಅವನನ್ನು ಹೊಸ ಮಹಾರಾಜರು ನಡೆಸಿಕೊಂಡ ರೀತಿ ಆತನಿಗೆ ಹಿಡಿಸುವುದಿಲ್ಲ. 'ದೊರೆ ಆದೋರ ಮನಸ್ಸು ದೊರೆ ಮನಸ್ಸು ಆಗದೇ ಇದ್ದರೆ ಈ ನೆಲದ ಮೇಲೆ ಬಾಳೋ ಜನರ ಪಾಡು ಕಡು–ಕಷ್ಟ' ಎಂಬುದು ಬಡತನದಲ್ಲಿ ಟಾಂಗಾ ನಡೆಸೋ ಹುಸೇನಿ ಮಾತು. ಒಟ್ಟು ವ್ಯವಸ್ಥೆ ನಡೆಯುವ ಬಗ್ಗೆ ಹುಸೇನಿ ಹೇಳುವ ಇನ್ನೊಂದು ಮಾತು, "ಆನೆ ಆನೆ ಆಗಿ ಬಾಳಬೇಕು. ಒಂದು ಬಾರಿಗೆ ಸೇರಕ್ಕಿ ಎತ್ತಿಕೊಂಡು ಬಾಯಿಗೆ ಹುಯ್ಯಕೋ ಬೇಕು. ಹತ್ತು ಕಾಳು ಕೆಳಗೆ ಉದರತ್ತೆ. ಅದನ್ನ ಇರುವೆ ತಿನ್ನಬೇಕು. ಸೇರು ತಿನ್ನೋ ಆನೆ, ಇರುವೆಗೆ ಕಾಳು ಬಿಡೋದಿಲ್ಲ ಅಂದರೆ ಅದು ಆನೆ ಅಲ್ಲ. ಮೈ ಆನೇದು, ಬುದ್ಧಿ ಇರುವೇದು."

ಮುಂದೆ ನಲವತ್ತು ವರುಷ ಕಳೆದು ಕಾಲ ಬದಲಾಗಿದೆ. ರಾಜರ ಕಾಲ ಹೋಗಿ ಹೊಸ ಸಮಾನತೆಯ ಕಾಲ ಬಂದಿದೆ. ಅರಮನೆ ಈಗ ಬರಿಮನೆ ಆಗಿದೆ. ಆದರೆ ಹುಸೇನನ ಮೊಮ್ಮಗನಿಗೆ ರಾಜರ ಮನೆ ಹೊಸ ವ್ಯವಹಾರದಲ್ಲಿ ಉದ್ಯೋಗ ನೀಡಿದೆ. ಅರಮನೆಯಲ್ಲಿ ಕೆಲಸ ಮಾಡಿದ್ದ ಹುಸೇನನಿಗೆ ಹೊಸರಾಜ ಪುಟ್ಟದೊಂದು 'ಪಿಂಛನ್' (ಪಿಂಚಣಿ) ನೀಡುತ್ತಿದ್ದಾರೆ. ಹಿಂದೂ ಆಡಳಿತದ ವಾತಾವರಣದಲ್ಲಿ ಕಷ್ಟ ಸುಖ ಕಂಡ ಮುಸ್ಲಿಂ ಸಜ್ಜನಿಕೆಯ ಕತೆ ಇದು. ಸಮಾಜ ವ್ಯವಸ್ಥೆಯಲ್ಲಿ ಜನರಿಗೆ ಉಸಿರಾಡುವುದಕ್ಕೆ ಸಾಧ್ಯವಾಗುವಂತೆ ಮಾನವೀಯ ಕಿಂಡಿಗಳಿರಬೇಕು. ಉದಾರ ಮಾನವೀಯ ನೆಲೆಗಳಲ್ಲಿ ಸಜ್ಜನಿಕೆ ಸ್ಥಾಪಿಸಬಹುದಾದ ಮಾನವೀಯ ಸಂಬಂಧಗಳಿಗೆ ಹಿಂದೂ ಅಥವಾ ಮುಸ್ಲಿಂ ಎಂಬ ಧಾರ್ಮಿಕ ನೆಲೆಗಳು ಹೇಗೆ ಅಡ್ಡಿ ಬರುವುದಿಲ್ಲ ಎಂಬುದನ್ನು ಹಿಂದೂ ರಾಜ ಹಾಗೂ ಮುಸ್ಲಿಂ ಟಾಂಗಾವಾಲಾನ ಸ್ವಾಭಿಮಾನದ ಏಳು ಬೀಳುಗಳಲ್ಲಿ ಇಟ್ಟು ಪರೀಕ್ಷಿಸುವ ಕತೆ ಇದೆ.

'ಸುಶೀಲಾ ರಜಾಕರ್' ಹೈದರಾಬಾದಿನ ಮುಸ್ಲಿಂ ಹಿಂಸಾವಾದದ ಎದುರು ಮಾನವೀಯತೆ ಮೆರೆಯುವ ಕತೆ. ಸ್ವಾತಂತ್ರ್ಯ ಬಂದ ಬಳಿಕ ಸ್ವತಂತ್ರವಾಗಲು ಹೊರಟ ಹೈದರಾಬಾದಿನ ನಿಜಾಮ ತನ್ನ ರಾಜ್ಯವನ್ನು ಪಾಕಿಸ್ತಾನದಲ್ಲಿ ವಿಲೀನಗೊಳಿಸಬೇಕು ಎಂದು ಒತ್ತಾಯಿಸುವ ಹಿಂಸಾವಾದಿ ಮುಸ್ಲಿಮರ ಸಂಘ ರಜಾಕರ ಜನ. ರಜಾಕರ್ ಎಂದರೆ ದೇವರ ದಾಸರು. ಧರ್ಮದ ದಾಸರು ಎಂಬುದು ಅರ್ಥ. ಹೈದರಾಬಾದ್ ಸಂಸ್ಥಾನ ಭಾರತದಲ್ಲಿ ವಿಲೀನ ಆಗಬಾರದು ಎಂಬುದು ಉಗ್ರವಾದಿಗಳಾದ ಈ ಮುಸ್ಲಿಂ ಸಂಘಟನೆಯ ಒತ್ತಾಯ. ಹೈದರಾಬಾದ್ ಪಾಕಿಸ್ತಾನಕ್ಕೆ ಸೇರಬಾರದೆಂದು ಹಿಂದುಗಳು ಒತ್ತಾಯ ಮಾಡಬಾರದೆಂದು ಹಿಂದೂ ಮಂದಿಗೆ ಹಿಂಸೆ ಕೊಟ್ಟ ಸಂಘಟನೆ. ಮತಾಂತರದ ಒತ್ತಡ, ಮಾನಭಂಗದ ಅಪಾಯ ಎಲ್ಲವನ್ನೂ ಎದುರಿಸಿ ಹಿಂದೂಗಳು ಬದುಕಬೇಕಾಗಿತ್ತು.

ಹೈದರಾಬಾದ್‌ನಲ್ಲಿ ಪುಟ್ಟ ವ್ಯಾಪಾರ ನಡೆಸುತ್ತಿದ್ದ ಕುಟುಂಬವೊಂದರ ಹೆಣ್ಣುಮಗಳು ಸುಶೀಲಾ. ಅವಳಿಗೆ ಮುಸ್ಲಿಮರಿಂದ ಅಪಾಯ ಆಗಬಹುದೆಂದು ಎಣಿಸಿ ಅವಳು ಬಾವಿಗೆ ಹಾರಿ ಆತ್ಮಹತ್ಯೆ ಮಾಡಿಕೊಂಡಿದ್ದಾಳೆ. ಆ ಕಾಲ ರಜಾಕರರ ಹಾವಳಿ ಬಹಳ ಹೆಚ್ಚಾಗಿದ್ದ ಸಮಯ. ಸುಶೀಲಾ, ರಜಾಕರ್, ರಜಾಕರ್ ಎಂದು ಮನೆಗೆ ಬಂದವರ ಬಗ್ಗೆ ಎಚ್ಚರ ಹೇಳಲು ಕೂಗಿದ ಅಣ್ಣ ಕೊನೆಗೂ ನೋಡಿದ್ದು ಬಾವಿಗೆ ಹಾರಿ ತೀರಿಕೊಂಡ ತಂಗಿಯ ಮೃತ ದೇಹ. ಆ ಘಟನೆಯ ಒತ್ತಡದಿಂದ ಹುಚ್ಚು ಹಿಡಿದ ಅಣ್ಣ ಬೆಂಗಳೂರಿನ ಬೀದಿಯಲ್ಲಿ ಸುಶೀಲಾ ರಜಾಕರ್ ಎಂದು ಕೂಗುತ್ತಾ ಹುಚ್ಚನ ಸ್ಥಿತಿಯಲ್ಲಿ ನಿರೂಪಕನ ಕಣ್ಣಿಗೆ ಬೀಳುವುದರಿಂದ ಕತೆ ಪ್ರಾರಂಭ. ಬೆಂಗಳೂರಿನ ಮನೋವೈದ್ಯರ ಔಷಧಿಯಿಂದ ಗುಣಮುಖನಾಗುವ ಆತ, ಹೈದರಾಬಾದಿನ ತನ್ನ ಕುಟುಂಬವನ್ನು ಸೇರಿಕೊಳ್ಳುತ್ತಾನೆ. ಮುಂದೆ ಆರೋಗ್ಯ ಸುಧಾರಿಸಿ ಹೈದರಾಬಾದಿನ ಜನಜೀವನದಲ್ಲಿ ಸೇರಿಕೊಳ್ಳುತ್ತಾನೆ.

ರಾಜಕೀಯ, ಧಾರ್ಮಿಕ ಎರಡೂ ಹಂತಗಳಲ್ಲಿ ಉಗ್ರ ಹಿಂಸೆಯನ್ನು ನಡೆಸಿದ ರಜಾಕರರು ಸಮಾಜದ ಶಾಂತಿ ಕದಡಿದ್ದಾರೆ. ಅವರ ಹಿಂಸೆಗೆ ಹಿಂದೂ ಸಮಾಜ, ಕುಟುಂಬ ಹಾಗೂ ವ್ಯಕ್ತಿಗಳು ನಲುಗಿದ್ದಾರೆ. ಪಾಡು ಪಟ್ಟಿದ್ದಾರೆ. ಇದು ನಮ್ಮ ನೆಲದಲ್ಲಿ ನಮ್ಮ ಪಕ್ಕದ ಪ್ರಾಂತ್ಯದಲ್ಲಿ ಧಾರ್ಮಿಕ, ಸಾಮಾಜಿಕ, ರಾಜಕೀಯ ನೆಲೆಗಳಲ್ಲಿ ನಡೆದ ಉಗ್ರ ಹಿಂಸಾಕಾಂಡ. ಆದರೆ ಮಾಸ್ತಿಯವರ ಕತೆ ಇದಕ್ಕೆ ಹಿಂಸೆಯ ಬದಲು ಪರಮ ಮಾನವ ಪ್ರೀತಿಯಿಂದ ಪ್ರತಿಕ್ರಿಯಿಸುತ್ತದೆ. ಹಿಂಸೆಯನ್ನು ಪರಮ ಶಾಂತಿ ಹಾಗೂ ಅಹಿಂಸೆಯಿಂದ ಎದುರಿಸಿ ಮಾನವೀಯತೆ ಮೆರೆವ ಬಹು ಅಪರೂಪದ ಕತೆಗಳಲ್ಲಿ ಇದೂ ಒಂದು. ಕತೆಯ ನಿರೂಪಣೆ ಅದರ ಎಲ್ಲಾ ವಿವರಗಳಲ್ಲಿ ಹಿಂಸೆಗೆ ಎದುರಾಗಿ ಮಾನವೀಯತೆಯನ್ನು ಓದುಗನ ಅಂತರಂಗದ ಅನುಭವವಾಗಿ ಮಾರ್ಪಡಿಸುವ ಕತೆ.

ಧರ್ಮದ ಪರಮಗುರಿ ವ್ಯಕ್ತಿಯ (ಆತ್ಮದ) ಮೋಕ್ಷ ಎಂದಾದರೆ ಅದು ಈ ಲೋಕದಲ್ಲಿ ಮನುಷ್ಯ ಮಾನವೀಯವಾಗುತ್ತಾ ಶುದ್ಧೀಕರಣಗೊಂಡು ಪರಮ ಮಾನವೀಯ ಹಂತ ತಲುಪಬೇಕು. ಆ ಬಳಿಕ ಅದಕ್ಕಿಂತ ಮೇಲಿನದು ಎಂದು ನಂಬಲಾದ ದೈವತ್ವಕ್ಕೆ ಏರುವ ಪ್ರಯತ್ನ ಪ್ರಾರಂಭವಾಗಬೇಕು. ಆದರೆ ಧರ್ಮವನ್ನು ರಾಜಕೀಯದ ಉದ್ದೇಶ ಸಾಧನೆಗಾಗಿ ಕಲಬೆರಕೆ ಮಾಡಿದೊಡನೆ ಧರ್ಮದ ಹೆಸರಿನಲ್ಲಿ ಅಧಿಕಾರ ಪಡೆಯುವ ಗುರಿ ಸುಲಭವಾಗುತ್ತದೆ. ದೇಶದಾದ್ಯಂತ, ಸಂಸ್ಕೃತಿ, ಧರ್ಮ ರಕ್ಷಣೆ, ರಾಷ್ಟ್ರ ಪ್ರೇಮದ ಹೆಸರಿನಲ್ಲಿ ಧರ್ಮದ ಉಪಯೋಗ ಅಧಿಕಾರವನ್ನು ಪಡೆಯುವುದಕ್ಕೆ ಅಥವಾ ಪಡೆದ ಅಧಿಕಾರವನ್ನು ಉಳಿಸಿಕೊಳ್ಳುವುದಕ್ಕೆ ಬಳಕೆಯಾಗುತ್ತಿದೆ. ಕರ್ನಾಟಕದ ಮತೀಯ ಸನ್ನಿವೇಶವೂ ರಾಷ್ಟ್ರದ ಈ ದೊಡ್ಡ ಚಿತ್ರದ ಕಿರು ಪ್ರತಿಮೆಯಾಗಿದೆ.

ಇಂತಹ ಸಂದರ್ಭಗಳಲ್ಲಿ ಹಿಂಸೆಯನ್ನು ತಡೆಯುವುದು ರಾಜ್ಯಾಧಿಕಾರದ ಮೊದಲ ಆದ್ಯತೆಯಾಗಬೇಕು. ರಕ್ಷಣೆ ಇಲ್ಲದ ರಾಜ್ಯದಲ್ಲಿ ಸಮಾಜ ತತ್ತರಿಸುತ್ತದೆ. ಭೀತರಾದ ಜನಕ್ಕೆ ಸಹಜ ವ್ಯವಸ್ಥೆ ಪುನರ್‌ಸ್ಥಾಪನೆ ಆದರೆ ಸಾಕು ಅನಿಸಿ ಬಿಡುತ್ತದೆ. ಈ ಸಹಜತೆಯಲ್ಲಿ ಆರ್ಥಿಕ, ಸಾಮಾಜಿಕ ಸಮಸ್ಯೆಗಳು ಇಲ್ಲದೇ ಇರುವುದಿಲ್ಲ. ಹಿಂಸೆ ಇದ್ದಾಗ ಶಾಂತಿ ಮರಳಿದರೆ ಸಾಕು ಅನಿಸುತ್ತದೆ. ಆಗ ಶಾಂತಿಯ ಪರಮ ಸೇವಕನಂತೆ ಸಹಜ ವ್ಯವಸ್ಥೆ ಕಾಣಿಸತೊಡಗುತ್ತದೆ. ಹಿಂಸೆಯನ್ನು ಪ್ರತಿಭಟಿಸುವುದು ಹಾಗೂ ವಿಚಾರವಂತಿಕೆಯನ್ನು ಬೆಳೆಸಲು ಪ್ರಯತ್ನಿಸುವುದು ರಾಜ್ಯದ ಇಂದಿನ ಮತೀಯ ಸನ್ನಿವೇಶದಲ್ಲಿ ಪ್ರಜ್ಞಾವಂತರು ಆರಿಸಿಕೊಳ್ಳಬಹುದಾದ ಮಾರ್ಗಗಳಾಗಿವೆ.

**ಎಸ್. ಆರ್. ವಿಜಯಶಂಕರ**
ಸಿ–೨ / ೧೦೩, ಓಂಕಾರ್ ಅಪಾರ್ಟ್‌ಮೆಂಟ್ಸ್, ೮ನೇ ಮುಖ್ಯರಸ್ತೆ
೧೨ನೇ ಅಡ್ಡರಸ್ತೆ, ಮಲ್ಲೇಶ್ವರಂ, ಬೆಂಗಳೂರು – ೫೬೦ ೦೦೩

ಚಳುವಳಿಗಾರರು ಊರಿಗೆ ಬರುತ್ತಿದ್ದಾರೆ. ಇಂಥದ್ದೊಂದು ಸುದ್ದಿ ಊರಲ್ಲೆಲ್ಲ ಹಬ್ಬಿತ್ತು. ಈಗಾಗಲೇ ಕಚೇರಿಗಳನ್ನು ಸುಟ್ಟು ಬ್ರಿಟಿಷರಿಗೆ ಬೇಕಾಗಿದ್ದಂಥವರು. ಅವರೊಂದಿಗೆ ಕರಿಯಲ್ಲನೂ ಬರುತ್ತಾನೆ ಎಂಬ ಊಹೆ ಹೆಚ್ಚು ಖುಷಿ ನೀಡಿತು. ಆದರೆ ಎಂದು ಬರುತ್ತಾರೆ ಎಂಬುದು ಖಚಿತವಾಗಲಿಲ್ಲ. ಬ್ರಿಟಿಷರಿಗೆ ಸುಳಿವು ಸಿಗಬಾರದೆಂಬ ಕಾರಣಕ್ಕೆ ಇಂತಹ ಗೌಪ್ಯತೆ ಕಾಪಾಡಿಕೊಳ್ಳುತ್ತಿದ್ದರು. ಈ ಸುದ್ದಿ ನೀಡಿದ ಖುಷಿಯಿಂದ ನಾನು, ಸಂಕೀ ಕುಣಿದಾಡಿಬಿಟ್ಟೆವು. ಕರಿಯಲ್ಲನದು ಹುಂಬು ವಯಸ್ಸು, ಇನ್ನೂ ಹದಿನಾಲ್ಕರ ಹುಡುಗ ಪರಂಗಿಯರನ್ನು ಹೊಡೆದೋಡಿಸುತ್ತೇನೆ... ಅಂತ ಒಂದು ನಸುಕಿನಲ್ಲಿ ಅಕ್ಕನಿಗೆ ಹೇಳಿ ಹೊರಟುಹೋದ.



ಹಿಂದ್ ದೇಶ ಕೆ ನಿವಾಸಿ  
ಹಮ್  
ಸಬ್ ಜನ ಏಕ್ ಹೈ...

ನಾಳೆಯ ಪ್ರಭಾತ್ ಪೇರಿಯಲ್ಲಿ ಹಾಡಲು ಮೊಮ್ಮಗ ರೂಢಿ ಮಾಡಿಕೊಳ್ಳುತ್ತಲಿದ್ದ.

ಈವರೆಗೆ ಪ್ರಭಾತ್ ಪೇರಿ ನೋಡಲು ಮ್ಯಾಗಳ ಕೇರಿಗೆ ಹೋಗಬೇಕಿತ್ತು. ಈ ಸಾರಿ ಪ್ರಭಾತ್ ಪೇರಿ ನಮ್ಮ ಕೇರಿಗೂ ಬರಬೇಕು ಎಂದು ಅಡ್ಡಗಟ್ಟಿ ಕೇಳಲು ಕೇರಿಯನ್ನು ಅವ್ವ ಅಣಿಗೊಳಿಸಿದ್ದಳು.

ಅವ್ವನಿಗೆ ಈಗ ನೂರರ ಹತ್ತಿರದ ವಯಸ್ಸು. ಅವ್ವ ಅಂದರೆ ಫಕ್ಕೀರವ್ವ, ಇಡೀ ಕೇರಿಗೆ ಅವ್ವ. ಇನ್ನು ಮೊಲೆಯುಣ್ಣುವ ಕಂದಮ್ಮಗಳನ್ನು ಬಿಟ್ಟು ದುಡಿಯಲು ಹೋಗುವ ಅವ್ವಂದಿರಿಗೆ ಒಂದೆ ಭರವಸೆ... ಫಕ್ಕೀರವ್ವ. ಅವೆಷ್ಟು ಅನಾಥ ತುಟಿಗಳಿಗೆ ಅಮೃತವೆರೆದಳೋ ಈ ಅವ್ವ.

ಅಗಷ್ಟ ಹತ್ತಿರ ಬರುತ್ತಿದ್ದಂತೆ ಅವ್ವನ ಭಾವಕೋಶವನ್ನು ಸಂಕೀ ಆವರಿಸಿಕೊಂಡು ಕಾಡಲಾರಂಭಿಸುತ್ತಾಳೆ. ಎಷ್ಟೋ ಮಳೆ ಸರಿದವು. ರೊಟ್ಟಿಯ ಚೂರೊಂದು ಸಿಡಿದು ಎದೆಗೆ ಚುಚ್ಚಿದಂತೆ ಯಕ್ಕಾ... ಫಕ್ಕೀರಕ್ಕಾ... ಸಂಕೀ ಕೂಗುತ್ತಲೆ ಇದ್ದಾಳೆ. ಇಂಥದ್ದೊಂದು ಕೂಗು ನಡುಹೊತ್ತಲ್ಲಿ ಕಿವಿಯಲ್ಲಿ ಸುಂಯ್ಯ... ಎಂದು ಗಾಳಿ ಹೊಕ್ಕಂತೆ ಕೇಳುತ್ತದೆಯಂತೆ, ಅಮವಾಸ್ಯೆಯ ರಾತ್ರಿ ಮಾದರ ಹರವು ಗದಗದ ನಡುಗುತ್ತದಂತೆ.

* * *

ಮಾದರ ಹರವು. ಹೊಡೆ ತೆರೆದ ಜೋಳದ ಸಾಲು ಸಾಲು, ಎಲ್ಲಿ ನೋಡಿದಲ್ಲಿ ಚದರಂಗಿ ಹೂವಿನ ಚೆಲುವು. ದಾಟಿ ಒಂದೆರಡು ಫರ್ಲಾಂಗು ಸಾಗಿದರೆ ಕಮ್ಮನೆ ಕಂಪು ತಂಪು ಗಾಳಿ ಸುಮ್ಮನೆ ಮೈ ತಾಕುತ್ತದೆ. ತುಸು ದೂರದಲ್ಲಿ ಜುಳುಜುಳು ಜವುಳು ಹಳ್ಳ. ಅದಕ್ಕೆ ಹುಬ್ಬಳ್ಳಿಯರ ಹಳ್ಳ ಎಂಬ ಹೆಸರೂ ಇದೆ. ವಾರುಸುದಾರರಂತಿರುವ ಆ ಹುಬ್ಬಳ್ಳಿಯವರು ಈಗೆಲ್ಲಿದ್ದಾರೋ. ವರದಾ ತುಂಬಿಕೊಂಡಳೆಂದರೆ ಹಳ್ಳವೂ ಮೈದುಂಬಿಕೊಳ್ಳುತ್ತದೆ. ಇದು ಮುಂದೆ ಸಾಗಿ ಮಾದರ ಹರವು ಪ್ರವೇಶಿಸುತ್ತಿದ್ದಂತೆ ಮಾದರ ಹಳ್ಳ ಎನಿಸಿಕೊಳ್ಳುತ್ತದೆ.

ಎರಡೂ ದಂಡೆಗಳಿಗೂ ಬೇಕಷ್ಟು ಚಾಚಿಕೊಂಡು ಈಚಲು ಮರ ಹುಲುಗಲಿ ಚಂದರಗಿ ಕೇದಗಿ ಕಾರಿಕಂಟಿ ಕವಳಿ ಕಂಟಿ ರಕ್ಕಸ ಬಳ್ಳಿ ದಗಡಿ ಬಳ್ಳಿ, ಹೊನ್ನಾರಿಕೆ ಅತ್ತಿ ಆಲ ಪೀಕಜಾಲಿ ಕರಿ ಜಾಲಿ ಬನ್ನಿ ಪತ್ರೆ ಮರಗಳು ಉದ್ದಗಲಕ್ಕೂ ಬೆಳೆದು ನಿಂತು ಸೊಂಪಾದ ಕಿರು ಕಾಡೊಂದು ಸೃಷ್ಟಿಯಾಗಿತ್ತು. ಹಳ್ಳದ ಜುಳುಜುಳು ಕಾಡು ಹೊಕ್ಕು ಗಾಳಿ ತರುವ ಗಂಧ ಸೋಕಿದರೆ ಮನಸ್ಸು ತುಂಬ ಮಲ್ಲಿಗೆ ಅರಳಿದಂತೆ ಆಹ್ಲಾದ. ಈ ಸೊಬಗಿಗೆ ಮನಸೋತು




# ಅವ್ವ ಮತ್ತು ರೊಟ್ಟಿ

ಚ. ಲಿಂಗರಾಜ ಸೊಟ್ಟಪ್ಪನವರ

ಅದೆಲ್ಲಿಂದಲೊ ಬರುವ ಹಕ್ಕಿ ಕುಲ, ಬಣ್ಣದ ಪಾತರಗಿತ್ತಿಗಳು... ಸಣ್ಣದೊಂದು ಗಂಧರ್ವ ಲೋಕ.

'ಈ ಸ್ವರ್ಗದಲ್ಲಿ ನಾವು ನರಕದ ಜನ. ಆಡು ದನ ಮೇಯಿಸುತ್ತ ಅರೆಬೆತ್ತಲೆ ಅಲೆದಾಡಿದ್ದೇವೆ. ಅಂಗಾಲಿಗೆ ಚುಚ್ಚಿದ ಬಾಡ್ಯಾನ ಮುಳ್ಳನ್ನು ನಿರ್ದಾಕ್ಷಿಣ್ಯವಾಗಿ ಕಿತ್ತೆಸೆದು ಬರಿಗಾಲಲ್ಲೆ ಕಾಡ ನೆತ್ತಿ ತುಳಿದಿದ್ದೇವೆ. ಎಷ್ಟೋ ಬಾರಿ ಉಟ್ಟ ಬಟ್ಟೆ ಬಿಚ್ಚಿ ಎಸೆದು ಬೆತ್ತಲೆಯೆ ಮನೆಗೆ ಬಂದುಬಿಡುತ್ತಿದ್ದೆ. ಆಗ ನನಗೆಷ್ಟು ವರ್ಷ ಅಂತ ನೆನಪಿಲ್ಲ. ಸಣ್ಣವಳು, ಅಷ್ಟೆ. ಹಾಗೇಕೆ ಮಾಡುತ್ತಿದ್ದೇನೆಂದು ಈಗಲೂ ಯೋಚಿಸುತ್ತೇನೆ. ನಗು ಬರುತ್ತದೆ.' – ಘಳ್ಳನೆ ನಕ್ಕಳು ಅವ್ವ. ಹಣ್ಣು ಹಣ್ಣು ಮುಖ. ಬರಿ ನೆರಿಗೆಗಳೆ ತುಂಬಿವೆ. ಎಷ್ಟೊ ಹಲ್ಲು ಕಂಡವು, ಕೆಲವೇ ಬಿದ್ದಿವೆ. ಒಂದೆರಡು ಅಲುಗಿದಂತೆ ತೋರಿತು.

'ನನಗಾಗ ತುಸು ತುಸುವೆ ಬುದ್ಧಿ ತಿಳಿಯಾಗುತ್ತಿದ್ದ ವಯಸ್ಸು. ಬಿತ್ತಿದರೆ ಬೆಳೆಯುವಂತಹ ಭೂಪ ನನ್ನಪ್ಪ. ಅಪ್ಪನ ಕೈಯಾರೆ ಹಿಡಿ ಬೀಜ ಬಿತ್ತಿಸಲು ಜನರು ಬಯಸುತ್ತಿದ್ದರು. ಅಪ್ಪ ಎಂದರೆ ಏನಂತ ಗೊತ್ತಾಗುವ ಮುನ್ನವೆ ಅವನು ಹೊರಟುಹೋದ. ದೊಡ್ಡ ಹುಣ್ಣು ಅಂತೆ. ಗಣ್ಣು ಗಣ್ಣಿಗೂ ಆವರಿಸತೊಡಗಿತ್ತು. ಬಿತ್ತುವದನ್ನು ಬಿಡದ ಅಪ್ಪ. ಕಟ್ಟಿದ ಉಡಿಯೆ ಬಿಚ್ಚಿತ್ತಂತೆ. ಅಪಶಕುನ ಅಂದರು, ಅಪ್ಪ ಮುಗಿಲು ನೋಡಿದ. ಹೀಗೆ ಬಿತ್ತುವಾಗಲೆ ಎದೆ ಉರಿ ಅಂತ ಕುಸಿದು ಕುಳಿತನಂತೆ. ಅಷ್ಟೆ ನೆವ. ಮನೆಯಿಂದ ಎದ್ದುಹೋಗುವಂತೆ ಹೋಗಿಬಿಟ್ಟ... ಅವ್ವ ಕತೆ ಹೇಳಿದಂತೆ ಹೇಳುತ್ತಾಳೆ. ನಾನೊಬ್ಬಳೆ ಅಲ್ಲ. ಅಪ್ಪನ ಕಳೆದುಕೊಂಡವರ ಬಳಗವೆ ಇದೆ. ಆದರೆ ಈ ಪಾಪಿಗೆ ಅಪ್ಪನ ಕಕ್ಕುಲಾತಿಯನ್ನು ಕಾಣಲಾಗಲಿಲ್ಲ. ದನಗಳು ಬದುಕಿಗೆ ಜೋಡಾದವು. ಅಪ್ಪ ಇದ್ದಿದ್ದರೆ? ಅಂತ ಒಮ್ಮೊಮ್ಮೆ ಯೋಚಿಸುತ್ತೇನೆ. ಯಾವ ಸಿಟ್ಟಿಗೊ ಏನೊ ಒಮ್ಮೊಮ್ಮೆ ಬಟ್ಟೆ ಬಿಚ್ಚಿ ಎಸೆದು ಬಂದುಬಿಡುತ್ತಿದ್ದೆ. ಹಿಡಿದುಕೊಂಡು ದಬದಬ ಬಡಿಯುತ್ತಿದ್ದ ಅವ್ವ ತನ್ನ ರಂಡೆ ಬಾಳ್ವೆಗೆ ಅಲವತ್ತುಕೊಂಡು ಊರಿಗೆ ಕೇಳುವಂತೆ ಬಾಯಿ ಮಾಡುತ್ತಿದ್ದಳು. ಹಳ್ಳಕ್ಕೆ ಹೋಗಿ ದನ ಹೊಡೆದುಕೊಂಡು ಬರುವವರೆಗೂ ಗೋಳಾಟ ನಿಲ್ಲುತ್ತಿರಲಿಲ್ಲ. ಎಷ್ಟು ಹೊಯ್ಯಕೊಂಡರೂ ಆರದ ಕಷ್ಟದ ಕುಲುಮೆಯಂತೆ ಕಾಣುತ್ತಿದ್ದಳು. ಚಾಪೆ ಮೂಲೆ ಹಿಡಿದು ಕುಳಿತ ನನ್ನನ್ನು ಅವುಚಿಕೊಂಡು ರಮಿಸಿ ಜೋರಾಗಿ ಅಳುತ್ತಿದ್ದಳು. ಇದು ಏಕೆಂದು ನನಗೆ ಅರ್ಥವಾಗುತ್ತಿರಲಿಲ್ಲ. ನಂತರ ತಾಲಿಪಟ್ಟು ಮಾಡಿಕೊಡುತ್ತಿದ್ದಳು. ಉಳಿದ ದಿನಗಳಲ್ಲಿ ಈ ಸೌಭಾಗ್ಯ ಸಿಗುತ್ತಿರಲಿಲ್ಲ. ಗಂಡಸಿನಂತೆ ಬಲವಾಗಿದ್ದ ಅವ್ವ ನನ್ನನ್ನು ಅಡುಗೆ ಮನೆಗೆ ಕಾಲಿಡದಂತೆ ಬೆಳೆಸಿದಳು. ಹೋರಿ ಮೇಯಿಸಲು, ರಂಟೆ ಕುಂಟೆ ಹೊಡೆಯಲು, ಮರ ಹತ್ತಲು ಸೀಮಿತವಾಗಿ ಹೋದೆ. ಗೇಣು ಗೇಣಿಗೆ ಬೀಳುವಂತೆ ಬೀಜ ಬಿತ್ತುವಲ್ಲಿ ಅಪ್ಪನಷ್ಟೆ ಪರಿಣಿತಳಾಗಿದ್ದೆ. ಕಚ್ಚೆ ಬಿಗಿದು ಹೊಳೆ ಹಾರಿದರೆ ಆ ದಂಡೆ ಮುಟ್ಟಿ ಬಂದರೇನೆ ಸಮಾಧಾನ. ನಾಗೀ ಮಗಳು ಫಕ್ಕೀರಿ ಗಂಡ್ಸ ಇದ್ದಾಂಗ... ಜನ ಅಂದಾಗ ಅಪ್ಪನೆ ನನ್ನೊಳಗೆ ಒಡಮೂಡಿದಂತೆ ಗರ್ವಪಡುತ್ತಿದ್ದೆ. ಗಂಡು ದಿಕ್ಕಿಲ್ಲವೆಂಬ ಅವ್ವನ ಹತಾಶೆಯನ್ನು ನಾನು ಹೊಡೆದೋಡಿಸಬೇಕಿತ್ತು...' ಕಣ್ಮುಚ್ಚಿದ ಅವ್ವ ತುಸು ಹೊತ್ತು ಮಾತು ನಿಲ್ಲಿಸಿದಳು. ಹೆಪ್ಪಗಟ್ಟಿದ್ದ ಬರ್ಫದ ಗುಡ್ಡ ಕರಗುವದರಲ್ಲಿತ್ತು.

'ಅವತ್ತು, ದನಕ್ಕೆ ನೀರು ತೋರಿಸಿಕೊಂಡು ಮನೆ ಕಡೆ ಹೊರಟಿದ್ದೆವು. ಚಾವಡಿಯಲ್ಲಿ ಜನ ಗುಂಪು ಸೇರಿದ್ದು ಕಂಡಿತು. ಏನೊ ಗುಜುಗುಜು. ಕುತೂಹಲವಾಗಿ ನಿಂತೆವು. ಜನರ ಮಧ್ಯೆ ದ್ಯಾವಣ್ಣ. ನಮ್ಮ ಕಣ್ಣು ಹುಬ್ಬೇರಿಸಿಕೊಂಡವು. ದ್ಯಾವಣ್ಣ ಚಳುವಳಿಯಲ್ಲಿ ಭಾಗವಹಿಸಲು ಹೋಗಿ ಬಂದು ಮಾಡುತ್ತಿದ್ದ ಮನುಷ್ಯ. ಪರಂಗಿಯರ ವಿರುದ್ಧ ಹೋರಾಟಕ್ಕೆ ಕೈ ಜೋಡಿಸಲು ಜನರನ್ನು ಸಜ್ಜುಗೊಳಿಸುತ್ತಿದ್ದ. ನಮ್ಮ ಊರಲ್ಲಿ ಮಾತು ಬಲ್ಲವರೆಂದರೆ ರಾಯರ ಗುರಣ್ಣ ಮತ್ತು ದ್ಯಾವಣ್ಣ ಮಾತ್ರ. ಅವನ ಭಾಷಣಕ್ಕೆ ಎಲ್ಲರ ಕೂದಲು ನಿಗುರಿ ನಿಂತಿದ್ದವು. ಕರ್ಜಗಿ ಹೊಸರಿತ್ತಿ ಚಾವಡಿಗಳನ್ನು ಸುಟ್ಟುಹಾಕುವ ವಿಷಯ ತಿಳಿದುಬಂದು ನಮ್ಮ ಕಾಲುಗಳು ನಡುಗಿದವು. ಅಲ್ಲಿಂದ ಕಾಲ್ಕಿತ್ತೆವು. ಚಾವಡಿಗೆ ಬೆಂಕಿಯಿಟ್ಟರೆ ಹೇಗೆ ಸ್ವಾತಂತ್ರ್ಯ ಸಿಗುತ್ತದೆ ಅಂತಾ ಯೋಚಿಸಿ ಯೋಚಿಸಿ ಸೋತುಹೋಗುತ್ತಿದ್ದೆವು.

ಚಳುವಳಿಗಾರರು ಊರಿಗೆ ಬರುತ್ತಿದ್ದಾರೆ. ಇಂತದ್ದೊಂದು ಸುದ್ದಿ ಊರಲ್ಲೆಲ್ಲ

ಹಬ್ಬಿತ್ತು. ಈಗಾಗಲೇ ಕಚೇರಿಗಳನ್ನು ಸುಟ್ಟು ಬ್ರಿಟಿಷರಿಗೆ ಬೇಕಾಗಿದ್ದಂಥವರು. ಅವರೊಂದಿಗೆ ಕರಿಯಲ್ಲನೂ ಬರುತ್ತಾನೆ ಎಂಬ ಊಹೆ ಹೆಚ್ಚು ಖುಷಿ ನೀಡಿತು. ಆದರೆ ಎಂದು ಬರುತ್ತಾರೆ ಎಂಬುದು ಖಚಿತವಾಗಲಿಲ್ಲ. ಬ್ರಿಟಿಷರಿಗೆ ಸುಳಿವು ಸಿಗಬಾರದೆಂಬ ಕಾರಣಕ್ಕೆ ಇಂತಹ ಗೋಪ್ಯತೆ ಕಾಪಾಡಿಕೊಳ್ಳುತ್ತಿದ್ದರು. ಈ ಸುದ್ದಿ ನೀಡಿದ ಖುಷಿಯಿಂದ ನಾನು, ಸಂಕೀ ಕುಣಿದಾಡಿಬಿಟ್ಟೆವು.

ಕರಿಯಲ್ಲನದು ಹುಂಬು ವಯಸ್ಸು, ಇನ್ನೂ ಹದಿನಾಲ್ಕರ ಹುಡುಗ ಪರಂಗಿಯರನ್ನು ಹೊಡೆದೋಡಿಸುತ್ತೇನೆ... ಅಂತ ಒಂದು ನಸುಕಿನಲ್ಲೆ ಅಕ್ಕನಿಗೆ ಹೇಳಿ ಹೊರಟುಹೋದ. ಎಲ್ಲಿ ಹೋದ ಎಂದು ಅರಿಯದೆ ಕಣ್ಣೀರಿಡುತ್ತಿರುವ ಹೆತ್ತವರು, ಹೇಳಲಾಗದೆ ತೊಳಲಾಡುತ್ತಿರುವ ಸಂಕೀ ತಮ್ಮನನ್ನು ಕಾಣುವ ಹುಕಿಯಿಂದ ತಡರಾತ್ರಿವರೆಗೆ ಎವೆ ಮುಚ್ಚಲಿಲ್ಲ.

ಮಾದರ ಹಳ್ಳದಲ್ಲಿ ಯೋಧರು ಅಡಗಿಕೊಂಡಿದ್ದಾರೆ ಎಂಬ ಹೊಸ ಪುಕಾರು ಎದ್ದಿತ್ತು. ಈ ಬಗ್ಗೆ ಉಸಿರೆತ್ತಲೂ ಹೆದರಿಕೊಂಡಿದ್ದ ಕೇರಿಯ ಜನ ಕಣ್ಣು ಅಗಲಿಸಿ ಹುಬ್ಬು ಹಿರಿದುಮಾಡಿ ಇಷ್ಟಗಲ ಬಾಯಿ ತೆರೆದು ಈ ಕುರಿತು ದೇವಲೋಕದ ಸುದ್ದಿ ಹೇಳುವಂತೆ ಪಿಸುಗುಟ್ಟಿದ್ದರು. ಕೋರೆ ಮೀಸೆ ಬಿರುಗಣ್ಣುಗಳು ಕೈಯಲ್ಲಿ ಹಿಡಿದ ಕೋವಿ... ಬಾಲಬಸವ ಬಿದ್ದಪ್ಪ ಹೇಳಿದ ಕತೆಯ ಬ್ರಹ್ಮರಾಕ್ಷಸನೆ ಇದಿರಿಗೆ ನಿಂತ. ಇಂಥದ್ದೊಂದು ಚಿತ್ರವನ್ನು ಚದರಂಗಿ ಪೆಳಿಯ ಹಿಂದೆ ಕಂಡು ಬೆಚ್ಚಿ ಬಿದ್ದಿದ್ದಳು ಸಂಕೀ. ಸತ್ತೆನೊ ಕೆಟ್ಟೆನೊ ಎಂಬ ಖಬರಿಲ್ಲದೆ ಒಂದೆ ಗುಕ್ಕಿಗೆ ಓಡಿ ಮನೆ ಸೇರಿದ್ದಳು. ಸುದ್ದಿ ಮನೆಯಿಂದ ಮನೆಗೆ ಪಿಸುಗುಟ್ಟಿತು.

ಸಂಕೀ ದನ ಕಾಯಲು ಹೋಗಲಿಕ್ಕಿಲ್ಲ ಅಂದುಕೊಂಡವರಿಗೆ ಆಶ್ಚರ್ಯ ಕಾದಿತ್ತು. ಸಂಕೀ ನಮಗೆಲ್ಲ ಧೈರ್ಯ ತುಂಬುವ ಅಗತ್ಯವಿರಲಿಲ್ಲ. ಕರಿಯಲ್ಲ ಎಲ್ಲರಿಗೂ ತಮ್ಮನೆ ಹಾಗೂ ಅವರು ಕಳ್ಳರಲ್ಲ ಎಂಬ ವಿಚಾರವೆ ನಮಗೆ ಧೈರ್ಯ ನೀಡಿತ್ತು. ದಿನವೂ ನಮ್ಮ ಕಣ್ಣುಗಳು ಪೆಳಿಯತ್ತಲೆ ನಟ್ಟಿರುತ್ತಿದ್ದವು. ಕರಿಯಲ್ಲ ಕಾಣಿಸಿಕೊಂಡಾನೆಯೆ... ಎಂಬ ಕಾತರಕಿ ಅದು. ಇತ್ತಿತ್ತಲಾಗಿ ಸಂಕೀ ಪೆಳಿಯ ಕಡೆಗೆ ದನ ಹೊಡೆದುಕೊಂಡು ಹೊರಟಳು. ಅಷ್ಟು ಎದೆ ನಮಗಿರಲಿಲ್ಲ. ಆದರೆ ಅವಳನ್ನು ಬಿಟ್ಟುಬಿಡಲೂ ಆಗಲಿಲ್ಲ. ಅಲ್ಲಿ ಯೋಧರ ದೊಡ್ಡ ಗುಂಪೆ ಅಡಗಿರುವ ಕುರುಹು ತೋರಿಬಂದವು. ಹಾಗಿದ್ದ ಮೇಲೆ ಇವರು ಸುತ್ತಲಿನವರೆ ಇರುತ್ತಾರೆ, ಅಂದ ಮೇಲೆ ನಮ್ಮ ಕರಿಯಲ್ಲನೂ...? ನಮ್ಮ ನಂಬುಗೆ ಬಲವಾಯಿತು.

ಅದೊಂದು ಮಧ್ಯಾಹ್ನ. ನೆತ್ತಿ ಏರಿದ್ದ ಸೂರ್ಯ ಇಳಿಯುತ್ತಿದ್ದ. ಹೊಟ್ಟೆ ಗುರುಗುಡುತ್ತಿತ್ತು. ಬಳ್ಳೊಳ್ಳಿ ಒಗ್ಗರಣಿಯ ಹರವಿ ಸೊಪ್ಪು, ಮಿಜ್ಜಿ ಹಿಂಡಿ. ಜೊಲ್ಲು ತಡಮಾಡದೆ ಸುರಿಯತೊಡಗಿತು. ಗಂಟು ಬಿಚ್ಚಿ ರೊಟ್ಟಿ ಹಿಡಿದೆವು. ಎಮ್ಮೆ ಮಣಕ ಬುಡ ಸಮೇತ ತಮ್ಮಷ್ಟಕ್ಕೆ ಮೇಯುತ್ತಿದ್ದವು. ಎರಡು ತುತ್ತು ಬಾಯಿಗಿಟ್ಟಿದ್ದೆವು ಹಂಡಬಂಡ ಆಕಳೊಂದು ಮಿಲ್ಟ್ರೀ ಚನ್ನಪ್ಪನ ಹೊಲ ಹೊಕ್ಕಿತು. ಹಡಬಿಟ್ಟೀ ಬೆಳಸಿ ಬೆಳಸಿಗೆ ಬಾಯಿ ಹಾಕುತ್ತಿದೆ, ಚನ್ನಪ್ಪ ಅಸವಾಲದವ. ಬಾಯಿ ತೆರೆದರೆ '...ಏ ಹೊಲೇರಾ' ಅಂತಾನ. ಅವನ ಪಾಯಖಾನೆಯಂತ ಬಾಯಿಗೆ ಅಂಜಿಯೆ ಸಂಕೀ ಹರಿಗ್ಗಾಲು ಬಿದ್ದು ಓಡಿದಳು. ಹಗ್ಯೋ... ಹಗ್ಗೀ... ಸಂಕೀಯ ಕೂಗಿಗೆ ಬೆದರಿದ ಆಕಳು ಇನ್ನಷ್ಟು ಒಳಗೆ ನುಗ್ಗಿತು. ಸಂಕೀಯೂ...

ಅಖಂಡ ಮೂವತ್ತು ಎಕರೆ ಎರಿ ಜಮೀನು. ತೆನೆ ಹಾಯ್ದು ಒಳ ಹೋಗಲು ಹೆದರುವಷ್ಟು ಸದಕಲು. ಮೂರು ರೊಟ್ಟಿ ಮುಗಿದರೂ ಸಂಕೀ ಕಾಣುತ್ತಿಲ್ಲ. ನನಗೆ ಗಾಬರಿಯಾಯಿತು. ಇತ್ತೀಚೆಗೆ ಹಳ್ಳದಲ್ಲಿ ಹೊನಗ್ಯಾ ಬಂದು ಸೇರಿಕೊಂಡಿದೆ ಎಂಬ ಸುದ್ದಿಯಿತ್ತು. ಆಕಳೆಂದರೆ ಅದಕ್ಕೆ ಜೀವ. ಸಂಕೀ ಆಕಳನ್ನೆ ಬೆನ್ನತ್ತಿ ಹೋಗಿದ್ದಾಳೆ. ಒಮ್ಮೆಲೆ ಭಯವಾಯಿತು. ಎದ್ದು ಕೂಗುತ್ತ ಅತ್ತ ಓಡಿದೆ. ಜೋಳದ ದಂಟು ಹೋಳು ಮಾಡಿ ಕೂಗುತ್ತ ನೋಡಿದೆ. ಸಂಕೀಯ ಸುಳಿವಿಲ್ಲ. ರೊಟ್ಟಿ ಚೆಲ್ಲಾಪಿಲ್ಲಿಯಾಗಿರುವದು ಕಂಡಿತು. ಎದೆ ಜಲ್ಲೆಂದು ನೀರೊಡೆಯಿತು. ನಿಂತಲ್ಲೆ ಬಾಯಿಬಿಡುತ್ತ ಸುತ್ತ ಕಣ್ಣಾಡಿಸತೊಡಗಿದೆ. ಅಚ್ಚರಿ ! ತುಸು ದೂರದಲ್ಲೆ ಇಷ್ಟಗಲ ಕಣ್ಣು ಬಿಟ್ಟುಕೊಂಡು ನಿಂತಿದ್ದಾಳೆ ಸಂಕೀ. ಮಿಸುಗಾಟವಿಲ್ಲ. ಯಪ್ಪಾ... ಎಂದು ಚೀರಿಕೊಳ್ಳಬೇಕೆನ್ನುವಷ್ಟರಲ್ಲೆ ನನ್ನ ಬಾಯಿಯೂ ಮುಚ್ಚಿತು. ಬಲವಾದ ಬಿಗಿತ. ಬಲವಾದ ಕೈ. ತಕ್ಷಣವೆ ತಿಮಲವ್ವತ್ತಿ ಕಣ್ಣೆದರು ನಿಂತಳು. ಬಿರಡೆ ಕಣ್ಣು, ಕೋರೆ ಮೀಸೆ, ವಿಕಾರ ನಗು... ಅವಳು ಮಾತನಾಡದೆ ಸನ್ನೆ ಮಾಡಿ ತೋರುತ್ತಿದ್ದ ಹಾವಭಾವ. ಥೇಟ್ ಅವೆ ಕಣ್ಣುಗಳು. ತಿಮಲವ್ವತ್ತಿಯನ್ನು ತಿಂದು ಮುಗಿಸಿದಂತ ಮಿಕದ ಕಣ್ಣುಗಳು. ಸಾವು ಕಂಡಾಗಿನಕ್ಕಿಂತಲೂ ಹೆಚ್ಚಿನ ದಿಗಿಲು.




# ಬೆಳಕಿನ ರಾಗ



ಕತ್ತಲಿಂದ ಬೆಳಕಿಗಾಗಿ
ಬೆಳಕಿನಿಂದ ಬದುಕಿಗಾಗಿ
ಕರೆದುಕೊಂಡು ಹೋಗು ಬಾ ದೀಪವೆ.

ಅಂಬೆಗಾಲ ತೆವಳನಿಂದ
ತುಂಬುಗಾಲ ನಡಿಗೆಗಾಗಿ
ಕಸುವು ತುಂಬಿ ಹುರುಪುಗೊಳಿಸು ದೀಪವೆ

ಕಷ್ಟವೆಂಬ ಬೆಟ್ಟ ಕರಗಿ
ಸುಖದ ನೀರು ಹರಿಯತೊಡಗಿ
ಪೈರುಪಚ್ಚೆ ತೆನೆಗಳಲ್ಲಿ ನಗುವು ತುಂಬಲಿ

ಮೊಟ್ಟೆ ಒಡೆದು ಗೂಡಿನಿಂದ
ರೆಕ್ಕೆ ಬಲಿತು ಹಕ್ಕಿ ಹಾರಿ
ಬಾನತುಂಬ ಬೆಳಕಿನೊಂದು ರಾಗ ಹಾಡಲಿ

**ಡಾ|| ರಂಗಾರೆಡ್ಡಿ ಕೋಡಿರಾಂಪುರ**
ನಂ. ೩೯೯, 'ಇರುವಂತಿಗೆ', ೧ನೇ ಮುಖ್ಯರಸ್ತೆ, ಪಾರ್ವತಿನಗರ
ಲಗ್ಗೆರೆ, ಬೆಂಗಳೂರು – ೫೬೦ ೦೫೮

# ಹೇಮಂತ ಸಾಹಿತ್ಯ ಪ್ರಕಾಶನದ ಹೊಸ ಪ್ರಕಟಣೆಗಳು




₹ 150

ಆದಿಶಂಕರರಿಂದ ರಚಿತವಾಗಿದ್ದು ಇಂದು ಪಾರಾಯಣ ಗ್ರಂಥವಾಗಿ ಹಾಗೂ ಶುಶ್ರಾವ್ಯವಾಗಿ ಹಾಡಲೂ ಸೌಂದರ್ಯ ಲಹರಿ ಪ್ರಸಿದ್ಧವಾಗಿದೆ. ಮೂಲ ಸಂಸ್ಕೃತ ಶ್ಲೋಕಗಳಿಗೆ ಕನ್ನಡದಲ್ಲಿ ಅರ್ಥವನ್ನೂ ಕೊಟ್ಟು ದೇವಿಯನ್ನು ಸ್ತುತಿಸಲಾಗಿದೆ. ಯಂತ್ರಾರಾಧನೆಯ ಮಹತ್ವ ಮತ್ತು ಧರಿಸುವ ಬಗೆ ತಿಳಿಸಲ್ಪಟ್ಟಿದೆ. ಇಂದು ಸಾಮೂಹಿಕವಾಗಿ ಗಾಯನ ಮಾಡುವ ಪ್ರವೃತ್ತಿ ಹೆಚ್ಚುತ್ತಿದ್ದು ಧಾರ್ಮಿಕ ವಲಯದಲ್ಲಿ ಹೆಚ್ಚು ಸುದ್ದಿ ಮಾಡುತ್ತಿರುವ ಸ್ತೋತ್ರ.




₹ 400

ಗೃಹಿಣಿಯರು ನಾಡಿನಾದ್ಯಂತ ವಿವಿಧ ಮಂಡಳಿಗಳ ಮೂಲಕ ಅಧ್ಯಯನ ಪಾರಾಯಣ ಮಾಡುತ್ತಿರುವ ಶಂಕರಾಚಾರ್ಯರ ಸೌಂದರ್ಯ ಲಹರಿ ಬಗ್ಗೆ ವಿಶೇಷ ಮಾಹಿತಿಯನ್ನೊಳಗೊಂಡ ಕೃತಿ. ಶ್ರೀ ಚಕ್ರದ ಮಾಹಿತಿ, ಯಂತ್ರಾರಾಧನೆ – ಧಾರಣೆ ಮಾತ್ರವಲ್ಲದೆ, ಸಂಪೂರ್ಣ ಸ್ತೋತ್ರಗಳು ಹಾಗೂ ಅವುಗಳ ಅರ್ಥ ಸಹಿತ ವಿವರಣೆ ಇದ್ದು ಆಸ್ತಿಕ ಜನತೆಗೆ ಉಪಯುಕ್ತವಾದ ಕೈಪಿಡಿ. ದೇವಿಯನ್ನು ಸರ್ವಾಂಗ ಸುಂದರವಾಗಿ ವರ್ಣಿಸುವ ಮತ್ತು ಭಜಿಸಿ ಆನಂದಿಸುವ ಮಂದಿಗೆ ತುಂಬ ಸಂತೋಷಕೊಡುವ ಪುಸ್ತಕ.




₹ 250

ಮೊದಲ ಭಾಗದಲ್ಲಿ ನಾಡಿನ ಸಾಹಿತಿಗಳ ಕೃತಿಗಳನ್ನೂ ಎರಡನೆಯ ಭಾಗದಲ್ಲಿ ಪಾಶ್ಚಾತ್ಯ ಸಾಹಿತಿಗಳ ಕೃತಿಗಳನ್ನೂ ಪರಿಚಯಿಸಿ ವಿಮರ್ಶೆ ಮಾಡಿರುವ ಅಪರೂಪದ ಕೃತಿ. ಇಲ್ಲಿ ಸಾಹಿತ್ಯದ ಎಲ್ಲ ಪ್ರಕಾರಗಳನ್ನು ಆಯ್ಕೆ ಮಾಡಿಕೊಂಡದ್ದಲ್ಲದೆ, ಕಾವ್ಯದ ಉಗಮ, ಸ್ವರೂಪ, ಲಕ್ಷಣ ಮುಂತಾದುವನ್ನೂ ಪ್ರಸ್ತಾಪಿಸಲಾಗಿದೆ. ಲೇಖಕರ ವಿಸ್ತಾರವಾದ ಓದು – ಅಧ್ಯಯನ – ಇಲ್ಲಿನ ವಿಮರ್ಶಾ ಲೇಖನಗಳಿಗೆ ಪುಷ್ಟಿಯನ್ನು ನೀಡಿದ್ದು ಕಾಲ–ದೇಶಗಳ ನಿರ್ಬಂಧವಿಲ್ಲದೆ ಸಾಹಿತ್ಯ, ಹೇಗೆ ಜನರನ್ನು ಸೆಳೆಯುವುದೆಂಬ ವಿಮರ್ಶೆ ಇಲ್ಲಿದೆ.



## ಹೇಮಂತ ಸಾಹಿತ್ಯ

972/ಸಿ, 'ಇ' ಬ್ಲಾಕ್, 10ನೇ 'ಎ' ಮುಖ್ಯರಸ್ತೆ
ರಾಜಾಜಿನಗರ, ಬೆಂಗಳೂರು – 560 010. ದೂರವಾಣಿ : 23354619

## ಪುಸ್ತಕ ಮಳಿಗೆ

ನಂ. 53/1, ಕಾಟನ್‌ಪೇಟೆ ಮುಖ್ಯರಸ್ತೆ, ಬೆಂಗಳೂರು – 560 053
ದೂರವಾಣಿ : 080–26702010

ಕೊಸರಿದೆವು, ಊಹೂಂ... ಸಾಧ್ಯವಾಗುತ್ತಿಲ್ಲ. ಈಗ ನಿಧಾನಕ್ಕೆ ಒಬ್ಬನ ಬಾಯಿ ಕಿವಿ ಹತ್ತಿರ ಬಂದು ಉಸುರಿತು... ನಮ್ಮ ವಿಷಯ ಯಾರ್ಗೂ ಹೇಳ್ಬಾರ್ದೂ... ದಿನಾಲೂ ನಮಗೆ ರೊಟ್ಟಿ ತಂದ ಕೊಡ್ಬೇಕು – ಇಷ್ಟು ಹೇಳಿ ಕೈ ಸಡಿಲಿಸಿದರು. ತಕ್ಷಣವೆ... ನಾವು ಮಾದರ ಮಂದಿ ಎಂದು ಹೇಳಬೇಕೆನಿಸಿತಾದರೂ ಎದುರಿನ ದೃಶ್ಯ ತಡೆಯಿತು. ಚೆಲ್ಲಿದ್ದ ರೊಟ್ಟಿ ತುಣುಕುಗಳನ್ನು ಅವರಿಬ್ಬರು ಕಾಳು ಆಯುವ ಹಕ್ಕಿಯಂತೆ ಆರಿಸಿಕೊಳ್ಳತೊಡಗಿದ್ದರು. ಅವರು ಕಳ್ಳರಲ್ಲ ಎಂಬುದು ಸ್ಪಷ್ಟವಾಯಿತಾದರೂ ಭಯ ಕಡಿಮೆಯಾಗಲಿಲ್ಲ. ಆ ಭಯದಲ್ಲಿ ಕರಿಯಲ್ಲನ ಬಗ್ಗೆ ವಿಚಾರಿಸದೆ ಬಂದ ಬಗ್ಗೆ ದಾರಿಯುದ್ದಕ್ಕೂ ಲೊಚಗುಟ್ಟಿದೆವು.

**ಸ್ವಾತಂತ್ರ್ಯ**

ಸಂಜೆಯಾಯಿತೆಂದರೆ
ಬೆಳಗೇರಿಸಿದ
ತ್ರಿವರ್ಣ ಧ್ವಜವನ್ನಾತ
ಇಳಿಸಿ ಪೆಟ್ಟಿಗೆಯಲ್ಲಿರಿಸಿದ

**ವ. ಉಮೇಶ ಕಾರಂತ**
ಮಂಗಳೂರು – ೫೭೫ ೦೦೧

ರಾತ್ರಿಗೆ ನಾವಿಬ್ಬರು ಅಂಗಳ ಸೇರಲಿಲ್ಲ. ಅಂಗಳದ ಪದ, ಕತೆ ಬೇಕೆನಿಸಲಿಲ್ಲ. ನಮ್ಮ ಮೌನ ಯಾರಿಗೂ ಅರ್ಥವಾಗದಂತೆ ನಮ್ಮನ್ನು ನಾವು ಸಂಭಾಳಿಸಿಕೊಂಡೆವು. ಮರುದಿನ ಬೇಗನೆ ಎಚ್ಚರವಾಯಿತು. ಸೆಗಣಿ ಕಸ ಹೊಡೆದು ಅಂಗಳ ಸಾರಿಸಿ, ರೊಟ್ಟಿಗೆ ಹಿಟ್ಟು ನಾದತೊಡಗಿದೆವು. ಕೋಳಿ ಕೂಗುವ ಮುನ್ನವೆ ಕೋಣಬಿಗೆ ಮಾತನಾಡತೊಡಗಿದವು. ನಮ್ಮ ಈ ನಡುವಳಿಕೆ ಸಂಭ್ರಮದಂತೆ ತೋರಿ ಮನೆ ಜನ ಪ್ರಶ್ನೆ ಮಾಡಹೋಗಲಿಲ್ಲ. ದೊಡ್ಡ ಬುತ್ತಿಗಂಟು. ಹಳ್ಳದ ಕಡೆ ನಡೆದವು. ಸಂಕೀ ಕೋಣನ ಮೇಲೆ ಹತ್ತಿ ಕೂರುತ್ತಿದ್ದಳು. ನಾನು ಅವುಡುಗಚ್ಚಿ ಬಾಲ ಮುರಿಯುತ್ತಿದ್ದೆ. ಕೊರಳಲ್ಲಿನ ಗಾಳೆಮ್ಮನ ಗಂಟೆ ಢಣಢಣ ಅನ್ನುತ್ತಿತ್ತು. ಆಗ ಗುಹೆಯಿಂದ ನಿಧಾನವಾಗಿ ಗಾಂಭೀರ್ಯದಿಂದ ಹೊನಗ್ಯಾ ಬಂದಂತೆ ಪೆಳಿಯಿಂದ ಒಬ್ಬ ಹೊರಬರುತ್ತಿದ್ದ. ಗಂಟು ಕೈ ಸೇರುತ್ತಿದ್ದಂತೆ ರೊಟ್ಟಿಯ ಹಬ್ಬ. ನಮ್ಮ ಸಡಗರ.

ದಿನಗಳು ಸಾಗತೊಡಗಿದವು. ಕರಿಯಲ್ಲನ ಕುರಿತು ಕೇಳುವ ಸಲುಗೆ ಮಾತ್ರ ಬೆಳೆಯಲಿಲ್ಲ. ನೀವು ಯಾವ ಮಂದಿ... ಅಂತ ಕೇಳಿಯಾರು ಎಂಬ ಆತಂಕ ಎಲ್ಲ ಮಾತು ಮರೆಸಿಬಿಡುತ್ತಿತ್ತು. ಅಲ್ಲದೆ, ದಿನವೂ ಒಬ್ಬೊಬ್ಬ ವ್ಯಕ್ತಿ ಬರುತ್ತಿದ್ದ. ಒಮ್ಮೆ ಕರಿಯಲ್ಲನೂ ಬಂದಾನು ಎಂಬ ಹಂಬಲ ಕಣ್ಣಂಚಿಗೆ ನಿಂತು ಕಾಯುತ್ತಿತ್ತು. ನಾವು ಎಷ್ಟೋ ಬಾರಿ ಈಚಲು ಬೇರಿನ ತಿರುಳು, ಗೊಗ್ಗಟಿಗೆ ಮೀನು ಏಡಿ ಸುಟ್ಟು ತಿಂದು ಹೊಟ್ಟೆ ತುಂಬಿಸಿಕೊಳ್ಳುತ್ತಿದ್ದೆವು. ದಿನ ಕಳೆದಂತೆ ನಮ್ಮ ದೊಡ್ಡ ರೊಟ್ಟಿಗಂಟಿನ ಗುಟ್ಟು ರಟ್ಟಾಗತೊಡಗಿತು. ಇತ್ತೀಚೆಗೆ ಯೋಧರು ಗುಂಡಿಗೆ ಬಲಿಯಾದ ಸುದ್ದಿಗಳು ಹೆಚ್ಚೆಚ್ಚು ಕೇಳಿಬರತೊಡಗಿದ್ದವು. ಹೋರಾಟದ ಕಿಚ್ಚು ದೇಶಾದ್ಯಂತ ಹೆಚ್ಚುತ್ತಲಿತ್ತು. ಕರಿಯಲ್ಲನ ಸುದ್ದಿ ಮಾತ್ರ ಗೊತ್ತಾಗಲಿಲ್ಲ. ಯೋಧರು ರಾಜ್ಯದಿಂದ ರಾಜ್ಯಕ್ಕೆ ತಲೆಮರೆಸಿಕೊಂಡು ತಿರುಗುತ್ತಲಿದ್ದರು. ಇಂತಹ ಪರಿಸ್ಥಿತಿಯಲ್ಲಿ ನಾವು ಪೆದ್ದಿಯರು ರೊಟ್ಟಿ ಕೊಡುವ ವಿಷಯವನ್ನು ದೊಡ್ಡ ಹೆಮ್ಮೆ ಎಂದುಕೊಂಡು ಎಲ್ಲ ಕಡೆ ಬಾಯಿ ಬಡಿದುಕೊಂಡಿದ್ದು ಮೂರ್ಖತನ ಎನಿಸಿತು. ಆದರೆ ನಮಗೆ ಇದೆಲ್ಲಕ್ಕಿಂತ ನಮ್ಮ ರೊಟ್ಟಿ ತಿನ್ನುವವರು ಇದ್ದಾರೆ ಎಂಬುದನ್ನು ಸಾರಿ ಹೇಳುವ ಒಳ ತುಡಿತವನ್ನು ನಿಯಂತ್ರಿಸಿಕೊಳ್ಳದಾಗಿದ್ದೆವು. ಇದರ ಪರಿಣಾಮ ಎಂಥದ್ದು ಎಂಬುದು ನಮ್ಮ ತಿಳುವಳಿಕೆಗೆ ನಿಲುಕದ ಸಂಗತಿಯಾಗಿತ್ತು.

ಒಂದು ದಿನ ಮ್ಯಾಗಳ ಕೇರಿಗಳ ಜನ ನಮ್ಮ ಕೇರಿಯ ಕಡೆಗೆ ಧಾವಿಸಿ ಬಂದರು. ರೊಟ್ಟಿಯ ವಿಚಾರವಾಗಿ ಅವರು ಖಾರವಾಗಿದ್ದರು. ರೊಟ್ಟಿ ಕೊಡುವದಕ್ಕಿಂತ ಆ ಕುರಿತು ಹೇಳಿಕೊಳ್ಳುತ್ತಿದ್ದ ಬಗ್ಗೆ ಅವರ ಆತಂಕವಿದ್ದಂತಿತ್ತು. ಗುಂಪಿನಲ್ಲಿದ್ದ ಒಬ್ಬ ಒಣ ಶೂರ ನನ್ನ ಬೆನ್ನ ಮೇಲೆ ಬಾರಿಸಿದ, ಮತ್ತೊಬ್ಬನಿಗೆ ಸಂಕೀಯ ಬೆನ್ನು ಈಡಾಯಿತು. ಇಡಿ ಕೇರಿ ಹೇತ್ಲಾಂಡಿಯ ಸೋಗು ಹಾಕಿಕೊಂಡು ಕುಳಿತಿತ್ತು. ಎಲ್ಲೂ ರೊಟ್ಟಿಯ ಉಸಿರೊಡೆಯಬಾರದೆಂದು... ತಾಕೀತು ಮಾಡಿದರು.

ಅವತ್ತು ಬರಸಿಡಿಲಿನಂತಹ ಸುದ್ದಿ ಬಂದೆರಗಿತ್ತು. ಸುತ್ತ ಊರ ಜನ ಹೊಸರಿತ್ತಿಯ ಕಡೆಗೆ ಧಾವಿಸಿ ಹೊರಟಿದ್ದರು... ಹರವಿನಲ್ಲಿದ್ದ ನಮಗೆ ಊರಲ್ಲಿನ ಹುಯಿಲು ಕೇಳಿ ಏನೊಂದೂ ಅರ್ಥವಾಗದೆ ಲಗುಬಗನೆ ಊರತ್ತ ಧಾವಿಸಿದೆವು. ಊರ ಬಾಗಿಲಲ್ಲೆ ಇದಿರಾದ ಕೇರಿಯ ಜನರು ನಮ್ಮನ್ನು ಎತ್ತಿಕೊಂಡು ಮೈ ಕೈದಡುವುತ್ತ ಮನೆಗೆ ನಡೆದರು. ಕೇರಿಯ ಜನ ನಮ್ಮನ್ನೆ ಹಿಂಬಾಲಿಸಿದರು. ನಮ್ಮಿಂದಲೆ ಏನೋ ಅನಾಹುತ ನಡೆದುಹೋಗಿದೆ ಎನಿಸಿ ಭಯದಿಂದ ಗದಗದ ನಡುಗತೊಡಗಿದೆವು.

ಹೊಸರಿತ್ತಿಯ ನೆಲ ಕಾಂತನ ಕಳೆದುಕೊಂಡ ಕಾಮಿನಿಯಂತೆ ಕಣ್ಣೀರು ಹಾಕುತ್ತಲಿತ್ತು. ಮಾದೇವಪ್ಪ, ತಿರಕಪ್ಪ, ವೀರಯ್ಯ ಬ್ರಿಟಿಷರ ಗುಂಡಿಗೆ ಎದೆ ಕೊಟ್ಟು ಮಲಗಿದ್ದರು.

'ಆ ಹೊಲೆಮಾದ್ರಿಂದಲೆ ಸುದ್ದಿ ರಟ್ಟಾಗಿದೆ.. ಅವರ ನಾಲಿಗೆ ಸೀಳಬೇಕು.

ಇಡೀ ಕೇರಿಗೆ ಬೆಂಕಿ ಹಚ್ಚಬೇಕು. ಅನ್ನ ನೀರು ಕೊಡದೆ ಬಹಿಷ್ಕಾರ ಹಾಕಬೇಕು...' ಎಂಬ ಮಾತುಗಳನ್ನು ಕೇಳಿದ್ದ ಕೇರಿಯ ಜನರ ಜಂಘಾಬಲವೆ ಉಡುಗಿಹೋಗಿತ್ತು. ಗಂಡಸರ ನಡುಗುವ ಕೈಗಳು, ತೊಯ್ದು ಗುಬ್ಬಿಯಂತಾಗಿದ್ದ ಅವ್ವಂದಿರು, ಮೂಲೆಯಲ್ಲಿ ಗೂರುತ್ತ ಕುಳಿತ ಅಜ್ಜಂದಿರು, ಹಕ್ಕಿಪಿಕ್ಕಿಯಾಗಿ ಕಣ್ಣು ಬಿಡುತ್ತಿರುವ ತಮ್ಮ ತಂಗಿಯರು.. ಬಂಜರು ನೆಲದಲ್ಲಿ ಹುಟ್ಟಿ ಬೇರಿಗೆ ನೀರು ಸಾತಿಲ್ಲದೆ ಗೋಣು ಚೆಲ್ಲಿದ ಪೈರಿನಂತೆ ಇಡೀ ಕೇರಿ ಕಾಣುತ್ತಿತ್ತು.

ಊರಿನ ಗೌಜು ನಿಧಾನವಾಗಿ ಕಡಿಮೆಯಾಗಲು ಅರ್ಧ ದಿನವೆ ಹಿಡಿಯಿತು. ಹೊಸರಿತ್ತಿಯಲ್ಲಿ ಸೇರಿದ ಎಲ್ಲ ಜನರು ನಮ್ಮ ಬಗ್ಗೆ ಚರ್ಚಿಸುತ್ತಿರಬಹುದೆ? ಈ ಸಾವು ನೋವಿಗೆ ನಾವೆ ಕಾರಣ ಎಂದು ಹಣೆಪಟ್ಟಿ ಹಚ್ಚಬಹುದೆ? ಒಂದು ವೇಳೆ ಇಡಿ ಜನಸಾಗರವೇ ಹರಿದುಬಂದು ಕೇರಿಯನ್ನು ಹೊಕ್ಕರೆ? ಎಳೆ ಗುಂಡಿಗೆಗೆ ಹಿಮಾಲಯವೆ ಹರಿದುಬಂದು ಹೊಕ್ಕಂತಹ ನಡುಕ. ಯಾಕಾದರೂ ಹುಟ್ಟಿತೊ ಹುಲುಜನ್ಮ ಎನಿಸಿತು.

ಇಡೀ ಕೇರಿ ಅವತ್ತು ಒಲೆಗೆ ಬೆಂಕಿಯಿಡಲಿಲ್ಲ. ಮರಗಟ್ಟಿದಂತಹ ವಾತಾವರಣ. ಊರ ಜನ ಯಾವ ಕ್ಷಣದಲ್ಲಾದರೂ ಕೇರಿಗೆ ನುಗ್ಗಿ ದಾಂಧಲೆಯೆಬ್ಬಿಸಬಹುದು. ಆತಂಕದ ಮುಸುಕು ಎಳೆದುಕೊಂಡು ಕುಳಿತಿದ್ದೆವು. ಹುಲಿಯ ಹೆಜ್ಜೆ ಸದ್ದಿಗೆ... ತರಗೆಲೆಯ ಚಟಪಟಕ್ಕೆ ಬೆದರಿ ಕಿವಿಯಾನಿಸಿ ಅತ್ತಿತ್ತ ನೋಡುತ್ತ ನಿಂತ ಹುಲ್ಲೆಯ ಹಾಗೆ. ತುಸು ದೂರದಲ್ಲಿ ಏನೂ ಆಗಿಲ್ಲವೆಂಬಂತೆ ಕಂಬಕ್ಕೊರಗಿ ಕುಳಿತಿದ್ದ ತಿಮಲವ್ವತ್ತಿ ದುರುದುರು ನಮ್ಮನ್ನೆ ನೋಡುತ್ತಿದ್ದಳು. ಬಿರುಗಣ್ಣು, ಕೋರೆ ಮೀಸೆ ಎಲ್ಲ ಕಿತ್ತುಕೊಂಡು ಅವಳನ್ನುಳಿಸಿದ್ದವು.

ಕತ್ತಲು ಹರಿಯಲು ತುಸು ಹೊತ್ತಿದೆ. ಮತ್ತೊಂದು ಹುಯಿಲು... ಊರಿಗೆ ಬೆಂಕಿ ಬಿದ್ದಂತ ಹುಯಿಲು. ಬೆಳಗಿನ ಕೆಟ್ಟ ಸ್ವಪ್ನ. ತೆರೆಯದ ರೆಪ್ಪೆಗಳ ಮಂಪರು. ಕೇರಿಯ ಕಡೆಗೆ ನುಗ್ಗಿ ಬರುತ್ತಿರುವ ಹುಯಿಲು... ಸದ್ದು... ಮಹಾಪೂರ ಬರುವಾಗ ಹೊಳೆ ಹೀಗೆ ಹೆಬ್ಬಾವಿನಂತೆ ಬಾಯಿ ತೆರೆದುಕೊಂಡು ಕೇಕೆ ಹಾಕುತ್ತ ಬಂದಿತ್ತು. ಆಡು ದನ ಕೋಳಿ... ಹನುಮ ಮರಿಗಿ ಮಳ್ಳ ಕರಿನಿಂಗ ಕಣ್ಣ ಮುಂದೆ ಕೊಚ್ಚಿಕೊಂಡು ಹೋಗಿದ್ದರು. ಅಂಥದ್ದೆ ಕೇಡಿನ ಸೂಚನೆ. ಗೋಡೆ ಮೇಲಿನ ಗವುಳಿ ಲೊಚಗುಡುತ್ತಿದೆ, ಬಾಯಿ ಮುಚ್ಚುತ್ತಿಲ್ಲ. ಹುಯಿಲು ಹೆಚ್ಚಾಗುತ್ತಿದೆ. ಬೆಚ್ಚಿ ಕಣ್ಣುಜ್ಜಿ ನೋಡತೊಡಗಿದೆ. ಎಲ್ಲ ಮಸಕು ಮಸಕು. ನಸುಕಿನ ಪರದೆ ಹರಿಯುವಂತೆ ಜನ ನುಗ್ಗಿ ಬರುತ್ತಿದ್ದಾರೆ. ಇದು ಕನಸಲ್ಲ ಎಂಬುದು ಅರ್ಥವಾಯಿತು. ಸಂಕೀ ಮತ್ತು ನನ್ನನ್ನು ಗುರಿ ಮಾಡಿಕೊಂಡು ಬರುತ್ತಿದ್ದಾರೆ. ನಾವು ಥರಗುಟ್ಟತೊಡಗಿದೆವು. ಜೀವ ಬಾಯಿಗೆ ಬಂದಂತಹ ಅನುಭವ. ಕೇರಿಯ ಐದಾರು ಹಿರಿಯ ತಲೆಗಳು ಓಡಿ ಹೋಗಿ '...ಯಪ್ಪಾ ಹಸುಗೂಸು ಅದಾವು ಏನು ಮಾಡಬ್ಯಾಡ್ರೋ' – ಅನ್ನುತ್ತ ಕಾಲಿಗೆ ಬಿದ್ದವು. ಅಂದುಕೊಂಡಂತೆ ಅವರ ಕಾಲುಗಳೆ ಮಾತಾಡಿದವು. ನಂತರ ಹೆಂಗಸರು ದೌಡಾಯಿಸಿದರು. ಕಾಲು ಹಿಡಿದುಕೊಂಡರು. ಸೆರಗು ಪಾದ ಕಚ್ಚಿದವು. ಅವರು ಕರಗಲಿಲ್ಲ. ಯೋಧರ ಸಾವಿಗೆ ಕಾರಣವೆಂದು ಬಗೆದಿದ್ದ ನಮ್ಮನ್ನು ಕ್ಷಮೆಗೆ ಅರ್ಹರಲ್ಲದ ದೇಶದ್ರೋಹಿಗಳೆಂದು ನಿರ್ಧರಿಸಿಬಿಟ್ಟಿದ್ದರು. ಅವ್ವಂದಿರನ್ನು ತೆಕ್ಕೆ ಬಡಿದಿದ್ದ ನಮ್ಮನ್ನು ಎಳೆದು ಕಸಿದುಕೊಂಡರು. ಹೃದಯವನ್ನೆ ಬೇರ್ಪಡಿಸಿದಂತಹ ರೋದನ. ಕ್ಷಣಾರ್ಧದಲ್ಲಿ ಮೈ ಬಾತುಕೊಂಡು ನಿಂತಿತು. ಜನಸಮೂಹದ ಕ್ರೌರ್ಯ ತಪ್ತವಾಯಿತು.

ಇದರ ಜೊತೆಗೆ ಇನ್ನೊಂದು ಆತಂಕ ನಮ್ಮನ್ನು ಕಾಡುತ್ತಲಿತ್ತು. ಇಷ್ಟೆಲ್ಲ ನಿಮ್ಮಿಂದಲೆ... ಎಂದು ಕೇರಿಯ ಜನ ಮೇಲೆ ಬೀಳಬಹುದೆಂಬ ಆತಂಕ. ಆದರೆ ಹಾಗಾಗಲಿಲ್ಲ. ಕೇರಿ ತನ್ನ ಮಕ್ಕಳಂತೆ ಕಂಡಿತು.

ಒಂದಿಡೀ ವಾರ ಕೇರಿ ಮಾತು ಮರೆತಂತೆ ಇತ್ತು. ಬದುಕು ಮತ್ತೆ ನಮ್ಮನ್ನು ಅಣಿಗೊಳಿಸಿತು. ದನ ಕಾಯದೆ ಗತ್ಯಂತರವಿರಲಿಲ್ಲ. ಈ ಸಾರಿ ರೊಟ್ಟಿಯ ಉಸಾಬರಿ ಬೇಡವೆಂದು... ಸ್ವಾತಂತ್ರ್ಯ ಸಿಕ್ಕರೆಷ್ಟು, ಬಿಟ್ಟರೆಷ್ಟು ಎಂದು

ನಿರ್ಧರಿಸಿದ್ದೆವು. ಬ್ರಿಟಿಷರ ಆತಂಕ ನಮಗೆ ಕಾಡಿದ್ದು ಕಡಿಮೆಯೆ. ಕಟ್ಟಿದ ಕಣ್ಣಿಯಲ್ಲೆ ಮಕ್ಕಳಂತೆ ಕರೆಯುತ್ತಿದ್ದ ದನಗಳು ನಾವು ಜೊತೆಯಾದೆವು. ಇಷ್ಟು ದಿನ ಕೂಳಿಲ್ಲದೆ ಯಾವ ಯೋಧರೂ ಇಲ್ಲಿ ಇರಲಾರರು ಎಂಬ ಖಾತರಿ ಇತ್ತು... ಹೀಗಾಗಿ ನಮಗೆ ಪೆಳಿಯ ಕಡೆಗೆ ಹೋಗಲು ಭಯವಿರಲಿಲ್ಲವಾದರೂ ಆ ದಿಕ್ಕಿನ ಉಸಾಬರಿಯೆ ಬೇಡವೆಂದುಕೊಂಡಿದ್ದೆವು.

ಆದರೆ, ಒಂದು ವೇಳೆ ಯೋಧರು ಸ್ಥಳ ಬದಲಾಯಿಸದೆ ಉಳಿದಿದ್ದರೆ ಅವರ ಗತಿಯೇನು ಎಂಬ ಯೋಚನೆ ಕರಳನ್ನು ಚುರ್ರೆನಿಸಿತು. ಕರುಳಿಗೆ ನಾಚಿಕೆ ಇಲ್ಲ. ದಡ್ಡ ಮೈ ಎಲ್ಲ ಮರೆತು ಬಿಸಿಲಿಗೆ ಮುಖ ಮಾಡಿತ್ತು. ಪೆಳಿಯಿಂದ ನಾವು ಅಂತರ ಕಾಯ್ದುಕೊಂಡರೆ, ಬೇಬರ್ಸಿ ದನಗಳು ರೂಢಿಯಂತೆ ಅತ್ತಲೆ ಹೋಗುತ್ತಿದ್ದವು. ಬೇಡವೆಂದರೂ ನದರು ಪೆಳಿಯತ್ತಲೆ ಸರಿಯುತ್ತಿತ್ತು. ಸಂಕೀಗಂತೂ ಕರಿಯಲ್ಲನ ಹಂಬಲ. ಮತ್ತೆ ಹಳ್ಳದ ದಂಡೆ ಕೂಗಿ ಕರೆಯಿತು.

ಕೋಳಿ ಕೂಗುವ ಮುನ್ನವೆ ಮನಸ್ಸು ಎದ್ದು ಕುಳಿತಿತು. ಮತ್ತೆ ಗಂಟು ಕಟ್ಟಿಕೊಂಡು ನಿಂತವು. ಸಂಕೀ ಮಣಕ ಏರಿ ಕುಳಿತಳು. ನಾನು ಬಾಲ ಹಿಂಡಿದೆ. ಗಾಳೆವ್ವನ ಗುಡಿಯ ಗಂಟೆ ಮೊಳಗಿತು... ಪೆಳಿಯ ಸಂದಿಯಿಂದ ಒಂದೊಂದಾಗಿ ಸೋತ ಹೆಜ್ಜೆಗಳನ್ನಿಡುತ್ತ ಮುದಿ ಹೊನಗ್ಯಾವೊಂದು ಹೊರಬಂತು. ಅಯ್ಯೋ... ಪಾಪ! ಯೋಧರು ಇಲ್ಲಿಯೆ ಇದ್ದರೆ? ಸಂಕೀ ಕುಂಡೆಗೆ ಕಾಲು ಹತ್ತುವಂತೆ ಓಡಿದಳು. ನನಗೆ ಅನುಮಾನ. ಕರಿಯಲ್ಲನೇನಾದರೂ ಇರಬಹುದೆ? ಮಣಕನ ಮೇಲೆ ಕುಳಿತ ಸಂಕೀಯಷ್ಟು ಸ್ಪಷ್ಟವಾಗಿ ನನಗೆ ವ್ಯಕ್ತಿ ಕಾಣುತ್ತಿರಲಿಲ್ಲ. ಅವಳ ನೆಗೆತ ಕಂಡು ನನಗೆ ಅನುಮಾನ. ಕಣ್ಣಿಗಿಂತ ಕರುಳಿನ ದೃಷ್ಟಿ ಹರಿತವಾದದ್ದು. ಕರಿಯಲ್ಲನೆ ಇರಬೇಕೆಂಬ ಅನುಮಾನ ದಟ್ಟವಾಗಿ ನಾನು ಅತ್ತ ಓಡಿದೆ. ಆದರೆ ಕರಿಯಲ್ಲ ಅಲ್ಲ. ಸೋತ ಕಾಲುಗಳ ಕಂಡ ಸಂಕವ್ವನ ಕರಳು ಆ ಉದ್ದಕ್ಕೂ ನೆಗೆದು ಓಡಿತ್ತು. ಅವನಲ್ಲಿ ಕರಿಯಲ್ಲನ ಕುರಿತು ವಿಚಾರಿಸಿದೆವು. ಆ ಹೆಸರಿನ ಯಾರೂ ಇಲ್ಲಿಲ್ಲ ಎಂದು ತಿಳಿದು ಬೇಸರವಾಯಿತು. ಆದರೆ ಈ ಯೋಧರು ತಮ್ಮ ಹೆಸರನ್ನು ಬದಲಿಸಿ ಇಟ್ಟುಕೊಂಡಿರುತ್ತಾರೆ ಎಂಬುದು ನಮಗೆ ಗೊತ್ತಿದ್ದುದು ಅಷ್ಟು ನಿರಾಸೆ ಉಂಟುಮಾಡಲಿಲ್ಲ. ಇತ್ತೀಚೆಗೆ ಶಿವಮೊಗ್ಗೆಯಲ್ಲಿ ಹನ್ನೊಂದು ಯೋಧರು ಹುತಾತ್ಮರಾದ ಸುದ್ದಿ ಕೇಳಿ ಬೆಚ್ಚಿದೆವು. ಆದರೆ ಅವನಿಗೂ ಪೂರ್ಣ ವಿವರಗಳು ಗೊತ್ತಿರಲಿಲ್ಲ.

ಇತ್ತಿತ್ತಲಾಗಿ ಯಾರಿಗೂ ಅಂಜಬಾರದೆಂಬ ಧೈರ್ಯ ನಮಗೆ ಬಂದಿತ್ತು. ಮನೆಗೆ ಹೋದಂತೆ ಪೆಳಿಯ ಕಡೆಗೆ ಹೋಗುತ್ತಿದ್ದೆವು. ಕೇರಿಯ ಜನರು ಊರ ಜನರಿಗೆ ಎದಿರು ಮಾತನಾಡುವಷ್ಟು ಧೈರ್ಯಶಾಲಿಗಳಾಗತೊಡಗಿದ್ದರು.

'ಅದು ಮಂಗಳವಾರ ದಿವಸ..' ಅವ್ವ ಮಾತು ನಿಲ್ಲಿಸಿದಳು. ನಾನು ನೀರು ಮುಂದಿಟ್ಟೆ. ಅವಳು ಬಾಯಾರಿರಲಿಲ್ಲ. ಮನಸ್ಸು ಮಣಭಾರದಿಂದ ಬಿಗಿಯುತ್ತಲಿತ್ತು. ಅವಳು ಹೊರೆ ಇಳಿಸಬೇಕಿತ್ತು, ಅದೊಂದು ರೀತಿಯ ಕಷ್ಟ.

'ಇಬ್ಬರ ರೊಟ್ಟಿ ಗಂಟು ಹೊತ್ತು... ಯಕ್ಕಾ ಕೊಟ್ಟು ಬರ್ತೀನಿ ಎಂದು ಸಂಕೀ ಪೆಳಿಯ ಕಡೆ ಹೊರಟಳು. ನಾನು ದನಗಳ ಕಡೆಗೆ ನೆದರಿಟ್ಟೆ. ಹೊತ್ತು ನೆತ್ತಿಗೇರುತ್ತಲಿತ್ತು. ಮಟಮಟ ಮಧ್ಯಾಹ್ನ ಏನೊ ಕೂಗಿದಂತೆ. ಬೆಚ್ಚಿ ಸಂಕೀ ಹೋದತ್ತ ತಿರುಗಿದೆ. ಆದರೆ ಏನೂ ಕಾಣುತ್ತಿಲ್ಲ, ಏನೋ ಕೂಗಿದ ಶಬ್ದ. ಅರ್ಥವಾಗುತ್ತಿಲ್ಲ. ಎದೆ ಬಡಿದುಕೊಳ್ಳತೊಡಗಿತು. ಅಷ್ಟೆತ್ತರ ಬೆಳೆದ ಜೋಳದ ಬೆಳಸಿ ದೆವ್ವದ ಗಾಳಿಗೆ ಸಿಕ್ಕಂತೆ ತುಯ್ದಾಡುತ್ತಿದೆ. ಹಾಗೆ ಮುಂದಕ್ಕೆ ಸೆಳೆದಂತೆ ಎಳೆದೊಯ್ಯುತ್ತಿರುವಂತೆ ತೆನೆ ತುಯ್ದಾಡುತ್ತಿದೆ. ಗಾಬರಿಯಿಂದ ಎದ್ದು ಬಿದ್ದು ಓಡತೊಡಗಿದೆ. 'ಸಂಕೀ...' ಮುಗಿಲುಮುಟ್ಟುವಂತೆ ಕೂಗಿದೆ. ಅವಳ ಉತ್ತರವಿಲ್ಲ. ನನ್ನ ಗಾಬರಿ ಹೆಚ್ಚಾಯಿತು. ಯಾರನ್ನಾದರೂ ಕೂಗೋಣವೆಂದು ಸುತ್ತ ಕಣ್ಣಾಡಿಸಿದೆ. ಯಾರೂ ಕಾಣುತ್ತಿಲ್ಲ. ಜೋಳದ ದಂಟು ಹೋಳು ಮಾಡಿ ನೋಡ ತೊಡಗಿದೆ. ಸಂಕೀ ಕಾಣುತ್ತಿಲ್ಲ. 'ಸಂಕೀ...' ಕೂಗಿದೆ. ಜೋಳದ ಬೆಳಸಿಗುಂಟ ಏನೋ ಸಳಸಳ ಸದ್ದು. ಮುಂದೆ ಮುಂದಕ್ಕೆ ಎಳೆದೊಯ್ಯುತ್ತಿರುವಂತ ಸದ್ದು. ಯಕ್ಕೋ.. ಪಕ್ಕೇರಕ್ಕೋ.. ಸಂಕೀ ಚೀರಿಕೊಂಡಳು. ಯಪ್ಪೋ... ಘಾತ ಆಯ್ತರೋ.. ಎಂದು ಕೂಗುತ್ತ ಅದರಗುಂಟ ಹಿಂಬಾಲಿಸಿದೆ ಅಲ್ಲಲ್ಲಿ ರೊಟ್ಟಿ ಬಿಚ್ಚಿಬಿದ್ದಿವೆ. ತಕ್ಷಣವೆ ಅರ್ಥವಾಯಿತು.. 'ಹೊನಗ್ಯಾ..! ಯಣ್ಣಾ ಯಾರಾದ್ರೂ ಬರ್ರೋ...' ಯೋಧರನ್ನು ಕೂಗಿ ಕರೆದೆ. ಎಲ್ಲಿ ಹಾಳಾಗಿ ಹೋದರೋ, ಅವರ ಸದ್ದಿಲ್ಲ. ಅಷ್ಟು ದೂರದಲ್ಲಿ ತೆನೆ ತುಯ್ದಾಡುತ್ತಿವೆ, ಆದರೆ ಸಂಕೀಯ ಸದ್ದಿಲ್ಲ. ಇನ್ನಷ್ಟು ಕೂಗುತ್ತ ಮುಂದೆ ಓಡಿದೆ. ರೊಟ್ಟಿ ಚೆಲ್ಲಾಪಿಲ್ಲಿಯಾಗಿವೆ ಆದರೆ ಯಾವ ಹೆಜ್ಜೆ ಗುರುತೂ ಕಾಣುತ್ತಿಲ್ಲ...! ತಕ್ಷಣವೆ ತಿಮಲವ್ವತ್ತಿ ನೆನಪಾದಳು. ಅಯ್ಯೋ ಯಪ್ಪಾ ರಾಕ್ಷಸರು ಹೊತ್ತುಕೊಂಡು ಹೋದರೆ..? ಸಂಕೀ ಸಂಕವ್ವಾ.. ದನಿ ಉಡುಗುವವರೆಗೂ ಕೂಗಿದೆ. ತೆನೆಯ ಆರ್ಭಟ ಸ್ತಬ್ಧವಾಗಿತ್ತು. ನಾನು ನಿಂತಲ್ಲೆ ನಿಂತೆ ಇದ್ದೆ. ಹೆಜ್ಜೆ ಕೀಳಲಾರದಷ್ಟು ಹೆದರಿ ಬೆಪ್ಪು ಬಡಿದಿದ್ದೆ. ಯಾವ ಕ್ಷಣದಲ್ಲಾದರೂ ರಕ್ಕಸ ಕೈಗಳು ನನ್ನ ಬಾಯಿ ಮುಚ್ಚಿ ಹಿಡಿಯಬಹುದಾದ ಸಾಧ್ಯತೆಯಿತ್ತು. ಈ ಎಚ್ಚರ ಬಂದ ಕೂಡಲೆ ಮನೆ ಕಡೆಗೆ ಓಡತೊಡಗಿದೆ.

ದಂಗು ಬಡಿದಂತಾಗಿದ್ದ ನಾನು ಏನೂ ಹೇಳಲಾಗಲಿಲ್ಲ. ಜನರು ನನ್ನನ್ನು ಹಿಂಬಾಲಿಸಿದರು. ಸಂಕೀ... ಸಂಕವ್ವ... ಅಳಲು ಮಾರ್ದನಿಸಿತು. ಸಂಕೀಯ ಮಾರುತ್ತರವಿಲ್ಲ. ಅಷ್ಟು ದೂರಕ್ಕೆ ನಾನು ಬೊಟ್ಟು ಮಾಡಿ ತೋರಿಸಿದೆ. ಅಲ್ಲಿ ಇನ್ನೂ ಜೋಳದ ಬೆಳಸಿ ತುಯ್ದಾಡತೊಡಗಿತ್ತು. ಜನರು ಓಡಿ ತಲುಪಿದರು. ಅಲ್ಲಿ ಎಲ್ಲ ದನಕರುಗಳು ಸುತ್ತುವರಿದಿದ್ದವು. ಅವ್ವನ ಎದೆ ತಡುಕುವಂತೆ ಅವು ಒದರುತ್ತ ಸಂಕೀಯನ್ನು ನೆಕ್ಕುತ್ತಲಿದ್ದವು. ಅಲ್ಲಲ್ಲಿ ರೊಟ್ಟಿಯ ತುಣುಕು ಚೆಲ್ಲಾಪಿಲ್ಲಿಯಾಗಿದ್ದವು. ಮತ್ತು ಅಲ್ಲಿ ಯಾವ ಪ್ರಾಣಿಯ ಹೆಜ್ಜೆ ಗುರುತುಗಳು ಇರಲಿಲ್ಲ... ಅವ್ವ ಜೀವಮಾನದ ಕೊನೆಯ ಮಾತು ಆಡುತ್ತಿರುವಂತೆ ಕಂಡಳು. ಬತ್ತಿಹೋದ ಗುಳಿಗಳು ತುಂಬಿ ಹರಿಯತೊಡಗಿದವು.

ಬೆಳಗಾದರೆ ಅಗಷ್ಟ ಹದಿನೈದು. ನಾಳೆ ಮೊದಲ ಬಾರಿಗೆ ಪ್ರಭಾತ್‌ಪೇರಿ ಕೇರಿಗೆ ಬರುತ್ತದೆ. ಅದು ಮತ್ತೆ ಸಂಕೀಯ ನೆನಪು ಹೊತ್ತು ತರುತ್ತದೆ. ಅವ್ವ ಮತ್ತೆ ಅಳಬೇಕು.

*ಯಾವುದರ ಪರಿವೆ ಇಲ್ಲದ ದಣ್ಣೇರ ನಾಗ್ಯಾ ಅಂಗಳದಲ್ಲಿ ಕೂತು ಲಾವಣಿ ಹಾಡುತ್ತಲಿದ್ದ...*
*ಕಾಂತನ ಕಳಕೊಂಡ ಕಾಮಿನಿಯಂತೆ ಭಾರತ ಹಾಕುವದು ಕಣ್ಣೀರಾ...*
*ಶಾಂತಿ ಸಮರದೋಳು ಮಡಿದ ಮಾದೇವಪ್ಪಾ ಮೈಲಾರಾ....*
*ನಶೆ ಏರುತ್ತಿದ್ದಂತೆ ದನಿಯೂ ಏರುತ್ತಲಿತ್ತು.*

**ಚ. ಲಿಂಗರಾಜ ಸೊಟ್ಟಪ್ಪನವರ**
ಹೊಸಳ್ಳಿ ಬಿಲ್ಡಿಂಗ್, ಎಲ್.ಐ.ಸಿ. ಆಫೀಸ್ ಹಿಂಭಾಗ, ವಿದ್ಯಾನಗರ (ಪಶ್ಚಿಮ), ಹಾವೇರಿ–೫೮೧೧೧೦

# ಜಾಗತೀಕರಣ



ಮಾರ್ಕ್ಸ್‌ರ ಚಿಂತನೆಯು ಆವರೆಗಿನ ದರ್ಶನಗಳಿಂದ ಬೇರೆ ಹಾದಿಹಿಡಿದು, ತತ್ವಶಾಸ್ತ್ರಗಳು ಬದುಕಿನ ವಾಸ್ತವತೆಯ ಜೊತೆ ಮುಖಾಮುಖಿ ಆಗುವಂತೆ ಮಾಡಿತು. ಅವರ ಐತಿಹಾಸಿಕ ಭೌತವಾದ, ಮಾನವ ಜನಾಂಗದ ಭೌತ ವಸ್ತುಗಳ ಉತ್ಪಾದನಾ ಚಟುವಟಿಕೆಗಳಿಂದ ಆರಂಭವಾಗುತ್ತದೆ. ಆದ್ದರಿಂದ, ವಾಸ್ತವ ಜಗತ್ತಿನಲ್ಲಿ ಬಲವಾಗಿ ಕಾಲೂರಿರುತ್ತದೆ. ಹೀಗಾಗಿ ಮಾನವ ಸಮಾಜಗಳ ಪ್ರಗತಿಯ ದಿಕ್ಕುಗಳನ್ನು ಗುರ್ತಿಸುವುದರ ಮೂಲಕ, ಜಾಗತಿಕ ಇತಿಹಾಸದ ಲಕ್ಷಣಗಳು, ಪ್ರವರ್ಗಗಳು ಮತ್ತು ಮೂಲಗಳನ್ನು ಅನಾವರಣ ಮಾಡುತ್ತದೆ.

– ೧ –

"ಆಧುನಿಕ ಕೈಗಾರಿಕೆಯು ಜಾಗತಿಕ ಮಾರುಕಟ್ಟೆಯನ್ನು ಸ್ಥಾಪಿಸಿದೆ. ಅಮೇರಿಕಾವನ್ನು ಕಂಡುಹಿಡಿದದ್ದು, ಇದಕ್ಕೆ ಅವಕಾಶ ಮಾಡಿಕೊಟ್ಟಿತು..."

ತನ್ನ ಉತ್ಪಾದನೆಗಳಿಗೆ ನಿರಂತರವಾಗಿ ವಿಸ್ತರಣೆಯಾಗುತ್ತಿರುವ ಮಾರುಕಟ್ಟೆಯ ಅಗತ್ಯಕ್ಕಾಗಿ, ಬೂರ್ಶ್ವಾ ವರ್ಗದವರು, ಇಡೀ ಭೂಗೋಳದ ಮೇಲ್ಪದರಿನ ಎಲ್ಲ ಸ್ಥಳಗಳಿಗೂ, ಯಾರೋ ಅಟ್ಟಿಸಿಕೊಂಡು ಬಂದಂತೆ, ಹೋಗಿ ತಲುಪುತ್ತಾರೆ. ಅದು ಎಲ್ಲ ಕಡೆ ಗೂಡು ಕಟ್ಟಬೇಕು, ಎಲ್ಲೆಲ್ಲೂ ಬೀಡು ಬಿಡಬೇಕು, ಎಲ್ಲೆಲ್ಲೂ ಸಂಪರ್ಕ ಸಾಧಿಸಬೇಕು.

"ಜಾಗತಿಕ ಮಾರುಕಟ್ಟೆಯ ಶೋಷಣೆಯಿಂದಾಗಿ, ಬೂರ್ಶ್ವಾ ವರ್ಗ ಪ್ರತಿದೇಶದಲ್ಲೂ ಉತ್ಪಾದನೆ ಮತ್ತು ಬಳಕೆಗೆ ಅಂತರರಾಷ್ಟ್ರೀಯ ಗುಣಲಕ್ಷಣಗಳನ್ನು ಆರೋಪಿಸಿದೆ... ಅದು ಕೈಗಾರಿಕೆಯ ಕಾಲಕೆಳಗಿನಿಂದ, ಅದು ನಿಂತಿರುವ ರಾಷ್ಟ್ರೀಯತೆ ಎಂಬ ನೆಲ ಕುಸಿಯುವಂತೆ ಮಾಡಿದೆ. ಹಿಂದೆ ಸ್ಥಾಪನೆಗೊಂಡಿದ್ದ ಎಲ್ಲ ರಾಷ್ಟ್ರೀಯ ಕೈಗಾರಿಕೆಗಳನ್ನೂ ನಾಶ ಮಾಡಲಾಗಿದೆ ಅಥವಾ ದಿನವೂ ನಾಶಮಾಡಲಾಗುತ್ತಿದೆ. ಅವುಗಳನ್ನು ಹೊಸ ಕೈಗಾರಿಕೆಗಳು ತೊಡೆದುಹಾಕುತ್ತಿವೆ. ಈ ಹೊಸ ಕೈಗಾರಿಕೆಗಳ ಸ್ಥಾಪನೆ ಎಲ್ಲ ನಾಗರಿಕ ರಾಷ್ಟ್ರಗಳ ಜೀವನ್ಮರಣ ಪ್ರಶ್ನೆಯಾಗಿದೆ. ಈ ರೀತಿಯ ಕೈಗಾರಿಕೆಗಳು ಸ್ಥಳೀಯವಾಗಿ ಲಭ್ಯವಾದ ಕಚ್ಚಾ ವಸ್ತುಗಳನ್ನು ಅವಲಂಬಿಸಿರುವುದಿಲ್ಲ. ಬದಲಾಗಿ, ಅತಿ ದೂರದ ಪ್ರದೇಶಗಳಿಂದ ಈ ಕಚ್ಚಾವಸ್ತುಗಳನ್ನು ಪಡೆಯಲಾಗಿರುತ್ತದೆ. ಈ ಕೈಗಾರಿಕೆಗಳ ಉತ್ಪಾದನೆಗಳನ್ನು ಬರೀ ಸ್ವದೇಶದಲ್ಲಿ ಮಾತ್ರ ಬಳಕೆ ಮಾಡುವುದಲ್ಲ. ಭೂಗೋಳದ ಪ್ರತಿ ಭಾಗದಲ್ಲೂ ಇವು ಬಳಕೆ ಆಗುತ್ತವೆ. ಹಳೆಯ ಬೇಡಿಕೆಗಳು ಸ್ವದೇಶದ ಉತ್ಪಾದನೆಗಳಿಂದ ತೃಪ್ತವಾಗುತ್ತಿದ್ದವು. ಅವುಗಳ ಜಾಗಗಳನ್ನು ಹೊಸ ಬೇಡಿಕೆಗಳು ಆಕ್ರಮಿಸಿವೆ. ಅವುಗಳ ತೃಪ್ತಿಗೆ ಬೇಕಿವೆ ದೂರ ಪ್ರದೇಶಗಳ ಮತ್ತು ದೂರ ಪರಿಸರಗಳ ಉತ್ಪಾದನೆಗಳು. ಹಳೆಯ, ಸ್ಥಳೀಯ ಮತ್ತು ರಾಷ್ಟ್ರೀಯ ಪ್ರತ್ಯೇಕತೆ ಮತ್ತು ಸ್ವಯಂಪೂರ್ಣತೆ ಬದಲು ಪ್ರತಿದಿಕ್ಕಿನಲ್ಲೂ ಸಂವಹನ, ಸಂಪರ್ಕ, ರಾಷ್ಟ್ರಗಳ ಪರಸ್ಪರ, ವಿಶ್ವ ಪರಾವಲಂಬನೆ...

**ಕೆ. ಪಿ. ವಾಸುದೇವನ್**

"ಬೂರ್ಶ್ವಾ ವರ್ಗ, ತನ್ನ ಎಲ್ಲಾ ಉತ್ಪಾದನಾ ಉಪಕರಣಗಳ ಶೀಘ್ರ ನವೀಕರಣ ಮತ್ತು ಬೃಹತ್ತಾಗಿ ಬೆಳೆದಿರುವ ಅತ್ಯಂತ ಸರಳ ಮತ್ತು ಸುಲಭವಾದ ಸಂಪರ್ಕ – ಇವುಗಳಿಂದಾಗಿ ಅತ್ಯಂತ ಬರ್ಬರ ದೇಶವನ್ನೂ ನಾಗರಿಕತೆಯ ಪರಿಧಿಯ ಒಳಕ್ಕೆ ಎಳೆದುಕೊಳ್ಳುತ್ತದೆ."

ಇದು ಜಾಗತೀಕರಣ ಕುರಿತು ಇಂಟರ್‌ನೆಟ್ ಇತ್ಯಾದಿಗಳಲ್ಲಿ ಯಾರೋ ಹೇಳಿದ ಮಾತುಗಳಲ್ಲ. ಬದಲಾಗಿ ಸುಮಾರು ನೂರೈವತ್ತು ವರ್ಷಗಳ ಹಿಂದೆ ಮಾರ್ಕ್ಸ್ ಮತ್ತು ಏಂಗೆಲ್ಸ್ ತಮ್ಮ "ಕಮ್ಯುನಿಸ್ಟ್ ಮ್ಯಾನಿಫೆಸ್ಟೋ"ವಿನಲ್ಲಿ ಹೇಳಿರುವ ಮಾತುಗಳು. ಇದು 'ಭವಿಷ್ಯ ವಾಣಿ' ಅಲ್ಲ.

ರಾಜಕೀಯ ಅರ್ಥಶಾಸ್ತ್ರದ ವೈಜ್ಞಾನಿಕ ವಿಶ್ಲೇಷಣೆಯಿಂದ ಹೊರಹೊಮ್ಮಿದ ತೀರ್ಮಾನಗಳು, ಮಾರ್ಕ್ಸ್‌ರ ತಾತ್ವಿಕ ನಿಲುವುಗಳು, ಹಳೆಯ ಭಾವನಾವಾದಿ ದರ್ಶನಗಳಿಂದ ಬೇರೆ ಹಾದಿಹಿಡಿದು, ತತ್ವಶಾಸ್ತ್ರಗಳು ಬದುಕಿನ ವಾಸ್ತವತೆಯ ಜೊತೆ ಮುಖಾಮುಖಿ ಆಗುವಂತೆ ಮಾಡಿದವು. ಅವರ ಐತಿಹಾಸಿಕ ಭೌತವಾದ, ಮಾನವ ಜನಾಂಗದ ಭೌತ ವಸ್ತುಗಳ ಉತ್ಪಾದನಾ ಚಟುವಟಿಕೆಗಳಿಂದ ಆರಂಭವಾಗುತ್ತದೆ. ಆದ್ದರಿಂದ, ವಾಸ್ತವ ಜಗತ್ತಿನಲ್ಲಿ ಬಲವಾಗಿ ಕಾಲೂರಿರುತ್ತದೆ. ಹೀಗಾಗಿ ಮಾನವ ಸಮಾಜಗಳ ಪ್ರಗತಿಯ ದಿಕ್ಕುಗಳನ್ನು ಗುರ್ತಿಸುವುದರ ಮೂಲಕ, ಜಾಗತಿಕ ಇತಿಹಾಸದ ಲಕ್ಷಣಗಳು, ಪ್ರವರ್ಗಗಳು ಮತ್ತು ಮೂಲಗಳನ್ನು ಅನಾವರಣ ಮಾಡುತ್ತದೆ.

ಅದರಿಂದಾಗಿ ಜಾಗತಿಕ ಇತಿಹಾಸದಲ್ಲಿ ಬಂಡವಾಳದ ಪಾತ್ರ ಮತ್ತು ಸ್ಥಾನವನ್ನು ಗುರ್ತಿಸುತ್ತದೆ. ಬಂಡವಾಳದ ವಿಜ್ಞಾನವೇ ಮಾರ್ಕ್ಸ್‌ವಾದ. ಆದ್ದರಿಂದ ಬಂಡವಾಳದ ಗುಣ, ಲಕ್ಷಣಗಳು, ಅದು ಯಾವ ರೀತಿ ಬದಲಾಗುತ್ತದೆ ಎಂಬುದನ್ನು ಅರಿಯಲು ಸೂಕ್ತವಾದ ವೈಜ್ಞಾನಿಕ ಉಪಕರಣಗಳನ್ನು ನೀಡುತ್ತದೆ. ಮೇಲೆ ಉದಾಹರಿಸಿದ ಮಾತುಗಳಿಂದ, ಬಂಡವಾಳ ಇಂದು ತಳೆದಿರುವ ವಿರಾಟ್ ಸ್ವರೂಪ ಹೇಗೆ ಸಾಧ್ಯವಾಯಿತು ಎಂಬುದು ನಮಗೆ ಅರ್ಥವಾಗಿರುತ್ತದೆ. ಮಾರ್ಕ್ಸ್ ಬಹುಶಃ ಜಾಗತೀಕರಣವನ್ನು ಸೈದ್ಧಾಂತಿಕವಾಗಿ ವಿಶ್ಲೇಷಿಸಿದ ಮೊಟ್ಟಮೊದಲ ದಾರ್ಶನಿಕ ಎಂದರೆ ಅತಿಶಯೋಕ್ತಿ ಆಗದು.

ಲೆನಿನ್ ೧೯೧೬ರಲ್ಲಿ "ಸಾಮ್ರಾಜ್ಯಶಾಹಿ, ಬಂಡವಾಳದ ಅತಿನೂತನ ಸ್ತರ" ಎಂಬ ಕಿರು ಹೊತ್ತಿಗೆಯನ್ನು ಹೊರತಂದರು. ಅದರಲ್ಲಿ ಬಂಡವಾಳದ ಬೆಳವಣಿಗೆಯನ್ನು ಕುರಿತು ಹೇಳುವ ಮಾತುಗಳನ್ನು ನೋಡಿ –

"ನಾವು ಸಾಮ್ರಾಜ್ಯಶಾಹಿಗೆ ಒಂದು ವ್ಯಾಖ್ಯಾನ ನೀಡಬೇಕು. ಅದು ಈ ಕೆಳಗೆ ಕಾಣಿಸಿದ ಐದು ಮೂಲಭೂತ ಲಕ್ಷಣಗಳನ್ನು ಒಳಗೊಂಡಿರಬೇಕಾಗುತ್ತದೆ.

೧. ಉತ್ಪಾದನೆಯ ಮತ್ತು ಬಂಡವಾಳದ ಕೇಂದ್ರೀಕರಣವು ಎಷ್ಟು ಉನ್ನತಸ್ತರದವರೆಗೆ ಬೆಳೆದಿದೆ ಎಂದರೆ, ಅದು ಏಕಸ್ವಾಮ್ಯಗಳನ್ನು ಸೃಷ್ಟಿಸಿದೆ. ಇವು ಆರ್ಥಿಕ ಬದುಕಿನಲ್ಲಿ ನಿರ್ಣಾಯಕ ಪಾತ್ರ ವಹಿಸಿವೆ.
೨. ಬ್ಯಾಂಕ್‌ನ ಬಂಡವಾಳ, ಕೈಗಾರಿಕಾ ಬಂಡವಾಳದ ಜೊತೆ ಮಿಳಿತ ಗೊಂಡಿರುತ್ತದೆ ಮತ್ತು ಈ "ವಿತ್ತ ಬಂಡವಾಳ" ಆಧರಿಸಿ, ಕೆಲವೇ ಜನರ ಗುಂಪು ಆಡಳಿತದ ಒಂದು "ಆರ್ಥಿಕ ಸರ್ವಾಧಿಕಾರ" ಸೃಷ್ಟಿಯಾಗಿರುತ್ತದೆ.
೩. ಬಂಡವಾಳದ ರಫ್ತು, ಸರಕುಗಳ ರಫ್ತಿಗಿಂತ ಪ್ರತ್ಯೇಕಗೊಂಡಿದ್ದು ಅತ್ಯಂತ ಮಹತ್ವದ ಸ್ಥಾನ ಹೊಂದಿರುತ್ತದೆ.
೪. ಅಂತರರಾಷ್ಟ್ರೀಯ ಏಕಸ್ವಾಮ್ಯ ಬಂಡವಾಳ ಸಂಸ್ಥೆಗಳ ಸ್ಥಾಪನೆಯಾಗಿದ್ದು, ಅವುಗಳು ಇಡೀ ಜಗತ್ತನ್ನು ತಮ್ಮಲ್ಲೇ ಹಂಚಿಕೊಂಡಿರುತ್ತವೆ.
೫. ಇಡೀ ಜಗತ್ತಿನ ಭೌಗೋಳಿಕ ವಿಸ್ತಾರ, ಅತಿದೊಡ್ಡ ಬಂಡವಾಳ ಶಕ್ತಿಗಳಲ್ಲಿ ಹಂಚಿಕೆ ಆಗಿರುತ್ತದೆ."

ಇದೂ ಕೂಡ ಇಂದಿನ ಜಾಗತೀಕರಣದ ವಿವರಣೆಯಂತೆ ಕಾಣುತ್ತದೆ. ಲೆನಿನ್ ಬಂಡವಾಳದ ವಿಶ್ಲೇಷಣೆಯನ್ನು ಮಾಡುವಾಗ ಮಾರ್ಕ್ಸ್‌ವಾದಿ ವಿಶ್ಲೇಷಣಾ ಕ್ರಮ ಬಳಸುತ್ತಾರೆ. ಬಂಡವಾಳದ ಬೆಳವಣಿಗೆ ಅನಿವಾರ್ಯವಾಗಿ ಕೊರಕಲು, ದಿಣ್ಣೆಗಳ ಹಾದಿಯನ್ನು ಸೃಷ್ಟಿಸುತ್ತದೆ. ಅನೇಕ ದ್ವಂದ್ವಗಳಿಗೆ ಕಾರಣವಾಗುತ್ತದೆ. ಬಿಕ್ಕಟ್ಟುಗಳು ಪದೇ ಪದೇ ತಲೆ ಎತ್ತುತ್ತವೆ ಮತ್ತು ಇದರ ಹಾದಿ ಸುಗಮವಲ್ಲ, ರಕ್ತಸಿಕ್ತವಾದದ್ದು. ಲೆನಿನ್‌ರ ಈ ರೀತಿಯ ಪರಿಕಲ್ಪನೆ ಇಂದಿನ ವ್ಯವಸ್ಥೆಯ ಮೂಲಭೂತ ಲಕ್ಷಣ ಎನ್ನುವುದು ಸ್ಪಷ್ಟವಾಗುತ್ತದೆ. ಲೆನಿನ್ ಪ್ರಕಾರ, ಯಾವುದೇ ಅಂತರರಾಷ್ಟ್ರೀಯ ಬಂಡವಾಳ ವ್ಯವಸ್ಥೆ ತಾತ್ಕಾಲಿಕವಾದದ್ದು ಮತ್ತು ಸಹ ಸ್ಪಂದಿ ರಾಜಕೀಯ ವ್ಯವಸ್ಥೆ ಬದಲಾಗುವ ಸಾಧ್ಯತೆ ಇರುತ್ತದೆ.

**ನೆನಪು**

ಧಗ – ಧಗಿಸುವ
ಧರೆಯ ಉರಿಬಿಸಿಲಿನಲಿ
ಗುಲ್‌ಮೋಹರ್ ಕೆಂಪು
ನಿನ್ನ ನೆನಪು!

**ಶೋಭಾ ಪ್ರಮೋದ್**
ಮಾಣ್‌ಗಾಂವ್, ಮಹಾರಾಷ್ಟ್ರ

ಜಾಗತಿಕ ಮಾರುಕಟ್ಟೆ, ನಿಯಂತ್ರಣರಹಿತ ಸ್ವೇಚ್ಛೆ, ಅಧಿಕಾರ ಮತ್ತು ವ್ಯಾಪಕತೆ ಮೂಲಕ ರಾಷ್ಟ್ರ ಪ್ರಭುತ್ವಗಳ ಮೇಲೆ ತನ್ನ ಪ್ರಭಾವ ಬೀರುತ್ತದೆ. ಅಂದರೆ ರಾಷ್ಟ್ರೀಯ ಆರ್ಥಿಕತೆ, ಅತ್ಯಂತ ಶಕ್ತಿಯುತವಾಗಿ ತನ್ನ ಪ್ರಾಬಲ್ಯ ಬೆಳೆಸಿಕೊಳ್ಳುತ್ತಾ ಹೋದಹಾಗೆ ರಾಷ್ಟ್ರಗಳ ಪ್ರಭುತ್ವ ಅದರ ಮೇಲೆ ನಿಯಂತ್ರಣ ಸಾಧಿಸಬೇಕಾಗಿದೆ. ಇಲ್ಲದಿದ್ದಲ್ಲಿ ಈ ರಾಷ್ಟ್ರಗಳ ಸ್ವಾಯತ್ತತೆ ಮತ್ತು ಅಸ್ಮಿತೆ ದಿನದಿಂದ ದಿನಕ್ಕೆ ದುರ್ಬಲವಾಗಿ ರಾಷ್ಟ್ರಗಳು ನಾಶವಾಗುವ ಸಾಧ್ಯತೆ ಇದೆ. ರಾಷ್ಟ್ರದ ಪರಿಕಲ್ಪನೆ ದಿನೇ ದಿನೇ ಅರ್ಥಹೀನವಾಗುವ ಸಾಧ್ಯತೆ ಇದೆ.

ರೋಸಾ ಲುಕ್ಸಂಬರ್ಗ್ ಖ್ಯಾತ ಜರ್ಮನ್ ಮಾರ್ಕ್ಸ್‌ವಾದಿ, ೧೯೧೨ರಲ್ಲಿ "ಬಂಡವಾಳದ ಶೇಖರಣೆ" ಎಂಬ ಪುಸ್ತಕ ಬರೆದಿದ್ದಾರೆ. ಅದರಲ್ಲಿ, ಬಂಡವಾಳ ತನ್ನ ಅಸ್ತಿತ್ವವನ್ನು ಉಳಿಸಿಕೊಳ್ಳಲು, ತನ್ನ ಸುತ್ತಲು ಇರುವ, ಬಂಡವಾಳ ಕಾಲಿಡದ ಪ್ರದೇಶಗಳನ್ನು, ತನ್ನ ತೆಕ್ಕೆಗೆ ತೆಗೆದುಕೊಳ್ಳಲು ವಿಸ್ತರಣೆಯ ಅಗತ್ಯ ಇರುತ್ತದೆ ಎಂದಿದ್ದಾಳೆ. ಇದು ಬಿಕ್ಕಟ್ಟನ್ನು ಸೃಷ್ಟಿ ಮಾಡುತ್ತದೆ ಎಂದು ವಿವರಿಸಲಾಗಿದೆ.

ಇವರ ತೀರ್ಮಾನಗಳ ಮಿತಿ ಏನೇ ಇರಲಿ, ಬಂಡವಾಳದ ಗುಣಲಕ್ಷಣಗಳು ವಿಸ್ತರಣೆಯನ್ನು ಆಧರಿಸಿವೆ ಎಂಬುದು ಮುಖ್ಯ. ಲೆನಿನ್ ಬಂಡವಾಳವನ್ನು ಈ ರೀತಿ ಒಟ್ಟಾಗಿ ಪರಿಗಣಿಸುವುದಿಲ್ಲ. ಬಂಡವಾಳ ಅನೇಕ ಘಟಕಗಳ ಸಂಗ್ರಹ. ಇದರಲ್ಲಿ ಪ್ರಬಲವಾದವು ದುರ್ಬಲ ಘಟಕಗಳನ್ನು ನಿಯಂತ್ರಿಸುತ್ತವೆ. ಮತ್ತೆ ತಮ್ಮಲ್ಲೆ ಸ್ಪರ್ಧೆ ಹೊಂದಿರುತ್ತದೆ ಎನ್ನುತ್ತಾರೆ.

ಒಟ್ಟಿನಲ್ಲಿ ಬಂಡವಾಳದ ಲಕ್ಷಣದಲ್ಲಿ, ವಿಸ್ತರಣೆಯ ಹಂಬಲ ಇದೆ ಎನ್ನುವುದು ಸತ್ಯ. ಇದರ ಸಮಕಾಲೀನ ಅಭಿವ್ಯಕ್ತಿ ಎಂದರೆ ಜಗತ್ತಿನಾದ್ಯಂತ, ಏಕಸ್ವಾಮ್ಯದ ಅಂತರರಾಷ್ಟ್ರೀಯ ಕಾರ್ಪೊರೇಷನ್‌ಗಳು, ವಿತ್ತ ಬಂಡವಾಳದ ಹೂಡಿಕೆ ಮತ್ತು ಬೆಳವಣಿಗೆಯ ವೇಗ ನಿಧಾನವಾಗುವಿಕೆ. ಇವೆಲ್ಲವೂ ಪರಸ್ಪರ ಸಂಬಂಧ ಹೊಂದಿರುತ್ತವೆ. ಏಕಸ್ವಾಮ್ಯ ಲಾಭವನ್ನು ಅಧಿಕಗೊಳಿಸಿದರೂ, ಹೆಚ್ಚು ಹೆಚ್ಚಾಗಿ ಮಾರುಕಟ್ಟೆಯನ್ನು ನಿಯಂತ್ರಿಸುತ್ತದೆ. ನಿಯಂತ್ರಿತ ಮಾರುಕಟ್ಟೆಯಲ್ಲಿ ಹೂಡಿಕೆ ಮಿತವಾಗುತ್ತಾ ಹೋಗುತ್ತದೆ. ಇದು ಆರ್ಥಿಕ ಬೆಳವಣಿಗೆಯನ್ನು ನಿಧಾನಗೊಳಿಸುತ್ತದೆ.

– ೨ –

'ಜಾಗತೀಕರಣ' ಒಂದು ಸೈದ್ಧಾಂತಿಕ ಪದ ಎಂದು ಏಜಾಜ್ ಅಹಮದ್ ಎಂಬ ವಿದ್ವಾಂಸ ಹೇಳುತ್ತಾರೆ. ಇದು ಸತ್ಯ. ಏಕೆಂದರೆ ಈ ಪದ ಅನೇಕ ವೈಚಾರಿಕ ಒಳಸುಳಿಗಳನ್ನು ಹೊಂದಿದೆ. ಇದು ಅನೇಕ ಜನರಿಗೆ, ಅವರ ನಿಲುವುಗಳಿಗನುಸಾರ, ಅನೇಕ ಅರ್ಥಗಳನ್ನು ಹೊರ ಹೊಮ್ಮಿಸುತ್ತದೆ.

ಸೋವಿಯತ್ ಯೂನಿಯನ್‌ನ ಪತನವಾದ ನಂತರ ಇಂದು ಜಗತ್ತಿನಲ್ಲಿ

ಇರುವ ಏಕೈಕ ವ್ಯವಸ್ಥೆ ಎಂದರೆ "ಸಾಮ್ರಾಜ್ಯಶಾಹಿ ಬಂಡವಾಳ ವ್ಯವಸ್ಥೆ" ಎಂದು ಹಲವರು ಹೇಳುತ್ತಾರೆ. ಜಾಗತೀಕರಣವನ್ನು ವಿಜೃಂಭಿಸುವವರು ಏನೇ ಹೇಳಲಿ, ಅವರ ಮಾತುಗಳ ಒಳ ಅರ್ಥ ಇದೇ ಆಗಿರುತ್ತದೆ.

ಜಾಗತೀಕರಣ ಎನ್ನುವುದು ಒಂದು ಪರಿಕಲ್ಪನೆ ಮಾತ್ರ. ಬಂಡವಾಳ ತನ್ನ ಒಡ್ಡೊಡ್ಡಾದ ಮತ್ತು ಒರಟೊರಟಾದ ಬೆಳವಣಿಗೆಯಲ್ಲಿ ಯಾವುದೇ ಅಭಿವೃದ್ಧಿಯ ಹಂಬಲ ಹೊಂದಿರುವುದಿಲ್ಲ. ಅದರ ಮೂಲಮಂತ್ರ ಲಾಭ. ಈ ಲಾಭಕ್ಕಾಗಿನ ಓಟದಲ್ಲಿ ಮುಂದೆ ಇರುವವರು ಗೆದ್ದರು; ಹಿಂದುಳಿದವರು ಹಾಳಾಗಲಿ ಎಂಬುದಷ್ಟೆ ಪ್ರಸ್ತುತ ವಿಚಾರ ಆಗಿದೆ.

ಎರಡನೆಯದಾಗಿ, ಜಾಗತೀಕರಣ ಸೃಷ್ಟಿಸಿರುವ ವಾತಾವರಣ ಬಹಳ ಮುಖ್ಯವಾಗಿರುತ್ತದೆ. ಅದು ಬಂಡವಾಳ ಮತ್ತು ಸರಕುಗಳ ಬೃಹತ್ ಚಲನಶೀಲತೆಯನ್ನು ಉಂಟುಮಾಡಿದೆ. ಅಲ್ಲದೆ ರಾಷ್ಟ್ರೀಯ ಬಜೆಟ್‌ಗಳಲ್ಲಿ ಆಯಾತ / ನಿರ್ಯಾತಗಳಿಗೆ ಈಗ ವಿಶೇಷ ಮಹತ್ವ ಬಂದೊದಗಿದೆ. ವಿತ್ತ ಬಂಡವಾಳದ ಅಗಾಧವಾದ ಮತ್ತು ವ್ಯಾಪಕವಾದ ಬಲ ರಾಷ್ಟ್ರಗಳ ನಿಯಂತ್ರಣಕ್ಕೆ ಕಾರಣವಾಗಿದೆ. ಜಿ. ಎಸ್. ಟಿ.ಯನ್ನು ಜಾರಿಗೆ ತರುವುದಕ್ಕೆ ಬಹುಮುಖ್ಯ ಕಾರಣ ವಿದೇಶಿ ಬಂಡವಾಳ ಹೂಡಿಕೆಗೆ ಅನುಕೂಲ ಮಾಡಿಕೊಡುವುದೇ ಆಗಿದೆ ಎಂಬುದನ್ನು ಇಲ್ಲಿ ನೆನಪು ಮಾಡಿಕೊಳ್ಳಬಹುದು. ವಿದೇಶಿ ಆರ್ಥಿಕ ಹೂಡಿಕೆಯ ಊಹಾಪೋಹಗಳಿಗೆ ಇರುವ ಮಹತ್ವ, ರಾಷ್ಟ್ರದ ಒಳಗಿನ ಕೈಗಾರಿಕಾ ಬಂಡವಾಳಕ್ಕೆ ಇಲ್ಲವಾಗಿದೆ.



ಮೂರನೆಯ ಮಹತ್ವದ ಅಂಶವೆಂದರೆ, ಸಂಪರ್ಕ ಮತ್ತು ಸಾರಿಗೆ ತಂತ್ರಜ್ಞಾನ. ಇದು ಹಿಂದೆಂದೂ ಇಲ್ಲದಷ್ಟು ಭೌಗೋಳಿಕವಾಗಿ ಚಾಚಿಕೊಂಡಿದ್ದು, ಬೃಹತ್ತಾಗಿ ಕಂಗೊಳಿಸುತ್ತಿದೆ. ಬೆರಳ ತುದಿಯಲ್ಲಿ ಸಂಪರ್ಕದ ಸಾಧ್ಯತೆಗಳನ್ನು ಬೆಳೆಸಿದೆ. ಹಿಂದೆ ನೈಜ ಬುದ್ಧಿಜೀವಿಗಳು, ಬುದ್ಧಿಜೀವಿಗಳ ಹಾಗೆ ಸೋಗು ಹಾಕುತ್ತಿದ್ದವರು, ಮತ್ತು ಬುದ್ಧಿಜೀವಿಗಳೆಂದು ಅರ್ಹರೋ, ಅನರ್ಹರೋ, ಖ್ಯಾತಿಯನ್ನು ಗಳಿಸಿದವರುಗಳು ಇದ್ದರು. ಈಗ ಹೊಸದಾಗಿ "ವಿಕಿ ಪೀಡಿತ ಜೀವಿ"ಗಳು ಕಾಣಿಸಿಕೊಳ್ಳುತ್ತಿದ್ದಾರೆ. ಅಲ್ಲದೆ ಜಾಗತಿಕ ವೆಬ್‌ನಲ್ಲಿ ಎಲ್ಲ ರೀತಿಯ ಕಚಡ, ಸುಳ್ಳು ಸುದ್ದಿಗಳು ಮತ್ತು ಘೋರಗಳನ್ನು ಜನ ಮುಖಾಮುಖಿಯಾಗುವ ಸಾಧ್ಯತೆ ಬಂದೊದಗಿದೆ. ಬೌದ್ಧಿಕ ಭ್ರಷ್ಟತೆ ನಿರಂತರವಾದ ಪ್ರಕ್ರಿಯೆಯಾಗಿದೆ.

ಮತ್ತೊಂದು ಮಹತ್ವದ ಅಂಶವೆಂದರೆ, ನೂತನ ಮತ್ತು ಕೇಂದ್ರ ಉತ್ಪಾದಿತ ಸಾಂಸ್ಕೃತಿಕ ಸರಕುಗಳು, ರಾಷ್ಟ್ರೀಯ ಶಿಕ್ಷಣ, ಮಾಹಿತಿ ಮತ್ತು ಪ್ರಜ್ಞೆಗಳನ್ನು ಬೈಪಾಸ್ ಮಾಡಿ, ಉಪಗ್ರಹಗಳು ಮತ್ತು ಟಿ.ವಿ. ಆ್ಯಂಟೆನಾಗಳು ಮತ್ತು ಮಾಹಿತಿ ಹೆದ್ದಾರಿಗಳ ಮೂಲಕ, ಗಡಿಯ ಒಳಗೆ ಪ್ರವಾಹದಂತೆ ನುಗ್ಗಿ ಬರುತ್ತಿವೆ. ಜಾನಪದ ಪ್ರಜ್ಞೆ, ನೆಲದ ಕಾಳಜಿ, ಅಸ್ಮಿತೆಯ ಅರಿವು ಇವುಗಳ ಜೊತೆ ಕಲಸು ಮೇಲೋಗರವಾಗಿ ಬುದ್ಧಿಯ ಉಪಯೋಗಕ್ಕಿಂತಲೂ, ಮಾತುಗಳು ಮತ್ತು ದೃಶ್ಯ ಸಂವಹನೆ ಹೆಚ್ಚಾಗುತ್ತಿದೆ.

ನಾಲ್ಕನೆಯದಾಗಿ, ಉತ್ಪಾದನಾ ವ್ಯವಸ್ಥೆ ಮತ್ತು ಅವುಗಳ ನಿರ್ವಹಣಾ ವ್ಯವಸ್ಥೆ ಬೆಳೆಯುತ್ತಿದ್ದು, ಉತ್ಪಾದನಾ ಪ್ರಕ್ರಿಯೆಯನ್ನು ಆಂಶಿಕವಾಗಿ ತುಂಡರಿಸಿ, ಬೇರೆ ಬೇರೆ ದೇಶಗಳಲ್ಲಿ ಅವುಗಳ ತುಣುಕುಗಳನ್ನು ಸ್ಥಾಪಿಸಲಾಗಿದೆ ಅಥವಾ ಈ ತುಣುಕುಗಳನ್ನು ಬಹಳ ಸುಲಭವಾಗಿ ಒಂದು ದೇಶದಿಂದ ಮತ್ತೊಂದಕ್ಕೆ ಕೊಂಡೊಯ್ಯಲು ಸಾಧ್ಯವಾಗಿದೆ.

ಐದನೆಯದಾಗಿ, ಜಾಗತೀಕರಣ ಎಂಬುದು ಕೆಲವೇ ಕೆಲವು ಸಾಮ್ರಾಜ್ಯಶಾಹಿ ಕೇಂದ್ರಗಳನ್ನು ಸ್ಥಾಪಿಸುವುದಕ್ಕಾಗಿನ ಕಾಂತಾ ಸಮ್ಮಿತಿ. ಅಂದರೆ ಜಾಗತಿಕ ಬ್ಯಾಂಕ್, ಐ. ಎಂ. ಎಫ್., ಗ್ಯಾಟ್ ಇತ್ಯಾದಿ ಕೇಂದ್ರಗಳು ಸೃಷ್ಟಿಯಾಗಿ 'ತೃತೀಯ ಜಗತ್ತು' ಎಂದು ಕರೆಯಲಾದ, ಬಂಡವಾಳದ ರೈಲನ್ನು ತಡವಾಗಿ ಹತ್ತಿದ ದೇಶಗಳ ರಾಷ್ಟ್ರೀಯ ರಾಜಕೀಯ ಮತ್ತು ಆರ್ಥಿಕ ನೀತಿಗಳನ್ನು ಈ ಕೇಂದ್ರಗಳು ನಿಯಂತ್ರಿಸುತ್ತವೆ. ಎಲ್ಲ ಉತ್ಪಾದನೆಗಳ ಕ್ಷೇತ್ರದಲ್ಲಿ ಮತ್ತು ಎಲ್ಲ ಉತ್ಪಾದನೆಯ ಪ್ರಕ್ರಿಯೆಗಳಲ್ಲಿ ಬಂಡವಾಳ ವ್ಯವಸ್ಥಿತವಾಗಿ ಮುನ್ನುಗ್ಗುತ್ತಿದೆ. ವರ್ಲ್ಡ್ ಬ್ಯಾಂಕಿನ ಒಂದು ಲೆಕ್ಕಾಚಾರದ ಪ್ರಕಾರ ೨೦೨೦ರ ವೇಳೆಗೆ, ಜಗತ್ತಿನ ಆರ್ಥಿಕ ಉತ್ಪಾದನೆಯ (ಯಾವುದೇ ಹಂತದಲ್ಲಿ) ಶೇಕಡ ೧೨ರಷ್ಟು ಮಾತ್ರ ಜಾಗತೀಕರಣದಿಂದ ಹೊರಕ್ಕೆ ಉಳಿದಿರುತ್ತದೆ.

ಬಂಡವಾಳಕ್ಕೆ ಅಂತರರಾಷ್ಟ್ರೀಯ ಬೆಳವಣಿಗೆಯ ಲಕ್ಷಣ ಮತ್ತು ವ್ಯಾಪಕತೆ ಅದರ ಹುಟ್ಟಿನಿಂದಲೂ ಇದೆ ಎಂಬುದನ್ನು ಮೇಲೆ ಉಲ್ಲೇಖಿಸಿದ ಮಾರ್ಕ್ಸ್, ಲೆನಿನ್ ಮತ್ತು ಲುಕ್ಸಂಬರ್ಗ್ ಅವರ ಮಾತುಗಳಿಂದ ತಿಳಿಯಬಹುದು. ಬಂದಿದೆ. ವಸಾಹತುಶಾಹಿ, ಈ ರೀತಿ ಬಂಡವಾಳದ ಬೆಳವಣಿಗೆಯ ಅರ್ಧ ಕತೆ ಮಾತ್ರ. ಲೆನಿನ್ ಅವರ ಸಾಮ್ರಾಜ್ಯಶಾಹಿ ವಿವರಣೆಯಲ್ಲಿ ಈ ಐತಿಹಾಸಿಕ ಪ್ರವೃತ್ತಿಯನ್ನು ಸ್ಪಷ್ಟವಾಗಿ ಗುರ್ತಿಸಲಾಗಿದೆ.

ಆದರೆ ಇಲ್ಲಿ ಒಂದು ಅಂಶವನ್ನು ಗುರ್ತಿಸಬೇಕು. ಈ ಅಗಾಧ ವಿಸ್ತರಣೆಯ ಕ್ರಮದಲ್ಲಿ ಶ್ರಮದ ಪಾತ್ರ ಏನಾಗಿದೆ ಎಂಬುದನ್ನು ಗಮನಿಸಬೇಕು. ಬಂಡವಾಳದ ಪ್ರವೃತ್ತಿಯಲ್ಲಿ ಇನ್ನೂ ಹೆಚ್ಚು ಚಲನಶೀಲತೆ ಮತ್ತು ಗಡಿದಾಟಿ ವಿಸ್ತರಣೆಗೊಳ್ಳುವ ಹಂಬಲ ಕಾಣಬಹುದು. ಆದರೆ ಶ್ರಮ ಮಾತ್ರ ಚಲನರಹಿತವಾಗಿದೆ. ಶ್ರಮದ ಶಿಸ್ತು ಇನ್ನೂ ಕೂಡ ರಾಷ್ಟ್ರೀಯ ಶಿಸ್ತಿನ ಒಳಗೇ ಅಡಕವಾಗಿದೆ. ಮಾರುಕಟ್ಟೆಯೇ ಬೆಲೆಯನ್ನು ನಿಯಂತ್ರಿಸುತ್ತದೆ ಎಂಬ ಒಂದು ಮಿಥ್ಯೆಯನ್ನು ಅರ್ಥಶಾಸ್ತ್ರಜ್ಞರು ಹರಡಿದ್ದಾರೆ. ಆದರೆ ವಾಸ್ತವದಲ್ಲಿ ಬೆಲೆಗಳನ್ನು, ಅದರಲ್ಲೂ ಶ್ರಮದ ಬೆಲೆಯನ್ನು ನಿಯಂತ್ರಿಸುವುದು ಐತಿಹಾಸಿಕ ಬೆಳವಣಿಗೆಗಳು ಮಾತ್ರ. ಈ ಇತಿಹಾಸದ ಮೂಲಭೂತ ಶಿಸ್ತುಗಳಲ್ಲಿ ಒಂದು ಎಂದರೆ, ರಾಷ್ಟ್ರೀಯವಾಗಿ ಸಂಕುಚಿಸಲ್ಪಟ್ಟ ಶ್ರಮ ಮಾತ್ರ.

ಜಾಗತೀಕರಣದಲ್ಲಿ ಶ್ರಮದ ವಲಸೆ ಇದ್ದೇ ಇರುತ್ತದೆ. ಬಡದೇಶಗಳಿಂದ ಶ್ರೀಮಂತ ದೇಶಗಳಿಗೆ ಶ್ರಮದ ವಲಸೆ ತಾರ್ಕಿಕವಾಗಿ ಸಹಜ. ಆದರೆ ಇದು ರಾಜಕೀಯ ಮತ್ತು ಸಾಮಾಜಿಕ ಒತ್ತಡ ಮತ್ತು ಆತಂಕಗಳನ್ನು ಸೃಷ್ಟಿಸುತ್ತದೆ. ಅಲ್ಲದೆ ಈ ರೀತಿಯ ವಲಸೆ ಬಹಳ ಕನಿಷ್ಠವಾದದ್ದು. ಇಂದಿನ ಜಗತ್ತಿನ ಜನಸಂಖ್ಯೆಯ ಕೇವಲ ಶೇಕಡ ೩ರಷ್ಟು ಮಾತ್ರ ತಾವು ಜನಿಸಿದ ದೇಶದಿಂದಾಚೆ ಜೀವಿಸುತ್ತಿದ್ದಾರೆ. ಎರಿಕ್ ಹಾಬ್ಸ್‌ಬಾಮ್ ಪ್ರಕಾರ, "ಬಂಡವಾಳ, ಸರಕು ಮತ್ತು ಸಂವಹನೆಯ ರೀತಿ ಇದು ಅಲ್ಲ. ಶ್ರಮದ ವಲಸೆಯ ಹಾದಿಯಲ್ಲಿ ಸರಕಾರಗಳು ಮತ್ತು ರಾಜಕೀಯ, ಪರಿಣಾಮಕಾರಿ ಅಡೆ-ತೊಡರುಗಳನ್ನು ನಿರ್ಮಿಸಿವೆ."

ರಾಷ್ಟ್ರೀಯತೆಯ ಭಾವನೆಗಳು ಅತಿ ಮುಂದುವರೆದ ಬಂಡವಾಳ ದೇಶಗಳಲ್ಲೂ, ರಾಜಕೀಯವಾಗಿ ಅಸ್ತಿತ್ವದಲ್ಲಿ ಇರಲು ಸಾಧ್ಯ. ಪರಕೀಯರು ಬಂದು ನಮ್ಮ ಕೆಲಸಗಳನ್ನು ಕದಿಯುತ್ತಿದ್ದಾರೆ ಎಂಬ ಹುಯಿಲು ಅಮೇರಿಕಾ, ಇಂಗ್ಲೆಂಡಿನಿಂದ ಹಿಡಿದು ಬೆಂಗಳೂರಿನವರೆಗೆ ವ್ಯಾಪಿಸಿದೆ. ಅಲ್ಲದೆ ಅಮೇರಿಕಾದಲ್ಲಿ ಉಳಿತಾಯದ ಶೇಕಡ ೯೦ರಷ್ಟನ್ನು ದೇಶದ ಒಳಗೇ ಖರ್ಚು ಮಾಡಲಾಗುತ್ತಿದೆ ಎಂದು ಅಂಕಿ-ಅಂಶವೊಂದು ತಿಳಿಸುತ್ತದೆ. ಇದರ ಜೊತೆ ಅತಿ ಮುಂದುವರೆದ ಬಂಡವಾಳ ದೇಶಗಳ ನಡುವೆ ಪರಸ್ಪರ ಅನುಕೂಲತೆಯ ಆಸಕ್ತಿಗಳಿಂದಾಗಿ, ಪರಸ್ಪರ ಹೊಂದಾಣಿಕೆ ಸಾಧ್ಯವಾಗುತ್ತದೆ.

ಆದರೆ ಸಾಮ್ರಾಜ್ಯಶಾಹಿ ದೇಶಗಳು ಮತ್ತು ಸಾಮ್ರಾಜ್ಯಶಾಹಿ ಜಾಲಕ್ಕೆ ಒಳಗಾದ ದೇಶಗಳ ನಡುವಿನ ಸಂಬಂಧಗಳನ್ನು ಗಮನಿಸಿದಾಗ ರಾಷ್ಟ್ರೀಯ ತಾರತಮ್ಯಗಳು ಮತ್ತು ದಬ್ಬಾಳಿಕೆಗಳನ್ನು ಗಮನಿಸಬಹುದು. ಚಿಕಾಗೋ ಅಥವಾ ನ್ಯೂಯಾರ್ಕ್‌ನಿಂದ ಬಂಡವಾಳ ಬೆಂಗಳೂರಿಗೆ ಹೇಗೆ ಬಂದಿಳಿಯುತ್ತದೆ? ಅದು ಇಂಡಿಯಾದ ಸರ್ಕಾರದ ಮೂಲಕ ಬರಬೇಕಾಗುತ್ತದೆ. ಅದಕ್ಕೆ ಸೂಕ್ತವಾದ ಶ್ರಮ, ಕೂಲಿ ಒಪ್ಪಂದಗಳು, ಕೈಗಾರಿಕಾ ಶಾಂತಿಯ ಸ್ಥಿತಿ ಮತ್ತು ಲಾಭವನ್ನು ಹೊರಕ್ಕೆ ತೆಗೆದುಕೊಂಡು ಹೋಗಲು ಅವಕಾಶ, ಅದರ ಕಾರ್ಯ ಸುಗಮವಾಗಲು ಬೇಕಾದ ಅಧಿಕಾರಶಾಹಿ ಇವುಗಳು ಬೇಕಾಗುತ್ತವೆ. ಇದನ್ನು ಒದಗಿಸುವ ಕಾರ್ಯ ಸ್ಥಳೀಯ ಸರಕಾರಗಳದು. ಜಾಗತಿಕ ಬಂಡವಾಳ ಮತ್ತು

ರಾಷ್ಟ್ರೀಯ ಶ್ರಮಗಳ ನಡುವಿನ ದಲ್ಲಾಳಿ ಕಾರ್ಯವನ್ನು ಆಯಾ ರಾಷ್ಟ್ರದ ಸರಕಾರಗಳು ನಿರ್ವಹಿಸಬೇಕು.

ಜಾಗತೀಕರಣ ಮತ್ತು ಉದಾರೀಕರಣಗಳನ್ನು ಜಪಿಸುವ ನಮ್ಮ ಸರಕಾರಗಳು ರಾಜಕೀಯವಾಗಿ ದಿವಾಳಿಯೆದ್ದು ಹೋಗಿ, ಈ ರೀತಿಯ ದಲ್ಲಾಳಿ ಕೆಲಸ ಮಾಡುತ್ತಿವೆ. ಜಾಗತೀಕರಣದ ಪರ ಮಾತನಾಡುವ ನಮ್ಮ ಮೆಟ್ರೋ ಬುದ್ಧಿಜೀವಿಗಳು, ಒಂದು ಅಭಿಯಾನ ಮಾಡಬಹುದು. ಅಮೇರಿಕಾದ ಎಲ್ಲ ಬಂಡವಾಳ ಇಂಡಿಯಾಕ್ಕೆ ಬರಲಿ. ಇಂಡಿಯಾದ ಎಲ್ಲ ಕಾರ್ಮಿಕರು ವೀಸಾ ಮತ್ತು ಪಾಸ್‌ಪೋರ್ಟ್ ಹಗರಣಗಳ ಅಗತ್ಯ ಇಲ್ಲದೇ (ಏಕೆಂದರೆ ಇಂದು ರಾಷ್ಟ್ರದ ಗಡಿಗಳನ್ನು ಅಳಿಸಿಹಾಕುವಷ್ಟು ಸಾಂದ್ರವಾಗಿ ಜಾಗತೀಕರಣ ನಡೆಯುತ್ತಿದೆ) ಅಮೇರಿಕಾಗೆ ಹೋಗಿ, ಅಲ್ಲಿಯ ದರದಲ್ಲೇ ಕೂಲಿಯನ್ನು ಪಡೆಯಲಿ. ಇದನ್ನು ಅನೇಕ ಎಡಪಂಥೀಯರು ಹೇಳುತ್ತಿದ್ದರೂ ಇದು ಸಮಾಜವಾದ ಬೇಕೆಂಬ ಕೋರಿಕೆಯೇನಲ್ಲ. ಕೇವಲ, ಜಾಗತೀಕರಣವು ಕಾರ್ಮಿಕರಿಗೂ ಅನ್ವಯ ಆಗಲಿ ಎಂಬ ಸಣ್ಣ ಕೋರಿಕೆ.

– ೩ –

ಐತಿಹಾಸಿಕವಾಗಿ ವಸಾಹತುಶಾಹಿ ಆಕ್ರಮಣದ ಹಿನ್ನೆಲೆಯಲ್ಲಿ ನೋಡಿದರೆ "ರಾಷ್ಟ್ರೀಯತೆ" ಪ್ರಗತಿಪರವಾದದ್ದು. ನಾವು ಯಾವ ಪರಿಸ್ಥಿತಿಯ "ರಾಷ್ಟ್ರೀಯತೆ"ಯಲ್ಲಿ ಇದ್ದೇವೆ, ಅದರ ಉದ್ಭವ ಹೇಗಾಯಿತು ಎಂಬುದನ್ನು ಗಮನಿಸಬೇಕು. ವಸಾಹತುಶಾಹಿ ಅಧೀನತ್ವಕ್ಕೆ ಒಳಗಾದ ದೇಶದಲ್ಲಿ ರಾಷ್ಟ್ರೀಯತೆಯ ಕಲ್ಪನೆ ಇತ್ತು ಎಂದು ಇದರ ಅರ್ಥವಲ್ಲ. ಅಥವಾ ಈ ರಾಷ್ಟ್ರಗಳಿಗೆ ಒಂದು ವಿಶೇಷ ಸಾರ್ವಭೌಮತ್ವ ಪ್ರಾಪ್ತಿಯಾಗಿತ್ತು ಎಂದು ಅರ್ಥಮಾಡಬೇಕಿಲ್ಲ. ವಿದೇಶಿ ಆಕ್ರಮಣಕ್ಕೆ ತುತ್ತಾದಾಗ ಪ್ರತಿಕ್ರಿಯೆಯಾಗಿ, ಸಾಮಾನ್ಯ ರಾಜಕೀಯದ ಆಚೆ ಇರುವ ಜನರೂ ರಾಜಕೀಯಕ್ಕೆ ಒಳಗಾಗುತ್ತಾರೆ. ಈ ರೀತಿ "ರಾಜಕೀಯ"ಗೊಂಡ ಜನರ ಹಕ್ಕುಗಳ ಪ್ರಶ್ನೆ ಇಲ್ಲಿ ಉದ್ಭವವಾಗುತ್ತದೆ. ಈ ರೀತಿ "ಆಧುನಿಕ"ರಾದ ಜನಗಳು ರಾಷ್ಟ್ರವಾಗುತ್ತಾರೆ. ರಾಷ್ಟ್ರೀಯತೆ, ವೈವಿಧ್ಯಮಯ ಜನಾಂಗಗಳು, ಬುಡಕಟ್ಟುಗಳು, ಧಾರ್ಮಿಕ ಗುಂಪುಗಳು ಅಥವಾ ಭಾಷಾವಾರು ಸಮೂಹಗಳನ್ನು ಒಟ್ಟುಮಾಡುತ್ತದೆ.

ಅಂದರೆ ವಿವಿಧ ಆಯಾಮಗಳ, ವಿವಿಧ ಮತಭೇದಗಳ, ವಿವಿಧ ಜನಾಂಗಗಳನ್ನು, ವಿವಿಧ ಭಾಷೆ ಮಾತನಾಡುವವರನ್ನು ಒಗ್ಗೂಡಿಸುವ ರಾಷ್ಟ್ರೀಯತೆ, ವಸಾಹತು ಶಕ್ತಿಗಳ ವಿರುದ್ಧ ಜನತೆಯನ್ನು ಎತ್ತಿಕಟ್ಟುತ್ತದೆ. ಏಕಮುಖಿ ಮತ್ತು ಶುದ್ಧೀಕರಣಕ್ಕೆ ಒಳಗಾದ ರಾಷ್ಟ್ರೀಯತೆ ಇಲ್ಲಿ ಅಸಂಬದ್ಧ. ಇಂಡಿಯಾದಲ್ಲಿ ವಾಸಮಾಡುವ ನಾವೆಲ್ಲರೂ ಅರ್ಥಮಾಡಿಕೊಳ್ಳಬೇಕಾದದ್ದು ಏನೆಂದರೆ ನಮ್ಮಲ್ಲಿ ಅನೇಕ ಭಾಷೆಗಳಿವೆ. ಬೇರೆ ಬೇರೆ ಧರ್ಮಕ್ಕೆ ಸೇರಿದವರಿದ್ದಾರೆ. ಬೇರೆ ಬೇರೆ ಸಾಹಿತ್ಯ, ವಿವಿಧ ಸಂಗೀತ ಪರಂಪರೆ, ಬೇರೆ ಬೇರೆ ನೃತ್ಯ ಪದ್ಧತಿಗಳು ಇವೆ. ಪ್ರಗತಿಪರ ಚಿಂತಕರು ಇದರ ಬಗ್ಗೆ ಹೆಮ್ಮೆಪಡುತ್ತಾರೆ. ಈ ದೇಶದಲ್ಲಿ ಎಷ್ಟೊಂದು ಭಾಷೆಗಳಿವೆ ಎಂದರೆ, ನಾವು ಈ ದೇಶದ ಅನೇಕ ನಾಗರಿಕರ ಜೊತೆ ನೇರವಾಗಿ ಮಾತನಾಡಲು ಸಾಧ್ಯವೇ ಇಲ್ಲ. ಈ ರೀತಿ ವೈವಿಧ್ಯತೆ ಇರುವ ನಮ್ಮ ದೇಶದಲ್ಲಿ ಒಂದು ಆಳವಾದ ಮತ್ತು ಸಮಾಧಾನಕರವಾದ ಏನೋ ಇದೆ ಅನ್ನಿಸುತ್ತದೆ. ಇದನ್ನೇ ನೆಹರು ಅವರು ವೈವಿಧ್ಯತೆಯಲ್ಲಿ ಏಕತೆ ಎಂದು ಸಾರಿ ಸಾರಿ ಹೇಳಿದ್ದು.

ಒಂದು ಅಧಿಕೃತ ಅಂಕಿ–ಅಂಶಗಳ ಪ್ರಕಾರ ೧೬೧೮ ಭಾಷೆಗಳು, ೬೪೦೦ ಜಾತಿಗಳು, ೬ ಪ್ರಮುಖ ಧರ್ಮಗಳು (ಅದರಲ್ಲಿ ಎರಡು ಈ ನೆಲದಲ್ಲೆ ಉದ್ಭವವಾದವು), ಮಾನವಶಾಸ್ತ್ರದ ಪ್ರಕಾರ ವಿಭಜಿಸಲ್ಪಟ್ಟ ೬ ಜನಾಂಗಗಳು ಈ ದೇಶದಲ್ಲಿ ಇವೆ. ಇವೆಲ್ಲವನ್ನು ಒಳಗೊಳ್ಳುವ ರಾಜಕೀಯ ಪರಿಕಲ್ಪನೆಯೇ ರಾಷ್ಟ್ರೀಯತೆ. ಆದರೆ ಇದೆಲ್ಲವನ್ನು ಮೀರಿ ನಮ್ಮನ್ನು 'ಒಂದು' ಮಾಡುವ ಮಾನವೀಯ ಧೋರಣೆ ಕೂಡ ಇದೆ. "ಅವರವರ ಬದುಕು ಅವರವರದು" ಎನ್ನುವ ಸಹಿಷ್ಣುತೆ ನಮ್ಮ ದೇಶದ ಜಾನಪದ ಜ್ಞಾನ ವಿಶೇಷ. ಇದರ ಬಗ್ಗೆ ಪ್ರಜ್ಞಾವಂತರಾದವರೆಲ್ಲರೂ ಹೆಮ್ಮೆಪಟ್ಟುಕೊಳ್ಳಬಹುದಾಗಿದೆ.

ಆದರೆ ಇಲ್ಲಿ ಸಮಸ್ಯೆ ಎಂದರೆ ಎಲ್ಲ ರೀತಿಯ ರಾಷ್ಟ್ರೀಯತೆಗಳೂ ನಮ್ಮನ್ನು ಹೀಗೆ ಒಳಗೊಳ್ಳುವಿಕೆ, ಸಾಂಸ್ಕೃತಿಕ ವೈವಿಧ್ಯತೆ ಮತ್ತು ಬಹುರೂಪಿ ಬದುಕಿನತ್ತ ಕೊಂಡೊಯ್ಯುವುದಿಲ್ಲ. ರಾಷ್ಟ್ರೀಯತೆ ಸ್ವಲ್ಪ ಡೊಂಕಾದರೂ ಜನಾಂಗೀಯ ದ್ವೇಷದತ್ತ ಜನರನ್ನು ಕೊಂಡೊಯ್ಯುತ್ತದೆ. ಸಾಂಸ್ಕೃತಿಕ ಒಳಗೊಳ್ಳುವಿಕೆ, ವೈವಿಧ್ಯತೆಗಳ ಬದಲಾಗಿ ವಿಶಿಷ್ಟತೆ, ಪರಿಶುದ್ಧತೆ ಮತ್ತು ಏಕರೂಪ ಸಂಸ್ಕೃತಿ ಇತ್ಯಾದಿ ಎಲ್ಲವೂ ಕೊನೆಗೆ ಬಹುಸಂಖ್ಯಾತರ ವಿಶೇಷತೆಯತ್ತ ಜನರನ್ನು ಆಕರ್ಷಿಸುತ್ತದೆ. ಇಂದು ನಮ್ಮ ದೇಶದಲ್ಲಿ ಜನಪ್ರಿಯವಾಗಿರುವ "ಉಗ್ರ ರಾಷ್ಟ್ರೀಯತೆ" ಈ ಜಾತಿಯದೆ.

ಸಮಾನತೆ ಇರಬೇಕಾದ ಕಡೆ ಹಳಹಳಿಕೆಯ ರಾಷ್ಟ್ರ ಕಾಲೂರಿ ನಿಲ್ಲುತ್ತದೆ. ಎಲ್ಲ ರೀತಿಯ ರಾಷ್ಟ್ರೀಯತೆಗಳೂ ಫ್ಯಾಸಿಸಂ ಅಲ್ಲ. ಫ್ಯಾಸಿಸಂ ನೆಲೆಯೂರಲು ಸೂಕ್ತವಾದ ಆರ್ಥಿಕ ಮತ್ತು ರಾಜಕೀಯ ಕಾರಣಗಳ ಅಗತ್ಯವಿದೆ. ಆದರೆ ಫ್ಯಾಸಿಸಂ ಯಾವಾಗಲೂ ಉಗ್ರವಾದಿ ರಾಷ್ಟ್ರೀಯತೆಯ ಮುಖವಾಡ ಧರಿಸಿಯೇ ನಮ್ಮ ಮುಂದೆ ಪ್ರತ್ಯಕ್ಷವಾಗುತ್ತದೆ. ಇದರ ತಿರುಳೇ ಕಳೆದುಕೊಂಡಿದ್ದನ್ನು ಪುನರ್‌ಸ್ಥಾಪಿಸುವ ಹಳಹಳಿಕೆಯ ರಾಷ್ಟ್ರವಾದ.

ಜಗತ್ತಿನ ಅನೇಕಕಡೆ ಫ್ಯಾಸಿಸಂಅನ್ನು ಆರಾಧಿಸಲು ಪುನಃ ಪ್ರಾರಂಭಿಸಲಾಗಿದೆ. ಜಗತ್ತಿನಲ್ಲಿ ಬಂಡವಾಳದ ಪ್ರಾಬಲ್ಯವಿದೆ. ಬಂಡವಾಳ ತನ್ನ ಮೂರನೇ ಅವತಾರ ಎತ್ತಿದೆ ಎಂದು ತಿಳಿದವರು ವ್ಯಾಖ್ಯಾನ ಮಾಡುತ್ತಾರೆ. ಬಂಡವಾಳದ ಪ್ರಭುತ್ವ ಎಂದರೆ ಸಾಮ್ರಾಜ್ಯಶಾಹಿಯ ಒಂದು ರೂಪ. ಇಂದು ನಾವು ಎಲ್ಲೆಲ್ಲೂ ಕಾಣುತ್ತಿರುವುದು ಬಂಡವಾಳದ ಸಾರ್ವತ್ರೀಕರಣ. ಇದನ್ನೇ ಜಾಗತೀಕರಣ ಎಂದೂ ಹಲವರು ಕರೆಯುತ್ತಿದ್ದಾರೆ. ಇಂದು ನಮ್ಮ ದೇಶದಲ್ಲಿ ಎಷ್ಟು ಸುಲಭವಾಗಿ ಬಂಡವಾಳ ಮತ್ತು 'ಬಹುಸಂಖ್ಯಾತವಾದ' ಕೈ ಜೋಡಿಸಿದೆ ಎಂಬುದನ್ನು ನಾವೆಲ್ಲ ಗಮನಿಸಬೇಕು. ಇದೇ ನಮ್ಮ ಇಂದಿನ ಬದುಕಿನ ನಿತ್ಯದ ಅಗತ್ಯ.

**ಕೆ. ಪಿ. ವಾಸುದೇವನ್**
ನಂ. ೫೦೬, ವಿಜಯನಗರ ೩ನೇ ಹಂತ, ೪ನೇ ಘಟ್ಟ
ವಿಜಯನಗರ, ಮೈಸೂರು – ೫೭೦ ೦೩೨

# ಅಧಿಕಾರದ ರಾಗವನು ನಿರಾಕರಿಸುವ ರಾಗಿ





ಡಾ॥ ಸಬಿತಾ ಬನ್ನಾಡಿ



ದಾಸ ಪಂಥವಾಗಲೀ, ಶರಣರಾಗಲೀ ಮೂಲದಲ್ಲಿ ನಿಯಂತ್ರಣ ಕೇಂದ್ರಿತ ಅಧಿಕಾರ ರಚನೆಗಳನ್ನು ನಿರಾಕರಿಸುವ ಒಲವಿನವರು. ಈ ಕಾರಣಕ್ಕಾಗಿಯೇ ಅವರು ಅಧಿಕಾರ ಕೇಂದ್ರಗಳಿಂದ ಹೊರಬಂದು ದಾಸರಾಗಿ, ಶರಣರಾಗಿ ಜನರ ಜೊತೆ ಬೆರೆತವರು. ಈ ಅಧಿಕಾರ ರಚನೆಗಳು ಕಣ್ಣೋಟಕ್ಕೆ ಬಲಿಷ್ಠವಾಗಿ ಕಂಡರೂ ಅವು ಅಂತರಂಗದಲ್ಲಿ ಎಷ್ಟು ಟೊಳ್ಳು ಎನ್ನುವುದನ್ನು ಜನರಿಗೆ ಮನಗಾಣಿಸಲು ಶ್ರಮಪಟ್ಟರು. ಅಧಿಕಾರವನ್ನು ಚಲಾಯಿಸುವುದನ್ನೇ ಕೇಂದ್ರವಾಗಿಟ್ಟುಕೊಂಡ ರಾಜ್ಯ, ರಾಜತ್ವ, ಆಸ್ತಿ, ಅಂತಸ್ತು, ಜಾತಿ, ಲಿಂಗ ಈ ಎಲ್ಲ ರಚನೆಗಳನ್ನೂ ಕಡೆಗಣಿಸಿ 'ಈಶ ನೀನು ದಾಸ ನಾನು' ಎಂದು ಹೊರಡುವ ಇವರು "ಹಣ್ಣಾಗುವುದು ಮತ್ತು ಹೆಣ್ಣಾಗುವುದು" ಎಂಬ ತಿರುಳಿನವರು. ಹೀಗಾಗುವುದೆಂದರೆ, 'ನಾನು' ಕಳೆದುಕೊಂಡು 'ನಾವು' ಆಗುವುದು. ಭಕ್ತಿ ಪಂಥಗಳು ಯಾವಾಗಲೂ ಸಾಮುದಾಯಿಕತೆಯನ್ನು ಸಾಧಿಸಬಯಸುತ್ತವೆ. ಹೀಗಾಗಿ ಅವರಿಗೆ 'ಕುರುಹು' ಕಳೆದುಕೊಳ್ಳುವುದು ಮುಖ್ಯ. ಬ್ರಾಹ್ಮಣನೋ,

ಭತ್ತವನ್ನು ನಿರಾಕರಿಸಿ ರಾಗಿಯನ್ನು ಮಾತ್ರ ಬೆಂಬಲಿಸುವುದು, ರಾಗಿಯನ್ನು ನಿರಾಕರಿಸಿ ಭತ್ತವನ್ನು ಮಾತ್ರ ಬೆಂಬಲಿಸಿದಷ್ಟೇ ಅಪಾಯಕಾರಿ. ಆಹಾರವಾಗಿಯೂ ಇವೆರಡೂ ಮನುಷ್ಯನಿಗೆ ಬೇಕು. ಎರಡರ ಬಳಕೆಯೂ ಹಿತಮಿತವಾಗಿರಬೇಕು. ಒಟ್ಟು ಸಮಾಜದ ಸ್ವಾಸ್ಥ್ಯವೆಂದರೆ, ಸಹಮತದಲ್ಲಿ ಇಬ್ಬರೂ ಬದುಕುವುದು. ಹೀಗಾಗಿ ರಾಗಿಯ ತಲೆಯ ಮೇಲೆ ಅಕ್ಕಿಯ ಅಕ್ಷತೆ ಎಂಬುದನ್ನು ಅಕ್ಕಿಯು ರಾಗಿಯನ್ನು ಒಪ್ಪಿಕೊಂಡುದರ ಸಂಕೇತ ಎಂದೂ ಭಾವಿಸಬಹುದು ಅಥವಾ ಅಕ್ಕಿ ಅಕ್ಷತೆಗೇ ಲಾಯಕ್ಕು ಎಂದಾದರೂ ಭಾವಿಸಬಹುದು. ಆದರೆ, ಅಕ್ಕಿಯೇ ಬೇಡ ಎನ್ನಲಾಗುವುದಿಲ್ಲ. ಮಾತ್ರವಲ್ಲ, ಕವಿ ತೀರ್ಪು ನೀಡಬೇಕೆಂದು ಬಯಸುವುದು ಅಥವಾ ಕವಿ ತೀರ್ಪು ನೀಡಿದ್ದಾನೆ ಎಂದು ಭಾವಿಸುವುದು ಎರಡೂ ಸರಿಯಲ್ಲ.

ದಲಿತನೋ, ಗಂಡೋ, ಹೆಣ್ಣೋ, ರಾಜನೋ, ಆಳೋ ಮೊದಲು ಕುರುಹು ಕಳೆದುಕೊಂಡು ದಾಸನಾದರೆ ಆಗ ಮೇಲುಕೀಳಿನ ಪ್ರಶ್ನೆ ಬರುವುದಿಲ್ಲ. ಆದರೆ ಹೀಗೆ ಸಮಾನರೆಂದು ಸಾಧಿತವಾದ ಮೇಲೆ ಸಾವಧಾನದಿಂದ ಬದುಕುವುದೂ ಕೂಡ ಆ ಸಮಾನತೆಯನ್ನು ಮನ್ನಿಸುವ ದಾರಿ. ಇಡೀ ರಾಮಧಾನ್ಯ ಚರಿತ್ರೆಯ ಉಸಿರುಮಾತು ಇರುವುದೇ 'ಅತಿಹಿತದಲಿ ನೀವಿಹುದು' ಎಂಬುದು. ಈ ಹಿತದಲ್ಲಿರುವುದಕ್ಕೆ ತೊಡಕು ಎಲ್ಲಿಂದ ಬರುತ್ತಿದೆ? ಅಹಿತ ಯಾಕೆ ಬೆಳೆಯುತ್ತಿದೆ? ಒಂದು ಸಾಮಾಜಿಕ ರಚನೆಯಲ್ಲಿ ಈ ಅಹಿತವನ್ನು ಹುಟ್ಟಿಸುವ ಮೂಲಗಳು ಯಾವುವು? ಎಂಬೆಲ್ಲದರ ಕುರಿತಾದ ಅರಿವನ್ನು ಅರುಹುವ ಕಾವ್ಯವಾಗಿ ಇದಿದೆ. ಹೀಗಾಗಿ ಈ ಕಾವ್ಯವು ಅಹಿತವನ್ನು ಬೆಳೆಸುವ ವೈಯಕ್ತಿಕ ಅಹಂ, ಜೊತೆಗೆ ಸಾರ್ವಜನಿಕ ಸಂಸ್ಥೆಗಳ ಅಹಂ ಹೆಚ್ಚಿಸುವ ಅಧಿಕಾರದ ಭಾಷೆಯು ರೂಪುಗೊಳ್ಳುವ ಬಗೆ ಯಾವುದು ಎನ್ನುವುದನ್ನು ತೆರೆದು ತೋರುವ ಕೆಲಸವನ್ನು ಮಾಡುತ್ತದೆ.

ರಾಮಧಾನ್ಯ ಚರಿತೆಯನ್ನು ರಾಮ ಮತ್ತು ಧಾನ್ಯ ಮತ್ತು ಚರಿತೆ ಎಂಬುದಾಗಿಯೂ ಓದಿಕೊಳ್ಳುವುದಕ್ಕೆ ಅವಕಾಶವಿದೆ. ಹೀಗೆ ಓದಿಕೊಂಡಾಗ ಅದು ಚರಿತ್ರೆಯಲ್ಲಿ ತಮ್ಮ ತಮ್ಮ ಅಧಿಕಾರವನ್ನು ಸ್ಥಾಪಿಸುವವರು ಮಾಡುವ ರಾಜಕಾರಣಗಳ ಚರಿತ್ರೆಯೂ ಆಗುತ್ತಾ ಅದನ್ನು ಧಾನ್ಯಗಳ ನೆಪದಲ್ಲಿ, ರಾಮನ ಹೆಸರಿನಲ್ಲಿ ಕನಕರು ಹೇಳುತ್ತಿರುವುದರ ಸೂಕ್ಷ್ಮ ಹೊಳೆಯುತ್ತದೆ. ಯಾವುದೇ ಆಹಾರ ಹೊಟ್ಟೆ ಹಸಿವನ್ನು ತಣಿಸುವ, ದೇಹಕ್ಕೆ ಪುಷ್ಟಿಕೊಡುವ, ಮನಸ್ಸಿಗೆ ಆನಂದವನ್ನು ನೀಡುವ ಕೆಲಸವನ್ನಷ್ಟೇ ಮಾಡುತ್ತದೆ. ಆಹಾರವು ಕೂಡ ಅಧಿಕಾರದ ಅಸ್ತ್ರವಾಗುವುದು ಯಾಕೆ? ಹೇಗೆ? ಎಂಬುದನ್ನು ಗಂಭೀರವಾಗಿ ಯೋಚಿಸುವಂತೆ ಮಾಡುವ ಕೃತಿ "ರಾಮಧಾನ್ಯ ಚರಿತ್ರೆ."

ಧಾನ್ಯ ಎನ್ನುವುದೇ ನಾಗರಿಕತೆಯೊಂದಿಗೆ ತಳುಕು ಹಾಕಿಕೊಂಡಿರುವುದು. ಧಾನ್ಯಗಳ ಬೆಳೆಗೂ ಮನುಷ್ಯ ನೆಲೆನಿಂತಿದ್ದಕ್ಕೂ ಒಂದು ಸಂಬಂಧ ಇದೆ. ಮನುಷ್ಯ ಒಂದೆಡೆ ನೆಲೆನಿಲ್ಲತೊಡಗಿದ ಮೇಲೆ ಅಧಿಕಾರ ಸಂಬಂಧಗಳು ಆಳವಾಗತೊಡಗಿದವು. ತಮಗೆ ಬೇಕಾದ ಬೆಳೆಯನ್ನು ಮನುಷ್ಯರು ತಾವೇ ಬೆಳೆಯತೊಡಗಿದ ಮೇಲೆ ಅವರಿಗೆ ಆಹಾರದಲ್ಲಿ ಆಯ್ಕೆಯೆಂಬುದು ಸಾಧ್ಯವಾಗುತ್ತದೆ. ಅದಕ್ಕೂ ಮೊದಲು ಗೆಡ್ಡೆಗೆಣಸು, ಪ್ರಾಣಿ ಬೇಟೆ ಇತ್ತು. ಬೇಟೆಯ ಮೇಲೆ ಹಕ್ಕು ಸಾಧಿಸುವ ಕಲಹಗಳೂ ಮನುಷ್ಯರಿಗೆ ಇದಿರಾಗಿದ್ದಿದೆ. ಆದರೆ, ಅಲ್ಲಿ ಅವರಿಗೆ ಆಹಾರದಲ್ಲಿ ಆಯ್ಕೆ ಇರಲಿಲ್ಲ. ಏನು ಸಿಕ್ಕುತ್ತದೋ ಅದನ್ನು ತಿನ್ನಬೇಕಿತ್ತು. ತಮಗೆ ಬೇಕಾಗಿದ್ದನ್ನೇ ಪಡೆಯುವ ಖಾತ್ರಿ ಇರುವುದಿಲ್ಲ. ತಾವೇ ಬೆಳೆಯುವುದನ್ನು ಕಲಿತ ಮೇಲೆ ಮನುಷ್ಯರಿಗೆ ಆಯ್ಕೆಯ ಅವಕಾಶ ಸಿಕ್ಕಿತು. ಇದಲ್ಲದೆ, ಬೆಂಕಿಯ ಅನ್ವೇಷಣೆಯಿಂದಾಗಿ ಆಹಾರ ಮತ್ತು ರುಚಿಗಳು ಮುನ್ನೆಲೆಗೆ ಬಂದವು. ಆದರೆ ಕ್ರಮೇಣ ಆಹಾರ ಎನ್ನುವುದು ಅಧಿಕಾರದ ಜೊತೆಗೂ ತಳುಕು ಹಾಕಿಕೊಳ್ಳುವುದನ್ನು ಕಾಣುತ್ತೇವೆ.

ಯಾವ ಆಹಾರ ತಿನ್ನುವವರು ಶ್ರೇಷ್ಠ ಎಂಬುದನ್ನು ನಿರ್ಣಯಿಸುವವರು ಯಾರು? ಅವರು ಈಗಾಗಲೇ ಇನ್ನಾವುದೋ ಹತ್ಯಾರದ ಮೂಲಕ ಸಮುದಾಯದ ಮೇಲೆ ಹಿಡಿತ ಸಾಧಿಸಿದವರೇ ಆಗಿರುತ್ತಾರೆ. ಅದು ರಾಜ್ಯಾಧಿಕಾರ ಇರಬಹುದು, ಹಿಡುವಳಿಗಳ ಮೇಲಿನ ಹಿಡಿತ ಸಾಧಿಸಿದವರಿರಬಹುದು ಅಥವಾ ಧರ್ಮದ ಮೂಲಕ ಹಿಡಿತ ಸಾಧಿಸಿದವರೂ ಆಗಿರಬಹುದು. ಈ ಅಧಿಕಾರ ಸ್ಥಾಪನೆಯನ್ನು ಬಲವಂತವಾಗಿ ಅಥವಾ ಸಂಘರ್ಷದ ಮೂಲಕ ಸಾಧಿಸಬಹುದು ಅಥವಾ ಅನುನಯದ ಮೂಲಕವೂ ಸಾಧಿಸಬಹುದು.

ಇಡೀ ರಾಮಧಾನ್ಯ ಚರಿತೆ ಆಹಾರವೊಂದು ಮನುಷ್ಯನ ಮೂಲಭೂತ ಅವಶ್ಯಕತೆಗಳಿಗಷ್ಟೇ ಸೀಮಿತವಾಗದೆ ಅದರಾಚೆಗೆ ಸಾಂಸ್ಕೃತಿಕ ರಾಜಕಾರಣ ಮಾಡುವೆಡೆಗೂ ನಾಲಿಗೆ ಚಾಚಿದ್ದನ್ನು ದಾಖಲಿಸುತ್ತದೆ. ಹೀಗೆ ದಾಖಲಿಸಲು ರಾಮನನ್ನು ಬಳಸಿಕೊಳ್ಳುವುದು ಕೂಡ ವಿಶೇಷವೆನಿಸುತ್ತದೆ. ಈ ಕತೆಯಲ್ಲಿ ರಾಮ ತನ್ನ ಹೆಂಡತಿಯನ್ನು ಅಪಹರಿಸಿದವನ ವಿರುದ್ಧ ಯುದ್ಧ ಸಾರಿ ಗೆದ್ದು ವಾಪಸಾಗುವ ಸನ್ನಿವೇಶದಲ್ಲಿದ್ದಾನೆ. ಅದಕ್ಕೂ ಮೊದಲು ರಾಜ್ಯಾಧಿಕಾರವನ್ನು ತಂದೆಗಾಗಿ ಬಿಟ್ಟು ಕಾಡಿಗೆ ತೆರಳಿದ್ದ ರಾಮ, ಎಂದೂ ಆಸ್ತಿಗಾಗಿ ಯುದ್ಧ ಮಾಡಿಲ್ಲ. ಲಂಕೆಯನ್ನು ವಶಪಡಿಸಿಕೊಳ್ಳಬಹುದಾಗಿತ್ತು. ಆದರೆ ಅದನ್ನು ವಿಭೀಷಣನಿಗೆ ಬಿಟ್ಟು

ಬಂದಿದ್ದಾನೆ. ಆತನ ಈ ನಿಲುವಿಗೂ ಅತಿಹಿತದಲಿ ನೀವಿಹುದು ಎಂಬ ಕೃತಿಯ ನಿಲುವಿಗೂ ಸಂಬಂಧ ಇದೆ. ಹೀಗೆ ತ್ಯಾಗಮಯಿ ರಾಮನ ಸನ್ನಿವೇಶವನ್ನೇ ಕವಿ ಇಲ್ಲಿ ಹಿನ್ನೆಲೆಯಲ್ಲಿ ಇಟ್ಟುಕೊಂಡಿದ್ದಾನೆ. ಇಂತಹ ಸಾಮಾಜಿಕ ಸ್ವಾಸ್ಥ್ಯದ ಪರವಿರುವ ರಾಮ ಈ ಕೃತಿಯ ನಾಯಕ. ಇಂತಹ ರಾಮ ಆಹಾರದ ಸಾಂಸ್ಕೃತಿಕ ರಾಜಕಾರಣ ಹೇಗೆ ಸಾಧಿತವಾಗುತ್ತದೆ ಎಂಬುದಕ್ಕೆ ಸಾಕ್ಷಿಯಾಗುವಂತಹ ನಿರೂಪಣೆ ಇಲ್ಲಿದೆ. ಈ ದೃಷ್ಟಿಯಿಂದ ನೋಡಿದರೆ ರಾಮಧಾನ್ಯ ಚರಿತೆಯು ಒಂದು ಸಾಮಾಜಿಕ ಚರಿತ್ರೆಯ ಪಠ್ಯದಂತೆ ಕಾಣುತ್ತದೆ. ಹೀಗಾಗಿ ಇದು ಧಾನ್ಯದ ಚರಿತ್ರೆಯ ಮೂಲಕ ಕಂಡುಕೊಂಡ ಸಾಮಾಜಿಕ ಚರಿತ್ರೆಯೂ ಹೌದು.

ಇಲ್ಲಿರುವ ರಾಗಿ ಭತ್ತಗಳೆಂಬ ಅನ್ಯೋಕ್ತಿಯು ಯಾರನ್ನು ಪ್ರತಿನಿಧಿಸುತ್ತಿರಬಹುದು ಎಂಬ ಚರ್ಚೆಯು ಈಗಾಗಲೇ ಕನ್ನಡದಲ್ಲಿ ಹಲವು ನೆಲೆಗಳಲ್ಲಿ ನಡೆದಿದೆ. ಇದು ಜಾತಿ, ವರ್ಗಗಳ ಭೇದವನ್ನು ಪ್ರತಿನಿಧಿಸುತ್ತಿದೆ ಎಂಬ ಚರ್ಚೆ ಹೆಚ್ಚು ಪರಿಚಿತವಾದುದು. ಹಾಗೆ ಹೇಳುವಾಗ ನಾವು ರಾಗಿಯನ್ನು ಕೆಳಜಾತಿ ಅಥವಾ ಕೆಳವರ್ಗದ ದ್ಯೋತಕ ಎಂದೂ, ಭತ್ತವನ್ನು ಮೇಲ್ವರ್ಗದ ದ್ಯೋತಕ ಎಂದೂ ಭಾವಿಸುತ್ತೇವೆ. ಇದನ್ನು ರಾಗಿ/ಭತ್ತ ಬೆಳೆವವರ ದ್ಯೋತಕ ಎಂದೂ ಅಥವಾ ರಾಗಿ/ಭತ್ತ ತಿನ್ನುವವರ ದ್ಯೋತಕ ಎಂದೂ ನೋಡಲು ಅವಕಾಶವಿದೆ. ಆದರೆ, ಈ ಪ್ರಬಂಧದಲ್ಲಿ ಮುಖ್ಯವಾಗಿ ಮೇಲು ಕೀಳುಗಳನ್ನು ಸ್ಥಾಪಿಸುವ ನೆಲೆಗಳ, ಅಧಿಕಾರವನ್ನು ಕಬಳಿಸುವ ಕ್ರಮಗಳ ಸೂಕ್ಷ್ಮ ವಿವೇಚನೆಯಾಗಿ ಈ ಕೃತಿಯನ್ನು ಗಮನಿಸುವ ಪ್ರಯತ್ನ ಮಾಡಲಾಗುವುದು.

ಯಾವುದೇ ಒಂದು ಕುಲ ಉಚ್ಚ ಅಥವಾ ನೀಚ ಅನಿಸಿಕೊಳ್ಳುವುದಕ್ಕೆ ಇರುವ ಮಾನದಂಡವೇನು? ಅದನ್ನು ಹೇಗೆ ನಿರ್ಧರಿಸಲಾಗುತ್ತದೆ? ಈ ಕೃತಿಯಲ್ಲಿ ನವಧಾನ್ಯಗಳಿಂದ ಮಾಡಿದ ಭಕ್ಷ್ಯಗಳನ್ನು ಸವಿದವರು ಸಂತೃಪ್ತರಾಗಿ ಆ ಧಾನ್ಯಗಳನ್ನು ನೋಡಬೇಕು ಎಂದು ಅಪೇಕ್ಷಿಸುತ್ತಾರೆ. ಸಾಧಾರಣವಾಗಿ ರುಚಿಯಾದ ಊಟವಾದ ಮೇಲೆ ಇಷ್ಟವಾದರೆ ಆ ಅಡುಗೆಯನ್ನು ಮಾಡಿದವರು ಯಾರು ಎಂದು ವಿಚಾರಿಸಲಾಗುತ್ತದೆ. ಆಮೇಲೆ ಅದನ್ನು ಹೇಗೆ ಮಾಡಲಾಯಿತು ಎಂದು ಕುತೂಹಲ ತೋರುತ್ತಾರೆ. ಆದರೆ ಇಲ್ಲಿ ಯಾವುದರಿಂದ ಮಾಡಲಾಯಿತು ಎಂಬೆಡೆಗೆ ಗಮನ ಹೋದಂತೆ ಕವಿ ಚಿತ್ರಿಸಿದ್ದಾನೆ. ಯಾವುದೇ ಧಾನ್ಯಕ್ಕೆ ಅದರದ್ದೇ ಆದ ಗುಣಗಳು ಇರುತ್ತವೆ. ಅವೆಂದರೆ, ಒಂದು ರುಚಿ ಇನ್ನೊಂದು ದೇಹಕ್ಕೆ ಹಿತ ಅಥವಾ ಅಹಿತವೆನಿಸುವುದು. ಜೊತೆಗೆ ಪುಷ್ಟಿಕರವಾಗಿದೆಯೇ ಎಂಬುದರ ಮೇಲೆ ಅದರ ಗುಣ ನಿರ್ಣಯವಾಗಬೇಕು. ಅದರಾಚೆಗೆ ಅದಕ್ಕೆ ಯಾವ ಅಸ್ತಿತ್ವವೂ ಇರುವುದಿಲ್ಲ. ಯಾವ ಧಾನ್ಯ ಬಾಯಿರುಚಿ ಮತ್ತು ಹೊಟ್ಟೆ ರುಚಿ ಎರಡನ್ನೂ ಸಾಧಿಸಿ ಪುಷ್ಟಿ ಕೊಡುತ್ತದೆಯೋ ಅದೇ ಶ್ರೇಷ್ಠವೆನಿಸಬೇಕು. ಹೀಗಾಗಿಯೇ ಈ ಎಲ್ಲಾ ಗುಣಗಳಿರುವ ರಾಗಿ ಸಹಜವಾಗಿಯೇ ಉತ್ತಮ




ಎನಿಸಿಕೊಳ್ಳಬೇಕು. ಇದನ್ನೇ ಗೌತಮರು ಆಡಿದರೆ ಇದು ಭತ್ತಕ್ಕೆ ಯಾಕೆ ಕಹಿ ಎನಿಸಬೇಕು?

ಹಾಗಾದರೆ ಭತ್ತ ತನ್ನ ಗುಣ ಮತ್ತು ಕರ್ತವ್ಯಗಳಿಂದಷ್ಟೇ ತೃಪ್ತವಾಗದೇ ಅದರಾಚೆಗೆ ಕೈ ಚಾಚುತ್ತಿದೆ ಎಂದರ್ಥ. ಅಂದರೆ ಅದೀಗ ವಿಶೇಷ ಮನ್ನಣೆಯನ್ನೂ, ಅದರಿಂದ ಸಿಗುವ ಅಧಿಕಾರವನ್ನೂ, ಆ ಅಧಿಕಾರದಿಂದ ಪುನಃ ಸಿಗುವ ಮನ್ನಣೆಯನ್ನೂ ಅದು ಬಯಸುತ್ತಿದೆ. ಅದನ್ನು ಸಾಧಿಸುವುದಕ್ಕಾಗಿ ಭತ್ತ ರಾಜಕಾರಣ ಆರಂಭಿಸುತ್ತದೆ. ಈ ರಾಜಕಾರಣದಲ್ಲಿ ಅದು ಧಾನ್ಯದ ಸಹಜ ಗುಣಗಳನ್ನು ಮರೆಗೆ ಸರಿಸಿ ಆ ಧಾನ್ಯಗಳು ಎಲ್ಲಿ ಬಳಕೆಯಾಗುತ್ತಿವೆ ಎಂಬುದರ ಮೇಲೆ ಅದರ ಬೆಲೆ ನಿರ್ಣಯ ಮಾಡಬೇಕು ಎಂಬಂತೆ ವಾದ ಮಂಡಿಸುತ್ತದೆ. ಸಾಮಾಜಿಕ ರಚನೆಯೊಳಗೆ ಯಾರೇ ಆಗಲಿ, ಯಾವುದೇ ಆಗಲಿ (ಅದು ಭಾಷೆಯೇ ಆಗಲಿ) ಯಾರ ಜೊತೆ ಗುರುತಿಸಿಕೊಂಡಿದೆ ಎಂಬುದರ ಮೇಲೆ ಅವರ ಅಧಿಕಾರ ಪರಿಧಿ ಮತ್ತು ಸಾಮಾಜಿಕ ಮನ್ನಣೆ ನಿರ್ಣಯವಾಗುತ್ತದೆ. ಈ ಸೂಕ್ಷ್ಮವನ್ನು ಕನಕರು ಭತ್ತದ ಬಾಯಿಯಲ್ಲಿ ಆಡಿಸಿದ ಮಾತಿನಲ್ಲಿ ದಾಖಲಿಸುತ್ತಾರೆ. ಮೂಲತಃ ಪ್ರಶ್ನೆ ಬಂದಿದ್ದು ನವಧಾನ್ಯದಲ್ಲಿ ಉತ್ತಮ ಗುಣವಿರುವುದು ಯಾವುದು? ಎಂದು. "ಮೆರೆವ ರಾಸಿಯ ಕಂಡುಯಿದರೊಳು/ಪರಮ ಸಾರದ ಹೃದಯನಾರೆಂ/ದರಸಿ ಕೇಳಿದವಲ್ಲಿರುತಿಹ ಮಹಾ ಮುನೀಶ್ವರರ" (ಜನಪ್ರಿಯ ಕನಕ ಸಂಪುಟ, ಕನ್ನಡ ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು; ೧೯೮೯, ಪುಟ. ೧೪೪). ಈ ಮಾತಿಗೆ ಸಿಟ್ಟಾಗುವ ಭತ್ತ ತಾನು ನರೆದಲೆಗಕ್ಕಿಂತಲೂ ಉತ್ತಮ ಸಾರ ಹೃದಯಿ ಎಂದು ಹೇಳುವ ಬದಲಿಗೆ ನರೆದಲೆಗ ತನಗೆ ಸಮಾನನಲ್ಲ ಎನ್ನುತ್ತಾ ಮಾತನ್ನು ಕುಲದ ಕಡೆಗೆ ತಿರುಗಿಸುತ್ತದೆ. ನೀನು ಕುಲಹೀನ ಮತಿಹೀನ ಎಂದು ಜರೆಯುತ್ತದೆ. ಯಾರೂ ಕುಲದ ಪ್ರಶ್ನೆಯನ್ನೇ ಎತ್ತದಿದ್ದಾಗ ಭತ್ತ ಇದ್ದಕ್ಕಿದ್ದಂತೆ ಕುಲದ ಮಾತಾಡಿ ನರೆದಲೆಗನನ್ನು ಕೀಳರಿಮೆಯಲ್ಲಿ ತಳ್ಳಲು ನೋಡುತ್ತದೆ. (ಕರ್ಣನ ನೆನಪಾದರೆ ಅದು ಸಹಜವೇ) ಮಾತ್ರವಲ್ಲ ಅದು ಏಕೆ

ಕುಲಹೀನ ಎಂಬ ವಿವರಣೆಯನ್ನೂ ಭತ್ತ ಕೊಡುತ್ತದೆ. ಅದರ ಪ್ರಕಾರ ಲೋಕದಲ್ಲಿನ ಶೂರರು, ಪಂಡಿತರು ನರೆದಲೆಗನನ್ನು ನಿರಾಕರಿಸಿರುವುದರಿಂದ ಅದು ಕೇವಲ ಶೂದ್ರಾನ್ನ, ವಿವೇಕಿಗಳು ಅದನ್ನು ಮೆಚ್ಚದೇ ಇರುವುದರಿಂದ, ಮಾನ್ಯತೆ ನೀಡದೇ ಇರುವುದರಿಂದ ಅದು ಬಾಹಿರ. ಇಲ್ಲಿನ ಮಾತುಗಳಲ್ಲಿ ಸ್ಪಷ್ಟವಾಗಿ ಯಾರನ್ನಾದರೂ ಅಸ್ಪೃಶ್ಯರನ್ನಾಗಿ ಮಾಡಲು ಅವರು ಯಾರ ಮನ್ನಣೆ ಪಡೆದಿದ್ದಾರೆ ಎಂಬುದು ಮುಖ್ಯವೇ ಹೊರತು ಅದರ ಯಾವ ಒಳ್ಳೆಯ ಗುಣಗಳೂ ಗಣನೆಗೆ ಬರುವುದಿಲ್ಲ ಎಂಬುದು ಕಣ್ಣಿಗೆ ರಾಚುತ್ತದೆ. ಅಲ್ಲದೆ ಭತ್ತ ತಾನು ಎಲ್ಲೆಲ್ಲಿ ಮಾನ್ಯ ಎಂಬುದನ್ನು ಪಟ್ಟಿ ಮಾಡುತ್ತದೆ: "ಬ್ರಾಹ್ಮಣರ ಉಪನಯನದಲ್ಲಿ, ಮಂತ್ರಾಕ್ಷತೆಗಳಲ್ಲಿ, ಶೋಭನದ ಆರತಿಗಳಲ್ಲಿ, ಯಾಗದಲ್ಲಿ ಅರಮನೆಯೊಳಗೆ, ನೈವೇದ್ಯದಲ್ಲಿ, ಬ್ರಾಹ್ಮಣರ ಸಮಾರಾಧನೆಗೆ, ವಿದ್ಯಾರಂಭ ಕಾಲದಲ್ಲಿ ಎಲ್ಲ ಭೂಸುರರ ಮನೆಗಳಲ್ಲಿ, ಏಕಾದಶಿಯ ಉಪಾಸನೆಗಳಲ್ಲಿ, ಹೊಸಮನೆಯ ಪುಣ್ಯಾರ್ಚನೆಗೆ, ಮದುಮಕ್ಕಳ ಸೇಸೆಗೆ, ರಾಜರ ಗರಡಿ ಪೂಜೆಯ ಸಮಯದಲ್ಲಿ ಶೋಭಿಸುವ ಬ್ರಾಹ್ಮಣರು ಮಂತ್ರ ತಂತ್ರೋಚ್ಚಾರಣೆಯ ಸಮಯದಲ್ಲಿ ಹರಸಲು ಹಸ್ತಕ್ಕೆ ಕೊಡುವ ಅಕ್ಷತೆಯಾಗಿ, ಹೀಗೆ ಇಲ್ಲೆಲ್ಲ ತಾನು ಇರುವುದರಿಂದ ತನಗೆ ವಿಶೇಷ ಶಕ್ತಿಯೂ ದಕ್ಕಿದೆ ಎಂದು ಭತ್ತ ತನಗೆ ತಾನೇ ಶಹಬ್ಬಾಸ್‌ಗಿರಿಯನ್ನು ಕೊಟ್ಟುಕೊಳ್ಳುತ್ತದೆ. ಅದರ ಪ್ರಕಾರ ತನ್ನನ್ನು ಮಂಡೆಯೊಳಾಂತವರಿಗೆ "ದುರಿತ ದುಃಖ ವಿನಾಶ ಮಂಗಳಕರವಹುದು. ತಾನೀವೆ ಸಂತತ ಸಿರಿಯ ಸಂಪತ್ತಾಯುವನು." ಇಲ್ಲೆಲ್ಲೂ "ನರೆದಲೆಗನಿಗೆ ಜಾಗವೇ ಇಲ್ಲದುದರಿಂದ ಅದು ಕುಲಹೀನ !"

*ಕ್ಷಿತಿಯಮರರುಪನಯನದಲಿ ಸು*
*ವ್ರತ ಸುಭೋಜನ ಪರಮ ಮಂತ್ರಾ*
*ಕ್ಷತೆಗಳಲಿ ಶುಭಶೋಭನದಲಾರತಿಗೆ ಹಿರಿಯರಲಿ*
*ಕ್ರತುಗಳೆಡೆಯಳಗರಮನೆಯಲಿ*
*ಪ್ರತಿದಿನವು ರಂಜಿಸುತ ದೇವರಿ*
*ಗತಿಶಯದ ನೈವೇದ್ಯ ತಾನಹೆನೆಂದನಾ ವ್ರಿಹಿಗ*

*ಜನಪರಿಗೆ ಶಿಶುಗಳಿಗೆ ಬಾಂಧವ*
*ಜನರೆಡೆಗೆ ಬ್ರಹ್ಮರ ಸಮಾರಾ*
*ಧನೆಗೆ ವಿದ್ಯಾರಂಭ ಕಾಲಕೆ ಸಕಲ ಭೂಸುರರ*
*ಮನೆಗಳಲಿ ಹರಿದಿವಸದೌಪಾ*
*ಸನೆಗಳಲಿ ತಾ ಯೋಗ್ಯನಹುದೆಂ*
*ದೆನಿಸಿಕೊಂಬೆನು ನೀನಯೋಗ್ಯನು ಭ್ರಷ್ಟ*
*ತೊಲಗೆಂದ*

*ಹೊಸ ಮನೆಯ ಪುಣ್ಯಾರ್ಚನೆಗೆ ಮಿಗೆ*
*ಯೆಸೆವ ಮದುಮಕ್ಕಳಿಗೆ ಸೇಸೆಗೆ*
*ವಸುಮತೀಕರ ಗರುಡಿಯಲಿ ಶಸ್ತ್ರಾಸ್ತ್ರದರ್ಚನೆಗೆ*
*ಎಸೆವ ವಿಪ್ರರ ಫಾಲದಲಿ ರಂ*
*ಜಿಸುವ ಗಂಧಾಕ್ಷತೆಯಹೆನು ಭಾ*
*ವಿಸಲು ಲೋಕದೊಳಾರು ಸರಿಯಿಂತೆಂದನಾ ವ್ರಿಹಿಗ*

*ಧರಣಿಯಮರರು ಮಂತ್ರ ತಂತ್ರೋ*
*ಚ್ಚರಣೆಯಲಿ ಹಸ್ತಾಂಬುಜದಿ ಮಿಗೆ*

*ಹರಸಿ ಕೊಡಲಕ್ಷತೆಯ ಮಂಡೆಯೊಳಾಂತ ಮಹಿಮರಿಗೆ*
*ದುರಿತ ದುಃಖ ವಿನಾಶ ಮಂಗಳ*
*ಕರವಹುದು ತಾನೀವೆ ಸಂತತ*
*ಸಿರಿಯ ಸಂಪತ್ತಾಯುವನು ಕೇಳೆಂದನಾ ವ್ರಿಹಿಗ* *(ಅದೇ, ಪುಟ. ೧೪೬)*

ಭತ್ತ ಮತ್ತೆ ಮತ್ತೆ ತನ್ನನ್ನು ಬ್ರಾಹ್ಮಣರ ಜೊತೆ ಸಮೀಕರಿಸಿಕೊಳ್ಳುವುದನ್ನು ಗಮನಿಸಬೇಕು. ಅಂದರೆ, ಬ್ರಾಹ್ಮಣರ ಮನ್ನಣೆ ಪಡೆದರೆ ಅದು ರಾಜರ ಮತ್ತು ಧರ್ಮದ ಮನ್ನಣೆ ಪಡೆದಂತೆಯೇ (ವಿಜಯಕ್ಕೆ ಒಂದೇ ಮೆಟ್ಟಿಲು!). ರಾಜ/ಧರ್ಮ ಎಂಬ ಎರಡು ಅಧಿಕಾರ ಕೇಂದ್ರಗಳು ಯಾವುದಕ್ಕೆ ಮನ್ನಣೆ ನೀಡುತ್ತವೋ ಅವು ಗುಣಹೀನವಾದರೂ ಎತ್ತರದ ಜಾಗವನ್ನು ಪಡೆದುಕೊಳ್ಳುತ್ತವೆ. ಆಗ ಅವುಗಳ ಬೆನ್ನುಬಿದ್ದು ಮನುಷ್ಯರು ತಾವೂ ಶ್ರೇಷ್ಠರು ಎಂದು ತೋರ್ಪಡಿಸಿಕೊಳ್ಳಲು ಓಡುತ್ತಾರೆ. (ಬ್ಲಡ್‌ಶುಗರ್ ಬಂದ ಮೇಲೆ ಮುದ್ದೆಗೆ ಬೆಲೆ ಬಂತೇ ಹೊರತು ಇಲ್ಲದಿದ್ರೆ ಅದು ಕದ್ದು ಮುಚ್ಚಿ ತಿನ್ನುವ ತಿನಿಸಾಗಹೊರಟಿತ್ತು).

ಇಷ್ಟೆಲ್ಲ ಆಗುವಾಗ ರಾಗಿ ಪ್ರಾಮಾಣಿಕವಾಗಿ ತನ್ನ ಗುಣಗಳನ್ನೂ ಭತ್ತದ ಗುಣಹೀನತೆಗಳನ್ನೂ ಹೇಳುವ ಮೂಲಕ ಹೋರಾಟಕ್ಕೆ ಮುಂದಾಗುತ್ತದೆ.

*ಸತ್ಯಹೀನನು ಬಡವರನು ಕ*
*ಣ್ಣೆತ್ತಿ ನೋಡೆ ಧನಾಢ್ಯರನು ಬೆಂ*
*ಬತ್ತಿ ನಡೆವವುಪೇಕ್ಷೆ ನಿನ್ನದು ಹೇಳಲೇನದನು*
*ಹೆತ್ತ ಬಾಣಂತಿಯರು ರೋಗಿಗೆ*
*ಪತ್ಯ ನೀನಹೆ ಹೆಣದ ಬಾಯಿಗೆ*
ತುತ್ತು ನೀನಹೆ ನಿನ್ನ ಜನ್ಮ ನಿರರ್ಥಕರವೆಂದ (ಪುಟ. ೧೪೭)

ತಾನು ಬಡವ ಶ್ರೀಮಂತ ಎಂಬ ಪಕ್ಷಪಾತ ಮಾಡುವವನಲ್ಲ. ಕ್ಷಾಮದಂತಹ ವಿಲಯ ಕಾಲದಲ್ಲಿ ಅಳಿವ ಪ್ರಾಣಿಗಳನ್ನು ಆಧರಿಸುವವನು ನಾನು ಎಂದು ರಾಗಿ ಹೇಳುವಾಗ ಗಮನಿಸಬೇಕಾದ ಅಂಶವೊಂದಿದೆ. ಅದೆಂದರೆ ರಾಗಿ ಎಲ್ಲೂ ಬ್ರಾಹ್ಮಣರ, ರಾಜರ, ಧರ್ಮದ ಹೆಸರು ಹೇಳುವುದಿಲ್ಲ. ಬಡವರು, ಬಾಣಂತಿ, ರೋಗಿ – ಒಟ್ಟಿನಲ್ಲಿ ಅಸಹಾಯಕರನ್ನೇ ಅದು ನೆನಪಿಸಿಕೊಳ್ಳುತ್ತಿದೆ. ಇದೇ ಹಣ್ಣಾಗುವುದು ಮತ್ತು ಹೆಣ್ಣಾಗುವುದು. ಅಂದರೆ, ಬಡತನ ಅಸಹಾಯಕತೆಯ ಮೂಲಕ ಮಾಗುವ, ಹೆಣ್ಣಾಗಿ ಇನ್ನೊಬ್ಬರನ್ನು ಪೊರೆಯುವ ಗುಣಗಳನ್ನು ಪುರಸ್ಕರಿಸುವುದು. ಹೀಗೆ ಅದು ಹೇಳುವ ಈ ಮಾತೆಲ್ಲವೂ ನಿಜವಾಗಿದ್ದರೂ ಅದು ಗುರುತಿಸಿಕೊಂಡಿರುವ ಸಕಲರೂ ಅಧಿಕಾರಹೀನರಾಗಿರುವುದರಿಂದ ಅದನ್ನು ಸೋಲಿಸಲು ಭತ್ತ ಮತ್ತೆ ಮತ್ತೆ ಕುಲಹೀನ ಎಂಬ ಮಾತನ್ನು ಮುಂದಕ್ಕೆ ತರುತ್ತದೆ. ಕುಲವೆಂಬುದು ದಮನದ ಅಸ್ತ್ರವಾಗುವುದು ನಿರಂತರವಾಗಿ ಗುಣವನ್ನು ಅಲ್ಲಗಳೆಯುವ ಮೂಲಕವೇ ಎಂಬುದೂ ಬಹಳ ಮುಖ್ಯ. ಕ್ರಮೇಣ ಕುಲಹೀನನು ಗುಣಹೀನನೂ ಹೌದು ಎಂದು ಸಾಧಿಸುವ ತಂತ್ರವನ್ನೂ ನಾವು ಮರೆವಂತಿಲ್ಲ.

ಈ ಎಲ್ಲಾ ಕಾರಣಗಳೊಂದಿಗೆ ಈ ಕೃತಿ ಮುಖ್ಯವಾಗುವುದು, ರಾಮ ಕೊನೆಗೂ ಇವರ ಈ ವಾದಗಳನ್ನು ಕೇವಲ ಕೇಳಿ ಅದನ್ನೇ ನಂಬದೆ ಅವರನ್ನು ಪರೀಕ್ಷಿಸುವ ನಿಲುವು ತೆಗೆದುಕೊಳ್ಳುವಲ್ಲಿ. ಯಾಕೆಂದರೆ, ಯಾರೇ ಆಗಿರಲಿ, ಅವರ ಮೌಲ್ಯ ನಿರ್ಧಾರವಾಗಬೇಕಾದ್ದು ಅವರ ಗುಣದ ಮೂಲಕವೇ ಹೊರತು ಇನ್ನಾವುದೂ ಮಾನದಂಡವಲ್ಲ ಎಂಬುದನ್ನು ಈ ನಡೆ ಹೇಳುತ್ತಿದೆ. ಇಬ್ಬರಿಗೂ ಶಿಕ್ಷೆ ವಿಧಿಸಿ ಇಬ್ಬರೂ ತಮ್ಮನ್ನು ತಾವೇ ಕಂಡುಕೊಳ್ಳುವಂತೆ ಮಾಡುವುದು ಹಾಗೂ ಇತರರೂ ಅದನ್ನು ಒಪ್ಪಿಕೊಳ್ಳದೆ ಬೇರೆ ದಾರಿಯಿಲ್ಲ ಎಂಬಂತೆ ನಿರೂಪಿಸುವುದು ಕೂಡ – ನ್ಯಾಯವು ಶಿಕ್ಷಿತರ ಮೂಲಕ ದೊರಕಬೇಕೇ ಹೊರತು ಶಿಕ್ಷಕರ ಮೂಲಕವಲ್ಲ ಎಂಬುದನ್ನೂ ಹೇಳುತ್ತದೆ. ಅಲ್ಲದೆ, ಆ ಗುಣವನ್ನು ಸಾಬೀತು ಮಾಡಿದವರಿಗೆ ರಾಮ ರಾಜನಾಗಿ ಮತ್ತು ವೈಷ್ಣವ ಧರ್ಮದ ಪ್ರತಿಪಾದಕನಾಗಿ ಅಂದರೆ ರಾಜತ್ವ ಮತ್ತು ಧಾರ್ಮಿಕ ಮನ್ನಣೆ ಎರಡೂ ಸಿಕ್ಕದಿದ್ದಲ್ಲಿ ಸಾಮಾಜಿಕ ರಚನೆಯ ಸ್ತರದಲ್ಲಿ ಮೇಲಕ್ಕೇರುವುದು ಸಾಧ್ಯವಿಲ್ಲ ಎಂಬುದನ್ನು ಅರಿತವನಂತೆ ತನ್ನ ಹೆಸರನ್ನೇ ಅದಕ್ಕೆ ನೀಡುವ ಮೂಲಕ ರಾಗಿಯನ್ನು ಎತ್ತಿ ಹಿಡಿಯುತ್ತಾನೆ.

ಎಲ್ಲ ವಿವಾದಗಳೂ ಮುಗಿದ ಮೇಲೆ, ನಾಚಿ ತಲೆತಗ್ಗಿಸಿ ನಿಂತ ಭತ್ತವನ್ನು ಸಮಾಧಾನ ಮಾಡುವ ರಾಮನ ಕ್ರಮ ಹಾಗೂ ರಾಗಿಯ ತಲೆಯ ಮೇಲೆ ಅಕ್ಷತೆ ಹಾಕುವ ಭತ್ತದ ಕ್ರಮವು ಎಲ್ಲೋ ಭತ್ತದ ಕೈ ಮೇಲಾಯಿತೇನೋ ಎಂಬ ಸಂಶಯ ಹುಟ್ಟಿಸಬಹುದು. ಆದರಿದು ಹಾಗೇ ಆಗಬೇಕಾಗಿಲ್ಲ. ಭತ್ತವನ್ನು ನಿರಾಕರಿಸಿ ರಾಗಿಯನ್ನು ಮಾತ್ರ ಬೆಂಬಲಿಸುವುದು, ರಾಗಿಯನ್ನು ನಿರಾಕರಿಸಿ ಭತ್ತವನ್ನು ಮಾತ್ರ ಬೆಂಬಲಿಸಿದಷ್ಟೇ ಅಪಾಯಕಾರಿ. ಆಹಾರವಾಗಿಯೂ ಇವೆರಡೂ ಮನುಷ್ಯನಿಗೆ ಬೇಕು. ಎರಡರ ಬಳಕೆಯೂ ಹಿತಮಿತವಾಗಿರಬೇಕು. ಒಟ್ಟು ಸಮಾಜದ ಸ್ವಾಸ್ಥ್ಯವೆಂದರೆ, ಸಹಮತದಲ್ಲಿ ಇಬ್ಬರೂ ಬದುಕುವುದು. ಹೀಗಾಗಿ ರಾಗಿಯ ತಲೆಯ ಮೇಲೆ ಅಕ್ಕಿಯ ಅಕ್ಷತೆ ಎಂಬುದನ್ನು ಅಕ್ಕಿಯು ರಾಗಿಯನ್ನು ಒಪ್ಪಿಕೊಂಡುದರ ಸಂಕೇತ ಎಂದೂ ಭಾವಿಸಬಹುದು. ಅಥವಾ ಅಕ್ಕಿ ಅಕ್ಷತೆಗೇ ಲಾಯಕ್ಕು ಎಂದಾದರೂ ಭಾವಿಸಬಹುದು. ಆದರೆ, ಅಕ್ಕಿಯೇ ಬೇಡ ಎನ್ನಲಾಗುವುದಿಲ್ಲ. ಮಾತ್ರವಲ್ಲ, ಕವಿ ತೀರ್ಪು ನೀಡಬೇಕೆಂದು ಬಯಸುವುದು ಅಥವಾ ಕವಿ ತೀರ್ಪು ನೀಡಿದ್ದಾನೆ ಎಂದು ಭಾವಿಸುವುದು ಎರಡೂ ಸರಿಯಲ್ಲ. ಕವಿ ನೀಡುತ್ತಿರುವುದು ಸೂಚನೆಯನ್ನು ಮಾತ್ರ. ಅದನ್ನು ಧಾರ್ಮಿಕ ಆಚರಣೆಗಳಲ್ಲಿ ಅಕ್ಕಿ ಅಕ್ಷತೆಯ ಸ್ಥಾನವನ್ನು ಕೊನೆಗೂ ರಾಗಿಗೆ ಬಿಟ್ಟುಕೊಡಲಿಲ್ಲ ಎಂಬ ವಾಸ್ತವದ ಸೂಚನೆ ಎಂದೂ ಭಾವಿಸಬಹುದು. (ಅಕ್ಕಿಯನ್ನು ಪ್ರತಿನಿಧಿಸುವವರು ಎಂಬ ಅರ್ಥದಲ್ಲಿಯೂ ಇದು ನಿಜ). ಅಥವಾ ರಾಗಿ ಅಕ್ಷತೆಯಾಗುವುದಕ್ಕಿಂತಲೂ ಬಡವರ ಪಾಲಿನ ಅಕ್ಷಯವಾಗುವುದರಲ್ಲೇ ಹಿರಿಮೆ ಕಂಡುಕೊಂಡಿದ್ದರ ಸೂಚನೆ ಎಂದೂ ಭಾವಿಸಬಹುದು. ನನ್ನ ಮತ ಈ ಕೊನೆಯ ಸೂಚನೆಗೇ, ಏಕೆಂದರೆ ಎಲ್ಲ ಕಾಲದಲ್ಲೂ ಅಧಿಕಾರವನ್ನು ಓಲೈಸುವವರು ಇರುವಂತೆಯೇ ಅಧಿಕಾರವನ್ನು ಧಿಕ್ಕರಿಸಿ ದಮನಿತರ ಪರವಾಗಿ ಎಲ್ಲ ಕಷ್ಟಗಳ ನಡುವೆಯೂ ಗಟ್ಟಿಯಾಗಿ ನಿಲ್ಲುವವರು ಇದ್ದೇ ಇರುತ್ತಾರೆ. ರಾಗಿಯದು ಅಧಿಕಾರದ ರಾಗವನ್ನು ಮೀರಿ ದಮನಿತರ ಪರ ಮಿಡಿಯುವ ನೆಲೆಯಾಗಿದ್ದು, ಆ ನೆಲೆಯನ್ನೇ ಈ ಕೃತಿ ಒತ್ತಾಯಿಸುತ್ತಿದೆ ಎಂಬ ಕಾರಣಕ್ಕಾಗಿ ಈ ಕೃತಿ ವಿಶಿಷ್ಟ ಮತ್ತು ಮುಖ್ಯವೆನಿಸುವುದು.

**ಡಾ॥ ಸಬಿತಾ ಬನ್ನಾಡಿ**
ಸಹ ಪ್ರಾಧ್ಯಾಪಕರು, ಕನ್ನಡ ವಿಭಾಗ, ಸರ್ಕಾರಿ ಪ್ರಥಮ ದರ್ಜೆ ಕಾಲೇಜು
ತರೀಕೆರೆ – ೫೭೭ ೨೨೮, ಚಿಕ್ಕಮಗಳೂರು ಜಿಲ್ಲೆ



# ಚಂದ್ರಗ್ರಹಣ

ಬಹಳ ವರ್ಷಗಳಾದ ಮೇಲೆ ಸಂಜೆ ಚಂದ್ರಗ್ರಹಣ ಉಂಟಾಗಲಿದೆ. ಈ ನಡುವೆ ಹಲವಾರು ಗ್ರಹಣಗಳು ಆಗಿಹೋದವು. ಸಾಧಾರಣವಾಗಿ ಚಂದ್ರಗ್ರಹಣ ನಡುರಾತ್ರಿಯಲ್ಲೇ ಉಂಟಾಗುವುದರಿಂದ ಆಸಕ್ತಿ ಇದ್ದವರು ಮಾತ್ರ ನಿದ್ದೆ ಕೆಟ್ಟು ನೋಡಿರುತ್ತಾರೆ. ಉಳಿದವರು ಹೊದ್ದು ಮಲಗಿ ಬಿಡುತ್ತಾರೆ. ಈ ಬಾರಿ ಸಂಜೆಯೇ ಗ್ರಹಣವಿರುವುದರಿಂದ ಎಲ್ಲರೂ ನೋಡಬಹುದು. ಮಕ್ಕಳಿಗೆ ತೋರಿಸಿದಲ್ಲಿ ಈ ಕೌತುಕ ಅವರಿಗೆ ಚೆನ್ನಾಗಿ ಮನ ದಟ್ಟಾಗುವುದು. ಮಂಕಾಗಿ ಕಂದು ಅಥವಾ ತಾಮ್ರದ ಬಣ್ಣಕ್ಕೆ ಕಾಣುವ ಚಂದ್ರನ ಪಕ್ಕದಲ್ಲಿ ಕ್ಷೀಣವಾದ ಪುಷ್ಯ ನಕ್ಷತ್ರವಿದೆ. ಅಲ್ಲೊಂದು ನಕ್ಷತ್ರ ಗುಚ್ಛವೂ ಇದೆ. ಅದನ್ನು ಗುರುತಿಸಲು ಇದು ಸದವಕಾಶ.

ಈ ತಿಂಗಳಲ್ಲಿ ಎರಡು ಹುಣ್ಣಿಮೆಗಳಿವೆ. ೨ರಂದು ಮತ್ತು ೩೧ ರಂದು. ಹೀಗೆ ಒಂದೇ ತಿಂಗಳಲ್ಲಿ ಎರಡು ಹುಣ್ಣಿಮೆ ಬಂದರೆ ಎರಡನೆಯದನ್ನು ನೀಲಿ ಚಂದ್ರ (Blue Moon) ಎಂದು ಕರೆಯುತ್ತಾರೆ. ಅದು ಅಪರೂಪ ಎಂಬ ಅರ್ಥದಲ್ಲಿ. ವಾಸ್ತವದಲ್ಲಿ ಚಂದ್ರ ತನ್ನ ಪಾಡಿಗೆ ತಾನು ಸಂಚರಿಸಿ ೨೯ವರೆ ದಿನ ಗಳಿಗೊಮ್ಮೆ ಹುಣ್ಣಿಮೆಯನ್ನು ಸೃಷ್ಟಿಸುತ್ತದೆ. ಆದರೆ, ನಾವು ನಮ್ಮ ಕ್ಯಾಲೆಂಡರ್‌ನಲ್ಲಿ ತಿಂಗಳಿಗೆ ೩೧ ದಿನ ತುಂಬಿಸಿ, ಒಂದೇ ತಿಂಗಳಲ್ಲಿ ಎರಡು ಹುಣ್ಣಿಮೆ ಎಂದು ಸಂಭ್ರಮಿಸುತ್ತಿದ್ದೇವೆ. ಆದ್ದರಿಂದ ಈ ನೀಲಿ ಚಂದ್ರ ಎಂಬುದಕ್ಕೆ ಯಾವುದೇ ವೈಜ್ಞಾನಿಕ ವೈಶಿಷ್ಟ್ಯ ಇಲ್ಲ. (ಫೆಬ್ರವರಿಯಲ್ಲಿ ಒಂದೇ ಒಂದು ಹುಣ್ಣಿಮೆಯೂ ಇಲ್ಲ.; ಮಾರ್ಚ್‌ಗೆ ಪುನಃ ಎರಡು ಹುಣ್ಣಿಮೆಗಳು)

ಹೀಗೆಯೇ ಸೂಪರ್‌ಮೂನ್ ಎಂಬ ಇನ್ನೊಂದು ಹೆಸರೂ ಈಚೆಗೆ ಸುದ್ದಿ ಮಾಡಿತ್ತು. ಹುಣ್ಣಿಮೆ ಚಂದ್ರ ಭೂಮಿಯಿಂದ ಕನಿಷ್ಠ ದೂರದಲ್ಲಿದ್ದರೆ ಸಹಜವಾಗಿ ದೊಡ್ಡದಾಗಿ ಕಾಣುತ್ತದೆ. ಆದರೆ ಈ ಹೆಚ್ಚಳ ಬರಿಗಣ್ಣಿಗೆ ಗೋಚರವಾಗುವುದಿಲ್ಲ. ಆದರೆ ಕಡಲತೀರದವರು ಎಂದಿಗಿಂತ ಉಬ್ಬರ ಇಳಿತ ಜೋರು ಎಂಬುದನ್ನು ಕಂಡುಕೊಳ್ಳುವರು. ಕಳೆದ ತಿಂಗಳು ಹುಣ್ಣಿಮೆ ಎಂಬ ಘಟನೆ ನಡೆಯುವ ೧೪ ಗಂಟೆಗಳ ಮುಂಚೆ ಅದು ಪುರಭೂ ಬಿಂದುವಿನಲ್ಲಿತ್ತು. ಅಂದರೆ ೩೫೭೫೦೦ ಕಿ. ಮೀ. ದೂರದಲ್ಲಿತ್ತು. ಜನವರಿ ೨ರಂದು ಪುರಭೂ ನಿಂದ (೩೫೬೬೦೦ ಕಿ. ಮೀ.) ಕೆಲವೇ ಗಂಟೆಗಳ ಅಂತರದಲ್ಲಿ ಹುಣ್ಣಿಮೆ ಎಂಬ ಘಟನೆ ನಡೆಯುವುದರಿಂದ ಅದು ನಿಜವಾದ 'ಸೂಪರ್ ಮೂನ್' ಮತ್ತು ಜನವರಿ ೩೧ರಂದು ಪುನಃ ೩೫೯೦೦೦ ಕಿಮೀ ದೂರದ ಪುರಭೂ ಬಿಂದು ದಾಟಿದ ೧೩ ಗಂಟೆಗಳ ನಂತರ ಹುಣ್ಣಿಮೆ. ಆದರೆ, ಹಲವಾರು ಸಾವಿರ ಕಿ. ಮೀ. ಗಳ ವ್ಯತ್ಯಾಸ ಅಷ್ಟೇನೂ ಮುಖ್ಯವಲ್ಲ. ಆದರೂ ಅವುಗಳೆಲ್ಲವನ್ನೂ ಸೂಪರ್‌ಮೂನ್ ಗಳೆಂದು ಕರೆದು, ಒಟ್ಟಿಗೇ ಮೂರು ಎಂದು ಸಂಭ್ರಮಿಸಬಹುದು. ೩೧ರ ಗ್ರಹಣ ಸಂಜೆಯದು. ಆದ್ದರಿಂದ, ಕೆಂಪು ಬಣ್ಣದ ಚಂದ್ರನ ಚಿತ್ರವನ್ನು ತೆಗೆಯಲು ಒಳ್ಳೆಯ ಅವಕಾಶ. ಇನ್ನಾರು ತಿಂಗಳ ನಂತರ ನಡೆಯುವ ಚಂದ್ರಗ್ರಹಣ ನಡುರಾತ್ರಿಯದು. ಆಗ ಅದು ಭೂಮಿಯಿಂದ ಗರಿಷ್ಠ ದೂರ ದಲ್ಲಿರುತ್ತದೆ. ಈ ಎರಡೂ ಚಿತ್ರಗಳನ್ನು ಹೋಲಿಸಿದಾಗ ಮಾತ್ರ ಗಾತ್ರದ ವ್ಯತ್ಯಾಸ ಗೊತ್ತಾಗುತ್ತದೆ. ಸೂಪರ್ ಮೂನ್‌ನ ಅರ್ಥ ತಿಳಿಯಿತ್ತದೆ. ಚಂದ್ರ ಗರಿಷ್ಠ ದೂರದಲ್ಲಿದ್ದು ಹುಣ್ಣಿಮೆ ಯಾದಾಗ ಅದರ ಹೆಸರಿಗೆ (ಸೂಪರ್‌ಗೆ ವಿರುದ್ಧವಾದ) ಯಾವ ವಿಶೇಷಣವೂ ಇಲ್ಲ.




ಈ ತಿಂಗಳ ಸಂಜೆಯ ಆಕಾಶದಲ್ಲಿ ಯಾವುದೂ ಗ್ರಹವೇ ಇಲ್ಲ. (ಈ ವರ್ಷದ ಕೊನೆಗೆ ಐದೂ ಸಂಜೆಗೆ ಬಂದುಬಿಡುತ್ತವೆ) ಮುಂಜಾವಿನಲ್ಲಿ ಬುಧ, ಗುರು, ಶನಿ ಮತ್ತು ಮಂಗಳ ಇವೆ. ಸೂರ್ಯನ ಆಚೆ ಬದಿ ಯಿಂದ ಹಾದುಹೋಗುವ ಶುಕ್ರ ಈ ತಿಂಗಳು ಸೂರ್ಯನೊಡನೆಯೇ ಉದಯಿಸಿ ಕಂತುವುದರಿಂದ ನಮಗೆ ಕಾಣುವುದೇ ಇಲ್ಲ. ತಿಂಗಳ ಕೊನೆಗೆ ಸಂಜೆ ಪಶ್ಚಿಮ ದಿಗಂತದ ಅಂಚಿಗೆ ಕಾಣುವುದು.

ಏಳರ ಮುಂಜಾವು ಗುರು ಮತ್ತು ಮಂಗಳ ಒಂದಕ್ಕೊಂದು ಸಮೀಪವಾಗುವುವು. ಹಾಗೆಯೇ ೧೩ರಂದು ಬುಧ, ಶನಿ ಒಟ್ಟಾಗುವುವು. ಚಿತ್ರೀಕರಿಸಲು ಇವು ಸದವಕಾಶಗಳು. ೧೫ರ ಮುಂಜಾವಿನಲ್ಲಿ ಚಂದ್ರನ ಪಕ್ಕ ಶನಿ, ಬುಧ ಇವೆರಡನ್ನೂ ನೋಡಬಹುದು. ಎರಡನೆಯ ತಾರೀಖು ಬುಧಗ್ರಹದ ಗರಿಷ್ಠ ಕೋನೋನ್ನತಿ.

೩ರಂದು ಭೂಮಿ ಪುರ ರವಿ ಬಿಂದುವನ್ನು ದಾಟಲಿದೆ. ಅಂದರೆ ಸರಾಸರಿ ದೂರ (೧೫೦,೦೦೦,೦೦೦ ಕಿಮೀ)ಕ್ಕಿಂತ ಸುಮಾರು ಶೇಕಡಾ ೧.೭ ಕಡಿಮೆ. ಈ ಕಾರಣ ಸೂರ್ಯ ತಾತ್ವಿಕವಾಗಿ ಹತ್ತಿರವಿರುತ್ತದೆಯಾದರೂ ಇದು ಬೇಸಗೆಯನ್ನು ಸೃಷ್ಟಿಸಲಾರದು. ಬೇಸಗೆಗೆ ಭೂ ಆವರ್ತನೆಯ ಅಕ್ಷದ ಓರೆಕೋನವೇ ಕಾರಣ.

೪ರ ಮುಂಜಾವು ಉಲ್ಕಾವೃಷ್ಟಿ ಇದೆ. ಕ್ವಾಂಡ್ರಾಟಿಡ್ಸ್ ಎಂಬ ಹೆಸರಿನ ಈ ಉಲ್ಕೆಗಳು ಸ್ವಾತಿ ನಕ್ಷತ್ರದ ದಿಕ್ಕಿನಿಂದ ಬಂದಂತೆ ಕಾಣುತ್ತವೆ.

**ಡಾ॥ ಬಿ. ಎಸ್. ಶೈಲಜಾ**



**ಖಗೋಳ ದಿನಚರಿ**

೨ ಚಂದ್ರ – ಭೂಮಿ ನಡುವೆ ಕನಿಷ್ಠ ಅಂತರ (ಚಂದ್ರ ಪುರಭೂ ಬಿಂದುವಿನಲ್ಲಿ ಮುಂಜಾನೆ ೫:೦೦ಕ್ಕೆ) ಹುಣ್ಣಿಮೆ ೦೮:೦೦ಕ್ಕೆ *
ಬುಧ ಗ್ರಹದ ಗರಿಷ್ಠ ಕೋನೋನ್ನತಿ*
೩ ಭೂಮಿ ಪುರ ರವಿ ಬಿಂದುವಿನಲ್ಲಿ
೪ ಕ್ವಾಡ್ರಾಂಟಿಡ್ಸ್ ಉಲ್ಕಾವೃಷ್ಟಿ*
೫ ಚಂದ್ರ–ಮಘ ಜೋಡಿ
೭ ಮಂಗಳ – ಗುರು ಜೋಡಿ*
೯ ಚಾಂದ್ರಮಾಸದ ಕೊನೆಯ ಪಾದ (ಚಂದ್ರೋದಯ ನಡುರಾತ್ರಿಗೆ)
ಶುಕ್ರ ಗ್ರಹದ ಉಚ್ಚ ಯುತಿ
೧೧ ಗುರು – ಚಂದ್ರ – ಮಂಗಳ ಪುಟ್ಟ ಗುಂಪು*
೧೩ ಶನಿ– ಬುಧ ಜೋಡಿ*
೧೫ ಶನಿ – ಚಂದ್ರ – ಬುಧ ಪುಟ್ಟ ಗುಂಪು*
ಚಂದ್ರ – ಭೂಮಿ ನಡುವೆ ಗರಿಷ್ಠ ದೂರ
೧೭ ಅಮಾವಾಸ್ಯೆ ೭:೩೦ಕ್ಕೆ
೨೪ ಚಾಂದ್ರಮಾಸದ ಮೊದಲ ಪಾದ (ಚಂದ್ರಾಸ್ತ ನಡು ರಾತ್ರಿಗೆ)
೨೭ ಚಂದ್ರ ರೋಹಿಣಿ ಜೋಡಿ; ಆಚ್ಛಾದನೆ ಭಾರತಕ್ಕೆ ಕಾಣುವುದಿಲ್ಲ*
೩೧ ಹುಣ್ಣಿಮೆ ೧೮ಕ್ಕೆ; ಚಂದ್ರಗ್ರಹಣ; ಚಂದ್ರ ಪುರಭೂ ಬಿಂದುವಿನಲ್ಲಿ ೧೪:೦೦ಕ್ಕೆ*
*(ಛಾಯಾಗ್ರಹಣಕ್ಕೆ ಸದವಕಾಶ)

## ಸೂಪರ್‌ಮೂನ್ ಮತ್ತು ಹೊಸತು

೧೯೯೯ರಲ್ಲಿ ಹೊಸತು ಆರಂಭವಾದಾಗ ಈ ನಭಾವಲೋಕನ ಅಂಕಣವೂ ಆರಂಭವಾಯಿತು. ಆಗ ನಕ್ಷತ್ರ ಪರಿಚಯಕ್ಕೇ ಹೆಚ್ಚಿನ ಒತ್ತು ಕೊಟ್ಟು ಬರೆಯುತ್ತಿದ್ದೆ. ಆ ಡಿಸೆಂಬರ್‌ನಲ್ಲಿ ನಡೆದ ಸೂಪರ್‌ಮೂನ್ ಬಹಳ ಸುದ್ದಿ ಮಾಡಿತು. ಅದೇನೂ ಅಂತಹ ಮಹತ್ವದ ವಿಷಯವಾಗಿರಲಿಲ್ಲ (ಈಗಲೂ ಅಷ್ಟೆ). ಆದ್ದರಿಂದ ಆ ಬಗ್ಗೆ ಪ್ರಸ್ತಾಪವೇ ಬಿಟ್ಟು ಹೋಯಿತು. ಇದರಿಂದ ಅನೇಕ ಆಕ್ಷೇಪಗಳು ಕೇಳಿಬಂದವು. ಅದು ಮಹತ್ವದ ಸುದ್ದಿಯಲ್ಲದಿದ್ದರೂ ನಮ್ಮ ನೆರೆಮನೆಯ ಸುದ್ದಿ. ಆ ಮುಂದೆ ನಭಾವಲೋಕನದ ಸ್ವರೂಪವನ್ನು ಬದಲಿಸಿ ಚಂದ್ರ, ಗ್ರಹಗಳ ಘಟನೆಗಳಿಗೆ ಹೆಚ್ಚು ಒತ್ತು ಕೊಡಲು ಆರಂಭಿಸಿದೆ. ದಿನಚರಿ ಎಂಬ ಹೆಸರಿನಲ್ಲಿ ಇಂತಹ ಘಟನೆಗಳ ಪಟ್ಟಿಯನ್ನೂ ಆರಂಭಿಸಿದೆ. ೨೦೦೦ದ ಜನವರಿಯಲ್ಲಿ ೨೧ರಂದು ಪುರಭೂ ಬಿಂದುವಿಗೇ ಹುಣ್ಣಿಮೆ ಆಯಿತು; ಗ್ರಹಣವೂ ಆಯಿತು. ಆದರೆ ಅದು ನಮಗೆ ಅನುಕೂಲಕರವಾಗಿರಲಿಲ್ಲ. ಅಮೆರಿಕದವರು ಕಂಡರು. ಇದಾದ ೧೮ವರ್ಷ ೧೦ದಿನ ೮ಗಂಟೆಗೆ ಸರಿಯಾಗಿ ಪುನಃ ಪುರಭೂ ಬಿಂದು, ಚಂದ್ರ ಎರಡೂ ಅದೇ ಸ್ಥಾನಕ್ಕೆ ಮರಳಿ, ಹುಣ್ಣಿಮೆಯೂ ಆಗಿ ಗ್ರಹಣವೂ ಆಗುತ್ತಿದೆ. ಈ ಅವಧಿಯನ್ನು ವೀಕ್ಷಣೆಗಳಿಂದ ಕಂಡುಹಿಡಿದುಕೊಂಡಿದ್ದ ನಮ್ಮ ಹಿರಿಯರು ಅದನ್ನು ರಾಹುವಿನ (ಮತ್ತು ಕೇತುವಿನ) ಪರಿಭ್ರಮಣಾವಧಿ ಎಂದು ಕರೆದರು. ರಾಹು ಎಂಬುದು ಚಂದ್ರ ಕಕ್ಷೆಯು ಭೂಕಕ್ಷೆಯನ್ನು ಸಂಧಿಸುವ ಒಂದು ಬಿಂದು. ಈ ಬಿಂದು ೧೮ ವರ್ಷಗಳ ಈ ಅವಧಿಯ ನಂತರ ಅದೇ ಸ್ಥಾನಕ್ಕೆ ಮರಳುವುದನ್ನು ಕಂಡುಹಿಡಿದು ಅದನ್ನೊಂದು (ಅಸ್ತಿತ್ವವಿಲ್ಲದ) ಗ್ರಹ ಎಂದು ಪರಿಗಣಿಸಿ ಲೆಕ್ಕ ಮಾಡುತ್ತಿದ್ದ ಅವರ ಪ್ರತಿಭೆಯನ್ನು ಮೆಚ್ಚಲೇಬೇಕು. ಹೀಗೆ ಪುನರಾವರ್ತನೆಯಾಗುವ ಗ್ರಹಣ ಚಕ್ರಕ್ಕೆ ಸ್ಯಾರೋಸ್ ಎಂಬ ಹೆಸರಿದೆ. ಇದು ೧೩೪ನೆಯ ಚಕ್ರ. ಚಂದ್ರ ದಕ್ಷಿಣದಿಂದ ಉತ್ತರಕ್ಕೆ ಹೋಗುವ ಕಾರಣ ಈ ಬಿಂದುವಿಗೆ ರಾಹು ಎಂದು ಹೆಸರು. ಇದಕ್ಕೆ ೧೮೦ ಡಿಗ್ರಿ ಅಂತರದಲ್ಲಿರುವ ಕೇತುವನ್ನು ಚಂದ್ರ ತಲುಪಿದಾಗ ಫೆಬ್ರವರಿಯಲ್ಲಿ ಸೂರ್ಯಗ್ರಹಣ ಉಂಟಾಗಲಿದೆ.

ಅಂದರೆ ಈ ಸಂಚಿಕೆಗೆ ಹೊಸತು ಒಂದು “ರಾಹು” ವರ್ಷವನ್ನು ಪೂರೈಸಿತು ಎನ್ನಬಹುದಲ್ಲವೇ?

**ಡಾ॥ ಬಿ. ಎಸ್. ಶೈಲಜಾ**
ಜವಾಹರಲಾಲ್ ನೆಹರು ತಾರಾಲಯ, ಹೈಗ್ರೌಂಡ್ಸ್, ಬೆಂಗಳೂರು – ೫೬೦ ೦೦೧

**ಸುದ್ದಿ ಚಿತ್ರ**




ನವಕರ್ನಾಟಕ ಪ್ರಕಾಶನದ ಸಹಯೋಗದೊಂದಿಗೆ ಇಜ್ಞಾನ ಟ್ರಸ್ಟ್ ಪ್ರಸ್ತುತಪಡಿಸಿದ ಕಾರ್ಯಕ್ರಮವೊಂದು ನಗರದ ಕನ್ನಡ ಸಾಹಿತ್ಯ ಪರಿಷತ್ತಿನಲ್ಲಿ ದಿನಾಂಕ ೧೯–೧೧–೨೦೧೭ರಂದು ನೆರವೇರಿತು. ‘ಕನ್ನಡ : ನಿನ್ನೆ, ಇಂದು ಮತ್ತು ನಾಳೆ’ ಕುರಿತು ಪರಿಣತರಿಂದ ವಿಚಾರ ಮಂಡನೆ, ‘ನವಕರ್ನಾಟಕ ಕನ್ನಡ ಕಲಿಕೆ ಮಾಲಿಕೆ’ ಪುಸ್ತಕಗಳ ಅನಾವರಣ, ‘ಕಲಿಕೆಗೆ ಕೊಡುಗೆ’ ಯೋಜನೆಯಡಿ ಶಾಲೆಗಳಿಗೆ ಪುಸ್ತಕ ವಿತರಣೆ ಹಾಗೂ ಇಜ್ಞಾನ ಟ್ರಸ್ಟ್ ಜಾಲತಾಣ ಲೋಕಾರ್ಪಣೆ ಕಾರ್ಯಕ್ರಮ ಇದಾಗಿತ್ತು.

ವೇದಿಕೆಯಲ್ಲಿ ‘ನವಕರ್ನಾಟಕ ಕನ್ನಡ ಕಲಿಕೆ’ ಮಾಲಿಕೆಯ ಲೇಖಕರಾದ ಶ್ರೀ ಟಿ. ಎಸ್. ಗೋಪಾಲ್, ಶ್ರೀ ವಸುಧೇಂದ್ರ, ಶ್ರೀ ಟಿ. ವಿ. ವೆಂಕಟಾಚಲಶಾಸ್ತ್ರೀ, ಶ್ರೀ ಎಸ್. ದಿವಾಕರ್ ಹಾಗೂ ನವಕರ್ನಾಟಕ ಪ್ರಕಾಶನದ ಕಾರ್ಯನಿರ್ವಾಹಕ ನಿರ್ದೇಶಕರಾದ ಶ್ರೀ ಎ. ರಮೇಶ ಉಡುಪ ಅವರು ಉಪಸ್ಥಿತರಿದ್ದರು.

ಎಂ. ಅಬ್ದುಲ್ ರೆಹಮಾನ್ ಪಾಷ



# ಮಾತೃಭಾಷೆ ಎನ್ನಬೇಡಿ, ಕನ್ನಡವೆನ್ನಿ

ಇದು ಸುಮಾರು ೧೯೮೫–೮೬ರಲ್ಲಿ ನಡೆದ ಘಟನೆ. ನಾನಾಗ ಮಂಗಳೂರು ಆಕಾಶವಾಣಿಯಲ್ಲಿ ಕಾರ್ಯಕ್ರಮ ನಿರ್ವಾಹಕನಾಗಿದ್ದೆ. ನನ್ನ ಮಗಳು ಬೀನಾಗೆ ಆಗ ಮೊದಲ ತರಗತಿ ಸೇರುವ ವಯಸ್ಸು. ಮಂಗಳೂರು ಅಂದಮೇಲೆ ಗೊತ್ತಲ್ಲ ಸರಕಾರಿ ಶಾಲೆಗಳೂ ಉತ್ತಮವಾಗಿವೆ, ಈಗಲೂ ಕೂಡ. ಆದರೆ ಹೋಗಿಬರುವ ದೃಷ್ಟಿಯಿಂದ ನಮಗೆ ಸೇಂಟ್ ಜೋಸೆಫ಼್ ಶಾಲೆ ಅನುಕೂಲಕರವಾಗಿತ್ತು. ಮೇ ತಿಂಗಳ ಹೊತ್ತಿಗೆ ಮಗಳನ್ನೂ ಕರೆದುಕೊಂಡು ನಾನು ಆ ಶಾಲೆಗೆ ಸೀಟು ಕೇಳಲು ಹೋದೆ. ಆಕಾಶವಾಣಿಯಲ್ಲಿದ್ದು ಬಾಲವೃಂದ ಕಾರ್ಯಕ್ರಮ ನೋಡಿಕೊಳ್ಳುತ್ತಿದ್ದೆನಾದ್ದರಿಂದ ನನಗೆ ಮಂಗಳೂರಿನ ಎಲ್ಲಾ ಶಾಲೆಗಳ ಮುಖ್ಯಸ್ಥರು, ಶಿಕ್ಷಕರು ಚೆನ್ನಾಗಿ ಗೊತ್ತಾಗಿದ್ದರು. ಸೀಟು ಸಿಕ್ಕೇ ಸಿಗುತ್ತೆ ಅಂತ ವಿಶ್ವಾಸವಿತ್ತು.

ಭೇಟಿಯಾಗಿ ಮಾತಿಗೆ ಬಂದಾಗ, ಅಲ್ಲಿನ ಪ್ರಿನ್ಸಿಪಾಲರು, ಒಬ್ಬ ಸಿಸ್ಟರು, 'ಇದೇನು ಪಾಷಾರವರೇ, ಇಷ್ಟು ತಡವಾಗಿ ಬಂದಿದ್ದೀರಿ. ಸೀಟೆಲ್ಲಾ ಭರ್ತಿಯಾಗಿವೆ. ಏನು ಮಾಡೋದು?' ಅಂತ ಪೇಚಾಡಿಕೊಂಡರು. ಆದರೂ ಅವರಿಗೆ ನನ್ನ ಮಗಳನ್ನು ತಮ್ಮ ಶಾಲೆಗೆ ಸೇರಿಸಿಕೊಳ್ಳುವುದು ಅವರಿಗೂ ಅನುಕೂಲಕರ ಅಂತ ಅನ್ನಿಸಿತ್ತು. 'ಏನಾದರೂ ಮಾಡೋಣ ಪಾಷಾರವರೇ, ನಿಮ್ಮ ಮಗಳಿಗೆ ಸೀಟು ಕೊಡದೇ ಇರೋಕ್ಕಾಗುತ್ತೆಯೇ?' ಎಂದು ಶಾಲಾ ರೆಕಾರ್ಡುಗಳನ್ನು ತಿರುವಿತಿರುವಿ ಹಾಕಿದರು, ಆದರೂ ಅವರಿಗೆ ನನಗೆ ಸಹಾಯ ಮಾಡಲು ಸಾಧ್ಯವಾದಂತೆ ತೋರಲಿಲ್ಲ.

ಅವರ ಉಭಯಸಂಕಟ ನೋಡುತ್ತಿರುವಾಗ ನನಗೆ ತಟ್ಟನೇ ಹೊಳೆಯಿತು, ನಾನು ಅವರ ಶಾಲೆಯಲ್ಲಿ ಮಗಳಿಗಾಗಿ ಸೀಟು ಕೇಳುತ್ತಿರುವುದು ಇಂಗ್ಲಿಷ್ ಮಾಧ್ಯಮದಲ್ಲಿ ಎಂದು ಅವರು ಭಾವಿಸಿದ್ದರು, ಅದು ಸಹಜವೂ ಆಗಿತ್ತೆನ್ನಿ. ಆದರೆ ನನಗೆ ಬೇಕಾಗಿರುವುದು ಅವರಿಗೆ ಕೂಡಲೇ ಅರ್ಥವಾದಂತೆ ಅನ್ನಿಸಲಿಲ್ಲ. ಅವರು ಇಂಗ್ಲಿಷ್ ಮಾಧ್ಯಮದ ಕಡತದಲ್ಲಿ ಹೇಗಾದರೂ ಒಂದು ಮೂಲೆಯಲ್ಲಿ ನನ್ನ ಮಗಳಿಗೆ ಜಾಗ ಹುಡುಕುವುದರಲ್ಲಿ ಮಗ್ನರಾಗಿದ್ದರು, ಪಾಪ. ಒಂದೆರಡು ಬಾರಿ ಒತ್ತಿ ಹೇಳಿದಾಗ, ಅವರಿಗೆ ಮೂರ್ಛೆ ಹೋಗುವಷ್ಟು ಆಶ್ಚರ್ಯ! ನನ್ನನ್ನು ತದೇಕ ದೃಷ್ಟಿಯಿಂದ ನೋಡಿ, 'ಏನು, ನಿಮ್ಮ ಮಗಳನ್ನು ಕನ್ನಡ ಮಾಧ್ಯಮಕ್ಕೆ ಸೇರಿಸುತ್ತೀರಾ? ... ಯಾಕೆ?' ಅಂದರು. 'ನನ್ನ ಮಗಳಿಗೆ ಒಳ್ಳೆಯ ಶಿಕ್ಷಣ ಬೇಕು, ನಿಮ್ಮ ಶಾಲೆ ಚೆನ್ನಾಗಿದೆ, ಅದಕ್ಕೆ ನಿಮ್ಮ ಶಾಲೆಯಲ್ಲೇ...', 'ಅದ್ಸರಿ, ಆದರೆ ಇಂಗ್ಲಿಷ್ ಮಾಧ್ಯಮದಲ್ಲಿ ಯಾಕೆ ಬೇಡ, ಕನ್ನಡ ಮಾಧ್ಯಮದಲ್ಲಿ ಯಾಕೆ?' ನಾನು ಮತ್ತೆ 'ನನ್ನ ಮಗಳಿಗೆ ಉತ್ತಮ ಶಿಕ್ಷಣ ಬೇಕು, ಆದ್ದರಿಂದ ಕನ್ನಡ ಮಾಧ್ಯಮಕ್ಕೆ ಸೇರಿಸುತ್ತಿದ್ದೇನೆ' ಎಂದೆ. ದೊಡ್ಡ ಸಮಸ್ಯೆ ಬಗೆಹರಿದಂತಾಗಿ ಅವರು 'ಕನ್ನಡ ಮಾಧ್ಯಮಕ್ಕಾಗಿದ್ದರೆ ನೀವು ಜೂನ್ ತಿಂಗಳಲ್ಲಿ ಬಂದಿದ್ದರೂ ಸೀಟು ಸಿಗುತ್ತಿತ್ತು' ಎಂದರು. ಕನ್ನಡ ಮಾಧ್ಯಮಕ್ಕಾದ ದೂಷಣೆಯನ್ನು ನಾನು ಜಾಸ್ತಿ ಮನಸ್ಸಿಗೆ ಹಚ್ಚಿಕೊಳ್ಳಲಿಲ್ಲ.

ಸರಕಾರ ಮತ್ತು ಕನ್ನಡದ ಕಾಳಜಿ ಇರುವ ಸಂಸ್ಥೆಗಳು ಮತ್ತು ವ್ಯಕ್ತಿಗಳು ಹೇಳುತ್ತಾರೆ ಪ್ರಾಥಮಿಕ ತರಗತಿಗಳಲ್ಲಿ 'ಮಾತೃಭಾಷೆ ಮಾಧ್ಯಮ' ಇರಬೇಕು ಎಂದು. ಇದು ಗೊಂದಲಕ್ಕೆ ಕಾರಣವಾಗುತ್ತದೆ. 'ಮಾತೃಭಾಷೆ' ಎಂದಾಕ್ಷಣ ಕನ್ನಡದ ಜೊತೆಗೆ ಇತರ ಉರ್ದು, ತೆಲುಗು, ತಮಿಳು ಇತ್ಯಾದಿ ಮಾತೃಭಾಷೆಗಳು ಆಯಾ ಸಮುದಾಯಗಳಿಗೆ ನೆನಪಿಗೆ ಬರುತ್ತವೆ. ಅವರು ತಮ್ಮ ತಮ್ಮ ಮಾತೃಭಾಷೆಗಳಲ್ಲಿ ಶಿಕ್ಷಣ ಬೇಕು ಎಂದರೆ ಸರಕಾರ ಒಪ್ಪುತ್ತದೆಯೇ? ಆದ್ದರಿಂದ ನಾವು ಹೇಳಬೇಕಾಗಿರುವುದು 'ಮಾತೃಭಾಷೆ'ಯ ಮಾಧ್ಯಮದಲ್ಲಿ ಶಿಕ್ಷಣ ಎಂದಲ್ಲ, ಪ್ರಾದೇಶಿಕ ಭಾಷೆ (ಎಂದರೆ ಕನ್ನಡ) ಮಾಧ್ಯಮದಲ್ಲಿ ಶಿಕ್ಷಣ ಎಂದು ಬಾಯಿಬಿಟ್ಟು ಸ್ಪಷ್ಟವಾಗಿ ಹೇಳಬೇಕು.

ಇಲ್ಲಿರುವ ಲಾಜಿಕ್ ಏನು? ಅವರದೇ ಶಾಲೆಯಲ್ಲಿ ಇಂಗ್ಲಿಷ್ ಮಾಧ್ಯಮಕ್ಕೆ ನನ್ನ ಮಗಳನ್ನು ಸೇರಿಸುವಷ್ಟು ವಶೀಲಿ ಮತ್ತು ಹಣಕಾಸು ಅರ್ಹತೆ ನನ್ನಲ್ಲಿದ್ದರೂ ನಾನು ಪ್ರಜ್ಞಾಪೂರ್ವಕವಾಗಿ ನನ್ನ ಮಗಳಿಗಾಗಿ ಕನ್ನಡ ಮಾಧ್ಯಮ ಆರಿಸಿಕೊಂಡಿದ್ದು ಏಕೆ? ಓಹ್... ನನಗೆ ಕನ್ನಡದ ಮೇಲೆ ಅಭಿಮಾನ ಎಂದು ನೀವು ಅಂದುಕೊಂಡಿದ್ದರೆ ಅದು ತಪ್ಪು. ಮಗಳು ಎನ್ನುವ ಕಾರಣಕ್ಕಾಗಿ ಕನ್ನಡ, ಮಗನಿಗಾದರೆ ಇಂಗ್ಲಿಷು ಅಂದುಕೊಂಡಿದ್ದರೆ ನಿಮ್ಮ ಗ್ರಹಿಕೆ ಇನ್ನೂ ತಪ್ಪು. ನನಗೆ ಮೂರು ಜನ ಮಕ್ಕಳು. ಇಬ್ಬರು ಹೆಣ್ಣುಮಕ್ಕಳು, ಒಬ್ಬ ಮಗ. ಮೂವರೂ ಪ್ರಾಥಮಿಕ ಶಾಲೆಯನ್ನು ಓದಿದ್ದು (ಮಂಗಳೂರು ಮತ್ತು ಬೆಂಗಳೂರಲ್ಲಿ) ಕನ್ನಡ ಮಾಧ್ಯಮ ಶಾಲೆಯಲ್ಲಿಯೇ. ನಮ್ಮ ಕುಟುಂಬದಲ್ಲಿ ಹುಡುಗ–ಹುಡುಗಿಯರ ನಡುವೆ ಯಾವುದೇ ತಾರತಮ್ಯ ನಡೆಯುವುದಿಲ್ಲ.

ನಮ್ಮೂರಿನಲ್ಲಿ ನಮ್ಮಪ್ಪ ಮುಹಿಯುದ್ದೀನ್ ಸಾಬ್, ಶಿರಸ್ತೇದಾರರಾಗಿದ್ದವರು, ನಮ್ಮನ್ನೆಲ್ಲಾ ಓದಿಸಿದ್ದು ಕನ್ನಡ ಮಾಧ್ಯಮ ಶಾಲೆಯಲ್ಲಿಯೇ. ಆದರೆ ಒಂದು ಅರ್ಥದಲ್ಲಿ ಅದು ಅವರಿಗೆ ‘ಅನಿವಾರ್ಯ’ವಾಗಿತ್ತು. ಏಕೆಂದರೆ ನಮ್ಮೂರಲ್ಲಿ ಉರ್ದು ಅಥವಾ ಇಂಗ್ಲಿಷ್ ಮಾಧ್ಯಮ ಶಾಲೆ ಇರಲಿಲ್ಲ. ಆದರೆ ನಾನು ನನ್ನ ಮಕ್ಕಳನ್ನು ಕನ್ನಡ ಮಾಧ್ಯಮ ಶಾಲೆಗೆ ಸೇರಿಸಿದ್ದು ‘ಅನಿವಾರ್ಯ’ವಾಗಿ ಅಲ್ಲ, ಪ್ರಜ್ಞಾಪೂರ್ವಕ ‘ಆಯ್ಕೆ’ಯಿಂದ. ಹಾಗಾದರೆ ಇದರ ಹಿಂದಿನ ರಹಸ್ಯ ಏನು? ನಾನು ಒಬ್ಬ ಭಾಷಾವಿಜ್ಞಾನದ ವಿದ್ಯಾರ್ಥಿ. ಒಬ್ಬ ಪರಿಣತ ಭಾಷಾಬೋಧಕ. ಮನೋಭಾಷಾ ವಿಜ್ಞಾನ, ಮಕ್ಕಳಲ್ಲಿ ಭಾಷೆ, ಅರಿವು ಬೆಳೆಯುವ ವಿಧಾನ ಇತ್ಯಾದಿಗಳ ಕುರಿತು ತಕ್ಕಮಟ್ಟಿಗೆ ತಿಳಿದಿದ್ದೇನೆ. ಆ ಅರಿವಿನಿಂದಲೇ ನನ್ನ ಈ ಭಾಷಾಮಾಧ್ಯಮದ ನಿರ್ಧಾರ ಮೂಡಿದ್ದು.

**ಮಾತೃಭಾಷೆಯ ಮಹತ್ವ**

ಒಬ್ಬ ವ್ಯಕ್ತಿಯ ಇಡೀ ವ್ಯಕ್ತಿತ್ವ ವಿಕಸನದ ಬುನಾದಿಯೇ ಮಾತೃಭಾಷೆ. ಭಾಷೆಯನ್ನು ಕಲಿಯುವುದು ಎಂದರೆ ಮೂಲಭೂತವಾಗಿ ಆಲಿಸುವುದು ಮತ್ತು ಮಾತಾಡುವುದು ಎಂದಾದರೆ ಮಗು ತನಗೆ ಒದಗಿಬಂದಿರುವ ಮಾತೃಭಾಷೆಯನ್ನು ಒಂದು ರೀತಿ ಹುಟ್ಟಿದಂದಿನಿಂದಲೇ ‘ಗಳಿಸಿಕೊಳ್ಳಲು’ ತೊಡಗುತ್ತದೆ ಎನ್ನಬಹುದು. ಆರಂಭದಲ್ಲಿ ಮಗು ತನ್ನ ಅಗತ್ಯಗಳನ್ನು ಪೂರೈಸಿಕೊಳ್ಳಲು ಮೊದಮೊದಲು ಕೇವಲ ಕೆಲವು ಬಗೆಯ ಅಳು, ಚೀರುವಿಕೆಗಳನ್ನು ಬಳಸುತ್ತದೆ. ಅದು ಹೆಚ್ಚು ಪ್ರಯೋಜನಕ್ಕೆ ಬರುವುದಿಲ್ಲ ಎಂದು ಗೊತ್ತಾಗಿ, ಸುತ್ತಮುತ್ತಲಿನವರು ಬಳಸುವ ಭಾಷೆಯಲ್ಲಿನ ಒಂದೊಂದೇ ಪದಗಳನ್ನು ಕಲಿಯತೊಡಗುತ್ತದೆ. ಆದರೂ ಆಗ ಅದು ಕೇವಲ ಮೂರ್ತವಾದ, ಎದುರಿಗೆ ಇರುವ, ಆ ಹೊತ್ತಿನ ವಸ್ತು ಮತ್ತು ಸಂಗತಿಗಳ ಬಗ್ಗೆ ಮಾತ್ರ ಸಂವಹನ ಮಾಡಬಲ್ಲದು. ಭಾಷೆಯನ್ನು ಅರ್ಥ ಮಾಡಿಕೊಳ್ಳುವುದು, ಮಾತಾಡುವುದು ಬೆಳೆಯುತ್ತಿರುವ ಹಾಗೆ ಅದರ ಜಗತ್ತು ವಿಶಾಲವಾಗುತ್ತಾ ಹೋಗುತ್ತದೆ, ಸಂವಹನ ಹೆಚ್ಚು ಸಮರ್ಥವಾಗುತ್ತಾ ಹೋಗುತ್ತದೆ. ವರ್ತಮಾನದ ಜೊತೆ ಮಗು ಭೂತಕಾಲದ ಬಗ್ಗೆ, ಭವಿಷ್ಯತ್ಕಾಲದ ಬಗ್ಗೆ ಮಾತಾಡುವ ಕೌಶಲವನ್ನು ಪಡೆದುಕೊಳ್ಳುತ್ತದೆ. ಮಗುವಿನ ಮಾಹಿತಿಯಷ್ಟೇ ಅಲ್ಲ, ತರ್ಕ, ವಿವೇಚನೆ, ಭಾವನೆಗಳು, ಅಂತರಸಂಬಂಧಗಳು ಇತ್ಯಾದಿ ಸಬಲಗೊಳ್ಳಲು ಪ್ರಮುಖವಾಗಿ ನೆರವಾಗುವುದು ಭಾಷೆ, ಮಾತೃಭಾಷೆ.

ಮನೋಭಾಷಾ ವಿಜ್ಞಾನದ ಪ್ರಕಾರ ಮಗು ತನ್ನ ಮೊದಲ ಐದು ವರ್ಷದ ಒಳಗೆ ತನ್ನ ಕುಟುಂಬದ ದೊಡ್ಡವರ ಭಾಷಾ ಸಾಮರ್ಥ್ಯದ ಶೇಕಡ ೯೦ರಷ್ಟನ್ನು ಕರಗತ ಮಾಡಿಕೊಂಡಿರುತ್ತದೆ ಎಂದರೆ ಆಶ್ಚರ್ಯವೆನಿಸಬಹುದು. ಭಾಷಾ ವಿಜ್ಞಾನದಲ್ಲಿ ಹೇಳುವ ಹಾಗೆ ಮಗು ಐದು ವರ್ಷದ ಹೊತ್ತಿಗೆ ‘almost linguistic adult’ ಆಗಿರುತ್ತದೆ. ಮುಂದೆ ಔಪಚಾರಿಕ ಶಾಲಾ ಶಿಕ್ಷಣವನ್ನು ಪಡೆಯುವಾಗಲೂ ಭಾಷೆ ಅರಿವಿನ, ಸಂವಹನದ, ವಿವೇಚನೆಯ ಅತ್ಯಂತ ಸಹಾಯಕಾರಿ ಸಾಧನವಾಗಿರುತ್ತದೆ. ವಸ್ತುಸ್ಥಿತಿ ಹೀಗಿರುವಾಗ ಮಗು ಶಾಲೆ ಸೇರಿ ಔಪಚಾರಿಕ ಶಿಕ್ಷಣವನ್ನು ಆರಂಭಿಸಬೇಕು ಎನ್ನುವಾಗ ಅಲ್ಲಿನ ಕಲಿಕೆಯ ಭಾಷೆಯೂ ಮಾತೃಭಾಷೆಯಾಗಿರಬೇಕು ಎನ್ನುವುದು

ಸಹಜವಾದದ್ದು. ಬಹುಶಃ ಒಂದೈವತ್ತು ವರ್ಷಗಳ ಹಿಂದೆ, ಬಹುತೇಕ ಊರುಗಳಲ್ಲಿ ಇದು ವಿಶೇಷವಾದ ಸಂಗತಿಯಾಗಿರಲಿಲ್ಲ. ಆದರೆ ಕಾಲ ಕಳೆದಂತೆ, ನಗರೀಕರಣ, ಜಾಗತೀಕರಣ, ವಲಸೆ ಹೆಚ್ಚಾದ ಹಾಗೆ, ಜನ ತಮ್ಮ ಮೂಲದಿಂದ ಬೇರ್ಪಟ್ಟು ಬೇರೆ ಕಡೆ ನೆಲೆಸಲು ತೊಡಗಿದ ನಂತರ ಶಿಕ್ಷಣ ಎಂಬುದು ನೇರವಾಗಿ ವೃತ್ತಿಗಾಗಿ ಸಜ್ಜುಗೊಳಿಸುವ ತರಬೇತಿ ಎಂಬ ಪರಿಕಲ್ಪನೆ ಬೆಳೆಯತೊಡಗಿದೆ; ಇದರಿಂದಾಗಿ ಪ್ರಾಥಮಿಕ ಶಾಲೆಯಲ್ಲಿ ಯಾವ ಮಾಧ್ಯಮದಲ್ಲಿ ಕಲಿಯಬೇಕು ಎಂಬುದು ಸಹಜ ಆಯ್ಕೆಯಾಗಿರದೇ, ಬಹು ಆಳವಾದ ಜಿಜ್ಞಾಸೆಯ ವಿಷಯವಾಗಿದೆ. ಇದರಲ್ಲಿ ಕೇವಲ ಮನೋಭಾಷಾ ವಿಜ್ಞಾನ, ಶಿಕ್ಷಣ ವಿಜ್ಞಾನಕ್ಕಿಂತ ಬಂಡವಾಳಶಾಹಿ ಪಿತೂರಿ, ರಾಜಕಾರಣ, ಹುಸಿ ಪ್ರತಿಷ್ಠೆ ಹೆಚ್ಚು ಪ್ರಭಾವವನ್ನು ಬೀರತೊಡಗಿವೆ, ಇದರಿಂದಾಗಿ ಜನಸಾಮಾನ್ಯರು ಕಂಗಾಲಾಗಿದ್ದಾರೆ.

**ಪ್ರಾಥಮಿಕ ಶಿಕ್ಷಣದ ಮಾಧ್ಯಮ**

ಸದ್ಯಕ್ಕೆ ಪ್ರಾಥಮಿಕ-ಪೂರ್ವ ಶಿಕ್ಷಣ ವಿಚಾರವನ್ನು ಬದಿಗಿಟ್ಟು ಪ್ರಾಥಮಿಕ ಶಿಕ್ಷಣದ ವಿಚಾರ ಮಾತಾಡೋಣ. ಮಗುವಿಗೆ ಪರಿಸರ, ಸಮಾಜ, ವಿಜ್ಞಾನ, ಗಣಿತ ಇತ್ಯಾದಿ 'ವಿಷಯ'ಗಳನ್ನು ಕಲಿಸಬೇಕು. ಇವಷ್ಟೆ ಏಕೆ ಕಲೆ, ಕ್ರಾಫ್ಟ್, ಸ್ಪೋರ್ಟ್ಸ್ ಇತ್ಯಾದಿ ಯಾವುದನ್ನೇ ಆಗಲಿ ಅದನ್ನು ಕಲಿಯಲು/ಕಲಿಸಲು ಭಾಷೆ ಅತ್ಯಂತ ಪ್ರಮುಖ ಸಾಧನವಾಗುತ್ತದೆ. ಎಂದರೆ, ಈಗಾಗಲೇ ಚೆನ್ನಾಗಿ ಬರುವ ಒಂದು ಭಾಷೆಯನ್ನು ಮಾಧ್ಯಮವನ್ನಾಗಿ ಆರಿಸಿಕೊಂಡುಬಿಟ್ಟರೆ ಅಷ್ಟರಮಟ್ಟಿಗೆ ಶಿಕ್ಷಣ ಸುಲಭವಾಗುತ್ತದೆ. ಹಾಗಾದರೆ ಯಾವ ಭಾಷೆ ಆರಿಸಿಕೊಳ್ಳೋಣ? ಜರ್ಮನ್, ಫ್ರೆಂಚ್, ತಮಿಳು, ಬಂಗಾಲಿ ಅಥವಾ ಇಂಗ್ಲಿಷ್... ಹೀಗೆ ಜಗತ್ತಿನ ಯಾವುದೇ ಭಾಷೆಯನ್ನು ಆಯ್ದುಕೊಳ್ಳಬಹುದಲ್ಲವೇ? ನಮಗೇನು ಹುಚ್ಚೇ? ಹೆಚ್ಚಿನ ಮಕ್ಕಳ ಮಾತೃಭಾಷೆ ಕನ್ನಡವಾಗಿರುವುದರಿಂದ ಸಹಜವಾಗಿ ಕನ್ನಡವನ್ನೇ ಶಿಕ್ಷಣ ಮಾಧ್ಯಮ ಭಾಷೆಯನ್ನಾಗಿ ಆಯ್ಕೆ ಮಾಡಿಕೊಳ್ಳುತ್ತೇವೆ. ಏಕೆ?

ಮಗು ಶಾಲೆಗೆ ಬರುವ ಹೊತ್ತಿಗೆ ಕನ್ನಡ ಆಲಿಸುವ ಮತ್ತು ಮಾತಾಡುವ ಕೌಶಲಗಳನ್ನು ಹೆಚ್ಚುಕಡಿಮೆ ದೊಡ್ಡವರಷ್ಟು ಚೆನ್ನಾಗಿ ಕರಗತ ಮಾಡಿಕೊಂಡುಬಿಟ್ಟಿರುತ್ತದೆ. ಶಿಕ್ಷಣ ಶುರು ಮಾಡುವ ಮುಂಚೆ ಮಗುವಿಗೆ ಕನ್ನಡದಲ್ಲಿ ಓದುವುದು ಮತ್ತು ಬರೆಯುವುದನ್ನು ಕಲಿಸಿಕೊಡಬೇಕು, ಅಷ್ಟೆ. ಇದರ ನಂತರವೂ ಭಾಷಾ ಸಂವಹನವು ಸಾಕಷ್ಟು ಸಬಲವಾಗಿರುವುದರಿಂದ ಮಾತು, ಓದು, ಬರಹ ಇತ್ಯಾದಿ ಕೌಶಲಗಳನ್ನು ಬಳಸಿ ಶಿಕ್ಷಣ ನೀಡುವುದು ಸುಲಭವಾಗುತ್ತದೆ, ಅರ್ಥಪೂರ್ಣವಾಗುತ್ತದೆ. ಹೌದು, ಫ್ರೆಂಚ್ ಭಾಷೆಯಲ್ಲಿ ಯಾಕೆ ಬೇಡ? ಅದು ಸುಂದರವಾದ ಭಾಷೆ. ಕೇಳಲು ಇಂಪಾಗಿರುತ್ತದೆ. ಮುಂದೆ, ಜಗತ್ತಿನ ಅನೇಕ ರಾಷ್ಟ್ರಗಳಲ್ಲಿ ಫ್ರೆಂಚ್ ಭಾಷೆಗೆ ಮನ್ನಣೆ ಇದೆ. ಆದರೂ ಒಂದು ಕೋಟಿ ಕೊಟ್ಟರೂ ಪ್ರಾಥಮಿಕ ಶಿಕ್ಷಣಕ್ಕಾಗಿ ಇದನ್ನು ನಾವು ಮಾಧ್ಯಮದ ಭಾಷೆಯನ್ನಾಗಿ ಆರಿಸಿಕೊಳ್ಳುವುದಿಲ್ಲ. ಏಕೆಂದರೆ, ಹೀಗೆ ಮಾಡುವುದಾದರೆ ಮಗು ಶಿಕ್ಷಣದ ಸರಳ ಅಂಶಗಳನ್ನೂ ಕಲಿಯುವ ಮುಂಚೆ ಫ್ರೆಂಚ್ ಭಾಷೆಯನ್ನು ಸಾಕಷ್ಟು ಚೆನ್ನಾಗಿ ಅರ್ಥ ಮಾಡಿಕೊಳ್ಳುವುದನ್ನು, ಮಾತಾಡುವುದನ್ನು ಕಲಿಯಬೇಕಾಗುತ್ತದೆ. ಶಾಲೆಗೆ ಹೋಗುವ ಮಟ್ಟಕ್ಕೆ ಕನ್ನಡವನ್ನು ಕಲಿಯಲು ಮಗು ಐದಾರು ವರ್ಷ, ಹಗಲು ರಾತ್ರಿ ಶ್ರಮ ಪಟ್ಟಿರುತ್ತದೆ. ಅಲ್ಲದೆ, ಕನ್ನಡ ಅದರ ಮನೆಯ ಒಳಗೆ ಹೊರಗೆ ಎಲ್ಲೆಲ್ಲೂ ಆವರಿಸಿಕೊಂಡಿತ್ತು. ಸಹಜ ವಾತಾವರಣ, ಕಲಿಕೆಯ ಅನಿವಾರ್ಯ, ಪ್ರಯೋಜನ, ಆನಂದ ಇತ್ತು. ಆದರೆ ಕನ್ನಡದ ಮಗುವಿಗೆ ಫ್ರೆಂಚ್ ಭಾಷೆ ತೀರಾ ಅನೈಸರ್ಗಿಕ. ಕುಟುಂಬದಲ್ಲಿ ನೆರೆಹೊರೆಯಲ್ಲಿ, ಸಮುದಾಯದಲ್ಲಿ ಯಾರೂ ಫ್ರೆಂಚ್ ಮಾತಾಡುವುದಿಲ್ಲ. ಹಾಗಾದರೆ ಮಗು ಈ ಅದೃಶ್ಯ ಭಾಷೆಯನ್ನು ಸಹಜವಾಗಿ 'ಗಳಿಸಿ'ಕೊಳ್ಳುವುದು ಹೋಗಲಿ, ಕಷ್ಟಪಟ್ಟು ಕಲಿಯುವುದಾದರೂ ಎಲ್ಲಿಂದ?

ಇದೇ ಮಾತು ಇಂಗ್ಲಿಷ್ ಭಾಷೆಗೂ ಅನ್ವಯಿಸುತ್ತದೆ. ನಮ್ಮ ದೇಶದಲ್ಲಿ ಇಂಗ್ಲಿಷ್ ಬಹಳ ಚಾಲ್ತಿಯಲ್ಲಿದೆ ಎಂಬ ಭ್ರಮೆ ಒಮ್ಮೊಮ್ಮೆ ಹುಟ್ಟಿದರೂ ರಾಜ್ಯದ ಶೇಕಡ ೯೯ರಷ್ಟು ಮಕ್ಕಳ ಮಟ್ಟಿಗೆ ಇಂಗ್ಲಿಷ್ ಫ್ರೆಂಚ್‌ನಷ್ಟೇ ಅಪರಿಚಿತ, ಪರಿಸರದಲ್ಲಿ ಸಹಜವಾಗಿ, ವಿಪುಲವಾಗಿ ಇರದ ಭಾಷೆ. ಇದೇ

> **ಅಭಿನಂದನೆಗಳು....**
>
> ಖ್ಯಾತ ವಿಮರ್ಶಕ, ಲೇಖಕರಾದ ಪ್ರೊ॥ ಟಿ. ಪಿ. ಅಶೋಕ (ಕಥನ ಭಾರತಿ) ಮತ್ತು ಲೇಖಕಿ, ಅನುವಾದಕಿ ಡಾ॥ ಎಚ್. ಎಸ್. ಶ್ರೀಮತಿ (ಬೆಂಗಾಲಿ ಸಾಹಿತಿ ಮಹಾಶ್ವೇತಾದೇವಿ ಅವರ ಕಥಾಸಾಹಿತ್ಯ ಭಾಗ-೧ ಮತ್ತು ಭಾಗ-೨ರ ಅನುವಾದ) ಅವರು ೨೦೧೭ನೇ ಸಾಲಿನ 'ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ'ಗೆ ಆಯ್ಕೆಯಾಗಿದ್ದಾರೆ. ಇವರಿಬ್ಬರಿಗೂ 'ನವಕರ್ನಾಟಕ' ಹಾಗೂ 'ಹೊಸತು' ಬಳಗದ ಅಭಿನಂದನೆಗಳು.

ಕಾರಣಕ್ಕಾಗಿ ಇಂಗ್ಲಿಷನ್ನು ನಮ್ಮ ಮಕ್ಕಳು ಕನ್ನಡ ಕಲಿಯುವಷ್ಟು ಸಹಜವಾಗಿ ಸಮರ್ಥವಾಗಿ ಕಲಿತಿರಲು ಸಾಧ್ಯವೇ ಇಲ್ಲ. ಹೆಚ್ಚು ಕಡಿಮೆ 'ವಯಸ್ಕ'ರಷ್ಟು ಸಮರ್ಥವಾಗಿ ಕಲಿತು ಬಂದಿರುವ ಕನ್ನಡವನ್ನು ಶಾಲೆಯಲ್ಲಿ ಕಲಿಕೆಯ ಮಾಧ್ಯಮವನ್ನಾಗಿ ಮುಂದುವರಿಸುವುದು ನ್ಯಾಯ. ಅದನ್ನು ಬಿಟ್ಟು ಆವರೆಗೆ ಒಂದು ಪದ ಕೇಳಿಸಿಕೊಂಡೂ ಇರದ ಇಂಗ್ಲಿಷ್ ಭಾಷೆಯನ್ನು ಮಾಧ್ಯಮವನ್ನಾಗಿ ಆರಿಸಿಕೊಂಡರೆ ಅದರಷ್ಟು ಮೂರ್ಖತನ ಇನ್ನೊಂದಿಲ್ಲ.

ಅಕಸ್ಮಾತ್ ಶಾಲೆಗೆ ಬಂದನಂತರ ಇಂಗ್ಲಿಷ್ ಭಾಷೆಯನ್ನು ಕಲಿಸುತ್ತೇವೆ ಎಂದಿಟ್ಟುಕೊಳ್ಳೋಣ. ಕನ್ನಡದ ಕುರಿತು ಈವರೆಗೆ ಹೇಳಿದ ಯಾವುದೇ ನೈಜವಾದ ಅನುಕೂಲಗಳು ಇಂಗ್ಲಿಷ್ ಭಾಷೆಗೆ ಇಲ್ಲದೇ ಇರುವುದರಿಂದ, ನಮ್ಮ ಶಿಕ್ಷಕರಿಗೂ ಅದು ಮಾತೃಭಾಷೆ / ಪ್ರಥಮ ಭಾಷೆ ಅಲ್ಲದೇ ಇರುವುದರಿಂದ, ಕಲಿಯಲೇ ಬೇಕು ಎಂದರೆ ಮಗುವಿಗೆ ಇಂಗ್ಲಿಷ್ ಕಲಿಯಲು ಐದು ವರ್ಷವಾದರೂ ಬೇಕು. ಇನ್ನು, ಅದಕ್ಕೆ ಬರುವ ಕನ್ನಡದಷ್ಟು ಸಮರ್ಥವಾಗಿ ಕರಗತ ಮಾಡಿಕೊಳ್ಳಬೇಕು ಎಂದರೆ ಒಂದ್ಹತ್ತು ವರ್ಷವಾದರೂ ಬೇಕು. ಒಂದನೇ ತರಗತಿಯಿಂದಲೇ ಇಂಗ್ಲಿಷ್ ಮಾಧ್ಯಮದಲ್ಲಿ ಓದಿಸಲು ನೋಡುವಾಗ ನಾವು ಏನು ಮಾಡುತ್ತಿದ್ದೇವೆ? ಒಂದು : ಅರ್ಥ ಮಾಡಿಕೊಳ್ಳುವುದು/ಮಾತಾಡುವುದು ಮಗು ಅಷ್ಟೊಂದು ಚೆನ್ನಾಗಿ ಕರಗತ ಮಾಡಿಕೊಂಡು ಬಂದಿರುವ ಕನ್ನಡ ಭಾಷೆಯನ್ನು ಕಸದ ತೊಟ್ಟಿಗೆ ಬಿಸಾಕಿ, ಏನೇನೂ ಬಾರದ ಇಂಗ್ಲಿಷನ್ನು ಆರಿಸಿಕೊಳ್ಳುತ್ತೇವೆ. ಭಾಷೆಯನ್ನು ಕಲಿಸುವುದು ಮತ್ತು ಅದನ್ನು ಬಳಸಿಯೇ ವಿಷಯಗಳನ್ನೂ ಒಟ್ಟೊಟ್ಟಿಗೆ ಕಲಿಸುವ ಹುಚ್ಚು ಸಾಹಸಕ್ಕೆ ಕೈ ಹಾಕುತ್ತೇವೆ. ಇದು ಮಕ್ಕಳ ಮೇಲೆ ನಡೆಸುವ ದೌರ್ಜನ್ಯವೇ ಸರಿ. ಮಾರಲ್ ಆಫ್ ದಿ ಸ್ಟೋರಿ ಏನಪ್ಪ ಅಂದರೆ : ಶಾಲೆಗೆ ಬರುವ ಹೊತ್ತಿಗೆ ಸಾಕಷ್ಟು ಚೆನ್ನಾಗಿ ಆಲಿಸುವುದು, ಮಾತಾಡುವುದನ್ನು ಕಲಿತೇ ಬಂದಿರುವ ಭಾಷೆಯಲ್ಲಿ, ಅಂದರೆ ಕನ್ನಡದಲ್ಲಿ ಆದಷ್ಟು ಬೇಗ, ಚೆನ್ನಾಗಿ ಓದು ಬರಹವನ್ನು ಕಲಿಸಿ ಆ ಭಾಷೆಯನ್ನೇ ವಿಷಯಗಳ ಕಲಿಕೆಯ ಮಾಧ್ಯಮವನ್ನಾಗಿ ಬಳಸಿಕೊಳ್ಳುವುದು ಜಾಣತನ.

**ನನ್ನ ಮಾತೃಭಾಷೆ ಉರ್ದು!**

ಆದರೆ, ನಾನು ಮತ್ತು ನನ್ನ ಮಕ್ಕಳು ಓದಿದ್ದು ಕನ್ನಡ ಮಾಧ್ಯಮದಲ್ಲಿ. ಎಂದರೆ ಮಾತೃಭಾಷೆಯ ಮಹತ್ವದ ಕುರಿತು ನಾನು ಮೇಲೆ ಮಾತಾಡಿದ ಮಾತಿಗೆ ನಾನೇ ವ್ಯತಿರಿಕ್ತವಾಗಿ ನಡೆದುಕೊಂಡೆನೇ? ನಾನು ಮತ್ತು ನನ್ನ ಮಕ್ಕಳು ನಮ್ಮ ಮಾತೃಭಾಷೆಯಾದ ಉರ್ದು ಮಾಧ್ಯಮದಲ್ಲಿ ಓದಬೇಕಾಗಿತ್ತಲ್ಲವೇ? ಇಲ್ಲ. ಇಲ್ಲೇ ಇರುವುದು ಸ್ವಾರಸ್ಯ. ನಾನೀಗ ಮಾತಾಡುತ್ತಿರುವುದು ಕರ್ನಾಟಕದ ಸರ್ವೇಸಾಮಾನ್ಯ ಭಾಷಾಸ್ಥಿತಿಯ ಕುರಿತು. ಉದಾಹರಣೆಗೆ ಕರ್ನಾಟಕದ ಮುಸಲ್ಮಾನರಲ್ಲಿ ಹೆಚ್ಚುಕಡಿಮೆ ಎಲ್ಲರ ಮಾತೃಭಾಷೆ ಉರ್ದು, ಒಂದು ರೀತಿ ಗ್ರಾಮ್ಯ ಎನ್ನಬಹುದಾದ ಮನೆಮಾತು. ಉರ್ದು ಎಂದ ಕೂಡಲೇ ಇದನ್ನು ಲಕ್ನೋ, ಕಾಶ್ಮೀರ, ದೆಹಲಿ ಇತ್ಯಾದಿ ಕಡೆ ಕವಿ, ಸಾಹಿತಿಗಳು, ಮೌಲ್ವಿಗಳು ಮಾತಾಡುವ ಉರ್ದು ಎಂದು ಭಾವಿಸಬೇಡಿ.

ಅದು ಅತೀ ಶಿಷ್ಟವಾದ ಭಾಷೆ. ಅದಕ್ಕೂ ನಮ್ಮ ಉರ್ದುವಿಗೂ ಅಜಗಜಾಂತರ. ನಾವು ಮನೆಗಳಲ್ಲಿ ಮಾತಾಡುವ ಉರ್ದುವನ್ನು ಭಾಷಾ ವಿಶ್ಲೇಷಣೆ ಮಾಡಿದರೆ ಅದು ಇಂಡೋ–ಆರ್ಯನ್ ಭಾಷೆಯಾದ ಉರ್ದುವಿಗಿಂತ ದ್ರಾವಿಡ ಭಾಷೆಯಾದ ಕನ್ನಡವನ್ನೇ (ಧ್ವನಿ, ವಾಕ್ಯರಚನೆ, ವ್ಯಾಕರಣ ಮತ್ತು ಸಂಸ್ಕೃತಿಯಲ್ಲಿಯೂ) ಹೆಚ್ಚು ಹೋಲುತ್ತದೆ. ಅದಕ್ಕೇ ನಾನು ನಮ್ಮ ಮನೆ ಮಾತನ್ನು ಉರ್ದು ಎನ್ನುವ ಬದಲಿಗೆ, (ಕನ್ನಡ–ಉರ್ದು) 'ಕುರ್ದು' ಎನ್ನುತ್ತೇನೆ. ಹೀಗೆನ್ನುವುದು ನಮ್ಮ ಮಾತೃಭಾಷೆಗೆ ತೋರುವ ಅಗೌರವವಲ್ಲ, ಅದರ ಸರಿಯಾದ ಲಕ್ಷಣವನ್ನು ಗುರುತಿಸುವ ಗೌರವ ಎಂದೇ ನಾನು ಭಾವಿಸುತ್ತೇನೆ.

ಇದೇ ರೀತಿ ಕರ್ನಾಟಕದಲ್ಲಿ ಕನ್ನಡವಲ್ಲದೆ ಕೋನೇಪಕ್ಷ ಐವತ್ತು ಪ್ರಮುಖ ಮಾತೃಭಾಷೆಗಳನ್ನಾಡುವ ಜನ ಇದ್ದಾರೆ. ತೆಲುಗು, ಮರಾಠಿ, ತಮಿಳು, ತುಳು, ಕೊಂಕಣಿ, ಕೊಡವ, ಬಂಜಾರ, ಮಲಯಾಳ, ಕೊರಗ, ಬಡಗ, ಸೋಲಿಗ, ಯರವ ಇತ್ಯಾದಿ. ಕೆಲವು ಅಪ್ಪಟ ಕರುನಾಡಿನ ಭಾಷೆಗಳು. ತೆಲುಗು, ತಮಿಳು, ಮರಾಠಿ, ಮಲಯಾಳ ಮುಂತಾದ ಭಾಷೆಗಳು  ನೆರೆಹೊರೆಯ ರಾಜ್ಯಗಳ ಪ್ರಮುಖ ಭಾಷೆಗಳಂತೆ ಅನ್ನಿಸಿದರೂ ಕರ್ನಾಟಕದಲ್ಲಿ ಮಾತಾಡುವ ಈ ಭಾಷೆಗೂ ಆಯಾ ರಾಜ್ಯಗಳಲ್ಲಿ ಆಡುವ ಭಾಷೆಗೂ (ಕುರ್ದುವಿನ ಹಾಗೆಯೇ) ಸಾಕಷ್ಟು ವ್ಯತ್ಯಾಸವಿದೆ. ಆದ್ದರಿಂದ ಇವುಗಳನ್ನು ಕೆಲುಗು, ಕಮಿಳು, ಕರಾಠಿ, ಕಲಯಾಳ ಎಂಬಂತೆ ಭಾವಿಸಬಹುದು.

ಈ ಎಲ್ಲಾ ಕನ್ನಡೇತರ ಮಾತೃಭಾಷೆಯ ಮಕ್ಕಳು ಮನೆಮಾತಾಗಿ ಈ ಭಾಷೆಗಳನ್ನು ಕಲಿಯುತ್ತವೆ. ಆದರೆ ಇಲ್ಲಿನ ಸಾಮಾಜಿಕ, ಆರ್ಥಿಕ, ಸಾಂಸ್ಕೃತಿಕ ಸನ್ನಿವೇಶ ಹೇಗಿದೆ ಎಂದರೆ ಈ ಮಕ್ಕಳು ಬಹಳ ಬೇಗನೆ ಕನ್ನಡವನ್ನೂ ಕಲಿಯತೊಡಗುತ್ತವೆ. ಮಾತೃಭಾಷೆಯ ಜೊತೆಗೆ ಇರಬಹುದು, ಅಥವಾ ಮನೆ ಬಿಟ್ಟು ಹೊರಗೆ ಬಂದ ಆರಂಭದಿಂದಲೇ ಕನ್ನಡವನ್ನು ಸಹಜವಾಗಿ ರೂಢಿಸಿಕೊಳ್ಳುತ್ತಾರೆ. ಇದು ಐದು ವರ್ಷ ವಯಸ್ಸಿಗೆ ಮುಂಚೆ ನಡೆಯುವುದೇ ಹೆಚ್ಚು. ಹೀಗಾಗಿ ತಮ್ಮ ತಮ್ಮ ಮನೆಮಾತಿನೊಂದಿಗೆ ಹೆಚ್ಚಿನ ಮಕ್ಕಳು ಕನ್ನಡ ಮಾತನ್ನೂ 'ಗಳಿಸಿ'ಕೊಳ್ಳುತ್ತವೆ. ಹೆಚ್ಚಿನ ಮಕ್ಕಳನ್ನು ಭಾಷಾ ವಿಜ್ಞಾನದ ಪ್ರಕಾರ 'perfect bi-lingual' (ಸಮರ್ಥ ದ್ವಿಭಾಷಿಗಳು) ಎನ್ನುತ್ತೇವೆ. ಹೀಗಾಗಿ ಕನ್ನಡೇತರ ಮಾತೃಭಾಷೆಯ ಮಕ್ಕಳು ಶಾಲೆಗೆ ಸೇರುವಾಗ ಎರಡು ಭಾಷೆಗಳ ಮಾಧ್ಯಮದ ಆಯ್ಕೆ ಇರುತ್ತದೆ. ತಮ್ಮ ತಮ್ಮ ಮನೆಮಾತಾದ ಉರ್ದು, ತೆಲುಗು, ತಮಿಳು, ಸೋಲಿಗ, ಕೊಡವ ಇತ್ಯಾದಿ ಅಥವಾ ರಾಜ್ಯದ ಪ್ರಮುಖ ವ್ಯವಹಾರ, ಆಡಳಿತ, ನ್ಯಾಯಾಂಗದ ಭಾಷೆಯಾದ ಕನ್ನಡ.

ಉರ್ದುವಿನ ಕುರಿತು ನೇರವಾದ ಅನುಭವ ಇರುವುದರಿಂದ ಅದರ ಕುರಿತು ಹೇಳುತ್ತೇನೆ. ಸಾಮಾನ್ಯವಾಗಿ ಮುಸಲ್ಮಾನರು ಮನೆಗಳಲ್ಲಿ ಕುರ್ದುವನ್ನು ಮಾತಾಡುವುದು ಕೌಟುಂಬಿಕ ಆಗುಹೋಗುಗಳಿಗಾಗಿ, ಸಾಂಸ್ಕೃತಿಕ ಭಾಷೆಯಾಗಿ, ಧಾರ್ಮಿಕ ಆಚರಣೆ, ಸಮಾರಂಭಗಳ ಮಾಧ್ಯಮವಾಗಿ. ಮೊಹಲ್ಲಾಗಳಲ್ಲಿ ಈಗಿರುವುದು ಅಪರೂಪ, ಇದ್ದರೂ ಸೀಮಿತ ಸಾಮಾಜಿಕ ವ್ಯವಹಾರಕ್ಕಾಗಿ ಈ ಕುರ್ದು ಭಾಷೆ ಬಳಕೆಯಾಗುತ್ತದೆ. ಆದರೆ ಎಲ್ಲರ ಸಾಮಾಜಿಕ, ಆರ್ಥಿಕ, ಶೈಕ್ಷಣಿಕ, ಔದ್ಯೋಗಿಕ, ಔದ್ಯಮಿಕ, ರಾಜಕೀಯ ಬೆಳವಣಿಗೆಯಾಗಬೇಕಾಗಿರುವುದು ಪ್ರಧಾನವಾಗಿ ರಾಜ್ಯವ್ಯಾಪಿ ಭಾಷೆಯಾಗಿರುವ ಕನ್ನಡದಲ್ಲಿ. ಕನ್ನಡ ಹೇಗೂ ಹೆಚ್ಚು ಕಡಿಮೆ ಪ್ರಥಮ ಭಾಷೆಯ ರೀತಿಯಲ್ಲಿಯೇ ಕಲಿತಿರುತ್ತೇವೆ ಕೂಡ. ಕುರ್ದುವನ್ನು ಅದರ ಅಗತ್ಯಕ್ಕೆ ಮೀಸಲಿಟ್ಟು, ಮುಕ್ತ ಬೆಳವಣಿಗೆಗಾಗಿ ನಾವು ಕನ್ನಡವನ್ನು ಆರಿಸಿಕೊಳ್ಳುತ್ತೇವೆ. ನಾವು ಮಾಡಿದ್ದು ಹಾಗೆಯೇ.

ಈ ಮಾತು ಬಂಜಾರ, ಸೋಲಿಗ, ಕೊರಗ, ಬಡಗ ಇತ್ಯಾದಿ ಬುಡಕಟ್ಟು ಭಾಷೆಗಳ ಮಟ್ಟಿಗೆ ಇನ್ನೂ ನಿಜ. ಈ ಎಲ್ಲಾ ಮನೆ ಮಾತುಗಳು ಆಯಾ ಬುಡಕಟ್ಟು, ಜನಾಂಗಗಳ ಸಾಂಪ್ರದಾಯಿಕ ಬದುಕು, ಜೀವನೋಪಾಯದ ವಿಧಾನಗಳು ಇಂಥ ಅಗತ್ಯಗಳನ್ನು ಪೂರೈಸುವಷ್ಟು ಸಮರ್ಥವಾಗಿರುತ್ತವೆ; ಆದರೆ ಈ ಭಾಷೆಗಳಲ್ಲಿ ಅವರ ವ್ಯವಹಾರವೂ ಇನ್ನೂ ಸೀಮಿತವಾಗಿರುತ್ತದೆ. ರಾಜ್ಯದ ಸಾಮಾನ್ಯವಾಹಿನಿಯ ಪ್ರಯೋಜನವನ್ನು ಪಡೆಯಬೇಕು ಎಂದರೆ ಈ ಮಾತೃಭಾಷೆಯ ಮಕ್ಕಳು ಆದಷ್ಟು ಬೇಗ ಕನ್ನಡಕ್ಕೆ ಜಿಗಿಯುವುದು ಒಳ್ಳೆಯದು. ಇದು ಅವರಿಗೆ ಸುಲಭವೂ ಕೂಡ. ಈ ಕನ್ನಡೇತರ ಭಾಷೆಯ ಮಕ್ಕಳು ಕನ್ನಡ ಮಾತೃಭಾಷೆಯ ಮಕ್ಕಳಷ್ಟು ಕನ್ನಡವನ್ನು ಚೆನ್ನಾಗಿ ಕಲಿತಿರುತ್ತಾರೆಯೇ ಎಂದು ಹೋಲಿಸಿ ನೋಡುವುದು ಕಷ್ಟ. ಏಕೆಂದರೆ, ಒಮ್ಮೊಮ್ಮೆ ಅನೇಕ ಕಾರಣಗಳಿಗಾಗಿ ಇಂಥ ಅಲ್ಪಸಂಖ್ಯಾತ ಭಾಷೆಗಳ ಮಕ್ಕಳು ತಮ್ಮ ಮನೆಮಾತಿಗಿಂತ ಕನ್ನಡವನ್ನೇ ಹೆಚ್ಚು ಸಮರ್ಥವಾಗಿ ಕಲಿತಿರುತ್ತಾರೆ. ನನ್ನ ಕುಟುಂಬವಷ್ಟೆ ವಿಶೇಷ ಉದಾಹರಣೆ ಆಗಬೇಕಾಗಿಲ್ಲ.

**ಮಾತೃಭಾಷೆ ಎನ್ನಬೇಡಿ, ಕನ್ನಡವೆನ್ನಿ**

ಸರಕಾರ ಮತ್ತು ಕನ್ನಡದ ಕಾಳಜಿ ಇರುವ ಸಂಸ್ಥೆಗಳು ಮತ್ತು ವ್ಯಕ್ತಿಗಳು ಹೇಳುತ್ತಾರೆ ಪ್ರಾಥಮಿಕ ತರಗತಿಗಳಲ್ಲಿ 'ಮಾತೃಭಾಷೆ ಮಾಧ್ಯಮ' ಇರಬೇಕು ಎಂದು. ಇದು ಗೊಂದಲಕ್ಕೆ ಕಾರಣವಾಗುತ್ತದೆ. 'ಮಾತೃಭಾಷೆ' ಎಂದಾಕ್ಷಣ ಕನ್ನಡದ ಜೊತೆಗೆ ಇತರ ಉರ್ದು, ತೆಲುಗು, ತಮಿಳು ಇತ್ಯಾದಿ ಮಾತೃಭಾಷೆಗಳು ಆಯಾ ಸಮುದಾಯಗಳಿಗೆ ನೆನಪಿಗೆ ಬರುತ್ತವೆ. ಅವರು ತಮ್ಮ ತಮ್ಮ ಮಾತೃಭಾಷೆಗಳಲ್ಲಿ ಶಿಕ್ಷಣ ಬೇಕು ಎಂದರೆ ಸರಕಾರ ಒಪ್ಪುತ್ತದೆಯೇ? ಇನ್ನು ಬಂಜಾರ, ಯರವ, ಸೋಲಿಗ ಇತ್ಯಾದಿ ಬುಡಕಟ್ಟು ಮಾತೃಭಾಷೆಗಳ ಜನ ಆಯಾ ಭಾಷೆಗಳಲ್ಲಿ ಪ್ರಾಥಮಿಕ ಶಿಕ್ಷಣ ಬೇಕು ಎಂದು ಹಠ ಮಾಡಿದರೆ ಸರಕಾರ ಪೇಚಿಗೆ ಬೀಳುವುದು ಸಹಜವೇ. ಇತ್ತೀಚೆಗೆ ವಿವಿಧ ಜಾತಿ, ಮತ, ಪಂಗಡದವರು, ಉಳಿದವರಿಗಿಂತ 'ನಾವು ಬೇರೆ' ಎಂದು ಹೇಳಿಕೊಂಡು ಅದರ ಆಧಾರದ ಮೇಲೆಯೇ ಚಿಕ್ಕದೊಡ್ಡ ಅಧಿಕಾರದ ಗದ್ದುಗೆಗಳನ್ನು ಸ್ಥಾಪಿಸಿಕೊಳ್ಳುತ್ತಿರುವುದು ಹೆಚ್ಚಾಗಿದೆ. ಆಯಾ ಸಮೂಹದ ಮಾತೃಭಾಷೆಯೂ ಕನ್ನಡಕ್ಕಿಂತ ಭಿನ್ನವಾಗಿದ್ದರೆ ಅವರು ತಮ್ಮ ತಮ್ಮ ಮಾತೃಭಾಷೆಗಳಲ್ಲಿಯೇ ಶಿಕ್ಷಣ ಬೇಕು ಎಂದು ಹಠ ಮಾಡುವುದೂ ಅವರ ಪ್ರತಿಷ್ಠೆಯ ಮಾತಾಗುತ್ತದೆ. ಎಲ್ಲ ಸಮುದಾಯಗಳಲ್ಲಿರುವ ಮೂಲಭೂತವಾದಿಗಳ ಈ ಹವ್ಯಾಸದಿಂದಾಗಿ ಲಕ್ಷಾಂತರ ಮಕ್ಕಳು ಮುಖ್ಯವಾಹಿನಿಯನ್ನು ಪ್ರಮುಖ ಭಾಷೆಯ ಮೂಲಕ ಸಮರ್ಥವಾಗಿ ಪ್ರವೇಶಿಸುವ ಅವಕಾಶದಿಂದ

ವಂಚಿತರಾಗುತ್ತಾರೆ. ಆದ್ದರಿಂದ ನಾವು ಹೇಳಬೇಕಾಗಿರುವುದು ‘ಮಾತೃಭಾಷೆ’ಯ ಮಾಧ್ಯಮದಲ್ಲಿ ಶಿಕ್ಷಣ ಎಂದಲ್ಲ, ಪ್ರಾದೇಶಿಕ ಭಾಷೆ (ಎಂದರೆ ಕನ್ನಡ) ಮಾಧ್ಯಮದಲ್ಲಿ ಶಿಕ್ಷಣ ಎಂದು ಬಾಯಿಬಿಟ್ಟು ಸ್ಪಷ್ಟವಾಗಿ ಹೇಳಬೇಕು.

ಹಾಗಾದರೆ ಇತರ ಮಾತೃಭಾಷೆಗಳು ಅಭಿವೃದ್ಧಿಯಾಗುವುದು ಬೇಡವೇ? ಬೇಕು. ರಾಜ್ಯದ ಕನ್ನಡೇತರ ಇತರ ಭಾಷೆಗಳನ್ನು ಶಾಲೆಗಳಲ್ಲಿ ಅಥವಾ ಸಮುದಾಯದ ಸಂಸ್ಥೆಗಳಲ್ಲಿ ಒಂದು ಭಾಷೆಯಾಗಿ ಕಲಿಸಬೇಕು. ಈವರೆಗೆ ಲಿಪಿಯಿಲ್ಲದ ಭಾಷೆಗಳಲ್ಲಿ ಕನ್ನಡದ ಲಿಪಿಯನ್ನೇ ಬಳಸಿ ಸಾಕ್ಷರತೆಯನ್ನು ಹೇಳಿ ಕೊಡಬಹುದು. ಅದು ಅವರ ಸಾಂಸ್ಕೃತಿಕ, ಸಾಹಿತ್ಯಕ ಅಗತ್ಯಗಳನ್ನು ಪೂರೈಸಲು ಸಾಕಾಗುತ್ತದೆ. ಉಳಿದಂತೆ ಸಾಮಾಜಿಕ, ರಾಜಕೀಯ, ಆರ್ಥಿಕ ಅಗತ್ಯಗಳಿಗಾಗಿ ಎಲ್ಲ ಮಕ್ಕಳು ಕನ್ನಡ ಭಾಷೆಯಲ್ಲಿ ಪರಿಣತಿಯನ್ನು ಗಳಿಸುವುದು ಹೆಚ್ಚು ಸೂಕ್ತ ಮತ್ತು ತಾರ್ಕಿಕ.

**ಏನಾಗಿದೆ, ಏನಾಗಬೇಕು?**

ಭಾಷಾವೈಜ್ಞಾನಿಕವಾಗಿ, ಮನೋಭಾಷಾವೈಜ್ಞಾನಿಕವಾಗಿ, ಸಮಾಜ ವೈಜ್ಞಾನಿಕವಾಗಿ ಕನ್ನಡವೇ ಪ್ರಾಥಮಿಕ ಶಾಲೆಯ ಶಿಕ್ಷಣದ ಮಾಧ್ಯಮವಾಗಬೇಕು ಎಂಬುದು ಅತ್ಯಂತ ಸಮರ್ಥವಾದ ತೀರ್ಮಾನ. ರಾಜ್ಯದಲ್ಲಿ ಶೇಕಡ ೬೬ರಷ್ಟು ಜನರ ಮಾತೃಭಾಷೆ ಕನ್ನಡ, ಆದರೂ ಶೇಕಡ ೯೦ಕ್ಕೂ ಹೆಚ್ಚು ಜನರಿಗೆ, ಯಾವುದೇ ಮಾತೃಭಾಷೆಯಾಗಿರಲಿ, ಕನ್ನಡ ಚೆನ್ನಾಗಿ ಬರುವ ಭಾಷೆ. ಆದರೂ ಪ್ರಾಥಮಿಕ ಶಾಲೆಯಲ್ಲಿ ಇಂಥ ಉಪಯುಕ್ತ ಭಾಷೆಯನ್ನು ಮಾಧ್ಯಮವನ್ನಾಗಿ ಒಪ್ಪಿಕೊಳ್ಳುವಲ್ಲಿ, ಒಪ್ಪಿಸುವಲ್ಲಿ ಇಷ್ಟೊಂದು ಕಸರತ್ತು ಮಾಡಬೇಕಾಗಿ ಬಂದಿರುವುದೇ ಬಹುದೊಡ್ಡ ವಿಪರ್ಯಾಸ.

ಪರಿಸ್ಥಿತಿಯನ್ನು ಮಕ್ಕಳ, ನಾಡಿನ ಹಿತದಲ್ಲಿ ಬದಲಾಯಿಸಬೇಕು ಎಂದಾದರೆ ಮಠ, ಮಸೀದಿ, ಚರ್ಚುಗಳು, ರಾಜಕಾರಣಿಗಳು, ಉದ್ಯಮಿಗಳು ತಮ್ಮ ಕೈಲಾದಷ್ಟು ಸಂಖ್ಯೆಯಲ್ಲಿ ಉತ್ತಮ ಕನ್ನಡ ಮಾಧ್ಯಮ ಶಾಲೆಗಳನ್ನು ನಡೆಸಬೇಕು. ಇಂಗ್ಲಿಷ್ ಮಾಧ್ಯಮದ ಶಾಲೆಗಳನ್ನು ಕ್ರಮೇಣ ಕಡಿಮೆ ಮಾಡಬೇಕು. ಇಂಗ್ಲಿಷನ್ನು ಎಲ್ಲಾ ಶಾಲೆಗಳಲ್ಲಿ ಒಂದು ಭಾಷೆಯನ್ನಾಗಿ ಈಗಿರುವುದಕ್ಕಿಂತ ಹೆಚ್ಚು ಸಮರ್ಥವಾಗಿ ಕಲಿಸಬೇಕು. ಸರಕಾರಿ ಶಾಲೆಗಳು ಹೆಚ್ಚು ಉತ್ತಮಗೊಳ್ಳಬೇಕು. ಊಟ, ಬಟ್ಟೆ, ಬೂಟು, ಪುಸ್ತಕ, ಸೈಕಲು ಇವೆಲ್ಲಕ್ಕಿಂತ ಹೆಚ್ಚಾಗಿ ಉತ್ತಮ ಕನ್ನಡ ಭಾಷಾ ಸಂವಹನ ಕೌಶಲಗಳನ್ನು (ಈಗಿರುವ ರೀತಿಯಲ್ಲಿ ಸಾಹಿತ್ಯವನ್ನಲ್ಲ) ಕಲಿಸುವ ರೀತಿಯ ಪಠ್ಯ, ಪಠ್ಯಪುಸ್ತಕಗಳನ್ನು ರೂಪಿಸಬೇಕು, ಸಮರ್ಥ ಶಿಕ್ಷಕರನ್ನು ನೇಮಿಸಬೇಕು. ಖಾಸಗಿ ಶಾಲೆಗಳೊಂದಿಗೆ ಪೈಪೋಟಿ ನಡೆಸುವಷ್ಟು ಉತ್ತಮಗೊಳ್ಳಬೇಕು. ಸರಕಾರಗಳಲ್ಲಿ ಇದಕ್ಕಾಗಿ ಪ್ರೇರಣೆ, ಇಚ್ಛಾಶಕ್ತಿ ಸಾಲದು. ಖಾಸಗಿ ಸಂಸ್ಥೆಗಳು ಶಿಕ್ಷಣ ಸಂಸ್ಥೆಗಳನ್ನು ಸ್ಥಾಪಿಸುವುದು ದೇಶೋದ್ಧಾರಕ್ಕಿಂತ ಹೆಚ್ಚಾಗಿ ಲಾಭಗಳಿಕೆ ಮತ್ತು ರಾಜಕೀಯ ಪ್ರತಿಷ್ಠೆಗಾಗಿ. ಆದರೆ ಶಿಕ್ಷಣ ವ್ಯವಸ್ಥೆಯ (ವ್ಯವಹಾರದ) ಗ್ರಾಹಕರೆಂದರೆ ಶಿಕ್ಷಣ ಪಡೆಯಬೇಕಾದ ಮಕ್ಕಳ ಪೋಷಕರು. ಅವರು ಶಾಲಾ ವಾಣಿಜ್ಯದ ಸಮ್ಮೋಹನಕ್ಕೆ ಒಳಗಾಗಬಾರದು. ಬದಲಿಗೆ, ತಮ್ಮ ಮಕ್ಕಳ ಮತ್ತು ಆ ಮೂಲಕ ತಮ್ಮ ಒಳಿತಿಗಾಗಿ ಪೋಷಕರೇ ಪರಿಸ್ಥಿತಿಯನ್ನು ನಿಯಂತ್ರಿಸುವಂತಾಗಬೇಕು. ಇದಾಗಬೇಕು ಎಂದರೆ ಉಳಿದಿರುವುದೊಂದೇ ಮಾರ್ಗ : ಜನಜಾಗೃತಿ. ಮುಖ್ಯವಾಗಿ, ಪೋಷಕರಿಗೆ ಕನ್ನಡ ಮಾಧ್ಯಮದಲ್ಲಿ ಪಡೆದ ಶಿಕ್ಷಣವೇ ಎಲ್ಲ ದೃಷ್ಟಿಯಿಂದ ಸರ್ವೋತ್ತಮ ಎಂಬುದನ್ನು ಮನವರಿಕೆ ಮಾಡಿಸಬೇಕು. ಪೋಷಕರಲ್ಲಿ ಈ ಪರಿಕಲ್ಪನೆ ಬೇಡಿಕೆ ರೂಪ ಪಡೆದದ್ದೇ ಆದರೆ ಅದು ಸರಕಾರ ಮತ್ತು ಖಾಸಗಿ ಎರಡೂ ವ್ಯವಸ್ಥೆಯ ಶಾಲೆಗಳನ್ನು ಕನ್ನಡ ಮಾಧ್ಯಮದಲ್ಲಿ ನಡೆಸುವುದು ಅನಿವಾರ್ಯ ಎಂಬ ಪರಿಸ್ಥಿತಿ ಏರ್ಪಡುತ್ತದೆ.

**ಎಂ. ಅಬ್ದುಲ್ ರೆಹಮಾನ್ ಪಾಷ**
‘ನಮ್ಮನೆ’, ನಂ. ೮೧/೩೭–೩, ೪ನೇ ಅಡ್ಡರಸ್ತೆ
೧೨ನೇ ‘ಡಿ’ ಮುಖ್ಯರಸ್ತೆ, ಶಿವನಗರ, ಬೆಂಗಳೂರು – ೫೬೦ ೦೧೦




## ಹಕ್ಕುಗಳ ಹಾಡು

**ಹ**ಕ್ಕುಗಳು ಮತ್ತು ಕರ್ತವ್ಯಗಳು ಜೈವಿಕ ಸಂವಿಧಾನದ
ಋಕ್ಕುಗಳು ; ಜೀವಪ್ರಭುತ್ವದ ರೆಕ್ಕೆಗಳು.
ತುಕ್ಕುಹಿಡಿವ ಬದುಕಿಗೆ ಹೊಸ ದಿಕ್ಕುಗಳ ದರ್ಶಿಸಿ, ಭೋಗಕ್ಕೆ ಹಕ್ಕು,
ತ್ಯಾಗಕ್ಕೆ ಕರ್ತವ್ಯ ತೋರಿದ್ದು ಪ್ರಜಾಸತ್ತೆಯ ಹೆಜ್ಜೆಗಳು.

ದುಡಿದು ದಣಿವ ವ್ಯಕ್ತಿಯು ಬೇಡುವುದರಲ್ಲಿ ತಪ್ಪಿಲ್ಲ.
ಮಾನವ ಹಕ್ಕುಗಳನು ಮಾವನ ಎಕ್ಕಡವೆಂದು ಬಗೆದು,
ಬಲಿಚಕ್ರವರ್ತಿಯನು ಪಾತಾಳಕ್ಕೆ ತುಳಿದಂತೆ ಸ್ತ್ರೀಯರು,
ಬಡವರು, ದುರ್ಬಲರು, ದಲಿತರನ್ನು ತಲೆಯೆತ್ತದಂತೆ
ಅವರ ನಿಟ್ಟುಸಿರನ್ನೆ ನಿಚ್ಚಣಿಕೆ ಮಾಡಿ ಮೇಲೇರಿದ ಮೇಲೆ
ಕೈಬಿಡುವುದಿದೆಯಲ್ಲ – ಇದು ಹಕ್ಕಲ್ಲ, ವಾಮನ ಕಿಕ್ಕು !

ಸರಿಬೆರೆತ ಸತಿ – ಪತಿಗಳ ನಡುವೆ ಗೆರೆಯಳಿದರೆ
ಸಂಸಾರವೆಂತೊ, ಅಂತೆಯೇ ಬಿಕ್ಕು ಮತ್ತು ಹಕ್ಕುಗಳು.

ಸಮಾಜದಿಂದ ಗೌರವಯುತ ಬದುಕು, ದೈವದಿಂದ ಸಹಜ
ಸಾವು ನಮ್ಮ ಬೇಡಿಕೆ. ಕೊಟ್ಟರೆ ಒಪ್ಪಂದ, ಕೊಡದಿರೆ ಹಗಲೂ –
ಇರುಳೂ ಗದ್ದುಗೆಯ ಮುಂದೆ ಹೋರಾಟದ ಹಾಡಿಕೆ.

**ಸೋಮನಾಥ ಗೀತಯೋಗಿ**
ಮು/ಪೋ – ಸಾಲೋಟಗಿ, ಇಂಡಿ ತಾಲ್ಲೂಕು, ವಿಜಯಪುರ ಜಿಲ್ಲೆ – ೫೮೬ ೨೦೭




# ವಿಜ್ಞಾನದ ಇತಿಹಾಸದಲ್ಲಿ ದಾಪುಗಾಲುಗಳು

## ಒಂದು ಅವಲೋಕನ

ನವಕರ್ನಾಟಕ ಪ್ರಕಾಶಕರು ವಿಪುಲವಾಗಿ ಪ್ರಕಟಿಸಿದ್ದರೂ, ಈಗ ಹೊರತಂದಿರುವ ಲೇಖನ ಮಾಲಿಕೆ, ವಿಜ್ಞಾನದ ಚರಿತ್ರೆಯಲ್ಲಿ ಕಂಡುಬರುವ ಹಲವಾರು ಶಾಖೆಗಳ ಮಹಾ ತಿರುವುಗಳನ್ನು (paradigm shifts) ಪರಿಚಯಿಸಿ, ವಿಶೇಷ ಸ್ಥಾನ ಪಡೆದುಕೊಳ್ಳುತ್ತದೆ. ಈ ಮಾಲಿಕೆಗೆ ಲೇಖನಗಳನ್ನು ನೀಡಿರುವ ಬರಹಗಾರರು ಕನ್ನಡ ವಿಜ್ಞಾನ ಸಾಹಿತ್ಯದ ದಿಗ್ಗಜರು.




*ಸಂಪಾದಕರು*
**ಟಿ. ಆರ್. ಅನಂತರಾಮು**
*ಬೆಲೆ : ೮೦೦/– ಪುಟಗಳು : ೫೬೮*
*ಪ್ರಕಾಶನ :*
**ನವಕರ್ನಾಟಕ ಪ್ರಕಾಶನ**
ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ
ಬೆಂಗಳೂರು – ೫೬೦ ೦೦೧

ನವಕರ್ನಾಟಕ ಪಬ್ಲಿಕೇಷನ್ಸ್ ಹೊರತಂದಿರುವ "ವಿಜ್ಞಾನದ ಹೆದ್ದಾರಿಯಲ್ಲಿ ಮಹಾತಿರುವುಗಳು" ಕನ್ನಡಿಗರಿಗೆ ಪ್ರಕಾಶನ ನೀಡಿರುವ ಅತ್ಯಮೂಲ್ಯ ಕೊಡುಗೆ. ಈ ಹಿಂದೆಯೂ ವಿಜ್ಞಾನ ಸಾಹಿತ್ಯವನ್ನು ನವಕರ್ನಾಟಕ ಪ್ರಕಾಶಕರು ವಿಪುಲವಾಗಿ ಪ್ರಕಟಿಸಿದ್ದರೂ, ಈಗ ಹೊರತಂದಿರುವ ಲೇಖನ ಮಾಲಿಕೆ, ವಿಜ್ಞಾನದ ಚರಿತ್ರೆಯಲ್ಲಿ ಕಂಡುಬರುವ ಹಲವಾರು ಶಾಖೆಗಳ ಮಹಾ ತಿರುವುಗಳನ್ನು (paradigm shifts) ಪರಿಚಯಿಸಿ, ವಿಶೇಷ ಸ್ಥಾನ ಪಡೆದುಕೊಳ್ಳುತ್ತದೆ. ಈ ಮಾಲಿಕೆಗೆ ಲೇಖನಗಳನ್ನು ನೀಡಿರುವ ಬರಹಗಾರರು ಕನ್ನಡ ವಿಜ್ಞಾನ ಸಾಹಿತ್ಯದ ದಿಗ್ಗಜರು. ಅನೇಕ ಲೇಖಕರ ಪ್ರಕಟಿತ ವಿಜ್ಞಾನ ಸಾಹಿತ್ಯಕ್ಕೆ ಒಂದಲ್ಲ ಒಂದು ಪುರಸ್ಕಾರ ಈಗಾಗಲೇ ದೊರೆತಿದೆ. ಕೆಲವು ಬರಹಗಾರರನ್ನು ಅರಸಿಕೊಂಡು ಅನೇಕ ಪುರಸ್ಕಾರಗಳು ಬಂದಿವೆ. ಎಲ್ಲ ಲೇಖನಗಳೂ, ವಿಜ್ಞಾನದ ಆಳ ಪರಿಚಯ ಮತ್ತು ಸರಳ ಕನ್ನಡದಲ್ಲಿ ಕ್ಲಿಷ್ಟ ವೈಜ್ಞಾನಿಕ ಪರಿಕಲ್ಪನೆಗಳನ್ನು ವಿವರಿಸುವ ಬರಹಗಾರರ ಸಾಮರ್ಥ್ಯವನ್ನು ಪ್ರತಿಫಲಿಸುತ್ತವೆ. ವೈಜ್ಞಾನಿಕ ಸಂಶೋಧನೆಯಲ್ಲಿ ನಿರತರಾಗಿರುವವರಿಗೂ ಈ ಹೊತ್ತಿಗೆ ಅಮೂಲ್ಯವೆನಿಸುತ್ತದೆ. ಏಕೆಂದರೆ, ವಿಜ್ಞಾನ ಅಗಾಧವಾಗಿ, ಶಾಖೋಪಶಾಖೆಗಳಾಗಿ ಬೆಳೆದಿರುವುದರಿಂದ, ಸಂಶೋಧನೆಯಲ್ಲಿ ತೊಡಗಿರುವವರಿಗೂ, ನಿಕಟ ಪರಿಚಯ ತಾವು ನಡೆಸುತ್ತಿರುವ ಸಂಶೋಧನೆಯ ಶಾಖೆಗೆ ಮಾತ್ರ ಸೀಮಿತವಾಗಿರುತ್ತದೆ. ವಿಜ್ಞಾನದ ಇತರ ಶಾಖೆಗಳ ಪರಿಚಯ ಮಿತವಾಗಿರುತ್ತದೆ. ನನಗಂತೂ ಈ ಹೊತ್ತಿಗೆಯಿಂದ ಅನೇಕ ಹೊಸ ವಿಷಯಗಳು ತಿಳಿದುಬಂದವು.

ಈ ವಿದ್ವತ್ಪೂರ್ಣ ಹೊತ್ತಿಗೆಯ ವಿಮರ್ಶೆಯಲ್ಲಿ ಹೊಗಳಿಕೆಗಿಂತಲೂ ಟೀಕೆಗಳೇ ಹೆಚ್ಚು ಎನಿಸಿದರೆ, ಅದಕ್ಕೆ ಮುಖ್ಯ ಕಾರಣ ಮರುಮುದ್ರಣದಲ್ಲಿ ಈ ವಿಮರ್ಶೆಯನ್ನು ಸಕಾರಾತ್ಮಕವಾಗಿ ಸ್ವೀಕರಿಸಿದರೆ ಇನ್ನೂ ಒಳ್ಳೆಯ ಪುಸ್ತಕ ಹೊರಬರಬಹುದು ಎನ್ನುವ ಆಸೆಯೇ ಹೊರತು, ಹೊತ್ತಿಗೆಯ ಮೇಧಾವಿ ಬರಹಗಾರರ ಬಗ್ಗೆ ಅನಾದರ ತೋರುವುದಲ್ಲ ಎನ್ನುವುದನ್ನು ನಮ್ರತೆಯಿಂದ ತಿಳಿಸಬಯಸುತ್ತೇನೆ. ಪ್ರಕಾಶನದವರು ಈ ಪುಸ್ತಕದ ಬರಿಯ ೧೦೦೦ ಪ್ರತಿಗಳನ್ನು ಮುದ್ರಿಸಿದ್ದರೂ, ನಮ್ಮ ಕನ್ನಡದ ಜನತೆ ಎಷ್ಟು ಬೇಗ ಈಗಿರುವ ಪುಸ್ತಕಗಳನ್ನೆಲ್ಲ ಕೊಂಡು ಓದಿ, ಎರಡನೆಯ ಮುದ್ರಣಕ್ಕೆ ಅವಕಾಶ ಮಾಡಿಕೊಡುತ್ತಾರೆ ಎನ್ನುವುದನ್ನು ಹೇಳಲಾಗುವುದಿಲ್ಲ. ಶಾಲೆ, ಕಾಲೇಜುಗಳಲ್ಲಿ ಪ್ರತಿವರ್ಷ ನಡೆಯುವ ಭಾಷಣ ಸ್ಪರ್ಧೆಗಳಲ್ಲಿ ಇಂತಹ ಪುಸ್ತಕಗಳನ್ನೇ ಬಹುಮಾನವಾಗಿ ಬಳಸಿದರೆ, ನಮ್ಮ ವಿದ್ಯಾರ್ಥಿಗಳ ವೈಜ್ಞಾನಿಕ ಕುತೂಹಲ, ಅರಿವು ಹೆಚ್ಚುವುದಲ್ಲದೇ, ಮರುಮುದ್ರಣವೂ ಬೇಗ ಸಾಧ್ಯವಾಗುತ್ತದೆ. ಹಾಗೆ ಆಗಲಿ ಎಂದು ಹಾರೈಸುತ್ತೇನೆ.

ಮೊದಲನೆಯ ಕೃಷ್ಣಮೂರ್ತಿಯವರ "ಶತಶತಮಾನಕ್ಕೂ ಜಿಗಿಯುತ್ತ ಸಾಗಿದ ಭೌತವಿಜ್ಞಾನ" ಲೇಖನದಲ್ಲಿ ಗ್ರೀಕ್ ತತ್ವಶಾಸ್ತ್ರಜ್ಞರು ಕ್ರಿಸ್ತಪೂರ್ವದಲ್ಲಿಯೇ ಭೌತಶಾಸ್ತ್ರಕ್ಕೆ ನೀಡಿದ ಕೊಡುಗೆಯ ವಿವರಣೆ ಬಹಳ ಚೆನ್ನಾಗಿದೆ. ನ್ಯೂಟನ್ನನ ಕಾಲದಿಂದ ಭೌತಶಾಸ್ತ್ರ ಸ್ಫೋಟದೋಪರಿ ಬೆಳೆಯತೊಡಗಿತು. ವಿಜ್ಞಾನದ ಈ ಶಾಖೆ ಬೆಳೆದು ಬಂದ ದಾರಿಯ ವಿಹಂಗಮ ನೋಟವನ್ನು ಲೇಖನ ನೀಡುತ್ತದೆ. ಭೌತಶಾಸ್ತ್ರ ತಿಳಿದವರಿಗೆ ಈ ಲೇಖನ ಸರಳ ಎನ್ನಿಸಬಹುದು. ಆದರೆ ಭೌತವಿಜ್ಞಾನ ತಿಳಿಯದ ಜಾಣ ಓದುಗರನ್ನು ಲೇಖನದಲ್ಲಿ ಉಲ್ಲೇಖಿಸಿರುವ ಎಲ್ಲ ಪರಿಕಲ್ಪನೆಗಳೂ ತಲುಪುತ್ತವೆಯೇ ಎನ್ನುವ ಸಂಶಯ ಮೂಡುತ್ತದೆ. ಕೆಲವು ಕ್ಲಿಷ್ಟ ಪರಿಕಲ್ಪನೆಗಳನ್ನು ಸರಳ ಉದಾಹರಣೆಗಳ ಮೂಲಕ ವಿವರಿಸಿದರೆ ಲೇಖನ ಇನ್ನೂ ಹೆಚ್ಚು ಉಪಯುಕ್ತವಾಗುತ್ತದೆ. ಲೇಖನದಲ್ಲಿ ಮೊಟುಕಾಗಿ ವಿವರಿಸಲಾಗಿರುವ ನ್ಯೂಟನ್ನನ ವಿಶ್ವದೃಷ್ಟಿಗೂ, ಕ್ವಾಂಟಂ ಸಿದ್ಧಾಂತ ಪ್ರತಿಪಾದಿಸುವ ದೃಷ್ಟಿಕೋನಕ್ಕೂ ಇರುವ ವ್ಯತ್ಯಾಸ ಓದುಗರ ಗಮನಕ್ಕೆ ಬರದೆ ಇರಬಹುದು. ಈ ಬದಲಾವಣೆಗೆ ಕಾರಣವಾದ ಪ್ರಯೋಗಗಳ, ತತ್ವಗಳ ಪರಿಚಯವೂ ಆಗದೇ ಇರಬಹುದು. ಈ ನಿಟ್ಟಿನಲ್ಲಿ ಲೇಖನವನ್ನು ಇನ್ನೂ ಉತ್ತಮಗೊಳಿಸುವ ಸಾಧ್ಯತೆ ಇದೆ. ಲೇಖನ ಭೌತಶಾಸ್ತ್ರದ ಚರಿತ್ರೆಯನ್ನು ಪುರಾತನ ಕಾಲದಿಂದ ಪ್ರಾರಂಭಿಸಿ ಸುಮಾರು ೧೯೩೦ರವರೆಗೆ ಮಾತ್ರ ಪರಿಚಯಿಸುತ್ತದೆ. ನಂತರದ ಬೆಳವಣಿಗೆಗಳನ್ನೂ ಸೇರಿಸಬಹುದಿತ್ತು.

ಎರಡನೆಯ ಲೇಖನ ನಟರಾಜ್ ಮತ್ತು ವಿಶ್ವನಾಥರವರ "ಕಣ ಕಣದಲ್ಲೂ ವಿಜ್ಞಾನ – ಭೌತ ವಿಜ್ಞಾನದ ಮಹೋನ್ನತಿ" ಸಹಜವಾಗಿ

**ಪ್ರೊ॥ ಎಂ. ಆರ್. ಎನ್. ಮೂರ್ತಿ**

ಮೊದಲ ಲೇಖನದ ವಿಷಯವನ್ನು ವಿಸ್ತರಿಸುತ್ತಾ ೨೦ ಮತ್ತು ೨೧ನೆಯ ಶತಮಾನಗಳಲ್ಲಿ ಬೆಳೆದುಬಂದಿರುವ ಕಣಭೌತಶಾಸ್ತ್ರದ (particle physics) ಪರಿಚಯ ಮಾಡಿಕೊಡುತ್ತದೆ. ಬಹುಶಃ ಮೊದಲ ಲೇಖನಕ್ಕಿಂತ ಓದುಗರಿಗೆ ಇದು ಸರಳ ಎನಿಸಬಹುದು. ನಮ್ಮ ಇಂದ್ರಿಯ ಗೋಚರ ಪ್ರಪಂಚದ ಸ್ವರೂಪಕ್ಕೂ, ಮೂಲಕಣಗಳ ಪ್ರಪಂಚಕ್ಕೂ ಇರುವ, ಸುಲಭವಾಗಿ ಬುದ್ಧಿಗೆ ನಿಲುಕದ ವ್ಯತ್ಯಾಸಗಳಿಗೆ ಲೇಖಕರು ಸರಳ ವಿವರಣೆ ನೀಡಿದ್ದಾರೆ. ಉದಾಹರಣೆಗೆ, ನಮ್ಮ ಬುದ್ಧಿಗೆ ತೋರುವಂತೆ ನೀರಿನ ಅಲೆಗಳ ಸ್ವರೂಪಕ್ಕೂ, ಒಂದು ಕಲ್ಲು ಉಂಡೆಯ ಸ್ವರೂಪಕ್ಕೂ ಯಾವ ಹೋಲಿಕೆಯೂ ಇಲ್ಲ. ಆದರೆ, ಈ ವಿಶ್ವದಲ್ಲಿರುವ ಅತ್ಯಂತ ಮೂಲ ಕಣಗಳು ಕೆಲವೊಮ್ಮೆ ದ್ರವ್ಯದ ಉಂಡೆಗಳಂತೆಯೂ ಮತ್ತೆ ಕೆಲವೊಮ್ಮೆ ಅಲೆಗಳಂತೆಯೂ ವರ್ತಿಸುತ್ತವೆ. ನ್ಯೂಟನ್ನನ ಪ್ರಪಂಚ ಗಡಿಯಾರದಂತೆ ಪೂರ್ವ ನಿಶ್ಚಿತ ಗತಿಯಲ್ಲಿ ಮುಂದೆ ಸಾಗುತ್ತದೆ. ಆದ್ದರಿಂದ, ಇಂದು ನಡೆಯುವ ಘಟನೆಗಳೆಲ್ಲಾ ಪ್ರಪಂಚ ಪ್ರಾರಂಭವಾದಾಗಲೇ ಇದ್ದ ಪರಿಸ್ಥಿತಿಯ ಪರಿಣಾಮ ಎನ್ನಬಹುದು. ಆದರೆ ಕ್ವಾಂಟಂ ಸಿದ್ಧಾಂತ ಭವಿಷ್ಯತ್ತಿನ ಬಗ್ಗೆ ಸ್ವಲ್ಪ ಅನಿಶ್ಚಿತತೆಯನ್ನು ಪ್ರತಿಪಾದಿಸುತ್ತದೆ. ಪುಟ ೪೪ರಲ್ಲಿ ಪ್ರೊ॥ ವಿಶ್ವೇಶ್ವರರ ಭಾವಚಿತ್ರವಿದ್ದು, ಗುರುತ್ವ ತರಂಗಗಳ ಬಗ್ಗೆ ಅವರು ಮಾಡಿದ ಕೊಡುಗೆಯ ವಿವರಣೆಯಿದೆ. ಕಾಕತಾಳೀಯವಾಗಿ, ಈ ವರ್ಷದ ಭೌತಶಾಸ್ತ್ರದ ನೊಬೆಲ್ ಪಾರಿತೋಷಕ ಈ ತರಂಗಗಳನ್ನು ಪ್ರಾಯೋಗಿಕವಾಗಿ ಪತ್ತೆ ಹಚ್ಚಿದ ವಿಜ್ಞಾನಿಗಳಿಗೆ ದೊರೆತಿದೆ. ಫೆಂಟೊ ಸೆಕೆಂಡಿನ ವಿವರಣೆ ಲೇಖನದಲ್ಲಿ ತಪ್ಪಾಗಿ ಅಚ್ಚಾಗಿದೆ. ಹಾಗೆಯೇ, "ಯುರೇನಿಯಮ್ ಅಣು ವಿದಳನೆ ಹೊಂದಿದಾಗ ಹೊರಬರುವ ನ್ಯೂಟ್ರಾನ್ ಕಣಗಳ ಚಲನ ಶಕ್ತಿ ಇತರ ಯುರೇನಿಯಮ್ ಅಣುಗಳನ್ನು ಭೇದಿಸಬಹುದು" ಎಂಬ ವಾಕ್ಯ ಪೂರ್ಣ ಸರಿಯಲ್ಲ. ಹೊರಬರುವ ನ್ಯೂಟ್ರಾನ್ ಕಣಗಳ ಚಲನ ಶಕ್ತಿ ಬಹಳ ಹೆಚ್ಚಿದ್ದರೆ ಅವು ಇತರ ಯುರೇನಿಯಮ್ ಅಣುಗಳ ಮೂಲಕ ಹಾದುಹೋಗುತ್ತವೆಯೇ ಹೊರತು ಅವುಗಳನ್ನು ಭೇದಿಸುವ ಸಂಭವ ಕಡಿಮೆಯಿರುತ್ತದೆ. ಪುಟ ೩೬ರಲ್ಲಿ ಸೂಚಿಸಿರುವ ಪ್ರೋಟಾನಿನ ಒಳರಚನೆಯ ವಿದ್ಯುತ್ ಅಂಶದಲ್ಲೂ ಸಣ್ಣ ತಪ್ಪು ನುಸುಳಿಕೊಂಡಿದೆ. ಲೇಖನದ ಮೊದಲ ಪುಟದಲ್ಲಿರುವ ಕಣ ವೇಗವರ್ಧಕ (particle accelarator) ಎಂತಹ ವೈಜ್ಞಾನಿಕ ಸಾಧನೆ ಎನ್ನುವುದನ್ನು ಲೇಖಕರು ಇನ್ನೂ ಒತ್ತಿ ಹೇಳಬಹುದಾಗಿತ್ತು. ಇವುಗಳಲ್ಲಿ ಕಣಗಳ ಗುಂಪು ಬೆಳಕಿನ ವೇಗಕ್ಕೆ (ಒಂದು ಸೆಕೆಂಡಿಗೆ ೩೦೦,೦೦೦ ಕಿಲೋಮೀಟರುಗಳು) ಹತ್ತಿರದ ವೇಗದಲ್ಲಿ ಓಡುತ್ತಿದ್ದರೂ ತನ್ನ ಪಥವನ್ನು ಒಂದಿಂಚೂ ಬಿಟ್ಟು ಕದಲುವುದಿಲ್ಲ, ಅವು ಚಲಿಸುತ್ತಿರುವ ಒಂದು ಮೀಟರ್ ಅಗಲವಿರುವ ವರ್ತುಲ ಕೊಳವೆಯ ಗೋಡೆಗಳಿಗೆ ಅಪ್ಪಳಿಸುವುದಿಲ್ಲ. ಇಂತಹ ನಿಯಂತ್ರಣ ಭೌತಶಾಸ್ತ್ರದ ನಂಬಲಾರದ ಸೈದ್ಧಾಂತಿಕ, ಪ್ರಾಯೋಗಿಕ ಬೆಳವಣಿಗೆಗಳಿಂದ ಸಾಧ್ಯವಾಗಿದೆ.

ಮೂರನೆಯ ಮತ್ತು ನಾಲ್ಕನೆಯ ಲೇಖನಗಳು 'ಹೊಸತು' ಪತ್ರಿಕೆಯ ಓದುಗರಿಗೆ ಚಿರಪರಿಚಿತರಾದ ಡಾ॥ ಬಿ. ಎಸ್. ಶೈಲಜಾರವರ ಕೊಡುಗೆಗಳು. ಇವರದು ಮೋಹಕ, ಸರಳ ಶೈಲಿ. ಕ್ಲಿಷ್ಟ ಪರಿಕಲ್ಪನೆಗಳನ್ನು ಎಲ್ಲರಿಗೂ ಎಟುಕುವಂತೆ ಬರೆಯುವ ಇವರ ಸಾಮರ್ಥ್ಯ ಶ್ಲಾಘನೀಯ. ತಿಥಿ, ವಾರ, ನಕ್ಷತ್ರ, ಮುಹೂರ್ತಗಳ ಬಗ್ಗೆ ತಲೆ ಕೆಡಿಸಿಕೊಳ್ಳುವ ನಮಗೆ ಬಹುಶಃ ಖಗೋಳ ಭೌತಶಾಸ್ತ್ರ (astrophysics), ಇತರ ಭೌತಶಾಸ್ತ್ರದ ಶಾಖೆಗಳಿಗೆ ಹೋಲಿಸಿದರೆ ಕೊಂಚ ಸರಳ ಎನ್ನಿಸಬಹುದು. ಜೊತೆಗೇ, 'ಹೊಸತು' ಪತ್ರಿಕೆಯಲ್ಲಿ ಅನೇಕ ವರ್ಷಗಳಿಂದ ಶೈಲಜಾರವರು ಪ್ರಕಟಿಸಿರುವ ನೂರಾರು ಲೇಖನಗಳು ಬಹಳ ಜನರಿಗೆ ಆಕಾಶ ಕಾಯಗಳ ಪರಿಚಯ ಮಾಡಿಕೊಟ್ಟಿದೆ. ಮೊದಲನೆಯ ಲೇಖನದಲ್ಲಿ ನಮ್ಮ ವಿಶಾಲ ವಿಶ್ವದ ಸ್ವರೂಪವನ್ನೂ ಎರಡನೆಯ ಲೇಖನದಲ್ಲಿ ಬ್ರಹ್ಮಾಂಡದ ವೀಕ್ಷಣೆಗೆ ಉಪಯುಕ್ತವಾದ ತಾಂತ್ರಿಕ ಹಿನ್ನೆಲೆಯನ್ನೂ, ಆಕಾಶ ವೀಕ್ಷಣೆಗೆ ಬೇಕಾಗುವ ಅನೇಕ ಉಪಕರಣಗಳನ್ನೂ ಪರಿಚಯಿಸಿದ್ದಾರೆ. ಆದರೆ ಆಕಸ್ಮಿಕವಾಗಿ ಮೊದಲ ಲೇಖನದ ಅನೇಕ ಪುಟಗಳು ಎರಡನೆಯ ಲೇಖನದಲ್ಲೂ ಪುನರಾವರ್ತನೆಯಾಗಿವೆ. ಪಾಲಹಳ್ಳಿ ವಿಶ್ವನಾಥರ "ದೂರದರ್ಶಕ : ಅಂತರಿಕ್ಷ ವೀಕ್ಷಣೆಗೆ ನವ ಚಕ್ಷುಗಳು" ಸರಳ, ಸುಂದರ ಲೇಖನ. ವಿದ್ಯುದಯಸ್ಕಾಂತ (electromagnetic) ಅಲೆಗಳು ವಿವಿಧ ತರಂಗ ದೂರದ (wavelength) ಅಲೆಗಳನ್ನು ಬಳಸಿಕೊಂಡು ಕಾರ್ಯ ನಿರ್ವಹಿಸುವ ದೂರದರ್ಶಕಗಳ ತಾಂತ್ರಿಕ ಮಾಹಿತಿ ನೀಡಿದ್ದಾರೆ. ಈ ದೂರದರ್ಶಕಗಳು ಮಾಡಿಸುವ ವಿಶ್ವದರ್ಶನ, ಅದರಿಂದ ನಾವು ಕಲಿತಿರುವ ವೈಜ್ಞಾನಿಕ ಅರಿವನ್ನು ಪರಿಚಯಿಸಿದ್ದಾರೆ. ಇವರು ಇಲ್ಲಿ ಅಗೋಚರ ದ್ರವ್ಯ ಮತ್ತು ಶಕ್ತಿಯ (Dark matter and energy) ಬಗ್ಗೆ ಪ್ರಸ್ತಾಪಿಸಿದ್ದಾರೆ. ಇವುಗಳ ಬಗ್ಗೆ ವಿವರಣೆ ನೀಡುವುದು ಲೇಖನದ ವ್ಯಾಪ್ತಿಯನ್ನು ಮೀರುತ್ತದೆ ಎಂಬ ಕಾರಣದಿಂದ ಲೇಖಕರು ಅವುಗಳ ಬಗ್ಗೆ ಹೆಚ್ಚಿನ ಮಾಹಿತಿ ನೀಡಿಲ್ಲ ಎನಿಸುತ್ತದೆ. ಈ ಬಗ್ಗೆ ಒಂದು ಹೊಸ ಲೇಖನವನ್ನು ಪುಸ್ತಕ ಮರುಮುದ್ರಣವಾದಾಗ ಸೇರಿಸುವುದು ಯುಕ್ತ.

ಜಯಸಿಂಹ, ಮುರಲಿಧರರ "ಬದುಕು ಬದಲಿಸಿದ ಅಂತರಿಕ್ಷ ತಂತ್ರಜ್ಞಾನ", ಈ ವಿಜ್ಞಾನ ಶಾಖೆಯ ಸಮಗ್ರ ಮಾಹಿತಿ ನೀಡುತ್ತದೆ. ಚಾರಿತ್ರಿಕ ಸಂಗತಿಗಳು, ಅಂತರಿಕ್ಷ ಯಾನದ ಪೈಪೋಟಿ, ಯಾನದ ಭೌತಿಕ ತತ್ವಗಳು, ತಂತ್ರಜ್ಞಾನ ಬೆಳೆದು ಬಂದ ದಾರಿ, ಜಯಾಪಜಯಗಳು, ವಿವಿಧ ದೇಶಗಳ ಸಾಧನೆಗಳು, ತಂತ್ರಜ್ಞಾನದಿಂದ ನಮಗೆ ದೊರೆತಿರುವ ಟೆಲಿವಿಶನ್, ಮೊಬೈಲ್ ಟೆಲೆಫೋನ್, ಗೂಗಲ್ ನಕ್ಷೆ ಮುಂತಾದ ಉಪಯೋಗಗಳನ್ನು ಲೇಖನ ಸುಲಲಿತ ಭಾಷೆಯಲ್ಲಿ ವರ್ಣಿಸುತ್ತದೆ. ಅಂತರಿಕ್ಷ ತಂತ್ರಜ್ಞಾನದಲ್ಲಿ ನಮ್ಮ ದೇಶ ಮಾಡಿರುವ ಸಾಧನೆಯನ್ನು ಉತ್ಪ್ರೇಕ್ಷೆಯಿಲ್ಲದೆ ದಾಖಲಿಸಿದ್ದರೂ, ನಮ್ಮ ದೇಶದ ವಿಜ್ಞಾನಿಗಳ, ತಂತ್ರಜ್ಞರ ಸಾಧನೆಯ ಬಗ್ಗೆ ಹೆಮ್ಮೆಯಾಗುತ್ತದೆ. ಓದಿ ಮುಗಿಸಿದ ನಂತರ, ಲೇಖನವನ್ನು ಸಿದ್ಧಪಡಿಸಲು ಬರಹಗಾರರು ಪಟ್ಟಿರಲೇಬೇಕಾದ ಶ್ರಮ, ಮುಡುಪಿಟ್ಟ ಸಮಯದ ಬಗ್ಗೆ ಮೆಚ್ಚುಗೆಯಾಗುತ್ತದೆ. ಆನಂದ ದಾರುಕೇಶರ ಮುಂದಿನ ಲೇಖನ "ಗಾಢಾಂತರಿಕ್ಷದಲ್ಲಿ ಗಗನನೌಕೆಗಳು – ಮನುಕುಲದ ಮೊದಲ ಹೆಜ್ಜೆ" ಗಗನ ನೌಕೆಗಳು ನಮ್ಮ ಸೌರವ್ಯೂಹದ ಅಂಚಿಗೆ ತಲುಪಿದ ಸಾಹಸ ಕಥೆಯನ್ನು ವರ್ಣಿಸುತ್ತದೆ. ಸೌರವ್ಯೂಹದ ಅಂಚು ನಮಗೆ ಸುಲಭವಾಗಿ ಊಹಿಸಿಕೊಳ್ಳಲೂ ಆಗದಷ್ಟು ದೂರದಲ್ಲಿದೆ. ಸೂರ್ಯನಿಂದ ಬಹು ದೂರ

ಹೋದಾಗ, ಸೂರ್ಯನ ಪ್ರಖರತೆ ಬಹು ಕ್ಷೀಣವಾಗುವುದರಿಂದ, ಸೌರಶಕ್ತಿ ಬಳಸಿಕೊಂಡು ಉತ್ಪಾದಿಸುವ ವಿದ್ಯುತ್ ಶಕ್ತಿ ಗಗನ ನೌಕೆಗೆ ಸಾಕಾಗುವುದಿಲ್ಲ. ಆದ್ದರಿಂದ ಗಗನನೌಕೆಯಲ್ಲಿ ಅಳವಡಿಸಬೇಕಾಗುವ ಶಕ್ತಿಮೂಲದ ವಿಶೇಷ ಅಗತ್ಯವನ್ನು ಲೇಖನವು ನಮ್ಮ ಗಮನಕ್ಕೆ ತರುತ್ತದೆ. ಹಿಂದಿನ ಲೇಖನದಂತೆ ಇದರಲ್ಲಿಯೂ ಅಂತರಿಕ್ಷಯಾನ ಚರಿತ್ರೆಯ ಬಗ್ಗೆ ಮಾಹಿತಿ ಇದ್ದರೂ, ಈ ಸಾಹಸಗಾಥೆಯ ವೈಜ್ಞಾನಿಕ ತಳಹದಿಯ ಬಗ್ಗೆ ಹೆಚ್ಚಿನ ಮಾಹಿತಿ ದೊರೆಯುವುದಿಲ್ಲ.

ನಾಗರಾಜು ಬರೆದಿರುವ "ರಸವಿದ್ಯೆಯಿಂದ ನ್ಯಾನೋ ತಂತ್ರಜ್ಞಾನದವರೆಗೆ" ರಸಾಯನಶಾಸ್ತ್ರಕ್ಕೆ ಸಂಬಂಧಿಸಿದ ಮೊದಲ ಲೇಖನ. ನಾಗರಾಜುರವರು ಸಮರ್ಥ ವಿಜ್ಞಾನ ಬೋಧಕರು ಮತ್ತು ಬಹಳ ಅನುಭವವುಳ್ಳ ಸಂವಹನಕಾರರು. ಇವರಿಗೆ ವಿಜ್ಞಾನವನ್ನು ಕನ್ನಡದಲ್ಲಿ ಬರೆಯುವುದು ನೀರು ಕುಡಿದಷ್ಟು ಸುಲಭ. ಆದ್ದರಿಂದ ಇವರಿಂದ ಅತ್ಯುನ್ನತ ಮಟ್ಟದ ಲೇಖನವನ್ನು ನಿರೀಕ್ಷಿಸುವುದು ಸಹಜ. ಆದರೆ ರಸಾಯನಶಾಸ್ತ್ರದ ಪೂರ್ಣ ವಿಸ್ತಾರವನ್ನು ಪುಟ್ಟ ಲೇಖನದಲ್ಲಿ ಸೆರೆಹಿಡಿಯುವ ಇವರ ಪ್ರಯತ್ನದಲ್ಲಿ ಅನೇಕ ಮಹತ್ವದ ಸಂಗತಿಗಳು ಬಿಟ್ಟುಹೋಗಿವೆ. ಲೀನಸ್ ಪೌಲಿಂಗರ ಸಂಶೋಧನೆಗಳನ್ನು ಉಲ್ಲೇಖಿಸದೆ ರಾಸಾಯನಿಕ ಬಂಧಗಳಿಗೆ ಹೇಗೆ ತಾನೆ ವೈಜ್ಞಾನಿಕ ವಿವರಣೆ ಕೊಡಲು ಸಾಧ್ಯ ? "ಪ್ರೋಟಾನ್ ಮತ್ತು ನ್ಯೂಟ್ರಾನ್ ಕಣಗಳು ಇನ್ನೂ ಸಣ್ಣ ಕಣಗಳಾಗಿ ಬದಲಾಗುತ್ತವೆ" ಎನ್ನುವುದು ಸರಿಯಲ್ಲ. ನ್ಯೂಟ್ರಾನ್ ಒಡೆದು ಪ್ರೋಟಾನ್ ಮತ್ತು ಎಲೆಕ್ಟ್ರಾನ್ ಆಗಿ ಪರಿವರ್ತನೆಯಾಗುವುದನ್ನು ಪ್ರಾಯೋಗಿಕವಾಗಿ ತೋರಿಸಲಾಗಿದೆ. ಪ್ರೋಟಾನ್ ಅತ್ಯಂತ ಸ್ಥಿರ ಕಣ. ಇದು ಇನ್ನೂ ಸಣ್ಣ ಕಣಗಳಾಗಿ ಒಡೆಯುವುದನ್ನು ಪ್ರಾಯೋಗಿಕವಾಗಿ ಕಂಡಿಲ್ಲ. ಸಣ್ಣ ಅಣುಗಳ ರಾಸಾಯನಿಕ ಅಧ್ಯಯನದಿಂದ ನ್ಯಾನೋ ತಂತ್ರಜ್ಞಾನ ಹೇಗೆ ಪ್ರಾರಂಭವಾಯಿತು, ಎನ್ನುವುದು ಕೂಡ ಲೇಖನದಿಂದ ತಿಳಿದುಬರುವುದಿಲ್ಲ. ಬರಹದ ವ್ಯಾಪ್ತಿಯನ್ನು ಕಡಿಮೆ ಮಾಡಿದ್ದರೆ, ಲೇಖನ ಇನ್ನೂ ಹೆಚ್ಚು ಅರ್ಥಪೂರ್ಣವಾಗಿರುತ್ತಿತ್ತು.

ರಾಸಾಯನಿಕ ವಿಜ್ಞಾನದ ಎರಡನೆಯ ಬರಹ ಗೋಪಾಲಪುರ ನಾಗೇಂದ್ರಪ್ಪರ "ಕಾರ್ಬನಿಕ ರಸಾಯನ ವಿಜ್ಞಾನ ಪ್ರಪಂಚ", ಈ ಶಾಖೆಯ ಮೈಲುಗಲ್ಲುಗಳನ್ನು ದಾಖಲಿಸುತ್ತದೆ. ಆದರೆ, ಕಾರ್ಬನಿಕ ರಸಾಯನಶಾಸ್ತ್ರ ಮತ್ತು ಅಕಾರ್ಬನಿಕಶಾಸ್ತ್ರ ಏಕೆ ಮತ್ತು ಹೇಗೆ ಭಿನ್ನ ಎನ್ನುವುದನ್ನು (ಅನೇಕ ಪರಮಾಣುಗಳೊಡನೆ ವಿವಿಧ ಬಗೆಯ ರಾಸಾಯನಿಕ ಬಂಧದಲ್ಲಿ ತೊಡಗಿಸಿಕೊಳ್ಳುವ ಇಂಗಾಲದ ಗುಣ ಕಾರ್ಬನಿಕ ರಸಾಯನಶಾಸ್ತ್ರದ ಮುಖ್ಯ ವಿಶೇಷ) ಸ್ಪಷ್ಟವಾಗಿ ವಿವರಿಸುವುದಿಲ್ಲ. NMR ಸ್ಪೆಕ್ಟ್ರಾಸ್ಕೋಪಿಯನ್ನು ವಿವರಿಸುವಾಗ ಎಂ. ಆರ್. ಐ. (Magnetic Resonance Imaging) ಯಂತ್ರದ ಚಿತ್ರ ತೋರಿಸಿರುವುದು ಪ್ರಸ್ತುತವಲ್ಲ. ಈ ಯಂತ್ರವನ್ನು ವೈದ್ಯಕೀಯ ತಪಾಸಣೆಗೆ ಬಳಸುತ್ತಾರೆ. ರಸಾಯನಶಾಸ್ತ್ರಕ್ಕೆ ಇದರ ಕೊಡುಗೆ ಹೆಚ್ಚಿಲ್ಲ. ಈ ಚಿತ್ರದ ಬದಲಿಗೆ, ಲೇಖಕರು NMR ಯಂತ್ರದ ಮಾದರಿ ತೋರಿಸಿ, ಅದು ಕಾರ್ಯಮಾಡುವ ತತ್ವವನ್ನು ವಿವರಿಸಬೇಕಿತ್ತು. ಹಾಗೆಯೇ, ದ್ರವ್ಯರಾಶಿ ವರ್ಗೀಕರಣ (mass spectrometer) ಯಂತ್ರದ ಚಿತ್ರ ತೋರಿಸಿದ್ದರೂ, ಈ ಯಂತ್ರದಿಂದ ರಸಾಯನಶಾಸ್ತ್ರಕ್ಕೆ ಆಗಿರುವ ಉಪಯೋಗಗಳನ್ನು ವಿವರಿಸಿಲ್ಲ.

ರಸಾಯನಶಾಸ್ತ್ರಕ್ಕೆ ಸಂಬಂಧಿಸಿದ ಕಡೆಯ ಲೇಖನ ವೇಣುಗೋಪಾಲ್ ಮತ್ತು ಜೈ ಪ್ರಕಾಶ್‌ರವರ "ಪಾಲಿಮರ್ ಜಗತ್ತು – ಆಟಿಕೆಗಳಿಂದ ಯುದ್ಧೋಪಕರಣಗಳವರೆಗೆ" ಈಗ ಬಳಕೆಯಲ್ಲಿರುವ ಎಲ್ಲ ಪಾಲಿಮರುಗಳ ಬಗ್ಗೆ ವಿಸ್ತೃತ ಮಾಹಿತಿ ನೀಡುವುದೇ ಅಲ್ಲದೆ, ಈ ಪಾಲಿಮರುಗಳ ಸಂಶ್ಲೇಷಣೆಯ ಹಿಂದಿರುವ ರಸಾಯನ ತತ್ವಗಳ ಪರಿಚಯವನ್ನೂ ಮಾಡಿಕೊಡುತ್ತದೆ. ಬಹು ಹಿಂದಿನಿಂದ ಬಳಕೆಯಲ್ಲಿರುವ ಲೋಹಗಳ ಉತ್ಪನ್ನಗಳನ್ನು ಸಂಶ್ಲೇಷಿತ ಪಾಲಿಮರುಗಳಿಂದ ಮಾಡಿದ ಉತ್ಪನ್ನಗಳು ಬದಿಗೊತ್ತುತ್ತಿರುವ ಕಾರಣವನ್ನು ತಿಳಿಸಿಕೊಡುತ್ತದೆ. ಜೊತೆಗೇ, ಪ್ರಕೃತಿಯಲ್ಲಿ ಸಹಜವಾಗಿ ದೊರಕುವ ಹತ್ತಿ, ರೇಶ್ಮೆ ಮತ್ತು ರಬ್ಬರಿನಂತಹ ನೈಸರ್ಗಿಕ ಪಾಲಿಮರುಗಳ ರಾಸಾಯನಿಕ ರಚನೆಯ ಬಗ್ಗೆಯೂ ಮಾಹಿತಿ ನೀಡುತ್ತದೆ. ಇತ್ತೀಚೆಗೆ ಲಭ್ಯವಾಗಿರುವ ವಿದ್ಯುತ್ ವಾಹಕ ಪಾಲಿಮರುಗಳ ಪರಿಚಯ ಮಾಡಿಸುವುದರೊಂದಿಗೆ ಕೊನೆಗೊಳ್ಳುವ ಈ ಲೇಖನ ಪಾಲಿಮರುಗಳ ಪ್ರಾಮುಖ್ಯತೆಯನ್ನು ಎತ್ತಿ ತೋರಿಸುತ್ತದೆ.

ಸಸ್ಯಶಾಸ್ತ್ರದ ಎರಡೂ ಲೇಖನಗಳು ರಾಜಗೋಪಾಲರ ಅಮೂಲ್ಯ ಕೊಡುಗೆಗಳು. ಮೊದಲ ಲೇಖನ ರಾಜಗೋಪಾಲರ "ಅರಿವಿನ ಸೀಮೆಯ ವಿಸ್ತರಣೆ" ಸಸ್ಯಗಳ ವಿಂಗಡನೆಯ ಚಾರಿತ್ರಿಕ ಹಿನ್ನೆಲೆಯೊಂದಿಗೆ ಪ್ರಾರಂಭಿಸಿ, ಲಿನ್ನಿಯಸ್ಸನ ವರ್ಗೀಕರಣದವರೆಗಿನ ಅನೇಕ ಸಂಶೋಧನೆಗಳ ಚರಿತ್ರೆಯನ್ನು ಪರಿಚಯಿಸುತ್ತದೆ. ನಂತರ, ಲೇಖನ ನೂತನ ಅಣುಜೀವಶಾಸ್ತ್ರದ ಅನ್ವೇಷಣೆಗಳತ್ತ ತಿರುಗಿ ಕೊನೆಯಲ್ಲಿ ಪುನಃ ಅಣುಜೀವಶಾಸ್ತ್ರದಿಂದ ಸಸ್ಯಶಾಸ್ತ್ರದಲ್ಲಿ ಆಗಿರುವ ಬೆಳವಣಿಗೆಗಳಿಗೆ ಹಿಂದಿರುಗುತ್ತದೆ. ಅಣುಜೀವಶಾಸ್ತ್ರದ ತಂತ್ರಗಳಿಂದ ಹೊಸ ರೋಗನಿರೋಧಕ ಶಕ್ತಿಯುಳ್ಳ, ಹೆಚ್ಚು ಇಳುವರಿ ಕೊಡುವ, ಮಾನವನ ಆರೋಗ್ಯಕ್ಕೆ ಸಹಕಾರಿಯಾದ ಅಂಶಗಳನ್ನು ಹೊಂದಿರುವ ಸಸ್ಯಗಳ ಅಭಿವೃದ್ಧಿ ಹೇಗೆ ಸಾಧ್ಯ ಎನ್ನುವುದನ್ನು ಸರಳವಾಗಿ ನಿರೂಪಿಸುತ್ತದೆ. ಈ ಹೊತ್ತಿಗೆಯ ಇತರ ಕೆಲ ಲೇಖನಗಳು ಅಣುಜೀವಶಾಸ್ತ್ರದ ಬಗ್ಗೆ ಮಾಹಿತಿ ನೀಡಿರುವುದರಿಂದ, ಈ ಲೇಖನ ಸಸ್ಯಶಾಸ್ತ್ರವನ್ನಷ್ಟೆ ಗುರಿಯಾಗಿರಿಸಿಕೊಂಡು, ಸಸ್ಯಗಳ ವೈವಿಧ್ಯತೆ, ಕುತೂಹಲ ಕೆರಳಿಸುವ ಸಸ್ಯಗಳು, ಸಸ್ಯೋತ್ಪನ್ನಗಳು, ನಾವು ಸಸ್ಯಗಳನ್ನು ಬಳಸಿಕೊಂಡಿರುವ (ಆಹಾರ, ಆರೋಗ್ಯ, ಅಮಲು) ವಿಧಾನಗಳಿಗೇ ಮೀಸಲಾಗಿದ್ದರೆ ಹೊತ್ತಿಗೆಗೆ ಇನ್ನೂ ಹೆಚ್ಚು ಹೊಂದಿಕೆ ಆಗುತ್ತಿತ್ತು ಎನಿಸುತ್ತದೆ. ಎರಡನೆಯ ಲೇಖನ "ಹಾರ್ಮೋನುಗಳು: ಸಸ್ಯ ಚಟುವಟಿಕೆಯ ಪ್ರಚೋದಕಗಳು" ಸಸ್ಯ ಹಾರ್ಮೋನುಗಳ ಸಮಗ್ರ ಚಿತ್ರಣ ನೀಡುತ್ತದೆ. ಹಾರ್ಮೋನುಗಳು ಸಸ್ಯಗಳಲ್ಲೂ, ಪ್ರಾಣಿಗಳಲ್ಲೂ ಬಹು ಕಡಿಮೆ ಪ್ರಮಾಣದಲ್ಲಿದ್ದು, ಬಹು ದೊಡ್ಡ ಕ್ರಿಯಾ ಸರಣಿಗಳನ್ನು ನಿಯಂತ್ರಿಸುತ್ತವೆ, ಆದ್ದರಿಂದ ಅವುಗಳಿಂದ ನಾಟಕೀಯ (dramatic) ಎನ್ನಿಸುವ ಜೈವಿಕ ಬದಲಾವಣೆಗಳಾಗುತ್ತವೆ. ಹಾರ್ಮೋನುಗಳ ಆವಿಷ್ಕಾರ, ಅದಕ್ಕೆ ಕಾರಣರಾದ ವಿಜ್ಞಾನಿಗಳು, ಹಾರ್ಮೋನುಗಳು ಗಿಡಗಳ ಬೆಳವಣಿಗೆಯ ಮೇಲೆ ಉಂಟುಮಾಡುವ ಗಾಢ ಪರಿಣಾಮ, ಇವುಗಳ ಕ್ರಿಯೆಗಳ ಬಗ್ಗೆ ಅಣುಜೀವಶಾಸ್ತ್ರದಿಂದ ಇತ್ತೀಚೆಗೆ ದೊರೆಯುತ್ತಿರುವ ಹೆಚ್ಚಿನ ಮಾಹಿತಿ, ಮುಂತಾದ ಎಲ್ಲವನ್ನೂ ಸರಳ ಭಾಷೆಯಲ್ಲಿ ರಾಜಗೋಪಾಲರು ವಿವರಿಸಿದ್ದಾರೆ.




ಜೀವವಿಜ್ಞಾನದ ಎರಡು ಲೇಖನಗಳನ್ನು ಎನ್. ಎಸ್. ಲೀಲಾರವರು ಬರೆದಿದ್ದಾರೆ. ಮೊದಲ ಲೇಖನ "ಜೀವಲೋಕದ ಅನಾವರಣ – ಪರಿಕಲ್ಪನೆಯಿಂದ ಪ್ರಯೋಗದವರೆಗೆ" ಜೀವವಿಜ್ಞಾನ ಬೆಳೆದುಬಂದ ಚರಿತ್ರೆಯ ದಾಖಲೆ. ಈ ಚರಿತ್ರೆಯಲ್ಲಿ ಆಗಾಗ್ಗೆ ಮೂಡಿಬಂದ ಹಲವಾರು ಪರಿಕಲ್ಪನೆಗಳು, ನಂತರದ ಪ್ರಯೋಗಗಳ ಫಲವಾಗಿ ಸರಿಯಲ್ಲ ಎನಿಸಿಕೊಂಡು, ಇಂದಿನ ವೈಜ್ಞಾನಿಕ ಸಾಹಿತ್ಯದಿಂದ ಕಣ್ಮರೆಯಾಗಿವೆ. ಇಂತಹ ಪರಿಕಲ್ಪನೆಗಳನ್ನೆಲ್ಲಾ ಹುಡುಕಿ ತಾರ್ಕಿಕವಾಗಿ ಜೋಡಿಸಲು ಬರಹಗಾರರು ಬಹಳ ಶ್ರಮ ಪಟ್ಟಿದ್ದಾರೆ. ಆದರೆ ಬಳಸಿರುವ ಕನ್ನಡದಲ್ಲಿ ಹಲವಾರು ದೋಷಗಳು ಸೇರಿಕೊಂಡಿವೆ. ಉದಾಹರಣೆಗೆ "ಗ್ರೀಸ್ ನಾಗರಿಕತೆಯಲ್ಲಿ ಅಥೇನ್ಸ್‌ನಲ್ಲಿ ಪ್ರಗತಿಪರ ಚಿಂತಕರನ್ನು ವಿಶ್ವಮಾನ್ಯತೆಯ ಮಟ್ಟಕ್ಕೆ ಏರಿಸಿದ್ದು ಗಮನಾರ್ಹ" ಎಂಬ ವಾಕ್ಯಕ್ಕಿಂತ "ಗ್ರೀಸಿನ ಪ್ರಗತಿಪರ ಚಿಂತಕರು ವಿಶ್ವಮಾನ್ಯತೆಯನ್ನು ಪಡೆದಿದ್ದಾರೆ" ಹೆಚ್ಚು ಸೂಕ್ತ. ಈ ವಾಕ್ಯ ನೇರವಾಗಿ ಜೀವವಿಜ್ಞಾನಕ್ಕೆ ಸಂಬಂಧಿಸಿಲ್ಲದಿರಬಹುದು. ಆದರೆ, ಇದೇ ರೀತಿ ಅರ್ಥದಲ್ಲಿ ಬದಲಾವಣೆಯನ್ನು ತರುವ ವಾಕ್ಯಗಳು

*With Best Compliments From*



# THE MANJESHWAR SERVICE CO-OP. BANK LTD., C.323.

**HEAD OFFICE, MANJESHWAR - 671 323 ☎ 04998 - 275222; 275177**

Email: manjeshwarscb@gmail.com

## CLASS I SUPER GRADE BANK

Fully Computerised Co.operative Bank

*Branches*

| | |
|---|---|
| **Main** | ☎ **04998 - 272222, 272122** |
| **Hosangadi** | ☎ **04998 - 272622 (Morning & Evening)** |
| **Kunjathur** | ☎ **04998 - 279381** |
| **Udyawar** | ☎ **04998 - 274822** |
| **Badaje** | ☎ **04998 - 274722** |
| **Kunjathur** | ☎ **04998 - 279322 (Evening)** |

- **Core Banking Facility is available**
- **NEFT / RTGS Facility is available**
- **Locker Facility is available at reasonable rates**
- **Coirfed Products for sale with special discount rates**
- **Western union money transfer facility is available**

Attractive Interest Rates on Deposits

All Banking Facilities Offered.
Render Quick, Prompt and Courteous Service

B. M. ANANTHA
President
(Mob : 9446027333)

RAJAN NAIR P
Secretary in charge
(Mob : 9446953619)

ಜೀವವಿಜ್ಞಾನವನ್ನು ವಿವರಿಸುವ ಇತರ ಕಡೆಯೂ ಇವೆ. ಬರಹವನ್ನು ಪೂರ್ಣಗೊಳಿಸುತ್ತ ಲೇಖಕರು ಕೇಳಿಕೊಂಡಿರುವ ಪ್ರಶ್ನೆ "ಆದರೆ ಈ ನಿಯಂತ್ರಣದ ಕೀಲಿಕೈ ಯಾರ ಕೈಯಲ್ಲಿದೆ, ಎನ್ನುವ ಪ್ರಶ್ನೆಗೆ ಉತ್ತರವಿಲ್ಲ" ಎನ್ನುವುದನ್ನು ಹೆಚ್ಚಿನ ಜೀವಶಾಸ್ತ್ರಜ್ಞರು ಒಪ್ಪುವುದಿಲ್ಲ. "ಲಕ್ಷಾಂತರ ಅಣು ಸಮೂಹಗಳ ಸಂಕೀರ್ಣ ವ್ಯವಸ್ಥೆಯೇ ಜೀವಕೋಶದ ಗುಣಗಳನ್ನು, ವರ್ತನೆಯನ್ನು ನಿಯಂತ್ರಿಸುತ್ತದೆ. ಇದರ ಹೊರತಾಗಿ ಇನ್ನಾವ ಕೀಲಿಕೈ ಇಲ್ಲ" ಎಂದೇ ಇಂದಿನ ಜೀವಶಾಸ್ತ್ರದ ತೀರ್ಮಾನ. ಲೀಲಾರವರ ಎರಡನೆಯ ದೀರ್ಘ ಲೇಖನ ಜೀನ್‌ನಿಂದ ಹ್ಯೂಮನ್ ಜೀನೋಮ್‌ವರೆಗೆ – ಅನ್ವೇಷಣೆಯ ಮಹಾಯಾನ" ೨೦ ಮತ್ತು ೨೧ನೆಯ ಶತಮಾನಗಳಲ್ಲಿ ನಡೆದ ಜೀವವಿಜ್ಞಾನ ಸಂಶೋಧನೆಗಳ ವಿವರಣೆ ನೀಡುತ್ತದೆ. ಆದರೆ ಸಂಶೋಧನೆಗಳ ವಿವರಣೆಯಲ್ಲಿ ಸಮರ್ಪಕ ಜೋಡಣೆ ಇಲ್ಲದಿರುವುದರಿಂದ ಜೀವವಿಜ್ಞಾನದ ಪರಿಚಯ ಇರುವವರಿಗೆ ಸರಳ ಎನ್ನಿಸಬಹುದಾದರೂ, ಈ ಹಿನ್ನೆಲೆ ಇಲ್ಲದವರು ಗ್ರಹಿಸಲಾರರು ಎನ್ನುವ ಅನುಮಾನ ಮೂಡಿಸುತ್ತದೆ. ಲೇಖನದ ಕೊನೆಯಲ್ಲಿ ತೋರಿಸಿರುವ "ಜೀವ ಅಣುರಹಸ್ಯ ಅನಾವರಣದ ಪ್ರಮುಖ ಘಟ್ಟ"ಗಳ ಚಿತ್ರದಲ್ಲಿ ಕೆಲವು ಸಂಶೋಧನೆಗಳಿಗೆ ಅದು ನಡೆದ ವರ್ಷವನ್ನೂ, ಇನ್ನು ಕೆಲವು ಸಾಧನೆಗಳಿಗೆ ಪುರಸ್ಕಾರ ದೊರೆತ ವರ್ಷವನ್ನೂ ತೋರಿಸಿರುವುದು ಗೊಂದಲ ಹುಟ್ಟಿಸಬಹುದು. ನೂತನ ಜೀವವಿಜ್ಞಾನದ ಸಮಗ್ರ ಮಾಹಿತಿಯನ್ನು ಲೇಖಕರು ಸಂಗ್ರಹಿಸಿದ್ದಾರೆ. ಆದರೆ ಈ ಮಾಹಿತಿಗಳ ಹಿನ್ನೆಲೆಯನ್ನು ಒದಗಿಸಿ, ಸೂಕ್ತ ಜೋಡಣೆ ಮಾಡುವ ಅಗತ್ಯ ಇದೆ ಎನ್ನಿಸುತ್ತದೆ.

ನಾ. ಸೋಮೇಶ್ವರರು ವೈದ್ಯಕೀಯ ವಿಜ್ಞಾನಕ್ಕೆ ಸಂಬಂಧಿಸಿದ ಎರಡು ಲೇಖನಗಳನ್ನು ಬರೆದಿದ್ದಾರೆ. ಇವರು ನಡೆಸಿಕೊಡುವ "ಥಟ್ಟಂತ ಹೇಳಿ" ಕಾರ್ಯಕ್ರಮ ಅತ್ಯಂತ ಜನಪ್ರಿಯವಾಗಿದ್ದು ಕನ್ನಡದ ಜನರಿಗೆಲ್ಲ ಇವರ ಪರಿಚಯವಿದೆ. ಈ ಕಾರ್ಯಕ್ರಮ ವೈದ್ಯವಿಜ್ಞಾನದ ಬಗ್ಗೆ ಅಲ್ಲವಾದರೂ, ಅವಕಾಶ ಬಂದಾಗ ಆರೋಗ್ಯ ಕಾಪಾಡಿಕೊಳ್ಳುವ ಬಗ್ಗೆ ಸಲಹೆಗಳನ್ನು ಕೊಡುತ್ತಿರುತ್ತಾರೆ. ಆಸ್ಪತ್ರೆಗೆ ಏಕೆ ಭೇಟಿಕೊಡಬೇಕು ಮತ್ತು ಅಲ್ಲಿ ಏನನ್ನು ನಿರೀಕ್ಷಿಸಬಹುದು ಎನ್ನುವುದೇ ಇವರ ಲೇಖನವನ್ನು ಓದಿದ ಮೇಲೆ ಬದಲಾಗಬಹುದು. ಮೊದಲ ಲೇಖನದಲ್ಲಿ ವೈದ್ಯವಿಜ್ಞಾನದ ಬೆಳವಣಿಗೆ, ಅದರ ಮಹಾ ತಿರುವುಗಳನ್ನು ಗುರುತಿಸುವುದರೊಟ್ಟಿಗೇ, ಆರೋಗ್ಯಶಾಸ್ತ್ರದ ತತ್ವಗಳನ್ನೂ ಪರಿಚಯ ಮಾಡಿಕೊಟ್ಟಿದ್ದಾರೆ. ಇಂದಿನ ವೈದ್ಯರು ಉಪಯೋಗಿಸುವ ಸಲಕರಣೆಗಳ ಉಗಮ, ಅವರು ಕೊಡುವ ಚಿಕಿತ್ಸೆಗಳ ಚರಿತ್ರೆ, ಹಿಂದೆ ವೈದ್ಯರು ತಾವು ಎಸಗಿದ ತಪ್ಪುಗಳಿಂದ ಕಲಿತ ಪಾಠ, ಎಲ್ಲಕ್ಕೂ ಸರಳ ವಿವರಣೆಯಿದೆ. ತಮಗೆ ಗೊತ್ತಿರುವ ವಿಷಯಗಳನ್ನೆಲ್ಲಾ ಲೇಖನದಲ್ಲಿ ಸೇರಿಸದೆ, ಓದುಗರಿಗೆ ಉಪಯುಕ್ತವಾಗಬಹುದು ಎನ್ನುವಂತಹ ಮಾಹಿತಿಯನ್ನು ಮಾತ್ರ ಸೇರಿಸುವ ಸೂಕ್ಷ್ಮತೆಯನ್ನು ಲೇಖಕರು ಪ್ರದರ್ಶಿಸಿದ್ದಾರೆ. ಉದಾಹರಣೆಗೆ, ವಿದ್ಯುನ್ ಮಸ್ತಿಷ್ಕ ಲೇಖನದ (electro encephalo graph) ವಿವರಣೆಯಲ್ಲಿ, ಅದರ ಉಪಯೋಗವನ್ನು ವಿವರಿಸಿ, ಕಾರ್ಯವಿಧಾನದ ತಾಂತ್ರಿಕ ಮಾಹಿತಿಯನ್ನು ಕೈಬಿಟ್ಟಿದ್ದಾರೆ. ಎರಡನೆಯ ಲೇಖನದಲ್ಲಿ ಸೋಮೇಶ್ವರರು ಸದ್ಯದಲ್ಲೇ ಬರಲಿರುವ (ಬರದೆಯೂ ಇರಬಹುದಾದ) ಆಳ ತಾಂತ್ರಿಕ (ಹೈಟೆಕ್) ವೈದ್ಯಕೀಯ ಚಿಕಿತ್ಸೆಗಳ ಕಿರು ಪರಿಚಯವನ್ನು ಮಾಡಿಕೊಟ್ಟಿದ್ದಾರೆ. ಜೀವ ವಿಜ್ಞಾನದ ಕೊಡುಗೆಯಾದ ತಳಿ ಮಾಹಿತಿ ಮತ್ತು ಈ ಅಗಾಧ ತಳಿ ಮಾಹಿತಿಯನ್ನು ಸಂಗ್ರಹಿಸಿ ಇರಿಸಿಕೊಳ್ಳುವ, ಅವುಗಳನ್ನು ಹೆಚ್ಚು ಸಮಯ ತೆಗೆದುಕೊಳ್ಳದೆ ಪರಿಶೀಲಿಸುವ ಸಾಮರ್ಥ್ಯವುಳ್ಳ ಕಂಪ್ಯೂಟರುಗಳ ಲಭ್ಯತೆಯಿಂದ ಈ ಹೊಸ ಬಗೆಯ ಚಿಕಿತ್ಸೆಗಳು ಸಾಧ್ಯ ಎನ್ನುವುದನ್ನು ಸ್ಪಷ್ಟಪಡಿಸಿದ್ದಾರೆ. ಹಾಗೆಯೇ ಹೊಸ ಚಿಕಿತ್ಸೆಗಳೆಲ್ಲ ಫಲಕಾರಿಯಾಗುತ್ತದೆಂಬ ಭರವಸೆ ನೀಡದೆ, ಭವಿಷ್ಯತ್ತಿನ ಸಾಧ್ಯತೆಗಳ ಬಗ್ಗೆ ಸಂಶಯ ತೋರಿದ್ದಾರೆ. ಹೊಸ "ಹೈ ಟೆಕ್" ಚಿಕಿತ್ಸೆಗಳ ಅಧಿಕ ವೆಚ್ಚದಿಂದಾಗಿ ಜನಸಾಮಾನ್ಯರಿಗೆ ಅವು ಎಟುಕದಿರಬಹುದು ಎನ್ನುವ ಎಚ್ಚರಿಕೆಯನ್ನೂ ಕೊಟ್ಟಿದ್ದಾರೆ. ಮುಂದಿನ ಪೀಳಿಗೆಯ ಸ್ವಾಸ್ಥ್ಯಕ್ಕೆ ಹಾನಿ ಮಾಡಬಹುದಾದ ಪರಿಸರ ಮಾಲಿನ್ಯ, ಮಾದಕ ದ್ರವ್ಯಗಳ ಬಳಕೆ, ಶ್ರೀಮಂತಿಕೆಯೇ ಜೀವನದ ಪರಮಧ್ಯೇಯವೆಂಬ ಮಾನಸಿಕ ಸ್ಥಿತಿ, ಕುಟುಂಬ ವ್ಯವಸ್ಥೆಯ ಕುಸಿತ, ಮನುಷ್ಯರನ್ನು ಒಬ್ಬಂಟಿಯಾಗಿಸುವ ಜೀವನ ವಿಧಾನ, ಮುಂತಾದ ಹಲವಾರು ವಿದ್ಯಮಾನಗಳಿಗೆ ಕಳವಳ ವ್ಯಕ್ತಪಡಿಸಿದ್ದಾರೆ. ಮೊದಲ ಲೇಖನದಂತೆ ಇದೂ ಸರಳ ನಿರೂಪಣೆಯಾಗಿದೆ. ವಿಜ್ಞಾನಕ್ಕೆ ಸಂಬಂಧಿಸಿದ ಮಾಹಿತಿಯನ್ನು ಹೇಗೆ ತಿಳಿಸಬೇಕು ಅನ್ನುವುದಕ್ಕೆ ಇವರ ಲೇಖನ ಮಾದರಿಯಾಗಿದೆ. ಇದರಲ್ಲಿ ಒಂದು ಮಾಹಿತಿ ಮಾತ್ರ ಸರಿಯಲ್ಲ ಎನಿಸಿತು. ಗೊರಿಲ್ಲ, ಚಿಂಪಾಂಜಿ ಮತ್ತು ಬೋನಬೋ ವಾನರಗಳ ತಳಿ ನಕ್ಷೆ ಲಭ್ಯವಾದ ನಂತರ ಮಾನವ ತಳಿ ನಕ್ಷೆ ಲಭಿಸಿದೆ ಎಂಬ ಅನಿಸಿಕೆಯನ್ನು ಲೇಖನ ನೀಡುತ್ತದೆ. ಆದರೆ ಮಾನವ ತಳಿ ನಕ್ಷೆಯನ್ನು ಇತರ ಅನೇಕ ಸ್ತನಿಗಳ ನಕ್ಷೆಗಿಂತ ಮೊದಲೇ ನಿರ್ಧರಿಸಲಾಯಿತು.

ಪ್ರಕಾಶ್ ರಾವ್‌ರವರ ಲೇಖನ "ಔಷಧಿ ಸಂಶೋಧನೆಯ ಮಹಾಮಜಲುಗಳು", ವಿಪುಲ ಮಾಹಿತಿಯನ್ನು ಅನೇಕ ಮೂಲಗಳಿಂದ ಸಂಗ್ರಹಿಸಿ, ಅದನ್ನು ಜತನದಿಂದ ಜೋಡಿಸದೆ ಪ್ರಕಟಣೆಗೆ ಕಳಿಸಿರುವಂತಿದೆ. ಲೇಖನದ ಸಾರಾಂಶ "ಔಷಧಿಯ ಅನ್ವೇಷಣೆ ತೀರ ಇತ್ತೀಚಿನವರೆಗೂ ವೈಜ್ಞಾನಿಕ ಎಂದು ಕರೆಯಬಹುದಾದ ಮಾರ್ಗವನ್ನು ಅನುಸರಿಸು ತ್ತಿರಲಿಲ್ಲ. ಎಲ್ಲ ನಾಗರಿಕ ಸಮಾಜಗಳಲ್ಲಿಯೂ ಜನ ಆಕಸ್ಮಿಕವಾಗಿ ಹಲವಾರು ಔಷಧಿಗಳನ್ನು ಗುರುತಿಸಿದ್ದರು. ಕೆಲವು ಉಪಯುಕ್ತ ಔಷಧಿಗಳು ಇರಬಹುದಾದರೂ, ಆಯುರ್ವೇದ ಮತ್ತು ಹೋಮಿಯೋಪತಿಗಳಿಗೆ ಭದ್ರವಾದ ವೈಜ್ಞಾನಿಕ ಬುನಾದಿ ಇಲ್ಲ. ವೈಜ್ಞಾನಿಕ ಮಾರ್ಗ ಅನುಸರಿಸಿ ಔಷಧಿಗಳನ್ನು ಸಂಪಾದಿಸುವುದು ಇತ್ತೀಚೆಗಷ್ಟೇ ಸಾಧ್ಯವಾಗಿದೆ. ಇಂದಿನ ಮಾರುಕಟ್ಟೆಯಲ್ಲಿ ಹೆಚ್ಚಿನ ಔಷಧಿಗಳು ಅಗತ್ಯ ಎನ್ನುವುದಕ್ಕಿಂತ ಇವನ್ನು ತಯಾರಿಸುವ ಸಂಸ್ಥೆಗಳಿಗೆ ಲಾಭ ತಂದುಕೊಡುತ್ತಿವೆ ಎನ್ನುವ ಕಾರಣದಿಂದಲೇ ಬಿಕರಿಯಾಗುತ್ತಿವೆ. ಇದನ್ನು ಸರ್ಕಾರ ನಿಯಂತ್ರಿಸಬೇಕು." ಆದರೆ ಈ ಸಾರಾಂಶವನ್ನು ನಾವು ಹೆಕ್ಕಿ ತೆಗೆಯಬೇಕೇ ಹೊರತು ಲೇಖನ ನೇರವಾಗಿ ನಮ್ಮ ಗಮನಕ್ಕೆ ತರುವುದಿಲ್ಲ. ಲೇಖನದ ಕೊರತೆಯ ಕೆಲವು ಉದಾಹರಣೆಗಳು: "ಕ್ರಿ. ಶ. ೧೯೦೦ರಿಂದ ೨೦೦೦ ಇಸವಿಯವರೆಗಿನ ಔಷಧಿ ಸಂಶೋಧನೆಗಳು" ಶೀರ್ಷಿಕೆಯ ಅಡಿಯಲ್ಲಿ ಕೆಲ ವಿಷಯಗಳನ್ನು ಪ್ರಸ್ತಾಪಿಸಿದ ನಂತರದ ಭಾಗಗಳು ನಮ್ಮನ್ನು ಮತ್ತೆ ಪುರಾತನ ಕಾಲಕ್ಕೆ ಕೊಂಡೊಯ್ಯುತ್ತವೆ ! "ಭಾರತದಲ್ಲಿ ಔಷಧಿ ಸಂಶೋಧನೆಯಲ್ಲಾದ ತಿರುವುಗಳು" ಶೀರ್ಷಿಕೆಯ ಅಡಿಯಲ್ಲಿ ಪ್ರಧಾನವಾಗಿ ವಿವರಿಸಲ್ಪಟ್ಟಿರುವುದು ಮಾರುಕಟ್ಟೆಯಲ್ಲಿ ದೊರೆಯುವ ಔಷಧಗಳ ಬಗ್ಗೆ ವಿಶ್ವ ಆರೋಗ್ಯ ಸಂಸ್ಥೆಯ ನಿಲುವು. ಲೇಖನವನ್ನು ಓದಿ ಮುಗಿಸಿದ ಮೇಲೆ "ಮೊತ್ತಮೊದಲ ಔಷಧ ಗ್ರಂಥ" ಯಾವುದು ಎನ್ನುವುದು ಪ್ರಶ್ನೆಯಾಗಿಯೇ ಉಳಿಯುತ್ತದೆ. ಲೇಖನದಲ್ಲಿ ಮಾನವರ ವಂಶವಾಹಿ ಮಾಹಿತಿಯಲ್ಲಿ ೧೨,೦೦೦ದಿಂದ ೧೪,೦೦೦ ಜೀನುಗಳಿವೆ ಎಂದು ಹೇಳಿರುವುದು ಸರಿಯಲ್ಲ. ಜೀನುಗಳ ಸಂಖ್ಯೆ ಇದರ ಎರಡು ಪಟ್ಟಾದರೂ ಇದೆ. ಅದಲ್ಲದೇ, ಜೀನುಗಳ ಮಾಹಿತಿ ಪ್ರೋಟೀನ್ ಅಣುಗಳಲ್ಲಿ ವ್ಯಕ್ತವಾಗುವ ಕ್ರಿಯೆಯ ವಿಧಾನದಿಂದಾಗಿ, ದೇಹದಲ್ಲಿರುವ ಪ್ರೋಟೀನುಗಳ ಸಂಖ್ಯೆ ಲಕ್ಷಾಂತರ. ಉದಾಹರಣೆಗೆ, ನಮ್ಮ ದೇಹವನ್ನು ಪ್ರವೇಶಿಸುವ ಎಲ್ಲ ಪರಕಾಯಗಳ (antigen) ವಿರುದ್ಧ ಅದಕ್ಕೆ ಪೂರಕವಾದ ಪ್ರತಿಕಾಯಗಳನ್ನು (protein antibodies) ನಮ್ಮ ದೇಹದ ಇಮ್ಯೂನ್ ವ್ಯವಸ್ಥೆ ಸಂಶ್ಲೇಷಿಸಬಲ್ಲದು.

"ವಿಧಿವಿಜ್ಞಾನ : ಆಧುನಿಕ ವಿಜ್ಞಾನಗಳ

**ಅಭಿನಂದನೆ...**

**ಕರ್ನಾಟಕ ಸರ್ಕಾರ ನೀಡುವ 'ಬಸವ ಪುರಸ್ಕಾರ ರಾಷ್ಟ್ರೀಯ ಪ್ರಶಸ್ತಿ'ಯು ೨೦೧೭ರ ಸಾಲಿಗೆ ಹಿರಿಯ ಪತ್ರಕರ್ತ ಶ್ರೀ ಪಾಟೀಲ ಪುಟ್ಟಪ್ಪ ಅವರಿಗೆ ಲಭಿಸಿದೆ. ಇವರಿಗೆ 'ಹೊಸತು' ಹಾಗೂ 'ನವಕರ್ನಾಟಕ'ದ ಅಭಿನಂದನೆಗಳು.**

ಅಪೂರ್ವ ಸಂಗಮ" ವಿನೋದ್ ಲಕ್ಕಪ್ಪನ್‌ರವರ ಅಮೂಲ್ಯ ಕೊಡುಗೆ. ಲೇಖಕರೇ ಹೇಳಿರುವಂತೆ, ಭೌತಶಾಸ್ತ್ರ, ರಸಾಯನಶಾಸ್ತ್ರ, ಜೀವಶಾಸ್ತ್ರ ಮುಂತಾದ ವಿಷಯಗಳ ಬಗ್ಗೆ ಬರೆಯಲು ಲೇಖಕರನ್ನು ಗುರುತಿಸುವುದು ಕಷ್ಟವಲ್ಲ. ಆದರೆ ವಿಧಿವಿಜ್ಞಾನದ ಬಗ್ಗೆ ಬರೆಯುವವರು ಬಹಳ ಅಪರೂಪ. ಇದೊಂದು ಸಮಗ್ರ ಲೇಖನ ಎನ್ನಬಹುದು. ವಿಧಿವಿಜ್ಞಾನದ ಚರಿತ್ರೆಯಿಂದ ಪ್ರಾರಂಭಿಸಿ, ಅದರ ಸಂಶೋಧನೆಯಲ್ಲಿ ಬಹಳ ಹೆಸರು ಮಾಡಿರುವ ವಿಜ್ಞಾನಿಗಳ ಬಗ್ಗೆ ಮಾಹಿತಿ, "ಪತ್ತೇದಾರಿ ಕೆಲಸಕ್ಕೆ" ಬೇಕಾಗುವ ಸಲಕರಣೆಗಳು, ಅವುಗಳನ್ನು ಬಳಸುವ ರೀತಿ, ಅವುಗಳಿಂದ ದೊರೆಯಬಹುದಾದ ಮಾಹಿತಿ, ನಮ್ಮ ದೇಶದ ವಿಧಿ–ವಿಜ್ಞಾನ ಪ್ರಯೋಗಾಲಯಗಳು ಸಲ್ಲಿಸುತ್ತಿರುವ ಸೇವೆ, ಎಲ್ಲ ವಿಷಯಗಳನ್ನೂ ಹಿತ, ಮಿತವಾಗಿ ವಿವರಿಸಿದ್ದಾರೆ. ಲೀಲಾರವರು ಈ ಲೇಖನಕ್ಕೆ ನೀಡಿರುವ "ಪಾಲಿಮರೇಸ್ ಚೈನ್ ರಿಯಾಕ್ಷನ್ (polymerase chain reaction)" ವಿವರಿಸುವ ಪುಟವು ಬಹಳ ಅರ್ಥವತ್ತಾಗಿದೆ. ಬಹುಜನರ ಆಸಕ್ತಿಯನ್ನು ಕೆರಳಿಸುವ ಲೇಖನ ಇದಾಗಿದೆ.

ಎಲ್ಲ ಸಮಾಜಗಳ ಬೆನ್ನೆಲುಬಾದ ಕೃಷಿ ವಿಜ್ಞಾನವನ್ನು ಶರಣ ಬಸವೇಶ್ವರ ಅಂಗಡಿಯವರು ತಮ್ಮ ಲೇಖನ "ಕೃಷಿ ವಿಜ್ಞಾನದ ಸಂಶೋಧನೆಯ ಕಥಾನಕ"ದಲ್ಲಿ ಅರ್ಥವತ್ತಾಗಿ ವರ್ಣಿಸಿದ್ದಾರೆ. ಸಾಧಾರಣವಾಗಿ ಕನ್ನಡದಲ್ಲೇ ಮಾತನಾಡುವ ರೈತರ ಒಡನಾಟ ಸದಾ ಇರುವುದರಿಂದಲೋ ಏನೋ, ಕೃಷಿ ವಿಜ್ಞಾನಿಗಳಾದ ಶರಣ ಬಸವೇಶ್ವರರ ಭಾಷೆ ಸರಳವಾಗಿದ್ದು ಮನ ಮುಟ್ಟುವಂತಿದೆ. ಮನುಷ್ಯ ವ್ಯವಸಾಯ ಮಾಡುವುದನ್ನು ಕಲಿತ ಕಾಲದಿಂದ (೧೦೦೦೦ – ೧೫೦೦೦ ವರ್ಷಗಳ ಹಿಂದೆ) ಇಂದಿನ ತಳಿ ಬದಲಿ ತಂತ್ರಜ್ಞಾನದ (genetically modified crops)ವರೆಗಿನ ಕೃಷಿ ಕ್ಷೇತ್ರದಲ್ಲಾಗಿರುವ ಬೆಳವಣಿಗೆಗಳನ್ನೂ, ಅದರ ತಿರುವುಗಳನ್ನೂ ಸರಳ ಭಾಷೆಯಲ್ಲಿ ಸೆರೆ ಹಿಡಿದಿದ್ದಾರೆ. ಆಸ್ಫೋಟನೆಯ ಮಾದರಿಯಲ್ಲಿ ಹೆಚ್ಚುತ್ತಿರುವ, ಈಗಾಗಲೇ ೭೦೦ ಕೋಟಿ ಮೀರಿರುವ ವಿಶ್ವದ ಜನತೆಗೆ ಉಣಿಸಲು ಕೃಷಿ ಕ್ಷೇತ್ರ ಹೇಗೆ ಸಾಹಸಪಟ್ಟಿದೆ ಎನ್ನುವುದನ್ನು ವಿವರಿಸುವುದರ ಜೊತೆಗೆ ೨೦೫೦ರ ವೇಳೆಗೆ ನಿರೀಕ್ಷಿಸಲಾಗಿರುವ ಹೆಚ್ಚಳದ ಜನರ ಹಸಿವು ನಿವಾರಿಸಲು ಕೃಷಿ ಕ್ಷೇತ್ರ ಎದುರಿಸಬೇಕಾಗಿರುವ ಸಮಸ್ಯೆಗಳನ್ನು ನಮ್ಮ ಮುಂದಿಟ್ಟಿದ್ದಾರೆ. ಮಾನವನ ಒಳಿತಿಗೆ ವೈಜ್ಞಾನಿಕ ಮಾರ್ಗಗಳನ್ನು ಅಳವಡಿಸಿಕೊಳ್ಳದೆ ಗತ್ಯಂತರವಿಲ್ಲ ಎನ್ನುವುದನ್ನು ಸ್ಪಷ್ಟವಾಗಿ ನಿರೂಪಿಸಿದ್ದಾರೆ. ತಳಿ ಬದಲಿಸಿದ ಸಸ್ಯಗಳ ಬೆಳೆಗಾರರನ್ನು ವಿರೋಧಿಸುವ ಗುಂಪುಗಳ ವಾದವನ್ನು ಅಲ್ಲಗಳೆದಿದ್ದಾರೆ. ಇದು ಬಹಳ ಪ್ರಸ್ತುತ. ಇಂತಹ ಬೆಳೆಗಳು ತರಬಹುದಾದ ಅನುಮಾನಿತ ಅಪಾಯಗಳನ್ನೂ ವೈಜ್ಞಾನಿಕ ಮಾರ್ಗಗಳಿಂದಲೇ ಸರಿಮಾಡಬೇಕಲ್ಲದೇ, ವೈಜ್ಞಾನಿಕ ಸಾಧನೆಯ ಲಾಭವನ್ನು ಪಡೆಯದಿರುವುದು ಜಾಣತನವಲ್ಲ. ಇದೇ ಮಾತು ಜೀನ್ ಆಧಾರಿತ ವೈದ್ಯಕೀಯ ಚಿಕಿತ್ಸೆಗಳಿಗೂ (gene therapy) ಸಲ್ಲುತ್ತದೆ.

ತಮ್ಮ ಹ್ರಸ್ವ ಲೇಖನದಲ್ಲಿ "ಕುಲಾಂತರಿ : ಪ್ರಯೋಗವೊ? ಪ್ರಮಾದವೋ?" ಚನ್ನೇಶ್‌ರವರು ಕುಲಾಂತರಿ ಸಸ್ಯಗಳ ಬಳಕೆಯ ಒಳಿತು, ಕೆಡಕುಗಳೆರಡನ್ನೂ ಸರಳವಾಗಿ ನಿರೂಪಿಸಿದ್ದಾರೆ. ಕುಲಾಂತರಿ ಸಸ್ಯಗಳಲ್ಲಿ ಅದರ ತಳಿ ಮಾಹಿತಿಯನ್ನು ಸ್ವಲ್ಪ ಬದಲಿಸಿ ನಮಗೆ ಹೆಚ್ಚು ಉಪಯುಕ್ತವೆಂದು ಕಾಣುವ ಗುಣಗಳನ್ನು ಪ್ರದರ್ಶಿಸುವಂತೆ ಮಾಡಿರುತ್ತಾರೆ. ಕಳೆದ ೩೦ ವರ್ಷಗಳಲ್ಲಿ ನಡೆದಿರುವ ಜೀವವಿಜ್ಞಾನದ ಸಂಶೋಧನೆಗಳಿಂದ ಇಂತಹ ಸಸ್ಯಗಳ ಸೃಷ್ಟಿ ಸಾಧ್ಯವಾಗಿದೆ. ಬರಹಗಾರರ ಒಲವು ಕುಲಾಂತರಿ ಸಸ್ಯಗಳ ಬಳಕೆಯನ್ನು ಸಮರ್ಥಿಸುವಂತೆ ಕಾಣುವುದಿಲ್ಲ. ಅದು ಪರಿಣತ ತಜ್ಞರಲ್ಲೂ ಬಹಳ ಜಿಜ್ಞಾಸೆಗೆ ಒಳಗಾಗಿರುವ ವಿಷಯ. ಆದರೆ ಇದರ ಹಿಂದಿನ ಲೇಖನದಲ್ಲಿ ಶರಣ ಬಸವೇಶ್ವರರು ಕುಲಾಂತರಿ ಸಸ್ಯಗಳ ಉಪಯೋಗಗಳನ್ನು ಒತ್ತಿಹೇಳಿದ್ದಾರೆ ಎನ್ನುವುದನ್ನು ಗಮನಿಸಬೇಕು. ಈ ಎರಡೂ ಲೇಖನಗಳು ನಮ್ಮ ಜನರಿಗೆ, ಅದರಲ್ಲೂ ಮುಖ್ಯವಾಗಿ ರೈತರಿಗೆ, ಪ್ರಸ್ತುತ. ಇದೇ ರೀತಿಯ ಸಮಸ್ಯೆಗಳು ಮಾನವ ತಳಿ ಬದಲಾವಣೆಯ ಬಗ್ಗೆಯೂ ಸದ್ಯದಲ್ಲೇ ಬರಲಿವೆ ಎನ್ನುವುದನ್ನು ಗಮನಿಸಬೇಕು. ಈ ಲೇಖನ ನಮ್ಮ ಮುಂದಿಡುವ ದ್ವಂದ್ವಕ್ಕೆ ಮಾನವ

ತಳಿಸಂದೇಶವನ್ನೇ ಬದಲಿಸುವ ತಂತ್ರಗಳು ಸೃಷ್ಟಿಸುವ ದ್ವಂದ್ವಗಳನ್ನು ಹೋಲಿಸಿದರೆ, ತುಲನೆ ಮಾಡಲಾರದಷ್ಟು ದೊಡ್ಡ ನೈತಿಕ ಸಮಸ್ಯೆಗಳು ಎದುರಾಗುತ್ತವೆ.

ಭೂವಿಜ್ಞಾನದ ಪ್ರಮುಖ ಸಂಶೋಧನೆಗಳನ್ನು ಅನಂತರಾಮು ಎರಡು ಲೇಖನಗಳಲ್ಲಿ ದಾಖಲಿಸಿದ್ದಾರೆ. ಮೊದಲನೆಯ ಲೇಖನ "ಶಿಲಾಪುಟಗಳಲ್ಲಿ ಅಡಗಿರುವ ಭೂಚರಿತ್ರೆ – ಪುಟಪುಟಗಳಲ್ಲೂ ರೋಚಕತೆ" ಭೂವಿಜ್ಞಾನ ಬೆಳೆದುಬಂದ ದಾರಿ, ಅದರಲ್ಲಾದ ಮಹಾ ತಿರುವುಗಳನ್ನು ಸರಳವಾಗಿ ನಿರೂಪಿಸುತ್ತದೆ. ೫೦೦ ಕೋಟಿ ವರ್ಷಗಳ ಇತಿಹಾಸ ಇರುವ ನಮ್ಮ ಭೂಮಿಯ ಮೇಲ್ಪದರದಲ್ಲಿ ನಾವು ಊಹಿಸಿಕೊಳ್ಳಲೂ ಆಗದ ಕಾಲಘಟ್ಟ ಗಳಲ್ಲಿ ನಡೆದು ಹೋಗಿರುವ ಘಟನೆಗಳಿಗೆ ಸಾಕ್ಷಿಯಾಗುವ ಗುರುತುಗಳು ಇನ್ನೂ ಉಳಿದಿವೆ ಎನ್ನುವುದೇ ಒಂದು ರೋಚಕ ಸಂಗತಿ. ಈ ಭೂಮಿಯ ಮೇಲ್ಪದರವನ್ನು ವೈಜ್ಞಾನಿಕ ವಿಧಿ–ವಿಧಾನಗಳಿಂದ ಪರೀಕ್ಷಿಸಿ, ಹಿಂದೆ ಸಂಭವಿಸಿದ ದೊಡ್ಡ ಬದಲಾವಣೆಗಳನ್ನು, ಜೀವರಾಶಿ ಬೆಳೆದು ಬಂದ ದಾರಿಯನ್ನು, ಮನುಷ್ಯನ ಕುತೂಹಲ ಮತ್ತು ಬುದ್ಧಿಮತ್ತೆಯಿಂದ ಕಂಡುಕೊಳ್ಳಲು ಸಾಧ್ಯವಾಗಿದೆ. ಅನೇಕ ವೈಜ್ಞಾನಿಕ ಸಂಶೋಧನೆಗಳಿಗೆ ಒದಗಿದ ಧಾರ್ಮಿಕ ಅಡಚಣೆಯನ್ನು ಭೂಶಾಸ್ತ್ರವೂ ಎದುರಿಸಬೇಕಾಯಿತು. ಅಂಥ ವಿರೋಧದ ನಡುವೆಯೂ, ತಾವು ಮಾಡಿದ ವೈಜ್ಞಾನಿಕ ಸಂಶೋಧನೆಯನ್ನು ಪ್ರಕಟಿಸುವ ಧೈರ್ಯ ತೋರಿದ ಅನೇಕ ವಿಜ್ಞಾನಿಗಳ ಪರಿಚಯವನ್ನೂ ಲೇಖಕರು ಮಾಡಿಕೊಟ್ಟಿದ್ದಾರೆ. ಅನಂತರಾಮುರವರ ಎರಡನೆಯ ಲೇಖನ "ಭೂವಿಜ್ಞಾನದ ವಿಸ್ಮಯ : ಸರಿಯುತ್ತಿರುವ ಫಲಕಗಳು – ಸವಾರಿ ಮಾಡುತ್ತಿರುವ ಖಂಡಗಳು" ನಮ್ಮ ಪೃಥ್ವಿಯ ಭೂಭಾಗ, ಸಾಗರಗಳಲ್ಲಾಗಿರುವ ಸ್ಥಾನಪಲ್ಲಟಗಳನ್ನು ಗುರುತಿಸಲು ಸಾಧ್ಯಮಾಡಿಕೊಟ್ಟ ವೈಜ್ಞಾನಿಕ ಸಂಶೋಧನೆಗಳ ಪರಿಚಯ ಮಾಡಿಕೊಡುವುದೇ ಅಲ್ಲದೇ, ಈ ಸಂಶೋಧನೆಗಳಿಂದ ಹೇಗೆ ಜೀವವಿಜ್ಞಾನವೂ ಲಾಭ ಪಡೆದಿದೆ ಎನ್ನುವುದರ ಒಳನೋಟವನ್ನೂ ಒದಗಿಸುತ್ತದೆ. ಈ ನಿಟ್ಟಿನಲ್ಲಿ ಗಮನಿಸಬಹುದಾದ ಇನ್ನೊಂದು ಅಂಶ: ಆಫ್ರಿಕಾದಲ್ಲಿ ಕಾಣಿಸಿಕೊಳ್ಳುವ ನಿದ್ರಾ ರೋಗ (sleeping sickness) ಮತ್ತು ದಕ್ಷಿಣ ಅಮೇರಿಕಾದಲ್ಲಿ ಕಾಡುವ ಚಾಗ ಕಾಯಿಲೆ (chagas disease) ಒಂದೇ ಜಾತಿಯ ಸೂಕ್ಷ್ಮಾಣು ಬರಿಸುವ ಕಾಯಿಲೆಗಳಾಗಿದ್ದು, ಈ ಎರಡು ಭೂಖಂಡಗಳು ಹಿಂದೊಂದು ಕಾಲದಲ್ಲಿ ಒಂದೇ ಭೂಭಾಗವಾಗಿದ್ದವು ಎನ್ನುವುದನ್ನು ಪುಷ್ಟೀಕರಿಸುತ್ತದೆ. ಕೋಟ್ಯಂತರ ವರ್ಷಗಳ ಹಿಂದೆ ಪೃಥ್ವಿಯಲ್ಲಿ ನಡೆದಿರಬಹುದಾದ ಘಟನೆಗಳನ್ನು ವೈಜ್ಞಾನಿಕವಾಗಿ ಪರೀಕ್ಷಿಸುವುದು ಸಾಧ್ಯ ಎನ್ನುವುದೇ ಅಚ್ಚರಿಯ ಸಂಗತಿ. ಈ ಸಂಶೋಧನೆಯ ಚರಿತ್ರೆಯನ್ನು ಲೇಖನ ಸರಳವಾಗಿ ವಿವರಿಸುತ್ತದೆ. ಈ ಲೇಖನದಲ್ಲಿ ಬಹು ಸ್ಫುಟವಾಗಿ ವಿವರಿಸಿರುವ ಭೌತಶಾಸ್ತ್ರಕ್ಕೆ ಸಂಬಂಧಪಟ್ಟ ಪುಟಗಳನ್ನು ಹೊತ್ತಿಗೆಯ ಮೊದಲ ಲೇಖನಕ್ಕೆ ಸ್ಥಳಾಂತರಿಸಿದರೆ ಯಾವ ಆಭಾಸವೂ ಕಾಣದು.

ನಾಗೇಶ ಹೆಗ್ಗಡೆಯವರ ಲೇಖನ "ಪರಿಸರ ಜ್ಞಾನಕ್ಕೆ ಮಹಾತಿರುವು ಕೊಟ್ಟ ಕೃತಿ – ಸೈಲೆಂಟ್ ಸ್ಪ್ರಿಂಗ್", ಒಬ್ಬ ಧೀಮಂತ ಮಹಿಳಾ ವಿಜ್ಞಾನಿಯ ಜೀವನ, ಅವಳ ಪರಿಸರ ಅಧ್ಯಯನ, ಅವಳು ಕಂಡುಕೊಂಡ ಕೀಟನಾಶಕಗಳಿಂದಾಗುವ ಪರಿಸರ ಹಾನಿ, ಕೀಟನಾಶಕಗಳ ಬಳಕೆಯ ವಿರುದ್ಧ ಅವಳು ನಡೆಸಿದ ಹೋರಾಟ, ಅವಳ ಸಂಶೋಧನೆಗಳನ್ನು ಗೇಲಿಮಾಡಿ, ಅವಳ ಹೋರಾಟವನ್ನು ನಿಲ್ಲಿಸಲು ಕೀಟನಾಶಕಗಳನ್ನು ಉತ್ಪಾದಿಸುವ ವಾಣಿಜ್ಯ ಸಂಸ್ಥೆಗಳು ಮಾಡಿದ ಪ್ರಯತ್ನ, ಅನಾರೋಗ್ಯದಿಂದ ಬಳಲುತ್ತಿದ್ದರೂ, ಬಹುದೊಡ್ಡ ಕಂಪನಿಗಳ ವಿರುದ್ಧ ಸೆಟೆದು ನಿಂತ ಅವಳ ಧೈರ್ಯ, ಮುಂತಾದುವನ್ನೆಲ್ಲಾ ನೇರವಾಗಿ ಓದುಗರ ಮನಸ್ಸಿಗೆ ನಾಟುವಂತೆ ಪ್ರಸ್ತುತಪಡಿಸುತ್ತದೆ. ಶ್ರೀಮಂತ ದೇಶಗಳಲ್ಲಿ ವ್ಯಾಪಾರ ಕಡಿಮೆಯಾಗುತ್ತಿದ್ದಂತೆ, ಈ ವಾಣಿಜ್ಯ ಸಂಸ್ಥೆಗಳು ತಮ್ಮ ಅಪಾಯಕಾರಿ ಕೀಟನಾಶಕಗಳನ್ನು ಬಡದೇಶಗಳಿಗೆ ಸ್ಥಳಾಂತರಿಸಿದ್ದಾರೆ ಎನ್ನುವ ಎಚ್ಚರಿಕೆಯನ್ನೂ ನೀಡುತ್ತದೆ. ಹೆಗ್ಗಡೆಯವರ ಪರಿಸರ ಪ್ರೇಮ, ಸಾಮಾಜಿಕ ಕಾಳಜಿಯನ್ನು ಲೇಖನ ಪ್ರತಿಬಿಂಬಿಸುತ್ತದೆ. ಲೇಖನ ಆತಂಕಪಡಬೇಕಾದ ವಿಷಯವನ್ನು ಕುರಿತದ್ದಾದರೂ, ಹೆಗ್ಗಡೆಯವರ ತೆಳು ವಿಡಂಬನೆ ನಮ್ಮನ್ನು ಎಚ್ಚರಗೊಳಿಸುವುದರ ಜೊತೆಗೆ ಮನರಂಜನೆಯನ್ನೂ ನೀಡುತ್ತದೆ. ಹೆಗ್ಗಡೆಯವರ ಎರಡನೆಯ ಚಿಕ್ಕ, ಚೊಕ್ಕ ಲೇಖನ "ಕೀಲಿಂಗ್ ಕರ್ವ್‌ನಲ್ಲಿ ಅನಿರೀಕ್ಷಿತ ತಿರುವು", ಒಬ್ಬ ಯುವ ವಿಜ್ಞಾನಿಯ ಸಂಶೋಧನೆ ಭೂ ವಾತಾವರಣದಲ್ಲಿ ಹೆಚ್ಚುತ್ತಿರುವ ಕಾರ್ಬನ್ ಡೈ ಆಕ್ಸೈಡ್ ಮತ್ತು ಅದರಿಂದುಂಟಾಗುವ ತಾಪಮಾನ ಏರಿಕೆಯ ಬಗ್ಗೆ ಹೇಗೆ ಇಡೀ ಪ್ರಪಂಚವೇ ತಲೆಬಿಸಿ ಮಾಡಿಕೊಳ್ಳಬೇಕಾದ ತಿರುವಿಗೆ ಎಡೆಮಾಡಿಕೊಟ್ಟಿತು ಎನ್ನುವುದನ್ನು ತಿಳಿಸುತ್ತದೆ. ಮೊದಮೊದಲಲ್ಲಿ ಹೆಚ್ಚಿನ ಗಮನ ಸೆಳೆಯದಿದ್ದ ಈ ಸಂಶೋಧನೆ ಹಲವಾರು ವಿಜ್ಞಾನಿಗಳ ಪಟ್ಟುಬಿಡದ ಶ್ರಮದಿಂದ ವಿಶ್ವದ ಗಮನವನ್ನೇ ಸೆಳೆದು, ೨೦೧೫ರ ಪ್ಯಾರಿಸ್ ಶೃಂಗ ಸಭೆಯಲ್ಲಿ ವಾತಾವರಣ ಕಲುಷಿತಗೊಳ್ಳುವುದನ್ನು ಕಡಿಮೆ ಮಾಡುವ ತಂತ್ರಜ್ಞಾನಗಳನ್ನು ಅಳವಡಿಸಿಕೊಳ್ಳುವ ಒಪ್ಪಂದದಲ್ಲಿ ಪರ್ಯವಸಾನ ಗೊಂಡಿತು. ಆದರೆ ವಿಪರ್ಯಾಸವೆಂದರೆ, ಈ ಒಪ್ಪಂದದ ನಂತರ ಇದೀಗ ಅಮೇರಿಕಾದ ಅಧ್ಯಕ್ಷರಾಗಿ ಚುನಾಯಿತರಾದ ಡೊನಾಲ್ಡ್ ಟ್ರಂಪ್ ಈ ಒಪ್ಪಂದದಿಂದ ಹೊರಬರುವ ಸೂಚನೆಯನ್ನಿತ್ತಿದ್ದಾರೆ. ಮೂರನೆಯ ಲೇಖನದಲ್ಲಿ ಹೆಗ್ಗಡೆಯವರು ವಿಜ್ಞಾನ ನಮಗೆ ನೀಡುತ್ತಿರುವ ರಾಸಾಯನಿಕಗಳ ಬಳಕೆಯ ಬಗ್ಗೆ ಎಚ್ಚರ ವಹಿಸಬೇಕಾದ ಅಗತ್ಯವನ್ನು ಜಪಾನಿನ ಒಂದು ಪುಟ್ಟ ನಗರದ ಜನರಿಗಾದ ಅನುಭವವನ್ನು ವಿವರಿಸುವುದರ ಮೂಲಕ ಓದುಗರ ಗಮನಕ್ಕೆ ತಂದಿದ್ದಾರೆ. ವಿಜ್ಞಾನ ಹೊಸದಾಗಿ ಕೊಡಮಾಡುವ ಅನೇಕ ರಾಸಾಯನಿಕ ಅಣುಗಳು ವಾಣಿಜ್ಯೋದ್ಯಮ ಸಂಸ್ಥೆಗಳಿಗೆ ಲಾಭ ಗಳಿಸಿಕೊಡುತ್ತವೆ. ಲಾಭ ಪಡೆಯುವ ಉದ್ಯಮ ಸಂಸ್ಥೆಗಳು, ಈ ಅಣುಗಳಿಂದಾಗಬಹುದಾದ ಅಪಾಯವನ್ನು ಮುಚ್ಚಿಡುತ್ತವೆ. ಆದ್ದರಿಂದ ಜನತೆಗೆ ತಮ್ಮ ಪರಿಸರದಲ್ಲಿ ಪ್ರಾರಂಭಮಾಡುವ ಕೈಗಾರಿಕಾ ಚಟುವಟಿಕೆಗಳತ್ತ ಗಮನವಿರಬೇಕು. ಇಂತಹ ಎಚ್ಚರಿಕೆಯನ್ನು ಹೆಗ್ಗಡೆಯವರ ಎಲ್ಲ ಲೇಖನಗಳೂ ನೀಡುತ್ತವೆ.

ಸಿ. ಎಸ್. ಅರವಿಂದರ "ಶತಮಾನಗಳ ಗತಕಾಲದಿಂದ ಗಣಿತ ಗಮಿಸಿದ ಹಾದಿ" ನಮ್ಮನ್ನು ಗಣಿತದ ಮಾಯಾಲೋಕಕ್ಕೆ ಕರೆದೊಯ್ಯುತ್ತದೆ. ಚರಿತ್ರ ಪೂರ್ವ ಕಾಲದಿಂದ ಪ್ರಾರಂಭಿಸಿ ೨೧ನೆಯ ಶತಮಾನದವರೆಗೂ ಗಣಿತ ನಡೆದುಬಂದ ದಾರಿಯ ಪರಿಚಯ ಮಾಡಿಕೊಡುತ್ತದೆ. ಗಣಿತದ ದಿಗ್ಗಜರನ್ನು ನಮ್ಮ ಮುಂದೆ ನಿಲ್ಲಿಸುತ್ತದೆ. ಗಣಿತದ ಪರಿಚಯವೇ ಇಲ್ಲದವರಿಗೆ, ಲೇಖನದ ಹೆಚ್ಚಿನ ಭಾಗ ಪೂರ್ಣ ಅರ್ಥವಾಗಲಾರದು. ಲೇಖನದ ಪೂರ್ಣ ಪ್ರಯೋಜನ ಪಡೆಯಲು ಹಲವಾರು ಸಲ ಓದಬೇಕಾಗಬಹುದು. ಆದರೂ, ಗಣಿತದ ಬಹು ಮುಖ್ಯ ಪರಿಕಲ್ಪನೆಗಳನ್ನೆಲ್ಲಾ ಎಷ್ಟು ಸಾಧ್ಯವೋ ಅಷ್ಟು ಸರಳವಾಗಿ ನಿರೂಪಿಸಿದ್ದಾರೆ. ಪುಟ ೪೪೪ರಲ್ಲಿ ಸಮತೆಯಿರುವ ಘನಾಕೃತಿಗಳನ್ನು ತೋರಿಸಿದ್ದರೂ, ಈ ಆಕೃತಿಗಳ ಹಿಂದಿರುವ ರೋಚಕ ಕಥೆಯನ್ನು ತಿಳಿಸಲು ಲೇಖಕರು ಮರೆತಿದ್ದಾರೆ. ಒಂದೆರಡು ಕಡೆ ಗಣಿತದ ಸಾಧನೆಯ ವರ್ಷ ತಪ್ಪಾಗಿ ಅಚ್ಚಾಗಿದೆ. ಗಣಿತ ಸ್ವಲ್ಪವೂ ಗೊತ್ತಿಲ್ಲದವರಿಗೂ, ಲೇಖನ ಒಂದು ಸಂದೇಶವನ್ನಂತೂ ತಲುಪಿಸುತ್ತದೆ. ಅದೆಂದರೆ, ಗಣಿತ ಯಾವ ದೇಶದ ಸ್ವತ್ತೂ ಅಲ್ಲ. ನಾಗರಿಕತೆ ಬೆಳೆದ ಎಲ್ಲ ದೇಶ, ಕಾಲಗಳಲ್ಲೂ ಗಣಿತ ಅವ್ಯಾಹತವಾಗಿ ಬೆಳೆದುಬಂದಿದೆ.

ಸಿ. ಆರ್. ಸತ್ಯರವರ ಮೊದಲ ಲೇಖನ ವೈಜ್ಞಾನಿಕ ಎನ್ನುವುದಕ್ಕಿಂತ ನಾವು ದಿನ ನಿತ್ಯ ಬಳಸುತ್ತಿರುವ ವಸ್ತುಗಳ ಮೂಲ ಹೇಗೆ ಬದಲಾಗುತ್ತಿದೆ ಎನ್ನುವುದರ ದಾಖಲೆ ಎನ್ನಬಹುದು. ಲೋಹಗಳನ್ನು ಬಳಸಿ ತಯಾರಿಸಿದ ವಸ್ತುಗಳಿಗಿಂತ ಹೆಚ್ಚಾಗಿ ಸಮ್ಮಿಶ್ರ ವಸ್ತುಗಳನ್ನು (composites) ನಾವು ಬಳಸುತ್ತಿದ್ದೇವೆ ಎನ್ನುವುದು ನಿರ್ವಿವಾದ. ಲೇಖಕರು ಈ ಸಮ್ಮಿಶ್ರ ವಸ್ತುಗಳ ಉತ್ತಮ ಅಂಶಗಳನ್ನೂ, ಅವುಗಳಿಂದ ಪರಿಸರಕ್ಕೆ ಆಗಬಹುದಾದ ಹಾನಿಯನ್ನೂ ವಿವರಿಸಿದ್ದಾರೆ. ಆದರೆ ವೈಜ್ಞಾನಿಕ ಲೇಖನದಲ್ಲಿ ನಾವು ನಿರೀಕ್ಷಿಸುವುದು, ಇಂತಹ ಸಮ್ಮಿಶ್ರ ಧಾತುಗಳ ಗುಣಗಳನ್ನು ನಿರ್ದೇಶಿಸುವ ಭೌತಿಕ ಮತ್ತು ರಾಸಾಯನಿಕ ತತ್ವಗಳು. ಲೇಖನದಲ್ಲಿ ಈ ವಿಷಯಗಳ ಚಿಂತನೆಯ ಕೊರತೆ

**ಮಣ್ಣು**

ಮಣ್ಣು ತಿನ್ನಬೇಡವೆಂದು
ಮಗನನ್ನು ಗದರಿಸುತ್ತಿದ್ದ
ಮರಳು ವ್ಯಾಪಾರಿ ।

**ಶ್ರೀನಿವಾಸ ಕುಂಡಂತಾಯ**
ಬೆಂಗಳೂರು

ಇದೆ. ಸತ್ಯರವರ ಎರಡನೆಯ ಲೇಖನ "ರೋಬೋಟ್ – ಗುಲಾಮಗಿರಿಯಿಂದ ಯಜಮಾನಿಕೆಯವರೆಗೆ" ಪ್ರಸಕ್ತ ಸ್ವಯಂಚಾಲಿತ ಯಂತ್ರಗಳ (ರೋಬೋಟ್) ವಿವಿಧ ವಿನ್ಯಾಸಗಳು, ಅವು ನಿರ್ವಹಿಸುವ ಕೆಲಸಗಳು, ಅವುಗಳಿಂದಾಗಿರುವ ಉಪಯೋಗಗಳು ಮುಂತಾದ ವಿವರಣೆಗಳನ್ನೊದಗಿಸುತ್ತದೆ. ಈ ರೋಬೋಟುಗಳ ನಿರ್ಮಾಣದ ಹಿಂದಿರುವ ಅಥವಾ ಅವುಗಳ ತಯಾರಿಕೆಗೆ ಬೇಕಾದ ತಂತ್ರಜ್ಞಾನದ ಕೆಲ ಮಾಹಿತಿಗಳನ್ನೂ ಕೊಡುತ್ತದೆ. ಆದರೆ ರೋಬೋಟುಗಳು ಯಜಮಾನಿಕೆಯತ್ತ ಸಾಗುವ ಕಲ್ಪನೆಯನ್ನು ಜೀವವಿಜ್ಞಾನಿಗಳು ಒಪ್ಪುವ ಸಾಧ್ಯತೆ ಕಡಿಮೆ. ಮಾನವ (ಮತ್ತು ಭೂಮಿಯಲ್ಲಿ ಬದುಕಿರುವ ಸಮಸ್ತ ಜೀವರಾಶಿಗಳೂ) ೩೦೦ ಕೋಟಿ ವರ್ಷಗಳ ಜೀವವಿಕಾಸದ ಫಲ. ಇದನ್ನು ಬದಿಗೊತ್ತುವ ಸಾಧ್ಯತೆ ಗಣನೆಗೇ ಬಾರದಷ್ಟು ಕಡಿಮೆ. ಆದರೆ ರೋಬೋಟುಗಳ ಬಗೆಗೆ ನಿಜವಾದ ಆತಂಕ ಇರುವುದು, ಅವುಗಳನ್ನು ಯುದ್ಧದಲ್ಲಿ ಅಥವಾ ಭಯೋತ್ಪಾದನೆಗೆ ಬಳಸಲು ಸಾಧ್ಯ ಎನ್ನುವುದು. ಈಗಾಗಲೆ ಬಳಕೆಯಲ್ಲಿರುವ ಡ್ರೋನುಗಳು ರೋಬೋಟುಗಳಲ್ಲದೇ ಮತ್ತೇನು ? ಮಾನವ ಚಾಲಕರಿಲ್ಲದ ಡ್ರೋನುಗಳು ಶತ್ರು ನೆಲೆಯ ಮೇಲೆ ಬಾಂಬುಗಳನ್ನು ಹಾಕಬಲ್ಲವು. ಇದರಿಂದಾಗಿ ಕೆಲ ಅಮಾಯಕರು ಸಾವಿಗೀಡಾದರೆ, ಇವುಗಳನ್ನು ಹಾರಿಸಲು ಆಜ್ಞಾಪಿಸುವ (ಅಭಿವೃದ್ಧಿ ಹೊಂದಿದ ದೇಶಗಳ) ರಾಜಕಾರಣಿಗಳಿಗೆ ಅಂತಹ ಸಾವು ಬರಿಯ ಆಕಸ್ಮಿಕವಾಗಿ (collatarel damage) ಕಾಣುತ್ತದೆ. ಅದರ ಬಗ್ಗೆ ಅವರು ತಲೆ ಕೆಡಿಸಿಕೊಳ್ಳುವುದಿಲ್ಲ. ರೋಬೋಟುಗಳಿಂದ ಕೆಲ ಮಟ್ಟಿನ ನಿರುದ್ಯೋಗ ಸಮಸ್ಯೆ ಬರಬಹುದು. ನಮ್ಮ ಬ್ಯಾಂಕುಗಳಲ್ಲಿ ಕಂಪ್ಯೂಟರುಗಳ ಅಳವಡಿಕೆಯಾದ ಮೇಲೆ, ಅವುಗಳು ಕಡಿಮೆ ಜನರನ್ನು ಕೆಲಸಕ್ಕೆ ತೆಗೆದುಕೊಳ್ಳುತ್ತಿವೆ. ಜನ ಬೇರೆಯ ಉದ್ಯೋಗ ಆರಿಸಿಕೊಳ್ಳುತ್ತಿದ್ದಾರೆ. ನಾವು ವಿಜ್ಞಾನ ಕೊಡಮಾಡುವ ಎಲ್ಲ ಅನುಕೂಲತೆಗಳನ್ನು ಬಳಸಿಕೊಳ್ಳಬೇಕು. ಅದರಿಂದ ಉಂಟಾಗುವ ಸಾಮಾಜಿಕ ಬದಲಾವಣೆಗಳಿಗೆ ಪರಿಹಾರ ಮಾರ್ಗಗಳನ್ನು ಕಂಡುಕೊಳ್ಳಬೇಕು. ಆದರೆ ನಮ್ಮಲ್ಲಿ ಮೂಡಬಹುದಾದ ನೈಜ ಶಂಕೆಯೆಂದರೆ, ವಿಜ್ಞಾನ ನಮಗೆ ಕೊಡುತ್ತಿರುವ ಅಸೀಮಿತ ಅವಕಾಶಗಳನ್ನು ನಮ್ಮ ಅನುಕೂಲಕ್ಕೆ ಬದಲಾಗಿ ನಾಶಕ್ಕೆ ಬಳಸಿಕೊಳ್ಳದೇ ಇರುವ ವಿವೇಕ ನಮ್ಮಲ್ಲಿದೆಯೇ ಎನ್ನುವುದು. ಸತ್ಯರವರ ಮೂರನೆಯ ಲೇಖನ "ನಾವೇ ರೂಪಿಸಿದ ತಾಂತ್ರಿಕತೆ: ಶಿಲಾಯುಗದಿಂದ ಅಂತರಿಕ್ಷಕ್ಕೆ ಜಿಗಿದ ಕಥೆ" ತಂತ್ರಜ್ಞಾನ ಬೆಳೆದುಬಂದ ಸಮಗ್ರ ಚರಿತ್ರೆಯನ್ನು ಬಿಚ್ಚಿಡುತ್ತದೆ. ಶಿಲಾಯುಗದಲ್ಲಿ ಕಲ್ಲುಗಳನ್ನು ಆಯುಧವಾಗಿ, ಆಹಾರ ಸಂಸ್ಕರಣೆಗಾಗಿ ಉಪಯೋಗಿಸುವ ತಂತ್ರದಿಂದ ಪ್ರಾರಂಭಿಸಿ, ಲೋಹಗಳ ಬಳಕೆಯ ಚರಿತ್ರೆ, ಸಮ್ಮಿಶ್ರ ಧಾತುಗಳ ಬಳಕೆ, ವಿವಿಧ ಯಂತ್ರೋಪಕರಣಗಳು, ನಮ್ಮ ಜೀವನವನ್ನು ಪೂರ್ಣ ಬದಲಿಸಿದ ವಿದ್ಯುತ್ ಶಕ್ತಿ, ಹೊಸ ಶಕ್ತಿಮೂಲಗಳು, ಆಧುನಿಕ ತಂತ್ರಜ್ಞಾನದವರೆಗಿನ ಎಲ್ಲ ಬೆಳವಣಿಗೆಯನ್ನೂ ಸೂಕ್ತ ಚಿತ್ರಗಳ ಸಮೇತ ನಿರೂಪಿಸಿದ್ದಾರೆ. ಲೇಖಕರೇ ಹೇಳಿರುವಂತೆ, ಈ ಎಲ್ಲ ತಾಂತ್ರಿಕತೆಗಳ ಹಿಂದಿರುವ ತತ್ವಗಳು, ಅವುಗಳ ಆವಿಷ್ಕಾರಗಳನ್ನು ವಿವರಿಸಲು ಹೊರಟರೆ "ವಿಶ್ವಕೋಶವನ್ನೇ ರಚಿಸಬೇಕಾಗುತ್ತದೆ". ತಾಂತ್ರಿಕತೆ ಬೆಳೆದುಬಂದ ದಾರಿಯ ಯಾವ ಪ್ರಮುಖ ಅಂಶವನ್ನೂ ಬಿಡದೆ ಈ ರೋಚಕ ಚರಿತ್ರೆಯನ್ನು ಸಂಕ್ಷೇಪವಾಗಿ, ಸರಳವಾಗಿ ನಿರೂಪಿಸುವುದರಲ್ಲಿ ಲೇಖಕರು ಪೂರ್ಣ ಸಫಲರಾಗಿದ್ದಾರೆ.

ಸಮರ್ಪಕ ಹಾಗೂ ಸುಂದರ ಶೀರ್ಷಿಕೆ "ದೂರ ಸಂಪರ್ಕ – ತೀರ ಹತ್ತಿರದ ನಂಟು" ಹೊಂದಿರುವ ಸತ್ಯೇನ್ ಬೆಳ್ಳೂರರ ಲೇಖನ ಚಿಕ್ಕದಾಗಿದ್ದರೂ, ನಂಬಲಾರದ ವೇಗದಲ್ಲಿ ಬೆಳೆಯುತ್ತಿರುವ, ಸಮಸ್ತ ಜನರ ಜೀವನವನ್ನೂ ಬದಲಿಸುತ್ತಿರುವ ದೂರ ಸಂಪರ್ಕ ತಂತ್ರ ಬೆಳೆದುಬಂದ ದಾರಿಯ ಪಕ್ಷಿನೋಟವನ್ನು ನೀಡುತ್ತದೆ. ಈ ವಿಜ್ಞಾನದ ಬೆಳವಣಿಗೆ ಇತ್ತೀಚಿನದಾಗಿದ್ದು, ಅನೇಕ ಪಾರಿಭಾಷಿಕ ಪದಗಳು ಹೊಸದಾಗಿ ಸೇರಿಕೊಂಡಿವೆ. ಇಂತಹ ಪದಗಳಿಗೆಲ್ಲ ಲೇಖಕರು ಸರಳ, ಸುಂದರ ಕನ್ನಡ ಪದಗಳನ್ನು ಹುಡುಕಿ, ಅಷ್ಟೇ ಸುಲಲಿತವಾದ ಕನ್ನಡದಲ್ಲಿ ಬರೆದಿರುವುದು ನಮ್ಮನ್ನು ಅಚ್ಚರಿಗೊಳಿಸುತ್ತದೆ. ಈ ಲೇಖನವನ್ನು ಓದುವ ಎಲ್ಲರೂ ಮೊಬೈಲ್ ಬಳಕೆದಾರರೇ ಆಗಿರುವುದರಿಂದ ಲೇಖನದ ವಿವರಣೆಗಳು ಬಹುಶಃ ಕ್ಲಿಷ್ಟ ಎನಿಸಲಾರವು.

ಗಣಕ ಯಂತ್ರಗಳ ಬಗ್ಗೆ ಜಿ. ಎನ್. ನರಸಿಂಹಮೂರ್ತಿಯವರು ಬರೆದಿರುವ ಲೇಖನ "ಮಾಹಿತಿ ತಂತ್ರಜ್ಞಾನದ ಮಹಾಪೂರದಲ್ಲಿ ಮಿಂದೆದ್ದ ಜಗತ್ತು" ಗಣಕ ಯಂತ್ರವನ್ನು ವ್ಯಾಪಕವಾಗಿ ಬಳಸಿಲ್ಲದವರಿಗೆ ಅರ್ಥಮಾಡಿಕೊಳ್ಳಲು ಕಷ್ಟ ಎನಿಸಬಹುದು. ಇಂದಿನ ಗಣಕ ಯಂತ್ರಗಳ ಯುಗ ಪ್ರಾರಂಭವಾಗುವ ಮೊದಲು ಕೂಡಿಕಳೆಯುವ, ಗುಣಿಸಿಭಾಗಿಸುವ ಗಣಿತದ ಲೆಕ್ಕಗಳನ್ನು ಮಾಡುವಂತಹ ಸರಳ ಯಂತ್ರಗಳನ್ನು ನಿರ್ಮಿಸಲು ಕೈಗೊಂಡ ಅನೇಕ ಪ್ರಯತ್ನಗಳ ಬಗ್ಗೆ ಲೇಖನ ಮಾಹಿತಿ ನೀಡುತ್ತದೆ. ಆದರೆ, ಗಣಕ ಯಂತ್ರಗಳು ಏಕೆ ಎರಡೇ ಸಂಖ್ಯೆಗಳನ್ನು (೦ ಮತ್ತು ೧) ಬಳಸುತ್ತವೆ? ಗಣಕಗಳಿಗೆ ಅರೆವಾಹಕಗಳು (semi conductors) ಏಕೆ ಅಗತ್ಯ? ಬಿಟ್, ಬೈಟ್‌ಗಳ ಪ್ರಾಮುಖ್ಯತೆಯೇನು? ಕ್ರಮವಿಧಿಭಾಷೆ (program) ಎಂದರೆ ಏನು? ಆಪರೇಟಿಂಗ್ ಸಿಸ್ಟಂ ಎಂದರೇನು ? ಚಿತ್ರಾತ್ಮಕ ಬಳಕೆಗಾರ ಸಮ್ಮುಖ (graphical user interface) ಹೇಗೆ ಕೆಲಸ ಮಾಡುತ್ತದೆ ? ಇವೆಲ್ಲಾ ಗಣಕ ಯಂತ್ರಗಳನ್ನು ಬಳಸದವರಿಗೆ ರಹಸ್ಯ ಎನಿಸಬಹುದು. ಇಂತಹ ಲೇಖನವನ್ನು ಸಾಮಾನ್ಯ ಜನರಿಗೂ ತಲುಪುವಂತೆ ಬರೆಯುವುದು ಬಹಳ ತೊಡಕಿನ ಕೆಲಸ ಎನ್ನುವುದು ನಿಜ. ಆದರೂ ಲೇಖನ ತಾಂತ್ರಿಕ ಮಾಹಿತಿಯನ್ನೂ ಸರಳ ಭಾಷೆಯಲ್ಲಿ ನಿರೂಪಿಸಿದ್ದರೆ ಚೆನ್ನಾಗಿರುತ್ತಿತ್ತು ಎನಿಸುತ್ತದೆ. ನರಸಿಂಹ ಮೂರ್ತಿಯವರ ಎರಡನೆಯ ಲೇಖನ "ಗಣಕದ ಗತಿ ಬದಲಾಯಿಸಿದ ಸಾಧನಗಳು" ಓದಿದೊಡನೇ ಮನದಟ್ಟಾಗುತ್ತದೆ. ಈ ಲೇಖನದಲ್ಲಿ ಗಣಕಗಳಿಗೆ ಮಾಹಿತಿ ಪೂರೈಸುವ ಬಾಹ್ಯ ಸಾಧನಗಳು, ಬಳಕೆದಾರನಿಗೆ ಮಾಹಿತಿ ಪೂರೈಸಲು ಇರುವ ವ್ಯವಸ್ಥೆಗಳು ಮತ್ತು ಗಣಕ ಯಂತ್ರದಿಂದ ಅನೇಕ ಬಾಹ್ಯ ಸಾಧನೆಗಳಿಗೆ, ಬಳಕೆದಾರನಿಗೆ ಮಾಹಿತಿ ರವಾನಿಸುವ ಸಾಧ್ಯತೆಗಳ ಪೂರ್ಣ ವಿವರಣೆಯಿದೆ. ಈ ಸಾಧನಗಳು ಸರ್ವವ್ಯಾಪಿಯಾಗಿರುವುದರಿಂದ, ಹೆಚ್ಚಿನ ಜನರು ಈ ಸಾಧನಗಳನ್ನು ಬಳಸಿರುತ್ತಾರೆ ಇಲ್ಲವೇ ಅವುಗಳ ಬಳಕೆಯನ್ನು ವೀಕ್ಷಿಸಿರುತ್ತಾರೆ. ಈ ಎಲ್ಲ ಸಾಧನಗಳು ಅದ್ಭುತ ತಾಂತ್ರಿಕ ಸಾಧನೆಯ ಪ್ರತೀಕಗಳಾಗಿವೆ. ಈ ಸಾಧನೆಗಳನ್ನು ಮತ್ತು ಅವುಗಳ ಹಿಂದಿರುವ ತಾಂತ್ರಿಕತೆಯನ್ನೂ ಲೇಖನದಲ್ಲಿ ಸೇರಿಸಿದ್ದರೆ, ಮೊದಲನೆಯ ಲೇಖನದಂತೆ ಇದು ಕೂಡ ತೊಡಕಾದುದು ಎನಿಸಬಹುದು. ಆದರೂ ಅಂತಹ ವಿವರಣೆ ಅಗತ್ಯ ಎನಿಸುತ್ತದೆ. ಜಾಲತಾಣಗಳ ವೀಕ್ಷಣೆ ವ್ಯಸನಕ್ಕೆ ತಿರುಗುತ್ತಿರುವ ಅಪಾಯವನ್ನು ಬೆಂಗಳೂರಿನ ಮಾನಸಿಕ ಆರೋಗ್ಯ ಕೇಂದ್ರ ಬೆಳಕಿಗೆ ತಂದಿದೆ. ವಿದ್ಯಾರ್ಥಿಗಳು ಬಹಳ ಸಮಯವನ್ನು ಜಾಲತಾಣಗಳ ತೇಲಾಡುವಿಕೆಯಲ್ಲಿ (surfing the internet) ಕಳೆದು, ತಮ್ಮ ವಿದ್ಯಾಭ್ಯಾಸದ ಅಮೂಲ್ಯ ಸಮಯವನ್ನು ಹಾಳುಮಾಡಿಕೊಳ್ಳುತ್ತಿದ್ದಾರೆ. ಕಡೆಯ ಲೇಖನ ಟಿ. ಜಿ. ಶ್ರೀನಿಧಿಯವರ "ಅಂತರಜಾಲದ ಮಾಯಾಜಾಲ" ನಮ್ಮನ್ನು ನಿಜಕ್ಕೂ ಒಂದು ಮಾಯಾಲೋಕಕ್ಕೆ ಕರೆದೊಯ್ದು ಅಂತರಜಾಲದ ವ್ಯಾಪಕತೆಯ ದರ್ಶನ ಮಾಡಿಸುತ್ತದೆ. ಆದರೆ ಈ ಲೇಖನವೂ ಕೂಡ ಟಿಸಿಪಿ/ಐಪಿ, ಯೂನಿಕೋಡ್, ಲಾನ್, ಡಿಜಿಟಲ್ ಇಮೇಜ್ ಮುಂತಾದುವುಗಳ ಬಗ್ಗೆ ತಾಂತ್ರಿಕ ಮಾಹಿತಿ ಕೊಡುವುದಿಲ್ಲ.

ಹೊತ್ತಿಗೆಯ ಕೊನೆಯಲ್ಲಿರುವ ಲೇಖನಗಳು ವಿಶ್ವವ್ಯಾಪಿ ಸಂವಹನೆ ಸಾಧ್ಯವಾಗಿಸಿರುವ ಯಂತ್ರಾಂಶ, ತಂತ್ರಾಂಶಗಳ ತಾಂತ್ರಿಕ ಹಿನ್ನೆಲೆಯನ್ನು ಒದಗಿಸದಿದ್ದರೂ, ಈ ಲೇಖನಗಳನ್ನು ಒಟ್ಟಾರೆ ಪರಿಶೀಲಿಸಿದಾಗ ಇಂದು ಆಗಿರುವ ನಂಬಲಾರದ ಬೆಳವಣಿಗೆಗಳ ಒಳನೋಟ ನೀಡುತ್ತವೆ. ಇವುಗಳನ್ನು ಓದಿದ ನಂತರ, ನಮ್ಮ ಪುರಾಣಗಳಲ್ಲಿ ಬರುವ "ಅಶರೀರವಾಣಿ"ಯನ್ನು ಇಂದಿನ ವಿಜ್ಞಾನ ಅಣಕಿಸುತ್ತಿದೆ ಎಂಬ ಅನಿಸಿಕೆ ಬಾರದೆ ಇರದು.

ಹೊತ್ತಿಗೆಯಲ್ಲಿ ವಿಜ್ಞಾನದ ವಿವಿಧ ಶಾಖೆಗಳ ಸಮತೋಲನವಿದೆ. ಲೇಖನಗಳನ್ನು ಸಮರ್ಪಕ ಸರಣಿಯಲ್ಲಿ ಜೋಡಿಸಲಾಗಿದೆ. ಒಂದು ಲೇಖನದ ವಿಷಯ ಸಹಜವಾಗಿ ಮುಂದಿನ ಲೇಖನಕ್ಕೆ ದಾರಿಮಾಡಿಕೊಡುತ್ತದೆ. ಮೊದಲ ಲೇಖನಗಳು ಭೌತಶಾಸ್ತ್ರಕ್ಕೆ ಸಂಬಂಧಿಸಿವೆ. ಗಣಿತ ಮತ್ತು ಭೌತಶಾಸ್ತ್ರ ಪ್ರಕೃತಿ ವೀಕ್ಷಣೆಯಿಂದ ಬೆಳೆದುಬಂದ ವಿಜ್ಞಾನದ ಮೊದಲ ಶಾಖೆಗಳು. ಇವುಗಳನ್ನು ತಳಹದಿಯನ್ನಾಗಿ ಮಾಡಿಕೊಂಡು ಕಳೆದ ಶತಮಾನದಲ್ಲಿ ಹೆಮ್ಮರವಾಗಿ ಬೆಳೆದು, ನಮ್ಮ ನಿತ್ಯಜೀವನದಲ್ಲಿ ಊಹಿಸಿಕೊಳ್ಳಲೂ ಆಗದಂತಹ ಪ್ರಗತಿಯನ್ನು ಸಾಧಿಸಿದ್ದು ಅಂತರಿಕ್ಷ ತಂತ್ರಜ್ಞಾನ. ಭದ್ರ ವೈಜ್ಞಾನಿಕ ಬುನಾದಿ ಇಲ್ಲದ

ಕಾಲದಲ್ಲೇ, ಅಮೂಲ್ಯ ಧಾತುಗಳನ್ನು ಪಡೆಯುವ ವಿಧಾನಗಳನ್ನು ಅರಸುವ ಪ್ರಯತ್ನದಲ್ಲಿ ರಸಾಯನಶಾಸ್ತ್ರ ಪ್ರಾರಂಭವಾಯಿತು. ಶತಮಾನಗಳ ಪ್ರಯತ್ನದಿಂದ ಅನೇಕ ರಾಸಾಯನಿಕ ಕ್ರಿಯೆಗಳನ್ನು ಪಟ್ಟಿಮಾಡಿದ್ದರೂ, ಈ ಕ್ರಿಯೆಗಳು ಏಕೆ ನಡೆಯುತ್ತವೆ, ಎನ್ನುವುದು ತಿಳಿದಿರಲಿಲ್ಲ. ಇಂತಹ ಪ್ರಯೋಗಗಳಿಗೆ ವೈಜ್ಞಾನಿಕ ಸ್ವರೂಪ ಬಂದಿದ್ದು ಹಿಂದಿನ ಮೂರು ಶತಮಾನಗಳಲ್ಲಷ್ಟೇ. ಈ ರಸಾಯನ ಶಾಸ್ತ್ರದ ಚರಿತ್ರೆ ಮುಂದಿನ ಲೇಖನಗಳ ವಿಷಯ. ಅದರ ಮುಂದಿನ ಲೇಖನಗಳು ನಮ್ಮ ದೈನಂದಿನ ಬದುಕಿನ ಅವಿಭಾಜ್ಯ ಅಂಗವಾಗಿರುವ ಅನೇಕ ವಸ್ತುಗಳನ್ನು ನಮಗೆ ದೊರಕಿಸಿಕೊಟ್ಟಿರುವ ವಸ್ತು ವಿಜ್ಞಾನ (material science) ಕುರಿತಾದ ಲೇಖನಗಳು. ನಂತರದ ಲೇಖನಗಳು ಸಸ್ಯ ವಿಜ್ಞಾನಕ್ಕೆ ಸಂಬಂಧಪಟ್ಟವು. ೨೦ನೆಯ ಶತಮಾನದಲ್ಲಾದ ಜೀವ ವಿಜ್ಞಾನದ ಮುನ್ನಡೆಯನ್ನು ಪ್ರತಿನಿಧಿಸಲು ಈ ಹೊತ್ತಿಗೆಯಲ್ಲಿ ಇನ್ನೂ ಹೆಚ್ಚಿನ ಲೇಖನಗಳಿರಬೇಕಾಗಿತ್ತು. ಅಣುರಚನ ಜೀವಶಾಸ್ತ್ರ (structural biology), ಭೌತಿಕ ಜೀವಶಾಸ್ತ್ರ (biophysics), ನರವಿಜ್ಞಾನ (neurology) ಮತ್ತು ಮೆದುಳಿನ ಮೇಲಿನ ಸಂಶೋಧನೆಗಳಿಗೆ ಮೀಸಲಾದ ಲೇಖನಗಳನ್ನು ಸೇರಿಸಿದರೆ ಹೊತ್ತಿಗೆ ಇನ್ನೂ ಅಮೂಲ್ಯವಾಗುತ್ತದೆ. ವಿಧಿವಿಜ್ಞಾನದ ಲೇಖನ ಹೊತ್ತಿಗೆಯ ವಿಶೇಷ. ಕೃಷಿ ವಿಜ್ಞಾನದ ಲೇಖನಗಳು ಬಹು ಸಮರ್ಪಕವಾಗಿವೆ. ಇತರ ಪತ್ರಿಕೆಗಳಲ್ಲಿ ಹೆಚ್ಚಾಗಿ ಪ್ರಸಾರಗೊಳ್ಳದ ವಿಷಯಗಳನ್ನು ಭೂವಿಜ್ಞಾನ ಲೇಖನ ತಿಳಿಸುತ್ತದೆ. ಪರಿಸರ ವಿಜ್ಞಾನಕ್ಕೆ ಸಂಬಂಧಿಸಿದ ಲೇಖನಗಳು ನಮ್ಮನ್ನು ಎಚ್ಚರಿಸುತ್ತವೆ. ಗಣಿತಕ್ಕೆ ಸಂಬಂಧಿಸಿದ ಒಂದೇ ಲೇಖನವಿದ್ದರೂ, ಅದು ಹೊತ್ತಿಗೆಯ ಅಮೂಲ್ಯ ಅಂಗವಾಗಿದೆ. ಕಡೆಯ ಲೇಖನಗಳು ನಮಗೆ ಇಂದಿನ ಯುಗ ಪರಿಚಯ ಮಾಡಿಕೊಡುತ್ತವೆ.

ಬಹುಪಾಲು ಲೇಖನಗಳಲ್ಲಿ ಸಣ್ಣ, ಪುಟ್ಟ ಮುದ್ರಣ ದೋಷಗಳಿವೆ. ಇವುಗಳನ್ನು ಮರುಮುದ್ರಣದಲ್ಲಿ ಸರಿಪಡಿಸಬಹುದು. ಆದರೆ ಅಪರೂಪಕ್ಕೆ ಕಾಣಿಸುವ ಇಂತಹ ತಪ್ಪುಗಳು ಹೊತ್ತಿಗೆಯ ಮೌಲ್ಯವನ್ನು ಯಾವ ರೀತಿಯಲ್ಲೂ ಕಡಿಮೆ ಮಾಡುವುದಿಲ್ಲ. ಈ ವಿಮರ್ಶೆಯ ಸಾರಾಂಶ "ವಿಜ್ಞಾನದ ಹೆದ್ದಾರಿಯಲ್ಲಿ ಮಹಾತಿರುವುಗಳು" ನವಕರ್ನಾಟಕ ಕನ್ನಡ ಜನತೆಗೆ ನೀಡಿರುವ ಅತ್ಯಮೂಲ್ಯ ಕೊಡುಗೆ. ನವಕರ್ನಾಟಕ ಪ್ರಕಾಶನಕ್ಕೂ, ಈ ಹೊತ್ತಿಗೆಗೆ ತಮ್ಮ ಲೇಖನಗಳನ್ನು ನೀಡಿರುವ ಎಲ್ಲ ಬರಹಗಾರರಿಗೂ ನನ್ನ ವಂದನೆಗಳು, ಅಭಿನಂದನೆಗಳು.

**ಪ್ರೊ॥ ಎಂ. ಆರ್. ಎನ್. ಮೂರ್ತಿ**
ಮಾಲಿಕ್ಯುಲರ್ ಬಯೋಫಿಸಿಕ್ಸ್ ವಿಭಾಗ, ಯುಜಿಸಿ ಸೆಂಟರ್ ಫಾರ್ ಅಡ್ವಾನ್ಸ್‌ಡ್ ಸ್ಟಡೀಸ್
ಇಂಡಿಯನ್ ಇನ್‌ಸ್ಟಿಟ್ಯೂಟ್ ಆಫ್ ಸೈನ್ಸ್, ಸಿಲ್ವರ್ ಓಕ್ ಮಾರ್ಗ, ಬೆಂಗಳೂರು – ೫೬೦ ೦೧೨




# ಮರದ ಪಯಣ



ಕೇಳುತ್ತ ಕುಳಿತಿದ್ದ ರೈತಳೊಬ್ಬಳು
ಕೇಳಿದಳು ಮರಳಿ ಮೆಲುದನಿಯಲ್ಲಿ
ಅಲ್ಲ ಕವಿಯಣ್ಣ
ಮರೆತೇಬಿಟ್ಟೆಯಲ್ಲ ನಡುವಿನ ಮರವನ್ನು
ಅದರ ಹಸಿರನ್ನು
ಬಿರುಗಾಳಿಗೂ ಬೀಳದೆ ಬಾಳಿಡೀ
ನಿಂತು ನೇರ ಅದು ಹೀರಿದ
ಉರಿಬಿಸಿಲು ಕುಡಿದ ಕೆಸರು ನೀರು
ಉಂಡ ಕೊಳೆಗೊಬ್ಬರವನ್ನು
ಹೋದರೂ ವರುಷ ವರುಷ
ಉರುಳಿ ತಾ ನಿಂತಲ್ಲೆ ನಿಂತು

ಅದು ಮಾಡಿದ ಪಯಣ
ನಾಳೆಯ ಹೂ ಹಣ್ಣಿಗಾಗಿ
ನೆಲದಾಳದೊಳಗೆ ಬೇರಿಳಿಸಿ
ಆ ನಿಗೂಢ ಕತ್ತಲೆಯ
ಗಾಢ ಮೌನದಲಿ
ಅದು ಮಾಡಿದ ಧ್ಯಾನ

ತೆರೆಯಿತು ಕವಿಯ ಒಳಗಣ್ಣು
ನೋಡಿದರೆ ಆತ ಕುಳಿತಿದ್ದ
ಅವಳ ಹೊಲದ
ಮರದ ಕೆಳಗೇ!

ಪದ್ಯವೆಂದರೆ ಎಳೆ
ಬಿಸಿಲಿನಲ್ಲಿ ಫಳಫಳ
ಹೊಳೆಯುವ ನರುಗೆಂಪು ಚಿಗುರು
ಪದ್ಯವೆಂದರೆ ತೊಟ್ಟು
ಕಳಚಿ ಒಂದೆರಡು ಗಳಿಗೆ
ಗಾಳಿಯಲಿ ತೇಲಾಡಿ ಮಣ್ಣಮೇಲೆ
ನಿರಾಳ ಮಲಗುವ ಹಳದಿ ಎಲೆ
ಕವಿತೆ ಓದಿ ಮುಗಿಸಿದ ಕವಿ.

**ಡಾ॥ ಸಂಜೀವ ಕುಲಕರ್ಣಿ**
ನಗೆ ಮಲ್ಲಿಗೆ, ನಂ.೨೦/೧, ಮಹಿಷಿ ರಸ್ತೆ, ಮಾಳಮಡ್ಡಿ
ಧಾರವಾಡ – ೫೮೦ ೦೦೭


ರಾಬರ್ಟ್ ಮುಗಾಬೆ

## ಜಿಂಬಾಬ್ವೆ : ಮುಗಾಬೆ ಆಡಳಿತ ಅಂತ್ಯ

ವರ್ಷಾಂತ್ಯದಲ್ಲಿ ಜರುಗಿದ ಪ್ರಮುಖ ಘಟನೆ ಎಂದರೆ ಆಫ್ರಿಕಾ ಖಂಡದ ಜಿಂಬಾಬ್ವೆಯಲ್ಲಿ ೩೭ ವರ್ಷಗಳಷ್ಟು ದೀರ್ಘಕಾಲ ಅಧಿಕಾರದಲ್ಲಿದ್ದ ರಾಬರ್ಟ್ ಮುಗಾಬೆ ಯುಗ ಅಂತ್ಯ. ದೇಶದ ಸ್ವಾತಂತ್ರ್ಯಕ್ಕಾಗಿ, ವರ್ಣಭೇದ ನೀತಿಯ ವಿರುದ್ಧವಾಗಿ ಹೋರಾಟ ನಡೆಸಿದ ಜಿಂಬಾಬ್ವೆ ಆಫ್ರಿಕನ್ ನ್ಯಾಷನಲ್ ಯೂನಿಯನ್–ಪೇಟ್ರಿಯಾಟಿಕ್ ಫ್ರಂಟ್‌ನ (ಜ಼ಾನು–ಪಿಎಫ್) ನಾಯಕ ಅಧ್ಯಕ್ಷಸ್ಥಾನದಿಂದ ೨೦೧೭ರ ನವೆಂಬರ್ ೨೨ರಂದು ಕೆಳಗಿಳಿಯಬೇಕಾಯಿತು ಒತ್ತಾಯ ಪೂರ್ವಕವಾಗಿ. ದೇಶ ಸ್ವಾತಂತ್ರ್ಯಗೊಂಡ ೧೯೮೦ರಿಂದ ಅಧಿಕಾರದಲ್ಲಿದ್ದ ಮುಗಾಬೆ ಜಿಂಬಾಬ್ವೆಗೆ ಸ್ಥಿರತೆಯನ್ನು ತಂದುಕೊಟ್ಟು, ಹಲವು ಸುಧಾರಣೆಗಳನ್ನು ಜಾರಿಗೊಳಿಸಿದ್ದರು. ಅಲಿಪ್ತ ಚಳುವಳಿಯಲ್ಲಿ ಪ್ರಮುಖ ಪಾತ್ರವಹಿಸಿದ್ದರು. ಆದರೆ ಅಧಿಕಾರ ಮದದಿಂದ ಕೊನೆಯ ವರ್ಷಗಳಲ್ಲಿ ಸರ್ವಾಧಿಕಾರಿಯಾಗಿ ವರ್ತಿಸಿದರು. ಉತ್ತರಾಧಿಕಾರಿಯಾಗಿ ಪತ್ನಿಯನ್ನು ಅಧಿಕಾರಕ್ಕೆ ತರಲು ಬಯಸಿದ್ದ ಮುಗಾಬೆ, ಉಪಾಧ್ಯಕ್ಷ ನಂಗಾಗ್ವರನ್ನು ಪದಚ್ಯುತಗೊಳಿಸಿದ್ದೇ ಮುಳುವಾಯಿತು. ಸೇನೆಯ ಬೆಂಬಲ ಪಡೆದಿದ್ದ ಉಪಾಧ್ಯಕ್ಷರಾಗಿದ್ದ ನಂಗಾಗ್ವ ಈಗ ಅಧಿಕಾರದಲ್ಲಿದ್ದಾರೆ. ಕ್ಷಿಪ್ರ ಸೇನಾ ಕಾರ್ಯಾಚರಣೆಯಿಂದಾಗಿ ಮುಗಾಬೆ ಕೆಲದಿನಗಳು ಗೃಹಬಂಧನದಲ್ಲಿದ್ದರು. ಈ ಎಲ್ಲ ಬೆಳವಣಿಗೆಗಳ ಸಂದರ್ಭದಲ್ಲಿ ಘರ್ಷಣೆಗಳೇನೂ ಸಂಭವಿಸದೆ, ಅಧಿಕಾರ ಹಸ್ತಾಂತರವಾದ್ದು ಗಮನಾರ್ಹ.




ದಕ್ಷಿಣ ಆಫ್ರಿಕಾದ ನೆರೆಯಲ್ಲಿರುವ ಜಿಂಬಾಬ್ವೆ ಅದರಂತೆಯೇ ವರ್ಣಭೇದ ನೀತಿಯನ್ನು ಎದುರಿಸಬೇಕಾಯಿತು. ಸ್ವಾತಂತ್ರ್ಯಾನಂತರ ಜಿಂಬಾಬ್ವೆ ಎಂದು ನಾಮಕರಣಗೊಂಡ ದೇಶ ೧೯೨೩ರಲ್ಲಿ ಬ್ರಿಟಿಷ್ ವಸಾಹತು ದಕ್ಷಿಣ ರೋಡೇಷಿಯ ಆಗಿತ್ತು. ದಕ್ಷಿಣ ಆಫ್ರಿಕಾದಂತೆಯೇ ಇಲ್ಲಿ ಕೂಡ ಇಯಾನ್ ಸ್ಮಿತ್ ನೇತೃತ್ವದಲ್ಲಿ ಅಲ್ಪಸಂಖ್ಯಾತರಾಗಿದ್ದ ಬಿಳಿಯರು ಏಕಪಕ್ಷೀಯವಾಗಿ ಸ್ವಾತಂತ್ರ್ಯ ಘೋಷಿಸಿ ಸರಕಾರ ಸ್ಥಾಪಿಸಿಕೊಂಡರು ೧೯೬೫ರಲ್ಲಿ. ವರ್ಣಭೇದ ನೀತಿಯನ್ನು ಅನುಷ್ಠಾನಕ್ಕೆ ತಂದು ಕರಿಯ ಜನಾಂಗದವರ ಮೇಲೆ ದಬ್ಬಾಳಿಕೆ ನಡೆಸತೊಡಗಿದರು. ರಾಬರ್ಟ್ ಮುಗಾಬೆ ನಾಯಕತ್ವದಲ್ಲಿ ಜ಼ಾನು ನಡೆಸಿದ ಹೋರಾಟ ಈಗ ಇತಿಹಾಸ.

* * *

## ಪ್ಯಾಲಸ್ತೈನ್ ಹೋರಾಟಕ್ಕೆ ಹಿನ್ನಡೆ


ಡೊನಾಲ್ಡ್ ಟ್ರಂಪ್


ಯಾಸರ್ ಅರಾಫತ್

ಇಸ್ರೇಲ್ ಮತ್ತು ಅರಬ್ ರಾಷ್ಟ್ರಗಳ ಎರಡು ಯುದ್ಧ, ಪ್ಯಾಲಸ್ತೀನ್ ಜನರ ಎಪ್ಪತ್ತು ವರ್ಷಗಳ ಹೋರಾಟ ಇದುವರೆಗೆ ನಿರೀಕ್ಷಿತ ಫಲಿತಾಂಶ ನೀಡಲಿಲ್ಲ. ಪ್ಯಾಲಸ್ತೈನ್ ರಾಜ್ಯದ ಸ್ಥಾಪನೆಯಾಗಲಿಲ್ಲ. ಸುದೀರ್ಘ ಹೋರಾಟದ ನಂತರ ಪ್ಯಾಲಸ್ತೈನ್ ವಿಮೋಚನಾ ಸಂಸ್ಥೆಯ ನಾಯಕ ಯಾಸರ್ ಅರಾಫತ್ ಇಸ್ರೇಲಿನೊಂದಿಗೆ ಅಮೆರಿಕದ ಮಧ್ಯಸ್ಥಿಕೆಯಿಂದ ಒಡಂಬಡಿಕೆ ಮಾಡಿಕೊಂಡು ಪ್ಯಾಲಸ್ತೀನಿಯನ್ನರಿಗೆ ಸ್ವಾಯತ್ತತೆ ಲಭಿಸಿದಾಗ್ಯೂ ಪ್ರಯೋಜನವಾಗಲಿಲ್ಲ. ಬದಲಾಗಿ ಸಂಸ್ಥೆಯಲ್ಲಿ ಒಡಕುಂಟಾಯಿತು. ಪ್ಯಾಲಸ್ತೀನ್ ಅರಬ್ಬರನ್ನು ವಂಚಿಸಿ ಬ್ರಿಟನ್ ಯೆಹೂದ್ಯರಿಗೆ ಇಸ್ರೇಲ್ ರಾಷ್ಟ್ರ ನಿರ್ಮಿಸಿಕೊಟ್ಟದ್ದು ಈಗ ಇತಿಹಾಸ. ಟೆಲ್‌ಅವೀವ್‌ಅನ್ನು ರಾಜಧಾನಿಯಾಗಿ ಮಾಡಿಕೊಂಡ ಇಸ್ರೇಲಿನ ಆಡಳಿತ ಅಮೆರಿಕದ ಬೆಂಬಲದಿಂದ ತನ್ನ ವಿಸ್ತರಣಾ ನೀತಿಯನ್ನು ಮುಂದುವರಿಸಿಕೊಂಡು ಹೋಯಿತು. ಈಗ ವಿವಾದಿತ ಜೆರೂಸಲೆಮ್‌ಅನ್ನು ಕಬಳಿಸಲು ಮುಂದಾಗಿದೆ.

ಜೆರೂಸಲೆಮ್ ಯೆಹೂದ್ಯರಿಗೆ, ಪ್ಯಾಲಸ್ತೈನ್ ಅರಬ್ಬರಿಗೆ ಹಾಗೂ ಕ್ರಿಶ್ಚಿಯನ್ನರಿಗೆ ಯಾತ್ರಾಸ್ಥಳ. ಅದು ಇಸ್ರೇಲ್ ಆಕ್ರಮಿಸಿಕೊಂಡಿರುವ ವೆಸ್ಟ್ ಬ್ಯಾಂಕ್ ಪ್ರದೇಶದಲ್ಲಿದೆ. ಈ ಪ್ರದೇಶ ವಿವಾದಿತ ಎಂದು ತಿಳಿದಿದ್ದಾಗ್ಯೂ ಅಮೆರಿಕದ ಅಧ್ಯಕ್ಷ ಡೊನಾಲ್ಡ್ ಟ್ರಂಪ್ ಇದೀಗ ಅಮೆರಿಕದ ರಾಯಭಾರಿ ಕಚೇರಿಯನ್ನು ಟೆಲ್‌ಅವೀವ್‌ನಿಂದ ಜೆರೂಸಲೆಮ್‌ಗೆ ಸ್ಥಳಾಂತರಿಸುವ ನಿರ್ಧಾರವನ್ನು ಪ್ರಕಟಿಸಿ ಹೊಸ ವಿವಾದವನ್ನು ಹುಟ್ಟುಹಾಕಿದ್ದಾರೆ. ಅಮೆರಿಕದ ಬೆಂಬಲದಿಂದ ವಿಶ್ವಸಂಸ್ಥೆಯ ಆದೇಶಗಳನ್ನು ಉಲ್ಲಂಘನೆ ಮಾಡುತ್ತಿರುವ ಇಸ್ರೇಲಿಗೆ ಅಮೆರಿಕದ ನಿರ್ಧಾರ ಹೊಸ ಬಲ ನೀಡಿದೆ. ಈಗಾಗಲೇ ಇಸ್ರೇಲಿನ ಹಲವು ಸರಕಾರಿ ಕಚೇರಿಗಳು ಜೆರೂಸಲೆಮ್‌ನಲ್ಲಿ ಕಾರ್ಯ ನಿರ್ವಹಿಸುತ್ತಿವೆ. ಅಮೆರಿಕದ ಅಧ್ಯಕ್ಷರಾಗಿ ಅಧಿಕಾರ ವಹಿಸಿಕೊಂಡಾಗಿನಿಂದ ಏನಾದರೊಂದು ಹೊಸ ವಿವಾದವನ್ನು ಕೆದಕುವುದು ಟ್ರಂಪ್ ಅವರ ಪರಿಪಾಠವಾಗಿಬಿಟ್ಟಿದೆ. ಅವರ ಈ ನಿರ್ಧಾರ ಪ್ಯಾಲಸ್ತೀನಿಯನ್ನರ ಹೋರಾಟಕ್ಕೆ ಮತ್ತೊಂದು ಹಿನ್ನಡೆಯಾಗಿದೆ.

ಅರಬ್ ದೇಶಗಳಲ್ಲಿ ಜೆರೂಸಲೆಮ್ ಕುರಿತ ಟ್ರಂಪ್ ನಿಲುವನ್ನು ವಿರೋಧಿಸಿ ಪ್ರತಿಭಟನೆಗಳಾಗಿವೆ. ಪ್ಯಾಲಸ್ತೈನ್ ಪ್ರದೇಶದಲ್ಲಿ ನಡೆದ ಪ್ರತಿಭಟನೆಗಳ ಸಂದರ್ಭದಲ್ಲಿ ಇಸ್ರೇಲಿನ ದಬ್ಬಾಳಿಕೆಯಿಂದ ಕೆಲವರು ಅಸುನೀಗಿದ್ದಾರೆ. ಭಾರತ ಈ ವಿಚಾರದಲ್ಲಿ ತಟಸ್ಥ ನೀತಿಯನ್ನು ತಾಳಿದೆ. ಇಸ್ರೇಲಿನೊಂದಿಗೆ ಮೋದಿ ಸರಕಾರ ಸ್ಥಾಪಿಸಿಕೊಂಡಿರುವ ಮಧುರ ಸಂಬಂಧವೇ ಇದಕ್ಕೆ ಕಾರಣ. ವಿಶ್ವಸಂಸ್ಥೆಯ ಮಾನ್ಯತೆ ಪಡೆದುಕೊಂಡಿದ್ದರೂ ಇನ್ನೂ ಪ್ಯಾಲಸ್ತೀನಿಯನ್ನರಿಗೆ ಸ್ವತಂತ್ರ ರಾಷ್ಟ್ರ ನಿರ್ಮಾಣವಾಗದಿರುವುದು ಒಂದು ದುರಂತ.

* * *

## ನೇಪಾಳದಲ್ಲಿ ಎಡಪಕ್ಷಗಳು ಅಧಿಕಾರಕ್ಕೆ

ಒಂದು ಕಾಲದಲ್ಲಿ ಹಿಂದೂ ರಾಷ್ಟ್ರವಾಗಿದ್ದು, ನಿರಂಕುಶ ದೊರೆಗಳ ಆಡಳಿತದಲ್ಲಿದ್ದ ನೇಪಾಳ ಈಗ ಗಣರಾಜ್ಯವಾಗಿ ಎಡಪಕ್ಷಗಳ ಅಧಿಕಾರಕ್ಕೆ ಬಂದಿದೆ. ಈಚೆಗೆ ನಡೆದ ಚುನಾವಣೆಗಳಲ್ಲಿ ಎಡಪಕ್ಷಗಳು ಭಾರೀ ಬಹುಮತ ಗಳಿಸಿವೆ. ೧೬೫ ಸ್ಥಾನಗಳು ಇರುವ ಪಾರ್ಲಿಮೆಂಟ್‌ನಲ್ಲಿ ನೇಪಾಳದ ಚುನಾವಣಾ ವ್ಯವಸ್ಥೆಯಲ್ಲಿ ಶೇಕಡ ೭೦ಕ್ಕೂ ಹೆಚ್ಚು ಸ್ಥಾನಗಳನ್ನು ಪಡೆಯುವ ನಿರೀಕ್ಷೆಯಲ್ಲಿದೆ. ಎಡಪಕ್ಷಗಳ ಮೈತ್ರಿಕೂಟಕ್ಕೆ ೧೯೯೦ರಲ್ಲಿ ನೇಪಾಳ ಗಣರಾಜ್ಯವಾದ ನಂತರ ನಿಚ್ಚಳ ಬಹುಮತ ಲಭಿಸಿತು. ಸ್ಥಳೀಯ ಸಂಸ್ಥೆಗಳ ಚುನಾವಣೆಗಳಲ್ಲೂ ಈ ಮೈತ್ರಿಕೂಟ ವಿಜಯ ಸಾಧಿಸಿತ್ತು ಕೆಲದಿನಗಳ ಹಿಂದೆ. ಚುನಾವಣೆಗೆ ಮುನ್ನ ನೇಪಾಳದ ಕಮ್ಯುನಿಸ್ಟ್ ಪಾರ್ಟಿ ಯುನೈಟೆಡ್ ಮಾರ್ಕ್ಸಿಸ್ಟ್–ಲೆನಿನಿಸ್ಟ್ ಮತ್ತು ಮಾವೋವಾದಿ ಕೇಂದ್ರ ಎರಡೂ ಪಕ್ಷಗಳು ಮೈತ್ರಿಕೂಟ ಸ್ಥಾಪಿಸಿಕೊಂಡು ಚುನಾವಣಾ ಕಣಕ್ಕೆ ಇಳಿದಿದ್ದವು. ಇದುವರೆಗೆ ಅಧಿಕಾರದ ಸೂತ್ರ ಹಿಡಿದಿದ್ದ ನೇಪಾಳಿ ಕಾಂಗ್ರೆಸ್ ಹೀನಾಯ ಸೋಲನ್ನನು ಭವಿಸಿದೆ. ೧೯೯೦ರಿಂದೀಚೆಗೆ ನೇಪಾಳ ಒಂದು ಬಗೆಯಲ್ಲಿ ಸ್ಥಿರತೆಯನ್ನೇ ಕಾಣದ ಹಿಮಾಲಯದ ಪುಟ್ಟ ರಾಷ್ಟ್ರ. ಇಪ್ಪತ್ತೇಳು ವರ್ಷಗಳಲ್ಲಿ ದೇಶ ಹದಿಮೂರು ಮಂದಿ ಪ್ರಧಾನಿಗಳನ್ನು ಕಂಡಿದೆ. ಎಡಪಕ್ಷಗಳ ಮೈತ್ರಿಕೂಟ ಭಾರಿ ಬಹುಮತ ಪಡೆದಿರುವುದರಿಂದ ಸುಸ್ಥಿರತೆಯನ್ನು ಕಾಣುವ ನಿರೀಕ್ಷೆ ಇದೆ. ಎಡಪಕ್ಷಗಳು ಅಧಿಕಾರಕ್ಕೆ ಬರುತ್ತಿರುವುದು ಮೋದಿ ಸರಕಾರಕ್ಕೆ ಇರಸು–ಮುರುಸಾಗಿದೆ.




**ಸೀಯಾರ್ಕೆ**
'ಚೌಬೀನ', ನಂ. ೮೪೮, ೭ನೇ ಕ್ರಾಸ್, ಬನಶಂಕರಿ ೩ನೇ ಹಂತ
೩ನೇ ಬ್ಲಾಕ್, ಕತ್ರಿಗುಪ್ಪೆ, ಬೆಂಗಳೂರು – ೫೬೦ ೦೮೫




# ತಾರಾಲಯದ ತಾರೆ
# ಡಾ॥ ಬಿ. ಎಸ್. ಶೈಲಜಾ

ಲೇಖನ ಸಿದ್ಧಪಡಿಸಿದವರು
ಡಾ॥ ವೈ. ಸಿ. ಕಮಲ

ಸಂದರ್ಶಕರು
ಡಾ॥ ವೈ. ಸಿ. ಕಮಲ
ಡಾ॥ ಜಿ. ರಾಮಕೃಷ್ಣ
ಡಾ॥ ಎನ್. ಗಾಯತ್ರಿ

ಬೆಂಗಳೂರಿನ ಪ್ರಸಿದ್ಧ ವಿಜ್ಞಾನಿ ಡಾ॥ ಬಿ. ಎಸ್. ಶೈಲಜಾ ಅವರಿಗೂ 'ಹೊಸತು' ಪತ್ರಿಕೆಗೂ ವಿಶೇಷ ನಂಟು. ೧೯೯೯ರಲ್ಲಿ 'ಹೊಸತು' ಪತ್ರಿಕೆ ಆರಂಭವಾದಾಗಿನಿಂದ ಒಂದು ತಿಂಗಳು ಸಹ ತಪ್ಪದೆ ಕ್ಲುಪ್ತವಾಗಿ ಅದಕ್ಕೆ ಸತತವಾಗಿ 'ನಭಾವಲೋಕನ' ಅಂಕಣವನ್ನು ಬರೆಯುತ್ತಾ ಬಂದಿರುವ ಡಾ॥ ಶೈಲಜಾ ಅವರು ಸಂಶೋಧಕಿ, ಬೋಧಕಿ ಹಾಗೂ ಲೇಖಕಿಯಾಗಿ ಬಹುಮುಖ ವ್ಯಕ್ತಿತ್ವವುಳ್ಳವರು. ಪ್ರಸ್ತುತ ಜವಾಹರಲಾಲ್ ನೆಹರೂ ಪ್ಲಾನೆಟೇರಿಯಂನಲ್ಲಿ ಸಂದರ್ಶಕ ವಿಜ್ಞಾನಿಯಾಗಿ ಕಾರ್ಯ ನಿರ್ವಹಿಸುತ್ತಿರುವ ಡಾ॥ ಶೈಲಜಾ ಅವರನ್ನು 'ಹೊಸತು' ವಿಶೇಷ ಸಂಚಿಕೆಗಾಗಿ ಸಂದರ್ಶಿಸಲಾಯಿತು. ಬಸವನಗುಡಿ ನ್ಯಾಷನಲ್ ಕಾಲೇಜಿನ ಭೌತಶಾಸ್ತ್ರ ಪ್ರಾಧ್ಯಾಪಕಿ ಡಾ॥ ವೈ. ಸಿ. ಕಮಲ ಅವರು ನಡೆಸಿದ ಸಂದರ್ಶನ ಇಲ್ಲಿದೆ. ಅವರೊಡನೆ 'ಹೊಸತು' ಬಳಗದ ಡಾ॥ ಜಿ. ರಾಮಕೃಷ್ಣ ಮತ್ತು ಡಾ॥ ಎನ್. ಗಾಯತ್ರಿ ಕೂಡ ಸಂದರ್ಶನದಲ್ಲಿ ಪಾಲ್ಗೊಂಡಿದ್ದರು.



**ಹೊಸತು :** ಮೇಡಂ, ನಮಸ್ಕಾರ. 'ಹೊಸತು' ಪತ್ರಿಕೆಯ ಪ್ರಾರಂಭಿಕ ಸಂಚಿಕೆಯಿಂದ ಇಲ್ಲಿಯವರೆಗೂ ನಿರಂತರವಾಗಿ ನೀವು ಬರೆಯುತ್ತಿರುವ 'ನಭಾವಲೋಕನ' ಅಂಕಣದಿಂದ 'ಹೊಸತು' ಪತ್ರಿಕೆಯ ಓದುಗರಿಗೆ ಚಿರಪರಿಚಿತರಾಗಿದ್ದೀರಿ. ಇನ್ನು ಬೋಧಕಿ, ಸಂಶೋಧಕಿ ಹಾಗೂ ಬರಹಗಾರ್ತಿಯಾಗಿ ವ್ಯಕ್ತಗೊಂಡ ನಿಮ್ಮ ವ್ಯಕ್ತಿತ್ವದ ಪರಿಚಯವನ್ನು ನಮ್ಮ ಓದುಗರಿಗೆ ಮಾಡಿಕೊಡುವ ಸಲುವಾಗಿ ಈಗ ನಿಮ್ಮಲ್ಲಿ ಬಂದಿದ್ದೇವೆ.

**ಶೈಲಜಾ :** ಸಂತೋಷ.

**ಹೊಸತು :** ನಿಮ್ಮ ಬರವಣಿಗೆಗೆ ಹಿನ್ನೆಲೆಯಾದ ಕೌಟುಂಬಿಕ ಪರಿಸರ ಹೇಗಿತ್ತು?

**ಶೈಲಜಾ :** ನಮ್ಮ ಮನೆಯಲ್ಲಿ ಸಾಹಿತ್ಯದ ವಾತಾವರಣವಿತ್ತು. ನಮ್ಮ ತಂದೆ ಬ. ನ. ಸುಂದರ ರಾವ್ ಸಾಹಿತ್ಯದ ಬಗ್ಗೆ ವಿಶೇಷ ಆಸಕ್ತಿಯನ್ನು ಹೊಂದಿದ್ದರು. ಅವರು ಕವಿ, ಸಂಶೋಧಕ, ನಾಟಕಕಾರ, ಲೇಖಕ, ಪತ್ರಿಕೋದ್ಯಮಿ ಎಲ್ಲವೂ ಆಗಿದ್ದರು. ಮನೆಯಲ್ಲಿ ಸುಮಾರು ೨೦೦೦ ಪುಸ್ತಕಗಳಿದ್ದವು. ಕನ್ನಡ ನುಡಿ, ಜೀವನ ಮುಂತಾದವುಗಳಿಗೆ ವಿಮರ್ಶೆ ಬರೆಯುತ್ತಿದ್ದರು. ಅನೇಕ ಸಾಹಿತಿಗಳ ಒಡನಾಟ ಅವರಿಗಿತ್ತು. ಜಿ. ಪಿ. ರಾಜರತ್ನಂ, ಮಾಸ್ತಿ, ವಿ. ಸೀ., ಜಯದೇವಿತಾಯಿ ಲಿಗಾಡೆ – ಅವರ ಮನೆಗಳಿಗೆ ನಮ್ಮನ್ನು ಕರೆದುಕೊಂಡು ಹೋಗುತ್ತಿದ್ದರು. ಅವರಿಗೆ ಇತಿಹಾಸದ ಬಗ್ಗೆ ವಿಶೇಷ ಒಲವಿತ್ತು. ಬಾಂಗ್ಲಾದೇಶದ ಇತಿಹಾಸ ತಿಳಿಸುವ 'ಬಾಂಗ್ಲೋದಯ', ಅಂತೆಯೇ ಬೆಂಗಳೂರಿನ ಇತಿಹಾಸ ಕುರಿತ ಪುಸ್ತಕಗಳನ್ನು ರಚಿಸಿದ್ದಾರೆ. ಹಾಗೆಯೇ ಅವರು ಪ್ರವಾಸ ಸಾಹಿತ್ಯವನ್ನು ರಚಿಸಿದ್ದಾರೆ. ನಮ್ಮ ತಾಯಿ ರತ್ನಮ್ಮ ಕೇವಲ ಆರನೇ ತರಗತಿಯವರೆಗೆ ಓದಿದ್ದರೂ ಸಹ ಅವರಿಗೆ ಸಾಹಿತ್ಯದ ಬಗ್ಗೆ ಅಪಾರ ಆಸಕ್ತಿಯಿತ್ತು. ಗಮಕ, ಸಣ್ಣ ಕಥೆ, ರೇಡಿಯೋ ನಾಟಕ, ಪುಣ್ಯ ಕಥೆಗಳನ್ನು ಬರೆಯುತ್ತಿದ್ದರು. ಆಗಿನ ದಿನಗಳಲ್ಲೇ ಅವರು 'ಕನ್ನಡಾಂಬೆಯ ಅಡಿಗಳಲ್ಲಿ' ಎನ್ನುವ ಕಾದಂಬರಿಯನ್ನು ರಚಿಸಿದ್ದರು. ಇದರೊಂದಿಗೆ ಹಾಡುವುದು ಮತ್ತು ವೀಣೆ ನುಡಿಸುವಿಕೆಯ ಹವ್ಯಾಸವೂ ಅವರಲ್ಲಿ ಸೇರಿತ್ತು. ನನ್ನ ಅಕ್ಕ ನೇತ್ರಾವತಿಯೂ ಸಹ ಬರೆಯುತ್ತಾಳೆ. ನನ್ನ



ಡಾ॥ ಶೈಲಜಾ ಅವರೊಂದಿಗೆ ಡಾ॥ ವೈ. ಸಿ. ಕಮಲ, ಡಾ॥ ಎನ್. ಗಾಯತ್ರಿ, ಡಾ॥ ಜಿ. ರಾಮಕೃಷ್ಣ

ಸಹೋದರ ಜಗದೀಶ ಚಂದ್ರ ವಾಸ್ತುಶಿಲ್ಪಿಯಾಗಿ ಕಾರ್ಯ ನಿರ್ವಹಿಸುತ್ತಿದ್ದಾನೆ. ಅವನಿಗೂ ಬರವಣಿಗೆಯಲ್ಲಿ ಆಸಕ್ತಿಯಿದೆಯಾದರೂ ಅವನ ವೃತ್ತಿಯ ಕಾರಣದಿಂದಾಗಿ ಹೆಚ್ಚು ಮುಂದುವರಿಯಲು ಸಾಧ್ಯವಾಗಲಿಲ್ಲ.

**ಹೊಸತು :** ನಿಮ್ಮ ವಿದ್ಯಾಭ್ಯಾಸ ನಡೆದುದು ಎಲ್ಲಿ?

**ಶೈಲಜಾ :** ನಾನು ಹುಟ್ಟಿದ್ದು ಕೆಳದಿಯಲ್ಲಿ. ನಮ್ಮ ತಂದೆಗೆ ಆಗಾಗ ವರ್ಗ ವಾಗುತ್ತಿತ್ತು. ಆದರೆ ಕುಟುಂಬ ಬೆಂಗಳೂರಿನಲ್ಲೇ ನೆಲೆ ನಿಂತಿತ್ತು. ಮಲೇಶ್ವರಂ ಲೇಡೀಸ್ ಅಸೋಸಿಯೇಷನ್, ಜಯನಗರದ ಎಂ.ಇ.ಎಸ್. ಶಾಲೆ, ವಿಶ್ವೇಶ್ವರಪುರಂನ ಮಹಾರಾಷ್ಟ್ರ ಮಹಿಳಾ ಮಂಡಳಿ, ಮಹಾರಾಣಿ ಕಾಲೇಜು, ಬಸವನಗುಡಿಯ ನ್ಯಾಷನಲ್ ಕಾಲೇಜು ಮತ್ತು ಬೆಂಗಳೂರು ವಿಶ್ವವಿದ್ಯಾಲಯದಲ್ಲಿ ವಿವಿಧ ಹಂತಗಳ ನನ್ನ ವಿದ್ಯಾಭ್ಯಾಸ ನಡೆಯಿತು. ಹಾಗೆಯೇ ವಿದ್ಯಾಭ್ಯಾಸದ ಜೊತೆಗೆ ಸಿತಾರ್ ವಾದ್ಯ ನುಡಿಸುವಿಕೆಯನ್ನು ಕಲಿತಿದ್ದೇನೆ.

**ಹೊಸತು :** ನೀವು ಯಾವಾಗಿನಿಂದ ಬರೆಯಲು ಆರಂಭಿಸಿದಿರಿ?

**ಶೈಲಜಾ :** ನಾನು ಹತ್ತು ವರ್ಷದವಳಿದ್ದಾಗಲೇ ಬರೆಯಲು ಪ್ರಾರಂಭಿಸಿದ್ದೆ. ಸಣ್ಣ ಪುಟ್ಟ ಕಥೆಗಳು, ನಾಲ್ಕು ಸಾಲಿನ ಕವನ, ಇತ್ಯಾದಿ ಬರೆಯುತ್ತಿದ್ದೆ. 'ಕೊಕ್ಕರೆ ಹಿಡಿಯುವುದು ಹೇಗೆ?' ಎಂಬುದು ನಾನು ಬರೆದ ಮೊದಲ ವಿಜ್ಞಾನ ಸಂಬಂಧೀ ಲೇಖನ. ನವಕರ್ನಾಟಕದ ಬಗ್ಗೆ ವಿಶೇಷ ಗೌರವ; ಏನೂ ಹೆಸರಿಲ್ಲದಿದ್ದ ನನಗೆ ಜ್ಞಾನವಿಜ್ಞಾನ ಕೋಶದಲ್ಲಿ ಬರೆಯುವ ಅವಕಾಶ ಕೊಟ್ಟಿತು. ನನ್ನ ಪುಸ್ತಕಗಳನ್ನು ಪ್ರಕಟಿಸಿತು.

**ಹೊಸತು :** ತಮ್ಮ ವೃತ್ತಿ ಜೀವನದ ಬಗ್ಗೆ ಹೇಳಿ.

**ಶೈಲಜಾ :** ಎಂ.ಎಸ್‌ಸಿ. ಮುಗಿಸಿದ ಮೇಲೆ ನಾನು ಕೆಲವೇ ತಿಂಗಳು ಪಾಠ ಮಾಡಿ, ಎನ್ ಎ ಎಲ್ ಸೇರಿದೆ. ಆಗ ನಾನು ಸಣ್ಣ ಕತೆಗಳನ್ನು ಬರೆಯುತ್ತಿದ್ದೆ. ತುಷಾರ, ಕಸ್ತೂರಿ, ಸುಧಾ ಪತ್ರಿಕೆಗಳಲ್ಲಿ ಪ್ರಕಟವಾಗಿವೆ. ಆಮೇಲೆ ಸಿಪಿಆರ್‌ಐ – ಮುಂದೆ ಐ ಐ ಎ ಸೇರಿದಾಗ ಸಂಶೋಧನೆ ಮುಂದುವರೆಸಲು ಅವಕಾಶ ಸಿಕ್ಕಿತು. ಆಳವಾದ ಅಧ್ಯಯನದ ಕಾರಣ ವಿಜ್ಞಾನ ಲೇಖನಗಳ್ನು ಬರೆಯಲು ಹೊಸ ಹೊಸ ವಿಷಯಗಳು ಸಿಕ್ಕಿದವು. ಡಾ॥ ಪ್ರಭಾಕರ ಅವರೊಡನೆ ವಿವಾಹವಾಗಿ ಅಹ್ಮದಾಬಾದ್‌ಗೆ ತೆರಳಿದೆ. ಅಲ್ಲಿಯ ಇನ್‌ಸ್ಟಿಟ್ಯೂಟ್ ಫಾರ್ ಪ್ಲಾಸ್ಮಾ ರಿಸರ್ಚ್‌ನಲ್ಲಿ ಅವರು ವಿಜ್ಞಾನಿ. ಅವರಿಗೂ ಪುಸ್ತಕದ ಗೀಳು. ಅವರದ್ದು ಕಾನ್ಪುರದ ಐ ಐ ಟಿಯಿಂದ ಪಿಎಚ್.ಡಿ. ಭೌತಶಾಸ್ತ್ರ – ಮೊದಲಲ್ಲಿ ನನ್ನ ಲೇಖನಗಳನ್ನು ವಿಮರ್ಶಿಸುವವರು – ಹೀಗಾಗಿ ಓದಲು ಬರೆಯಲು ಯಾವುದೇ ತಡೆ ಇರಲಿಲ್ಲ. ಮಗಳಿಗೆ ಎರಡು ವರ್ಷವಾದ ಮೇಲೆ ಅಲ್ಲಿ ಫಿಸಿಕಲ್ ರಿಸರ್ಚ್ ಲ್ಯಾಬೋರೇಟರಿಯಲ್ಲಿ ನಕ್ಷತ್ರಗಳ ಸಂಶೋಧನೆ ಮುಂದುವರೆಸಿದೆ. ಆಮೇಲೆ ವಿಕ್ರಂ ಸಾರಾಭಾಯ್ ವಿಜ್ಞಾನ ಸಂಸ್ಥೆಯಲ್ಲಿ ಕೆಲವು ತಿಂಗಳು ಕೆಲಸ ಮಾಡಿ ಪುನಃ ಬೆಂಗಳೂರಿಗೆ ಬಂದೆವು. ಅಲ್ಲಿಂದ ವಾಪಸ್ಸು ಬಂದ ಮೇಲೆ ಬೆಂಗಳೂರಿನ ಜವಹರಲಾಲ್ ನೆಹರೂ ತಾರಾಲಯ ಸೇರಿದೆ.

**ಹೊಸತು :** ನಿರಂತರವಾಗಿ ಸಂಸ್ಥೆಗಳನ್ನು ಬದಲಾಯಿಸುವುದು ನಿಮ್ಮಲ್ಲಿ ಯಾವುದೇ ಆತಂಕ ಮೂಡಿಸಲಿಲ್ಲವೆ?

**ಶೈಲಜಾ :** ಖಂಡಿತ ಇಲ್ಲ. ಇದು ಒಂದು ರೀತಿಯ ಅನುಕೂಲವೇ ಆಯಿತೆಂದು ಹೇಳಬಹುದು. ಕೆಲಸದ ಬದಲಾವಣೆ ಹೊಸ ಹೊಸ ಕಲಿಕೆಗೆ ಅವಕಾಶ ಮಾಡಿಕೊಟ್ಟಿತು.

**ಹೊಸತು :** ತಾರೆಗಳನ್ನು ವೀಕ್ಷಣೆ ಮಾಡಲು ಸಾಧ್ಯವಾಗುವುದು ರಾತ್ರಿಯ ವೇಳೆಯಲ್ಲಿ ಮಾತ್ರ. ನೀವು ಸಂಶೋಧನೆ ಮಾಡುತ್ತಿದ್ದಾಗ ಟೆಲಿಸ್ಕೋಪ್ ಬಳಸಲು ರಾತ್ರಿ ವೇಳೆ ಹೇಗೆ ಹೋಗುತ್ತಿದ್ದಿರಿ? ಒಬ್ಬ ಮಹಿಳೆಯಾಗಿ ಈ ಕೆಲಸ ಮಾಡಲು ನಿಮಗೆ ಯಾವುದೇ ರೀತಿಯಲ್ಲಿ ತೊಂದರೆಯಾಗಲಿಲ್ಲವೆ?

**ಶೈಲಜಾ :** ನಾವು ತಾರೆಗಳ ವೀಕ್ಷಣೆಗಾಗಿ ತಮಿಳುನಾಡಿನ ಕಾವಲೂರಿಗೆ ಹೋಗಬೇಕಿತ್ತು. ಮೊದಮೊದಲಲ್ಲಿ ರೈಲಿನಲ್ಲಿ ಹೋಗಿ ವಾಣಿಯಂಬಾಡಿಯಿಂದ ಜೀಪಿನಲ್ಲಿ ಹೋಗುತ್ತಿದ್ದೆವು. ಆಮೇಲೆ ಕೋರಮಂಗಲದಿಂದ ವ್ಯಾನ್ ಪದ್ಧತಿ ಶುರುವಾಯಿತು. ತಿಂಗಳಿಗೆ ಕನಿಷ್ಠ ಒಂದು ಬಾರಿಯಾದರೂ ಹೋಗುತ್ತಿದ್ದೆ. ಕಾವಲೂರಿನ ಕ್ಯಾಂಪಸ್‌ನಲ್ಲಿ ರಾತ್ರಿ ೬ ಗಂಟೆಗೂ ೧೨ ಗಂಟೆಗೂ ವ್ಯತ್ಯಾಸವೇ ಇರುತ್ತಿರಲಿಲ್ಲ. ಏಕೆಂದರೆ ಅಲ್ಲಿ ರಸ್ತೆ ದೀಪಗಳು ಇರಲಿಲ್ಲ. ಯಾರೂ ಓಡಾಡುತ್ತಿರಲಿಲ್ಲ. ಒಂದು ರೀತಿ ನಿರ್ಜನ ಪ್ರದೇಶ. ವಾಹನಗಳು, ಸ್ಕೂಟರ್ ಇತ್ಯಾದಿ ಬಂದರೂ ಲೈಟ್ ಆಫ್ ಮಾಡಿ ಬರಬೇಕು ಎಂಬ ನಿಯಮವಿತ್ತು. ಸಾರ್ವಜನಿಕ ವಾಹನಗಳಿಗೆ ಪ್ರವೇಶವಿರಲಿಲ್ಲ. ಸಂಜೆ ೫.೩೦ಕ್ಕೆ ಕೊನೆಯ ಬಸ್. ವಸತಿ ಕೋಣೆಗಳು ಬಹು ಅಚ್ಚುಕಟ್ಟಾಗಿದ್ದವು. ನಾವು ಸಂಜೆ ೬ ಗಂಟೆಗೆ ಟೆಲಿಸ್ಕೋಪ್ ಜಾಗ ಸೇರಿದರೆ ಇಳಿದುಬರುತ್ತಿದ್ದುದು ಬೆಳಿಗ್ಗೆ ೬ ಗಂಟೆಗೆ. ಮಧ್ಯೆ ಊಟಕ್ಕೆ ಅರ್ಧ ಗಂಟೆಗೆ ಒಬ್ಬರಿದ್ದು ಒಬ್ಬರು ಬರುವಂತೆ ನೋಡಿಕೊಳ್ಳುತ್ತಿದ್ದೆವು. ನನ್ನ ಹಾಗೆ ಇನ್ನಿಬ್ಬರು ಮಹಿಳೆಯರು ಬರುತ್ತಿದ್ದರು. (ಅವರ ಶೆಡ್ಯೂಲ್ ಬೇರೆ ದಿನಗಳಲ್ಲಿ.) ಒಬ್ಬಾಕೆಗೆ ವರ್ಷದೊಳಗಿನ ಕೂಸು ಇತ್ತು. ಆಕೆಗೆ ವಿ.ಐ.ಪಿ. ರೂಮು ಕೊಡುತ್ತಿದ್ದರು. ಕೂಸನ್ನು ಮಲಗಿಸಿ ಅವರು ಮೇಲೆ ಬಂದು ವೀಕ್ಷಣೆ ಮಾಡುತ್ತಿದ್ದರು. ಮಗುವನ್ನು ನೋಡಿಕೊಳ್ಳಲು ಹಳ್ಳಿಯಿಂದ ಹೆಂಗಸರನ್ನು ಕರೆಸುತ್ತಿದ್ದರು. ನಾನು ಕೆಲವೊಮ್ಮೆ ಮಳೆ ಅಥವಾ ಇಬ್ಬನಿಯ ಕಾರಣ ಟಾರ್ಚ್ ಹಿಡಿದು ಒಬ್ಬಳೇ ಓಡಾಡುತ್ತಿದ್ದೆ. ಕೆಲವೊಮ್ಮೆ ಯಾರಾದರೂ ಅರ್ಧ ದೂರದವರೆಗೂ ನನ್ನೊಡನೆ ಬಂದು ತಮ್ಮ ರೂಮಿಗೆ ಹೋಗುತ್ತಿದ್ದರು. ಜಿಂಕೆ, ಕಾಡೆಮ್ಮೆ, ಹಾವು ಇವುಗಳ ಭಯವಿತ್ತು. ಎರಡು ಕಾಲಿನ ಪ್ರಾಣಿಗಳ ಭಯವೇನೂ ಇರುತ್ತಿರಲಿಲ್ಲ. ಎಲ್ಲರೂ ನಮಗೆ ಬಹಳ ಗೌರವ ಕೊಡುತ್ತಿದ್ದರು.

**ಹೊಸತು :** ನಿಮ್ಮ ಸಂಶೋಧನೆಯ ವಿಷಯ ಯಾವುದು?

**ಶೈಲಜಾ :** ಬೆಂಗಳೂರಿನ ಭಾರತೀಯ ಖಭೌತ ವಿಜ್ಞಾನ ಸಂಸ್ಥೆಯಲ್ಲಿ ನಾನು ಪಿಎಚ್.ಡಿ. ಮಾಡಿದ್ದು. ಅದು ವಿಶೇಷ ರೀತಿಯ 'ಅವಳಿ ನಕ್ಷತ್ರ'ಗಳನ್ನು ಕುರಿತಾಗಿತ್ತು. ಆ ಸಂಸ್ಥೆಯ ನಿರ್ದೇಶಕರೂ, ಭಾರತದ ಖ್ಯಾತ ಖಭೌತ ವಿಜ್ಞಾನಿಯೂ ಆಗಿದ್ದ ವೇಣು ಬಾಪು ನನ್ನ ಮಾರ್ಗದರ್ಶಕರಾಗಿದ್ದರು. ವೇಣು ಬಾಪು ಮಾರ್ಗದರ್ಶಕರಾಗಿದ್ದರಾದರೂ ನನ್ನ ಪಿಎಚ್.ಡಿ. ಸಬ್ಮಿಟ್ ಮಾಡುವಾಗ ಅವರಿರಲಿಲ್ಲ. ಜೆ. ಸಿ. ಭಟ್ಟಾಚಾರ್ಯ ಅವರೇ ಮಾರ್ಗದರ್ಶಕರಾದರು. ಆಗಲೇ ಹ್ಯಾಲಿ ಧೂಮಕೇತು ಬಂದಿತು. ಅದರ ವೀಕ್ಷಣೆಯನ್ನು ನಡೆಸಿದೆ. ಜೊತೆಗೆ ಬೇರೆ ಬೇರೆ ವರ್ಗದ ನಕ್ಷತ್ರಗಳು, ಸ್ಫೋಟಿಸುವ ನಕ್ಷತ್ರಗಳನ್ನೂ ವೀಕ್ಷಿಸಿದೆ. ಈಗ ಖಗೋಳ ವಿಜ್ಞಾನದ ಇತಿಹಾಸದಲ್ಲಿ ಅಧ್ಯಯನ ನಡೆಸುತ್ತಿದ್ದೇನೆ. ಕನ್ನಡ ಶಾಸನಗಳಲ್ಲಿ ಖಗೋಲದ ಮಾಹಿತಿಗಳು, (ಇದಕ್ಕೆ ಗೀತಾ ಜೊತೆಗೂಡಿದಳು) ಹಾಗೆಯೇ ಹಳೆಯ ಗ್ರಂಥಗಳಲ್ಲಿ ನಕ್ಷತ್ರ ವೀಕ್ಷಣೆಯ ಅಂಶಗಳು, ಆಗ್ಗೆ ಬಳಸುತ್ತಿದ್ದ ಉಪಕರಣಗಳು, ಅದನ್ನು ಬಳಸುವ ವಿಧಾನ – ಈ ಬಗ್ಗೆ

ಸಂಶೋಧನೆ ಮುಂದುವರೆಯುತ್ತಿದೆ. ಆಶ್ಚರ್ಯವೆಂದರೆ ಇದನ್ನು ಬ್ರಿಟಿಷರು ದಾಖಲಿಸಿದ್ದಾರೆ. ಈ ಅಧ್ಯಯನದ ಜೊತೆಗೆ ದೇವಾಲಯಗಳ ವಾಸ್ತುವಿನಲ್ಲಿ ಅಡಗಿರುವ ಖಗೋಳ ಅಂಶಗಳೂ ಬೆಳಕಿಗೆ ಬಂದವು. ಚಿಂತಾಮಣಿ ರಘುನಾಥಾಚಾರಿ ಎಂಬಾತನ ೧೮೭೪ರ ಕನ್ನಡ ಪುಸ್ತಕವನ್ನು ಇಂಗ್ಲಿಷ್‌ಗೆ ಅನುವಾದಿಸಿದೆ. ಅದು ಹಲವಾರು ವಿಷಯಗಳನ್ನು ತಿಳಿಸಿಕೊಟ್ಟಿತು. ಈಗೊಂದು ೧೬ನೆಯ ಶತಮಾನದ ಹಸ್ತಪ್ರತಿ ಸಿಕ್ಕಿದೆ. ಕನ್ನಡದ ಹಸ್ತಪ್ರತಿಗಳು (ಖಗೋಳ ಕುರಿತಾದದ್ದು) ಹೆಚ್ಚು ಬೆಳಕಿಗೆ ಬಂದಿಲ್ಲ.

**ಹೊಸತು :** ನೀವು ಕೆಲಸ ಮಾಡುತ್ತಿರುವ ತಾರಾಲಯದಲ್ಲಿ ವಿದ್ಯಾರ್ಥಿಗಳಿಗೆಂದು ಹಲವಾರು ಕಾರ್ಯಕ್ರಮಗಳಿವೆಯೆಂದು ಕೇಳಿದ್ದೇವೆ. ಅವುಗಳ ಬಗ್ಗೆ ತಿಳಿಸುವಿರಾ?

**ಶೈಲಜಾ :** ನಾನು ೧೯೯೪ರಿಂದ ತಾರಾಲಯದಲ್ಲಿದ್ದೇನೆ. ಇಲ್ಲಿ 'ರೀಪ್' ಒಳಗೊಂಡಂತೆ ಹಲವಾರು ಶೈಕ್ಷಣಿಕ ಕಾರ್ಯಕ್ರಮಗಳನ್ನು ಮಕ್ಕಳಿಗಾಗಿ ಹಮ್ಮಿಕೊಂಡಿದ್ದೇವೆ. ತಾರಾಲಯದ ಕಾರ್ಯಕ್ರಮಗಳನ್ನು ತಯಾರಿಸುವುದೇ ಒಂದು ವಿಶಿಷ್ಟ ಅನುಭವ. ಇದನ್ನು ದಿ। ವಿಶ್ವೇಶ್ವರ ಅವರು ಕಲಿಸಿಕೊಟ್ಟರು. ಬಹಳ ಕ್ಲಿಷ್ಟವಾದ ವಸ್ತುವನ್ನು ೪೦ – ೪೫ ನಿಮಿಷಗಳಲ್ಲಿ ನಿರೂಪಿಸುವುದು ದೊಡ್ಡ ಸವಾಲು. ನಿಖರವಾದ ಪದಗಳು, ಕೇಳಿಸಿಕೊಂಡರೇ ಅರ್ಥವಾಗಬೇಕಾದ ನಿರೂಪಣೆ, ಸೂಕ್ತವಾದ ವಿಷುಯಲ್‌ಗಳು, ಅದನ್ನು ರಚಿಸಬಲ್ಲ ಕಲಾವಿದರ ಆಯ್ಕೆ, ಹಾಗೆಯೇ ಸೂಕ್ತವಾದ ಸಂಗೀತವನ್ನು ರಚಿಸಲು ಸಂಗೀತ ನಿರ್ದೇಶಕರೊಡನೆ ಚರ್ಚೆ – ಹೀಗೆ ವೈವಿಧ್ಯಮಯ ಕ್ಷೇತ್ರಗಳ ಪರಿಚಯ ಆಯಿತು. ಸುಮಾರು ೨೦ ಕಾರ್ಯಕ್ರಮಗಳನ್ನು ತಯಾರಿಸಿದೆವು. ಒಂದೊಂದೂ ಸ್ಮರಣೀಯ ಅನುಭವ. ಅಲ್ಲಿಯ ಶೈಕ್ಷಣಿಕ ಕಾರ್ಯಕ್ರಮಗಳಿಗೆ ಒತ್ತುಕೊಟ್ಟವರೂ ವಿಶ್ವೇಶ್ವರ ಅವರೇ. ಅವರು ಮತ್ತು ಯು. ಆರ್. ರಾವ್ ಅವರ ಮಾರ್ಗದರ್ಶನ ದೊರಕಿದ್ದು ನನ್ನ ಅದೃಷ್ಟ.

**ಹೊಸತು :** 'ರೀಪ್' ಎಂದರೆ ಏನು?

**ಶೈಲಜಾ :** ಆರ್‌ಇಎಪಿ ಅಂದರೆ ರಿಸರ್ಚ್ ಎಜುಕೇಷನ್ ಅಡ್ವಾನ್ಸ್‌ಮೆಂಟ್ ಪ್ರೋಗ್ರಾಂ. ಇದು ಬಿ.ಎಸ್‌ಸಿ. ವಿದ್ಯಾರ್ಥಿಗಳಿಗಾಗಿ ಮೂರು ವರ್ಷದ ಕಾರ್ಯಕ್ರಮ. ತಾರಾಲಯದ ಸ್ಥಾಪಕ ನಿರ್ದೇಶಕರಾದ ಪ್ರೊ॥ ಸಿ. ವಿ. ವಿಶ್ವೇಶ್ವರ ಅವರು ತಾರಾಲಯದಲ್ಲಿ ನಡೆಸುತ್ತಿದ್ದ ಕಾರ್ಯಕ್ರಮಗಳಿಗೆ ಒಳ್ಳೆಯ ಸಂಕ್ಷಿಪ್ತ ನಾಮಗಳನ್ನು ಆರಿಸಿದ್ದರು. ಪುಟಾಣಿ ಮಕ್ಕಳ ಕಾರ್ಯಕ್ರಮ ಎಸ್‌ಇಡಿ. ಅಂದರೆ, ಸೈಂಟಿಫಿಕ್ ಎಜುಕೇಷನ್ ಅಂಡ್ ಅರ್ಲಿ ಡೆವಲಪ್‌ಮೆಂಟ್. ಹೈಸ್ಕೂಲ್ ಮಕ್ಕಳದ್ದು ಎಸ್‌ಓಡಬ್ಲ್ಯೂ, ಅಂದರೆ ಸೈನ್ಸ್ ಓವರ್ ವೀಕೆಂಡ್. ಕಾಲೇಜು ವಿದ್ಯಾರ್ಥಿಗಳದ್ದು ಆರ್‌ಇಎಪಿ. ೧೯೯೫ರಲ್ಲಿ ಇದು ಆರಂಭವಾದಾಗ, ಅದಕ್ಕೆ ಈ ಹೆಸರು ಇರಲಿಲ್ಲ. ಪ್ರಾಯೋಗಿಕವಾಗಿ ನಡೆಸಿದ ವಾರಾಂತ್ಯದ ತರಗತಿಗಳಿಗೆ ದಾಖಲಾಗಲು ಎಲ್ಲರಿಗೂ ಅವಕಾಶವಿತ್ತು. ಮರು ವರ್ಷ, ಅದಕ್ಕೆ ಬಿ.ಎಸ್‌ಸಿ. ವಿದ್ಯಾರ್ಥಿಗಳಿಗೆಂದು ಚೌಕಟ್ಟು ಹಾಕಿದೆವು. ಯಾವುದೇ ಆರ್ಥಿಕ ಅನುದಾನದ ಚೌಕಟ್ಟು ಇರಲಿಲ್ಲ. ಆಮೇಲೆ ವಿದ್ಯಾರ್ಥಿಗಳಿಂದ ಸಾಂಕೇತಿಕವಾಗಿ ಸಣ್ಣ ಮೊತ್ತ ಸಂಗ್ರಹಿಸಿ ವರ್ಷದುದ್ದಕ್ಕೂ ಶ್ರದ್ಧೆಯಿಂದ ತರಗತಿಗಳಿಗೆ ಬಂದ ವಿದ್ಯಾರ್ಥಿಗಳಿಗೆ ಪುಸ್ತಕ ಕೊಳ್ಳಲು ಪ್ರೋತ್ಸಾಹ ಧನ ಕೊಡುತ್ತಿದ್ದೆವು. ಇದರಿಂದ ಅವರಿಗೂ ತರಗತಿಗೆ ಬರಬೇಕೆಂಬ ನಿಯತ್ತು ಮೂಡುತ್ತಿತ್ತು. ಈ ಕಾರ್ಯಕ್ಕೆ ಕೈಜೋಡಿಸಿದ ವಿಜ್ಞಾನಿಗಳು ಬಹಳ ಮಂದಿ. ಐ.ಐ.ಎಸ್.ಸಿ., ಐ.ಐ.ಎ., ಆರ್.ಆರ್.ಐ. – ಈ ಎಲ್ಲ ಸಂಸ್ಥೆಗಳೂ ಸಹಕರಿಸಿದವು. ಮೂರನೆಯ ವರ್ಷದ ವಿದ್ಯಾರ್ಥಿಗಳಿಗೆ ಪ್ರಾಜೆಕ್ಟ್ ಮಾಡಲು ನೆರವು ಮಾಡಿಕೊಟ್ಟರು. ಕಾವಲೂರಿಗೆ ಹೋಗಿ ವೀಕ್ಷಣೆ ನಡೆಸಲು ಅವಕಾಶ ಮಾಡಿಕೊಟ್ಟರು. ಒಂದೆರಡು ಸಂಶೋಧನಾ ಪ್ರಬಂಧಗಳು ಪ್ರಕಟವಾದವು.

ನಾನು ಐದೂವರೆ ವರ್ಷ ನಿರ್ದೇಶಕಳಾಗಿದ್ದಾಗಲೂ ವಾರಾಂತ್ಯದಲ್ಲಿ ಪಾಠ ಮಾಡುವುದನ್ನು ತಪ್ಪಿಸಲಿಲ್ಲ. ಆದ್ರೆ ಆಗ ಯುವ ವಿದ್ಯಾರ್ಥಿಗಳೊಡನೆ ಚರ್ಚಿಸುವ ಅವಕಾಶಗಳು ತುಂಬ ಕಡಿಮೆ ಆಗಿದ್ದಕ್ಕೆ ಸ್ವಲ್ಪ ಬೇಸರವಾಗುತ್ತಿತ್ತು.

**ಹೊಸತು :** ತಾರಾಲಯಕ್ಕೆ ಎಂತಹ ಜನ ಬರುತ್ತಾರೆ? ಅವರ ಪ್ರತಿಕ್ರಿಯೆಗಳು ಹೇಗಿರುತ್ತವೆ?

**ಶೈಲಜಾ :** ತಾರಾಲಯಕ್ಕೆ ಮುಖ್ಯವಾಗಿ ಮೂರು ರೀತಿಯ ಜನರು ಬರುತ್ತಾರೆ. ಅವರಲ್ಲಿ ಮೊದಲನೆಯ ಗುಂಪಿನವರು ತಾರಾಲಯದ ಸಿನಿಮಾ ಪ್ರದರ್ಶನ ವೀಕ್ಷಣೆ ಮಾಡಿ ಸುತ್ತಾಡಿ ಸಂತೋಷಪಡುತ್ತಾರೆ. ಎರಡನೆಯ ಗುಂಪಿನವರು ವಿದ್ಯಾರ್ಥಿಗಳು, ಅವರಲ್ಲಿ ಕೆಲವರು ಬ್ಲಾಕ್ ಹೋಲ್, ನ್ಯೂಟ್ರಾನ್ ಸ್ಟಾರ್ ಎಂಬ ಅನೇಕ ಪದಗಳನ್ನೂ ತಿಳಿದಿರುತ್ತಾರೆ. ಇಲ್ಲಿ ಚರ್ಚೆ ನಡೆಯುವಾಗ ಅದರ ಬಗ್ಗೆ ತಿಳಿದಂತೆ ವರ್ತಿಸುತ್ತಾರೆ. ಮೂರನೆಯ ಗುಂಪಿನವರು ನಿಜವಾಗಿಯೂ ಕಲಿಯಲು ಬಯಸುವ ಮಕ್ಕಳು. ಅವರು ವಿವರಣೆ ನೀಡುವ ಸಂದರ್ಭದಲ್ಲಿ ಸೂಕ್ತವಾದ ಪ್ರಶ್ನೆ ಕೇಳಿ ಚರ್ಚೆಯಲ್ಲಿ ಭಾಗವಹಿಸಿ ಸಮರ್ಪಕ ಉತ್ತರವನ್ನು ಪಡೆದು ತಮ್ಮ ಜ್ಞಾನವನ್ನು ಹೆಚ್ಚಿಸಿಕೊಳ್ಳುವಂಥವರು.

**ಹೊಸತು :** ತಾರಾಲಯಕ್ಕೆ ಜ್ಯೋತಿಷಿಗಳು ಬರುತ್ತಾರೆಯೇ? ಅವರ ನಿರೀಕ್ಷೆಗಳೇನಿರುತ್ತವೆ?

**ಶೈಲಜಾ :** ಅನೇಕ ಜ್ಯೋತಿಷಿಗಳು ತಾರಾಲಯಕ್ಕೆ ಬಂದು ನನ್ನನ್ನು ಭೇಟಿ ಮಾಡಿದ್ದಾರೆ. ಅವರಿಗೆ ಮುಖ್ಯವಾಗಿ ಅರ್ಥವಾಗದ್ದು, ಗ್ರಹಗಳ "ವಕ್ರ ನಡೆ". ಬಹಳ ಆಸಕ್ತಿಯಿಂದ ಪ್ರಶ್ನೆ ಕೇಳಿ ಉತ್ತರ ಪಡೆದಾದ ಮೇಲೆ ತಾವು ಫಲ ಜ್ಯೋತಿಷಿಗಳು ಎಂದು ತಿಳಿಸುತ್ತಿದ್ದರು. ಕೆಲವರನ್ನು ನಾನು "ನಿಮ್ಮ ಫಲದಲ್ಲಿ ನಿಮಗೇ ನಂಬಿಕೆ ಇದೆಯೇ?" ಎಂದು ಕೇಳಿದ್ದುಂಟು. ನೀವು ಊಹಿಸುವಂತೆ ನೂರಕ್ಕೆ ೯೦ ಜನ ಸಿಟ್ಟು ಮಾಡಿಕೊಂಡು ಎದ್ದುಹೋದರು. ಕೆಲವರು ಹಳೆಯ ತಾಮ್ರ ಶಾಸನಗಳನ್ನು ತಂದು ಅದರಲ್ಲಿರುವ ವಿವರ – ಮುಖ್ಯವಾಗಿ – ತಾರೀಖು – ಸರಿಯಾಗಿದೆಯೇ ಎಂದು ಕೇಳುತ್ತಿದ್ದರು. ಅದು ತಪ್ಪಿದೆ ಎಂದಾಗ ಬಹಳ ನಿರಾಶೆಯಾಗುತ್ತಿತ್ತು. ಏಕೋ ಗೊತ್ತಿಲ್ಲ.

**ಹೊಸತು :** ನಿಮ್ಮ ಈ ತಾರೆಗಳ ಅಧ್ಯಯನದಿಂದಾಗಿ ಮೂಢನಂಬಿಕೆಗಳ ವಿರುದ್ಧ ವಿಶ್ಲೇಷಣೆ ಕೊಡುವುದು ಸಾಧ್ಯವಾಗಿದೆಯೇ?

**ಶೈಲಜಾ :** ನಾವು ಸಂಪ್ರದಾಯ ಮತ್ತು ಮೂಢನಂಬಿಕೆಗಳನ್ನು ಪ್ರತ್ಯೇಕಿಸಲು ಎಲ್ಲಿ ಅಡ್ಡಗೆರೆ ಹಾಕುತ್ತೀವಿ ಎನ್ನುವುದು ಮುಖ್ಯ. ಇದಕ್ಕೆ ಒಂದು ಉದಾಹರಣೆಯನ್ನು ಕೊಡುವುದಾದರೆ, ಮನೆಗೆ ಬಂದ ಅತಿಥಿಗೆ ಹಣ್ಣು ಕೊಟ್ಟು ಕಳುಹಿಸುವುದು ಒಂದು ಸಂಪ್ರದಾಯ. ಆದರೆ ಒಬ್ಬ ಮಹಿಳೆಯನ್ನು ಜಾತಿಯ ಅಥವಾ ವಿಧವೆಯೆಂಬ ಕಾರಣ ಕೊಟ್ಟು ಪ್ರತ್ಯೇಕಿಸಿ ನೋಡುವುದು



*೧೯೯೫ರಲ್ಲಿ ತಾರಾಲಯದ ಕಾರ್ಯಕ್ರಮದ ಉದ್ಘಾಟನೆಯ ಸಂದರ್ಭ – ಎಚ್. ನರಸಿಂಹಯ್ಯ, ಯು. ಆರ್. ರಾವ್ ಮತ್ತು ಜೆ. ಸಿ. ಭಟ್ಟಾಚಾರ್ಯ*



'ವಿಜ್ಞಾನದ ಹೆದ್ದಾರಿಯಲ್ಲಿ ಮಹಾತಿರುವುಗಳು' ಪುಸ್ತಕ ಬಿಡುಗಡೆ ಸಂದರ್ಭ – ಇಸ್ರೋ ಅಧ್ಯಕ್ಷ ಡಾ॥ ಕಿರಣ್ ಕುಮಾರ್ ಅವರೊಂದಿಗೆ ಡಾ॥ ಶೈಲಜಾ

ಡಾ॥ ಬಿ. ಎಸ್. ಶೈಲಜಾ ಅವರು ವಿಶೇಷವಾಗಿ ಖಗೋಳ/ ಖಭೌತ ವೀಕ್ಷಣೆಯಲ್ಲಿ ಪರಿಣತಿ ಪಡೆದಿರುವ ವೃತ್ತಿಪರ ಖಗೋಳಶಾಸ್ತ್ರಜ್ಞೆ. ಬೆಂಗಳೂರು ವಿಶ್ವವಿದ್ಯಾಲಯದಿಂದ ಭೌತಶಾಸ್ತ್ರದಲ್ಲಿ ಎಂ.ಎಸ್‌ಸಿ. ಮತ್ತು ಮುಂದೆ ಇಂಡಿಯನ್ ಇನ್‌ಸ್ಟಿಟ್ಯೂಟ್ ಆಫ್ ಅಸ್ಟ್ರೋಫಿಸಿಕ್ಸ್‌ನಿಂದ ಪಿಎಚ್.ಡಿ. ಪದವಿ ಪಡೆದಿದ್ದಾರೆ. ಅವರ ಸಂಶೋಧನಾ ಕ್ಷೇತ್ರಗಳಲ್ಲಿ, ಅವಳಿ ನಕ್ಷತ್ರಗಳು (ಇವರ ಪಿಎಚ್.ಡಿ. ಪ್ರಬಂಧದ ವಿಷಯ) ಅಲ್ಲದೆ ಧೂಮಕೇತುಗಳು, ಸ್ಫೋಟಕ ನಕ್ಷತ್ರಗಳು, ಕ್ಷುದ್ರಗ್ರಹಗಳು, ಭಾರತೀಯ ಖಗೋಳ ಶಾಸ್ತ್ರದ ಇತಿಹಾಸ ಇವು ಸೇರಿವೆ. ಇವರ ಐವತ್ತಕ್ಕೂ ಹೆಚ್ಚು ಸಂಶೋಧನಾ ಪ್ರಬಂಧಗಳು ವಿವಿಧ ರಾಷ್ಟ್ರೀಯ ಮತ್ತು ಅಂತರರಾಷ್ಟ್ರೀಯ ಪತ್ರಿಕೆಗಳಲ್ಲಿ ಪ್ರಕಟವಾಗಿವೆ. ಅನೇಕ ಅಂತರರಾಷ್ಟ್ರೀಯ ಸಮ್ಮೇಳನಗಳಲ್ಲಿ ಅವರು ತಮ್ಮ ಸಂಶೋಧನಾ ಪ್ರಬಂಧಗಳನ್ನು ಮಂಡಿಸಿದ್ದಾರೆ.

ಬೆಂಗಳೂರಿನ ನ್ಯಾಷನಲ್ ಕಾಲೇಜು ಮತ್ತು ಸೆಂಟ್ರಲ್ ಕಾಲೇಜುಗಳಲ್ಲಿ ವಿದ್ಯಾಭ್ಯಾಸ ನಡೆಸಿ, ನ್ಯಾಷನಲ್ ಏರೋಸ್ಪೇಸ್ ಲ್ಯಾಬೋರೇಟರಿ, ಸೆಂಟ್ರಲ್ ಪವರ್ ರಿಸರ್ಚ್ ಇನ್‌ಸ್ಟಿಟ್ಯೂಟ್ – ಈ ಸಂಸ್ಥೆಗಳಲ್ಲಿ ಕೆಲಕಾಲ ಕೆಲಸ ಮಾಡಿದ್ದಾರೆ. ಸಣ್ಣ ವಯಸ್ಸಿನಿಂದಲೇ ಬರವಣಿಗೆಯನ್ನು ಆರಂಭಿಸಿದರು. ೧೯೭೬–೭೭ರಲ್ಲಿ ಕನ್ನಡ ಸಾಹಿತ್ಯ ಪರಿಷತ್ ಪ್ರಕಟಿಸಿದ ಉದಯೋನ್ಮುಖ ಬರಹಗಾರರ ಸಂಕಲನಗಳಲ್ಲಿ ಕಥೆ, ನಾಟಕ ಮತ್ತು ವಿಜ್ಞಾನ ಲೇಖನ ಮೂರೂ ಪ್ರಕಾರಗಳಲ್ಲಿ ಇವರ ಲೇಖನಗಳು ಆಯ್ಕೆಯಾಗಿದ್ದವು. ಆ ಮುಂದೆ ಸುಧಾ, ಪ್ರಜಾವಾಣಿ, ತುಷಾರ ಮತ್ತು ಉದಯವಾಣಿ ಪತ್ರಿಕೆಗಳಲ್ಲಿ ಇವರ ಅನೇಕ ಸಣ್ಣ ಕಥೆಗಳು ಪ್ರಕಟವಾದವು. ಆಕಾಶವಾಣಿಯಲ್ಲಿಯೂ ಕಥೆಗಳು ಮತ್ತು ನಾಟಕಗಳು ಪ್ರಸಾರಗೊಂಡವು. ೧೯೮೦ರ ನಂತರ ಮುಖ್ಯವಾಗಿ ವಿಜ್ಞಾನ ಲೇಖನಗಳನ್ನೇ ಹೆಚ್ಚಾಗಿ ಬರೆಯತೊಡಗಿದರು. ಜೆ. ಬಿ. ಎಸ್. ಹಾಲ್ಡೇನ್ ಅವರ ಕಥೆಗಳನ್ನು "ನನ್ನ ಮಿತ್ರ ಸೋರಣ್ಣ" ಎಂದು ಅನುವಾದಿಸಿದ್ದಾರೆ. ಅನೇಕ ಪ್ರವಾಸಿ ಲೇಖನಗಳನ್ನೂ ಬರೆದಿದ್ದಾರೆ. 'ಸಫಾರಿ ಎಂಬ ಲಕ್ಷುರಿ' ಎಂಬ ಪ್ರವಾಸೀ ಕಥನ ಮೂರು ಮುದ್ರಣಗಳನ್ನು ಕಂಡಿದೆ.

ಇಂಗ್ಲಿಷ್‌ನಲ್ಲಿ ನಾಲ್ಕು ಮತ್ತು ಕನ್ನಡದಲ್ಲಿ ಹದಿಮೂರು ಪುಸ್ತಕಗಳನ್ನು ರಚಿಸಿದ್ದಾರೆ. ಜನಪ್ರಿಯ ವಿಜ್ಞಾನದ ೪೦೦ಕ್ಕೂ ಹೆಚ್ಚು ಲೇಖನಗಳು (ಇಂಗ್ಲಿಷ್ ಮತ್ತು ಕನ್ನಡ) ವಿವಿಧ ಪತ್ರಿಕೆಗಳಲ್ಲಿ ಪ್ರಕಟವಾಗಿವೆ.

ಇವರಿಗೆ ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿ, ಕನ್ನಡ ಸಾಹಿತ್ಯ ಪರಿಷತ್ತಿನ ಎಚ್. ಎನ್. ದತ್ತಿ ಪ್ರಶಸ್ತಿ, ಶಿವಮೊಗ್ಗ ಕರ್ನಾಟಕ ಸಂಘದ ಪ್ರಶಸ್ತಿ ಸೇರಿದಂತೆ ಹಲವು ಪ್ರಶಸ್ತಿಗಳು ಲಭಿಸಿವೆ. ಕನ್ನಡದಲ್ಲಿ ಮೊದಲ ಪಾಪ್ ಅಪ್ ಪುಟಗಳ ಪುಸ್ತಕ ಜಂತರ್ – ಮಂತರ್ ರಚಿಸಿದ್ದಾರೆ.

ಇವರು ಜೂನ್ ೨೦೧೭ರವರೆಗೂ ಜವಾಹರಲಾಲ್ ನೆಹರೂ ತಾರಾಲಯದ ನಿರ್ದೇಶಕರಾಗಿದ್ದು ಅಲ್ಲಿಯ ಪ್ರೊಜೆಕ್ಟರ್‌ಗಳ ನವೀಕರಣವನ್ನು ಮತ್ತು ಕಾರ್ಯಕ್ರಮಗಳ ನಿರ್ವಹಣೆಗಳ ಜವಾಬ್ದಾರಿಯನ್ನು ವಹಿಸಿಕೊಂಡಿದ್ದರು. ಪ್ರಸ್ತುತ ಅಲ್ಲಿಯೇ ಆಹ್ವಾನಿತ ವಿಜ್ಞಾನಿಯಾಗಿದ್ದಾರೆ. ಬೋಧನೆಯ ಜೊತೆಗೆ ಸಂಶೋಧನೆ, ವಿಜ್ಞಾನ ಸಂವಹನೆ ಹಾಗೂ ಸಂಶೋಧನಾಸಕ್ತರಿಗಾಗಿ ಹಮ್ಮಿಕೊಳ್ಳುವ ಶೈಕ್ಷಣಿಕ ಕಾರ್ಯಕ್ರಮಗಳಿಗೆ, ವಿಶ್ವಕೋಶರಚನೆಗೆ, ಅಧ್ಯಯನ ಸಂಸ್ಥೆಗಳಲ್ಲಿ, ಅಂತರರಾಷ್ಟ್ರೀಯ ಒಲಿಂಪಿಯಾಡ್‌ಗಳು ಮತ್ತು ವಿಜ್ಞಾನ ಕೇಂದ್ರಗಳಲ್ಲಿ ಸಂಪನ್ಮೂಲ ವ್ಯಕ್ತಿಯಾಗಿ ಭಾಗವಹಿಸುತ್ತಿದ್ದಾರೆ. ರಾಷ್ಟ್ರೀಯ ವೈಜ್ಞಾನಿಕ ಕಾರ್ಯಕ್ರಮಗಳ ಸಮಿತಿಗಳಿಗೆ ಸಲಹೆಗಾರರಾಗಿಯೂ ಸೇವೆ ಸಲ್ಲಿಸುತ್ತಿದ್ದಾರೆ.

ಮೂಢನಂಬಿಕೆಯಾಗುತ್ತದೆ. ಹಾಗೆಯೇ ದೇವರಿಗೆ ನಮಸ್ಕರಿಸುವುದು, ಅದರ ಬಗ್ಗೆ ನಾವು ಬೆಳೆಸಿಕೊಂಡಿರುವ ಗೌರವವನ್ನು ಸೂಚಿಸುತ್ತದೆ, ಅಷ್ಟೆ. ಅದನ್ನೇ ಇನ್ನೊಬ್ಬರು ಮಾಡಬೇಕೆಂದು ಹೇರಿದರೆ, ಆಗ ಅದು ತಪ್ಪಾಗುತ್ತದೆ. ಅಥವಾ ಆ ವಿಗ್ರಹದ ಪೂಜೆಯಿಂದಲೇ ನನಗೆ 'ಒಳ್ಳೆಯದು' ಆಗುತ್ತಿದೆ ಎಂದು ಘೋಷಿಸುವುದಾಗಲೀ, ಇತರರಿಗೂ ಹಾಗೆಯೇ ಆಗುತ್ತದೆ ಎಂದಾಗಲೀ ಹೇಳಿದರೆ ಅದು ತಪ್ಪು. 'ಹಾಗಾದರೆ ನನ್ನ ಜೀವನದ ಉದ್ದಕ್ಕೂ ಎಲ್ಲ ಒಳ್ಳೆಯದೇ ಆಗಿದೆಯೇ?' ಇದನ್ನು ಪ್ರಶ್ನಿಸಿಕೊಳ್ಳುವ ವಿವೇಕ ಇಲ್ಲದವರಿಗೆ ಅಡ್ಡಗೆರೆ ಇಲ್ಲವೇ ಇಲ್ಲ.

ಇನ್ನೊಂದು ಉದಾಹರಣೆ : ನಮ್ಮ ಮನೆ ಕೆಲಸದಾಕೆ ಎರಡು ಸಣ್ಣ ಮಕ್ಕಳ ತಾಯಿ; ಗಂಡನಿಂದ ಚೆನ್ನಾಗಿ ಏಟು ತಿನ್ನುವ ವರ್ಗಕ್ಕೆ ಸೇರಿದವಳು. ಆತ ಕುಡುಕ. ಪ್ರತಿರಾತ್ರಿ ಆತನ ಹೊಡೆತ ತಿಂದು, ತಿಂದು ಈಕೆಯ ಮೈ ಜಡ್ಡುಗಟ್ಟಿದೆ. ಆದರೆ ಪ್ರತಿ ವರ್ಷವೂ ಕೆಂಪು ಸೀರೆ ಉಟ್ಟು ತಮಿಳುನಾಡಿನ ಯಾವುದೋ ದೇವಾಲಯಕ್ಕೆ ತಪ್ಪದೆ ಹೋಗುತ್ತಲೇ ಇರುತ್ತಾಳೆ. ಬಹಳ ನೇಮವಾಗಿ ಚಳಿಗಾಲದಲ್ಲಿ ತಣ್ಣೀರು ಸ್ನಾನ, ಬರಿಗಾಲಲ್ಲಿ ಓಡಾಟ. ಹೊರಗಡೆ ಏನನ್ನೂ ತಿನ್ನದೆ ಇರುವುದು (ನಾನು ಕೊಡುವ ಕಾಫಿಯೂ ವರ್ಜ್ಯ) – ಇದನ್ನೆಲ್ಲಾ ಆಚರಿಸುತ್ತಾಳೆ. ಅವಳಿಗೆ, ಇದೆಲ್ಲಾ ಬಿಟ್ಟುಬಿಡು, ಆ ದೇವರೇ ನಿನ್ನನ್ನು ಕಾಪಾಡಬೇಕೇ? ಮನೆಯಲ್ಲೇ ಪೂಜೆ ಮಾಡಿಕೋ, ದೇಹದಂಡನೆ ಬೇಡ, ಎಂದು ಬುದ್ಧಿವಾದ ಹೇಳಿದೆ. ಆದರೆ ಆಕೆ ಇದನ್ನು ತಪ್ಪಿಸಲಿಲ್ಲ. ಕೊನೆಗೊಮ್ಮೆ ಸಿಟ್ಟು ಮಾಡಿದೆ. ಆಗ ಮೆಲ್ಲಗೆ ಅವಳು ಕೊಟ್ಟ ಉತ್ತರ ನನ್ನ ಬಾಯಿ ಕಟ್ಟಿಸಿತು : "ಅಕ್ಕ, ಆ ಒಂದು ತಿಂಗಳು ನನಗೆ ಹೊಡೆತ ತಪ್ಪುತ್ತೆ. ಅವನು ನನ್ನನ್ನು ಮುಟ್ಟಲ್ಲ," ಎಂದಳು. ಯಾವುದೋ ಮೌಢ್ಯದ ಕಾರಣದಿಂದ ಅವಳಿಗೆ ಇಷ್ಟು 'ಸೌಲಭ್ಯ' ಸಿಕ್ಕುತ್ತದೆ ಎನ್ನುವುದಾದರೆ ನಾನೇಕೆ ಬೇಡ ಅನ್ನಲಿ?

**ಹೊಸತು :** ಪ್ಲಾನೆಟೇರಿಯಂನ ನಿರ್ದೇಶಕಿಯಾಗಿದ್ದ ನಿಮ್ಮ ಕಾಲಾವಧಿಯಲ್ಲಿ ತಾರಾಲಯಕ್ಕೆ ಸೇರ್ಪಡೆಯಾದ ಹೊಸ ಅಂಶಗಳೇನು?

**ಶೈಲಜಾ :** ನನ್ನ ಕಾಲಾವಧಿಯ ಐದೂವರೆ ವರ್ಷಗಳಲ್ಲಿ ಮುಖ್ಯವಾಗಿ ಮೂರು ವಿಷಯಗಳನ್ನು ಪರಿಚಯಿಸಿದ್ದನ್ನು ಹೇಳಬಹುದು. ಮೊದಲನೆಯದು, 'ವಿಜ್ಞಾನ ವನ'. ಅದರಲ್ಲಿ ಹೊಸ ಹೊಸ ಉಪಕರಣಗಳನ್ನು ಅಳವಡಿಸಲಾಯಿತು. ಮೂರು ಮೀಟರ್ ವ್ಯಾಸದ ಭೂಗೋಳವಿದೆ. ಬೆಂಗಳೂರಿನ ಅಕ್ಷಾಂಶಕ್ಕೆ ನಿರ್ಮಿಸಿದ ಜಂತರ್ – ಮಂತರ್ ಪ್ರತಿಕೃತಿಗಳಿವೆ. ಎರಡನೆಯದು, 'ಪ್ರತಿ ಗುರುತ್ವ ಕುಟೀರ'. ಇದೊಂದು ಬಹಳ ಹೊಸ ಅಂಶ. ಭಾರತದಲ್ಲಿ ಎಲ್ಲೂ ಇಂತಹ ಕುಟೀರವಿಲ್ಲ. ಇದರ ಸುತ್ತ ಒಂದು ಭ್ರಮಾಲೋಕವನ್ನೇ ಸೃಷ್ಟಿಸಿದ್ದೇವೆ. ಇಲ್ಲಿ ನೀರು ಕೆಳಗಿನಿಂದ ಮೇಲಕ್ಕೆ ಹರಿಯುತ್ತದೆ. ಚೆಂಡು ಮೇಲಕ್ಕೆ ಉರುಳುತ್ತದೆ. ಮತ್ತೆ ಮೂರನೆಯದು, ಪ್ರೊಜೆಕ್ಟರ್ ನವೀಕರಣ. ಇದನ್ನು ದಾಖಲೆಯ ಅವಧಿ ಎಂದರೆ ಹತ್ತು ತಿಂಗಳಲ್ಲಿ ಮುಗಿಸಿದೆವು. ನನ್ನ ಸಹೋದ್ಯೋಗಿಗಳೆಲ್ಲ ಹಗಲು ರಾತ್ರಿ ಹಬ್ಬ ರಜಾ ಎನ್ನದೇ ಕೈ ಜೋಡಿಸಿದ್ದರಿಂದ ಇದು ಸಾಧ್ಯವಾಯಿತು.

**ಹೊಸತು :** ಇಲ್ಲಿಯವರೆಗೂ ನಿಮ್ಮ ಬರಹ ಮತ್ತು ಬದುಕಿನ ಬಗ್ಗೆ ನಮ್ಮೊಡನೆ ಸಾಕಷ್ಟು ಸಂಗತಿಗಳನ್ನು ಹಂಚಿಕೊಂಡಿದ್ದೀರಿ. ನಿಮ್ಮ ಅಮೂಲ್ಯವಾದ ಸಮಯವನ್ನು 'ಹೊಸತು'ಗಾಗಿ ನೀಡಿದ್ದೀರಿ. ಅದಕ್ಕಾಗಿ ವಂದನೆಗಳು.

**ಶೈಲಜಾ :** ನಮಸ್ಕಾರ.

ಲೇಖನ ಸಿದ್ಧಪಡಿಸಿದವರು : **ಡಾ॥ ವೈ. ಸಿ. ಕಮಲ**
೪, ಜಿ–೭, ಬ್ರಿಗೇಡ್ ಪಾರ್ಕ್ ವ್ಯೂ, ಬಿ. ಪಿ. ವಾಡಿಯಾ ರಸ್ತೆ, ಬಸವನಗುಡಿ, ಬೆಂಗಳೂರು –೪



# ಎಚ್ಚೆಸ್ಸಾರ್ ವಿಮರ್ಶೆ

## ಸಾಹಿತ್ಯ ಮತ್ತು ಬಾಳಿನ ಚಿಂತನೆ

ಡಾ॥ ರಹಮತ್ ತರೀಕೆರೆ

ನಾಲ್ಕು ದಶಕಗಳಿಂದ ಸಾಹಿತ್ಯ ವಿಮರ್ಶೆಯಲ್ಲಿ ತೊಡಗಿಸಿಕೊಂಡ ಎಚ್ಚೆಸ್ಸಾರ್ ಅವರ ವಿದ್ವತ್ತು, ಪ್ರತಿಭೆ, ಜೀವನದೃಷ್ಟಿಗಳು, ವಿಮರ್ಶೆಯ ಹೊರತಾಗಿ ಪ್ರವಾಸಕಥನ, ಅನುವಾದ, ವಿಚಾರ ಸಾಹಿತ್ಯದ ಪ್ರಕಾರಗಳಲ್ಲೂ ಪ್ರಕಟವಾಗಿವೆ. ಸಾಹಿತ್ಯ ತತ್ವ ಮತ್ತು ಲೋಕದೃಷ್ಟಿಯಿಂದ ಎಚ್ಚೆಸ್ಸಾರ್ ಅವರ ಸಾಹಿತ್ಯ ವಿಮರ್ಶೆ, ಚಿಂತನ ಬರೆಹ ಹಾಗೂ ಅನುವಾದಗಳ ನಡುವೆ ವಿಶಿಷ್ಟ ಒಳಸಂಬಂಧಗಳಿವೆ. ಬಹುಮುಖ ಪ್ರತಿಭೆಯ ಕನ್ನಡದ ಲೇಖಕರ ಅನುಭವ ಮತ್ತು ಚಿಂತನೆಗಳು ಯಾವಾಗಲೂ ಹಲವು ಪ್ರಕಾರಗಳಲ್ಲಿ ಹಂಚಿಹೋಗಿವೆ. ತಮ್ಮನ್ನು ನಿರ್ದಿಷ್ಟ ಪ್ರಕಾರಕ್ಕೆ ಸೀಮಿತಗೊಳಿಸಿ ನೋಡುವ ನಡಾವಳಿಯನ್ನು ಭಗ್ನಗೊಳಿಸುವಂತೆ ಅವರು ಪ್ರಕಾರ ಸೀಮೋಲ್ಲಂಘನೆ ಮಾಡುತ್ತ ಬಂದಿದ್ದಾರೆ. ಕನ್ನಡಕ್ಕೆ "ಯಾವುದೇ ನಿರ್ದಿಷ್ಟ ಸಾಹಿತ್ಯಕ ಚಳುವಳಿಯ ತತ್ವಗಳನ್ನು ಸಂಪೂರ್ಣವಾಗಿ ಒಪ್ಪಿಕೊಳ್ಳದ, ಸ್ವತಃ ಸೃಜನಶೀಲ ಸಾಹಿತಿಗಳಲ್ಲದ ವಿಮರ್ಶಕರ ತಂಡವೊಂದು ಮೂಡಿಬರುವ ಅಗತ್ಯವಿದೆ" ಎಂದು ಎಚ್ಚೆಸ್ಸಾರ್ ಆರಂಭದ ಘಟ್ಟದಲ್ಲಿ ಹೇಳಿದ್ದರು. ಈಗ ಅವರು ಹಾಗೆ ಹೇಳುವರೇ ತಿಳಿಯದು. ಅವರ ಆಶಯ ನಿಜಗೊಳ್ಳುವುದು ಕಷ್ಟವೆಂಬಂತೆ ಈಚಿನ ವಿಮರ್ಶೆಯಲ್ಲಿ ರೂಪಾಂತರ ಸಂಭವಿಸಿದೆ. ಸಾಹಿತ್ಯ ಅಭಿವ್ಯಕ್ತಿಯಾಗುವ, ಸಂವಹನಗೊಳ್ಳುವ ಕ್ರಮಗಳಲ್ಲಿ ಸಹ ಪಲ್ಲಟ ಸಂಭವಿಸಿದೆ. ಆದರೆ "ಮಹತ್ವದ ಲೇಖಕನೊಬ್ಬನು ಮೊದಲಿಗಿಂತ ಭಿನ್ನವಾಗಿ ಬರೆಯತೊಡಗಿದಾಗ, ಹೊಸ ಬರೆವಣಿಗೆಯನ್ನು ಸುಮ್ಮನೆ ತಳ್ಳಿಹಾಕದೆ, ಅದರ ಹಿಂದಿನ ಪ್ರೇರಣೆಗಳನ್ನು, ಪ್ರತಿಭೆಯ ಹೊಳಹುಗಳನ್ನು ಹುಡುಕುವುದು ನನ್ನ ಮಾರ್ಗ" ಎಂಬ ಸಂಕಲ್ಪವನ್ನು ಮಾತ್ರ ಅವರ ವಿಮರ್ಶೆ ಉದ್ದಕ್ಕೂ ಪಾಲಿಸಿಕೊಂಡು ಬಂದಿದೆ.

"ಯಾವುದೇ ಸಮುದಾಯದ ಸಮಕಾಲೀನ ಪರಿಸ್ಥಿತಿಯ ಅರಿವಿನ ಜೊತೆಜೊತೆಗೆ, ಅದರ ಇತಿಹಾಸದ ಏಳು-ಬೀಳುಗಳ ಪರಿಚಯವಿಲ್ಲದೆ ಹೋದಾಗ ಹುಟ್ಟುವ ಕಾವ್ಯವು ಆಯಾಮರಹಿತವಾಗುತ್ತದೆ. ಗೋಪಾಲಕೃಷ್ಣ ಅಡಿಗರ ಇತ್ತೀಚಿನ ಹಲವು ಸಂಕಲನಗಳಲ್ಲಿ ತಾನೇ ತಾನಾಗಿರುವ ಅಸಹನೆ, ಆಕ್ರೋಶಗಳು ಇಂತಹ ಪರಿಚಯದ ಅಭಾವದ ಫಲ. ಸಮುದಾಯದ ಎಲ್ಲ ಭಾಗಗಳೂ ಶತಮಾನಗಳಿಂದ ವಂಚಿತವಾದ ಸೌಲಭ್ಯಗಳನ್ನು ಪಡೆಯ ತೊಡಗಿದಾಗ, ಸಹಜವಾದ ಚಿಕ್ಕಪುಟ್ಟ ಅನ್ಯಾಯಗಳ ಮೇಲೆ ಯುದ್ಧ ಸಾರುವ ಕವಿಯು ತನಗೇ ತಿಳಿಯದೆ ಜನವಿರೋಧಿಯಾಗಿಬಿಡುತ್ತಾನೆ."

ಮೇಲ್ಕಾಣಿಸಿದ ಹೇಳಿಕೆಗಳಲ್ಲಿ ಮೊದಲನೆಯದು ಕವಿಯೊಬ್ಬರನ್ನು ಕುರಿತದ್ದು; ಎರಡನೆಯದು ಸಾಹಿತ್ಯ ವಿಮರ್ಶೆಯ ತಾತ್ವಿಕತೆಗೆ ಸಂಬಂಧಿಸಿದ್ದು. ಈ ಹೇಳಿಕೆಗಳು ಮೇಲ್ನೋಟಕ್ಕೆ ಪರಸ್ಪರ ವಿರುದ್ಧವೆಂಬಂತೆ ಕಾಣುತ್ತವೆ. ವಾಸ್ತವವಾಗಿ ಅವುಗಳಲ್ಲಿ ದ್ವಂದ್ವಾತ್ಮಕವಾದ ಸಮತೋಲನವಿದೆ. ಮೊದಲನೆಯದರಲ್ಲಿ ಕವಿಯ ಮೌಲ್ಯಪ್ರಜ್ಞೆ ಅವನ ಕಾವ್ಯಪ್ರತಿಭೆಯನ್ನೇ ಕುಬ್ಜಗೊಳಿಸುವ ವಿಚಾರವಿದ್ದರೆ, ಎರಡನೆಯದರಲ್ಲಿ ಲೇಖಕರ ಘೋಷಣೆಗಳಾಚೆ ಹೋಗಿ ಕೃತಿ ಪರಿಶೀಲಿಸುವ ವಿಚಾರವಿದೆ. ಒಂದೆಡೆ ಪ್ರತಿಭಾವಂತ ಲೇಖಕ ತನ್ನ ಪರಿಸರದಲ್ಲಿ ನಡೆಯುತ್ತಿರುವ ಆಗುಹೋಗುಗಳ ಬಗ್ಗೆ ಸಾಮಾಜಿಕವಾಗಿ ಅಸೂಕ್ಷ್ಮವಾಗಿರುವುದರ ಟೀಕೆಯಿದ್ದರೆ, ಇನ್ನೊಂದೆಡೆ ಕಲೆಯನ್ನು ನೋಡಲು ಅದರ ಸೃಷ್ಟಿಕರ್ತನಾಚೆ ಹೋಗಬೇಕಾದ ಸೂಚನೆಯಿದೆ. ಮೊದಲು ಉಲ್ಲೇಖದಲ್ಲಿ ಸಾಹಿತ್ಯ ತತ್ವಗಳ ನಡುವೆ ಕೃತಿವಿಮರ್ಶೆಯ ಸಾಲು ಬಂದಿದ್ದು, ಇದು ವಿಮರ್ಶೆಯಲ್ಲಿ ಸಾಹಿತ್ಯ ತತ್ವಗಳು ಪ್ರಕಟವಾಗುವ ಬಗೆಯನ್ನೂ ಕಾಣಿಸುತ್ತಿದೆ. ಸಾಹಿತ್ಯ ಚಿಂತನೆಯು ಪ್ರತ್ಯೇಕವಾಗಿ ಪ್ರಕಟವಾಗುವ ಶಾಸ್ತ್ರರೂಪೀ ವಿಧಾನವೊಂದು ಕನ್ನಡದಲ್ಲಿದೆ.

ಇದರೊಟ್ಟಿಗೆ ನಿರ್ದಿಷ್ಟ ಕೃತಿಯ ವಿಶ್ಲೇಷಣೆ ಮತ್ತು ಮೌಲ್ಯಮಾಪನದ ಭಾಗವಾಗಿ ಪ್ರಕಟವಾಗುವ ವಿಧಾನವೂ ಇದೆ. ಡಾ॥ ಎಚ್. ಎಸ್. ರಾಘವೇಂದ್ರ ರಾವ್ ಅವರ ವಿಮರ್ಶೆಯಲ್ಲಿ, ಮುನ್ನುಡಿ ಮತ್ತು ಸಂಪಾದಕೀಯ–ಪ್ರಸ್ತಾವನೆಗಳಲ್ಲಿ ತಾತ್ವಿಕ ಹೊಳಹುಗಳು ಬರುತ್ತವೆ. ಅವು ಸಾಧಾರಣೀಕರಣ ಪಡೆದುಕೊಂಡು ಸಾಹಿತ್ಯ ತತ್ವದ ರೂಪಾಂತರ ಪಡೆಯುತ್ತವೆ. ಇದನ್ನು ಸಾಹಿತ್ಯ ಚಿಂತನೆಯ ಪ್ರಾಸಂಗಿಕ ಅಭಿವ್ಯಕ್ತಿ ಎನ್ನಬಹುದು. ಸಾಹಿತ್ಯ ಚಿಂತನೆ–ಸಾಹಿತ್ಯ ಮೀಮಾಂಸೆ ಎಂದು ಮುದ್ದಾಮಾಗಿ ಬರೆದ ಬರೆಹಗಳಲ್ಲಿ ಕಾಣದ ಒಳನೋಟ ಮತ್ತು ಜೀವಂತಿಕೆಗಳು, ವಿಮರ್ಶೆಯ ಈ ಹಾಯುಹೇಳಿಕೆಗಳಲ್ಲಿ ಹರಳುಗಟ್ಟಿಗೊಂಡು ಬರುತ್ತವೆ.

ಎಚ್ಚೆಸ್ಸಾರ್ ವಿಮರ್ಶೆಯಲ್ಲಿ ಸಾಹಿತ್ಯ ತತ್ವವು ಎರಡು ವಿನ್ಯಾಸಗಳಲ್ಲಿ ಪ್ರಕಟವಾಗುತ್ತವೆ. ಒಂದು – ಮಹತ್ವದ ಲೇಖಕರ ಜತೆ ತೆಕ್ಕೆಹಾಯ್ದು ಬರೆಯುವಾಗ. ಇದನ್ನು ಪರಂಪರೆ ಅನುಸಂಧಾನದ ಭಾಗವಾಗಿ ಸಾಹಿತ್ಯ ತತ್ವ ಹುಟ್ಟಿಸುವ ಪರಿ ಎನ್ನಬಹುದು. ಎರಡು – ಬರವಣಿಗೆಯ ಪ್ರಥಮ ಹಂತದಲ್ಲಿರುವ ಲೇಖಕರಿಗೆ ಮುನ್ನುಡಿ ಬರೆಯುವಾಗ; ಹೊಸ ತಲೆಮಾರಿಗೆ ಹಾದಿ ತೋರುವ ಪ್ರಕ್ರಿಯೆಯಲ್ಲಿ. ಎಚ್ಚೆಸ್ಸಾರ್ ಸಾಹಿತ್ಯ ಮತ್ತು ಲೋಕ ಚಿಂತನೆಯಲ್ಲಿರುವ ವಿಶಿಷ್ಟತೆಯೆಂದರೆ, ಅದು ಆಧುನಿಕ ಕಾಲದ ಮಹತ್ವದ ಲೇಖಕರ ಹಾಗೂ ಮುಖ್ಯ ಸಾಹಿತ್ಯ ಪಂಥಗಳ ಸಾರದೊಂದಿಗೆ ಒಡನಾಡಿದ, ಗಳಿಸಿರುವ ತಿಳಿವು. ಅವರು ಮತ್ತೆಮತ್ತೆ ಉಲ್ಲೇಖಿಸುವ ಲೇಖಕರೆಂದರೆ ಕುವೆಂಪು, ಬೇಂದ್ರೆ, ಚಿತ್ತಾಲ, ಲಂಕೇಶ್, ದೇವನೂರ, ಕಾರಂತ, ಅಡಿಗ, ಅನಂತಮೂರ್ತಿ, ಮಾಸ್ತಿಯವರ ಬಗ್ಗೆ ಅವರು ಹೆಚ್ಚು ಬರೆಯಲಿಲ್ಲ. ಬರೆದಿದ್ದರಲ್ಲೂ ನಿಷ್ಠುರ ದನಿಯೇ ಮಿಗಿಲಾಗಿದೆ. ವಿಮರ್ಶೆಯ ಚರ್ಚೆಗೆ ಲೇಖಕರನ್ನು ಆರಿಸಿಕೊಳ್ಳುವ ಪರಿಯಲ್ಲೂ ತಾನು ಪ್ರತಿಪಾದಿಸುವ ಸಾಹಿತ್ಯ ತತ್ವಗಳ ಚಹರೆಯನ್ನೂ ಕಾಣಿಸಬಲ್ಲದು.

ಎಚ್ಚೆಸ್ಸಾರ್ ವಿಮರ್ಶೆ ಬರೆಯಲು ಆರಂಭಿಸಿದಾಗ ನವ್ಯಪಂಥದ ಪ್ರಭಾವ ದಟ್ಟವಾಗಿತ್ತು. ಆದರೆ ಅವರ ಮುಖ್ಯ ಒಲುಮೆ ನವೋದಯಲ್ಲಿತ್ತು. ಪುಣೇಕರರ ಹಾಗೆ 'ಆಧುನಿಕ ಸಾಹಿತ್ಯದಲ್ಲಿ ದೊಡ್ಡ ಸಾಧನೆ ಮಾಡಿದವರು ನವೋದಯದವರು' ಎಂದು ಎಚ್ಚೆಸ್ಸಾರ್ ಕೂಡ ನಂಬಿದಂತಿದೆ. ಅವರ ಬರೆಹ ಮತ್ತು ವ್ಯಕ್ತಿತ್ವದ ಮೇಲೆ ಗಾಢಪ್ರಭಾವ ಬೀರಿದವರು ಜಿಎಸ್ಎಸ್ ಎನ್ನುವುದು ಇದಕ್ಕೆ ಕಾರಣವಿರಬಹುದು. ಎಚ್ಚೆಸ್ಸಾರ್ ತಮ್ಮ ಚೊಚ್ಚಲ ವಿಮರ್ಶಾ ಸಂಕಲನ ಪ್ರಕಟಿಸುವ ಹೊತ್ತಿಗೆ ನವ್ಯದ ಉಬ್ಬರ ಕಡಿಮೆಯಾಗುತ್ತ, ದಲಿತ ಬಂಡಾಯದ ಭೂಮಿಕೆ ಸಿದ್ಧವಾಗುತ್ತಿತ್ತು. ಆಗ ಅವರ ವಿಮರ್ಶೆಯು ದಲಿತ–ಬಂಡಾಯ ಪಂಥದೊಟ್ಟಿಗೆ ಪ್ರೀತಿ ಮತ್ತು ಭಿನ್ನಮತಗಳ ವಿಮರ್ಶಾತ್ಮಕ ನೆಲೆಯ ಸಂಬಂಧವನ್ನು ಸ್ಥಾಪಿಸಿಕೊಂಡಿತು. ಅದರ ಕಲಾಸ್ವರೂಪದ ಬಗ್ಗೆ ಶಂಕೆಯಿಟ್ಟುಕೊಂಡೇ ಲೋಕದೃಷ್ಟಿಯ ಬಗ್ಗೆ ಆಸ್ಥೆ ತೋರಿತು. ಹೀಗಾಗಿ ಅವರ ಸಾಹಿತ್ಯ ತತ್ವಗಳಲ್ಲಿ ನವೋದಯದ ಜೀವನಪ್ರೀತಿ, ಅಭಿಜಾತ ಪ್ರಜ್ಞೆ, ಉದಾರತೆ, ಮಾನವತಾವಾದಗಳು, ನವ್ಯದ ಕಲಾಪ್ರಜ್ಞೆ, ವ್ಯಕ್ತಿವಿಶಿಷ್ಟತಾವಾದಗಳ ಹಾಗೂ ದಲಿತ ಬಂಡಾಯದ ಸಾಮಾಜಿಕ ಪ್ರಜ್ಞೆ ಮತ್ತು ಹೊಸ ಸಮಾಜ ಕಟ್ಟುವ ಕನಸುಗಾರಿಕೆಗಳ ವಿಶಿಷ್ಟ ಮಿಳಿತವಿದೆ. ಅವರ ವಿಮರ್ಶೆ ಬೇಂದ್ರೆ ನರಸಿಂಹಸ್ವಾಮಿ, ಕುವೆಂಪು ಬರೆಹಕ್ಕೆ ಮತ್ತೆಮತ್ತೆ ಹೋಗುತ್ತದೆ; ಈಚೆಗೆ ಬರೆಯುತ್ತಿರುವ ಹೊಸ ತಲೆಮಾರಿನ ಪ್ರತಿಭಾಶೋಧಕ್ಕೆ ಹೊರಳುತ್ತದೆ. ಈ ಎಲ್ಲ ಘಟ್ಟ / ಪಂಥಗಳಿಗೆ ಸೇರಿದ ಲೇಖಕರ ಮೇಲೆ ಅವರಂತೆ ಸಮಪ್ರಮಾಣದಲ್ಲಿ ಬರೆದ ವಿಮರ್ಶಕರಿಲ್ಲ. ಪ್ರತಿ ಕಾಲಘಟ್ಟದ ಅತ್ಯುತ್ತಮವಾದುದರ ಜತೆ ಅನುಸಂಧಾನದಿಂದ ವಿಮರ್ಶೆಯೊಂದು ತನಗೆ ಬೇಕಾದ ಕಸುವನ್ನು ಪಡೆದುಕೊಳ್ಳುವ ಗುಣವನ್ನು ಇಲ್ಲಿ ಕಾಣಬಹುದು. ಹೀಗೆ ಪಡೆದುಕೊಳ್ಳುವ ತೆರೆದ ಮನಸ್ಸಿನಲ್ಲಿ ವಿಮರ್ಶಾತ್ಮಕ ಎಚ್ಚರವೂ ಇರುವುದರಿಂದ ಎಚ್ಚೆಸ್ಸಾರ್ ವಿಮರ್ಶೆ ಸರಳ ಮತ್ತು ಭೋಳೆ ಆಗುವುದಿಲ್ಲ. ನಾಲ್ಕು ದಶಕಗಳ ಅವರ ವಿಮರ್ಶೆಯನ್ನು ಒಟ್ಟಾಗಿಟ್ಟು ನೋಡಿದರೆ, ಅದು ತನ್ನ ಮೊದಲ ಘಟ್ಟದಲ್ಲಿದ್ದ ನಿಲುವನ್ನು ಪೂರಾ ಬಿಟ್ಟುಕೊಡದೆ, ಅದನ್ನು ಸೂಕ್ಷ್ಮಗೊಳಿಸಿಕೊಳ್ಳುತ್ತ, ಸತ್ವಸಂಚಯನ ಮಾಡುತ್ತ, ಸೀಮೋಲ್ಲಂಘನೆಯ ಪ್ರಕ್ರಿಯೆಯಲ್ಲಿ ಬೆಳೆದಿರುವುದು ತಿಳಿಯುತ್ತದೆ. ಈ ಬೆಳೆತದಲ್ಲಿ ನೆಗೆತಗಳಿಲ್ಲ; ಅರ್ಥಪೂರ್ಣ ಹೊರಳಿಕೆಗಳಿವೆ.

ಸಾಹಿತ್ಯ ವಿಮರ್ಶೆಯ ಮೂಲಕ ಸಾಹಿತ್ಯ ತತ್ವವನ್ನು ಪ್ರಕಟಿಸುವ ಎಚ್ಚೆಸ್ಸಾರ್ ಪರಿಯ ವಿಶಿಷ್ಟತೆಯೆಂದರೆ, ತಮ್ಮ ವಿಮರ್ಶೆಯ ಕಾಯಕಕ್ಕೂ ಬೇಕಾದ ತತ್ವವನ್ನು ರೂಪಿಸಿಕೊಂಡಿರುವುದು. ಈ ಅರ್ಥದಲ್ಲಿ ಅವರ ವಿಮರ್ಶೆಯಲ್ಲಿ ವಿಮರ್ಶನ ಮೀಮಾಂಸೆಯೂ ಇದೆ. ಇದನ್ನು 'ನಿಲುವು' ಸಂಕಲನದ ಅದೇ ಹೆಸರಿನ ಲೇಖನ ಸ್ಪಷ್ಟಪಡಿಸುತ್ತದೆ.

ಎಚ್ಚೆಸ್ಸಾರ್ ತಮ್ಮ ವಿಮರ್ಶೆಯ ಕಾರ್ಯಕ್ಕಾಗಿ ರೂಪಿಸಿಕೊಂಡ ನಿಲುವು, ಅವರ ವೈಯಕ್ತಿಕ ಜೀವನ ಮೀಮಾಂಸೆಯನ್ನೂ ಒಳಗೊಂಡಿದೆ. ಅವರ ವಿಮರ್ಶೆಯಲ್ಲಿ ಸಾಹಿತ್ಯ ತತ್ವಗಳು ಲೋಕ ಮೀಮಾಂಸೆಗೆ ಲಗತ್ತಾಗಿಯೇ ಬರುತ್ತವೆ. ಈ ಅವಿನಾ ಸಂಬಂಧಕ್ಕೆ ನುಡಿಯನ್ನು ನಡೆಯ ಜತೆ ಅಭಿನ್ನಗೊಳಿಸಿ ನೋಡಬೇಕೆನ್ನುವ ಅವರ ಧೋರಣೆಯೂ ಕಾರಣ. ಅವರಿಗೆ 'ಸಾಹಿತ್ಯ' ವೆನ್ನುವುದು ವಿಶ್ಲೇಷಣೆ – ಮೌಲ್ಯಮಾಪನ ಮಾಡುವುದಕ್ಕೆ ಲಭ್ಯವಾಗಿರುವ ಆಕರ ಮಾತ್ರವಲ್ಲ; ಲೋಕವನ್ನರಿಯಲು ಮತ್ತು ಅನುಸಂಧಾನಿಸಲು ನೆರವಾಗುವ ಕಣ್ಣು ಸಹ; ಘನತೆಯಿಂದ ಬದುಕಲು ಮತ್ತು ಮಾನವೀಯ ಮೌಲ್ಯವುಳ್ಳ ಆದರ್ಶವ್ಯಕ್ತಿತ್ವ ಕಟ್ಟಿಕೊಳ್ಳಲು ನೆರವಾಗುವ ಸಂಗಾತಿ ಕೂಡ. ಪ್ರವಾಸ ಕಥನದಂತಹ ಪ್ರಕಾರಗಳಲ್ಲಿ ಬರೆವಾಗಲೂ ಅವರು ಸಾಹಿತ್ಯ ವಿಮರ್ಶೆಯ ಒಳಗಿಂದಲೇ ಹೋಗುವ ಹಾದಿ ಮತ್ತು ಭಾಷೆಯನ್ನು ರೂಪಿಸಿಕೊಳ್ಳುವರು. ಲೋಕದ ವಿದ್ಯಮಾನಗಳ ಮೇಲೆ ಚಿಂತನೆ ಮಾಡುವಾಗಲೂ ಅದಕ್ಕೆ ಸಾಹಿತ್ಯದ ಆಯಾಮವಿರುತ್ತದೆ. ವಿಮರ್ಶೆಯು ಅವರಿಗೆ ಲೋಕವಿಶ್ಲೇಷಣೆಗೂ ಆತ್ಮಶೋಧಕ್ಕೂ ಒದಗಿರುವ ಸಾಧನವಾಗಿದೆ. ವಿಮರ್ಶನ ಪ್ರಕ್ರಿಯೆಯಲ್ಲೇ ಲೋಕ ಸಮಸ್ತದ ವಿದ್ಯಮಾನಗಳಿಗೆ ಸ್ಪಂದಿಸುವ ಕಾರಣ, ಅವರ ವಿಮರ್ಶೆ ಜೀವನ ಚಿಂತನೆಯೂ ಆಗುತ್ತದೆ. ಲಂಕೇಶ್ ಅವರ ಪ್ರಿಯ ಲೇಖಕ ಎನ್ನುವುದು ಸಾಹಿತ್ಯ ಚಿಂತನೆ ಮತ್ತು ಸಾರ್ವಜನಿಕ ಚಿಂತನೆ ಎರಡೂ ಬೇರೆಯಲ್ಲ ಎಂಬ ಅವರ ನಿಲುಮೆಯನ್ನೇ ದೃಢೀಕರಿಸುತ್ತದೆ. ಈ ಹೊರಳಿಕೆಯು ಅವರ ಕೊನೆಯ ವಿಮರ್ಶನ ಸಂಕಲನಗಳಲ್ಲಿ ಹೆಚ್ಚು ದಟ್ಟವಾಗಿದೆ. ಶತಮಾನದ ತೊಂಬತ್ತರ ಬಳಿಕ ಹುಟ್ಟಿದ ಬಹುತೇಕ ಕನ್ನಡ ವಿಮರ್ಶೆ, ಇಂತಹ ರೂಪಾಂತರ ತಾಳಲು ದೇಶದಲ್ಲಿ ನಡೆದ ವಿದ್ಯಮಾನಗಳ ಚಾರಿತ್ರಿಕ ಒತ್ತಾಸೆಯೂ ಇದೆ.

ಎಚ್ಚೆಸ್ಸಾರ್ ಸಾಹಿತ್ಯ ವಿಮರ್ಶೆ ಮತ್ತು ಸಾಹಿತ್ಯ ಚಿಂತನೆಯನ್ನು ಎರಡು ಸ್ಥೂಲ ಘಟ್ಟಗಳಲ್ಲಿ ಗುರುತಿಸ ಬಹುದು. ಮೊದಲನೆಯದು – ತಾವು ನಂಬಿದ ಮಾನದಂಡಗಳನ್ನು ಕೃತಿಗೆ ಅನ್ವಯಿಸಿ ನೋಡುವ ಉಮೇದಿನ ಘಟ್ಟ. ಈ ಘಟ್ಟದಲ್ಲಿ ಪಾಶ್ಚಿಮಾತ್ಯ ಸಾಹಿತ್ಯ ತತ್ವಗಳನ್ನು ಕನ್ನಡಕ್ಕೆ ಒಗ್ಗಿಸಿಕೊಳ್ಳುವ ಪ್ರಕ್ರಿಯೆ ಕಾಣುವುದು. ಇದು ನವ್ಯಸಾಹಿತ್ಯದ ಸಾಹಿತ್ಯದ ಪರಿಕಲ್ಪನೆ ಮತ್ತು ವಿಮರ್ಶೆಯ ಮಾನದಂಡಗಳನ್ನು ಶ್ರದ್ಧೆಯಲ್ಲಿ ನಂಬಿದ್ದ ಕಾಲ ಘಟ್ಟವೂ ಹೌದು. ಎರಡನೆಯದು – ವಿಮರ್ಶೆಯ




ಹತ್ಯಾರ ಮತ್ತು ತತ್ವಗಳನ್ನು ಸಿದ್ಧ ಸಾಹಿತ್ಯ ತತ್ವಗಳಿಂದ ಪಡೆಯದೆ, ಕೃತಿ ವಿಶ್ಲೇಷಣೆಯ ಮೂಲಕವೇ ರೂಪಿಸಿಕೊಳ್ಳುವ ಘಟ್ಟ. ಇದು ಕನ್ನಡ ಸಾಹಿತ್ಯ ಪ್ರಕಟಿಸಿರಬಹುದಾದ ಸ್ವಂತಿಕೆಯ ಹುಡುಕಾಟ ಮಾಡಲು ಅವರನ್ನು ತೊಡಗಿಸಿತು. ಇದೊಂದು ಬಗೆಯಲ್ಲಿ ದೇಸಿಯಲ್ಲಿ ಹೊಕ್ಕು ಮಾರ್ಗದೊಡನೆ ತಳುಕುಗೊಳ್ಳುವ ವಿನ್ಯಾಸ. ಈ ಘಟ್ಟದಲ್ಲಿ ಎಚ್ಚೆಸ್ಸಾರ್ ವಿಮರ್ಶೆ, ಕೃತಿಗಳಲ್ಲಿ ಅಂತರ್ಗತ ವಾಗಿರುವ ಸಾಹಿತ್ಯ ತತ್ವಗಳನ್ನು ಶೋಧಿಸುವುದಕ್ಕೆ ಒತ್ತುಕೊಡುತ್ತದೆ. ಅವರ 'ಹಾಡೆ ಹಾದಿ ತೋರಿತು' ಕೃತಿ ಮತ್ತು ಅದರ ಹೆಸರು, ಈ ಹುಡುಕಾಡುವ ವಿಧಾನಕ್ಕೆ ಒಂದು ರೂಪಕವಾಗಿದೆ. ಮೂರನೆಯದು – ಸಾಹಿತ್ಯವನ್ನೂ ಒಳಗೊಂಡಂತೆ ಬಾಳಿನ ವಿವಿಧ ಮಗ್ಗುಲುಗಳನ್ನು ತೆಕ್ಕೆಗೆ ತೆಗೆದುಕೊಂಡು ಸಾಂಸ್ಕೃತಿಕಗೊಳ್ಳುವ ಘಟ್ಟ. ನವ್ಯಸಾಹಿತ್ಯದ ಗಾಢ ಪ್ರಭಾವದಲ್ಲಿ ಅತಿ ಸಾಹಿತ್ಯಕವಾಗಿದ್ದ ಅವರ ಚಿಂತನೆಗಳು ಈ ಘಟ್ಟದಲ್ಲಿ ಹೆಚ್ಚು ಸಾಮಾಜಿಕ ನೆಲೆಯಲ್ಲಿ ಅರಳಿಕೊಂಡವು. ಕಲಾತ್ಮಕ ಎಚ್ಚರಿಕೆಯಿಂದ ಹೇಳಿಕೆ ಮಾಡುತ್ತಿದ್ದ ವಿಮರ್ಶೆ, ಈ ಘಟ್ಟದಲ್ಲಿ ಹೆಚ್ಚು ನೈತಿಕ ನಿಷ್ಠುರತೆಯಿಂದ ಮಾತಾಡಲಾರಂಭಿಸಿತು. ಈ ಮೂರೂ ಘಟ್ಟಗಳು ಎಚ್ಚೆಸ್ಸಾರ್ ಅವರ ಸಾಹಿತ್ಯ ಚಿಂತನೆಯ ಮಾಗುವಿಕೆಯ ಸಂಕೇತಗಳೂ ಆಗಿವೆ.

ಎಚ್ಚೆಸ್ಸಾರ್ ಅವರ ಮೊದಲ ಘಟ್ಟದ ವಿಮರ್ಶೆಯು ಕತೆ, ಕಾವ್ಯ, ನಾಟಕ, ಕಾದಂಬರಿ ಗಳಿಗೆ ಸೀಮಿತವಾಗಿದೆ; ಅಲ್ಲಿರುವ ಸಾಹಿತ್ಯಚಿಂತನೆ ಹೆಚ್ಚು ಸಾಹಿತ್ಯಕವಾಗಿದೆ. ಎರಡನೇ ಘಟ್ಟದಲ್ಲಿ ವಿಮರ್ಶೆಯು ವಿವಿಧ ಪ್ರಕಾರಗಳಿಗೆ ಚಾಚಿಕೊಳ್ಳುತ್ತದೆ ಹಾಗೂ ಅಭಿಜಾತ ಲೇಖಕರಲ್ಲದೆ ಹೊಸ ತಲೆಮಾರಿನ ಲೇಖಕರಿಗೂ ವಿಸ್ತರಿಸಿಕೊಳ್ಳುತ್ತದೆ. ಸಾಹಿತ್ಯದ ಜತೆಯಲ್ಲೇ ರಾಜಕಾರಣ ಸಮಾಜ ಸಂಸ್ಕೃತಿಯ ಸಂಗತಿಗಳನ್ನು ಅದು ಒಳಗೊಳ್ಳುತ್ತದೆ. 'ನಿಲುವು', 'ವಿಶ್ಲೇಷಣೆ' ಇತ್ಯಾದಿ ಮೊದಲ ಘಟ್ಟದ ವಿಮರ್ಶಾ ಸಂಕಲನಗಳಲ್ಲಿ ಘೋಷಿತ ಎನ್ನಬಹುದಾದ ದನಿಯಿದೆ; ಇದು ಅವರ ಸಾಹಿತ್ಯ ಚಿಂತನೆಯ ಅತಿಸ್ಪಷ್ಟತೆಯನ್ನು ಸೂಚಿಸುತ್ತದೆ. ಆದರೆ ಈ ಅತಿಸ್ಪಷ್ಟತೆಯ ತಾತ್ವಿಕ ಆಳ ಸೀಮಿತವಾಗಿದೆ. ನಂತರದ ಕೃತಿಗಳ ತಲೆಬರೆಹಗಳು ಹೀಗೆ ಅತಿ ಖಚಿತ ದನಿಯನ್ನು ಒಳಗೊಂಡಿಲ್ಲ. 'ತರುತಳೆದ ಪುಷ್ಪ', 'ಕಣ್ಣಹನಿಗಳೆ ಕಾಣಿಕೆ', 'ನಮಸ್ಕಾರ', 'ಸಂಗಡ', 'ಚಕ್ರವರ್ತಿಯ ಬಟ್ಟೆಗಳು', 'ಹತ್ತು ದಿಕ್ಕಿನ ಬೆಳಕು', 'ಮಂಜು ಮಣ್ಣು ಮೌನ' ಇವು ರೂಪಕ ಭಾಷೆಯಲ್ಲಿವೆ. ಮೊದಲ ಘಟ್ಟದ ವಿಮರ್ಶೆ ಮತ್ತು ಸಾಹಿತ್ಯ ಚಿಂತನೆಯು ಬಹುತ್ವದ ಹುಡುಕಾಟದಲ್ಲಿ ಚಲಿಸಿದ್ದರ ಕುರುಹಿದು. ಭಾರತದ ಸಮಾಜವು ಏಕರೂಪೀ ಸಾಂಸ್ಕೃತಿಕ ಹೇರಿಕೆಯನ್ನು ಅನುಭವಿಸುತ್ತಿದ್ದ ಕಾಲಘಟ್ಟದಲ್ಲಿ ಈ ಕೃತಿಗಳು ಪ್ರಕಟವಾದವು ಎನ್ನುವುದು ಗಮನಾರ್ಹ. ಮೊದಲ ಘಟ್ಟದಲ್ಲಿ ಎಚ್ಚೆಸ್ಸಾರ್ ವಿಮರ್ಶೆ ಸಾಹಿತ್ಯಕವಾಗಿ ಅಭಿಜಾತ ಸೆಳೆತದಿಂದ ಕೂಡಿದೆ. ಮುಂದೆ ಅದು ಹೊಸ ತಲೆಮಾರಿನ ಲೇಖಕರನ್ನು ಗುರುತಿಸುವ ಮತ್ತು ಬೆಳೆಸುವ ಕಾಯಕದ ಭಾಗವಾಗಿ ವಿಸ್ತರಣೆಗೊಳ್ಳುತ್ತದೆ. ಇದರ ಜತೆಯಲ್ಲೇ ಅದರ ಸಾಹಿತ್ಯದ ಪರಿಕಲ್ಪನೆಯೂ ಬಹುತ್ವಕ್ಕೆ ವಿಸ್ತರಿಸುತ್ತದೆ; ಪ್ರಕಾರಕೇಂದ್ರಿತ ನೆಲೆಯಿಂದ ವಾಙ್ಮಯಕೇಂದ್ರಿತ ನೆಲೆಗೆ ಹೊರಳಿಕೊಳ್ಳುತ್ತದೆ.

ಎಚ್ಚೆಸ್ಸಾರ್ ವಿಮರ್ಶೆಯ ಹಿಂದೆ ಸಾಹಿತ್ಯದ ವ್ಯಾಪಕ ಅಧ್ಯಯನವಿದೆ. ಆಧುನಿಕ ಕನ್ನಡ ಸಾಹಿತ್ಯದ ವಿವಿಧ ಪ್ರಕಾರಗಳಲ್ಲಿ ಅವರಷ್ಟು ಓದುಳ್ಳವರು ಕಡಿಮೆ. ಕುವೆಂಪು, ಕಾರಂತ, ಬೇಂದ್ರೆಯಂತಹ ಲೇಖಕರಿಂದ ಹಿಡಿದು, ಜನಪ್ರಿಯವೆಂದು ಬದಿಗೆ ಸರಿಸಲಾಗುವ ಅನಕೃ, ತರಾಸು, ತ್ರಿವೇಣಿ ತನಕ; ಎಲ್ಲಪ್ಪ, ತಾಜುಮಾ, ವಿನಯಾ, ಎನ್. ಕೆ. ಹನುಮಂತಯ್ಯ ಮುಂತಾದ ಹೊಸ ತಲೆಮಾರಿನ ಲೇಖಕರಿಂದ ಹಿಡಿದು ಅಮೃತಾ ಅವರಿಂದ ಕಾಫ್ಕಾ ಟಾಲ್‌ಸ್ಟಾಯ್ ಮಾರ್ಕ್ವೆಜ್ ತನಕ ಅವರ ಓದಿನ ಹರಹಿದೆ. ಹೀಗಾಗಿ ಅವರ ಸಾಹಿತ್ಯ ಚಿಂತನೆ ಕೆಲವೇ ಕೃತಿಗಳ, ಲೇಖಕರ ಅಥವಾ ಪ್ರಕಾರದ ಓದಿನಿಂದ ಬಂದುದಲ್ಲ. ಆದರೂ ಅವರ ಅಧ್ಯಯನವು ಆಧುನಿಕ ಘಟ್ಟಕ್ಕೆ ಕೇಂದ್ರೀಕೃತ ವಾದುದು. ಹೀಗಾಗಿ ಸಾಹಿತ್ಯ ಚಿಂತನೆ ಕೂಡ ಆಧುನಿಕ ಸಾಹಿತ್ಯ ಕೇಂದ್ರಿತವಾಗಿದೆ. ಅವರ ವಿಮರ್ಶೆಯಲ್ಲಿ ಆಧುನಿಕ ಪೂರ್ವದ ತತ್ವಪದ, ವಚನಸಾಹಿತ್ಯ ಮತ್ತು ಜನಪದ ಸಾಹಿತ್ಯಲೋಕ ಗಳಿಗೆ ಲಗತ್ತಾಗಿರುವ ಸಾಂಸ್ಕೃತಿಕ ಲೋಕಗಳ ಅರಿವಿದೆ. ಇದು ಅವರ ವಿಮರ್ಶೆಯ ಪರಿಕಲ್ಪನಾತ್ಮಕ ವಿಕಸನಕ್ಕೆ ಪರೋಕ್ಷ ಕಾರಣವಾಗಿದೆ. ಆದರೂ ಈ ಪ್ರಕಾರಗಳ ಜತೆಗಿನ ಅನುಸಂಧಾನವು ಅವರಲ್ಲಿ ಕ್ಷೀಣವಾಗಿದ್ದು, ಅವರ ಸಾಹಿತ್ಯ ತತ್ವಗಳ ಸ್ವರೂಪದ ಮೇಲೂ ಪ್ರಭಾವ ಬೀರಿದೆ.

ಎಚ್ಚೆಸ್ಸಾರ್ ವಿಮರ್ಶೆಯ ಮಹತ್ವದ ಗುಣವೆಂದರೆ, ಸಾಹಿತ್ಯದಲ್ಲಿ ಯಾವುದು ಮತ್ತೆಮತ್ತೆ ಓದಿಸಿಕೊಳ್ಳುವ ಮತ್ತು ಓದುಗರ ಸಂವೇದನೆ ಅನುಭವ ಲೋಕದೃಷ್ಟಿಯನ್ನು ಬೆಳೆಸುವ ಬರೆಹ ಎಂಬುದನ್ನು ತೀವ್ರವಾಗಿ ಅರಸುವುದು. ಸಾಹಿತ್ಯಕ್ಕೆ

ಚಾರಿತ್ರಿಕ ನೆಲೆಯನ್ನು ಹುಡುಕುವುದರಲ್ಲಿ ಅದಕ್ಕೆ ಹೆಚ್ಚು ಆಸಕ್ತಿಯಿಲ್ಲ. ಬರೆಹವು ಯಾವ ಓದುಗರಿಗೆ ಅನುಭವ ಕೊಡುತ್ತಿದೆ ಮತ್ತು ಅವರ ಸಂವೇದನೆಯನ್ನು ಹೇಗೆ ಬದಲಿಸುತ್ತಿದೆ ಎಂಬುದು ಅದಕ್ಕೆ ಮುಖ್ಯ. ಸಾಹಿತ್ಯವನ್ನು ಶ್ರದ್ಧೆಯಲ್ಲಿ ಅನುಸಂಧಾನ ಮಾಡುವ ಅವರ ವಿಮರ್ಶೆಯಲ್ಲಿ, ಸಮಾಜವನ್ನು ಬದಿಗಿಟ್ಟು ಹುಟ್ಟುವ ಕಲಾವ್ಯಸನವಿಲ್ಲ; ಸಾಹಿತ್ಯದ ಸೂಕ್ಷ್ಮತೆ ಬಿಟ್ಟುಕೊಟ್ಟು ಸಾಮಾಜಿಕ ಧೋರಣೆಗಾಗಿ ಸಂಭ್ರಮಿಸುವ ಪ್ರಗತಿಪರತೆಯೂ ಇಲ್ಲ. ಬದಲಿಗೆ ಕಲಾಪ್ರಜ್ಞೆ ಮತ್ತು ಮೌಲ್ಯಪ್ರಜ್ಞೆಗಳ ನಡುವೆ ಚಲನಶೀಲವಾದ ಸಮತೋಲನವಿದೆ. ಅವರು ಮತ್ತೆಮತ್ತೆ ಉಲ್ಲೇಖಿಸುವ ಲೇಖಕರಾದರೂ ಇದನ್ನು ಸಾಧಿಸಿದವರೇ. ಈ ಹಿನ್ನೆಲೆಯಲ್ಲಿ ಮಾಸ್ತಿಯವರ ಬಗೆಗಿನ ಅವರ ಕಟುತ್ವ ಹಾಗೂ ಕೃತಿಯೊಂದನ್ನು ಲಂಕೇಶರಿಗೆ ಅರ್ಪಿಸಿರುವ ಸಂಗತಿ ಮಾರ್ಮಿಕವಾಗಿದೆ.

ಕಲೆ ಮತ್ತು ಪ್ರತಿಭೆಯ ದೃಷ್ಟಿಯಿಂದ, ಕತೆ, ಕವಿತೆ, ಕಾದಂಬರಿ, ನಾಟಕ ರಚನೆಯಲ್ಲಿರುವ ‘ಸೃಜನಶೀಲ’ತೆಯು, ಅವುಗಳ ವಿಶ್ಲೇಷಣೆ, ವ್ಯಾಖ್ಯಾನ, ಮೌಲ್ಯಮಾಪನ ಮಾಡುವ ವಿಮರ್ಶೆಗಿಂತ ಉನ್ನತ ದರ್ಜೆಯದೆಂದು ಎಚ್ಚೆಸ್ಸಾರ್ ವಿಮರ್ಶೆ ನಂಬುತ್ತದೆ. ಹೀಗಾಗಿಯೇ ಅವರಲ್ಲಿ ‘ಸೃಜನಶೀಲ’ ಬರೆಹವನ್ನು ಮುಖಾಮುಖಿ ಮಾಡುವಾಗ, ಸಂತೋಷ–ನಮ್ರತೆ ಕಾಣುತ್ತವೆ. ಸಾಹಿತ್ಯ ಪ್ರಕಾರಗಳನ್ನು, ಕಲ್ಪನಾಶಕ್ತಿ ಬೌದ್ಧಿಕತೆ ಅನುಭವ ಹಾಗೂ ಚಿಂತನಶೀಲತೆ ಬಳಸಿಕೊಂಡು ಅವು ಸೃಷ್ಟಿಯಾಗುವ ಮತ್ತು ಪರಿಣಾಮ ಬೀರುವ ಪರಿಯಲ್ಲಿ ಭಿನ್ನತೆಯಿದೆ. ಆದರೆ ಅದನ್ನು ಶ್ರೇಣೀಕರಿಸುವುದು, ನೋಡುವ ಗ್ರಹಿಕೆಯನ್ನು ಒಪ್ಪುವುದು ಕಷ್ಟ. ಪ್ರಕಾರಕೇಂದ್ರಿತವಾಗಿ ಸೃಜನಶೀಲತೆಯನ್ನು ಗ್ರಹಿಸುವ ಈ ನಿಲುವು ಕನ್ನಡದ ಬಹುರೂಪಿ ಬರೆವಣಿಗೆಯನ್ನು ನೋಡುವುದಕ್ಕೆ ತೊಡಕೊಡ್ಡಬಹುದು. ಸಂಶೋಧನೆ, ವಿಮರ್ಶೆ ಹಾಗೂ ವಿಚಾರಸಾಹಿತ್ಯದಲ್ಲಿ ಬಂದಿರುವ ಬರೆಹದ ಮಹತ್ವವನ್ನು ಅರಿಯುವುದಕ್ಕೆ ಬೇಕಾದ ಮನೋಭಾವವನ್ನು ಕಳೆದುಹಾಕಬಹುದು. ಎಚ್ಚೆಸ್ಸಾರ್ ವಿಮರ್ಶೆಯಲ್ಲಿ ಸಂಶೋಧನೆ, ಚಿಂತನೆ, ವಿಮರ್ಶೆ ಪ್ರಕಾರದ ಚರ್ಚೆ ಕಡಿಮೆಯಿರುವುದು ಗಮನಾರ್ಹ.



ಸಾಹಿತ್ಯೇತರ ಜ್ಞಾನಶಿಸ್ತುಗಳು ಕೊಡುವ ಲೋಕಜ್ಞಾನಕ್ಕಿಂತ ಭಿನ್ನವಾದ, ಸೂಕ್ಷ್ಮವಾದ ಲೋಕಸಂವೇದನೆಯನ್ನು ಸಾಹಿತ್ಯ ಕೊಡುತ್ತದೆ; ತಾರ್ಕಿಕವಾಗಿ ಮಾಡಲಾಗುವ ಈ ಪ್ರತಿಪಾದನೆಗಳನ್ನು ಸೃಜನಶೀಲ ಕೃತಿಗಳು ಮತ್ತಷ್ಟು ಸಂಕೀರ್ಣನೆಲೆಯಲ್ಲಿ ಓದುಗರ ಬುದ್ಧಿಭಾವಗಳಿಗೆ ತಲುಪಿಸುತ್ತವೆ ಎಂದು ಎಚ್ಚೆಸ್ಸಾರ್ ವಿಮರ್ಶೆ ಭಾವಿಸುತ್ತದೆ. ಅದರ ಪ್ರಕಾರ ‘ಸೃಜನಶೀಲತೆ’ಯೇ ಸೃಷ್ಟಿಸುವ ಚಿಂತನಾ ವಿಶಿಷ್ಟತೆ. ಇದನ್ನು ಸಾಹಿತ್ಯದ ಕಲಾತ್ಮಕ ಸ್ವಾಯತ್ತತೆ ಮತ್ತು ಜಾತ್ಯತೀತ ಗುಣವೆಂದೂ ಕರೆಯಬಹುದು. ಈ ಗುಣವು ಎಚ್ಚೆಸ್ಸಾರ್ ಅವರ ಸಾಹಿತ್ಯ ವಿಮರ್ಶೆ ಮತ್ತು ಚಿಂತನೆಯನ್ನು ರೂಪಿಸಿರುವ ಪ್ರಮುಖ ಅಂಶ. ಹೀಗಾಗಿಯೇ ಅವರ ವಿಮರ್ಶೆಯಲ್ಲಿ ಕಲಾಕೃತಿಗಳ ಜತೆ ಪ್ರೀತಿ ತುಂಬಿದ ಸೂಕ್ಷ್ಮನೆಲೆಯ ಒಡನಾಟವಿದೆ; ಕೃತಿ ಕೊಟ್ಟ ಸಂತೋಷವನ್ನು ಓದುಗರಲ್ಲಿ ಹಂಚಿಕೊಳ್ಳುವ ಹಂಬಲವಿದೆ. ಕಾವ್ಯವು ಯಾವುದೇ ಸಮುದಾಯದ ಅತ್ಯುತ್ಕೃಷ್ಟ ಭಾಷಿಕ ಅಭಿವ್ಯಕ್ತಿ ಎಂಬ ನಂಬಿಕೆಯಿದೆ. ಇದಕ್ಕೆ ತಕ್ಕಂತೆ ಅವರ ಬಹುತೇಕ ಮತ್ತು ಅತ್ಯುತ್ತಮ ವಿಮರ್ಶೆ ಕಾವ್ಯಕೇಂದ್ರಿತವಾಗಿಯೇ ಇದೆ. ಪ್ರತಿಯೊಂದು ಪ್ರಕಾರಕ್ಕೂ ಇರುವ ಅನನ್ಯತೆಯನ್ನು ಆ ಪ್ರಕಾರದಲ್ಲಿ ಬರೆಯುವ ಲೇಖಕರೂ ವಿಮರ್ಶಕರೂ ಏಕಕಾಲಕ್ಕೆ ಮನಗಾಣಬೇಕು ಎಂಬ ಗ್ರಹಿಕೆ ಅವರ ಮುನ್ನುಡಿಗಳಲ್ಲಿ ಮತ್ತೆಮತ್ತೆ ಬರುತ್ತದೆ.

ಕಾಲದೇಶಗಳಾಚೆ ಚಲಿಸಿ ಓದುಗರ ಜತೆ ಹೊಸ ಮಾನವೀಯ ಸಂಬಂಧವನ್ನು ಬೆಸೆಯುವ ಮಹತ್ವದ ಕಾರ್ಯವನ್ನು ಸಾಹಿತ್ಯ ಮಾಡುತ್ತದೆ; ಅದರೊಳಗೆ ತುಡಿಯುವ ಜೀವನಪ್ರೀತಿ, ದೇಶ, ಭಾಷೆ, ಕಾಲ, ಸಂಸ್ಕೃತಿಗಳ ಸೀಮೆಗಳನ್ನು ದಾಟಿದಂತೆ ಜನರನ್ನು ಬೆಸೆಯುತ್ತದೆ ಎಂದು ಎಚ್ಚೆಸ್ಸಾರ್ ವಿಮರ್ಶೆ ಭಾವಿಸುತ್ತದೆ; ಜೀವಂತ ಬರೆಹವನ್ನು ಅರಸುತ್ತ ಅದು ವಿಶ್ವಸಾಹಿತ್ಯದ ವಿಭಿನ್ನ ಧಾರೆಗಳಿಗೆ ಧಾವಿಸುತ್ತದೆ. ಶ್ರೇಷ್ಠ ಸಾಹಿತ್ಯವನ್ನು ಲೇಖಕರ ವಯಸ್ಸು, ಸಾಹಿತ್ಯ ಪಂಥ ಕಾಲ ದೇಶಗಳಾಚೆ ಹೋಗಿ ಗುರುತಿಸುತ್ತದೆ. ಜಗತ್ತಿನ ಭಾಷೆಗಳಲ್ಲಿರುವ ಅತ್ಯುತ್ತಮವಾದ್ದನ್ನು ಕನ್ನಡಕ್ಕೆ ತರುತ್ತಿರುವ ಅವರ ಅನುವಾದ ಕಾರ್ಯವು, ಸಾಹಿತ್ಯದ ಮೂಲಕ ಅವರು ಶೋಧಿಸುತ್ತಿರುವ ವಿಶ್ವಾತ್ಮಕತೆ ಮತ್ತು ಜಾತ್ಯತೀತ ತತ್ವಗಳ ಫಲವಾಗಿದೆ.

ಕನ್ನಡ ವಿಮರ್ಶೆ ಅಥವಾ ಚಿಂತನೆಯು ಕೇವಲ ದೇಶೀಯ ಅನುಭವ ಮತ್ತು ಶಾಸ್ತ್ರ ದರ್ಶನಗಳಿಂದ ರೂಪುಗೊಳ್ಳುತ್ತದೆ ಎಂಬ ವಾದದಲ್ಲಿ ಎಚ್ಚೆಸ್ಸಾರ್ ವಿಮರ್ಶೆಗೆ ನಂಬಿಕೆಯಿಲ್ಲ. ಆಧುನಿಕ ಭಾರತದ ಸಮಾಜ ಕೇವಲ ದೇಶೀಯತೆಯಿಂದ ರೂಪುಗೊಂಡದ್ದಲ್ಲ; ವಸಾಹತುಶಾಹಿ ಆಧುನಿಕತೆಯು ಭಾರತದ ಆಧುನಿಕಪೂರ್ವ ಸಮಾಜದ ಜತೆಗೆ ನಡೆಸಿದ ಸ್ನೇಹ ಮತ್ತು ಸಂಘರ್ಷದಿಂದ ರೂಪುಗೊಂಡಿದ್ದು. ಇದನ್ನು ಕಟ್ಟಿದ ಚಾರಿತ್ರಿಕ ಹಿನ್ನೆಲೆಗಳೇ ಆಧುನಿಕ ಸಾಹಿತ್ಯವನ್ನೂ ಕಟ್ಟಿವೆ. ಹೀಗಾಗಿ ಅವನ್ನು ವಿವರಿಸುವ ತತ್ವಗಳು ಕೇವಲ ದೇಶೀಯವಾಗಿರಲು ಸಾಧ್ಯವಿಲ್ಲ. “ಒಳಬರುವ ಮತ್ತು ಹೊರಗೆ ಹೋಗುವ ಎಲ್ಲ ಬಾಗಿಲುಗಳನ್ನೂ ಮುಚ್ಚಿಕೊಂಡ ಕತ್ತಲೆಕೋಣೆಗಳಲ್ಲಿ ನನಗೆ ಆಸಕ್ತಿಯಿಲ್ಲ. ಬದುಕಿನಲ್ಲಿ ಸಾಧ್ಯವಾಗದ ‘ವಾನಪ್ರಸ್ಥ’ವನ್ನು ಓದು ಬರೆಹಗಳಲ್ಲಿ ತರುವುದಾದರೂ ಹೇಗೆ?” ಎಂದು ಅವರೊಂದೆಡೆ ಹೇಳುವರು. ಈ ತತ್ವದ ಬುನಾದಿಯ ಮೇಲೆಯೇ ಅವರ ‘ಹಲವು ದಿಕ್ಕಿನ ಬೆಳಕು’ ಕೃತಿ ನಿಂತಿದೆ. ವಿಶ್ವಾತ್ಮಕ ಆಯಾಮವಿಲ್ಲದೆ ಕನ್ನಡ ಸಾಹಿತ್ಯಕ ಸಂವೇದನೆ ಪೂರ್ಣಗೊಳ್ಳಲಾರದು ಎಂಬ ಅವರ ಗಾಢನಂಬಿಕೆಯನ್ನೂ ಇದು ಸೂಚಿಸುತ್ತಿದೆ. ಎಚ್ಚೆಸ್ಸಾರ್ ಸಾಹಿತ್ಯ ಚಿಂತನೆಯಲ್ಲಿ ಪಾಶ್ಚಿಮಾತ್ಯ ಸಾಹಿತ್ಯ ತತ್ವಗಳ ಸಾಕಷ್ಟು ಪ್ರೇರಣೆ – ಪ್ರಭಾವಗಳಿವೆ. ಅವು ಕನ್ನಡ ಕೃತಿಗಳ ವಿಶ್ಲೇಷಣೆಯಲ್ಲಿ ಮರುಹುಟ್ಟು ಪಡೆದುಕೊಂಡು ಬರುತ್ತವೆ.

ಕನ್ನಡದಲ್ಲಿ ಹುಟ್ಟಿದ ಅತ್ಯುತ್ತಮವಾದ ಬರೆಹವನ್ನು ಶ್ರದ್ಧೆಯಿಂದ ಹುಡುಕುವ ಮತ್ತು ಅನುಸಂಧಾನಿಸುವ ಎಚ್ಚೆಸ್ಸಾರ್ ವಿಮರ್ಶೆ, ಪಾಂಥಿಕ ನಿರ್ಬಂಧಗಳಿಗೆ ಒಳಗಾಗುವುದಿಲ್ಲ. ಪಂಥಗಳ ಚೌಕಟ್ಟುಗಳನ್ನು ದಾಟಿಕೊಂಡು ಬರೆಹಗಾರರನ್ನು ಕನ್ನಡ ಭಾಷಿಕ ಸಂಸ್ಕೃತಿ ವಿವಿಧ ಕೊರಳುಗಳಿಂದ ಹಾಡಿದ ಹಾಡೆಂದು ಗ್ರಹಿಸುತ್ತದೆ. ಇದು ವಿಶಾಲವೂ ಒಳಗೊಳ್ಳುವಿಕೆಯೂ ಇರುವ ದೃಷ್ಟಿಕೋನದಲ್ಲಿ ಸಾಹಿತ್ಯವನ್ನು ನೋಡುವ ವಿಧಾನವೂ ಆಗಿದೆ. ಸಾಹಿತ್ಯವನ್ನು ಪರ್ಯಾಯ ಧರ್ಮದಂತೆ ಪ್ರೀತಿಸುವ ನಿಲುವಿನಿಂದ ಅವರ ಚಿಂತನೆಗೆ ಸಹೃದಯತೆಯ ವಿಶಿಷ್ಟ ಆಯಾಮ ದೊರಕಿದೆ. ಹೀಗಾಗಿಯೇ ಅವರು ಹೊಸತಲೆಮಾರಿನ

ಪ್ರತಿಭಾವಂತರನ್ನು ಹಿರಿಯ ಲೇಖಕರಿಗೆ ಸಮಾನವಾಗಿ ಪರಿಗಣಿಸಬಲ್ಲರು. ಅವರು ಮಾಡಿರುವ ತಾಜುಮಾ ಎಂಬ ಅಷ್ಟೇನೂ ಪ್ರಸಿದ್ಧವಲ್ಲದ ಕವಿಯ ಕಾವ್ಯವಿಶ್ಲೇಷಣೆಯಲ್ಲಿ ಇದನ್ನು ಕಾಣಬಹುದು. ಅವರಿಂದ ಮುನ್ನುಡಿಯನ್ನು ಪಡೆದು ಬೆಳೆದ ಲೇಖಕರಲ್ಲಿ ಕರ್ನಾಟಕದ ಎಲ್ಲ ಸಮುದಾಯ ಮತ್ತು ಪ್ರದೇಶದವರು ಇದ್ದಾರೆ. ಇದು ಅವರ ಸಾಹಿತ್ಯ ಚಿಂತನೆಯಲ್ಲಿ ಅಂತರ್ಗತವಾಗಿರುವ ವೈಚಾರಿಕ ಮತ್ತು ಜಾತ್ಯತೀತ ಪ್ರಜ್ಞೆಯ ದ್ಯೋತಕ. ಜೀವಂತ ಬರೆಹವನ್ನು ಅನಾಮಿಕ ಲೇಖಕರಲ್ಲಿ ಹುಡುಕುವ ಎಚ್ಚೆಸ್ಸಾರ್ ಗುಣವು ಕ್ರೈಸ್ಟ್ ಕಾಲೇಜಿನ ಪ್ರಕಟಣೆಗಳ ಹಿಂದೆ ಕೆಲಸ ಮಾಡಿದೆ. ಅಧ್ಯಾಪಕರಾಗಿ ತರಗತಿಗಳಲ್ಲಿ ವಿದ್ಯಾರ್ಥಿಗಳಲ್ಲಿ ಸಾಹಿತ್ಯಕ ಸಂವೇದನೆ ರೂಪಿಸಿದ ಎಚ್ಚೆಸ್ಸಾರ್ ಸಾಹಿತ್ಯ ಚಿಂತನೆ, ಹೊಸಲೇಖಕರನ್ನು ಬೆಳೆಸುವಲ್ಲಿ ಬರೆದ ಮುನ್ನುಡಿಗಳಲ್ಲಿ ವಿಸ್ತರಣೆ ಪಡೆಯಿತು. ಇವೆರಡೂ ಅವರು ನಿರ್ವಹಿಸಿದ ಸಾಂಸ್ಕೃತಿಕ ಹೊಣೆಗಾರಿಕೆಗಳಾಗಿವೆ. ಈ ಹೊಣೆಗಾರಿಕೆಯು ಹೊಸಗನ್ನಡದ ಆರಂಭದ ಘಟ್ಟದಲ್ಲಿ ಬಿಎಂಶ್ರೀ, ಮಾಸ್ತಿ, ವೆಂಕಣ್ಣಯ್ಯ ಮೊದಲಾದವರು ಮಾಡಿದ ಕೆಲಸಕ್ಕೆ ಸಮಾನವಾಗಿದ್ದು, ಆಧುನಿಕ ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ದಾಖಲಾರ್ಹ ವಿದ್ಯಮಾನವಾಗಿದೆ. ಎಚ್ಚೆಸ್ಸಾರ್ ಸಾಹಿತ್ಯ ಚಿಂತನೆಗೆ ಸಾರ್ವಜನಿಕ ಮಹತ್ವ ದೊರಕಿರುವುದು ಇದರಿಂದಲೇ. ಹೆಸರೆತ್ತ ಲೇಖಕರನ್ನು ತುಸು ಸಂಶಯದಿಂದಲೇ ನೋಡುವ, ಹೊಸ ಬಗೆಯ ಬರೆಹ ಕಂಡಾಗ ಸಂಭ್ರಮಿಸುವ ಅವರ ವಿಮರ್ಶೆ, ತಳವರ್ಗಗಳಿಂದ ಬಂದ ಅಜ್ಞಾತ ಪ್ರತಿಭೆಗಳನ್ನು ಶೋಧಿಸಿಕೊಟ್ಟಿತು. ಅವರ ಸಾಹಿತ್ಯ ವಿಮರ್ಶೆ ಮತ್ತು ಚಿಂತನೆಗಳು ಬುದ್ಧಿತೋರುವ ಹಾದಿಗಿಂತ ಹೃದಯ ತೋರುವ ದಾರಿಯಲ್ಲಿ ರೂಪುಗೊಂಡಂಥವು. ಹೀಗಾಗಿ ಕೂಡ ಲೇಖಕರನ್ನು ರೂಪಿಸುವ ಶಿಕ್ಷಕ ಗುಣವೂ ಪೋಷಿಸುವ ತಾಯ್ತನದ ಗುಣ ಅವಕ್ಕಿದೆ.

ಸೈದ್ಧಾಂತಿಕವಾಗಿ ಎಚ್ಚೆಸ್ಸಾರ್ ವಿಮರ್ಶೆ ಎಡ ಒಲವುಳ್ಳದ್ದು. ಅದು ಕಲೆಗಾಗಿ ಜೀವವಿರೋಧಿ ಲೇಖಕರನ್ನು ಮೆಚ್ಚುವುದಿಲ್ಲ. ಸಾಹಿತ್ಯ ಲೋಕದಲ್ಲಿ ಸುಪ್ತವಾಗಿರುವ ಜಾತೀಯತೆ, ಎಡವಿರೋಧಿ ನಿಲುವು, ಬಲಪಂಥೀಯತೆಗಳನ್ನು ನಿಷ್ಠುರವಾಗಿ ಗಮನಿಸುತ್ತದೆ. ಮಾರುಕಟ್ಟೆ ಸಂಸ್ಕೃತಿ, ಬಂಡವಾಳವಾದ, ಮತೀಯವಾದಗಳು ಸಮಾಜವನ್ನು ಆಕ್ರಮಿಸಿಕೊಳ್ಳುತ್ತಿರುವ ಮತ್ತು ಸಾಹಿತ್ಯಲೋಕವು ಇದಕ್ಕೆ ಹೊರತಾಗದೆ ಬೆಳೆದಿರುವ ಅರಿವು ಅದಕ್ಕಿದೆ. ಅಂತಲೇ ಅಲ್ಲಿ 'ಶ್ರೇಷ್ಠ' ಸಾಹಿತ್ಯದ ಹುಡುಕಾಟ ಮಾತ್ರವಿಲ್ಲ, ಅದರೊಳಗೆ ಸಾಮಾಜಿಕ ಪ್ರಜ್ಞೆ ಮೂಳೆಯೊಳಗಿನ ಮಜ್ಜೆಯಂತೆ ಪ್ರಚ್ಛನ್ನವಾಗಿದೆ. "ಲೇಖಕನಿಗೆ ಒಂದು ವಿಷಯದ ಬಗೆಗಿನ ಪರಿಣತಿಯಷ್ಟೆ ಸಾಲದು. ಅದರ ಸಂಗಡವೇ ತನ್ನ ಒಟ್ಟು ವ್ಯಕ್ತಿತ್ವ ಮತ್ತು ಹೊರಗಿರುವ, ಯಾವಾಗಲೂ ಬದಲಾಗುತ್ತಿರುವ ಸಮಾಜವನ್ನು ಒಳಗೊಳ್ಳುವ ಲೋಕದರ್ಶನ ಮತ್ತು ಲೋಕದೃಷ್ಟಿಗಳ ಅಗತ್ಯವೂ ಅವನಿಗೆ ಇರುತ್ತದೆ" ಎಂದು ಅವರೊಂದೆಡೆ ಹೇಳುವರು. ಈ ತತ್ವವು ಅವರೆಲ್ಲ ಸಾಹಿತ್ಯ ವಿಮರ್ಶೆ ಮತ್ತು ಜೀವನ ಮೀಮಾಂಸೆಗಳಲ್ಲಿ ಮಿಡಿಯುತ್ತ ಬಂದಿದೆ. ತಾಜುಮಾ ಕವಿತೆಗಳ ಮುನ್ನುಡಿಯಲ್ಲಿ ಅವರು 'ಕವಿತೆ ಅನ್ನುವುದು ಸ್ವಂತದ ಅಭಿವ್ಯಕ್ತಿಯಾ, ಲೋಕದ ಅಭಿವ್ಯಕ್ತಿಯಾ?' 'ಏಕಾಂತದ ಹುಡುಕಾಟ ಲೋಕಾಂತದ ಹುಡುಕಾಟ ಇವುಗಳ ನಡುವಿನ ಸಂಬಂಧ ಹೇಗಿರಬೇಕು?' ಎಂಬ ಪ್ರಶ್ನೆಗಳನ್ನು ಎತ್ತುತ್ತಾರೆ; "ಅದು ಕೇವಲ ಲೋಕಾಂತದ ಹುಡುಕಾಟವಾದರೆ ತನ್ನನ್ನು ಪಕ್ಕಕ್ಕಿಟ್ಟುಕೊಂಡು ಹೊರಗನ್ನು ನೋಡುತ್ತಾ ಇದ್ದರೆ ಎಲ್ಲೋ ಖೊಟ್ಟಿಯಾಗುತ್ತದೆ. ಇನ್ನೊಂದು ಕಡೆ ಹೊರಗನ್ನು ಪೂರ್ತಿಯಾಗಿ ನಿರ್ಲಕ್ಷ್ಯ ಮಾಡಿಕೊಂಡು, ಹೊರಗು ಅನ್ನುವುದು ಇಲ್ಲವೇ ಇಲ್ಲ ನನ್ನೊಳಗಡೆ ಇದೆಯಲ್ಲಾ ನಾನು ಕಂಡಷ್ಟೇ ಸತ್ಯ. ನನಗೆ ಕಾಣದೆ ಇರುವುದು ಸತ್ಯವಲ್ಲ. ಹೊರಗನ್ನು ನಿರ್ಲಕ್ಷಿಸಿ ಒಳಗನ್ನು ಬೆಳೆಸಿಕೊಳ್ಳುವ ಪ್ರಯತ್ನ. ಅದು ಕೂಡ ಕವಿತೆಯನ್ನು ಕಲೆಯನ್ನು ಕೊಲ್ಲುತ್ತದೆ. ನಾವು ಯಾವುದನ್ನು ಆರಿಸಿಕೊಳ್ಳ ಬೇಕು ಹಾಗಾದರೆ? ಏಕಾಂತ ಮತ್ತು ಲೋಕಾಂತ ಎರಡೂ ಒಂದೇ ಆಗುವ ಕವಿತೆಯ ಸ್ವರೂಪ ಯಾವುದು? ಮತ್ತೆಮತ್ತೆ ನನಗೆ ನೆನಪಿಗೆ ಬರುವುದು ಪ್ಯಾಬ್ಲೊ ನೆರುಡಾ ಅನ್ನುವ ಕವಿ" ಎಂದು ಅದಕ್ಕೆ ಉತ್ತರವನ್ನೂ ಕೊಡುತ್ತಾರೆ.

ಎಚ್ಚೆಸ್ಸಾರ್ ವಿಮರ್ಶೆಯಲ್ಲಿ ನಾಲ್ಕು ಆಯಾಮ ಗಳಿವೆ : ಸಾಹಿತ್ಯ ಕೃತಿಯನ್ನು ವಿಮರ್ಶಿಸಿ ಮೌಲ್ಯ ಕಟ್ಟುವ ಹೊಣೆಗಾರಿಕೆ; ಅತ್ಯುತ್ತಮವಾದ ಬರೆಹದತ್ತ ಗಮನಸೆಳೆದು ಓದುಗರಲ್ಲಿ ಪ್ರೀತಿ ಹುಟ್ಟಿಸುವ ಪರಿಚಾರಿಕೆ; ಪರಿಸರದಲ್ಲಿರುವ ಹೊಸ ಪ್ರತಿಭೆಗಳನ್ನು ಗುರುತಿಸಿ ಬೆಳೆಸುವ ತಾಯ್ತನ ಹಾಗೂ ತನ್ನ ವಿಮರ್ಶೆಯ ಮಾನದಂಡಗಳನ್ನು ನಿರಂತರ ಪರಿಕಿಸಿಕೊಳ್ಳುವ ಆತ್ಮವಿಮರ್ಶೆ. ಈ ಗುಣಗಳು ನಮ್ಮ ಸುತ್ತಲಿನ ಪರಿಸರದ ಬದುಕನ್ನು ಹದುಳ ವಾಗಿಡುವುದಕ್ಕೆ ಬೇಕಾದ ಮೌಲ್ಯಪ್ರಜ್ಞೆಯ ಹುಡುಕಾಟದ ಭಾಗವಾಗಿವೆ; ಅವರ ಸಾಹಿತ್ಯ ವಿಮರ್ಶೆಯಲ್ಲಿರುವ ಸಾರ್ವಜನಿಕ ನೈತಿಕಪ್ರಜ್ಞೆ ಮತ್ತು ಪ್ರಜಾಪ್ರಭುತ್ವವಾದಿ ಮಿಡುಕಾಟಗಳಾಗಿವೆ. ಒಂದು ಉಪನ್ಯಾಸದಲ್ಲಿ ಅವರು ಹೀಗೆ ಹೇಳುತ್ತಾರೆ :

"ನಮ್ಮಲ್ಲಿ ಕವಿ ಆಗಬೇಕೆನ್ನುವ ಹಂಬಲ ಕವಿ ಆಗಬೇಕಾಗಿಲ್ಲದವರನ್ನು ಕಾಡುವುದರಿಂದ ಒಳ್ಳೆಯ ಗದ್ಯ ಲೇಖಕರು ಹೊರಟುಹೋಗ್ತಾರೆ ಅಂತ ನನಗನಿಸುತ್ತದೆ ಅನೇಕ ಸಲ. ಕವಿತೆಯೊಂದಿಗಿನ ಒಡನಾಟ ಒಂದು ರೀತಿಯಲ್ಲಿ ಸರ್ಪದ ಜೊತೆಗಿನ ಸಂಗದ ಹಾಗೆ. ಅದು ಮಾಡತಕ್ಕಂತಹ ಡಿಮ್ಯಾಂಡುಗಳೇ ಬೇರೆ ತರದ್ದು. ಹಾಗಾದಾಗ ನನ್ನ ಆಯ್ಕೆ ಯಾವುದು ಎನ್ನುವ ಜವಾಬ್ದಾರಿ, ಹುಡುಕಾಟ ಪ್ರತಿಯೊಬ್ಬ ಲೇಖಕನ ಒಳಗಡೆಯೂ ನಡೆಯುತ್ತಿರಬೇಕು."

ಈ ಹೇಳಿಕೆಗಳಲ್ಲಿ ಯುವ ಲೇಖಕರಿಗೆ ಹಾದಿ ತೋರಿಸುವ ಗುಣದ ಜತೆಯಲ್ಲೇ ಪ್ರತಿಯೊಂದು ಪ್ರತಿಭೆ ತನ್ನ ನಿಜನೆಲೆ ಕಂಡುಕೊಂಡು ಬೆಳೆಯಬೇಕೆಂಬ ಆಶಯವೂ ಇದೆ. ಎಚ್ಚೆಸ್ಸಾರ್ ವಿಮರ್ಶೆ ಮತ್ತು ವಿಮರ್ಶೆಯೇತರ ಬರೆಹಗಳಲ್ಲಿ, ಪ್ರಜಾಪ್ರಭುತ್ವವನ್ನು ಅರ್ಥಪೂರ್ಣ ಮಾಡುವುದಕ್ಕೆ ಬೇಕಾದ ಸಂವೇದನಶೀಲ ಪ್ರಜೆಗಳ ಮನಸ್ಸುಗಳನ್ನು ನಿರ್ಮಿಸುವ ಆಶಯವಿದೆ. ಅವರ ವಿಮರ್ಶೆಯು ಸಾಹಿತ್ಯದ ಅಭಿರುಚಿಯನ್ನು ಮೂಡಿಸುವುದರ ಜತೆಗೆ ಸಮಾಜವನ್ನು ಅರ್ಥಮಾಡಿಕೊಳ್ಳುವ, ಅರ್ಥಪೂರ್ಣವಾದ ಬದುಕನ್ನು ರೂಪಿಸಿಕೊಳ್ಳುವ, ವ್ಯಕ್ತಿತ್ವವನ್ನು ಘನತೆಯಿಂದ, ನೈತಿಕತೆಯಿಂದ ರೂಪಿಸಿಕೊಳ್ಳುವ ವಿಚಾರಗಳನ್ನೂ ಒಳಗೊಂಡಿದೆ. ಕುವೆಂಪು ಕಾರಂತರಿಂದ ಹಿಡಿದು ಅನಂತಮೂರ್ತಿ ಲಂಕೇಶ್ ತನಕ ನಮ್ಮೆಲ್ಲ ದೊಡ್ಡ ಲೇಖಕರ ಬರೆಹದ ಆಶಯವೂ ಆಗಿದೆಯಷ್ಟೆ. ಯಾವ ಚಿಂತನೆ ಕರ್ನಾಟಕ ಸಮಾಜದ ಮನಸ್ಸನ್ನು ಆರೋಗ್ಯಕರವಾಗಿ ಕಟ್ಟಬಲ್ಲುದು ಎಂಬ ಹುಡುಕಾಟ ಮತ್ತು ಬದ್ಧತೆಯ ಭಾಗವಾಗಿ ಎಚ್ಚೆಸ್ಸಾರ್ ಅವರ ಈಚಿನ ಅನುವಾದ ಗಳಿವೆ. ಈ ಬದ್ಧತೆಯ ಭಾಗವಾಗಿಯೇ ಅವರು ವಿಚಾರಸಂಕಿರಣದಂತಹ ಸೀಮಿತ ವೇದಿಕೆಗಳಿಂದ ಹೊರಬಂದು ಹೆಚ್ಚು ಜನ ತಲುಪುವ ಪತ್ರಿಕೆಗಳಿಗೆ ಅಂಕಣ ಬರೆದರು. ಇದನ್ನು ಸಾರ್ವಜನಿಕ ಬದುಕಿಗೆ ತುಡಿಯುವ ಅವರ ಬರೆಹದ ರಾಜಕೀಯ



ನಾನು ನಾನಲ್ಲ....
ಮುಂದೆ ಬರಬಹುದಾದ ನೆರೆಯಲ್ಲಿ
ಸಿಲುಕಿಕೊಂಡಿದ್ದೇನೆ।
ಇನ್ನೂ ಕಟ್ಟಲಾರದ ಜೈಲಿನಲ್ಲಿ
ಬಂಧಿಯಾಗಿದ್ದೇನೆ।
ಆಡದೆ ಇರುವ ಚದುರಂಗದಾಟದಲಿ
ಚೆಕ್ಮೇಟ್ ಆಗಿದ್ದೇನೆ।
ನಿನ್ನ ಮಧುಪಾನದ ರುಚಿನೋಡದೇ
ನಶೆಯಲ್ಲಿದ್ದೇನೆ।
ಯುದ್ಧ ಭೂಮಿಗೆ ಇಳಿಯದೇ
ಗಾಯಗೊಂಡಿದ್ದೇನೆ। ವಾಸ್ತವ ಮತ್ತು
ಕಲ್ಪನೆಯ ವ್ಯತ್ಯಾಸ ಅರಿಯದೆ ಬಹಳ ದಿನ
ಇರಲಾರೆ।
ನೆರಳಿನಂತೆ ನಾನು ಮತ್ತು ನಾನಲ್ಲ.

ಉರ್ದು ಮೂಲ : **ಜಲಾಲುದ್ದಿನ್ ರೂಮಿ**
ಅನುವಾದ : **ಸುಜಾತಾ**
ಆಕಾಶವಾಣಿ, ಹಾಸನ

ಸಾಂಸ್ಕೃತಿಕ ಪ್ರಜ್ಞೆ ಮತ್ತು ಕಾಳಜಿ ಎನ್ನಬಹುದು. ಇದು ಮಾರುಕಟ್ಟೆವಾದ ಮತ್ತು ಮತೀಯವಾದಗಳು ಸಾಹಿತ್ಯ ವಿಮರ್ಶಕರನ್ನು ರೂಪಾಂತರಿಸಿದ ಫಲವಾಗಿದೆ. ಎಚ್ಚೆಸ್ಸಾರರ ಈಚಿನ ಸಾಹಿತ್ಯ ಚಿಂತನೆ ಮತ್ತಷ್ಟು ತೀಕ್ಷ್ಣವಾದ ರಾಜಕೀಯ ಪ್ರಜ್ಞೆಯಿಂದಲೂ ಸಾಮಾಜಿಕ ಕಾಳಜಿಯಿಂದಲೂ ಕೂಡಿರುವುದನ್ನು ಈ ಹಿನ್ನೆಲೆಯಲ್ಲಿ ಗಮನಿಸಬೇಕು. ಸಾರ್ವಜನಿಕ ಬದುಕಿನ ಪ್ರಶ್ನೆಯನ್ನು ಅಂತರ್ಗತಗೊಂಡಿರುವುದು ಅವರ ಸಾಹಿತ್ಯ ಚಿಂತನೆಯ ಗುಣವಾಗಿದೆ.

"ವಿನಯಾ ಅವರು ಸಾಮಾಜಿಕ ನೆಲೆಗಳಿರುವ ಕೆಲವು ಕಥೆಗಳನ್ನಾದರೂ ಬರೆದಿದ್ದಾರೆ. ಅವುಗಳಲ್ಲಿ 'ಸಾಮಾಜಿಕ ನ್ಯಾಯ'ದ ಆಸರೆಯಲ್ಲಿ ನಡೆಯುತ್ತಿರುವ ಅನ್ಯಾಯಗಳನ್ನು ಕುರಿತ ಕಹಿ ತುಂಬಿದೆ. ಅವುಗಳಲ್ಲಿ 'ಪೊಲಿಟಿಕಲಿ ರೈಟ್' ಆಗಿರಬೇಕೆಂಬ 'ಜಾಣ ಹಟ' ಇಲ್ಲ. ಸಾಮಾಜಿಕ ನ್ಯಾಯದ ಕಟ್ಟುಗ್ರ ಪ್ರತಿಪಾದಕರೂ ನೈತಿಕ ನೆಲೆಗಟ್ಟಿನಿಂದ ಮೂಡುವ ಈ ಆಕ್ರೋಶವನ್ನು ನಿರಾಕರಿಸುವುದಿಲ್ಲ" – ಇದು ವಿನಯಾ ಬರೆಹವನ್ನು ವಿಶ್ಲೇಷಿಸುತ್ತ ಎಚ್ಚೆಸ್ಸಾರ್ ಹೇಳುವ ಮಾತು. ಇಲ್ಲಿ ಸಾಮಾಜಿಕ ನ್ಯಾಯಕಲ್ಪನೆಯ ಬಗ್ಗೆ ತಾತ್ವಿಕ ನಂಬಿಕೆಯಿದೆ. ಆದರೆ ಅದು ಮೈತಳೆಯುತ್ತಿರುವ ಸಮಕಾಲೀನ ರೂಪಗಳ ಬಗ್ಗೆ ಅಸಮ್ಮತಿಯಿದೆ; ಓದುಗರನ್ನು ಮೆಚ್ಚಿಸಲು ಹೊರಡುವ ಸಾಮಾಜಿಕ ನ್ಯಾಯದ ಪರಿಕಲ್ಪನೆ, ಕಲೆಯ ಸೂಕ್ಷ್ಮತೆಯನ್ನು ಮಾತ್ರವಲ್ಲ ನಿಜವಾದ ಸಾಮಾಜಿಕ ನ್ಯಾಯದ ಸಂವೇದನೆಗೂ ವ್ಯತಿರಿಕ್ತವಾಗಬಹುದು ಎಂಬ ಆತಂಕವಿದೆ. ನಿರ್ದಿಷ್ಟ ಭಾವಕ್ಕೆ ಸಿದ್ಧಾಂತಕ್ಕೆ ಅತಿಯಾಗಿ ಅಂಟಿಕೊಳ್ಳುವ ನೆಲೆ ತರಬಹುದಾದ ಮಿತಿಗಳ ಬಗ್ಗೆ ಎಚ್ಚರವಿದೆ. ಪ್ರತಿಭಾವಂತ ಬರೆಹಗಾರರು ಹುಟ್ಟಿಸುವ ಹೊಸ ಆಕೃತಿಗಳನ್ನು ಅರಿಯುವುದಕ್ಕೆ ಅವರ ವಿಮರ್ಶೆ ನಮ್ರವಾಗಿ ಮಾಡುತ್ತದೆ. ಹೊಸಹೊಸ ಆಕೃತಿಯ ಬರೆಹಗಳನ್ನು ಅರಿಯಲು ವಿಮರ್ಶೆ ಹೊಸ ಹೊಸ ಮಾನದಂಡಗಳನ್ನು ಹುಟ್ಟಿಸಿಕೊಳ್ಳದೆ ಹೋಗಿದ್ದರಿಂದಲೇ ಅನೇಕ ಪ್ರತಿಭಾವಂತ ಲೇಖಕರಿಗೆ ವಿಮರ್ಶೆಯ ನ್ಯಾಯ ಸಿಗಲಿಲ್ಲ ಎಂದು ಪರಿಭಾವಿಸುತ್ತದೆ. ಇಂತಹ ಅರಿವೇ ಅವರ ಸಾಹಿತ್ಯ ವಿಮರ್ಶೆ ಮತ್ತು ಚಿಂತನೆಗಳನ್ನು ಚಲನಶೀಲವಾಗಿಸಿದೆ.



ಸಾಹಿತ್ಯ ಪಂಥಗಳ ಸಿದ್ಧ ಚೌಕಟ್ಟುಗಳಾಚೆ ಪ್ರತಿಭಾಶಾಲಿ ಲೇಖಕರು ಬರೆಹ ಮಾಡುವರು; ಅವರ ಬರೆಹದ ಈ ಶಕ್ತಿಯೇ ಹೊಸ ಸಾಹಿತ್ಯ ತತ್ವವನ್ನೂ ಸೃಷ್ಟಿಸುತ್ತದೆ ಎಂದು ಎಚ್ಚೆಸ್ಸಾರ್ ಭಾವಿಸುತ್ತಾರೆ. ಚಿತ್ತಾಲರ ಕಾವ್ಯದ ಬಗ್ಗೆ ಬರೆಯುತ್ತ ಅದು ಹೇಗೆ ಸಂಸ್ಕೃತ ಕಾವ್ಯಮೀಮಾಂಸೆಯ ರಸತತ್ವದ ನಿಯಮಗಳನ್ನು ಮುರಿದೂ ಶ್ರೇಷ್ಠ ಕಾವ್ಯವಾಗಿದೆ ಎಂದು ವಿಶ್ಲೇಷಿಸುತ್ತಾರೆ. ಸೃಜನಶೀಲ ಪ್ರತಿಭೆಗಳು ತಮ್ಮ ಸೃಷ್ಟಿಕ್ರಿಯೆಯ ತುರ್ತು ಮತ್ತು ಕಸುವಿನಲ್ಲಿ ಮಾಡುವ ಸೀಮೋಲ್ಲಂಘನೆ ಬಗ್ಗೆ ಅವರಿಗೆ ಸದಾ ವಿಸ್ಮಯ ಮತ್ತು ಆದರ.

ನಾಲ್ಕು ದಶಕಗಳಿಂದ ಸಾಹಿತ್ಯ ವಿಮರ್ಶೆಯಲ್ಲಿ ತೊಡಗಿಸಿಕೊಂಡ ಎಚ್ಚೆಸ್ಸಾರ್ ಅವರ ವಿದ್ವತ್ತು, ಪ್ರತಿಭೆ, ಜೀವನದೃಷ್ಟಿಗಳು, ವಿಮರ್ಶೆಯ ಹೊರತಾಗಿ ಪ್ರವಾಸಕಥನ, ಅನುವಾದ, ವಿಚಾರ ಸಾಹಿತ್ಯದ ಪ್ರಕಾರಗಳಲ್ಲೂ ಪ್ರಕಟವಾಗಿವೆ. ಸಾಹಿತ್ಯ ತತ್ವ ಮತ್ತು ಲೋಕದೃಷ್ಟಿಯಿಂದ ಎಚ್ಚೆಸ್ಸಾರ್ ಅವರ ಸಾಹಿತ್ಯ ವಿಮರ್ಶೆ, ಚಿಂತನ ಬರೆಹ ಹಾಗೂ ಅನುವಾದಗಳ ನಡುವೆ ವಿಶಿಷ್ಟ ಒಳಸಂಬಂಧಗಳಿವೆ. ಬಹುಮುಖ ಪ್ರತಿಭೆಯ ಕನ್ನಡದ ಲೇಖಕರ ಅನುಭವ ಮತ್ತು ಚಿಂತನೆಗಳು ಯಾವಾಗಲೂ ಹಲವು ಪ್ರಕಾರಗಳಲ್ಲಿ ಹಂಚಿಹೋಗಿವೆ. ತಮ್ಮನ್ನು ನಿರ್ದಿಷ್ಟ ಪ್ರಕಾರಕ್ಕೆ ಸೀಮಿತಗೊಳಿಸಿ ನೋಡುವ ನಡಾವಳಿಯನ್ನು ಭಗ್ನಗೊಳಿಸುವಂತೆ ಅವರು ಪ್ರಕಾರ ಸೀಮೋಲ್ಲಂಘನೆ ಮಾಡುತ್ತ ಬಂದಿದ್ದಾರೆ. ಕನ್ನಡಕ್ಕೆ "ಯಾವುದೇ ನಿರ್ದಿಷ್ಟ ಸಾಹಿತ್ಯಕ ಚಳುವಳಿಯ ತತ್ವಗಳನ್ನು ಸಂಪೂರ್ಣವಾಗಿ ಒಪ್ಪಿಕೊಳ್ಳದ, ಸ್ವತಃ ಸೃಜನಶೀಲ ಸಾಹಿತಿಗಳಲ್ಲದ ವಿಮರ್ಶಕರ ತಂಡವೊಂದು ಮೂಡಿಬರುವ ಅಗತ್ಯವಿದೆ" ಎಂದು ಎಚ್ಚೆಸ್ಸಾರ್ ಆರಂಭದ ಘಟ್ಟದಲ್ಲಿ ಹೇಳಿದ್ದರು. ಈಗ ಅವರು ಹಾಗೆ ಹೇಳುವರೇ ತಿಳಿಯದು. ಅವರ ಆಶಯ ನಿಜಗೊಳ್ಳುವುದು ಕಷ್ಟವೆಂಬಂತೆ ಈಚಿನ ವಿಮರ್ಶೆಯಲ್ಲಿ ರೂಪಾಂತರ ಸಂಭವಿಸಿದೆ. ಸಾಹಿತ್ಯ ಅಭಿವ್ಯಕ್ತಿಯಾಗುವ, ಸಂವಹನಗೊಳ್ಳುವ ಕ್ರಮಗಳಲ್ಲಿ ಸಹ ಪಲ್ಲಟ ಸಂಭವಿಸಿದೆ. ಆದರೆ "ಮಹತ್ವದ ಲೇಖಕನೊಬ್ಬನು ಮೊದಲಿಗಿಂತ ಭಿನ್ನವಾಗಿ ಬರೆಯತೊಡಗಿದಾಗ, ಹೊಸ ಬರವಣಿಗೆಯನ್ನು ಸುಮ್ಮನೆ ತಳ್ಳಿಹಾಕದೆ, ಅದರ ಹಿಂದಿನ ಪ್ರೇರಣೆಗಳನ್ನು, ಪ್ರತಿಭೆಯ ಹೊಳಹುಗಳನ್ನು ಹುಡುಕುವುದು ನನ್ನ ಮಾರ್ಗ" ಎಂಬ ಸಂಕಲ್ಪವನ್ನು ಮಾತ್ರ ಅವರ ವಿಮರ್ಶೆ ಉದ್ದಕ್ಕೂ ಪಾಲಿಸಿಕೊಂಡು ಬಂದಿದೆ. ಅವರ ಸಾಹಿತ್ಯ ಚಿಂತನೆಯು, ಸಾಹಿತ್ಯ ಸೃಷ್ಟಿಯನ್ನು ಉದ್ದೇಶಿಸಿರುವ ಕಾಲದಲ್ಲೇ ಅದನ್ನು ವಿಮರ್ಶಿಸುವ ತತ್ವಗಳನ್ನೂ ರೂಪಿಸಿಕೊಳ್ಳುತ್ತದೆ. ಇದು ವೈಯಕ್ತಿಕವಾಗಿ ತಮಗೆ ಬೇಕಾದ ಲೋಕದೃಷ್ಟಿಯನ್ನು ಕಟ್ಟಿಕೊಳ್ಳುವ ಆತ್ಮಾವಲೋಕನದ ಭಾಗವೂ ಆಗುತ್ತದೆ. ಆತ್ಮವಿಮರ್ಶೆ ಅವರ ಚಿಂತನೆಯ ಪ್ರಧಾನವಾದ ಅಂಶ. ತನಗೂ ಸಾಮಾಜಿಕ ಪರಿಸರಕ್ಕೂ ಬೇಕಾದ ದೃಷ್ಟಿಕೋನಗಳನ್ನು ಹುಡುಕುವ, ಕಲೆ ಮತ್ತು ಸಾರ್ವಜನಿಕ ನೈತಿಕತೆಯ ಮಧ್ಯೆ ಅರ್ಥಪೂರ್ಣ ಸಂಬಂಧ ಸ್ಥಾಪಿಸುವ ಯತ್ನವನ್ನು ಅವರ ವಿಮರ್ಶೆ ಮಾಡುತ್ತದೆ. ಅವರ ವಿಶ್ಲೇಷಣಾತ್ಮಕ ಬರೆಹಗಳು ಸಾಹಿತ್ಯಕ ವಿದ್ಯಮಾನಗಳನ್ನು ಗತಕಾಲದ ಚಾರಿತ್ರಿಕ ಸನ್ನಿವೇಶದಲ್ಲಿಟ್ಟು ನಿರ್ಲಿಪ್ತವಾಗಿ ಚಿಂತನೆ ಮಾಡುವುದಿಲ್ಲ. ಸುಡು ವರ್ತಮಾನದಲ್ಲಿಟ್ಟು ಮಾಡುತ್ತವೆ. ಹೀಗಾಗಿ ಅವರ ಸಾಹಿತ್ಯ ಚಿಂತನೆಯಲ್ಲಿ ತೀವ್ರವಾದ ಸಮಕಾಲೀನ ಪ್ರಜ್ಞೆಯು ಕಲಾತ್ಮಕತೆಯ ಪ್ರಶ್ನೆಯನ್ನು ಬಿಟ್ಟುಕೊಡದಂತೆ ಸಮತೋಲನಗೊಳಿಸಿಕೊಂಡಿದೆ. "ಯಾವುದೇ ಕೃತಿಯ ಬೆಲೆಕಟ್ಟುವುದಕ್ಕಿಂತ ಅದು ನನಗೆ ಹೇಳಬಹುದಾದ ಸಂಗತಿಗಳ ಶೋಧನೆಯನ್ನು ಇಷ್ಟಪಡುವವನು; ಸಾಹಿತಿಯ ಜೀವ, ಅವನ ಘೋಷಿತ ತತ್ವಪ್ರಣಾಳಿಕೆ ಮತ್ತು ಅವನ ಸಾಹಿತ್ಯ ಕೃತಿಗಳನ್ನು ಪರಸ್ಪರ ತಾಳೆ ನೋಡುವುದು, ವ್ಯಕ್ತಿಯಾಗಿ ಆ ಸಾಹಿತಿಯ ಬೆಲೆಕಟ್ಟಲು ನೆರವಾಗಬಹುದೇ ಹೊರತು, ಸಾಹಿತ್ಯಕೃತಿಯ ಮೌಲ್ಯಮಾಪನಕ್ಕಲ್ಲ" ಎಂದು ಅವರು ನಂಬಿದವರು. ಈ ತಾತ್ವಿಕ ನಂಬಿಕೆಯು ಏಕಾಂತಕ್ಕೂ ಲೋಕಾಂತಕ್ಕೂ ಏಕಕಾಲದಲ್ಲಿ ಸಲ್ಲುವ ವಿನ್ಯಾಸದಲ್ಲಿದೆ. ಕೃತಿಯು ಬೆಲೆ ಕಟ್ಟುವ ಕಾಯಕದ್ದೆಂದು ಹೇಳಲಾಗುವ ವಿಮರ್ಶೆಯನ್ನು ತನ್ನ ಚಿಂತನೆಯ ಪ್ರಕಾರವನ್ನಾಗಿಸುವುದು ಕನ್ನಡಕ್ಕೆ ಹೊಸತಲ್ಲ; ಬಾಳಲ್ಲಿ ನಡೆಯುವುದಕ್ಕೆ ಬೇಕಾದ ಬಾಳಬಟ್ಟೆಯ ಶೋಧಕ್ಕೂ ಬಳಸುವುದು ಹೊಸ ಸಂಗತಿ.

---


**ಡಾ|| ರಹಮತ್ ತರೀಕೆರೆ**
'ಸೂಫಿ', ನಂ. ೧೪೨೫, ಎಂ. ಪಿ. ಪ್ರಕಾಶನಗರ, ಹೊಸಪೇಟೆ – ೫೮೩ ೨೦೧, ಬಳ್ಳಾರಿ ಜಿಲ್ಲೆ

# ವರ್ತಮಾನದ ತಲ್ಲಣಗಳು


# ರಂಗಭೂಮಿ

**ಡಾ॥ ವಿಜಯಾ**

> ಸರ್ಕಾರವಾಗಲೀ, ಸಮಾಜವಾಗಲೀ, ಇಂಥ ರಂಗಭೂಮಿಗಾಗಿಯೇ ತೆತ್ತುಕೊಂಡ ಜೀವಿಗಳಿಗೆ ಯಾವ ಭರವಸೆಯನ್ನೂ ಕೊಟ್ಟಿಲ್ಲ, ಕೊಡಲಾರದು ಎಂಬುದೂ ನಿಜ. ಯಾರೋ ಕಾಲೇಜಿನಲ್ಲಿ ರಂಗಭೂಮಿ ಪಾಠ ಹೇಳುತ್ತ, ಇನ್ನಾರೋ ಟಿ.ವಿ. ವಾಹಿನಿಗಳ ರಿಯಾಲಿಟಿ ಶೋಗಳಿಗೆ ಮಕ್ಕಳಿಗೆ ತಯಾರಿ ಕೊಡುತ್ತ, ಮತ್ತಾರೋ ಸೀರಿಯಲ್‌ಗಳಲ್ಲಿ, ಸಿನಿಮಾಗಳಲ್ಲಿ ಅವಕಾಶ ಸಿಕ್ಕರೆ ಸಂಸಾರಕ್ಕಾದೀತೆಂದು ಜೀವನ ನಿರ್ವಹಣೆ ಮಾಡುವಂತಾದಾಗ ತನ್ನನ್ನು ತಾನು ಸಂಪೂರ್ಣವಾಗಿ ಅರ್ಪಿಸಿಕೊಂಡು ರಂಗಭೂಮಿಯಲ್ಲಿ ಕೆಲಸ ಮಾಡಲು ಬಂದವರಿಗೆ ಹತಾಶೆಯೋ, ಸಿಟ್ಟೋ ಮೂಡುವುದು ಸಹಜ. ಆದರೆ ಅವರಾರೂ ಖಿನ್ನತೆಗೆ ಒಳಗಾಗಿಲ್ಲ. ರಂಗಭೂಮಿಯಲ್ಲೇ ಬದುಕು ಕಟ್ಟಿಕೊಳ್ಳಲು ದಾರಿಗಳನ್ನು ಹುಡುಕುತ್ತಿದ್ದಾರೆ ಎಂಬುದು ವಿಶೇಷ.

ನಮ್ಮ ವರ್ತಮಾನ ವಿಚಿತ್ರ ಆತಂಕಗಳು, ಪ್ರಶ್ನೆಗಳು, ಅನಿರೀಕ್ಷಿತಗಳು, ಅಭಿವ್ಯಕ್ತಿ ಸ್ವಾತಂತ್ರ್ಯಕ್ಕೆ ಧಕ್ಕೆ ಇತ್ಯಾದಿ ಅನೇಕ ನಕಾರಾತ್ಮಕ ಅಂಶಗಳ ಕಾರಣದಿಂದ ತಲ್ಲಣಿಸುತ್ತಿದೆ. ಹೀಗೆ ಹೇಳುವಾಗಲೇ 'ಹಾಗೇನಿಲ್ಲ ಎಲ್ಲವೂ ಪ್ರಕಾಶಿಸುತ್ತಿದೆ' ಎಂಬ ಹಳೆಯ ರಾಗವನ್ನೇ ಹಾಡುವ ಒಂದು ದೊಡ್ಡ ಸಮುದಾಯವೂ ಇದೆ. ಈ ಸಮುದಾಯ ಇಷ್ಟು ದೊಡ್ಡದಿದೆಯೆಂದು ಊಹಿಸಿಯೂ ಇರಲಿಲ್ಲ. ಬಹು ಕಾಲ ಮುಸುಕಿನಲ್ಲಿ ಮಲಗಿದ್ದದ್ದು ಈಗ ಸ್ವಚ್ಛಂದವಾಗಿ ಎದ್ದು ನಿಂತಿದೆ !

ಗಾಳಿ ಬಂದ ಕಡೆ ತೂರಿಕೊಳ್ಳುವ ಹೊಸ ಸಮುದಾಯವೊಂದು ಮಧ್ಯಮ ಮಾರ್ಗದ ಹೆಸರಿನಲ್ಲಿ ಎಲ್ಲ ಕಡೆ ಚಲಾವಣೆಯಲ್ಲಿದೆ.

ಸಾಮಾನ್ಯವಾಗಿ ರಂಗಭೂಮಿ ಇಂಥ ಪಲ್ಲಟಗಳು, ತಲ್ಲಣಗಳಿಗೆ ತನ್ನದೇ ಆದ ರೀತಿಯಲ್ಲಿ ಸ್ಪಂದಿಸುತ್ತದೆ. ಈ ಹಿನ್ನೆಲೆಯಲ್ಲಿ ಕನ್ನಡ ರಂಗಭೂಮಿಯನ್ನು ಗಮನಿಸಿದಾಗ ಹಿಂದೆಂದಿಗಿಂತಲೂ ಹೆಚ್ಚಿನ ಚಟುವಟಿಕೆಯಿಂದಿದೆ ರಂಗಭೂಮಿ. ಆದರೆ ಅವರ ಆಕ್ಷೇಪ, ಗೊಣಗಾಟಗಳೆಲ್ಲ ಸುಸಜ್ಜಿತ ರಂಗಸ್ಥಳವಿಲ್ಲದುದರತ್ತ. (ಪ್ರಸ್ತುತ ಸಮಸ್ಯೆಗಳನ್ನು ಗಂಭೀರವಾಗಿ ತೆಗೆದುಕೊಂಡಿಲ್ಲ ಎಂಬ ಸಂದೇಹ ಬರುವಷ್ಟು.)

ಎಪ್ಪತ್ತರ ದಶಕದ ರಂಗಭೂಮಿಗೆ ಒಂದು ಬದ್ಧತೆ ಇತ್ತು. ಅದಕ್ಕೂ ಹಿಂದೆ ವೃತ್ತಿ ರಂಗಭೂಮಿ ಕೂಡ ಆಯಾ ಕಾಲಘಟ್ಟದ ತಲ್ಲಣಗಳಿಗೆ ಅದು ಸ್ವಾತಂತ್ರ್ಯ ಸಂಗ್ರಾಮವಿರಲಿ, ಕರ್ನಾಟಕ ಏಕೀಕರಣವಿರಲಿ, ಅನೇಕ ಅಂದಂದಿನ ಜ್ವಲಂತ ಸಾಮಾಜಿಕ ಸಮಸ್ಯೆಗಳನ್ನು ರಂಗದ ಮೇಲೆ ಚರ್ಚಿಸಿದೆ. ಆಧುನಿಕ ರಂಗಭೂಮಿ ಕೂಡ ವ್ಯವಸ್ಥೆಯನ್ನು, ಸಾಮಾಜಿಕ ಸಮಸ್ಯೆಗಳನ್ನು ರಂಗದ ಮೇಲೆ ಪ್ರಶ್ನಿಸುತ್ತ ಚರ್ಚಿಸುತ್ತಲೇ ಬಂದಿದೆ. ಏಕಕಾಲಕ್ಕೆ ರಂಗತಂತ್ರಗಳನ್ನು ಕಟ್ಟುತ್ತಲೇ ರಂಗಭೂಮಿಯಲ್ಲಿ ವಸ್ತು, ವಿಶ್ಲೇಷಣೆಗೆ ಆದ್ಯತೆ ಕೊಟ್ಟುಕೊಂಡು ಬರಲಾಗಿದೆ. ಈ ಹೊತ್ತು ರಂಗಭೂಮಿ ಏನಾಗಿದೆ? ಅದರ ಜವಾಬ್ದಾರಿಗಳೇನು? ಎಂಬುದು ಕಾಡುವ ಪ್ರಶ್ನೆ.

ನನಗೊಂದು ಘನವಾದ ವಸ್ತು ಸಿಕ್ಕರೆ ಎಲ್ಲಿ ಬೇಕಾದರೂ ರಂಗಪ್ರದರ್ಶನ ನೀಡಿಯೇನು ಎಂದವರು, ಹಾಗೆ ಸಾಧಿಸಿ ತೋರಿಸಿದವರು ಹಲವರಿದ್ದರು. ಇಂದು ರಂಗಭೂಮಿ ಚಟುವಟಿಕೆಯೂ ಹೆಚ್ಚಾಗಿದೆ. ಹೊಸ ಹೊಸ ಕಲಾವಿದರು, ತಂತ್ರಜ್ಞರು, ಬರುತ್ತಿದ್ದಾರೆ. ರಂಗಶಿಕ್ಷಣ ಶಾಲೆಗಳೂ ಹೆಚ್ಚಾಗಿವೆ. ಆದರೂ ರಂಗಭೂಮಿ ಒಂದು ಸಂಚಲನವನ್ನು ಹುಟ್ಟುಹಾಕಿದೆಯೇ, ಅದು ಪ್ರಭುತ್ವವನ್ನು, ವ್ಯವಸ್ಥೆಯನ್ನು, ಭ್ರಷ್ಟರನ್ನು ಅಲುಗಾಡಿಸಿದೆಯೆ ಎಂದು ಯೋಚಿಸಿದಾಗ ತುಂಬ ಭರವಸೆಯ ಉತ್ತರ ಸಿಗಲಾರದು. ಅಥವಾ ರಂಗಭೂಮಿ ಹಾಗೆ ಇರಬೇಕೆಂಬ ಒತ್ತಡವಾದರೂ ಏಕೆ ಎನ್ನುವವರೂ ಇರಬಹುದು.

ರಂಗತಂತ್ರ, ಅಭಿನಯ, ಶೈಲಿ ಮೊದಲಾದ ವಿಚಾರಗಳಲ್ಲಿ ಯಾವುದೋ ಏಕರೂಪತೆಯೂ ದಾಳಿ ಇಟ್ಟಂತಿರುವುದೂ ನಿಜ. ಪ್ರಾಯಃ ಇದು ಆಯಾ ರಂಗಶಿಕ್ಷಣ ಶೈಲಿಯ ಪರಿಣಾಮವೂ ಇರಬಹುದು. ಇದೆಲ್ಲದರ ಆಚೆಗೆ ಬಹುತೇಕ ರಂಗಕರ್ಮಿಗಳಲ್ಲಿ ಒಂದು ನಿರ್ಲಿಪ್ತತೆ ಆವರಿಸಿರುವುದೂ ನಿಜ. ಅತ್ಯುತ್ತಮ ಪ್ರಯೋಗಗಳನ್ನು ರಂಗಕ್ಕೆ ಕೊಟ್ಟ ಮಂಜುನಾಥ ಬಡಿಗೇರರು "ಅಂದು ಸ್ವಾತಂತ್ರ್ಯ ಚಳವಳಿ, ತುರ್ತು ಪರಿಸ್ಥಿತಿ, ಜಾಗತೀಕರಣ ಮೊದಲಾದ ಸಂಗತಿಗಳಿಗೆ ಸ್ಪಂದಿಸಬೇಕಾದ ತುರ್ತುಗಳಿದ್ದವು. ಆದರೆ ಈ ಹೊತ್ತು ಯಾವುದೇ ಅನಿವಾರ್ಯ, ತುರ್ತು ಕಾಣುತ್ತಿಲ್ಲ ಏಕೆ? ಇವತ್ತು ಮನುಷ್ಯ ಸ್ವಾರ್ಥಿಯಾಗಿದ್ದಾನೆ. ದುಡ್ಡಿನ ಹಿಂದೆ ಓಡುತ್ತಿದ್ದಾನೆ. ಸಮುದಾಯ ಭ್ರಮೆಯಲ್ಲಿ ಸಿಕ್ಕು ಒದ್ದಾಡುತ್ತಿದೆ. ಈ ಓಟ ಉದ್ದೇಶವೇ ಇಲ್ಲದ ಓಟ ಅನ್ನಿಸ್ತದೆ. ಇವತ್ತಿನ ಹುಡುಗರಿಗೆ ಯಾವ ಉದ್ದೇಶವಿದೆ?" ಎನ್ನುತ್ತಾರೆ. ಮುಂದುವರಿದು,

'ನೀನಾಸಂ ಸಮಾಜವಾದದ ಹಿನ್ನೆಲೆಯಲ್ಲಿ, ಸಮುದಾಯ ಕಮ್ಯುನಿಸಂ ಹಿನ್ನೆಲೆಯಲ್ಲಿ ಕೆಲಸ ಮಾಡಿದವು. ಈಗೆಲ್ಲಿದೆ ಆ ತತ್ತ್ವಗಳು? ನಾಯಕರೆಲ್ಲ ಏನಾದರು? ನಿರೀಕ್ಷೆಗಳು ಹುಸಿಯಾಗಿವೆಯಲ್ಲವೆ? ಈಚೆಗೆ ರಂಗಶಾಲೆಗೆ ಬರುವ ಮಕ್ಕಳಿಗೆ ಭಾಷೆಯದೇ ಸಮಸ್ಯೆ. ಅವರಿಗೆ ಭಾಷೆ ಕಲಿಸ್ತಾ ಕೂತರೆ ವ್ಯವಸ್ಥೆ ವಿರುದ್ಧ ಯಾವಾಗ, ಹೇಗೆ ದನಿ ಎತ್ತಬೇಕು? ಈಗ ಕಟ್ಟಿರೋ ರಂಗಭೂಮಿಗೆ ಉದ್ದೇಶವೇ ಇಲ್ಲ, ನಾಟಕ ಬರೆಯೋರೂ ಇಲ್ಲ, ಅರ್ಥಪೂರ್ಣವಾಗಿ ರಂಗದ ಮೇಲೆ ಕಟ್ಟೋರೂ...? ಯುವ ಸಮಾಜ ಸೂಕ್ಷ್ಮಗಳನ್ನು ಕಳೆದುಕೊಳ್ಳುತ್ತಿದೆ. ರಂಗಭೂಮಿಯಲ್ಲಿ ಸಮೃದ್ಧಿ ಇದೆ; ಉದ್ದೇಶ ಇಲ್ಲ. ನನ್ನ ಮಟ್ಟಿಗೆ ಹೇಳುವುದಾದರೆ ತುಂಬ ಬೇಸತ್ತಿದ್ದೇನೆ. ವರ್ತಮಾನ ತಲೆಗೆ ಹಾಕ್ಕೊಳಲ್ಲ. ಎಲ್ಲವನ್ನೂ ಮೀರಿದ್ದರ ಕಡೆಗೆ ಮನಸ್ಸು ತುಡಿಯುತ್ತೆ. ಅಧ್ಯಾತ್ಮ, ಸ್ನೇಹ, ಪ್ರೀತಿ ಹೀಗೆ... ಇಸಂಗಳ ಹಂಗು ಬೇಡ. ಮನುಷ್ಯರಾಗಿರಲು, ಪ್ರೀತಿಸಲು, ಸ್ನೇಹದಿಂದಿರಲು, ಒಂದು ಅನೂಹ್ಯ, ಅನಂತದೆಡೆಗೆ ಇಣಿಕಿ ನೋಡಲು ಪ್ರಯತ್ನಿಸುತ್ತಿದ್ದೇನೆ' ಎನ್ನುತ್ತಾರೆ.

ಮಂಜುನಾಥ ಬಡಿಗೇರ್ 'ಚಿತ್ರಪಟ ರಾಮಾಯಣ', ರಾಮಾಯಣ ದರ್ಶನಂ ದಿಂದ ಆಯ್ದ 'ದಶಾನನ ಸ್ವಪ್ನ ಸಿದ್ಧಿ', ಇತ್ತೀಚೆಗೆ ನೀನಾಸಂ ವಿದ್ಯಾರ್ಥಿಗಳಿಗೆ 'ತಾಟಕಿಮರ್ದನ'ದವರೆಗೆ ಹಲವು ಗಂಭೀರ ಪ್ರಯೋಗಗಳನ್ನು ನೀಡಿದವರು.

ಈ ಕ್ಷಣಕ್ಕೆ ಅವರ ಮನಸ್ಸು ಎತ್ತ ಸಾಗಿದೆ, ಯಾವುದೋ ಅತೃಪ್ತಿ, ಅಸಹನೆಗೆ ಕಾರಣವೇನು? ಇವೆಲ್ಲ ಗಂಭೀರವಾದ ಚಿಂತನೆಗೆ ತಳ್ಳುವ ಸಂಗತಿಗಳು.

"ನೀವೆಲ್ಲ ಎಪ್ಪತ್ತರ ದಶಕದಲ್ಲಿ ಬದ್ಧತೆಯಿಂದ ಕೆಲಸ ಮಾಡಿದಿರಿ. ವೃತ್ತಿರಂಗಭೂಮಿ ಕೂಡಾ ಸ್ಪಂದಿಸಿತ್ತು. ಧುತ್ತರಗಿ, ಹೂಗಾರ, ಜೋಶಿಯಂಥವರು ಸಮಸ್ಯೆಗೆ ಸ್ಪಂದಿಸಿದರೂ ಪ್ರೇಕ್ಷಕನನ್ನು ಲಕ್ಷಿಸಿಯೇ ಕೆಲಸ ಮಾಡಿದರು. ಕ್ರಮೇಣ ಆಧುನಿಕ ರಂಗಭೂಮಿ ವಿಚಾರಗಳ ಭಾರದಿಂದಾಗಿ ಸೂಕ್ಷ್ಮತೆ ಕಳೆದುಕೊಳ್ತಿದೆ. ಪ್ರೇಕ್ಷಕನ ಮೇಲೆ ಅತಿಯಾದ ಹೊರೆ, ಪ್ರೇಕ್ಷಕರಿಗಾಗಿ ಯಾರೂ ನಾಟಕ ಬರೆಯಲಿಲ್ಲ ; ಬರೆಯುತ್ತಿಲ್ಲ. ಕೇವಲ ಉಪದೇಶ ಮಾಡಿದವಾ? ನಿಜವಾದ ಅರ್ಥದಲ್ಲಿ ನಾಟಕವನ್ನು ತಲುಪಿಸುವ ಜವಾಬ್ದಾರಿ ತಲೆ ಮೇಲೆ ಹೊತ್ತ ನಾವು ಕನ್ನಡ ರಂಗಭೂಮಿಗೆ ಏನು ಕೊಟ್ಟೆವು ಎಂದು ತಿರುಗಿ ನೋಡಬೇಕಾಗಿದೆ. ಮೋಲಿಯೇರನನ್ನು ಬಾಯಿ ಬಿಟ್ಟುಕೊಂಡು ನೋಡ್ತಾರೆ, ಟಿ. ಸುನಂದಮ್ಮರ ಕೃತಿ ರಂಗದ ಮೇಲೆ ಬಂದರೆ ಮೌನ ವಹಿಸುವ ಬುದ್ಧಿ ಜೀವಿಗಳು ಏನನ್ನ ನಿಯಂತ್ರಿಸಲು ಹೊರಟಿದ್ದಾರೆ? ಏಕೋ ಆಧುನಿಕ ರಂಗಭೂಮಿಯ ಅನೇಕ

ಸಂಗತಿಗಳು ಸ್ಯೂಡೋ ಅನ್ನಿಸ್ತಿವೆ. ಇಷ್ಟಾಗಿ ಒಬ್ಬ ನಟ, ನಿರ್ದೇಶಕನಾಗಿ ಬದುಕಲು ರಂಗಭೂಮಿ ಭರವಸೆ ಕೊಟ್ಟಿದೆಯೆ? ಯಾಕೆ ಟಿ.ವಿ., ಸಿನಿಮಾಗೆ ಹೋಗಬೇಕಾಗುತ್ತಿದೆ? ಕನ್ನಡ ರಂಗಭೂಮಿಯಲ್ಲಿ ಸೌಲಭ್ಯಗಳು ಹೆಚ್ಚಿವೆ, ಭದ್ರತೆ ಸಿಗುತ್ತಿಲ್ಲ. ನಾವು ಎಪ್ಪತ್ತರ ದಶಕದ ಮೋಹದಿಂದ ಹೊರ ಬರಬೇಕಿದೆ. ಸುರಭಿ ತಂಡದ 'ಮಾಯಾಬಜಾರ್' ಪ್ರದರ್ಶನಕ್ಕೆ ಕಿಕ್ಕಿರಿಯುವ ಪ್ರೇಕ್ಷಕನನ್ನು ನಾವು ನಮ್ಮತ್ತಲೂ ಸೆಳೆಯಬೇಕಾಗಿದೆ. ಅದಕ್ಕೆ ಅತಿಯಾದ ಬೌದ್ಧಿಕತೆ ಬೇಕಿಲ್ಲ. ರಂಗಶಾಲೆ, ರೆಪರ್ಟರಿಗಳಿದ್ದೂ ನಮಗೆ ಇನ್ನೂ ಪ್ರೇಕ್ಷಕನ ರಂಗಭೂಮಿ ಕಟ್ಟಲಾಗಿಲ್ಲ, ಏಕೆ? ನಮಗೆ 'ಇಸಂ'ಗಳು ಬೇಕಾಗಿಲ್ಲ. ಥಿಯೇಟರ್ ಇಟ್‌ಸೆಲ್ಫ್ ಸೆಕ್ಯುಲರ್! ಇದೊಂದು ಸಮುದ್ರ, ಕೊಳಕನ್ನ ಎಸೆದು ಅಮೂಲ್ಯವಾದ್ದನ್ನು ಗರ್ಭದಲ್ಲಿರಿಸಿಕೊಳ್ಳಬೇಕಿದೆ. 'ಇಸಂ'ವಾದಿಗಳು ಯುವ ಜನತೆಯ ಹಾದಿ ತಪ್ಪಿಸುತ್ತಿದ್ದಾರಾ ರಂಗಭೂಮಿಯಲ್ಲಿ?

ಬುದ್ಧ, ಬಸವ, ಗಾಂಧಿಗಳು 'ಇಸಂ' ಎಂದರಾ? ಅವರು ಹೇಳಿದ್ದರಲ್ಲಿ ತತ್ತ್ವಗಳು ಇರಲಿಲ್ಲವಾ? ಅವು ಹೇಗೆ ಹೃದಯ ತಟ್ಟಿದವು? 'ಬಹುಕಾಲ ಬಣ್ಣ ಹುಡುಕಿದೆ. ಈಗ ಬಣ್ಣ ಬೇಡ' ಅನ್ನುತ್ತಿರುವ ಪ್ರಸನ್ನ ದೀರ್ಘಕಾಲ ಬದ್ಧ ರಂಗಭೂಮಿಯ ದುಡಿಮೆಯಿಂದ ಪಡೆದ ಉತ್ತರವೇ ಇದು, ಯಾಕೆ?

"ರಂಗಭೂಮಿ ಅಪರಾಧ ಮಾಡದ ಹಾಗೆ ತಡೆಯಬಲ್ಲದು. ನಾವು ಯಾವ ಹಣೆ ಪಟ್ಟಿಯೂ ಇಲ್ಲದೆ ಬದುಕು, ಪ್ರೀತಿ, ಸ್ನೇಹ, ಮನುಷ್ಯತ್ವ ಕಟ್ಟುತ್ತೇವೆ..."

ಹೀಗೆ ಅರಳು ಹುರಿದಂತೆ ಮಾತಾಡುವ ರಂಗ ನಿರ್ದೇಶಕ ಪ್ರಮೋದ್ ಶಿಗ್ಗಾಂವ್ ಏನನ್ನು ಹುಡುಕುತ್ತಿದ್ದಾರೆ? ಸಮುದಾಯ ತಂಡಕ್ಕೆ 'ಪಂಪ ಭಾರತ' ದಂಥ ನಾಟಕ ಕೊಟ್ಟವರು, 'ಮಲೆಗಳಲ್ಲಿ ಮದುಮಗಳು'ಗಾಗಿ ದುಡಿದವರು, ಒಂದು ಕಾಲಕ್ಕೆ ಬೀದಿ ನಾಟಕ ಆಡುತ್ತ ಸಾಮಾಜಿಕರಲ್ಲಿ ಎಚ್ಚರ ಮೂಡಿಸಿದವರು. ಇಂದು ಎಲ್ಲವೂ ಏಕತಾನ, ಹೊರೆ, ಹೊಸದನ್ನು ಹುಡುಕಬೇಕು ಎನ್ನುತ್ತಿದ್ದಾರೆ!

"ಹುಡುಕಿದರೆ ಸಿಗುತ್ತೆ. ಪ್ರತಿಯೊಂದು ಪಾತ್ರದ ಮಾತು ಸ್ವಭಾವದ ಹಿಂದೆ ಒಂದಲ್ಲೊಂದು ಸಂಗತಿಯ ಬಗ್ಗೆ ಹಾಸ್ಯ, ವಿಡಂಬನೆ, ಗಂಭೀರವಾದ ಚರ್ಚೆ ನಡೆದಿರುತ್ತದೆ. ಹಾಸ್ಯ ಪ್ರಧಾನ, ರಂಜನೀಯ ಎನ್ನಿಸಬಹುದಾದ ನಾಟಕಗಳಲ್ಲೂ ತತ್ಕಾಲೀನ ಸಮಸ್ಯೆಗಳ ಬಗ್ಗೆ ಹೇಳುತ್ತಿರುತ್ತೇವೆ. ನಾಶವಾಗುತ್ತಿರುವ ಬೆಂಗಳೂರೇ ಈ ಕ್ಷಣದ ಆತಂಕ ! ಒಡೆಯುತ್ತಿರುವ ಕುಟುಂಬಗಳು, ಗಂಡು – ಹೆಣ್ಣಿನ ಸಂಬಂಧಗಳು ಮೊದಲಾದ ವೈಯಕ್ತಿಕ ರಾಜಕಾರಣಗಳನ್ನೂ, ಸಾಂಸಾರಿಕ ರಾಜಕಾರಣಗಳನ್ನೂ ಅನಾವರಣಗೊಳಿಸ್ತೀನಿ. 'ಮಾರ್ಯಾದೆ ಪ್ರಶ್ನೆ,' 'ನಾ ತುಕಾ ರಾಮ್ ಅಲ್ಲ' ಮೊದಲಾದ ಹಲವು ನಾಟಕಗಳು ಪ್ರಶ್ನೆಗಳನ್ನೆತ್ತುತ್ತವೆ. ನನ್ನ ಮಟ್ಟಿಗೆ ಏನೂ ಹೇಳದ ನಾಟಕ ಅನ್ನುವುದು ಇಲ್ಲ. ಪ್ರೇಕ್ಷಕನನ್ನು ನಗಿಸುತ್ತಲೇ ಯೋಚನೆಗೂ ಹಚ್ಚುವುದರಲ್ಲಿ ನನ್ನ ಆಸಕ್ತಿ, ಪ್ರಯತ್ನ. ಏನೂ ಹೇಳದ್ದು ನಾಟಕವಲ್ಲ ಮ್ಯೂಸಿಯಂ ಪೀಸ್" ಎನ್ನುತ್ತಾರೆ ರಂಗಶಂಕರದ ನಿರ್ವಾಹಕ ಹಾಗೂ ನಾಟಕ ನಿರ್ದೇಶಕ ಸುರೇಂದ್ರನಾಥ್.

ಇತ್ತೀಚೆಗೆ ಪ್ರಕಾಶ್ ಬೆಳವಾಡಿ ಅವರು ರಂಗಕ್ಕೆ ತಂದ 'ಶಿಕಾರಿ' ಹಲವು ಧ್ವನಿಗಳನ್ನು ಹೊರಡಿಸಿತ್ತು. ಪ್ರಸನ್ನರ 'ತಾಯವ್ವ' ನಿರ್ದೇಶಕರ ಇಲ್ಲಿರಲಾರೆ ಅಲ್ಲಿಗೆ ಹೋಗಲಾರೆಯಂಥ ತಾತ್ವಿಕ ಗೊಂದಲಗಳಿಗೆ ಸಾಕ್ಷಿಯಾಯಿತು. ವಿಚಿತ್ರ ಅಗ್ನಿದಿವ್ಯಗಳ ನಡುವೆಯೂ ಗಡಿರೇಖೆಗಳನ್ನು ದಾಟುತ್ತ ತನ್ನದೇ ಆದ ರೀತಿಯಲ್ಲಿ ರಂಗಭೂಮಿಯನ್ನು ಕಟ್ಟಿಕೊಳ್ಳುತ್ತಿರುವ ದಾಕ್ಷಾಯಣಿ ಭಟ್ ಒಂದು ರೀತಿಯಲ್ಲಿ ಛಲ ಬಿಡದ ರಂಗಕರ್ಮಿ. "ನಾನು ರಂಗಕ್ಕೆ ಸಿದ್ಧಪಡಿಸುವ ಪ್ರತಿಯೊಂದು ನಾಟಕದಲ್ಲೂ ಮಹಿಳೆಯರ ಶೋಷಣೆ, ದೌರ್ಜನ್ಯಗಳನ್ನು ತರುತ್ತೇನೆ. ಇದೀಗ ಸಿದ್ಧವಾಗುತ್ತಿರುವ ನಾಟಕದಲ್ಲಿ ಅತ್ಯಾಚಾರದಂಥ ಸಂಗತಿ ಚರ್ಚಿಸಿದ್ದೇನೆ. ನಾಟಕಕಾರರು ಸೇರಿಸದಿದ್ದರೂ ನಾನೇ ಕೆಲವು ಸೇರ್ಪಡೆಗಳನ್ನು ಮೂಲಕ್ಕೆ ಧಕ್ಕೆ ಬರದ ಹಾಗೆ ಮಾಡಿಕೊಳ್ಳುತ್ತೇನೆ. ನನ್ನ ಪ್ರಯೋಗದಲ್ಲಿ ಸಮಸ್ಯೆಗಳನ್ನೆದುರಿಸಿ ಗೆಲ್ಲುವ ಸಮರ್ಥೆಯರೂ ಇದ್ದಾರೆ" ಎನ್ನುತ್ತಾರೆ. ಆಕೆಗೆ ತಾನು ಕಟ್ಟಿದ ತಂಡ ಉಳಿಯಬೇಕು, ತಾನು ರೂಪಿಸಿದ ಕಲಾವಿದರು ಇನ್ನೊಂದು ತಂಡದಿಂದ ಅಪಹರಣಕ್ಕೊಳಗಾಗಬಾರದು. ಇವನ್ನೆಲ್ಲ ಕಾಪಾಡಿಕೊಂಡು ರಂಗಭೂಮಿಯಲ್ಲೂ ಅಟ್ಟಹಾಸ ಮಾಡುತ್ತಿರುವ ಜಾತೀಯತೆ ತನ್ನ ಏರು ಮೆಟ್ಟಿಲುಗಳಿಗೆ ಅಡ್ಡವಾಗಿರುವುದನ್ನೂ ದಾಟಿಕೊಂಡು ರಂಗಭೂಮಿಯಲ್ಲಿ ಉಳಿದಿರುವುದೇ ಒಂದು ಸಾಹಸ!

ನಟರಾಜ ಹುಳಿಯಾರ್‌ರ 'ಮುಂದಣ ಕಥನ' ಹಲವು ವಿಚಾರಗಳನ್ನು ತುರುಕಿಕೊಂಡಿದ್ದರೂ ನಿರ್ದೇಶಕ ನಟರಾಜ ಹೊನ್ನವಳ್ಳಿ ಅದೊಂದು ಕರಪತ್ರವಾಗಿ ಬಿಡುವ ಅಪಾಯ ತಪ್ಪಿಸಿದ್ದು ಗಮನ ಸೆಳೆದಿತ್ತು. "ವರ್ತಮಾನವೇ ಸರಿ ಇಲ್ಲ.




# ಈ ರಾತ್ರಿ ಮತ್ತು ಅವಳಲ್ಲಿ ಒಂಟಿ



ಈ ರಾತ್ರಿ ಅವಳಲ್ಲಿ ಒಬ್ಬಂಟಿ।
ಅವಳಂತೆ ನಾನೂ ಸಹ।
ಚಳಿಗಾಲದ ಈ ರಾತ್ರಿ ಉಪಹಾರ ಮಂದಿರದಲ್ಲಿ।
ಬೆಳಗಿದ ಮೊಂಬತ್ತಿಗಳ ನಡುವೆ।
ಕೇವಲ ಎರಡು ಮೇಜುಗಳ ಅಂತರ।
ಆದರೂ ನಮ್ಮಿಬ್ಬರ ನಡುವಿನ ಮೌನ ಕದಲಲಿಲ್ಲ।
ಎದೆಯಲಿ ಬಚ್ಚಿಟ್ಟ ಗುಲಾಬಿ ಎಳೆಯುವಾಗ ನನ್ನನವಳು ನೋಡಲಿಲ್ಲ।
ವೈನಿನ ಕಪ್ಪಿಗೆ ಮುತ್ತಿಟ್ಟು ಚಪ್ಪರಿಸುವಾಗ ನಾನವಳ ನೋಡಲಿಲ್ಲ।
ಬ್ರೆಡ್ಡಿನ ತುಣುಕು ಅವಳು ಚೆಲ್ಲಲಿಲ್ಲ।
ನೀರಿನ ಹನಿ ನಾನು ತುಳುಕಿಸಲಿಲ್ಲ।
ಯಾವುದೂ ನಮ್ಮಿಬ್ಬರ ನಡುವಿನ ಮೌನಕ್ಕೆ ಅಡ್ಡಿಯಾಗಲಿಲ್ಲ।
ಅವಳ ಚೆಂದದ ಜೊತೆ ಅವಳಲ್ಲಿ ಒಂಟಿ।
ನಾನು ಸಹ ಇಲ್ಲಿ।
ಯಾಕೆ ನಾವಿಬ್ಬರು ದುರ್ಬಲರಾಗಲಿಲ್ಲ?।
ನನ್ನನ್ನೆ ಕೇಳಿಕೊಂಡೆ।
ಅವಳು ಕಾಲಮೇಲೆ ಕಾಲು ಹಾಕುವಾಗ ನನ್ನ ನೋಡಲಿಲ್ಲ।
ನಾನು ಕೋಟು ಸಡಿಲಿಸುವಾಗ ನೋಡಲಿಲ್ಲ।
ನನ್ನಾವ ಚಲನವಲನಗಳೂ ಅವಳ ತಟ್ಟಲಿಲ್ಲ।
ನಾವಿಬ್ಬರು ಮರೆಯುವುದರಲ್ಲೇ ಸಾಮರಸ್ಯ ಕಂಡಿದ್ದೇವೆ।
ಅಂತೂ ರಾತ್ರಿಯ ಊಟ ಒಂಟಿಯಾಗೆ ಸಾಗಿತು।
ಅವಳು ಹೇಳಲಿಲ್ಲ : ಪ್ರೀತಿ ಹುಟ್ಟಿದ್ದು ಬದುಕುವುದಕ್ಕಾಗಿ ಎಂದು।
ನಾನೂ ಅವಳಿಗೆ ಹೇಳಲಿಲ್ಲ : ಪ್ರೀತಿಯೊಂದು ಭಾವವೆಂದು.

ಉರ್ದು ಮೂಲ : **ಮುಹಮ್ಮದ್ ಡಾರ್ವಿಶ್**
ಅನುವಾದ : **ಸುಜಾತಾ,** ಆಕಾಶವಾಣಿ, ಹಾಸನ

ತಲ್ಲಣಗಳ ಲೆಕ್ಕಾಚಾರವೆಲ್ಲಿ ಬಂತು, ವ್ಯವಸ್ಥೆ ನಾವು ಯೋಚಿಸುವ ದಿಕ್ಕನ್ನೇ ತಪ್ಪಿಸುತ್ತಿದೆ. ಎಲ್ಲೆಲ್ಲೂ ಕೇಸರೀಕರಣದ ಛಾಯೆ ಹರಡುತ್ತಿದೆ. ರಂಗಭೂಮಿ ಈವರೆಗೆ ಇದ್ದ ಸ್ವಾತಂತ್ರ್ಯವನ್ನು ಉಳಿಸಿಕೊಳ್ಳಬಹುದೊ, ಅದೂ ಕೇಸರಿಯಾಗಿ ಬಿಡುತ್ತದೊ ಎಂಬ ಆತಂಕವೂ ಇದೆ. ವರ್ತಮಾನದ ತಲ್ಲಣಗಳನ್ನು ಬೀದಿ ನಾಟಕಗಳಲ್ಲಿ ಬಿಂಬಿಸಬಹುದು, ಆಗಿವೆ. ಪೂರ್ಣಾವಧಿ ನಾಟಕಗಳು ಅರಳುವ ಬಗೆ ಬೇರೆ. ಅಲ್ಲಿ ಧ್ವನಿ ಮುಖ್ಯ. ಅದು ಕಲೆಯಾಗಿ ಅರಳಬೇಕು, ಕರಪತ್ರವಾಗಿ ಅಲ್ಲ. ಕಲೆ, ಕಲಾತ್ಮಕತೆ, ಬದ್ಧತೆ ಅಥವಾ ಸಾಮಾಜಿಕ ಕಾಳಜಿ ವ್ಯಕ್ತಿಯಿಂದ ವ್ಯಕ್ತಿಗೆ ಭಿನ್ನ. ಈ ಹೊತ್ತು ಎಲ್ಲ ಚಳುವಳಿಗಳೂ ಎಂದರೆ ಹಿಂದಿದ್ದ ಹಾಗೆ ದಲಿತ, ಬಂಡಾಯ, ಇತ್ಯಾದಿ ಚಳವಳಿಗಳು (ಮೂವ್‌ಮೆಂಟ್ಸ್) ಕ್ಷೀಣಿಸಿವೆ, ಇಲ್ಲವೇ ಇಲ್ಲ ಎನ್ನುವಷ್ಟು ಹಿನ್ನೆಲೆಗೆ ಸರಿದಿವೆ. ರಂಗ ಚಳುವಳಿ ಕೂಡ ಕಾಣುತ್ತಿಲ್ಲ. ಅತಿ ಹೆಚ್ಚು ರಂಗ ಚಟುವಟಿಕೆ ಇದೆ. ರಂಗದ ಮೂಲಕ ಮಾತಾಡುವವರನೇಕರಿಗೆ, ತಾವು ಏನು ಹೇಳುತ್ತಿದ್ದೇವೆಂಬತ್ತ ಗಮನವೇ ಇದ್ದಂತಿಲ್ಲ" ಎನ್ನುತ್ತಾರೆ ಬೀದಿ ನಾಟಕ, ರಂಗ ನಾಟಕ, ರಂಗ ಶಿಕ್ಷಣ, ವಿಮರ್ಶಾ ಕ್ಷೇತ್ರದಲ್ಲಿ ಗಂಭೀರವಾಗಿ ತೊಡಗಿಕೊಂಡಿರುವ ಶಶಿಕಾಂತ ಯಡಹಳ್ಳಿ.




ರಂಗಭೂಮಿ ಕ್ರಿಯಾಶೀಲವಾಗಿದೆ. ಅತಿ ಹೆಚ್ಚು ಸಂಖ್ಯೆಯಲ್ಲಿ ರಂಗ ಕರ್ಮಿಗಳು ಅಖಾಡಕ್ಕಿಳಿದಿದ್ದಾರೆ. ಆದರೆ ಈ ರಂಗಭೂಮಿಯ ಸಾಧ್ಯತೆಗಳನ್ನು ಹೇಗೆ ದುಡಿಸಿಕೊಳ್ಳುತ್ತೇವೆಂಬುದೇ ದೊಡ್ಡ ಪ್ರಶ್ನೆ. ಯಾವುದೇ ರಂಗಪ್ರಯೋಗ ಅದು ಹಾಸ್ಯ, ವಿಡಂಬನೆ, ಗಂಭೀರ ಯಾವುದೇ ಪ್ರಕಾರದಲ್ಲಿ ಅಭಿನೀತವಾದರೂ ಅಲ್ಲಿ ಹೇಳಬೇಕಾದ, ಕೇಳಬೇಕಾದ ವಿಚಾರಗಳು ಇದ್ದೇ ಇರುತ್ತವೆ. ಪ್ರೇಕ್ಷಕನ ಮನೋಧರ್ಮ ಸ್ವೀಕರಿಸಲು ಸಿದ್ಧವಾಗಿದ್ದರೆ ಸಾಲುಗಳ ನಡುವೆ, ಸಂಭಾಷಣೆಯ ನಡುವೆ, ಚಲನೆ, ಶಬ್ದ, ಹಿನ್ನೆಲೆ ಎಲ್ಲ ಕಡೆ ಒಂದಿಲ್ಲೊಂದು ವ್ಯಾಖ್ಯಾನವಿದೆ; ಸಂದೇಶವೂ ಇದೆ. ಮೇಲೆ ಹೇಳಿದ ಎಲ್ಲ ನಿರ್ದೇಶಕರ ಮನಸ್ಸುಗಳೂ ವ್ಯಸ್ತಗೊಂಡಿವೆ ನಿಜ. ಆದರೆ ಅವರೆಲ್ಲ ಮಾಡುತ್ತಿರುವ ಕೆಲಸದಲ್ಲೂ ವಿಚಾರಗಳ ಸಂವಹನವಾಗುತ್ತಲೇ ಇರುತ್ತದೆ.

ಪ್ರಸ್ತುತ ಸಂದರ್ಭಕ್ಕೆ ಬಹು ಜಾಣತನದಲ್ಲಿ ತನ್ನ ಅಭಿವ್ಯಕ್ತಿ ಸ್ವಾತಂತ್ರ್ಯವನ್ನೂ ಉಳಿಸಿಕೊಂಡು ಆಯಾ ಸಂದರ್ಭಕ್ಕೆ, ಸಮಸ್ಯೆಗೆ ಸ್ಪಂದಿಸುತ್ತಲೇ ಬರುತ್ತಿರುವುದು ರಂಗಭೂಮಿ ಮಾತ್ರ.

ರಂಗಭೂಮಿ ಇನ್ನೂ ತನ್ನನ್ನು ತಾನು ಮಾರಿಕೊಂಡಿಲ್ಲ (ಒಂದೆರಡು ಅಪವಾದಗಳಿರಬಹುದು). ಮಾಧ್ಯಮಗಳೆಲ್ಲವೂ ಯಾವುದ್ಯಾವುದೋ ಕಾರಣಕ್ಕೆ ಬಂಡವಾಳಶಾಹಿ ಹಿಡಿತದಲ್ಲಿ ಸಿಕ್ಕು ಅಸ್ಮಿತೆಯನ್ನೇ ಕಳೆದುಕೊಳ್ಳುತ್ತಿರುವ ಹೊತ್ತಿನಲ್ಲಿ ನಮಗಿರುವ ಭರವಸೆ ರಂಗಭೂಮಿಯೊಂದೇ. ಇಲ್ಲಿ ದುಡಿಯುತ್ತಿರುವ ಸೃಜನಶೀಲ ಮನಸ್ಸುಗಳ ಸ್ವಾಸ್ಥ್ಯ ಕಾಪಾಡಿಕೊಳ್ಳಬೇಕಾಗಿದೆ.

ಇಲ್ಲಿ ಮಾತನಾಡಿರುವ ನಾಲ್ಕಾರು ಜನರ ಹಾಗೇ ಇನ್ನೂ ಅನೇಕರು ರಂಗದಲ್ಲಿಯೇ ಮತ್ತೇನನ್ನೋ ಹುಡುಕುತ್ತಿದ್ದಾರೆ. ಅವರ ಹುಡುಕಾಟದಲ್ಲಿ ರಂಗಭೂಮಿಯ ಬಗ್ಗೆ ಅವರಿಗಿರುವ ಆಸಕ್ತಿ ಕಿಂಚಿತ್ತೂ ಕಡಿಮೆಯಾಗಿಲ್ಲ. ಆದರೆ ಅಲ್ಲೇನೊ ಕೊರತೆ ಇದೆ ಅನ್ನಿಸಿದೆ. ಅದು ವಸ್ತು, ತಂತ್ರ, ಪ್ರೇಕ್ಷಕ ಏನೂ ಆಗಿರಬಹುದು. ವರ್ತಮಾನದ ತಲ್ಲಣಗಳಿಗೆ ರಂಗಭೂಮಿಯ ಸ್ಪಂದನೆ ಏನೆಂಬ ಮಾತಿಗೆ ಹೀಗೆ ಪ್ರತಿಕ್ರಿಯಿಸಿದ ಕೆಲವರ ಆಲೋಚನೆಯ ಹಿಂದೆ ರಂಗಭೂಮಿಯೇ ವೃತ್ತಿಯೂ ಆದಾಗಿನ ತಲ್ಲಣಗಳೂ ಇವೆ.

ಸರ್ಕಾರವಾಗಲೀ, ಸಮಾಜವಾಗಲೀ, ಇಂಥ ರಂಗಭೂಮಿಗಾಗಿಯೇ ತೆತ್ತುಕೊಂಡ ಜೀವಿಗಳಿಗೆ ಯಾವ ಭರವಸೆಯನ್ನೂ ಕೊಟ್ಟಿಲ್ಲ, ಕೊಡಲಾರದು ಎಂಬುದೂ ನಿಜ. ಯಾರೋ ಕಾಲೇಜಿನಲ್ಲಿ ರಂಗಭೂಮಿ ಪಾಠ ಹೇಳುತ್ತ, ಇನ್ನಾರೋ ಟಿ.ವಿ. ವಾಹಿನಿಗಳ ರಿಯಾಲಿಟಿ ಶೋಗಳಿಗೆ ಮಕ್ಕಳಿಗೆ ತಯಾರಿ ಕೊಡುತ್ತ, ಮತ್ತಾರೋ ಸೀರಿಯಲ್‌ಗಳಲ್ಲಿ, ಸಿನಿಮಾಗಳಲ್ಲಿ ಅವಕಾಶ ಸಿಕ್ಕರೆ ಸಂಸಾರಕ್ಕಾದೀತೆಂದು ಜೀವನ ನಿರ್ವಹಣೆ ಮಾಡುವಂತಾದಾಗ ತನ್ನನ್ನು ತಾನು ಸಂಪೂರ್ಣವಾಗಿ ಅರ್ಪಿಸಿಕೊಂಡು ರಂಗಭೂಮಿಯಲ್ಲಿ ಕೆಲಸ ಮಾಡಲು ಬಂದವರಿಗೆ ಹತಾಶೆಯೋ, ಸಿಟ್ಟೋ ಮೂಡುವುದು ಸಹಜ. ಆದರೆ ಅವರಾರೂ ಖಿನ್ನತೆಗೆ ಒಳಗಾಗಿಲ್ಲ. ರಂಗಭೂಮಿಯಲ್ಲೇ ಬದುಕು ಕಟ್ಟಿಕೊಳ್ಳಲು ದಾರಿಗಳನ್ನು ಹುಡುಕುತ್ತಿದ್ದಾರೆ ಎಂಬುದು ವಿಶೇಷ.

ಇಂಥ ಹೊತ್ತಿನಲ್ಲಿ ವರ್ತಮಾನದ ಯಾವುದೇ ತಲ್ಲಣಕ್ಕೆ ಬೀದಿ ನಾಟಕಗಳು ಕರಪತ್ರದ ಮಾದರಿಯಲ್ಲಿ ಸಿದ್ಧವಾಗಿ ಉತ್ತರಿಸಿಯಾವು. ಪೂರ್ಣರಂಗಭೂಮಿ ತನ್ನೆಲ್ಲ ಸತ್ವ, ಕಲೆ ಉಳಿಸಿಕೊಂಡೂ ವರ್ತಮಾನಕ್ಕೆ ನೇರವಾಗಿ ಸ್ಪಂದಿಸಲು ಅದರದೇ ಆದ ವಿಶೇಷ ವಿಷಯಕ್ಕೆ ಮಾತ್ರ ಕೈ ಹಾಕುತ್ತದೆ.

ಸಹಜವಾಗೇ ಅಲ್ಲಿ, ಇಲ್ಲಿ, ಕೋಮು ಸೌಹಾರ್ದದ ಮಾತು, ಸ್ತ್ರೀಯರು, ದಲಿತರ ಮೇಲಿನ ದೌರ್ಜನ್ಯ ಕುರಿತಂತೆ, ಕೋಮು ಸೌಹಾರ್ದ ಕುರಿತಂತೆ ಪ್ರಸ್ತಾಪಗಳೂ ಇರಬಹುದು. ಆದರೆ ತಾನು ಹೇಳಬೇಕಾದ ಮಾತು ಒಂದು ಸಿದ್ಧಾಂತದ ಹಾಗೆ ವಸ್ತು–ತಂತ್ರಗಳ ಭಾರದಲ್ಲಿ ತೂಗಾಡದೆ ಸರಳವೂ, ನೇರವೂ ಆಗಿದ್ದು ಪ್ರೇಕ್ಷಕನು ನಗು ನಗುತ್ತಲೇ ಕೊಂಚ ವಿಚಾರಗಳನ್ನೂ ಅರಗಿಸಿಕೊಳ್ಳುವಂತೆ ರಂಗದ ಮೇಲೆ ತರುವ ಪ್ರಯತ್ನ ನಿರಂತರವಾಗಿ ನಡೆದಿದೆ. ಪ್ರತಿ ವರ್ಷ ಸಾಲು ಸಾಲಾಗಿ ಹೊರ ಬರುತ್ತಿರುವ ರಂಗ ನಿರ್ದೇಶಕರು, ಕಲಾವಿದರು, ತಂತ್ರಜ್ಞರು ಬದುಕಿನ ಅನಿವಾರ್ಯತೆಗಾಗಿ ಕವಲುದಾರಿಗೆ ಹೊರಳಿರಬೇಕು. ಈಗಾಗಲೇ ರಂಗಭೂಮಿ ಒಪ್ಪಿ ಅನುಸರಿಸುತ್ತಿರುವ ಜನಪರ ನಿಲುವುಗಳ ಅಭಿವ್ಯಕ್ತಿ ವಿಧಾನವು ಕೊಂಡಿ ಕಳಚಿಕೊಳ್ಳದ ಹಾಗೆ ನೋಡಿಕೊಳ್ಳಬೇಕಾದ ಜವಾಬ್ದಾರಿ ನಮ್ಮೆದುರಿಗಿದೆ.

ಇಂಥ ಸಂಕೀರ್ಣ ಘಟ್ಟದಲ್ಲಿ ಅವರು ವರ್ತಮಾನದ ತಲ್ಲಣಗಳಲ್ಲಿ ಕೆಲವನ್ನು ಆಯ್ಕೆ ಮಾಡಿಕೊಳ್ಳುತ್ತಾರೆ. ಸಾರ್ವಕಾಲಿಕ ಆಗಬಹುದಾದ ಕೆಲವು ಸತ್ಯಗಳು ಸಹಜವಾಗೇ ಅವರನ್ನು ಒಲಿಯುತ್ತವೆ. ಎಲ್ಲ ಪ್ರಯತ್ನ, ಪ್ರಯೋಗಗಳ ಹಿಂದೆ ಒಂದು ಜೀವಪರ ನಿಲುವಿದೆ. ಒಳ್ಳೆಯ ಮನುಷ್ಯನಾಗೇ ಇರುವ, ಅನ್ಯರನ್ನು ಹಿಂಸಿಸದೆ ಬದುಕನ್ನು ಕಟ್ಟಿಕೊಳ್ಳುವ ಆ ಮೂಲಕ ರಂಗಕ್ರಿಯೆಯನ್ನು ರೂಪಿಸುವ ಸದ್ಭಾವವಿದೆ ಎಂಬುದೇ ರಂಗಭೂಮಿಗಿರುವ ದೊಡ್ಡ ಭರವಸೆ. ಮಹತ್ತನ್ನು ಸಾಧಿಸಬಯಸಿ ಬಂದವರಿಗೆ ನಿರೀಕ್ಷಿಸಿದ್ದು ಸಿಕ್ಕಿಲ್ಲ. ಬದುಕು ಮತ್ತು ಮಹತ್ವಾಕಾಂಕ್ಷೆಗಳ ನಡುವಿನ ತಾಕಲಾಟ, ಅವರು 'ಇಸಂ'ಗಳು ಬೇಕಿಲ್ಲ, ಹೊರೆಯಾಗುತ್ತಿದೆ ಎನ್ನುತ್ತಲೇ ಮನುಷ್ಯತ್ವದ ಬಗ್ಗೆ, ಸ್ನೇಹ–ಪ್ರೀತಿಯ ಬಗ್ಗೆ ಮಾತನಾಡುತ್ತಿದ್ದಾರೆ. ಎಲ್ಲ ತತ್ತ್ವಗಳೂ ಅಂತಿಮವಾಗಿ ಹೇಳುವುದೂ ಮನುಷ್ಯತ್ವವನ್ನು. ಒಳ್ಳೆಯದು ಮಾಡು, ಸಮ ಸಮಾಜ ನಿರ್ಮಿಸು ಎಂಬುದನ್ನೇ. ತಾತ್ತ್ವಿಕತೆ ಹಣೆಪಟ್ಟಿ ಅನ್ನಿಸಿದೆ, ಬೇಡ. ಆದರೆ ಇಲ್ಲಿರುವ ಆರೋಗ್ಯಕರ ಮನಸ್ಸುಗಳ ತುಡಿತವೆಲ್ಲವೂ ಶುದ್ಧ ರಂಗಭೂಮಿ, ಪ್ರೇಕ್ಷಕನನ್ನು ತಲುಪುವುದು ಹೇಗೆ ಎಂಬ ಅನ್ವೇಷಣೆಯತ್ತಲೇ ಎಂಬುದು ಮುಖ್ಯ. ಕ್ಷಣ ಕ್ಷಣಕ್ಕೂ ಏರಿ ಬರುತ್ತಿರುವ ಈ ಕ್ಷಣದ ನೋಟು ಅಮಾನ್ಯೀಕರಣ, ತೆರಿಗೆ, ಅಭಿವ್ಯಕ್ತಿಗಿರುವ ಆತಂಕ, ಹೆಣ್ಣು ಮಕ್ಕಳಿಗಿರುವ ಅಭದ್ರತೆ ಹೀಗೆ ಪುಂಖಾನುಪುಂಖವಾಗಿ ನುಗ್ಗುವ ಸಮಸ್ಯೆಗಳನ್ನು ನೇರವಾಗಿ ಪ್ರಶ್ನಿಸಲು ಸಾಧ್ಯವಾಗದಷ್ಟಿದೆ ಅವುಗಳ ವೇಗ. ಆದರೆ ಎಲ್ಲಕ್ಕೂ ಉತ್ತರ ನಿಜವಾದ ಮನುಷ್ಯನಾಗು, ಬದುಕನ್ನು ಪ್ರೀತಿಸು ಎಂಬುದಲ್ಲಿಯೇ ಇದೆಯಲ್ಲ. ಅದನ್ನೇ ಮತ್ತಷ್ಟು ಸಮರ್ಥವಾಗಿ ಹೇಳಲು ಈ ಸೃಜನಶೀಲ ಮನಸ್ಸುಗಳ ತುಡಿತ, ಹುಡುಕಾಟ ನಡೆದಿದೆ; ಇದು ಮುಂದೆ ಸಾಗಲಿ.

**ಡಾ|| ವಿಜಯಾ**
ಇಳಾ ಪ್ರಿಂಟರ್ಸ್, ನಂ. ೩೬, ೪೦ ಅಡಿ ರಸ್ತೆ, ರಾಘವನಗರ
ನ್ಯೂ ಟಿಂಬರ್‌ಯಾರ್ಡ್ ಲೇಔಟ್, ಬೆಂಗಳೂರು – ೫೬೦ ೦೨೬






ಶ್ರೀ ಸಿದ್ದರಾಮಯ್ಯ
ಸನ್ಮಾನ್ಯ ಮುಖ್ಯಮಂತ್ರಿಗಳು

# ಅನ್ನಭಾಗ್ಯ
## ಇದು ಬರಿ ಯೋಜನೆಯಲ್ಲ
ಕಡುಬಡವರ ಆತ್ಮವಿಶ್ವಾಸ ಮತ್ತು ಸ್ವಾಭಿಮಾನದ ಸಂಕೇತ



ಶ್ರೀ ಯು. ಟಿ. ಖಾದರ್
ಮಾನ್ಯ ಆಹಾರ ಮತ್ತು
ನಾಗರೀಕ ಸರಬರಾಜು ಹಾಗೂ
ಗ್ರಾಹಕ ವ್ಯವಹಾರಗಳ ಸಚಿವರು



ಶ್ರೀ ಹಾಜೀ ಶಫೀ ಉಲ್ಲಾ
ಮಾನ್ಯ ಅಧ್ಯಕ್ಷರು



**ಕರ್ನಾಟಕ ಆಹಾರ ಮತ್ತು ನಾಗರಿಕ ಸರಬರಾಜು ನಿಗಮ ನಿಯಮಿತ**
**(ಕರ್ನಾಟಕ ಸರ್ಕಾರದ ಒಂದು ಉದ್ಯಮ)**



ಶ್ರೀ ಶ್ರೀನಿವಾಸ ಎನ್.
ಮಾನ್ಯ ಉಪಾಧ್ಯಕ್ಷರು



## ನಾಡಿನ ಸಮಸ್ತ ಪಡಿತರ ಚೀಟಿ ಫಲಾನುಭವಿಗಳಿಗೂ
## ಹಾಗೂ ಸಮಸ್ತ ನಾಡಿನ ಜನತೆಗೆ ಹೊಸ ವರ್ಷದ ಹಾರ್ದಿಕ ಶುಭಾಶಯಗಳು
# 2018

# ಜಿಎಸ್‌ಟಿ

# ಅನೌಪಚಾರಿಕ ವಲಯದ ಆಕ್ರಂದನ

### ಪ್ರಸ್ತಾವನೆ

ಅನಾಣ್ಯೀಕರಣ ಮತ್ತು ಸರಕು ಮತ್ತು ಸೇವೆ ತೆರಿಗೆ (ಜಿಎಸ್‌ಟಿ) ಎರಡೂ ತಾತ್ವಿಕವಾಗಿ ಒಂದೇ ಅಲ್ಲ. ಒಂದು ಹಣ ಚಲಾವಣೆ, ಕಪ್ಪುಹಣ, ಖೋಟಾ ನೋಟು ಮುಂತಾದವುಗಳಿಗೆ ಸಂಬಂಧಿಸಿದ್ದರೆ, ಮತ್ತೊಂದು ಪ್ರತಿಯೊಬ್ಬರೂ ಸರ್ಕಾರಕ್ಕೆ ತೆರಬೇಕಾದ ಪರೋಕ್ಷ ತೆರಿಗೆಗೆ ಸಂಬಂಧಿಸಿದೆ. ಮೊದಲನೆಯದು, ೨೦೧೬ರ ನವೆಂಬರ್ ೮ರಂದು ಅನುಷ್ಠಾನಗೊಂಡು ಕೆಲವು ತಿಂಗಳ ನಂತರ ಮರುನಾಣ್ಯೀಕರಣ ಪ್ರಕ್ರಿಯೆ ಮುಗಿದಮೇಲೆ ಅದರ ಚಟುವಟಿಕೆ ಮುಗಿಯಿತು. ಆದರೆ ೨೦೧೭ರ ಜುಲೈ ೧ರಂದು ಜಾರಿಗೆ ಬಂದ ಜಿಎಸ್‌ಟಿಯು ಶಾಶ್ವತವಾಗಿ ನಮ್ಮ ಆರ್ಥಿಕತೆಯ ಭಾಗವಾಗಿ ಮುಂದುವರಿಯುವ ಒಂದು ಪ್ರಕ್ರಿಯೆಯಾಗಿದೆ. ಇವೆರಡರ ಪರಿಣಾಮಗಳು, ಅವು ಉಂಟುಮಾಡಿರುವ-ಮಾಡುತ್ತಿರುವ ಅನಾಹುತಗಳು, ಅವಘಡಗಳು ಮಾತ್ರ ಸಮಾನವಾಗಿವೆ. ಅನಾಣ್ಯೀಕರಣವು ಉಂಟುಮಾಡಿದ್ದ ಪರಿಣಾಮಗಳನ್ನೆಲ್ಲ ಜಿಎಸ್‌ಟಿಯು ಬೇರೊಂದು ರೂಪದಲ್ಲಿ ಮುಂದುವರಿಸಿದೆ. ಅನಾಣ್ಯೀಕರಣದಲ್ಲಿ ಉಳ್ಳವರಿಗೆ ಯಾವ ಧಕ್ಕೆಯಾಗಲಿಲ್ಲ. ಈಗ ಜಿಎಸ್‌ಟಿಯಲ್ಲಿಯೂ ಅವರಿಗೆ ಧಕ್ಕೆಯುಂಟಾಗಿಲ್ಲ. ಆದರೆ ಉಳಿದವರಿಗೆ ಮಾತ್ರ ಇವು ಮೃತ್ಯುಪ್ರಾಯವಾಗಿಬಿಟ್ಟಿವೆ. ಪ್ರಸ್ತುತ ಪ್ರಬಂಧದಲ್ಲಿ ಜಿಎಸ್‌ಟಿಯು ಆರ್ಥಿಕತೆಯಲ್ಲಿನ ಅಸಂಘಟಿತ ವಲಯವನ್ನು ಹೇಗೆ ಸಾಯಗೊಳಿಸುತ್ತಿದೆ ಎಂಬುದನ್ನು ವಿವರವಾಗಿ ಪರಿಶೀಲಿಸಲಾಗಿದೆ. ತೆರಿಗೆ ದರಗಳು ಇಷ್ಟಿರಬೇಕಾಗಿತ್ತು, ಅಷ್ಟಿರಬೇಕಾಗಿತ್ತು, ಶೇ. ೨೮ ಅತಿಯಾಯಿತು, ಅದನ್ನು ಶೇ. ೧೮ಕ್ಕೆ, ಶೇ. ೧೨ಕ್ಕೆ ಇಳಿಸಬೇಕು ಮುಂತಾದ ಸಂಗತಿಗಳ ಬಗ್ಗೆ ಜಿಎಸ್‌ಟಿ ಮಂಡಳಿಯ ಸಭೆಗಳಲ್ಲಿ ಚರ್ಚೆಗಳು ನಡೆಯುತ್ತಿವೆ. ಅಲ್ಲಿ ತೆಗೆದುಕೊಳ್ಳುತ್ತಿರುವ ಕ್ರಮಗಳು ತೆರಿಗೆ ದರದ ಬದಲಾವಣೆಗೆ ಸಂಬಂಧಿಸಿವೆ. ಜಿಎಸ್‌ಟಿ ಮಂಡಳಿಯ ಸಭೆಯಲ್ಲಿ ನಡೆಯುತ್ತಿರುವ ಕ್ರಮವು ಇದೇ ಆಗಿದೆ. ಈ ತೆರಿಗೆಯನ್ನು ಕುರಿತ ಚರ್ಚೆಯಲ್ಲಿ ಅದು ಅಷ್ಟು ಮುಖ್ಯವಲ್ಲ. ವಾಣಿಜ್ಯೋದ್ಯಮ ಸಂಘಟನೆಗೆ ಇದು ಮುಖ್ಯವಾಗಿರಬಹುದು. ರೆವಿನ್ಯೂಗಾಗಿ ತಹತಹಿಸುತ್ತಿರುವ ಸರ್ಕಾರಕ್ಕೆ ಇದು ಮಹತ್ವದ್ದಾಗಿರಬಹುದು. ಅದಕ್ಕಾಗಿ ಅದು ಜಿಎಸ್‌ಟಿಗೆ ಬೆಂಬಲವಾಗಿ ನಿಂತಿದೆ. ಲೆಕ್ಕಪರಿಶೋಧಕರಿಗೆ ಇದು ಹಣ ತರುವ ಸಂಗತಿಯಾಗಿರಬಹುದು. ಜಿಎಸ್‌ಟಿಯಲ್ಲಿ ವ್ಯಾಪಾರಗಾರರು ಅನೇಕ ಬಗೆಯ ರಿಟರ್ನ್ಸ್‌ಗಳನ್ನು ಪ್ರತಿ ತಿಂಗಳು ತಂತ್ರಾಂಶದಲ್ಲಿ ಆನ್‌ಲೈನಿನಲ್ಲಿ ತುಂಬಿ ಇಲಾಖೆಗೆ ಸಲ್ಲಿಸಬೇಕು. ಶೇ. ೯೦ರಿಂದ ಶೇ. ೯೫ರಷ್ಟು ವ್ಯಾಪಾರಗಾರರು ಸಣ್ಣಪುಟ್ಟ ವ್ಯವಹಾರ ಮಾಡುತ್ತಿರುತ್ತಾರೆ. ಇವರಿಗೆಲ್ಲ ಇಂತಹ ರಿಟರ್ನ್ಸ್‌ಗಳನ್ನು ಸ್ವಂತವಾಗಿ ತುಂಬುವುದು ಸಾಧ್ಯವಿಲ್ಲ. ಸಹಜವಾಗಿ ಅವರು ಲೆಕ್ಕಪರಿಶೋಧಕರನ್ನು ಅದಕ್ಕಾಗಿ ನೇಮಿಸಿಕೊಳ್ಳಬೇಕಾಗುತ್ತದೆ. ಇದಕ್ಕೆ ಅವರು ಹಣ ತೆರಬೇಕಾಗುತ್ತದೆ. ತೆರಿಗೆ ಭಾರವನ್ನು ಹೊರುವುದರ ಜೊತೆಗೆ ವ್ಯಾಪಾರಗಾರರು ಈಗ ತೆರಿಗೆ ನಿರ್ವಹಣೆಯ ವೆಚ್ಚವನ್ನು ಭರಿಸಬೇಕಾಗಿದೆ. ದುಡಿಮೆಗೆ ಅಪಾರ ಅವಕಾಶಗಳಿರುವುದರಿಂದ ಲೆಕ್ಕಪರಿಶೋಧಕರು ಜಿಎಸ್‌ಟಿಯನ್ನು ಸ್ವಾಗತಿಸುತ್ತಿದ್ದಾರೆ. ಪ್ರಸ್ತುತ ಪ್ರಬಂಧದಲ್ಲಿ ಅತಂಹ ಸಂಗತಿಗಳನ್ನು ಬಿಟ್ಟು ಸದರಿ ತೆರಿಗೆಯ ತಾತ್ವಿಕ ಸಂಗತಿಗಳನ್ನು ಚರ್ಚೆಗೆ ಒಳಪಡಿಸಲಾಗಿದೆ. ನಮ್ಮ ಸಂವಿಧಾನದ ವಿವೇಕಶಾಲಿ ಕರ್ತೃಗಳು ಕಟ್ಟಿರುವ ಒಕ್ಕೂಟ ವ್ಯವಸ್ಥೆಗೆ ಉಂಟುಮಾಡಿರುವ ಅಪಾಯವನ್ನು ಇಲ್ಲಿ ಚರ್ಚಿಸಲಾಗಿದೆ. ಅಸಂಘಟಿತ ವಲಯವನ್ನು ಇದು ಹೇಗೆ ಶೋಷಣೆಗೆ ಒಳಪಡಿಸಿದೆ ಅನ್ನುವುದನ್ನು ಚರ್ಚೆಯ ಮುಂಚೂಣಿಗೆ ತರಲು ಪ್ರಯತ್ನಿಸಲಾಗಿದೆ.

ಡಾ॥ ಟಿ. ಆರ್. ಚಂದ್ರಶೇಖರ

### ಭಾಗ - ೧

### ಒಕ್ಕೂಟ ವ್ಯವಸ್ಥೆ ಮತ್ತು ಜಿಎಸ್‌ಟಿ

ನಮ್ಮದು ಒಕ್ಕೂಟ ರಾಜಕೀಯ ವ್ಯವಸ್ಥೆ. ನಮ್ಮ ಸಂವಿಧಾನದಲ್ಲಿ ಕೇಂದ್ರ ಮತ್ತು ರಾಜ್ಯ ಸರ್ಕಾರಗಳಿಗೆ ಸಮಾನ ಹಕ್ಕುಗಳನ್ನು, ಅಧಿಕಾರಗಳನ್ನು ಮತ್ತು ಕರ್ತವ್ಯಗಳನ್ನು ನೀಡಲಾಗಿದೆ. ನಮ್ಮ ಸಂವಿಧಾನವು ಆಶಯದಲ್ಲಿ ಏಕಾತ್ಮಕವೂ, ರಾಜಕೀಯವಾಗಿ ಬಹುವಚನರೂಪಿಯೂ ಆಗಿದೆ ಎಂದು ಹೇಳಲಾಗುತ್ತಿದೆ. ತೆರಿಗೆಗಳನ್ನು ವಿಧಿಸುವ ಅಧಿಕಾರವನ್ನು ಸಂವಿಧಾನವು ಕೇಂದ್ರ ಮತ್ತು ರಾಜ್ಯಗಳಿಗೂ ನೀಡಿದೆ. ಆದರೆ ಜಿಎಸ್‌ಟಿ ಅಧಿಸೂಚನೆಯು ಜಾರಿಗೊಂಡ ಮೇಲೆ ತೆರಿಗೆಗಳನ್ನು ವಿಧಿಸುವ ಹಕ್ಕನ್ನು ರಾಜ್ಯಗಳು ಕಳೆದುಕೊಂಡು ಬಿಟ್ಟಿವೆ. ಈಗ ತೆರಿಗೆಗಳಿಗೆ ಸಂಬಂಧಿಸಿದಂತೆ ತೀರ್ಮಾನಗಳನ್ನು ಕೇಂದ್ರ ಜಿಎಸ್‌ಟಿ ಮಂಡಳಿ ಮಾತ್ರ ತೆಗೆದುಕೊಳ್ಳಬಹುದು. ನಿಜ, ಈ ಮಂಡಳಿಯಲ್ಲಿ ಪ್ರತಿ ರಾಜ್ಯದ ಹಣಕಾಸು ಮಂತ್ರಿ ಸದಸ್ಯರಾಗಿರುತ್ತಾರೆ. ಆದರೆ ಅಲ್ಲಿ ಶೇ. ೩೩ರಷ್ಟು ಮತದಾನದ ಹಕ್ಕು ಕೇಂದ್ರಕ್ಕಿರುತ್ತದೆ. ಇದರಿಂದಾಗಿ ಈಗ ರಾಜ್ಯಗಳು ರಾಜಸ್ವಗಳಿಗೆ ಕೇಂದ್ರವನ್ನು ಅವಲಂಬಿಸಬೇಕಾಗಿದೆ. ಅಂದರೆ ತೆರಿಗೆಗಳಿಗೆ ಸಂಬಂಧಿಸಿದಂತೆ ರಾಜ್ಯಗಳು ಸ್ವಾಯತ್ತತೆಯನ್ನು ಮಾತ್ರವಲ್ಲ, ಸ್ವಾತಂತ್ರ್ಯವನ್ನೂ ಕಳೆದುಕೊಂಡು ಬಿಟ್ಟಿವೆ. ನಮ್ಮ ದೇಶದಲ್ಲಿದ್ದ ಅಪ್ರತ್ಯಕ್ಷ ತೆರಿಗೆಗಳಿಗೆ ಸಂಬಂಧಿಸಿದ ಬಹುವಚನ ವಿನ್ಯಾಸ ಬದಲಾಗಿ ಈಗ ಅದು ಏಕಾತ್ಮಕ ವ್ಯವಸ್ಥೆಯಾಗಿದೆ. ಆಶಯದಲ್ಲಿ ಮಾತ್ರ ಏಕಾತ್ಮಕವಾಗಿದ್ದ ನಮ್ಮ ಸಂವಿಧಾನ ಈಗ ರಾಜಕೀಯವಾಗಿಯೂ

ಏಕಾತ್ಮಕವಾಗುವ ಮತ್ತು ಪ್ರಾಯೋಗಿಕವಾಗುವ ಪ್ರವೃತ್ತಿಯನ್ನು ತೋರಿಸುತ್ತಿದೆ. ಈಗ ರಾಜ್ಯಗಳು ಸ್ವತಂತ್ರವಾಗಿ ತಮ್ಮ ಅಭಿವೃದ್ಧಿ ಮಾದರಿಗೆ ಅನುಗುಣವಾಗಿ ರಾಜಸ್ವವನ್ನು ಸಂಗ್ರಹಿಸಿಕೊಳ್ಳುವ, ತೆರಿಗೆ ದರಗಳನ್ನು ಬದಲಾಯಿಸುವ, ಹೊಸ ತೆರಿಗೆಗಳನ್ನು ವಿಧಿಸುವ ಅಧಿಕಾರವನ್ನು ಕಳೆದುಕೊಂಡುಬಿಟ್ಟಿವೆ. ಅವು ಈಗ ಪರಾವಲಂಬಿಗಳಾಗುತ್ತವೆ.

ನಮ್ಮ ದೇಶದಲ್ಲಿ ಪ್ರಾಚೀನಕಾಲದಿಂದಲೂ ರಾಜಕೀಯವಾಗಿ ಬಹುವಚನ ಸ್ವರೂಪದ ಬಗ್ಗೆ ಚಿಂತನೆ–ಚರ್ಚೆ ನಡೆಯುತ್ತಲೇ ಬಂದಿದೆ. ಕರ್ನಾಟಕದ ಉದಾಹರಣೆಯನ್ನೇ ನೋಡುವುದಾದರೆ ೧೦ನೆಯ ಶತಮಾನದ ಕಂದಪದ್ಯದಲ್ಲಿ ಒಂದು ಪ್ರದೇಶವು ವಿಶ್ವದಲ್ಲಿ ವಿಲೀನವಾಗಿದ್ದೂ ವಿಶಿಷ್ಟವಾಗಿರುವ ಕ್ರಮವನ್ನು ಮಂಡಿಸಲಾಗಿದೆ. ಅದರ ಪಾಠ ಹೀಗಿದೆ :

*ಕಾವೇರಿಯಿಂದಮಾ ಗೋದಾವರಿವರಮಿರ್ಪ*
*ನಾಡದಾ ಕನ್ನಡದೊಳ್ ಭಾವಿಸಿದ ಜನಪದಂ*
*ವಸುಧಾ ವಲಯ ವಿಲೀನ ವಿಶದ ವಿಷಯ ವಿಶೇಷಂ*

– ಈ ಪದ್ಯದ ಮೊದಲೆರಡು ಸಾಲುಗಳ ಬಗ್ಗೆ ನಾವು ಮತ್ತೆ ಮತ್ತೆ ಚರ್ಚೆ ಮಾಡುತ್ತಿರುತ್ತೇವೆ. ಅದು ಇಲ್ಲಿ ಅಗತ್ಯವಿಲ್ಲ. ನಮ್ಮ ಸಂದರ್ಭದಲ್ಲಿ ಅದರ ಮೂರನೆಯ ಸಾಲು ಮಹತ್ವವಾದುದು. ಅದರಲ್ಲಿ ಹೇಳಿರುವಂತೆ ಕನ್ನಡ ಜನಪದ ವಸುಧೆಯಲ್ಲಿ ವಿಲೀನವಾಗಿದ್ದರೂ ಅದು ತನ್ನ ವಿಶೇಷತೆಯನ್ನು (ಐಡೆಂಟಿಟಿ) ಕಾಯ್ದುಕೊಂಡಿದೆ. ಹತ್ತನೆಯ ಶತಮಾನದಿಂದಲೂ ಕರ್ನಾಟಕವು ವಿಶಿಷ್ಟವಾಗಿ ಮುಂದುವರಿದುಕೊಂಡು ಬಂದಿದೆ. ಹತ್ತನೆಯ ಶತಮಾನದಲ್ಲಿ ಕರ್ನಾಟಕ ಅನ್ನುವುದು ಇತ್ತೇ ಅಂದರೆ ಉತ್ತರ ಸಹಜವಾಗಿ ಇಲ್ಲ ಎಂದೇ. ರಾಜಕೀಯವಾಗಿ ಅನೇಕ ರಾಜ್ಯಗಳು–ರಾಜಪ್ರಭುತ್ವಗಳು ಇದ್ದಿರಬಹುದು. ಆದರೆ ಕರ್ನಾಟಕ ಎಂದು ಭಾವಿಸಿದ ಒಂದು ಪ್ರದೇಶವಿತ್ತು ಅನ್ನುವುದೂ ನಿಜ. ಇಲ್ಲಿ 'ವಿಲೀನತೆ'ಯು ಏಕಾತ್ಮಕತೆಯನ್ನು ಸೂಚಿಸಿದರೆ 'ವಿಶೇಷತೆ'ಯು ಬಹುವಚನ ಸ್ವರೂಪವನ್ನು ಸಂಕೇತಿಸುತ್ತದೆ. ರಾಜ್ಯಗಳ ತೆರಿಗೆ ವಿಧಿಸುವ ಅಧಿಕಾರವನ್ನು ಕೇಂದ್ರದಲ್ಲಿ ವಿಲೀನಗೊಳಿಸಿ ಜಿಎಸ್‌ಟಿಯು ಇಲ್ಲಿನ ಒಕ್ಕೂಟ ವ್ಯವಸ್ಥೆಯನ್ನು ದುರ್ಬಲಗೊಳಿಸುತ್ತಿದೆ. 'ಒಂದು ತೆರಿಗೆ, ಒಂದು ಮಾರುಕಟ್ಟೆ, ಒಂದು ಆರ್ಥಿಕತೆ' ಅನ್ನುವ ಮಂತ್ರವನ್ನು ಜಪಿಸುತ್ತಾ ಕೇಂದ್ರವು ಬೃಹತ್ತಿನ ಬಗ್ಗೆ ಮಾತನಾಡುತ್ತಿದೆ. ಮೈಸೂರು ಬ್ಯಾಂಕನ್ನು ಭಾರತೀಯ ಸ್ಟೇಟ್ ಬ್ಯಾಂಕಿನಲ್ಲಿ ವಿಲೀನಗೊಳಿಸಿದ್ದನ್ನು ಇದೇ ನೆಲೆಯಲ್ಲಿ ಅರ್ಥ ಮಾಡಿಕೊಳ್ಳಬೇಕು. ನಮ್ಮ ದೇಶದ ಸಂದರ್ಭದಲ್ಲಿ ಒಂದು ಮಾರುಕಟ್ಟೆ ಅನ್ನುವುದು, ಒಂದು ಆರ್ಥಿಕತೆ ಅನ್ನುವುದು ಒಂದು ಭ್ರಮೆ. ಅದೊಂದು ಅಸಾಧ್ಯವಾದ ಮತ್ತು ಅಸಾಧುವಾದ ಕ್ರಮ. ಅಖಂಡತೆಯಲ್ಲಿ ಏಕತೆಗಿಂತ ಏಕತೆಯಲ್ಲಿ ಅಖಂಡತೆಯನ್ನು ಕಾಣುವುದು ಹೆಚ್ಚು ವಿಹಿತ.

**ಅಖಂಡತೆ ಅನ್ನುವುದು ಆರ್ಥಿಕತೆ ದೃಷ್ಟಿಯಿಂದ ಅಪಾಯಕಾರಿ !!**

ಇಡೀ ದೇಶಕ್ಕೆ ಒಂದು ಮಾರುಕಟ್ಟೆ, ಒಂದು ಆರ್ಥಿಕತೆ ಅನ್ನುವ ಅಖಂಡತೆಯು ಅನೇಕ ಅನುಕೂಲಗಳನ್ನು ತರಬಹುದು. ಅದರಲ್ಲಿ ಅದರದೇ ಆದ ಗುಣಗಳಿರಬಹುದು. ಆದರೆ ಅದರ ಮತ್ತೊಂದು ಮುಖವನ್ನು ಪರಿಶೀಲಿಸುವ ಅಗತ್ಯವಿದೆ. ಒಂದು ವೇಳೆ ಮಾರುಕಟ್ಟೆಯಲ್ಲಿ ಕುಸಿತ ಉಂಟಾದರೆ, ಆರ್ಥಿಕ ಹಿಂಜರಿತ ಸಂಭವಿಸಿದರೆ (೨೦೦೮ರ ಜಾಗತಿಕ ಆರ್ಥಿಕ ಕುಸಿತ) ಅದರ ಪರಿಣಾಮಗಳು ಇಡೀ ಆರ್ಥಿಕತೆಯ ಮೇಲಾಗುತ್ತದೆ. ಸಮಾಜದ ಎಲ್ಲರೂ ಕಷ್ಟ ಅನುಭವಿಸಬೇಕಾಗುತ್ತದೆ. ಆದರೆ ಬಹುವಚನ ಮಾರುಕಟ್ಟೆಯಲ್ಲಿ ಇಂತಹ ಅಪಾಯವನ್ನು ತಡೆಯುವ ವ್ಯವಸ್ಥೆಯು ಆಂತರಿಕವಾಗಿಯೇ ಇರುತ್ತದೆ. ಬಹುವಚನ ಮಾರುಕಟ್ಟೆಯ ಒಂದು ಭಾಗದಲ್ಲಿ ಕುಸಿತ ಅಥವಾ ಆರ್ಥಿಕ ಹಿಂಜರಿತ ಉಂಟಾದರೆ ಅದನ್ನು ಕುಸಿತದಿಂದ ಮುಕ್ತವಾಗಿರುವ ಮಾರುಕಟ್ಟೆಯ ಮತ್ತೊಂದು ಭಾಗ ರಕ್ಷಿಸಬಲ್ಲದು. ಅಕ್ಕಿಯ ಮಾರುಕಟ್ಟೆಯಲ್ಲಿ ಬಿಕ್ಕಟ್ಟು ಉಂಟಾದರೆ ಅದರ ಪರಿಣಾಮಗಳನ್ನು ಗೋಧಿ ಅಥವಾ ಹತ್ತಿ ಮಾರುಕಟ್ಟೆಯು ಆರ್ಥಿಕತೆಯ ರಕ್ಷಣೆಗೆ ಬರಬಹುದು.

ಮಾರುಕಟ್ಟೆಯ ಒಂದು ಭಾಗದಲ್ಲಿ ಕುಸಿತ ಉಂಟಾಗಿ ಉದ್ಯೋಗದ ಅವಕಾಶಗಳು ಕುಂಠಿತಗೊಂಡರೆ ಅದರ ಮತ್ತೊಂದು ಭಾಗ ದುಡಿಮೆಗಾರರಿಗೆ ಭದ್ರತೆಯನ್ನು ಒದಗಿಸಬಲ್ಲದು. ಇದೊಂದು ಸರಳ ಅರ್ಥಶಾಸ್ತ್ರ ತತ್ವ. ಭಾರತದಂತಹ ಬಹುರೂಪಿ ಸಮಾಜದಲ್ಲಿ ಅಖಂಡತೆ ಅನ್ನುವುದು ಅಭಿವೃದ್ಧಿಗೆ ಮಾರಕವಾಗುತ್ತದೆ. ಜಿಎಸ್‌ಟಿಗೆ ಇಂತಹ ಅಪಾಯವನ್ನು ತಡೆಯುವ ಶಕ್ತಿಯಿಲ್ಲ. ಅಖಂಡತೆಯ ಅಪಾಯವೂ ಅಖಂಡವಾಗಿರುತ್ತದೆ.

ಈ ಬೃಹತ್ತಿನ/ಅಖಂಡತೆಯ ಬಗ್ಗೆ ಕೇಂದ್ರವು ಒಂದು ಸಮರ್ಥನೆಯನ್ನು ನೀಡುತ್ತಿದೆ. ಬಹುವಚನ ವ್ಯವಸ್ಥೆಯಲ್ಲಿ ರಾಜ್ಯಗಳು ನಡೆಸುವ ಚಟುವಟಿಕೆಗಳಲ್ಲಿ ಆರ್ಥಿಕ ಗುಣಮಟ್ಟ ಮತ್ತು ಹಣಕಾಸು ಶಿಸ್ತು ಕಂಡುಬರುವುದಿಲ್ಲ ಮತ್ತು ತೆರಿಗೆಗಳ್ಳತನ, ಭ್ರಷ್ಟಾಚಾರ, ಕಾಳಸಂತೆಯನ್ನು ಇಲ್ಲಿ ತಡೆಯುವುದಕ್ಕೆ ಸಾಧ್ಯವಿಲ್ಲ. ಕೇಂದ್ರವು ಅತ್ಯಂತ ಗುಣಮಟ್ಟದ ಕಾರ್ಯಕ್ರಮಗಳನ್ನು ಶಿಸ್ತುಬದ್ಧವಾಗಿ ಮತ್ತು ಭ್ರಷ್ಟಾಚಾರ ಮುಕ್ತವಾಗಿ ನಡೆಸಬಲ್ಲದು ಎಂಬುದು ಇಲ್ಲಿ ಗೃಹೀತ. ಈ ತಾತ್ವಿಕ ಹಿನ್ನೆಲೆಯಲ್ಲಿ ಕೇಂದ್ರವು ರಾಜ್ಯಗಳನ್ನು ಅಪರಾಧಿ ಸ್ಥಾನದಲ್ಲಿ ನಿಲ್ಲಿಸಿದೆ. ನೀಟ್ ಪರೀಕ್ಷೆಯ ಬಗ್ಗೆಯೂ ಇದೇ ಕಾರಣವನ್ನು ನೀಡಲಾಗುತ್ತಿದೆ. ರಾಜ್ಯಗಳು ಅಂದರೆ ಭ್ರಷ್ಟಾಚಾರ, ರಾಜ್ಯಗಳು ಅಂದರೆ ಹಣಕಾಸು ಅಶಿಸ್ತು, ರಾಜ್ಯಗಳು ಅಂದರೆ ದುರ್ಬಲ ಗುಣಮಟ್ಟ ಎಂದು ಕೇಂದ್ರವು ಹಣೆಪಟ್ಟಿ ಹಚ್ಚುತ್ತಿದೆ. ಆದರೆ ಕೇಂದ್ರದ ನೆಲೆಯಲ್ಲಿ ನಡೆಯುವ ಚಟುವಟಿಕೆಗಳು ಎಷ್ಟು ಶಿಸ್ತುಬದ್ಧವಾಗಿ ನಡೆಯುತ್ತಿವೆ ಎಂಬುದು ಎಲ್ಲರಿಗೂ ತಿಳಿದಿದೆ. ಇದಕ್ಕೆ ಒಂದು ಪ್ರಮುಖ ಉದಾಹರಣೆ ಎಂದರೆ ಭಾರತೀಯ ವೈದ್ಯಕೀಯ ಮಂಡಳಿಯ ಕಾರ್ಯವೈಖರಿ. ಅಶಿಸ್ತು ಅನ್ನುವುದು ಅಕ್ರಮಗಳು, ಕಳಪೆತನ, ಭ್ರಷ್ಟಾಚಾರ, ಸ್ವಜನಪಕ್ಷಪಾತ ಇವೆಲ್ಲವೂ ರಾಜ್ಯಗಳಿಗೆ ಅಥವಾ ಕೇಂದ್ರಕ್ಕೆ ವಿಶಿಷ್ಟವಾದ ಸಂಗತಿಯೇನಲ್ಲ. ಅದು ಎಲ್ಲ ಕಡೆಯೂ ಕಂಡುಬರುತ್ತದೆ. ಈ ವಿಷಯದಲ್ಲಿ ರಾಜ್ಯಗಳನ್ನು ಅಪರಾಧಿ ಸ್ಥಾನದಲ್ಲಿ ನಿಲ್ಲಿಸುವುದು ಅಥವಾ ಅವುಗಳನ್ನು ದುರ್ಬಲಗೊಳಿಸುವುದು ಆರೋಗ್ಯಕರ ಒಕ್ಕೂಟದ ದೃಷ್ಟಿಯಿಂದ, ವಿವೇಕಯುತ ಬಹುವಚನ ಸಂಸ್ಕೃತಿಯ ರಕ್ಷಣೆಯ ದೃಷ್ಟಿಯಿಂದ ಸರಿಯಾದ ನಡೆಯಲ್ಲ.

**ಭಾಗ – ೨**

**ಜಿಎಸ್‌ಟಿ ಮತ್ತು ಅನೌಪಚಾರಿಕ ವಲಯ**

ಈ 'ಒಂದು ದೇಶ, ಒಂದು ತೆರಿಗೆ' ಅನುಷ್ಠಾನಗೊಂಡ ಮೇಲೆ ಅನೌಪಚಾರಿಕ ವಲಯವನ್ನು ಅನಗತ್ಯ ವಲಯ ಅನ್ನುವಂತೆ ಚಿತ್ರಿಸಲಾಗುತ್ತಿದೆ. ಅನೌಪಚಾರಿಕ ವಲಯ, ಅನೌಪಚಾರಿಕ ಮಾರುಕಟ್ಟೆ ತಿರಸ್ಕಾರದ ಸಂಗತಿಯಾಗಿಬಿಟ್ಟಿದೆ. ಅದನ್ನು ತೆರಿಗೆಗಳ್ಳತನದ ವಲಯವೆಂದು ಕರೆಯಲಾಗುತ್ತಿದೆ. ಸರ್ಕಾರವು ನಮ್ಮ ದೇಶವನ್ನು 'ಎ ಟ್ಯಾಕ್ಸ್ ನಾನ್‌ಕಂಪ್ಲಯಂಟ್



ಜಿಎಸ್‌ಟಿ – ದೇಶಕ್ಕೆ ಒಂದೇ ರೂಪದ ತೆರಿಗೆ ಎಂದರೂ ಅದನ್ನು ಎಲ್ಲರೂ ಹಲವು ರೀತಿ ಅರ್ಥ ಮಾಡಿಕೊಂಡಿರೋದ್ರಿಂದ ಹಲವು ರೀತಿ ಗೊಂದಲ ತೆರಿಗೆಗಳಾಗಿವೆ – ಅಲ್ವೆ?

ಸೊಸೈಟಿ' ಎಂದು ಹೇಳುತ್ತಿದೆ. ಡಿಜಿಟಲೈಜೇಶನ್‌ಗೆ ಅದೊಂದು ಅಡ್ಡಿಯೆಂದು ಬಗೆಯಲಾಗಿದೆ. ಅಲ್ಲಿ ಉತ್ಪಾದಕತೆಯು ಕಡಿಮೆ ಎಂದು, ಆದ್ದರಿಂದ ಅವರನ್ನು ಸಂಘಟಿತ ವಲಯಕ್ಕೆ ವರ್ಗಾವಣೆ ಮಾಡಬೇಕೆಂದು ಹೇಳಲಾಗುತ್ತಿದೆ. ಅಸಂಘಟಿತ ವಲಯವನ್ನು ಔಪಚಾರಿಕ ವಲಯದಲ್ಲಿ ವಿಲೀನಗೊಳಿಸಬೇಕು ಎಂಬುದು ಸರ್ಕಾರದ ಗುರಿಯಾಗಿದೆ. ಅದರ ಭಾಗವಾಗಿ ಜಿಎಸ್‌ಟಿ ಜಾರಿಗೆ ಬಂದಿದೆ. ಇಂದು ಜಿಎಸ್‌ಟಿ ದರಗಳ ಬಗ್ಗೆ ಚರ್ಚೆ ನಡೆಯುತ್ತಿದೆ. ಅದು ಶೇ. ೨೮ರಷ್ಟಿರಬೇಕೋ, ಶೇ. ೧೨ ಅಥವಾ ಶೇ. ೮ರಷ್ಟಿರಬೇಕೋ ಅಥವಾ ಶೂನ್ಯವಾಗಿರಬೇಕೋ ಅನ್ನುವ ವಿಷಯದ ಬಗ್ಗೆ ತೀವ್ರ ಚರ್ಚೆಗಳು ನಡೆದಿವೆ. ಇದು ಜಿಎಸ್‌ಟಿಯ ಮೇಲುಮೇಲಿನ, ಅಂದರೆ ಮೇಲ್ಪದರವನ್ನು ಮಾತ್ರ ಕಂಡು ವಿಮರ್ಶಿಸಿದಂತಾಗುತ್ತದೆ. ತೆರಿಗೆ ದರಗಳು ಇಲ್ಲಿ ಸಮಸ್ಯೆಯಲ್ಲ. ಸಮಸ್ಯೆಯಿರುವುದು ಅದರ ತಾತ್ವಿಕ ನೆಲೆಗಟ್ಟಿಗೆ ಸಂಬಂಧಿಸಿದೆ. ಹೇಳಿಕೇಳಿ ಇದು ಪರೋಕ್ಷ ತೆರಿಗೆ. ಒಬ್ಬ ಅಂಕಣಕಾರ ಹೇಳಿದಂತೆ ತಂಪು ಪಾನೀಯವನ್ನು ಖರೀದಿಸಿದಾಗ ಕಾರಿನ ಮಾಲೀಕ ಎಷ್ಟು ತೆರಿಗೆ ದರ ನೀಡುತ್ತಾನೋ ಅಷ್ಟೇ ದರವನ್ನು ಅದರ ಚಾಲಕನು ನೀಡುತ್ತಾನೆ. ಅಂದಮೇಲೆ ಇದರಿಂದ ಬಡವರ ಮೇಲೆ, ಕುರಕುಶಲ ಕೆಲಸಗಾರರ ಮೇಲೆ, ನೇಕಾರರ ಮೇಲೆ, ಮೇದಾರರ ಮೇಲೆ, ಸಾಮಾನ್ಯ ಗ್ರಾಹಕರ ಮೇಲೆ, ಕೂಲಿಕಾರರ ಮೇಲೆ ಸಹಿಸಲು ಸಾಧ್ಯವಾಗದಷ್ಟು ದರದ ತೆರಿಗೆಯನ್ನು ವಿಧಿಸಲಾಗುತ್ತದೆ. ಇದೊಂದು ಅಸಮಾನತೆಯನ್ನು ತೀವ್ರಗೊಳಿಸುವ ತೆರಿಗೆ. ಬಹುಜನರು ಸದರಿ ತೆರಿಗೆ ವ್ಯಾಪ್ತಿಯಲ್ಲಿ ಬರುತ್ತಾರೆ. ಆದರೆ ನೇರ ತೆರಿಗೆ ವ್ಯಾಪ್ತಿಯಲ್ಲಿ ಉಳ್ಳವರು ಮಾತ್ರ ಬರುತ್ತಾರೆ. ನೇರ ತೆರಿಗೆಯನ್ನು ಯಾರಿಗೆ ತೆರಿಗೆಯನ್ನು ನೀಡುವ ಸಾಮರ್ಥ್ಯವಿರುತ್ತದೋ ಅವರಿಗೆ ಅವರ ಸಾಮರ್ಥ್ಯಕ್ಕನುಗುಣವಾಗಿ ವಿಧಿಸಲಾಗುತ್ತದೆ. ನೇರ ತೆರಿಗೆಗಳ ವ್ಯಾಪ್ತಿಯಲ್ಲಿರುವ ಜನರ ಸಂಖ್ಯೆ ಕೇವಲ ಮೂರರಿಂದ ನಾಲ್ಕು ಕೋಟಿ. ಒಟ್ಟು ತೆರಿಗೆ ಸಂಗ್ರಹಣೆಯಲ್ಲಿ ನೇರ ತೆರಿಗೆ ಪ್ರಮಾಣ ೨೦೦೯–೧೦ರಲ್ಲಿ ಶೇ. ೬೦.೭೮ರಷ್ಟಿದ್ದುದು ೨೦೧೪–೧೫ರಲ್ಲಿ ಶೇ. ೫೬.೧೬ಕ್ಕೆ ಮತ್ತು ೨೦೧೫–೧೬ರಲ್ಲಿ ಶೇ. ೫೧ಕ್ಕೆ ಇಳಿದಿದೆ. ದೇಶದಲ್ಲಿನ ಒಟ್ಟು ಜಿಡಿಪಿಯಲ್ಲಿ ಅರ್ಧಕ್ಕಿಂತ ಹೆಚ್ಚು ಪಾಲನ್ನು ಜನಸಂಖ್ಯೆಯ ಶೇ. ೧೦ರಷ್ಟು ಉದ್ಯಮಪತಿಗಳು ಪಡೆಯುತ್ತಿದ್ದಾರೆ. ದೇಶದ ಒಟ್ಟು ಜನಸಂಖ್ಯೆಯಲ್ಲಿ ಶೇ. ೯೦ರಷ್ಟಿರುವ ಜನರು ಜಿಡಿಪಿಯಲ್ಲಿ ಶೇ. ೪೩.೮೪ರಷ್ಟು ಪಾಲು ಪಡೆದಿರುವ ಬಡವರು, ದುಡಿಮೆಗಾರರು, ಕರಕುಶಲಕರ್ಮಿಗಳು ಒಟ್ಟು ತೆರಿಗೆ ಮೊತ್ತದಲ್ಲಿ ಶೇ. ೫೦ಕ್ಕಿಂತ ಹೆಚ್ಚು ಪಾಲನ್ನು ನೀಡುತ್ತಿದ್ದಾರೆ. ಇದು ಅಸಮಾನತೆಯ ಸೂಚಿಯಾಗಿದೆ. ಗುಜರಾತ್ ಮತ್ತು ಕರ್ನಾಟಕ ರಾಜ್ಯಗಳ ಉದಾಹರಣೆಗಳನ್ನು ಇಲ್ಲಿ ನೀಡಬಹುದು. ಗುಜರಾತ್ ರಾಜ್ಯದ ೨೦೧೪–೧೫ರ ವರಮಾನ ರೂ. ೭.೬೬ ಲಕ್ಷ ಕೋಟಿ. ಅದು ನೀಡುತ್ತಿರುವ ಒಟ್ಟು ನೇರ ತೆರಿಗೆ ಮೊತ್ತ ರೂ. ೩೫,೯೧೨ ಕೋಟಿ. ಅಂದರೆ ಒಟ್ಟು ವರಮಾನದಲ್ಲಿ ನೇರ ತೆರಿಗೆ ಮೊತ್ತದ ಪ್ರಮಾಣ ಶೇ. ೦.೦೪. ಆದರೆ ಕರ್ನಾಟಕದ ೨೦೧೪–೧೫ರ ವರಮಾನ ರೂ. ೭.೦೨ ಲಕ್ಷ ಕೋಟಿ (ಮೂಲ : ದಿ ವೈರ್. ಏಪ್ರಿಲ್ ೨೯, ೨೦೧೬ ಮತ್ತು ಆರ್ಥಿಕ ಸಮೀಕ್ಷೆ ೨೦೧೬–೧೭). ೨೦೧೪–೧೫ರಲ್ಲಿ ಅದರ ಒಟ್ಟು ವರಮಾನದಲ್ಲಿ ತೆರಿಗೆ ಮೊತ್ತವು ರೂ. ೬೦,೨೯೩ ಕೋಟಿ. ಅಂದರೆ ವರಮಾನದಲ್ಲಿ ತೆರಿಗೆ ಮೊತ್ತದ ಪ್ರಮಾಣ ಶೇ. ೦.೦೮. ಗುಜರಾತಿನ ವರಮಾನ ಕರ್ನಾಟಕದ ವರಮಾನಕ್ಕಿಂತ ಅಧಿಕ. ಆದರೆ ಅದು ನೀಡುತ್ತಿರುವ ತೆರಿಗೆ ಕರ್ನಾಟಕಕ್ಕಿಂತ ಕಡಿಮೆ. ಒಟ್ಟು ತೆರಿಗೆಯಲ್ಲಿ ಶ್ರೀಮಂತರು ಹೊರುವ ತೆರಿಗೆ ಭಾರ ಕಡಿಮೆ : ಬಡವರು ಹೊರುವ ತೆರಿಗೆ ಭಾರ ಹೆಚ್ಚು. ಜಿಎಸ್‌ಟಿಯನ್ನು ಹೀಗೆ ವಿಸ್ತೃತ ನೆಲೆಯಲ್ಲಿ ಪರಿಶೀಲಿಸಬೇಕಾಗುತ್ತದೆ.

ಸರ್ಕಾರಕ್ಕೆ ಏಕೆ ಜಿಎಸ್‌ಟಿ ಬಗ್ಗೆ ಅತಿಯಾದ ವ್ಯಾಮೋಹ? ಸಮಾಜದಲ್ಲಿ ಯಾರನ್ನೂ ಬಿಡದಂತೆ ತೆರಿಗೆ ವಿಧಿಸಬೇಕು ಎಂಬುದು ಇಲ್ಲಿನ ತತ್ವವಾಗಿದೆ. ಯಾರೊಬ್ಬರೂ ತೆರಿಗೆಯಿಂದ ತಪ್ಪಿಸಿಕೊಳ್ಳಬಾರದು. ತೆರಿಗೆ ವ್ಯಾಪ್ತಿಯನ್ನು ವಿಸ್ತೃತಗೊಳಿಸುವ ಬಗ್ಗೆ ಸರ್ಕಾರ ಕಟಿಬದ್ಧವಾಗಿದೆ. ಇದೇ ನೀತಿಯನ್ನು ಸರ್ಕಾರವು ಪ್ರತ್ಯಕ್ಷ ತೆರಿಗೆ ಬಗ್ಗೆ ಪಾಲಿಸಲು ಸಾಧ್ಯವಿಲ್ಲ. ಏಕೆಂದರೆ ಅವು ಉಳ್ಳವರ ಮೇಲಿನ ತೆರಿಗೆ. ಅಲ್ಲಿ ತೆರಿಗೆ ದರಗಳನ್ನು ಹೇಗೆ ಕೆಳಗಿಳಿಸಬೇಕು, ರಿಯಾಯಿತಿಗಳನ್ನು ಹೇಗೆ ನೀಡಬೇಕು, ತೆರಿಗೆಗೆ ಬದಲಾಗಿ ಉತ್ತೇಜನವನ್ನು ಹೇಗೆ ಒದಗಿಸಬೇಕು ಎಂಬುದರ ಬಗ್ಗೆ ಸರ್ಕಾರ ಚಿಂತಿಸುತ್ತಿರುತ್ತದೆ. ಉದಾಹರಣೆಗೆ, ಉದ್ದಿಮೆಗಳಿಗೆ ವಾರ್ಷಿಕ ಸರಾಸರಿ ರೂ. ೫ ಲಕ್ಷ ಕೋಟಿಗಳಷ್ಟು ತೆರಿಗೆ ವಿನಾಯಿತಿ–ರಿಯಾಯಿತಿ ನೀಡಲಾಗುತ್ತಿದೆ. ಇಲ್ಲಿ ಉದ್ದಿಮೆಪತಿಗಳ ಅತೃಪ್ತಿಯನ್ನು ಎದುರಿಸುವುದು ಸರ್ಕಾರಕ್ಕೆ ಇಷ್ಟವಿಲ್ಲ ಅಥವಾ ಸಾಧ್ಯವಿಲ್ಲ. ಆದರೆ ಜಿಎಸ್‌ಟಿಯಲ್ಲಿ ಜನರ ಅತೃಪ್ತಿ, ಪ್ರತಿಭಟನೆ, ರಾಜಕೀಯ ಮುತ್ಸದ್ದಿಗಳ ಟೀಕೆ

ಯಾವುದಕ್ಕೂ ಜಗ್ಗದೆ ಸರ್ಕಾರವು ತೆರಿಗೆಯನ್ನು ಜಾರಿಗೊಳಿಸುತ್ತಿದೆ. ಇದು ನಾವು ಚರ್ಚೆ ಮಾಡಬೇಕಾಗಿರುವ ಸಮಸ್ಯೆ. ಬಡವರನ್ನು, ದುಡಿಮೆಗಾರರನ್ನು ಕರಕುಶಲಕರ್ಮಿಗಳನ್ನು, ರೈತಾಪಿಗಳನ್ನು ಎದುರಿಸಿ ಸರ್ಕಾರಗಳು ಬದುಕಬಲ್ಲವು. ಅವರ ರಕ್ತ ಹೀರಿ ರಾಜಸ್ವವನ್ನು ಸಂಗ್ರಹಿಸಬಹುದು. ಸರ್ಕಾರದ ಪ್ರಕಾರ ಅಭಿವೃದ್ಧಿಯ ಚಾಲಕ ಶಕ್ತಿಗಳೆಂದರೆ ಉದ್ಯಮಪತಿಗಳು. ಬಡವರು, ಅಲ್ಪಸಂಖ್ಯಾತರು, ಕಾರ್ಮಿಕರು, ಕರಕುಶಲಕರ್ಮಿಗಳು – ಇವರೆಲ್ಲರೂ ಸಮಾಜಕ್ಕೆ ಭಾರ. ಇಲ್ಲಿನ ದುಡಿಮೆಗಾರರೆಲ್ಲ ಅಕುಶಲಿಗಳು. ಆದ್ದರಿಂದ ಇಲ್ಲಿ ಉತ್ಪಾದಕತೆಯು ಕೆಳಮಟ್ಟದಲ್ಲಿದೆ. ಇದು ಆರ್ಥಿಕ ಅಭಿವೃದ್ಧಿಯ ದೃಷ್ಟಿಯಿಂದ ಆರೋಗ್ಯಕರ ಪ್ರವೃತ್ತಿಯಲ್ಲ. ದೇಶದ ಜಿ.ಡಿ.ಪಿ. ಬೆಳವಣಿಗೆಗೆ ಈ ವಲಯವು ಅಡ್ಡಿಯಾಗಿದೆ ಎಂಬುದೇ ತಜ್ಞರ ಅಭಿಮತ. ನಮ್ಮ ದೇಶದಲ್ಲಿ ಜಿಎಸ್‌ಟಿಯು ಗ್ರಾಹಕರ ಮೇಲೆ, ನಾಗರಿಕರ ಮೇಲೆ, ಬಡವರ ಮೇಲೆ ಏನೆಲ್ಲ ಅಪಾಯಗಳನ್ನು ಉಂಟುಮಾಡಬಹುದು. ಅದು ಒಂದು ಕಡೆ. ಆದರೆ ಅದು ಆರ್ಥಿಕತೆಯ ಮೇಲೆ ಉಂಟುಮಾಡುವ ಪರಿಣಾಮಗಳು ಮಾತ್ರ ಅತ್ಯಂತ ಮಾರಕವಾಗುತ್ತವೆ.

**ಅಸಂಘಟಿತ ವಲಯ ಅಂದರೇನು?**

ಅಸಂಘಟಿತ ವಲಯ/ಮಾರುಕಟ್ಟೆ ಅಂದರೆ ಅದು ದೇಶದ್ರೋಹದ ವಲಯವೇನಲ್ಲ. ಅದು ಕಳ್ಳ ಮಾರುಕಟ್ಟೆಯೂ ಅಲ್ಲ. ನಿಜ, ಅಲ್ಲಿ ಸೀಮಿತ ಅರ್ಥದಲ್ಲಿ ಕಾನೂನಿನ ನಿರ್ಬಂಧನೆ ಇರುವುದಿಲ್ಲ. ಆದರೆ ಅಲ್ಲಿ ಸಾಮಾಜಿಕ ನಿಯಂತ್ರಣ ಅನ್ನುವುದಿರುತ್ತದೆ. ಅದೇನು ಅಕ್ರಮ ಮಾರುಕಟ್ಟೆಯಲ್ಲ. ಉದಾಹರಣೆಗೆ, ಗ್ರಾಮೀಣ ಹೆಣ್ಣುಮಗಳೊಬ್ಬಳು ತಾನು ಸಾಕಿದ ಕೋಳಿಗಳ ಮೊಟ್ಟೆಯನ್ನು ವಾರದ ಸಂತೆಯಲ್ಲಿ ಮಾರಾಟ ಮಾಡಿ ನಾಲ್ಕು ಕಾಸು ಸಂಪಾದಿಸುತ್ತಾಳೆ. ಅದು ಅಸಂಘಟಿತ ವಲಯಕ್ಕೆ ಸೇರುವ ಚಟುವಟಿಕೆ. ಆದರೆ ಅದು ಅಕ್ರಮ ಚಟುವಟಿಕೆಯೇನಲ್ಲ. ಇಲ್ಲಿ ತೆರಿಗೆಗಳ್ಳತನವಾಗಲಿ ಅಥವಾ ಕಾನೂನಿನ ಉಲ್ಲಂಘನೆಯಾಗಲಿ ನಡೆದಿದೆ ಎಂದು ಹೇಳಲು ಬರುವುದಿಲ್ಲ. ಏಕೆಂದರೆ ಇದು ಅವಳ ಜೀವನಾಧಾರ ಚಟುವಟಿಕೆ. ಈ ಸರ್ಕಾರದ ಪ್ರಕಾರ ಸಂತೆಯಲ್ಲಿ ಕೋಳಿಮೊಟ್ಟೆಯನ್ನು ಮಾರಾಟ ಮಾಡುವ ಹೆಣ್ಣುಮಗಳು ತೆರಿಗೆ ಕಟ್ಟಬೇಕು. ಅವಳು ಡಿಜಿಟಲ್ ವ್ಯವಹಾರ ಮಾಡಬೇಕು. ಹಳ್ಳಿಗಳಲ್ಲಿ ಒಬ್ಬ ಹೆಣ್ಣುಮಗಳು ಬಟ್ಟೆ ಹೊಲಿಯುವ ಕೆಲಸ ಮಾಡುತ್ತಿದ್ದಾಳೆ. ಅದರಿಂದ ಅವಳು ನಾಲ್ಕು ಕಾಸು ಸಂಪಾದಿಸುತ್ತಾಳೆ. ಇದು ಅವಳ ಬದುಕು. ಅಸಂಘಟಿತ ವಲಯ ಅನ್ನುವುದು ನಮ್ಮ ದೇಶದಲ್ಲಿ ಶೇ. ೯೦ರಷ್ಟು ದುಡಿಮೆಗಾರರ ಬದುಕಾಗಿದೆ. ದೇಶದ ಒಟ್ಟು ವರಮಾನಕ್ಕೆ ಸದರಿ ವಲಯದ ಪಾಲು ಶೇ. ೫೦ರಷ್ಟು ಎಂದು ಹೇಳಲಾಗಿದೆ. ನಮ್ಮ ಸಮಾಜದಲ್ಲಿ ಉದ್ಯೋಗದ ಮೂಲಾಧಾರವೇ ಅಸಂಘಟಿತ ವಲಯವಾಗಿದೆ. ಅನಾಣ್ಯೀಕರಣದಿಂದ, ಜಿಎಸ್‌ಟಿಯಿಂದ ಅಸಂಘಟಿತ ಮಾರುಕಟ್ಟೆಯ ಸ್ಥಿತಿಗತಿ ಮೂರಾಬಟ್ಟೆಯಾಗಿದೆ. ಇಡೀ ದೇಶದ ೧೨೨ ಕೋಟಿ ಜನರನ್ನು ತೆರಿಗೆ ವ್ಯಾಪ್ತಿಗೆ, ಕಾನೂನಿನ ಶಿಸ್ತಿಗೆ, ಡಿಜಿಟಲೈಸೇಷನ್ ವ್ಯಾಪ್ತಿಗೆ ತರಬೇಕು ಎಂಬುದನ್ನು ಸರ್ಕಾರ ಪ್ರತಿಪಾದಿಸುತ್ತದೆ. ಇಂದು ನಾವು ಅಳವಡಿಸಿಕೊಂಡಿರುವ ಅಭಿವೃದ್ಧಿ ನೀತಿ 'ಸಬ್ ಕಾ ಸಾತ್, ಸಬ್ ಕಾ ವಿಕಾಸ್'. ಇದು ಜಿಎಸ್‌ಟಿಗೆ ಹೆಚ್ಚು ಅನ್ವಯಿಸಬಹುದೆ? ಎಲ್ಲರೂ ಜಿಎಸ್‌ಟಿ ವ್ಯಾಪ್ತಿಗೆ ಬಂದರೆ ಅದು ವಿಕಾಸ ಎಂದು ಹೇಳಲಾಗುತ್ತಿದೆ. ಎಲ್ಲರೂ ಒಂದೇ ತೆರಿಗೆ ದರವನ್ನು ಕಟ್ಟುತ್ತಿರಬಹುದು. ಆದರೆ ಅದರ ಭಾರ ಮಾತ್ರ ಉಳ್ಳವರ ಮೇಲೆ ಕನಿಷ್ಠವಾದರೆ ಉಳಿದವರ ಮೇಲೆ ಗರಿಷ್ಠವಾಗುತ್ತದೆ. ಕೋಳಿಮೊಟ್ಟೆ ಮಾರಿ ಐವತ್ತೋ–ನೂರೋ ಸಂಪಾದಿಸಿ ಗ್ರಾಮೀಣ ಮಹಿಳೆಯು ಅದನ್ನು ಬ್ಯಾಂಕಿನಲ್ಲಿಟ್ಟು ವ್ಯವಹಾರ ಮಾಡಬೇಕು ಎಂದು ಬಯಸುವುದು ಎಷ್ಟರಮಟ್ಟಿಗೆ ಸರಿ? ದಿನಕ್ಕೆ ನಾಲ್ಕಾರು ನೂರು ರೂಪಾಯಿ ಸಂಪಾದಿಸುವ ಜನರು ನಮ್ಮ ಆರ್ಥಿಕತೆಯಲ್ಲಿ ಶೇ. ೬೦ ರಿಂದ ಶೇ. ೭೦ ರಷ್ಟಿದ್ದಾರೆ. ಇವರೆಲ್ಲ ಡಿಜಟಲೈಸಾಗ ಬೇಕು ಅನ್ನುವುದು ವ್ಯಾವಹಾರಿಕವೂ ಅಲ್ಲ, ಪ್ರಾಯೋಗಿಕವೂ ಅಲ್ಲ.



**ಅಸಂಘಟಿತ ವಲಯ ಎಷ್ಟು ಬೃಹತ್ತಾಗಿದೆ?**

ಇದು ಅಸಂಘಟಿತ ಅಥವಾ ಅನೌಪಚಾರಿಕ ವಲಯ ಮಾರುಕಟ್ಟೆಯಿರಬಹುದು. ಆದರೆ ಅದರ ಆರ್ಥಿಕ ಮಹತ್ವವನ್ನು ಅಲ್ಲಗಳೆಯಲು ಬರುವುದಿಲ್ಲ. ನಮ್ಮ ದೇಶದ ಗ್ರಾಮೀಣ ಪ್ರದೇಶದಲ್ಲಿನ ಒಟ್ಟು ದುಡಿಮೆಗಾರರಲ್ಲಿ ಅನೌಪಚಾರಿಕ ವಲಯದ ದುಡಿಮೆಗಾರರ ಪ್ರಮಾಣ ಶೇ. ೭೫ ಮತ್ತು ನಗರ ಪ್ರದೇಶದಲ್ಲಿ ಅವರ ಪ್ರಮಾಣ ಶೇ. ೬೯. ಎನ್‌ಎಸ್‌ಎಸ್‌ಓ ಸಮೀಕ್ಷೆಯ ಪ್ರಕಾರ ೨೦೦೪–೦೫ರಲ್ಲಿದ್ದ ಒಟ್ಟು ದುಡಿಮೆಗಾರರ ಸಂಖ್ಯೆ ೪೫.೭೯ ಕೋಟಿ. ಇದು ೨೦೧೧–೧೨ರಲ್ಲಿ ೪೭.೨೪ ಕೋಟಿಗೇರಿದೆ. ಇದೇ ಅವಧಿಯಲ್ಲಿ ಸಂಘಟಿತ ಮಾರುಕಟ್ಟೆಯಲ್ಲಿ ದುಡಿಮೆಗಾರರ ಪ್ರಮಾಣ ೨.೮೮ ಕೋಟಿಯಿಂದ ೪.೭೭ ಕೋಟಿಗೇರಿದೆ. ಆದರೆ ಅಸಂಘಟಿತ ವಲಯದಲ್ಲಿನ ದುಡಿಮೆಗಾರರ ಸಂಖ್ಯೆಯು ೧೮.೪೪ ಕೋಟಿಯಿಂದ ೨೦.೯೬ ಕೋಟಿಗೇರಿದೆ. ಒಟ್ಟಾರೆ, ಕೃಷಿಯಲ್ಲಿ ಇವರ ಪ್ರಮಾಣ ಶೇ. ೯೦ ಮತ್ತು ಕೃಷಿಯೇತರ ವಲಯದಲ್ಲಿ ಶೇ. ೭೦ ಎಂದು ಹೇಳಲಾಗಿದೆ. ಈ ವಲಯವನ್ನು ಔಪಚಾರಿಕ ವಲಯದಲ್ಲಿ ವಿಲೀನಗೊಳಿಸುವ ಬಗ್ಗೆ ಸರ್ಕಾರವು ಕ್ರಮಗಳನ್ನು ತೆಗೆದುಕೊಳ್ಳುತ್ತಿದೆ. ಈ ದಿಶೆಯಲ್ಲಿ ಅನೌಪಚಾರಿಕ/ಅಸಂಘಟಿತ ವಲಯದ ಬಗ್ಗೆ ಅಧಿಕಾರಿಗಳಿಗೆ ಮತ್ತು ಸರ್ಕಾರಕ್ಕೆ ಒಳ್ಳೆಯ ಅಭಿಪ್ರಾಯವೇನಿಲ್ಲ. ಜಿಎಸ್‌ಟಿಯು ಆರ್ಥಿಕತೆಯ ಅನೌಪಚಾರಿಕತೆ ಸ್ವರೂಪವನ್ನು ತೊಡೆದುಹಾಕುವ ಬಗೆಗಿನ ಒಂದು ಕ್ರಮವಾಗಿದೆ.

**ಜಿಎಸ್‌ಟಿ ಅನುಷ್ಠಾನೋತ್ತರ ಸಮಸ್ಯೆಗಳು**

ಅನಾಣ್ಯೀಕರಣದ ಸಂದರ್ಭದಲ್ಲಿ ನಡೆದಂತೆ ಜಿಎಸ್‌ಟಿ ಸಂದರ್ಭದಲ್ಲಿಯೂ ಸರಿಯಾದ ಪೂರ್ವಸಿದ್ಧತೆಯಿಲ್ಲದ ಪರಿಣಾಮವಾಗಿ ಜಿಎಸ್‌ಟಿ ಮಂಡಳಿಯು ತನ್ನ ಪ್ರತಿ ಸಭೆಯಲ್ಲಿಯೂ ಬೇರೆ ಬೇರೆ ರೀತಿಯ ಆದೇಶಗಳನ್ನು, ಮಾರ್ಗದರ್ಶನಗಳನ್ನು, ತೆರಿಗೆ ದರಗಳನ್ನು ಪ್ರಕಟಿಸುತ್ತಿದೆ. ಅದು ತನ್ನ ನವೆಂಬರ್ ೧೧, ೨೦೧೭ರ ಗೌಹತಿ ಸಭೆಯಲ್ಲಿ ಅನೇಕ ಸರಕು ಮತ್ತು ಸೇವೆಗಳ ಮೇಲಿನ ತೆರಿಗೆ ದರಗಳನ್ನು ಶೇ. ೨೮ರಿಂದ ಶೇ. ೧೮ ಕ್ಕಿಳಿಸಿತು. ಇದನ್ನು ತೆರಿಗೆ ಜಾರಿಗೆ ತರುವ ಸಂದರ್ಭದಲ್ಲಿಯೇ ಮಾಡಬಹುದಿತ್ತು. ಇದಕ್ಕೆ ಪೂರ್ವ ಸಿದ್ಧತೆಯಿಲ್ಲದಿದ್ದುದೇ ಪ್ರಮುಖ ಕಾರಣ.

ಇದೇ ರೀತಿಯಲ್ಲಿ ತೆರಿಗೆಗಳಿಗೆ ಸಂಬಂಧಿಸಿದಂತೆ ವ್ಯಾಪಾರಗಾರರು ತುಂಬಬೇಕಾದ ಫಾರ್ಮ್‌ಗಳ ಬಗ್ಗೆಯೂ ಗೊಂದಲವಿದೆ. ಈ ತೆರಿಗೆಯಡಿ ನೋಂದಣಿ ಮಾಡಿಕೊಳ್ಳಬೇಕಾದ ಘಟಕಗಳ ವ್ಯವಹಾರದ ಮೊತ್ತವನ್ನು ಮೊದಲು ರೂ. ೭೫ ಲಕ್ಷವೆಂದು ನಿರ್ಧರಿಸಲಾಗಿತ್ತು. ನಂತರ ಇದನ್ನು ರೂ. ೧ ಕೋಟಿಗೆ ಏರಿಸಲಾಯಿತು. ಈಗ ಅದನ್ನು ರೂ. ೧.೫ ಕೋಟಿಗೇರಿಸಲಾಗಿದೆ. ತೆರಿಗೆ ಫಾರ್ಮ್‌ಗಳನ್ನು ನಿಗದಿಪಡಿಸಿದ ದಿನಾಂಕದಲ್ಲಿ ತುಂಬದ ಘಟಕಗಳಿಗೆ ದಂಡ ವಿಧಿಸುವ ಕ್ರಮ ಅಧಿಸೂಚನೆಯಲ್ಲಿದೆ. ಆದರೆ ಫಾರ್ಮ್‌ಗಳನ್ನು ಆನ್‌ಲೈನಿನಲ್ಲಿ ತುಂಬುವುದಕ್ಕೆ ತಂತ್ರಾಂಶದ ತೊಂದರೆ ಎದುರಾಯಿತು. ಈ ಕಾರಣಕ್ಕೆ ಈಗ ಸರ್ಕಾರವು ದಂಡ ವಿಧಿಸುವ ಕ್ರಮವನ್ನು ಸ್ವಲ್ಪ ಕಾಲದವರೆಗೆ ರದ್ದುಪಡಿಸಿದೆ. ಇವೆಲ್ಲ ಏನನ್ನು ಸೂಚಿಸುತ್ತವೆ? ಸರ್ಕಾರವು 'ಸ್ವಾತಂತ್ರ್ಯಾನಂತರದ ಚಾರಿತ್ರಿಕ ತೆರಿಗೆ ಸುಧಾರಣೆ' ಎಂದು ತಾನೇ ವರ್ಣಿಸುತ್ತಿರುವ ತೆರಿಗೆ ವ್ಯವಸ್ಥೆಯನ್ನು ಜಾರಿಗೊಳಿಸುವ ಮೊದಲು ಅದಕ್ಕೆ ಬೇಕಾದ ಪೂರ್ಣ ಸಿದ್ಧತೆಯನ್ನು ಮಾಡಿಕೊಂಡಿದ್ದಂತೆ ಕಾಣುವುದಿಲ್ಲ. ಅದರಿಂದ ಉಂಟಾಗಬಹುದಾದ ತೊಂದರೆಗಳ ಬಗ್ಗೆ ಯೋಚನೆ ಮಾಡಿರಲಿಲ್ಲ. ಅದರ ಫಲವಾಗಿ ಇಂದು ಅದರ ಅನುಷ್ಠಾನದಲ್ಲಿ ಅನೇಕ ಸಮಸ್ಯೆಗಳು ಎದುರಾಗಿವೆ. ಉನ್ನತ ತಂತ್ರಜ್ಞಾನವೇ ಎಲ್ಲವೂ ಅಲ್ಲ. ತಂತ್ರಜ್ಞಾನ ಇದೆಯೆಂದು ಹೇಳಲಾಗುವ ಭಾರತದಂತಹ ಬೃಹತ್ ಬಹುರೂಪಿ ದೇಶದಲ್ಲಿ ಇಂತಹ ತೆರಿಗೆ ವ್ಯವಸ್ಥೆಯನ್ನು ಜಾರಿಗೊಳಿಸುವಾಗ ಸಾಕಷ್ಟು ಪೂರ್ವ ತಯಾರಿ ಅಗತ್ಯವಾಗಿತ್ತು. ಅಂತಹ ಪೂರ್ವ ತಯಾರಿ ಇಲ್ಲಿ ಇದ್ದಿರಲಿಲ್ಲ. ಈ ತೆರಿಗೆ ವ್ಯವಸ್ಥೆಯಲ್ಲಿ ವ್ಯಾಪಾರಗಾರರು ತಾವು ಮಾರಾಟ ಮಾಡುವ ಸರಕುಗಳ ಮೌಲ್ಯವರ್ಧನೆ ಬಾಬ್ತು ಮಾತ್ರ ತೆರಿಗೆ ಕಟ್ಟಬೇಕು. ವ್ಯಾಪಾರಗಾರರು ಮಾರಾಟ ಮಾಡುವ ವಸ್ತುಗಳ ಉತ್ಪಾದನೆಗೆ ಸಂಬಂಧಿಸಿದಂತೆ ಉಪಯೋಗಿಸಿರುವ ಕಚ್ಚಾ ಸಾಮಗ್ರಿಗಳ ಮಟ್ಟದಲ್ಲಿ ಅವುಗಳಿಗೆ ತೆರಿಗೆ ಕಟ್ಟಲಾಗಿರುತ್ತದೆ. ಆದರೆ ಅದನ್ನು ಸೇರಿಸಿ ವ್ಯಾಪಾರಗಾರರು ತೆರಿಗೆ ಕಟ್ಟಿರುತ್ತಾರೆ. ಹೀಗೆ ತೆರಿಗೆ ಕಟ್ಟುವಾಗ ಕಚ್ಚಾ ಸಾಮಗ್ರಿಗಳಿಗೆ ಸಂಬಂಧಿಸಿದ ತೆರಿಗೆ ಪ್ರಮಾಣವನ್ನು ಸಂಬಂಧಿಸಿದ ರಸೀದಿಯೊಂದಿಗೆ ನಿಗದಿಪಡಿಸಿರುವ ಫಾರ್ಮ್‌ಗಳಲ್ಲಿ ತುಂಬಬೇಕು. ಸರ್ಕಾರವು ಸರಕಿನ ಕಚ್ಚಾ ಸಾಮಗ್ರಿಗಳಿಗೆ ಸಂಬಂಧಿಸಿದ ತೆರಿಗೆ ಮೊತ್ತವನ್ನು ಆಖೈರು ಮಾರಾಟಗಾರರಿಗೆ ವಾಪಸ್ಸು ನೀಡಬೇಕು. ಅದು ವಾಪಸ್ಸು ಬರುವವರೆವಿಗೂ ವ್ಯಾಪಾರಗಾರರು ತಮ್ಮ ಹಣ ಹಾಕಿ ವ್ಯಾಪಾರ ನಡೆಸಬೇಕು. ಸಣ್ಣಪುಟ್ಟ ವ್ಯಾಪಾರಗಾರರಿಗೆ ಇದು ಕಷ್ಟಸಾಧ್ಯ. ಸರ್ಕಾರವು ಆಖೈರು ಮಾರಾಟಗಾರರಿಗೆ ಸಲ್ಲಬೇಕಾದ ತೆರಿಗೆ ಬಾಬ್ತು ಹಣವನ್ನು ವಾಪಸ್ಸು ನೀಡುವುದಕ್ಕೆ ಸಂಬಂಧಿಸಿದಂತೆ ಅನೇಕ ಗೊಂದಲಗಳನ್ನು ಎದುರಿಸಬೇಕಾಗಿದೆ. ಹೀಗೆ ಜಿಎಸ್‌ಟಿಯ ಅನುಷ್ಠಾನ ಗೊಂದಲಗಳ ಗೂಡಾಗಿಬಿಟ್ಟಿದೆ.

**ಇದಕ್ಕೆ ಪರಿಹಾರವೇನು?**

ಈಗೇನು ಅಸಂಘಟಿತ ವಲಯ ಎಂದು ಮತ್ತು ಅನೌಪಚಾರಿಕ ಮಾರುಕಟ್ಟೆ ಎಂದು ಯಾವುದನ್ನು ಕರೆಯಲಾಗುತ್ತಿದೆಯೋ ಅದು ಆರ್ಥಿಕ ಬೆಳವಣಿಗೆಯಲ್ಲಿ ಪ್ರಮುಖ ಪಾತ್ರ ನಿರ್ವಹಿಸುತ್ತಿದೆ. ನಮ್ಮ ಆರ್ಥಿಕತೆಯಲ್ಲಿ ಉದ್ಯೋಗದ ಮೂಲ ಅಸಂಘಟಿತ ವಲಯ. ದೇಶದ ತೆರಿಗೆಗೂ ಅದರ ಕಾಣಿಕೆ ಸಾಕಷ್ಟಿದೆ. ಅಲ್ಲಿ ಶಾಸನಗಳ ಪಾತ್ರ ಇಲ್ಲದೆ ಇರಬಹುದು. ಆದರೆ ಅಲ್ಲಿ ಸಾಮಾಜಿಕ ನಿಯಂತ್ರಣ ಅನ್ನುವುದು ಆಚರಣೆಯಲ್ಲಿದೆ. ಆರ್ಥಿಕತೆಯ ವರಮಾನದಲ್ಲಿ ಇದರ ಪಾಲು ಶೇ. ೫೦ಕ್ಕಿಂತ ಅಧಿಕ. ಆದ್ದರಿಂದ ಅದಕ್ಕೆ ಸಮಾಜ ಮತ್ತು ಸರ್ಕಾರವು ಪ್ರೋತ್ಸಾಹ ನೀಡಬೇಕು ಮತ್ತು ಅದಕ್ಕೆ ಅಗತ್ಯವಾದ ಬೆಂಬಲವನ್ನು ನೀಡಬೇಕು.

ಈ ವಲಯದ ಅಭಿವೃದ್ಧಿಗೆ ಏನು ಬೇಕು ಅನ್ನುವುದರ ಬಗ್ಗೆ ಸರ್ಕಾರವು ಯೋಚಿಸಬೇಕೆ ವಿನಾ ಅದನ್ನು ಹತ್ತಿಕ್ಕುವ ಕ್ರಮದ ಬಗ್ಗೆ ಯೋಚಿಸ ಬಾರದು. ಇದು ಆರ್ಥಿಕತೆಯ ಶೇ. ೮೦ ರಿಂದ ಶೇ. ೯೦ರಷ್ಟು ಜನರ ಜೀವದುಸಿರಾಗಿದೆ. ಡಿಜಿಟಲೈಟೇಸೇಷನ್ ಬಗೆಗಿನ ವ್ಯಸನವನ್ನು ಸರ್ಕಾರವು ಕೈಬಿಡಬೇಕು. ಅದೇನು ಅನಿವಾರ್ಯವಾದ ಸಂಗತಿಯೇನಲ್ಲ. ನಗದು ವ್ಯವಹಾರವನ್ನು ಅಪರಾಧಿ ಸ್ಥಾನದಲ್ಲಿ ನಿಲ್ಲಿಸುವುದು ಸರಿಯಲ್ಲ. ಎಲ್ಲಕ್ಕಿಂತ ಮುಖ್ಯವಾಗಿ ನಮ್ಮ ಸಂವಿಧಾನವು ಕೊಡಮಾಡಿರುವ ಒಕ್ಕೂಟ ವ್ಯವಸ್ಥೆಯನ್ನು ಕಾಪಿಡುವ ಅಗತ್ಯವಿದೆ. ಕೇಂದ್ರ ಮತ್ತು ರಾಜ್ಯಗಳ ನಡುವೆ ಅಸಮಾನತೆಯನ್ನು ಉಂಟುಮಾಡುವ ಜಿಎಸ್‌ಟಿ ಬಗ್ಗೆ ಮರುಚಿಂತಿಸುವ ಅಗತ್ಯವಿದೆ.

**ಡಾ॥ ಟಿ. ಆರ್. ಚಂದ್ರಶೇಖರ**
ಸಮಾಲೋಚಕರು, ನಾಲ್ಕನೆ ರಾಜ್ಯ ಹಣಕಾಸು ಆಯೋಗ
ದಕ್ಷಿಣ ಭಾಗ, ಮೂರನೆ ಮಹಡಿ
ಖನಿಜ ಭವನ, ರೇಸ್ ಕೋರ್ಸ್ ರೋಡ್
ಬೆಂಗಳೂರು – ೫೬೦ ೦೦೧

# ಹೃದಯದ ಆದಾಯ

ಕಿಡಿ ಬೆಂಕಿಯಾಗಲು ಎಷ್ಟೊತ್ತು ಬೇಕು ಗಾಳಿ ಜೊತೆಗೆ ಸೇರಲು
ದ್ವೇಷ ಪ್ರೀತಿಯಾಗಲು ಎಷ್ಟೊತ್ತು ಬೇಕು ಒಳ್ಳೆಯ ಮನಸಿರಲು
ನೋವು ಸಾವಾಗಲು ಎಷ್ಟೊತ್ತು ಬೇಕು ಚುಚ್ಚಿ ಮಾತನಾಡುವ ಹುಚ್ಚ ಜನರಿರಲು
ಅಳುವು ನಗುವಾಗಲು ಎಷ್ಟೊತ್ತು ಬೇಕು ಕಣ್ಣೊರೆಸುವ ಕೈಗಳಿರಲು

ಸುಖ ಸಂಸಾರ ದುಃಖದ ಸಾಗರವಾಗಲು ಎಷ್ಟೊತ್ತು ಬೇಕು ಅನುಮಾನದ ಹೆಂಡತಿ ಇರಲು
ಶೃತಿಯ ಜೊತೆ ರಾಗಸೇರಲು ಎಷ್ಟೊತ್ತು ಬೇಕು ಸುಮಧುರ ಗೀತೆಯಾಗಲು
ಆಸೆಯಿಂದ ನಾಶವಾಗಲು ಎಷ್ಟೊತ್ತು ಬೇಕು ವಿಷಯಂಗಳ ಸುಖದಿ ಮನಸು ಮುಳುಗಲು
ಹೃದಯದ ಆದಾಯ ಪ್ರೀತಿಯಾಗಲು ಎಷ್ಟೊತ್ತು ಬೇಕು ಮನದ ಬಂಡವಾಳ ಮಾನವೀಯತೆಯಾಗಲು
ನನ್ನೆದೆಯಲ್ಲಿ ಪ್ರೀತಿ ಜ್ಯೋತಿ ನೀ ಹೊತ್ತಿಸಿದಾಗ ಎಷ್ಟೊತ್ತು ಬೇಕು ಸ್ವರ್ಗ ಧರೆಗೆ ಇಳಿಸಲು.



**ಸುರೇಶ ಹಡಪದ**
ಬಳಗಾನೂರು, ಸಿಂಧನೂರು, ರಾಯಚೂರು – ೫೮೪ ೧೩೮


NATIONAL TRAVELS
N.T. Rahamathulla Khan
Associates






EAGLE
ASHOK LEYLAND

ಇಂಗಿತ ಅಂದರೆ ಅಭಿಪ್ರಾಯ.

ಪರರ ಮನಸ್ಸನ್ನು ತಿಳಿದುಕೊಳ್ಳುವುದು ಪರೇಂಗಿತಜ್ಞತೆ.

ಹಾಗೆ ತಿಳಿದುಕೊಳ್ಳುವುದು ಮಾತ್ರವಲ್ಲ, ಅದಕ್ಕೆ ತಕ್ಕ ಹಾಗೆ ಮಾನವೀಯತೆಯಿಂದ ಸ್ಪಂದಿಸಬೇಕು ಕೂಡ ಅನ್ನುವುದು ಈ ಮಾತಿನ ಗೂಢಾರ್ಥ.

ರಾಮಾಯಣದ ಕಥಾನಾಯಕನಾದ ಶ್ರೀರಾಮ, ಎಲ್ಲ ಬಣ್ಣನೆಗಳಲ್ಲಿ... ಒಬ್ಬ ಸದ್ಗುಣಿ. ಆತನಿಗಿಲ್ಲದ ಕಲ್ಯಾಣಗುಣವೇ ಇಲ್ಲ ಎಂದು ಕಾವ್ಯ ಬಣ್ಣಿಸುತ್ತದೆ. ಈ ಮಾತು ಆತನ ಪಟ್ಟಾಭಿಷೇಕದ ವೇಳೆ ಕಂಡುಬರುವ ರಾಮ ಗುಣವರ್ಣನೆಯಿಂದ ಖಚಿತವಾಗಿ ವ್ಯಕ್ತವಾಗುತ್ತದೆ.

ಹೀಗೆ, ಶ್ರೀರಾಮನ ಸದ್ಗುಣಗಳಲ್ಲಿ ಪರೇಂಗಿತಜ್ಞತೆ ಕೂಡ ಎದ್ದು ಕಾಣುವಂತಹ ಗುಣ.

ಈ ಪ್ರಸಂಗವನ್ನು ಗಮನಿಸೋಣ.

# ರಾಮನ ಪರೇಂಗಿತಜ್ಞತೆ

ಶ್ರೀರಾಮನು ರಾವಣನನ್ನು ಕೊಂದು, ವನವಾಸವನ್ನು ಮುಗಿಸಿ, ಅಯೋಧ್ಯೆಗೆ ಹಿಂತಿರುಗುವ ಸಮಯ. ಪುಷ್ಪಕ ವಿಮಾನದಲ್ಲಿ ಕುಳಿತು ಅಯೋಧ್ಯೆಯನ್ನು ವೀಕ್ಷಿಸುತ್ತಿದ್ದಂತೆ, ರಾಮನಲ್ಲಿ ಒಂದು ಆಲೋಚನೆ ಸ್ಫುರಿಸುತ್ತದೆ. ಆತ ಹನುಮಂತನನ್ನು ಕರೆದು ಹೀಗೆ ಹೇಳುತ್ತಾನೆ –

"ಕಪಿಶ್ರೇಷ್ಠ, ನೀನು ಮೊದಲು ಹೋಗಿ ಭರತನನ್ನು ಕಂಡು ನನ್ನ ಕುಶಲವಾರ್ತೆಯನ್ನು ತಿಳಿಸು. ಯುದ್ಧ ವಿವರಗಳನ್ನೂ, ನಾನು ರಾವಣನನ್ನು ಕೊಂದು ಕ್ಷೇಮವಾಗಿ ಹಿಂತಿರುಗುತ್ತಿರುವುದನ್ನೂ ಹೇಳು. ಈ ಮಾತನ್ನು ಕೇಳಿದಾಗ ಭರತನ ಮುಖದಲ್ಲಿ ಯಾವ ಬದಲಾವಣೆಯಾಗುವುದೆಂದು ಸೂಕ್ಷ್ಮವಾಗಿ ಗಮನಿಸು. ಅವನ ಮುಖವರ್ಣ, ನೋಟ, ಮಾತಾಡುವ ವಿಧಾನ ಇವುಗಳಿಂದ ಭರತನ ಇಂಗಿತಗಳನ್ನು ತಾತ್ವಿಕವಾಗಿ ಗ್ರಹಿಸು.

ಯಾಕೆಂದರೆ, ಸರ್ವ ಸಮೃದ್ಧಿಯಿಂದ ಕೂಡಿರುವ ರಾಜ್ಯವು ಯಾರ ಮನಸ್ಸನ್ನು ಆಕರ್ಷಿಸದೆ ಇದ್ದೀತು? ರಾಜ್ಯಾಡಳಿತದ ಈ ದೀರ್ಘಕಾಲದ ಸಂಬಂಧದಲ್ಲಿ ಒಂದು ವೇಳೆ ಭರತನು ತಾನೇ ರಾಜನಾಗಿ ಮುಂದುವರಿಯಲು ಇಚ್ಛಿಸಿದರೆ, ಈ ಕೋಸಲ ರಾಜ್ಯವನ್ನು ಅವನೇ ಸಂತೋಷದಿಂದ ಪಾಲಿಸಲಿ."

ಶ್ರೀರಾಮನದು ಇಲ್ಲಿ ಅಂತಃಕರಣದಿಂದ ಕೂಡಿದ ಪರೇಂಗಿತಜ್ಞತೆ. ಆತನಿಗೆ ಭರತನ ಬಗ್ಗೆ ಅಪಾರಪ್ರೇಮ; ಹಿರಿಯನಾದ ತಾನು ಎಂದೂ ತಪ್ಪಿ ನಡೆಯಬಾರದೆಂಬ ವಿವೇಚನೆ. ಭರತ ಹದಿನಾಲ್ಕು ವರ್ಷಗಳಷ್ಟು ದೀರ್ಘಕಾಲ – ಅದು ತನ್ನ ಪರವಾಗಿಯೇ ಆದರೂ – ರಾಜ್ಯವನ್ನು ಆಳಿದ್ದಾನೆ. ಹಾಗಾಗಿ ಅವನಿಗೇನಾದರೂ ರಾಜ್ಯದ ಬಗ್ಗೆ ಮಮಕಾರಬೆಸೆದುಕೊಂಡಿದ್ದರೆ? ಅದು ಅವನ ಸೂಕ್ಷ್ಮ ಮುಖಭಾವಗಳಲ್ಲಿ ವ್ಯಕ್ತವಾದರೆ? ಹಾಗಾದ ಪಕ್ಷದಲ್ಲಿ ರಾಜ್ಯವನ್ನು ಅವನೇ ಇಟ್ಟುಕೊಳ್ಳಲಿ. ಇದು ಇಲ್ಲಿ ರಾಮನ ಪರಮ ಉದಾತ್ತತೆ.

ಸೋದರನ ಸಲುವಾಗಿ ಅಷ್ಟೊಂದು ಆರ್ದ್ರವಾಗಿ ಮಿಡಿದ ರಾಮನ ಪರೇಂಗಿತಜ್ಞತೆ ಮಡದಿಯ ವಿಷಯವಾಗಿ ಯಾಕೆ ಸ್ರವಿಸಲಿಲ್ಲ? ಸೀತೆ ಎಂಥ ಸುಕೋಮಲೆ, ಸುಭಗೆ ಎಂಬುದು ಅವನಿಗೆ ಗೊತ್ತು. ತುಂಬಿದ ಜನರೆದುರು ಇಂತಹ ಬಿರುನುಡಿಗಳನ್ನಾಡಿದರೆ ಆಕೆಯ ಹೃದಯ ಹೇಗೆ ತತ್ತರಿಸುತ್ತದೆಂಬುದೂ ತಿಳಿದಿದೆ. ಆದರೂ ಪತ್ನಿಯ ಇಂಗಿತವನ್ನರಿಯುವ ಕನಿಷ್ಠ ಪ್ರಯತ್ನವನ್ನೂ ಆ ಸೀತಾಪತಿ ಮಾಡಲಿಲ್ಲ.



ಆದರೆ, ಸುತರಾಂ ಹಾಗಲ್ಲದ ಇನ್ನೊಂದು ಪ್ರಕರಣವನ್ನು ಈಗ ನೋಡಿ –

ರಾಮ – ರಾವಣ ಯುದ್ಧ ಅಂತ್ಯಗೊಂಡಿದೆ. ರಾವಣ ಮಡಿದಿದ್ದಾನೆ. ಯುದ್ಧಭೂಮಿ ನಿರಾಳ ವಾಗಿದೆ. ಆಗ ರಾಮನನ್ನು ಸಂದರ್ಶಿಸಲು ಜಾನಕಿ ಅಲ್ಲಿಗೆ ಬರುತ್ತಾಳೆ. ಅವಳನ್ನು ಕಂಡು ರಾಮನಿಗೆ ಸಂತೋಷವೇನೂ ಆಗಿಲ್ಲ, ಬದಲಿಗೆ ಹೃದಯವೆಲ್ಲ ಕಲಕಿದಂತಾಗಿದೆ. ನಿರ್ಭಾವುಕನಾಗಿ ಅವನು ಸೀತೆಗೆ ಹೇಳುವ ನಿಷ್ಠುರ ನುಡಿಗಳು ಇವು –

"ಸೀತೆ, ನನ್ನ ರಣ ಪರಿಶ್ರಮಗಳು ನಿನಗೋಸ್ಕರ ಖಂಡಿತ ಅಲ್ಲ. ಸದಾಚಾರದ ಸಂರಕ್ಷಣೆಗಾಗಿ ಮತ್ತು ಅಪವಾದ ನಿರ್ಮೂಲನೆಗಾಗಿ ನಾನು ಈ ಕಾರ್ಯವನ್ನು ಮಾಡಿದ್ದು.

ನಿನ್ನಿಂದ ನನಗಾಗಬೇಕಾದ್ದು ಏನೂ ಇಲ್ಲ.

ಯಾವ ಪುರುಷನು ತಾನೇ ಬಹುಕಾಲ ಪರಗೃಹದಲ್ಲಿರುವ ಸ್ತ್ರೀಯನ್ನು ಸ್ವೀಕರಿಸುತ್ತಾನೆ ? ಇದೀಗ ತಾನೇ ರಾವಣನ ಮಡಿಲಿನಿಂದ ಜಾರಿ ಬಂದಿರುವ ಹೆಣ್ಣು ನೀನು. ಅವನ ಕೆಟ್ಟ ಕಣ್ಣಿಗೆ ಸಿಲುಕಿರುವವಳು ನಿನ್ನಲ್ಲಿ ನನಗೆ ಯಾವ ಆಸಕ್ತಿಯೂ ಇಲ್ಲ. ನಿನ್ನ ಮನ ಬಂದ ಕಡೆಗೆ ಹೊರಟುಹೋಗು."

ತನ್ನ ಸೋದರನ ಸಲುವಾಗಿ ಅಷ್ಟೊಂದು ಆರ್ದ್ರವಾಗಿ ಮಿಡಿದ ರಾಮನ ಪರೇಂಗಿತಜ್ಞತೆ ಮಡದಿಯ ವಿಷಯವಾಗಿ ಯಾಕೆ ಸ್ರವಿಸಲಿಲ್ಲ? ಸೀತೆ ಎಂಥ ಸುಕೋಮಲೆ, ಸುಭಗೆ ಎಂಬುದು ಅವನಿಗೆ ಗೊತ್ತು. ತುಂಬಿದ ಜನರೆದುರು ಇಂತಹ ಬಿರುನುಡಿಗಳನ್ನಾಡಿದರೆ ಆಕೆಯ ಹೃದಯ ಹೇಗೆ ತತ್ತರಿಸುತ್ತದೆಂಬುದೂ ತಿಳಿದಿದೆ. ಆದರೂ ಪತ್ನಿಯ ಇಂಗಿತವನ್ನರಿಯುವ ಕನಿಷ್ಠ ಪ್ರಯತ್ನವನ್ನೂ ಆ ಸೀತಾಪತಿ ಮಾಡಲಿಲ್ಲ.

ಅವನ ಕಟುಮಾತುಗಳ ಮುಂದುವರಿಕೆಯನ್ನು ಗಮನಿಸಿ –

"ಜೀವನಕ್ಕೆ ಬೇಕಾದರೆ ನೀನು ಲಕ್ಷ್ಮಣನನ್ನೋ ಭರತನನ್ನೋ ಆಶ್ರಯಿಸು. ಅಥವಾ ವಾನರೇಂದ್ರ ಸುಗ್ರೀವನಿದ್ದಾನೆ. ರಾಕ್ಷಸೇಂದ್ರ ವಿಭೀಷಣ ಇದ್ದಾನೆ. ಯಾರನ್ನು ಬೇಕಾದರೂ ಹೊಂದಬಹುದು."

ಇವು ಮರ್ಯಾದಾ ಪುರುಷೋತ್ತಮನೊಬ್ಬನ ವಾಕ್ಕುಗಳಲ್ಲ. ಅಲ್ಲದೆ ಸೀತೆಯನ್ನು ಕುರಿತು ಇಂತಹ ಕಠೋರ ಶಬ್ದಗಳನ್ನಾಡಲು ರಾಮನಿಗೆ ಯಾವ ನೈತಿಕ ಹಕ್ಕು ತಾನೇ ಇತ್ತು ?

ದಾಂಪತ್ಯದಲ್ಲಿ ಕಲಹವಾದರೆ "ನೀನು ನನಗೆ ಬೇಡ!" ಎಂದಷ್ಟೇ ಪರಸ್ಪರರು ಹೇಳಬಹುದು. ಹಾಗಲ್ಲದೆ ಅವರಿವರ ಬಳಿ ಹೋಗು ಎಂದು ಅಪ್ಪಣೆ ಮಾಡಲು ಇಬ್ಬರಿಗೂ ಯಾವ ಹಕ್ಕೂ ಇಲ್ಲ. ಆದರೂ ರಾಮ ಹಾಗೆ ಮಾಡಿದ. ತಾನು ನಿರ್ದೇಶಿಸುವ ತನ್ನ ಮಿತ್ರರಲ್ಲಿ ಸೀತೆಯ ಮನಸ್ಸು ಪ್ರವರ್ತಿಸಿಬಿಡಬೇಕು ಅನ್ನುವುದನ್ನು ರಾಮ ಹೇಗೆ ನಿರ್ಧರಿಸುತ್ತಾನೆ ? ಇದು ಪೌರುಷದ ದುರುಪಯೋಗ. ಮುಂದೆಂದೋ ಅಯೋಧ್ಯೆಯ ಪ್ರಜೆಯೊಬ್ಬ ಸೀತೆಯ ಕುರಿತು ಅನ್ನುವ ಮಾತುಗಳನ್ನು ಸ್ವತಃ ರಾಮನೇ ಸಾಕಷ್ಟು ಮುಂಚೆ ಆಡಿ ಮುಗಿಸಿದ್ದಾನೆ.

ಸತ್ಯವನ್ನು ಪ್ರಕಟಿಸಲು ಹೀಗೆ ಮಾಡಿದೆ ಎಂದು ರಾಮನೇನೋ ಅಗ್ನಿಗೆ ಹೇಳುತ್ತಾನೆ. ಈ ಕಾರಣಕ್ಕಾಗಿ ಸೀತೆಯನ್ನು ಅಷ್ಟೊಂದು ನೋಯಿಸಬೇಕಿತ್ತೆ ? ಅಂಥದೊಂದು ತೇಜೋವಧೆಯ ಅಗತ್ಯವಾದರೂ ಇತ್ತೆ ?

**ಭಾರತಿ ಕಾಸರಗೋಡು**
ನಂ. ಜಿ–೫, 'ಶ್ರೀನಿಧಿ ಷಟರ್ಸ್', ಸೈಟ್ ನಂ.೧,
'ರವಿಗುಡ್ಡ', ಇಟ್ಟಮಡು ಬನಶಂಕರಿ ೩ನೇ ಹಂತ
ಬೆಂಗಳೂರು– ೫೬೦ ೦೮೫

### ಅಭಿನಂದನೆ...

ಧಾರವಾಡದ ಹಿರೇಮಲ್ಲೂರ ಈಶ್ವರನ್ ಪದವಿ ಪೂರ್ವ ವಿಜ್ಞಾನ ಮಹಾವಿದ್ಯಾಲಯದ ವತಿಯಿಂದ ನೀಡುವ 'ಲೋಕ ಶಿಕ್ಷಕಿ ಸಾವಿತ್ರಿಬಾಯಿ ಫುಲೆ ಪ್ರಶಸ್ತಿ'ಯು ಲೇಖಕಿ ದು. ಸರಸ್ವತಿ ಅವರಿಗೆ ಲಭಿಸಿದೆ. ಇವರಿಗೆ 'ನವಕರ್ನಾಟಕ' ಹಾಗೂ 'ಹೊಸತು'ವಿನ ಅಭಿನಂದನೆಗಳು.

# ಗುರುವಿಗೆ ಗುಲಾಮನಲ್ಲ ಶಿಷ್ಯ...

ಡಾ॥ ಬಸವರಾಜ ಸಾದರ



**ಶೂ**ದ್ರರ ವಿದ್ಯೆಯ ವಿಷಯದಲ್ಲಿ ಭಾರತೀಯ ಆದಿಕಾವ್ಯಗಳನ್ನು ಅನುಲಕ್ಷಿಸಿ ಹೇಳುವುದಾದರೆ ಇಲ್ಲಿದ್ದ ಗುರು–ಶಿಷ್ಯ ಪರಂಪರೆ ಶೋಷಣಾ ಮೂಲವಾದದ್ದು. ರಾಜಪ್ರಭುತ್ವ ಮತ್ತು ಮೇಲ್ವರ್ಣದವರಿಗೆ ಮಾತ್ರ ಪೂರಕ ಹಾಗೂ ಅನುಕೂಲಕರವಾಗಿದ್ದ ಆ ವಿದ್ಯಾಪರಂಪರೆಯು ಹೀನಕುಲದವರ 'ಬೆರಳ'ನ್ನು ಪಡೆದು 'ಕೊರಳ'ನ್ನು ಕತ್ತರಿಸುವ ಕುದ್ದಲಗೇಡಿ ಕೆಲಸವನ್ನು ಮಾಡಿದ್ದು ಅದೇ ಕಾವ್ಯ–ಪುರಾಣಗಳಲ್ಲಿ ದಾಖಲಾಗಿದೆ. ಶೂದ್ರತಪಸ್ವಿಯ ಏಕಾಗ್ರಚಿತ್ತದ ಸಾಧನೆಯನ್ನು ಜಾತಿಯ ಹಿನ್ನೆಲೆಯಲ್ಲಿ ವಿರೋಧಿಸಿದ ಹಾಗೆಯೇ, ಕರ್ಣನಂಥ ಮೀಂಗುಲಿಗ ಶೂರನ ವಿದ್ಯಾ ಸಾಮರ್ಥ್ಯವನ್ನು ದಾನವಾಗಿ ಪಡೆದು ಅವನನ್ನು ಸೋಲುವ ಹಾಗೆ ಮತ್ತು ಸಾಯುವ ಹಾಗೆ ನೋಡಿಕೊಂಡ ಮಹಾಪುಣ್ಯಾತ್ಮ ಗುರುಗಳು ಈ ಪರಂಪರೆಯಲ್ಲೇ ಇದ್ದಾರೆ. ಸತ್ಯಕಾಮ ಜಾಬಾಲನದೋ ಮತ್ತೊಂದು ಬೇರೆಯ ಕಥೆ. ಕಾಲಾಂತರದಲ್ಲಿ ವಿದ್ಯೆ ಕೊಡುವುದು ಒಂದು ವೃತ್ತಿಯಾಗಿ ಬದಲಾದಾಗಲೂ ಇಂಥ ಹೀನ ಪರಂಪರೆ ಮುಂದುವರಿಯುತ್ತಲೇ ಬಂತು. ಮುಂದೆ ಈ ನೆಲದಲ್ಲಿ ಜನ್ಮತಳೆದ ಕೆಲವು ಜನಪರ ಧರ್ಮಗಳು ಕೆಳವರ್ಗ–ವರ್ಣದ ಸಾಮಾನ್ಯರಿಗೆ ವಿದ್ಯೆ ಕೊಡುವ ವಿಷಯದಲ್ಲಿ ಆಸಕ್ತಿ ತೋರಿದ ಕಾರಣಕ್ಕಾಗಿ ಅವರೂ ಅಲ್ಪ–ಸ್ವಲ್ಪ ವಿದ್ಯಾವಂತರಾಗುವ ಅವಕಾಶಗಳು ಪ್ರಾಪ್ತವಾದವು. ಇಲ್ಲಿಯೂ ಉಚ್ಚವರ್ಣದ ಗುರುವರ್ಗ ಮಾಡುತ್ತಿದ್ದ ನೀಚಕೃತ್ಯಗಳು ಕಣ್ಣಿಗೆ ರಾಚುವಂತಿದ್ದವು. ಅಂಬಿಗರ ಚೌಡಯ್ಯನವರ ಈ ಮುಂದಿನ ವಚನವನ್ನು ಗಮನಿಸಿದರೆ ಆಗಿನ ವಾಸ್ತವ ಸ್ಥಿತಿ ಏನಿತ್ತೆಂಬುದು ಸ್ಪಷ್ಟವಾಗಿ ವಿದಿತವಾಗುತ್ತದೆ.

*ಕುಲಹೀನ ಶಿಷ್ಯಂಗೆ ಅನುಗ್ರಹವ ಮಾಡಿ,*
*ತಿರುಗಿ ಅವನ ಮನೆಯಲ್ಲಿ ಉಣ್ಣಬಾರದೆಂದು*
*ಅಕ್ಕಿ ಕಣಕವ ಕೊಂಡುಹೋಗುವ ಗುರುವಿನ ಕಂಡರೆ,*
*ಕೆಡವಿ ಹಾಕಿ ಮೂಗನೆ ಕೊಯ್ದು*
*ಇಟ್ಟಂಗಿಯ ಕಲ್ಲಿಲೆ ತಿಕ್ಕಿ*
*ಸಾಸಿವೆಯ ಹಿಟ್ಟನೆ ತಳಿದು*
*ಮೇಲೆ ಲಿಂಬಿಯ ಹುಳಿಯನೆ ಹಿಂಡಿ*
*ಪಡುವ ಗಾಳಿಗೆ ಹಿಡಿಯೆಂದ ನಮ್ಮ ಅಂಬಿಗರ ಚೌಡಯ್ಯ.*

ಉಚ್ಚವರ್ಣದ ಗುರುವಿನ ಬೂಟಾಟಿಕೆ ಆ ಮಟ್ಟದ್ದಾಗಿತ್ತೆಂದೇ ಚೌಡಯ್ಯನವರ ಸಿಟ್ಟು ಈಪರಿ ತಾರಕಕ್ಕೇರಿದ್ದು. ಇದು ಸಹಜವೆ. "ಒಣ ಉಲುಪಿ" ಪಡೆದು ವಿದ್ಯೆ ಕೊಡುವ ಇಂಥ ಗುರುಗಳು ಶಿಷ್ಯರನ್ನು ಗುಲಾಮನಂತೆ ಕಾಣುವ ಕೀಳು ಪರಂಪರೆ ಮುಂದುವರಿದು ಬಂದುದಕ್ಕೆ ಉದಾಹರಣೆಗಳಿವೆ. ಗುರುವಿನ ಗುಲಾಮನಾದಾಗಲೇ ವಿದ್ಯೆ, ಮುಕ್ತಿ ದೊರೆಯುತ್ತವೆಯೆಂಬ ಪರಿಕಲ್ಪನೆಯಲ್ಲಿ ಗುರುವಿನ ಬಗೆಗಿನ ಭಾವನಾತ್ಮಕ ಗೌರವಕ್ಕಿಂತ ಹೆಚ್ಚಾಗಿ ದಾಸ್ಯದ ಮನೋಭಾವವೇ ಎದ್ದು ಕಾಣುತ್ತದೆ. ಗುರು–ಶಿಷ್ಯ ಎಂಬ ಈ ಬಗೆಯ ಶ್ರೇಣೀಕೃತ ವ್ಯವಸ್ಥೆಯಲ್ಲಿ ಗುರು ಯಾವಾಗಲೂ ಮೇಲೆ, ಶಿಷ್ಯ ಯಾವಾಗಲೂ ಕೆಳಗೆ ಎಂಬ ತಾರತಮ್ಯ ನಿಗದಿಯಾದ ಕಾರಣ ಶಿಷ್ಯನ ಸ್ಥಾನ ಯಾವಾಗಲೂ ಗೌಣವೇ ಆಯ್ತು. ಇಂಥ ಮೇಲು–ಕೀಳಿನ ಸ್ಥಿತಿಯನ್ನು ವೈಚಾರಿಕ ನೆಲೆಯಲ್ಲಿ ಪ್ರಶ್ನಿಸಿ, ಪರಿಷ್ಕರಿಸಿ ಗುರು–ಶಿಷ್ಯ ಇಬ್ಬರ ಸಂಬಂಧವನ್ನು "ಗುರು ಮುಟ್ಟಿ ಗುರುವಾಯಿತ್ತು" ಎಂದು ಹೊಸ ಬಗೆಯಲ್ಲಿ ವ್ಯಾಖ್ಯಾನಿಸಿದವರು ಕರ್ನಾಟಕದ ಹನ್ನೆರಡನೆಯ ಶತಮಾನದ ವಚನಕಾರರು. ಈ ವಿಷಯವಾಗಿ ಚೆನ್ನಬಸವಣ್ಣ, ಅಲ್ಲಮಪ್ರಭು, ಅಂಬಿಗರ ಚೌಡಯ್ಯ ಮೊದಲಾದ ಶರಣರ ಹಲವಾರು ವಚನಗಳು ಗಮನಾರ್ಹವಾಗಿದ್ದು, ಅವು ಗುರು–ಶಿಷ್ಯರ ನಡುವಿನ ಸಂಬಂಧದ ಸ್ವರೂಪ ಹೇಗಿರಬೇಕೆಂಬುದನ್ನು ಅತ್ಯಂತ ಸ್ಪಷ್ಟವಾಗಿ ನುಡಿಯುತ್ತವೆ. ಈ ವಚನಗಳು ಗುರು–ಶಿಷ್ಯರ ಸಂಬಂಧವನ್ನು ಕುರಿತ ಶರಣರ ಒಟ್ಟು ಅಪೇಕ್ಷೆಯನ್ನು ವ್ಯಕ್ತಪಡಿಸುವ ಹಾಗೆಯೇ ಅವರ ನಿಜನಡೆಯನ್ನೂ ದಾಖಲಿಸುತ್ತವೆ.

ಗುರುವಿನ ಗುಲಾಮನಾದಾಗಲೇ ವಿದ್ಯೆ, ಮುಕ್ತಿ ದೊರೆಯುತ್ತವೆಯೆಂಬ ಪರಿಕಲ್ಪನೆಯಲ್ಲಿ ಗುರುವಿನ ಬಗೆಗಿನ ಭಾವನಾತ್ಮಕ ಗೌರವಕ್ಕಿಂತ ಹೆಚ್ಚಾಗಿ ದಾಸ್ಯದ ಮನೋಭಾವವೇ ಎದ್ದು ಕಾಣುತ್ತದೆ. ಗುರು–ಶಿಷ್ಯ ಎಂಬ ಈ ಬಗೆಯ ಶ್ರೇಣೀಕೃತ ವ್ಯವಸ್ಥೆಯಲ್ಲಿ ಗುರು ಯಾವಾಗಲೂ ಮೇಲೆ, ಶಿಷ್ಯ ಯಾವಾಗಲೂ ಕೆಳಗೆ ಎಂಬ ತಾರತಮ್ಯ ನಿಗದಿಯಾದ ಕಾರಣ ಶಿಷ್ಯನ ಸ್ಥಾನ ಯಾವಾಗಲೂ ಗೌಣವೇ ಆಯ್ತು. ಇಂಥ ಮೇಲು–ಕೀಳಿನ ಸ್ಥಿತಿಯನ್ನು ವೈಚಾರಿಕ ನೆಲೆಯಲ್ಲಿ ಪ್ರಶ್ನಿಸಿ, ಪರಿಷ್ಕರಿಸಿ ಗುರು–ಶಿಷ್ಯ ಇಬ್ಬರ ಸಂಬಂಧವನ್ನು "ಗುರು ಮುಟ್ಟಿ ಗುರುವಾಯಿತ್ತು" ಎಂದು ಹೊಸ ಬಗೆಯಲ್ಲಿ ವ್ಯಾಖ್ಯಾನಿಸಿದವರು ಕರ್ನಾಟಕದ ಹನ್ನೆರಡನೆಯ ಶತಮಾನದ ವಚನಕಾರರು. ಈ ವಿಷಯವಾಗಿ ಚೆನ್ನಬಸವಣ್ಣ, ಅಲ್ಲಮಪ್ರಭು, ಅಂಬಿಗರ ಚೌಡಯ್ಯ ಮೊದಲಾದ ಶರಣರ ಹಲವಾರು ವಚನಗಳು ಗಮನಾರ್ಹವಾಗಿದ್ದು, ಅವು ಗುರು–ಶಿಷ್ಯರ ನಡುವಿನ ಸಂಬಂಧದ ಸ್ವರೂಪ ಹೇಗಿರಬೇಕೆಂಬುದನ್ನು ಅತ್ಯಂತ ಸ್ಪಷ್ಟವಾಗಿ ನುಡಿಯುತ್ತವೆ. ಈ ವಚನಗಳು ಗುರು–ಶಿಷ್ಯರ ಸಂಬಂಧವನ್ನು ಕುರಿತ ಶರಣರ ಒಟ್ಟು ಅಪೇಕ್ಷೆಯನ್ನು ವ್ಯಕ್ತಪಡಿಸುವ ಹಾಗೆಯೇ ಅವರ ನಿಜನಡೆಯನ್ನೂ ದಾಖಲಿಸುತ್ತವೆ.

*ಗುರುಶಿಷ್ಯಸಂಬಂಧವನೇನೆಂದುಪಮಿಸುವೆ?*
*ಜ್ಯೋತಿಯಲೊದಗಿದ ಜ್ಯೋತಿಯಂತಿರಬೇಕು.*
*ದರ್ಪಣದೊಳಡಗಿದ ಪ್ರತಿಬಿಂಬದಂತಿರಬೇಕು.*
*ಸ್ಫಟಿಕದೊಳಗಿರಿಸಿದ ರತ್ನದಂತಿರಬೇಕು.*
*ರೂಪಿನ ನೆಳಲಿನ ಅಂತರಂಗದಂತಿರಬೇಕು.*
*ಇದು ಕಾರಣ, ಕೂಡಲ ಚೆನ್ನಸಂಗಯ್ಯ*
*ದರ್ಪಣವ ದರ್ಪಣಕ್ಕೆ ತೋರಿದಂತಿರಬೇಕು.*

ಇಲ್ಲಿ ಎಡೆಪಡೆದ ಉಪಮಾನ–ಉಪಮೇಯಗಳಲ್ಲಿ ಹೇಗೆ ಭಿನ್ನಭಾವವಿಲ್ಲವೋ, ಅದೇ ರೀತಿ ಗುರು–ಶಿಷ್ಯರ ಸಂಬಂಧದಲ್ಲೂ ಅಂತರವಿಲ್ಲ, ಇರಬಾರದೆಂಬ ನಿಲುವು ಚೆನ್ನಬಸವಣ್ಣನವರದು. ಇಂಥ ಸಮಾನ ನೆಲೆಯೇ ವಚನಕಾರರು ಕಟ್ಟಬಯಸಿದ್ದ ಹೊಸ ಸಮಾಜದ ಮೂಲ ಬುನಾದಿಯಾಗಿತ್ತು. ಗುರುವಿರಲಿ, ಶಿಷ್ಯನಿರಲಿ ಇಬ್ಬರೂ ಆ ಬಗೆಯ ಸಮಾನ ಸ್ತರದಲ್ಲಿ ಸ್ಪಂದಿಸಿದಾಗಲೇ ಹೊಸ ಚಿಂತನೆ ಹುಟ್ಟಲು ಸಾಧ್ಯವೆಂಬ ಸತ್ಯವನ್ನು ಅವರು ಮನಗಂಡಿದ್ದರು. ಗುರು–ಶಿಷ್ಯ ಸಂಬಂಧದಲ್ಲಿ ಒಡೆಯ–ಗುಲಾಮನೆಂಬ ತರ–ತಮ ವಿಚಾರಗಳಿದ್ದರೆ ಶಿಷ್ಯನ ಜ್ಞಾನಕ್ಕೇನು ಬೆಲೆ? ಅಂತೆಯೇ ವಚನಕಾರರು ಆ ಬಗೆಯ ಸಂಬಂಧವನ್ನು ನಿರಾಕರಿಸಿ ಗುರು–ಶಿಷ್ಯರಲ್ಲಿರಬೇಕಾದ ಸಮಭಾವವನ್ನು ಕುರಿತು ಅತ್ಯಂತ ಖಚಿತವಾದ ಅಭಿಪ್ರಾಯಗಳನ್ನು ದಾಖಲಿಸುತ್ತಾರೆ. ಅಲ್ಲಮಪ್ರಭುವಂತೂ ಈ ಸಂಬಂಧದ ಪರಿಣಾಮವನ್ನು ಇನ್ನೂ ಹೆಚ್ಚು ಖಚಿತಗೊಳಿಸುತ್ತಾನೆ.

*ಗುರು, ಶಿಷ್ಯ ಸಂಬಂಧವನರಸಲೆಂದು ಹೋದಡೆ,*
*ತಾನೆ ಗುರುವಾದ ತಾನೆ ಶಿಷ್ಯನಾದ, ತಾನೆ ಲಿಂಗವಾದ.*

ಎಂಬ ಆತನ ಈ ಮಾತುಗಳು ಗುರು–ಶಿಷ್ಯಭಾವಗಳ ಅಭಿನ್ನತೆಯನ್ನೇ ಸಾರುತ್ತವೆ. ಇವು ಬರೀ ಮಾತಲ್ಲ; ಗುರುವು ಶಿಷ್ಯನಾಗುವ ಹಾಗೂ ಶಿಷ್ಯನು ಗುರುವಾಗುವ ಏರಿಕೆ–ಇಳಿಕೆಯ ಕ್ರಮಗಳೆರಡರ ಮೂಲಕ ತರ–ತಮಗಳನ್ನು ತೊಡೆದುಹಾಕುತ್ತ, ಹಾಗೇ ಸಾಗುತ್ತ ವಿಚಾರದ ಮೇಲ್ಚಲನೆಯನ್ನು ಸಾಧಿಸುವ ಕ್ರಮವನ್ನು ವ್ಯಾಖ್ಯಾನಿಸುವ ರೀತಿ ಕೂಡ.

ಶಿಷ್ಯನ ಗುಲಾಮತನ ಮತ್ತು ಕಿಂಕರತ್ವದಲ್ಲಿರುವ ಕೀಳ್ತನದ ನೆಲೆಯನ್ನು ತಿರಸ್ಕರಿಸುವ ವಚನಕಾರರು ಗುರು–ಶಿಷ್ಯರ ನಡುವೆ ನಿಜವಾಗಿ ಇರಬೇಕಾದ ಭಾವನಾತ್ಮಕ ಸಂಬಂಧದ ಸ್ವರೂಪವನ್ನೂ ಸ್ಪಷ್ಟಪಡಿಸುತ್ತಾರೆ. ಇಲ್ಲಿ ಶಿಷ್ಯನೊಬ್ಬ ತಾನು ಕೀಳು ಎಂದುಕೊಳ್ಳುವ ಅಥವಾ ಗುರು ತಾನು ಮೇಲು ಎಂದುಕೊಳ್ಳುವ "ಪ್ರತಿಭಾವ"ವಿರದೆ, ಉಭಯವಳಿದ ಏಕೋಭಾವ ಪ್ರಧಾನವಾಗಿರುವುದನ್ನು ಎತ್ತಿ ಹೇಳುತ್ತಾರೆ. ಚೆನ್ನಬಸವಣ್ಣನ ಮತ್ತೊಂದು ವಚನ ಈ ಹಿನ್ನೆಲೆಯಲ್ಲಿ ಗಮನಾರ್ಹವಾಗುತ್ತದೆ.

*ಗುರುವೆಂಬ ಪ್ರತಿಭಾವವಿಲ್ಲದ ಶಿಷ್ಯ;*
*ಶಿಷ್ಯನೆಂಬ ಪ್ರತಿಭಾವವಿಲ್ಲದ ಗುರು;*
*ಏನೆಂಬೆನೇನೆಂಬೆ ಎರಡಿಲ್ಲದ ಘನವನೇನೆಂಬೆನೇನೆಂಬೆ !*
*ಉಭಯವಳಿದು ಒಂದಾದುದನೇನೆಂಬೆನೇನೆಂಬೆ;*
*ಕೂಡಲ ಚೆನ್ನಸಂಗಯ್ಯನಲ್ಲಿ*
*ಗುರುಶಿಷ್ಯ ಸಂಬಂಧವಪೂರ್ವ.*

ವಚನಕಾರರ ಪ್ರಕಾರ ಇಂಥ ಅದ್ವೈತವೇ ನಿಜವಾದ ಗುರು–ಶಿಷ್ಯಸಂಬಂಧ. ಅದಕ್ಕಾಗಿಯೇ ಅವರು "ಗುರು–ಶಿಷ್ಯ ಸಂಬಂಧವಪೂರ್ವ" ಎಂಬ ಅರ್ಥಪೂರ್ಣ ಮಾತನ್ನು ಹೇಳಿದ್ದಾರೆ. ಜ್ಞಾನಕ್ಕೆ ಜ್ಞಾನ ಸಮವೆಂಬ ಈ ನಿಶ್ಚಿತ ನಿಲುವು ಶಿಷ್ಯನ ಜ್ಞಾನವಿಕಾಸಕ್ಕೆ ಹೆಚ್ಚಿನ ಬಲವನ್ನು ತಂದುಕೊಡುವಂತೆ, ಗುರುವಿನ ಗುರುತ್ವವನ್ನೂ ಎತ್ತಿ ತೋರಿಸುತ್ತದೆ. ಗುರು–ಶಿಷ್ಯರ ನಡುವಿನ ಈ ಸಂಬಂಧ ಹೇಗೆ ಕುದುರುತ್ತದೆ, ಹೇಗೆ ಕ್ರಿಯಾಶೀಲವಾಗುತ್ತದೆ ಎಂಬುದನ್ನು ವಿಶದೀಕರಿಸುತ್ತ, ಅದಕ್ಕೊಂದು ಆಕೃತಿಯ ಸ್ವರೂಪವನ್ನು ಕೊಡುವ ಉರಿಲಿಂಗಪೆದ್ದಿಯು ಈ ಸಂಬಂಧವನ್ನು "ಬೀಜವೃಕ್ಷ ನ್ಯಾಯ"ಕ್ಕೆ ಸಮೀಕರಿಸುತ್ತಾನೆ. ತುಂಬ ಅರ್ಥಪೂರ್ಣವಾಗಿರುವ ಅವನ ವಚನವು ಪ್ರಯೋಗಶಾಲೆಯ ಪರಿಣಾಮದಂತೆ ಕಾಣುತ್ತದೆ.

*ಗುರುವಿನ ಮಹತ್ವವನು, ಶಿಷ್ಯನ ಗುರುತ್ವವನು ಆರಯ್ಯ ಬಲ್ಲವರು?*
*ಗುರು ಶಿಷ್ಯನಾದ ಪರಿಯನು, ಶಿಷ್ಯ ಗುರುವಾದ ಪರಿಯನು ಆರಯ್ಯ ಬಲ್ಲವರು?*
*ವಾಙ್ಮನೋತೀತ ಉಪಮಿಸಬಾರದ ಘನವು, ಮಹಾಕ್ರೀಯನು.*
*ಭಕ್ತಿಯಿಂದ ಗುರು ಭಕ್ತವತ್ಸಲನಾಗಿ, ಶಿಷ್ಯ ಗುರುವಾದ ಪರಿ,*
*ಅದು ಬೀಜವೃಕ್ಷ ನ್ಯಾಯದಂತೆ ಅವಿನಾಭಾವವಯ್ಯಾ,*
*ಉರಿಲಿಂಗಪೆದ್ದಿಪ್ರಿಯ ವಿಶ್ವೇಶ್ವರ.*

ಈ ಬಗೆಯ ಅವಿನಾಭಾವ ಸಂಬಂಧವೇ ಅವರಿಬ್ಬರ ಸಮಾನ ಮಹತ್ವವನ್ನು ಸಾರುತ್ತದೆ. ಇಲ್ಲಿ ಉಕ್ತವಾಗಿರುವ "ಶಿಷ್ಯ ಗುರುವಾದ ಪರಿ" ಎಂಬ ಹಾಗೂ "ಅವಿನಾಭಾವವಯ್ಯಾ" ಎಂಬ ಮಾತುಗಳು ನಮ್ಮ ಗಮನವನ್ನು ಸೆಳೆಯುತ್ತವೆ. ಬೀಜ ಮೊದಲೋ, ವೃಕ್ಷ ಮೊದಲೋ ಎಂಬ ಜಿಜ್ಞಾಸೆಗೆ ಹೇಗೆ ಉತ್ತರವಿಲ್ಲವೋ ಹಾಗೆಯೇ ಗುರು ಶ್ರೇಷ್ಠನೋ, ಶಿಷ್ಯ ಶ್ರೇಷ್ಠನೋ ಎಂಬ ಚರ್ಚೆಗೂ ಉತ್ತರವಿಲ್ಲ. ಕೊನೆಗೆ ಇಬ್ಬರೂ ಶ್ರೇಷ್ಠರೆ ಎಂಬ ನಿಲುವಿಗೆ ಬರಬೇಕಾಗುತ್ತದೆ. ಉರಿಲಿಂಗಪೆದ್ದಿಯು ಹೇಳಹೊರಟಿದ್ದೂ ಅದನ್ನೇ. ಇಲ್ಲಿ ಇನ್ನೂ ಮುಂದೆ ಹೋಗುವ ಚೆನ್ನಬಸವಣ್ಣನು –

*ಗುರುವೆನ್ನ ತನುವ ಬೆರಸಿದ ಕಾರಣ*
*ಗುರುವಿನ ತನುವ ನಾ ಬೆರಸಿದ ಕಾರಣ, ಗುರು ಶುದ್ಧನಾದನಯ್ಯ.*

ಎಂದು ಹೇಳಿ, ಗುರು ತನ್ನ ಶಿಷ್ಯನೊಂದಿಗೆ ಅದ್ವೈತಭಾವದಲ್ಲಿ ಜ್ಞಾನವನ್ನು ಹಂಚಿಕೊಂಡಾಗ ಮಾತ್ರವೆ ಆತನಿಗೆ "ಶುದ್ಧತ್ವ" ಪ್ರಾಪ್ತವಾಗುತ್ತದೆ ಎಂದು ಶಿಷ್ಯನ ಶ್ರೇಷ್ಠತೆಯನ್ನೇ ಎತ್ತಿ ಹಿಡಿಯುತ್ತಾನೆ. ಗುರು ಶುದ್ಧನಾಗುವುದು ಶಿಷ್ಯನು ಗುರುವಿನ ವಿಚಾರಗಳೊಂದಿಗೆ ಸಮೀಕರಣಗೊಂಡಾಗಲೇ ಎಂಬ ವಿಚಾರವು ಗುರು–ಶಿಷ್ಯರ ಸಂಬಂಧವನ್ನು ಕುರಿತಂತೆ ವ್ಯಕ್ತವಾದ ವಿನೂತನ ಚಿಂತನೆ. ಹಿರಿಯ ವಚನಕಾರರ ಈ ಎಲ್ಲ ವಚನಗಳು ಕಟ್ಟಿಕೊಡುವ ಸತ್ಯವೆಂದರೆ, ಗುರು–ಶಿಷ್ಯ ಎಂದೂ ಬೇರಲ್ಲ; ಅವರಿಬ್ಬರೂ ಒಂದೇ ಎಂಬ ಸತ್ಯವನ್ನು. "ಜ್ಯೋತಿ ಸೋಂಕಿದ ಬತ್ತಿಯೆಲ್ಲ ಜ್ಯೋತಿಯಪ್ಪವಯ್ಯಾ" ಎಂಬ ಸಕಲೇಶ ಮಾದರಸನ ವಚನೋಕ್ತಿ ಗುರು–ಶಿಷ್ಯ ಸಂಬಂಧವನ್ನು ವೈಜ್ಞಾನಿಕ ನೆಲೆಯಲ್ಲೂ

ಸಾಕ್ಷೀಕರಿಸುತ್ತದೆ. ಚಿತ್ರರೂಪಕದ ಈ ಮಾತು ಬೆಳಕು, ಬೆಳಕನ್ನು ಕೂಡಿ ಮತ್ತಷ್ಟು ಬೆಳಕನ್ನೇ ಕೊಡುವ ಬೆಳವಣಿಗೆಯ ಸೂಚಕವಾಗಿಯೂ ಮಹತ್ವ ಪಡೆಯುತ್ತದೆ.

ಗುರು–ಶಿಷ್ಯ ಸಂಬಂಧದಲ್ಲಿ, ಗುರು ಹೇಗಿದ್ದರೂ ನಡೆಯುತ್ತದೆಯೆಂಬ ಹುಂಬ ಮತ್ತು ಅವಾಸ್ತವ ಪರಿಕಲ್ಪನೆಯೂ ಬೆಳೆದುಕೊಂಡು ಬಂದಿರುವುದನ್ನು ಕಾಣುತ್ತೇವೆ. ಲಘುವಾಗಿದ್ದರೂ, ಗುರು ಎಂಬ ಹೆಸರಿದ್ದರೆ ಸಾಕು ಆತ ಗುರುವೇ ಎಂಬ ಈ ಬಗೆಯ ಅತಿಭಾವುಕತೆಯ ಹಿಂದೆಯೂ ಪುರೋಹಿತಶಾಹಿಯ ಕೈವಾಡವಿಲ್ಲದೇ ಇಲ್ಲ. ಆ ಬಗೆಯ ಅಯೋಗ್ಯ ಗುರುವಿಗೂ ಶಿಷ್ಯನಾದವನು ಗುಲಾಮನೇ ಆಗಿರಬೇಕೆಂದರೆ ಅದು ಬರೀ ದಾಸ್ಯವಷ್ಟೇ ಅಲ್ಲ; ಶೋಷಣೆಯೂ ಹೌದು. ವಚನಕಾರರು ಇಂಥ ಅಯೋಗ್ಯ ಗುರುಗಳನ್ನು ಹಾಗೇ ಬಿಟ್ಟಿಲ್ಲ.

*ಸಿರಿವಂತ ಶಿಷ್ಯಂಗೆ ಗುರು ದರಿದ್ರನಾದರೆ*
*ಅಭಿಮಾನದಿಂದ ಅವಿಶ್ವಾಸವ ಮಾಡುವ ನರಕಿಯನೆನ್ನತ್ತ ತೋರದಿರಯ್ಯಾ.*

ಎಂದು ಚೆನ್ನಬಸವಣ್ಣನು ತರಾಟಿಸುತ್ತಾನೆ. ಇಲ್ಲಿ ದಾರಿದ್ರ್ಯವೆಂಬುದು ಧನದ್ದಲ್ಲ; ವಿದ್ಯೆಯದು. ವಿದ್ಯಾದರಿದ್ರನಾದ ಗುರುವು ಜ್ಞಾನಿಯಾದ ಶಿಷ್ಯನಿಗೆ ಅವಿಶ್ವಾಸ ಮಾಡುತ್ತಾನೆಂಬ ಕಾರಣದಿಂದ ಅಂಥ ಪಾಪಿಯ ಮುಖವನ್ನು ತಾನು ನೋಡಲಾರೆನೆಂದು ಆತ ತುಚ್ಛೀಕರಿಸುತ್ತಾನೆ. ಅಯೋಗ್ಯ ಗುರುವನ್ನು ಹೀಗೆ ತಿರಸ್ಕರಿಸುವ ವಚನಕಾರರು, ಗುರು–ಶಿಷ್ಯ ಇಬ್ಬರೂ ಅಯೋಗ್ಯರಾದರೆ ಏನಾಗಬಹುದೆಂಬುದನ್ನೂ ತುಂಬ ಮಾರ್ಮಿಕವಾಗಿ ವಿಶ್ಲೇಷಿಸುತ್ತಾರೆ.

*ಅರಿಯದ ಗುರು ಅರಿಯದ ಶಿಷ್ಯಂಗೆ*
*ಅನುಗ್ರಹವ ಮಾಡಿದಡೇನಪ್ಪುದೆಲವೊ.*
*ಅಂಧಕನ ಕೈಯನಂಧಕ ಹಿಡಿದಡೆ, ಮುಂದನಾರು ಕಾಂಬರು ಹೇಳೆಲೆ ಮರುಳೆ.*
*ತೊರೆಯಲದ್ದವನನೀಸಲರಿಯದವ*
*ತೆಗೆವ ತೆರನಂತೆಂದನಂಬಿಗರ ಚೌಡಯ್ಯ.*

ಅಂಬಿಗರ ಚೌಡಯ್ಯನವರು ಇಲ್ಲಿ ಕೊಟ್ಟಿರುವ ಉಪಮೆ ತುಂಬ ಅರ್ಥಪೂರ್ಣವಾಗಿದೆ. ಅಜ್ಞಾನಿ ಶಿಷ್ಯನಿಗೆ ಅಜ್ಞಾನಿ ಗುರು ಸೇರಿಬಿಟ್ಟರೆ ಅದು ಹೊಳೆಯಲ್ಲಿ ಮುಳುಗುವವನನ್ನು ಈಸಲು ಬರಲಾರದವ ಹೊರತೆಗೆಯಲು ಹೋದಂತಾಗುವುದೆಂದು ಹೇಳಿರುವಲ್ಲಿ ಆ ಒಟ್ಟೂ ಕ್ರಿಯೆಯ ಪರಿಣಾಮದ ಸ್ಪಷ್ಟತೆಯಿದೆ. ಅರಿವನ್ನುಳ್ಳ ಶಿಷ್ಯನಿಗೆ ಅರಿವನ್ನುಳ್ಳ ಗುರುವಿನ ಅಗತ್ಯವಿರುವುದನ್ನೂ ಇಲ್ಲಿ ವಚನಕಾರ ಸೂಚ್ಯವಾಗಿ ಹೇಳಿದಂತಿದೆ. ಇದು ಕೂಡ ಅವರಿಬ್ಬರಲ್ಲಿರಬೇಕಾದ ಸಮಾನತೆಯ ಅಪೇಕ್ಷೆಯೆ.

ಹೀಗೆ ಗುರು–ಶಿಷ್ಯರ ಅದ್ವೈತದ ಸಂಬಂಧ ಕುರಿತಾಗಿ ವೈಚಾರಿಕವಾದ ಮತ್ತು ಖಚಿತವಾದ ಅಭಿಪ್ರಾಯಗಳನ್ನು ವ್ಯಕ್ತಪಡಿಸುವ ವಚನಕಾರರು, ಬಹಳ ಮುಖ್ಯವಾಗಿ ಪ್ರತಿಪಾದಿಸ ಹೊರಟದ್ದು ಶಿಷ್ಯನ ಶ್ರೇಷ್ಠತೆಯನ್ನು. ಜಾತಿ, ವರ್ಗ ಮತ್ತಿತರ ಕಾರಣಗಳಿಂದ ಶಿಷ್ಯರನ್ನು ಉಪೇಕ್ಷಿಸುತ್ತ ಬಂದ ನಮ್ಮ ದೀರ್ಘ ಪರಂಪರೆಯ ಶೋಷಣಾತ್ಮಕ ಧೋರಣೆಗಳನ್ನು ಕತ್ತರಿಸಿ ಹಾಕುವುದೇ ಅವರ ಉದ್ದೇಶವಾಗಿತ್ತೆಂಬುದು ಇಲ್ಲಿ ಸ್ಪಷ್ಟವಾಗುತ್ತದೆ. ಗುರುವನ್ನು ಎಲ್ಲಿಯೂ ಉಪೇಕ್ಷಿಸದೇ, ಅವನ ಶ್ರೇಷ್ಠತೆಯನ್ನು ಎತ್ತಿಹಿಡಿಯುತ್ತಲೇ ಶಿಷ್ಯನನ್ನೂ ಗುರುವಿನೊಂದಿಗೆ ಸಮೀಕರಿಸುವ ಶರಣರ ರೀತಿ ಅಭೂತಪೂರ್ವ ಕ್ರಮ ವಾಗುತ್ತದೆ. ಗುರುವಿನಿಂದ ಕಲಿತು ವಿದ್ಯಾಪಾರಂಗತನಾಗುವ ಶಿಷ್ಯ ಮುಂದೆ ತಾನೂ ಗುರುವೇ ಆಗುತ್ತಾನೆಂಬ ವಾಸ್ತವವನ್ನು ಯಾರೂ ಅಲ್ಲಗಳೆಯ ಲಾಗುವುದಿಲ್ಲ. ಹೀಗಾಗಿ ಶಿಷ್ಯ–ಗುರುಗಳಲ್ಲಿ ಕಾಲದ ಕಿಂಚಿತ್ ಅಂತರವಿರ ಬಹುದೇ ಹೊರತು ಸಾಧನೆಯ ಮಟ್ಟದಲ್ಲಿ ಅಂತರವಿರಲು ಸಾಧ್ಯವಿಲ್ಲ. ಈ ಸಂಬಂಧದ ಮುಂದುವರಿದ ಕ್ರಮವೆಂಬಂತೆ ವಚನಕಾರರು ಶಿಷ್ಯನನ್ನೇ ಇನ್ನೂ ಉನ್ನತಮಟ್ಟಕ್ಕೇರಿಸಿರುವ ಉದಾಹರಣೆಯೂ ಕಂಡುಬರುತ್ತದೆ. ಈ ಕ್ರಮದ ಆತ್ಯಂತಿಕ ಸತ್ಯವನ್ನು ಸಾರುವ ಅಲ್ಲಮಪ್ರಭುವಿನ ವಚನದ ಒಂದು ಸಾಲು ಎಲ್ಲ ಚಿಂತಕರನ್ನು ಚಕಿತಗೊಳಿಸುತ್ತದೆ. ಆ ಸಾಲು ಹೀಗಿದೆ –

*...ಕಲಿಯುಗದಲ್ಲಿ ಶ್ರೀಗುರು ಶಿಷ್ಯಂಗೆ ವಂದಿಸಿ ಬುದ್ಧಿಯ ಕಲಿಸಿದಡೆ*
*ಆಗಲಿ ಮಹಾಪ್ರಸಾದವೆಂದೆನಯ್ಯಾ.*
*ಗುಹೇಶ್ವರಾ ನಿಮ್ಮ ಕಾಲದ ಕಟ್ಟಳೆಯ ಕಲಿತನಕ್ಕೆ ನಾನು ಬೆರಗಾದೆನು.*

ವಾಸ್ತವಾಲೋಚನೆಯ ಅಲ್ಲಮನ ಈ ಚಿಂತನಾಪೂರ್ಣ ಮಾತು ಹಲವರಿಂದ ಹಲವು ಬಗೆಯ ವ್ಯಾಖ್ಯಾನಗಳನ್ನು ಪಡೆದುಕೊಂಡಿದೆ.

ಬೇಸಿಗೆಯ ಒಂದು ದಿನ ।
ಕಡಲ ತಟದಲಿ ಮೈಚೆಲ್ಲಿದ್ದೆ ।
ಹಾಗೆ ನಿನ್ನ ನೆನಪಾಯಿತು ।
ನಿನ್ನ ನೆನಪು ಸಮುದ್ರದ ಜೊತೆ
ಹಂಚಿಕೊಂಡೆ ।
ಅದು ತನ್ನ ತಟ, ಮೀನು, ಚಿಪ್ಪುಗಳನ್ನು ಬಿಟ್ಟು
ನನ್ನ ಹಿಂದೆ ಬಂದೇಬಿಟ್ಟಿತು ?!



**ಉರ್ದು ಮೂಲ: ನಿಝಾರ್ ಕಬ್ಬಾನಿ**
**ಸುಜಾತಾ**, ಆಕಾಶವಾಣಿ, ಹಾಸನ

ಆ ವಿಚಾರವೇನಿದ್ದರೂ, ಕಾಲದ ಕಟ್ಟಳೆಗಳನ್ನೂ ಒಡೆದುಹಾಕಿ, ಶಿಷ್ಯನು ಗುರುವನ್ನೂ ಮೀರಿಸುವ ಸಾಧನೆಯನ್ನು ಮಾಡುವ ಸಾಧ್ಯತೆಯನ್ನು ಪ್ರಭು ಈ ವಚನದಲ್ಲಿ ಮುಂಚೆಯೇ ಧ್ವನಿಸಿರುವುದು ಸೋಜಿಗವಾಗಿ ಕಾಣುತ್ತದೆ. ಇದು ಸೋಜಿಗ ಮಾತ್ರವಲ್ಲ; ಸತ್ಯ. ಕನ್ನಡದ ಶ್ರೇಷ್ಠ ಕತೆ–ಕಾದಂಬರಿಕಾರ ಕುಂ. ವೀರಭದ್ರಪ್ಪ ಅವರು ಗುರು–ಶಿಷ್ಯರ ಸಂಬಂಧ ಕುರಿತಂತೆ ಇತ್ತೀಚೆಗೆ ದಾಖಲಿಸಿರುವ ಒಂದು ವಾಸ್ತವ ಘಟನೆಯನ್ನು ಉದಾಹರಿಸುವುದು ಇಲ್ಲಿ ಸಂದರ್ಭೋಚಿತವಾಗುತ್ತದೆ. "ಎಂಟನೆಯ ತರಗತಿಯಲ್ಲಿ ಅಂಬೆಗಾಲಿಡುತ್ತ ಆಗಮಿಸಿದ ಬಡತನ ಒಂಬತ್ತನೆಯ ತರಗತಿ ಹೊತ್ತಿಗೆ ಜಠರ ಕರುಳುಗಳನ್ನು ಆವರಿಸಿತು. ಎಂಥ ಬಡತನವೆಂದರೆ ಹಸಿವೆ ಕಾರಣದಿಂದ ಸತ್ತ ತಂಗಿ ರತ್ನಳ ಶವಸಂಸ್ಕಾರವನ್ನು ಗುಟ್ಟಾಗಿ ಮಾಡಬೇಕಾಗಿ ಬಂತು. ಹುಮ್ಮಸ್ಸು ಹದಿಹರೆಯದ ಕನಸುಗಳಿರದಿದ್ದ ಬೀಭತ್ಸ ವರ್ಷದಲ್ಲಿ ವಿದ್ಯಾರ್ಥಿ ಸಹಜ ಆಕರ್ಷಣೆ ಎಲ್ಲಿರಲಾದೀತು? ವೀರಭದ್ರಯ್ಯ ಹೆಸರಿನ ಇಂಗ್ಲಿಷ್ ಶಿಕ್ಷಕ "ಈ ತರಗತಿಯಲ್ಲಿ ದಡ್ಡ ಸೂಳ್ಯಾ ಮಕ್ಕಳೆಂದರೆ ಅಗೋ ಅಲ್ಲಿ !" ಎಂದು ಮುದುಡಿ ಕುಳಿತಿರುತ್ತಿದ್ದ ನನ್ನನ್ನು ಮತ್ತು ಸಹಪಾಠಿ ಬಾಷಾನನ್ನು ತೋರಿಸಿದರು. ಕುಂಬಾರನಾದ ನಾನು ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಗಳಿಸಿದರೆ, ಬಾಷಾ ಹೊಸಪೇಟೆ ಉಕ್ಕಿನ ಕಾರ್ಖಾನೆ ಮ್ಯಾನೇಜರನಾದ. ಮುಂದೆ ವಿಷಯ ತಿಳಿದ ಇಂಗ್ಲಿಷ್ ಶಿಕ್ಷಕ ಗದ್ಗದಿತರಾಗಿ ಕ್ಷಮೆ ಯಾಚಿಸಿದ್ದು ದಾವಣಗೆರೆಯಲ್ಲಿ ಅವರು ಪ್ರಿನ್ಸಿಪಾಲರಾಗಿದ್ದ ಕಾಲೇಜಿನಲ್ಲಿ."

ಈ ವಾಸ್ತವ ಘಟನೆಯನ್ನು ಕಣ್ಮುಂದೆ ತಂದುಕೊಂಡರೆ ಅಲ್ಲಮಪ್ರಭುವಿನ ವಚನದ ಮಾತು ಸಾರ್ವಕಾಲಿಕ ಸತ್ಯವನ್ನೇ ಹೇಳುತ್ತದೆ ಎಂಬುದು ಗಮನಾರ್ಹವಾಗುತ್ತದೆ. ಹೀಗಾದುದನ್ನು ಕುಂವಿ ಬರೆದುಕೊಂಡದ್ದು ಧಾರ್ಷ್ಟ್ಯದ ಮಾತಾಗುವುದಿಲ್ಲ; ಅದು ಸಾಧ್ಯತೆಯ ಸತ್ಯವನ್ನು ಸಾಕ್ಷಾತ್ಕರಿಸುವ ಒಂದು ವಾಸ್ತವ ಸ್ಥಿತಿಯೆಂದು ಮುಖ್ಯವಾಗುತ್ತದೆ. ಅಷ್ಟೇ ಅಲ್ಲ; ಅದು ಗುರು–ಶಿಷ್ಯರ ಸಂಬಂಧದಲ್ಲಾಗುವ ಪ್ರಗತಿಯ ಹಾಗೂ ಮುಂಚಲನೆಯ ಸೂಚನೆಯಾಗಿಯೂ ಮಹತ್ವ ಪಡೆಯುತ್ತದೆ. ಹೀಗೆ ವರ್ತಮಾನದಲ್ಲಿ ಎಷ್ಟೋ ಜನ ವಿದ್ಯಾರ್ಥಿಗಳು ಗುರುವನ್ನೂ ಮೀರಿಸುವ ಸಾಧಕರಾಗಿರುವುದೇ ಇದಕ್ಕೆ ಪ್ರತ್ಯಕ್ಷ ಸಾಕ್ಷಿ. ಈ ಸಾಧನೆ ಗುರುವಿನ ಸ್ಥಾನವನ್ನು ಅವಗಣನೆ ಮಾಡುವ ಕ್ರಮದ್ದಲ್ಲವೆಂಬುದನ್ನೂ ಬಹಳ ಮುಖ್ಯವಾಗಿ ಗಮನದಲ್ಲಿಡಬೇಕು. ಯಾಕೆಂದರೆ ಯಾವ ಕಾಲದ ಶಿಷ್ಯನ ಸಾಧನೆಯೂ ಮೊದಲುಗೊಳ್ಳುವುದು ಗುರುವಿನ ಮಾರ್ಗದರ್ಶನದಲ್ಲಿಯೇ. ಹೀಗಾಗಿ "ಗುರು" ಗುರುವೇ. ಹೀಗಿರುವಾಗಲೂ ಶಿಷ್ಯನೂ ಮುಂದೆ ಹಾಗೆ "ಗುರು"ವಾಗುವವನೆ ಎಂಬುದನ್ನೂ ಒಪ್ಪಲೇಬೇಕು. ಮತ್ತೆ ಹೇಳಲೇಬೇಕಾದ ಸತ್ಯವೆಂದರೆ; ಇದು "ಬೀಜವೃಕ್ಷ ನ್ಯಾಯ"ವೇ ಎಂದು. ವಸ್ತುಸ್ಥಿತಿ ಹೀಗಿರುವಾಗ ಶಿಷ್ಯ ಎಂದೂ ಗುರುವಿನ ಗುಲಾಮನಾಗಲಾರ. ಈ ಸತ್ಯವನ್ನು ನಾವು ಒಪ್ಪಿಕೊಳ್ಳಬೇಕಾಗುತ್ತದೆ. ವಚನಕಾರರು ಹೇಳುವಂತೆ ಅವರಿಬ್ಬರ ಸಂಬಂಧ "ಪ್ರತಿಭಾವ"ವಿಲ್ಲದ ಅದ್ವೈತದ ನೆಲೆಯದೆಂಬುದೂ ಅಷ್ಟೇ ಸತ್ಯ.

**ಡಾ॥ ಬಸವರಾಜ ಸಾದರ**
ನಂ. ೫, ಬಾಲಾಜಿ ಪ್ಯಾರಡೈಸ್, ಎಫ್–೪, ೪ನೇ ಅಡ್ಡರಸ್ತೆ, ಭುವನೇಶ್ವರಿನಗರ,
(ಹೆಬ್ಬಾಳ–ಕೆಂಪಾಪುರ), ಬೆಂಗಳೂರು – ೫೬೦ ೦೨೪

ತಮಿಳುನಾಡಿನ ಕುಡಂಕುಳಂ ಪರಮಾಣು ವಿದ್ಯುತ್ ಸ್ಥಾವರ

# ವಿಜ್ಞಾನ ಪದಬಳಕೆಯ ಅವಾಂತರಗಳು!

ಎಸ್. ಮಂಜುನಾಥ

**ಕ**ನ್ನಡದಲ್ಲಿ ವಿಜ್ಞಾನವನ್ನು ತರುವ ಆರಂಭಿಕ ದಿನಗಳಲ್ಲಿ 'ಫಿಸಿಕ್ಸ್'ಅನ್ನು 'ಭೌತಶಾಸ್ತ್ರ' ಮಾಡಿ, 'ಕೆಮಿಸ್ಟ್ರಿ'ಯನ್ನು 'ರಸಾಯನಶಾಸ್ತ್ರ' ಮಾಡಿ ಶತಮಾನಕ್ಕೂ ಹೆಚ್ಚು ದಿನಗಳು ಗತಿಸಿವೆ. ಆದರೆ, ಇಂದಿನ ವಿಜ್ಞಾನ–ತಂತ್ರಜ್ಞಾನದ ಜಗತ್ತಿನಲ್ಲಿ ಈ ರೀತಿಯ ಪದಬಳಕೆ ಅಷ್ಟಾಗಿ ಸಮಂಜಸವೆನ್ನಿಸುವುದಿಲ್ಲ. ಬದಲಾಗಿ ಅವು ಭೌತವಿಜ್ಞಾನ, ರಸಾಯನ ವಿಜ್ಞಾನ ಮತ್ತು 'ಬಯಾಲಜಿ'ಯು ಜೀವ ವಿಜ್ಞಾನವಾಗಿ ಹೊಸದಾಗಿ ಕ್ರಮೇಣ ಬಳಕೆಗೆ ಬರುತ್ತಿರುವುದು ಸಮಾಧಾನದ ಸಂಗತಿ. ಹೌದು, ಕಾಲ ಬದಲಾದಂತೆ ನಾವು ಬಳಸುವ ಭಾಷೆ ಮತ್ತು ಪದಗಳು, ಹೊಸ ರೂಪ ಮತ್ತು ವ್ಯಾಖ್ಯಾನಗಳನ್ನು ಕಂಡುಕೊಳ್ಳುತ್ತವೆ. ಕಾಲದ ಓಟದಲ್ಲಿ ಕೆಲ ಪದಗಳು ಮತ್ತು ನುಡಿಗಟ್ಟುಗಳು ಸೋತರೆ, ಇನ್ನು ಕೆಲವಕ್ಕೆ ಆನೆ ಬಲ ಬರುತ್ತವೆ. ಕನ್ನಡದಲ್ಲಿ ವಿಜ್ಞಾನ ಪಾರಿಭಾಷಿಕ ಪದಗಳ ಬಳಕೆ, ಸದ್ಬಳಕೆಗಳ ಅನುಕೂಲತೆಗಳು ಮತ್ತು ತಪ್ಪು ಬಳಕೆಯಿಂದಾದ ಅವಾಂತರಗಳ ಕಥೆಗಳು ನಮ್ಮ ಕುತೂಹಲ ಕೆರಳಿಸುವಂತಿವೆ.

ಹಿರೋಶಿಮಾ ದಿನಾಚರಣೆ (ಆಗಸ್ಟ್ ೬) ಸಂದರ್ಭದಲ್ಲಿ 'ಅಣು ಬಾಂಬ್', 'ಅಣ್ವಸ್ತ್ರ'ಗಳ ಒಂದಷ್ಟು ಸುದ್ದಿಗಳು ಪತ್ರಿಕೆಗಳಲ್ಲಿ ಬಂದು ಹೋಗುತ್ತವೆ. ೨೦೧೨–೧೩ರಲ್ಲಿ 'ಕುಡಂಕುಳಂ ಅಣು ಸ್ಥಾವರಕ್ಕೆ ಭಾರಿ ವಿರೋಧ' ಎನ್ನುವ ಹೆಡ್‌ಲೈನ್ ಮಾಧ್ಯಮದಲ್ಲಿ ದೊಡ್ಡದಾಗಿ ಸುದ್ದಿಯಾಗಿತ್ತು ಕೂಡ. ಈ ರೀತಿಯ ವೈಜ್ಞಾನಿಕ ಪಾರಿಭಾಷಿಕ ಪದಗಳು ಟಿವಿ ಮತ್ತು ಪತ್ರಿಕೆಗಳಲ್ಲಿ ಪ್ರಸ್ತುತ ಬಳಕೆಯಲ್ಲಿವೆ. ಆದರೆ, ಇವು ಎಷ್ಟರಮಟ್ಟಿಗೆ ಸರಿ ಎಂಬುದು ಈಗಿನ ಪ್ರಶ್ನೆ. ಸರಿ–ತಪ್ಪುಗಳ ಕುರಿತು ಯೋಚಿಸುತ್ತ ಹೋದರೆ, ಈ ಮೇಲಿನ ಪದಗಳಲ್ಲಿ ಸಮಸ್ಯೆ ಇರುವುದು 'ಅಣು' ಎಂಬ ಪದಬಳಕೆಯಲ್ಲಿ. ಏಕೆಂದರೆ, ಅಣು ಎಂಬುದಕ್ಕೆ 'ಮಾಲೆಕ್ಯುಲ್' ಎಂದರ್ಥ. ಅದನ್ನು ಹಾಗೆ ಬಳಕೆ ಮಾಡಿದಾಗ, 'ಮಾಲೆಕ್ಯೂಲರ್ ಬಾಂಬ್' ಆಗುತ್ತದೆ. ಆದರೆ, ಮಾಲೆಕ್ಯುಲರ್ ಅಸ್ತ್ರ, ಮಾಲೆಕ್ಯುಲರ್ ಸ್ಥಾವರಗಳು ವಿಜ್ಞಾನ ಪ್ರಪಂಚದಲ್ಲಿ ಎಲ್ಲಿಯೂ ಕಾಣಸಿಗುವುದಿಲ್ಲ. ಇವು ವಿಜ್ಞಾನದ ನಿಜಾರ್ಥಗಳಿಗೆ ವ್ಯತಿರಿಕ್ತವಾಗಿ ನಿಲ್ಲುವವು. ಅಂತೆಯೇ, ಅಣುಬಾಂಬ್, ಅಣುಸ್ಥಾವರ ಎಂಬೆಲ್ಲಾ ಪದಗಳು ಪರಮಾಣು ಬಾಂಬ್, ಪರಮಾಣು ಸ್ಥಾವರವಾಗಿ ಸರಿಯಾದ ಪದಬಳಕೆಗಳನ್ನು ಕಂಡುಕೊಳ್ಳಬೇಕಿದೆ.

ವಿಜ್ಞಾನ ಪಾರಿಭಾಷಿಕ ಪದಬಳಕೆಯ ಇತಿಹಾಸವನ್ನು ಅವಲೋಕಿಸಿದಾಗ, ಮಾಧ್ಯಮದವರು ಬಳಸಿದ ಪದಗಳೇ ಅಂತಿಮವಾಗಿ ಜನಮಾನಸದಲ್ಲಿ ಉಳಿದಿರುವ ಉದಾಹರಣೆಗಳೇ ಹೆಚ್ಚು. ಅಂತೆಯೇ, ಮಾಧ್ಯಮಗಳಲ್ಲಿ ವಿಜ್ಞಾನ ಪಾರಿಭಾಷಿಕ ಪದಗಳನ್ನು ಬಹಳ ಎಚ್ಚರಿಕೆಯಿಂದ ಬಳಸುವುದು ಸಾರ್ವಜನಿಕರ ಕಲಿಕೆ ಮತ್ತು ಗ್ರಹಿಕೆಯ ದೃಷ್ಟಿಯಿಂದ ಅವಶ್ಯವಾಗಿದೆ. 'ಬ್ಲ್ಯಾಕ್ ಹೋಲ್' (ಕಪ್ಪು ಕುಳಿ) ಎಂಬ ಪದವನ್ನು ವಿಜ್ಞಾನ ಪತ್ರಕರ್ತೆ ಅಮೆರಿಕದ ಆನ್ ಇವಿಂಗ್ ಮೊಟ್ಟ ಮೊದಲ ಬಾರಿಗೆ ಬಳಸಿದರು. ನಕ್ಷತ್ರವೊಂದರ ಅಂತಿಮಘಟ್ಟವನ್ನು ವಿವರಿಸಲು ಈ ಪದಬಳಕೆಯನ್ನು ಮಾಡಲಾಗಿತ್ತು. ಆದರೆ, ಇಂದಿನವರೆಗೂ ಅದೇ ನುಡಿಗಟ್ಟು ಚಾಲ್ತಿಯಲ್ಲಿದೆ. ನಿಜವಾಗಿಯೂ ನೋಡ ಹೊರಟರೆ, ಆಗಸದಲ್ಲಿ ಅಂಥಾ ಕುಳಿಯೇ ಇಲ್ಲ!

ಇನ್ನು ೨೦೧೨ರಲ್ಲಿ ಪತ್ತೆಹಚ್ಚಲಾದ 'ದೇವಕಣ' ವಾಸ್ತವವಾಗಿ ಭೌತವಿಜ್ಞಾನದಲ್ಲಿ ಬರುವ 'ಹಿಗ್ಸ್ ಬೋಸಾನ್'. ಆದರೆ, ಇಂದು 'ಹಿಗ್ಸ್ ಬೋಸಾನ್' ಪದವು ಮಾಯವಾಗಿ ಮಾಧ್ಯಮಗಳಲ್ಲಿ 'ದೇವಕಣ' ಪದವೇ ಮಿಂಚಿ, ಜನಸಾಮಾನ್ಯರ ತಲೆಯಲ್ಲಿ ಅಂತಿಮವಾಗಿ ಉಳಿದುಬಿಟ್ಟಿದೆ. ದೇವಕಣ ಎಂಬ ಪದಬಳಕೆ, ನಿಜಕ್ಕೂ ವಿಜ್ಞಾನಕ್ಕೆ ಆದ ಅಪಚಾರವಾಗಿದೆ. ಯಾವಾಗ ದೇವಕಣದ ಸುದ್ದಿ, ಮಾಧ್ಯಮಗಳಲ್ಲಿ ಭರ್ಜರಿಯಾಗಿ ಬರತೊಡಗಿದವೊ ಕೆಲವರಂತೂ ದೇವಕಣದ ಮೂಲವನ್ನು ಭಗವದ್ಗೀತೆಯಲ್ಲಿ ಜಾಲಾಡತೊಡಗಿದರು; ಅಂಥ ಪದಬಳಕೆಯಿಂದಾದ ಅವಾಂತರವೆಂದು ಬೇರೆ ಹೇಳಬೇಕಿಲ್ಲ! ಅಷ್ಟಕ್ಕೂ ದೇವರಿಗೂ ಮತ್ತು ಈ ಕಣಕ್ಕೂ ಯಾವುದೇ ಸಂಬಂಧವೇ ಇಲ್ಲ.

ನೊಬೆಲ್ ಪುರಸ್ಕೃತ ಭೌತವಿಜ್ಞಾನಿ ಲಿಯೊ ಲೆಡರ್‌ಮನ್, ತಮ್ಮ ಪುಸ್ತಕವೊಂದಕ್ಕೆ 'ಗಾಡ್ ಪಾರ್ಟಿಕಲ್' ಎಂದು ನಾಮಕರಣ ಮಾಡಿದ್ದರು, ಅದು ತಮ್ಮ ಪುಸ್ತಕ ಪ್ರಚಾರದ ಭಾಗವಾಗಿತ್ತು ಅಷ್ಟೇ ! ಈ ರೀತಿಯ ಪದಬಳಕೆಗೆ ಅನೇಕ ಭೌತವಿಜ್ಞಾನಿಗಳಿಂದ, ಅಂದು ವ್ಯಾಪಕ ಟೀಕೆಗಳು ಕೇಳಿ ಬಂದಿದ್ದವು ಕೂಡ. 'ದೇವಕಣ'ದ ಬಗ್ಗೆ ದೃಶ್ಯ ಮಾಧ್ಯಮಗಳಲ್ಲಿನ ಕಾರ್ಯಕ್ರಮ ನೋಡಿ, ನಮ್ಮ ಜನ ಅದನ್ನು ಭಗವದ್ಗೀತೆಯಲ್ಲಿಯೂ ಹುಡುಕುವ ವ್ಯರ್ಥ ಪ್ರಯತ್ನ ಮಾಡಿದ್ದು ; ಮೂರು ಸಾವಿರಕೋಟಿ ರೂಪಾಯಿಗಳ ಹೂಡಿಕೆಯ, ಹಲವು ದೇಶಗಳನ್ನೊಳಗೊಂಡ ನಾಲ್ಕು ಸಾವಿರಕ್ಕೂ ಮಿಕ್ಕ ವಿಜ್ಞಾನಿಗಳ, ೪೦ ವರ್ಷಗಳ ಶ್ರಮವನ್ನು, ಒಂದು ಸಣ್ಣ ತಪ್ಪು



SCIENCE NEWS LETTER for January

ASTRONOMY

"Black Holes" in Space

The heavy densely packed dying stars that speckle space may help determine how matter behaves when enclosed in its own gravitational field—By Ann Ewing

➤ SPACE may be peppered with "black holes."

This was suggested at the American Association for the Advancement of Science ... Cleveland by astronomers and ... on what are

Modern tools, such as telescopes on an orbiting space platform, may be used to detect such black holes and to help determine how matter behaves when it is enclosed by its own gravitational field.

The light from the most famous white ... Sirius— ... star, Sirius B, a companion to Sirius— ... star in the heavens

ವಿಜ್ಞಾನ ಪತ್ರಕರ್ತೆ ಆನ್ ಇವಿಂಗ್ ಮತ್ತು ೧೯೬೪ರಲ್ಲಿ ಮೊದಲ ಬಾರಿಗೆ 'ಕಪ್ಪು ಕುಳಿ' ಪದಬಳಕೆಯ ಅವರ ಲೇಖನ




ನೊಬೆಲ್ ಪುರಸ್ಕೃತ ವಿಜ್ಞಾನಿ ಲಿಯೊ ಲೆಡರ್‌ಮನ್ ಮತ್ತು ಎಲ್. ಹೆಚ್. ಸಿ . ಪ್ರಯೋಗಾಲಯ, ಫ್ರಾನ್ಸ್

ಪದಬಳಕೆಯಿಂದ ಶತಮಾನದ ಮಹತ್ವದ ಸಂಶೋಧನೆಯನ್ನು ಕಳೆಗುಂದಿಸಿದ್ದು ಮಾತ್ರ ಶೋಚನೀಯ.

ವಿಲ್ಹೆಲ್ಮ್ ರಾಂಟ್ಜೆನ್ (೧೮೪೫–೧೯೨೩) ತಮ್ಮ ಸಂಶೋಧನೆಯಲ್ಲಿ ಕೆಲ ಅದೃಶ್ಯ ಕಿರಣಗಳನ್ನು ಆವಿಷ್ಕರಿಸಲಾಗಿ, ಅವಕ್ಕೆ ಯಾವ ಹೆಸರಿಡಬೇಕು ಎಂದು ಯೋಚಿಸುತ್ತಿರುವಾಗಲೇ, ಅವುಗಳನ್ನು ಸ್ವೇಚ್ಛೆಯಾಗಿ ಎಕ್ಸ್–ಕಿರಣಗಳು ಎಂದು ನಾಮಕರಣ ಮಾಡಿದ್ದರು. ಈ ಕಿರಣಗಳೇ ಮುಂದೆ ಕನ್ನಡದಲ್ಲಿ ಕ್ಷ–ಕಿರಣಗಳಾಗಿ ತರ್ಜುಮೆಗೊಂಡಿದ್ದು ಮತ್ತೊಂದು ಅವಾಂತರವಷ್ಟೆ. ಅಷ್ಟಕ್ಕೂ ಆಂಗ್ಲದ 'ಎಕ್ಸ್' ಅಕ್ಷರ, ಕನ್ನಡದಲ್ಲಿನ 'ಕ್ಷ' ಅಕ್ಷರಕ್ಕೆ ಹೇಗೆ ಸಮವಾಗುತ್ತದೆ ಎಂದು ಯೋಚಿಸಬೇಕಾಗುತ್ತದೆ. ಒಂದು ಭಾಷೆಯಿಂದ ಇನ್ನೊಂದು ಭಾಷೆಗೆ ತರ್ಜುಮೆ ಗೊಳಿಸುವಾಗ, ನಾಮಪದಗಳನ್ನು ಹಾಗೆಯೇ ಉಳಿಸಿಕೊಳ್ಳಲಾಗುವುದು. ಅದರಿಂದಾಗಿ ಕನ್ನಡದಲ್ಲಿಯೂ, ಆ ಕಿರಣಗಳು ಎಕ್ಸ್–ಕಿರಣಗಳಾಗಿಯೇ ಉಳಿದುಕೊಳ್ಳುವುದು ಸೂಕ್ತವೆನ್ನಿಸುತ್ತದೆ.

ಕೆಲ ಸೂಕ್ತ ವಸ್ತುಗಳ ಮೇಲೆ ಅತಿನೇರಿಳೆ ಕಿರಣಗಳನ್ನು ಹಾಯಿಸಿದಾಗ ಆ ಪದಾರ್ಥವು ದೃಗ್ಗೋಚರ ಬೆಳಕನ್ನು ಉತ್ಸರ್ಜಿಸುವುದು. ಈ ಪ್ರಕ್ರಿಯೆಯನ್ನು ಮುಂಚೆ ಸ್ಫುರದೀಪ್ತಿಯೆಂದು ಕರೆಯಲಾಗುತ್ತಿತ್ತು. ಆದರೆ ಇಂದು ಹೆಚ್ಚು ನಿಖರವಾಗಿ ಪ್ರತಿದೀಪ್ತಿಯೆಂದು ಕರೆಯಲಾಗುತ್ತಿದೆ. ಏಕೆಂದರೆ, ವಿದ್ಯುತ್ಕಾಂತೀಯ ರೋಹಿತದ ಒಂದು ಬಗೆಯ ವಿಕಿರಣವನ್ನು ಹೀರಿಕೊಂಡು ಮತ್ತೊಂದು ಬಗೆಯ ವಿಕಿರಣವನ್ನು ಉತ್ಸರ್ಜಿಸುವುದರಿಂದ ಇದನ್ನು ಪ್ರತಿದೀಪ್ತಿಯೆಂದು ಹೊಸದಾಗಿ ಹೆಸರಿಸಿರುವುದು ಔಚಿತ್ಯಪೂರ್ಣವಾಗಿದೆ.

ಭಾಷೆ ನಿಂತ ನೀರಲ್ಲ, ಕಾಲ ಬದಲಾದಂತೆ ಬಳಸುವ ಭಾಷೆಯೂ ಬದಲಾಗುವುದು. ವಿಜ್ಞಾನ–ತಂತ್ರಜ್ಞಾನದ ಬೆಳವಣಿಗೆಯೊಂದಿಗೆ ಭಾಷೆಯ ಬೆಳವಣಿಗೆಯನ್ನು ನಾವು ಮನಗಾಣಬೇಕು. ಹಿಂದೆ ಯಾವುದೋ ಒಂದು ಸಂದರ್ಭದಲ್ಲಿ, ಯಾರೋ ಒಬ್ಬರು ಬಳಸಿದ ಪದವೇ ಅಂತಿಮವೆಂದು ಭಾವಿಸಿರುವುದೇ ವಿಜ್ಞಾನ ಪಾರಿಭಾಷಿಕ ಪದಗಳ ತಪ್ಪು ಬಳಕೆಗೆ ಕಾರಣವಾಗಿದೆ. ವಿಜ್ಞಾನ ಪಾರಿಭಾಷಿಕ ಪದಗಳನ್ನು ಬಳಸುವ ಮುನ್ನ ಒಂದಷ್ಟು ವಿಮರ್ಶಿಸುವ ಗುಣವನ್ನು ಅಳವಡಿಸಿಕೊಳ್ಳುವುದೊಳಿತು.

ಇನ್ನು ರಾಸಾಯನಿಕ ಧಾತುಗಳ ಹೆಸರುಗಳ ಕುರಿತು ಹೇಳುವುದಾದರೆ, ಆಕ್ಸಿಜನ್‌ಅನ್ನು ಆಮ್ಲಜನಕವೆಂದು ಮುಂಚೆಯಿಂದಲೂ ಕರೆಯುತ್ತಿರುವುದು

ರೂಢಿಗತವಾಗಿದೆ. ಆದರೆ, ಆಮ್ಲಜನಕದ ಯಥಾರ್ಥವನ್ನು ಕಂಡುಕೊಂಡರೆ, ಅದು ಆಮ್ಲದ ಜನಕನೆಂಬ ಅರ್ಥ ದೊರೆಯುತ್ತದೆ. ಹೌದು, ಅಲೋಹಗಳ ಆಕ್ಸೈಡ್‌ಗಳು ನೀರಿನ ಜೊತೆ ವರ್ತಿಸಿದಾಗ ಆಮ್ಲೀಯ ಗುಣವುಳ್ಳ ದ್ರಾವಣಗಳನ್ನು ನೀಡುವುದರಿಂದಾಗಿಯೇ ಅವಕ್ಕೆ ಆಮ್ಲಜನಕವೆಂದು ಹೆಸರು ಪ್ರಾಪ್ತಿಯಾಯಿತು. ಅಂದಿನ ಸಂಶೋಧಕರಿಗೆ ಹೈಡ್ರೊಕ್ಲೋರಿಕ್ ಆಮ್ಲದ ಬಗ್ಗೆ ಅಷ್ಟಾಗಿ ತಿಳಿದಿರಲಿಲ್ಲ ಎನ್ನುವುದು ಇದರಿಂದ ಖಾತ್ರಿಯಾಯಿತಲ್ಲವೇ ? ಅಂತೆಯೇ ಆಕ್ಸಿಜನ್ ಎಂಬ ನಾಮಪದವನ್ನು ಹಾಗೆಯೇ ಉಳಿಸಿಕೊಳ್ಳುವುದು ಯುಕ್ತ ಮಾರ್ಗವಾಗಿದೆ. ವಿಚಿತ್ರವೆಂದರೆ, ಆಕ್ಸಿಜನ್ ಪದದ ಮೂಲ ಹುಡುಕಿದಾಗ, 'ಆಕ್ಸಿ' ಎನ್ನುವ ಗ್ರೀಕ್ ಪದದ ಅರ್ಥ ಹುಳಿ ಎಂದೂ (ಆಮ್ಲಗಳು ಹುಳಿಯಾಗಿರುತ್ತವೆ) 'ಜನಸ್' ಎನ್ನುವುದು ಜನಕವಾಗಿ, 'ಆಮ್ಲಜನಕ'ವೆಂಬ ಸಮಾನಾರ್ಥಕ ಪದವೇ ದೊರೆಯುವುದು ! ಆದರೆ, ಅನ್ಯ ಭಾಷೆಯಿಂದ ನಾಮಪದಗಳನ್ನು ಹಾಗೆಯೇ ಉಳಿಸಿಕೊಳ್ಳಬೇಕೆಂಬ ಆಶಯದಿಂದಾಗಿ ಆಕ್ಸಿಜನ್ ಪದಬಳಕೆ ಅನಿವಾರ್ಯ.

ಇದೇ ತೆರನಾಗಿ ಜಲಜನಕ ಬದಲಾಗಿ ಹೈಡ್ರೊಜನ್, ಸಾರಜನಕದ ಬದಲಾಗಿ ನೈಟ್ರೊಜನ್, ಗಂಧಕದ ಬದಲಾಗಿ ಸಲ್ಫರ್, ರಂಜಕದ ಬದಲಾಗಿ ಫಾಸ್ಫರಸ್, ಇಂಗಾಲದ ಬದಲಾಗಿ ಕಾರ್ಬನ್ ಹೀಗೆ ಬಳಸುವುದರಿಂದ ಅನೇಕ ಪ್ರಯೋಜನಗಳಿವೆ. ಉದಾಹರಣೆಗೆ, ಇವುಗಳಿಂದ ದೊರೆಯುವ ಸಂಯುಕ್ತಗಳನ್ನು ಆಯಾ ಹೆಸರುಗಳಿಂದಲೆ ಕರೆಯಲು ಅನುವು ಮಾಡಿಕೊಡುವವು. ಆಕ್ಸಿಜನ್ ಜನ್ಯಆಕ್ಸೈಡ್, ಸಲ್ಫರ್‌ಜನ್ಯ ಸಲ್ಫೈಡ್, ಫಾಸ್ಫರ್‌ಜನ್ಯ ಫಾಸ್ಫೈಡ್ ಎಂಬ ನೇರ ಪದಬಳಕೆಗೆ ಅನುಕೂಲ ಮಾಡಿಕೊಡುವವು. ಬೋಧನೆಗೆ ಮತ್ತು ಕಲಿಕೆಗೆ ಕೂಡ ಈ ಪದ್ಧತಿಯು ಪೂರಕವಾಗಿ ನಿಲ್ಲುವುದರಲ್ಲಿ ಎರಡು ಮಾತಿಲ್ಲ!

ಭೌತವಿಜ್ಞಾನ, ವಸ್ತುವಿಜ್ಞಾನ ಮತ್ತು ರಸಾಯನ ವಿಜ್ಞಾನಗಳಲ್ಲಿ ವಿಕಿರಣಗಳ ಪಾತ್ರ ಹಿರಿದಾಗಿದೆ. ಅಲ್ಟ್ರಾವಯಲೆಟ್ ವಿಕಿರಣವನ್ನು ಈ ಮೊದಲು ನೇರಳಾತೀತ ಕಿರಣವೆಂದು ಕರೆಯಲಾಗುತ್ತಿತ್ತು. ಆದರೆ ಆ ಪದವು ಅಷ್ಟು ಸೂಕ್ತವಲ್ಲವೆಂದು ಮನಗಂಡ ಬಳಿಕ ಅದನ್ನು ಅತಿನೇರಿಳೆ ಕಿರಣವೆಂದು ಕರೆಯಲಾಗುತ್ತಿದೆ. ಹಾಗೆಯೇ, ಅಲ್ಟ್ರಾಸಾನಿಕ್ ತರಂಗಗಳನ್ನು ಈ ಮೊದಲು ಶಬ್ದಾತೀತ ತರಂಗಗಳೆಂದು ಕರೆಯಲಾಗುತ್ತಿತ್ತು. ಆದರೆ ಆ ಪದಕ್ಕೆ ಹೆಚ್ಚು ಸೂಕ್ತವಾದ ಪಾರಿಭಾಷಿಕ ಪದ ಶ್ರವ್ಯಾತೀತ ತರಂಗಗಳೆಂದು ಇಂದು ಕಂಡುಕೊಳ್ಳಲಾಗಿದೆ. ಇನ್ಫ್ರಾರೆಡ್ ಕಿರಣಗಳನ್ನು ಈ ಮೊದಲು ರಕ್ತಾತೀತ ಕಿರಣಗಳೆಂದು ಕರೆದದ್ದನ್ನು, ಇಂದವು ಅವಗೆಂಪು ಕಿರಣಗಳಾಗಿ ಕರೆಸಿಕೊಳ್ಳುತ್ತಿವೆ.

ವಿಜ್ಞಾನದ ಪದಪುಂಜಗಳ ತಪ್ಪು ಬಳಕೆಯ ತರುವಾಯ ಮತ್ತೊಂದು ಸಾಮಾನ್ಯವಾಗಿ ಸಂಭವಿಸುವ ಅಚಾತುರ್ಯವೆಂದರೆ, ಅಲ್ಪಪ್ರಾಣ ಮಹಾಪ್ರಾಣಗಳ ಅದಲು ಬದಲು ಮತ್ತು ಉಚ್ಚಾರದೋಷ. ಜೀವವಿಜ್ಞಾನಕ್ಕೆ ಸಂಬಂಧಿಸಿದ ಲೇಖನಗಳಲ್ಲಿ ಮತ್ತು ಪಠ್ಯಗಳಲ್ಲಿಯೂ ಸಹ 'ಸ್ಪೀಷಿಸ್' ಪದವನ್ನು ಕನ್ನಡದಲ್ಲಿ 'ಪ್ರಬೇಧ' ಕೆಲವೊಮ್ಮೆ 'ಪ್ರಭೇಧ'ವೆಂದೂ ತಪ್ಪಾಗಿ ಉಪಯೋಗಿಸಿರುವ ಅನೇಕ ಉದಾಹರಣೆಗಳನ್ನು ನೋಡಬಹುದು. ಆದರೆ ಇದರ ಸರಿಯಾದ ಉಚ್ಚಾರ 'ಪ್ರಭೇದ' ಎಂದು ಗಮನಿಸತಕ್ಕದ್ದು. ಇನ್ನು ಎರಡು ಪದಗಳು ಸೇರಿ ಸಮಸ್ತ ಪದವಾದಾಗ, ಅವನ್ನು ಒಟ್ಟಿಗೆಯಾಗಿ ಒಂದೇ



ವಿಲ್ಹೆಲ್ಮ್ ರಾಂಟ್ಜೆನ್ ಮತ್ತು ಅವರು ತೆಗೆದ ಮೊದಲ ಎಕ್ಸ್-ಕಿರಣ ಛಾಯಾಚಿತ್ರ

ಪದವಾಗಿ ಬಳಸುವುದು ಸುಲಭ. ಉದಾಹರಣೆಗೆ 'ಭೌತವಿಜ್ಞಾನ' 'ರಸಾಯನವಿಜ್ಞಾನ', 'ಮೈಕ್ರೊಮೀಟರ್', 'ನ್ಯಾನೊದಂಡ', 'ನ್ಯಾನೊನಳಿಗೆ' ಇವೆಲ್ಲಾ ಒಂದೇ ಪದಗಳು. ಇನ್ನು, ರಾಸಾಯನಿಕ ಧಾತುಗಳ ಹೆಸರುಗಳನ್ನು ಈ ಮೊದಲು 'ಸೋಡಿಯಂ', 'ಪೊಟ್ಯಾಸಿಯಂ' ಎಂದು ಬಳಸುತ್ತಿದ್ದನ್ನು, ಇಂದು 'ಸೋಡಿಯಮ್', 'ಪೊಟ್ಯಾಸಿಯಮ್', 'ಯುರೇನಿಯಮ್' ಎಂದು ಬಳಸಲಾಗುತ್ತಿದೆ. ಇದಕ್ಕೆ ಕಾರಣ, ಓದುಗರಿಗೆ ಸ್ಪಷ್ಟ ಉಚ್ಚಾರ ದೊರೆಯಲು ಅರೆ ವ್ಯಂಜನಾಕ್ಷರವಾದ 'ಮ್'ಅನ್ನು ಧಾತುವಿನ ಹೆಸರಿನ ಕೊನೆಯಲ್ಲಿ 'ಂ' ಬಿಂದುವಿನ ಬದಲಾಗಿ ಉಪಯೋಗಿಸಲಾಗಿದೆ.

ಕನ್ನಡ ಭಾಷೆಯಲ್ಲಿ ವಿಜ್ಞಾನದ ಪದಬಳಕೆಗೆ ಸಂಬಂಧಿಸಿದಂತೆ ಎರಡು ಬಗೆಗಳನ್ನು ಗುರುತಿಸ ಬಹುದು. ಒಂದು, ಇದ್ದದ್ದನ್ನು ಇದ್ದಂತೆಯೇ ಹೇಳಲಾರದ ಸಂದಿಗ್ಧ ಪರಿಸ್ಥಿತಿ. ಮತ್ತೊಂದು ಇರಲಾರದನ್ನು, ಇದೆಯೆಂದು ಊಹಿಸಿ ಬಳಸುವ ದುಸ್ಥಿತಿ. ಮೇಲಿನ ಎಲ್ಲಾ ದೃಷ್ಟಾಂತಗಳು ಮೊದಲನೆ ಬಗೆಗೆ ಸೇರಿವೆ. ಇನ್ನು ಎರಡನೇ ಬಗೆಗೆ, ಉತ್ತಮ ಉದಾಹರಣೆ; ವಿಧಾನಸಭೆಯ ಸ್ಪೀಕರ್ ಆಗಿದ್ದ ಕಾಗೋಡು ತಿಮ್ಮಪ್ಪನವರು ಅಂದಿನ ಲೋಕಾಯುಕ್ತ ಭಾಸ್ಕರ್‌ರಾವ್ ಕುರಿತು ಮಾತನಾಡುತ್ತಾ "ಆ ಶನಿಯನ್ನು ತೊಲಗಿಸಬೇಕು" ಎಂದಿದ್ದರು ! ನಿಜಕ್ಕೂ ಶನಿಗ್ರಹ ಸೌರವ್ಯೂಹದ ಎಲ್ಲಾ ಗ್ರಹಗಳಲ್ಲಿಯೇ ಸುಂದರಗ್ರಹ. ಅದೊಂದು ಅನಿಲ ದೈತ್ಯವಾಗಿ, ತನ್ನ ಸುತ್ತು ದೊಡ್ಡ ಉಂಗುರಾವಸ್ಥೆ ಪಡೆದಿರುವ ಮನಮೋಹಕ ಕಾಯ. ಇಂಥ ಶನಿಯನ್ನು ಅನಿಷ್ಟಕಾರಕ, ಉಪದ್ರವ ನೀಡುವ ಸಾಡೇ ಸಾತ್ ಎಂದೆಲ್ಲಾ ಜರಿಯುವುದು ಎಷ್ಟು ಸರಿ ? ಕಾಲ ಬದಲಾದಂತೆ, ವೈಜ್ಞಾನಿಕ ತಿಳಿವಳಿಕೆ ಮತ್ತು ಜ್ಞಾನ ಹೆಚ್ಚಾದಂತೆ ನಮ್ಮಲ್ಲಿ ಶತಶತಮಾನಗಳಿಂದಲೂ ಬೇರೂರಿರುವ ಮೂಢನಂಬಿಕೆಗಳನ್ನು ಕಿತ್ತು ಹಾಕುವುದು ನಮ್ಮ ಆದ್ಯ ಕರ್ತವ್ಯವಲ್ಲವೇ ? ಉಪದ್ರವ ನೀಡುವ, ಕಾಟಕೊಡುವ, ತೊಂದರೆಯನ್ನುಂಟುಮಾಡುವ ವಸ್ತು ಅಥವಾ ವ್ಯಕ್ತಿಗಳಿಗೆ ಪರ್ಯಾಯವಾಗಿ ಬೇರೆ ನುಡಿಗಟ್ಟುಗಳನ್ನು ಹುಟ್ಟುಹಾಕುವ, ಬಳಕೆಗೆ ತರುವ ಜವಾಬ್ದಾರಿ



ಜೆ. ಆರ್. ಲಕ್ಷ್ಮಣರಾವ್



ಅಡ್ಯನಡ್ಕ ಕೃಷ್ಣಭಟ್



ಜಿ. ಟಿ. ನಾರಾಯಣರಾವ್



ಕೆ. ಎಲ್. ಗೋಪಾಲಕೃಷ್ಣ ರಾವ್



ಟಿ. ಆರ್. ಅನಂತರಾಮು



ಸಿ. ಆರ್. ಕೃಷ್ಣರಾವ್

ಬರಹಗಾರರ ಮೇಲೆ ಅವಲಂಬಿತವಾಗಿದೆ.

ಕನ್ನಡದಲ್ಲಿ ವಿಜ್ಞಾನ ಪಾರಿಭಾಷಿಕ ಪದಗಳನ್ನು ಹುಟ್ಟುಹಾಕುವಲ್ಲಿ ಮತ್ತು ಬಳಕೆಗೆ ತರುವಲ್ಲಿ ಅನೇಕ ವಿಜ್ಞಾನ ಬರಹಗಾರರು ಗುರುತರ ಕೊಡುಗೆಯನ್ನು ನೀಡಿದ್ದಾರೆ. ಈ ಸಂದರ್ಭದಲ್ಲಿ ಅವರನ್ನು ಉಲ್ಲೇಖಿಸುವುದು ಔಚಿತ್ಯಪೂರ್ಣ. ಜೆ. ಆರ್. ಲಕ್ಷ್ಮಣರಾವ್ ಮತ್ತು ಅಡ್ಯನಡ್ಕ ಕೃಷ್ಣಭಟ್ ಅವರ ಸಂಪಾದಕತ್ವದಲ್ಲಿ ಪ್ರಕಟಗೊಂಡ 'ಇಂಗ್ಲಿಷ್–ಕನ್ನಡ ವಿಜ್ಞಾನ ಶಬ್ದಕೋಶ' ಸುಮಾರು ೧೩೦೦೦ ನಮೂದುಗಳೊಂದಿಗೆ ಪೂರ್ಣ ಪ್ರಮಾಣದ ಕನ್ನಡದ ಮೊದಲ ವಿಜ್ಞಾನ ಶಬ್ದಕೋಶವೆನ್ನುವ ಹೆಗ್ಗಳಿಕೆಗೆ ಪಾತ್ರವಾಗಿದೆ. ಇದನ್ನು ೧೯೯೦ರಲ್ಲಿ ಕರ್ನಾಟಕ ರಾಜ್ಯ ವಿಜ್ಞಾನ ಪರಿಷತ್ತು ಪ್ರಕಟಿಸಿದ್ದು ಸ್ತುತ್ಯರ್ಹ. ಇದಾದ ಸುಮಾರು ಹತ್ತು ವರ್ಷಗಳ ತರುವಾಯ ೨೦೦೧ರಲ್ಲಿ ನವಕರ್ನಾಟಕ ಪ್ರಕಾಶನ ಸಂಸ್ಥೆಯಿಂದ ಜಿ. ಟಿ. ನಾರಾಯಣರಾವ್ ಪ್ರಧಾನ ಸಂಪಾದಕರಾಗಿ, ಸಿ. ಆರ್. ಕೃಷ್ಣರಾವ್ ಮತ್ತು ಕೆ. ಎಲ್. ಗೋಪಾಲಕೃಷ್ಣ ರಾವ್ ಸಂಪಾದಕರಾಗಿ 'ವಿಜ್ಞಾನ ಪದವಿವರಣ ಕೋಶ' ಪ್ರಕಟಗೊಂಡಿತು. ಸುಮಾರು ೧೨,೫೦೦ ನಮೂದುಗಳ ಈ ಕೃತಿಯು ಅಂದಿನ ಶಬ್ದಕೋಶಗಳಲ್ಲಿದ್ದ ಹಲವು ಗೊಂದಲಗಳನ್ನು ನಿವಾರಿಸಿ, ಕನ್ನಡದಲ್ಲಿ ಅಕಾರಾದಿಯಾಗಿ ರೂಪುಗೊಂಡಿದ್ದು ವಿಶೇಷವೇ ಸರಿ.



*ವಿಜ್ಞಾನ–ತಂತ್ರಜ್ಞಾನ ಪದಸಂಪದ*

ಒಟ್ಟಾರೆಯಾಗಿ ವಿಜ್ಞಾನ ಪಾರಿಭಾಷಿಕ ಪದಗಳ ಬಳಕೆ ಶಿಷ್ಟಾಚಾರದಿಂದ ಕೂಡಿದೆ. ಇಲ್ಲಿ ಪದಬಳಕೆಯಲ್ಲಿ ಕಿಂಚಿತ್ ವ್ಯತ್ಯಾಸವಾದರೂ ಹಲವು ಬಗೆಯ ಅಪಾರ್ಥ ಹೊಮ್ಮುತ್ತದೆ. ವಿಜ್ಞಾನ ಪದಬಳಕೆಯಲ್ಲಿ ಖಚಿತತೆ ಸಾಧಿಸುವ ಪ್ರಯತ್ನಗಳು ನಿರಂತರ ನಡೆಯಬೇಕಿದೆ. ಮೇಲೆ ಪ್ರಸ್ತುತಪಡಿಸಿದ ಎಲ್ಲ ವಿಚಾರಗಳಿಗೆ ಸ್ಪಷ್ಟವಾಗಿ ಮಾರ್ಗದರ್ಶನ ತೋರುವ ವಿಜ್ಞಾನ ನಿಘಂಟು ಕನ್ನಡದಲ್ಲಿ ಲಭ್ಯವಿದೆ. ಕೆ. ಎಲ್. ಗೋಪಾಲಕೃಷ್ಣ ರಾವ್, ಡಾ॥ ಟಿ. ಆರ್. ಅನಂತರಾಮು ಮತ್ತು ಸಿ. ಆರ್. ಕೃಷ್ಣರಾವ್ ಇವರ ಸಂಪಾದಕತ್ವದಲ್ಲಿ, ನವಕರ್ನಾಟಕ ಪ್ರಕಾಶನ ಹೊರತಂದಿರುವ 'ವಿಜ್ಞಾನ–ತಂತ್ರಜ್ಞಾನ ಪದಸಂಪದ' ಕನ್ನಡದಲ್ಲಿ ವಿಜ್ಞಾನ ಸಂವಹನೆಗೆ ಒಂದು ಅಮೂಲ್ಯ ಸಂಪತ್ತು. ಕ್ಷಿಪ್ರವಾಗಿ ಬೆಳೆಯುತ್ತಿರುವ ವಿಜ್ಞಾನ–ತಂತ್ರಜ್ಞಾನದ ವಿವಿಧ ಕ್ಷೇತ್ರಗಳ ರಾಜ್ಯದ ೧೫ ಪರಿಣತರ ನೆರವಿನಿಂದ ಸುಮಾರು ೧೫೦೦೦ ಪದಗಳ, ೯೦೦ ಪುಟಗಳ ಈ ಬೃಹತ್ ಗ್ರಂಥ ವಿಜ್ಞಾನ ಬರಹಗಾರರಿಗೆ, ಪಠ್ಯಪುಸ್ತಕ ರಚನಾಕಾರರಿಗೆ ಮತ್ತು ಶಿಕ್ಷಕ–ವಿದ್ಯಾರ್ಥಿ ಸಮುದಾಯಕ್ಕೆ ದಾರಿದೀಪವಾಗಿದೆ. ಕನ್ನಡ–ಇಂಗ್ಲಿಷ್ ಪದಕೋಶ, ಕನ್ನಡ–ಕನ್ನಡ ಪದವಿವರಣೆ ಮತ್ತು ಇಂಗ್ಲಿಷ್–ಕನ್ನಡ ಪದಸೂಚಿ ಒಳಗೊಂಡಿರುವ 'ತ್ರಿ ಇನ್ ವನ್' ಖ್ಯಾತಿಯ ಈ ಪದ ಸಂಪದವು ಅನೇಕ ಬಾರಿ ಮರುಮುದ್ರಣ ಕಾಣುತ್ತಿರುವುದು ಇದರ ಉಪಯುಕ್ತತೆ ಮತ್ತು ಜನಪ್ರಿಯತೆಗೆ ಸಾಕ್ಷಿಯಾಗಿದೆ. ಕನ್ನಡದ ವಿಜ್ಞಾನ ಸಾಹಿತ್ಯಕ್ಕೆ ಭದ್ರ ಬುನಾದಿಯನ್ನು ಕಲ್ಪಿಸಿರುವ ಇಂಥ ಅಮೂಲ್ಯ ಆಕರ ಗ್ರಂಥವನ್ನು ಬಳಸಿಕೊಂಡು ತಪ್ಪು ವೈಜ್ಞಾನಿಕ ಪಾರಿಭಾಷಿಕ ಪದಗಳ ಬಳಕೆಯನ್ನು ತಕ್ಕಮಟ್ಟಿಗಾದರೂ ತಡೆಗಟ್ಟಬಹುದಲ್ಲವೇ ?

**ಎಸ್. ಮಂಜುನಾಥ**
ಅಧ್ಯಕ್ಷರು, ಮೇಡಂಕ್ಯೂರಿ ವಿಜ್ಞಾನ ಅಕಾಡೆಮಿ, ನಂ. ೬೩
ವಾರ್ಡ್–೧೨, ರೆಡ್ಡಿ ಬೀದಿ, ಬಿ.ಎಂ.ಡಿ. ಶಾಲೆ ಹಿಂಭಾಗ, ಬಳ್ಳಾರಿ – ೫೮೩ ೧೦೧

ನೆಮ್ಮದಿಯ ನಾಳೆ ನಮ್ಮದು

# ಹೊಸತು

## ಹೊಸ ವರ್ಷದ ಹಾರ್ದಿಕ ಶುಭಾಶಯಗಳು

## ೨೦೧೮

### ಜನವರಿ

| | | | | | |
|---|---|---|---|---|---|
| ಭಾನುವಾರ | | ೭ | ೧೪ | ೨೧ | ೨೮ |
| ಸೋಮವಾರ | ೧ | ೮ | ೧೫ | ೨೨ | ೨೯ |
| ಮಂಗಳವಾರ | ೨ | ೯ | ೧೬ | ೨೩ | ೩೦ |
| ಬುಧವಾರ | ೩ | ೧೦ | ೧೭ | ೨೪ | ೩೧ |
| ಗುರುವಾರ | ೪ | ೧೧ | ೧೮ | ೨೫ | |
| ಶುಕ್ರವಾರ | ೫ | ೧೨ | ೧೯ | ೨೬ | |
| ಶನಿವಾರ | ೬ | ೧೩ | ೨೦ | ೨೭ | |

### ಫೆಬ್ರವರಿ

| | | | | | |
|---|---|---|---|---|---|
| ಭಾನುವಾರ | | ೪ | ೧೧ | ೧೮ | ೨೫ |
| ಸೋಮವಾರ | | ೫ | ೧೨ | ೧೯ | ೨೬ |
| ಮಂಗಳವಾರ | | ೬ | ೧೩ | ೨೦ | ೨೭ |
| ಬುಧವಾರ | | ೭ | ೧೪ | ೨೧ | ೨೮ |
| ಗುರುವಾರ | ೧ | ೮ | ೧೫ | ೨೨ | |
| ಶುಕ್ರವಾರ | ೨ | ೯ | ೧೬ | ೨೩ | |
| ಶನಿವಾರ | ೩ | ೧೦ | ೧೭ | ೨೪ | |

### ಮಾರ್ಚ್

| | | | | | |
|---|---|---|---|---|---|
| ಭಾನುವಾರ | | ೪ | ೧೧ | ೧೮ | ೨೫ |
| ಸೋಮವಾರ | | ೫ | ೧೨ | ೧೯ | ೨೬ |
| ಮಂಗಳವಾರ | | ೬ | ೧೩ | ೨೦ | ೨೭ |
| ಬುಧವಾರ | | ೭ | ೧೪ | ೨೧ | ೨೮ |
| ಗುರುವಾರ | ೧ | ೮ | ೧೫ | ೨೨ | ೨೯ |
| ಶುಕ್ರವಾರ | ೨ | ೯ | ೧೬ | ೨೩ | ೩೦ |
| ಶನಿವಾರ | ೩ | ೧೦ | ೧೭ | ೨೪ | ೩೧ |

### ಏಪ್ರಿಲ್

| | | | | | |
|---|---|---|---|---|---|
| ಭಾನುವಾರ | ೧ | ೮ | ೧೫ | ೨೨ | ೨೯ |
| ಸೋಮವಾರ | ೨ | ೯ | ೧೬ | ೨೩ | ೩೦ |
| ಮಂಗಳವಾರ | ೩ | ೧೦ | ೧೭ | ೨೪ | |
| ಬುಧವಾರ | ೪ | ೧೧ | ೧೮ | ೨೫ | |
| ಗುರುವಾರ | ೫ | ೧೨ | ೧೯ | ೨೬ | |
| ಶುಕ್ರವಾರ | ೬ | ೧೩ | ೨೦ | ೨೭ | |
| ಶನಿವಾರ | ೭ | ೧೪ | ೨೧ | ೨೮ | |

### ಮೇ

| | | | | | |
|---|---|---|---|---|---|
| ಭಾನುವಾರ | | ೬ | ೧೩ | ೨೦ | ೨೭ |
| ಸೋಮವಾರ | | ೭ | ೧೪ | ೨೧ | ೨೮ |
| ಮಂಗಳವಾರ | ೧ | ೮ | ೧೫ | ೨೨ | ೨೯ |
| ಬುಧವಾರ | ೨ | ೯ | ೧೬ | ೨೩ | ೩೦ |
| ಗುರುವಾರ | ೩ | ೧೦ | ೧೭ | ೨೪ | ೩೧ |
| ಶುಕ್ರವಾರ | ೪ | ೧೧ | ೧೮ | ೨೫ | |
| ಶನಿವಾರ | ೫ | ೧೨ | ೧೯ | ೨೬ | |

### ಜೂನ್

| | | | | | |
|---|---|---|---|---|---|
| ಭಾನುವಾರ | | ೩ | ೧೦ | ೧೭ | ೨೪ |
| ಸೋಮವಾರ | | ೪ | ೧೧ | ೧೮ | ೨೫ |
| ಮಂಗಳವಾರ | ೩ | ೫ | ೧೨ | ೧೯ | ೨೬ |
| ಬುಧವಾರ | ೪ | ೬ | ೧೩ | ೨೦ | ೨೭ |
| ಗುರುವಾರ | ೫ | ೭ | ೧೪ | ೨೧ | ೨೮ |
| ಶುಕ್ರವಾರ | ೧ | ೮ | ೧೫ | ೨೨ | ೨೯ |
| ಶನಿವಾರ | ೨ | ೯ | ೧೬ | ೨೩ | ೩೦ |

### ಜುಲೈ

| | | | | | |
|---|---|---|---|---|---|
| ಭಾನುವಾರ | ೧ | ೮ | ೧೫ | ೨೨ | ೨೯ |
| ಸೋಮವಾರ | ೨ | ೯ | ೧೬ | ೨೩ | ೩೦ |
| ಮಂಗಳವಾರ | ೩ | ೧೦ | ೧೭ | ೨೪ | ೩೧ |
| ಬುಧವಾರ | ೪ | ೧೧ | ೧೮ | ೨೫ | |
| ಗುರುವಾರ | ೫ | ೧೨ | ೧೯ | ೨೬ | |
| ಶುಕ್ರವಾರ | ೬ | ೧೩ | ೨೦ | ೨೭ | |
| ಶನಿವಾರ | ೭ | ೧೪ | ೨೧ | ೨೮ | |

### ಆಗಸ್ಟ್

| | | | | | |
|---|---|---|---|---|---|
| ಭಾನುವಾರ | | ೫ | ೧೨ | ೧೯ | ೨೬ |
| ಸೋಮವಾರ | ೨ | ೬ | ೧೩ | ೨೦ | ೨೭ |
| ಮಂಗಳವಾರ | ೩ | ೧೭ | ೧೪ | ೨೧ | ೨೮ |
| ಬುಧವಾರ | ೧ | ೧೮ | ೧೫ | ೨೨ | ೨೯ |
| ಗುರುವಾರ | ೨ | ೧೯ | ೧೬ | ೨೩ | ೩೦ |
| ಶುಕ್ರವಾರ | ೩ | ೧೦ | ೧೭ | ೨೪ | ೩೧ |
| ಶನಿವಾರ | ೪ | ೧೧ | ೧೮ | ೨೫ | |

### ಸೆಪ್ಟೆಂಬರ್

| | | | | | |
|---|---|---|---|---|---|
| ಭಾನುವಾರ | ೩೦ | ೨ | ೯ | ೧೬ | ೨೩ |
| ಸೋಮವಾರ | | ೩ | ೧೦ | ೧೭ | ೨೪ |
| ಮಂಗಳವಾರ | | ೪ | ೧೧ | ೧೮ | ೨೫ |
| ಬುಧವಾರ | | ೫ | ೧೨ | ೧೯ | ೨೬ |
| ಗುರುವಾರ | | ೬ | ೧೩ | ೨೦ | ೨೭ |
| ಶುಕ್ರವಾರ | | ೭ | ೧೪ | ೨೧ | ೨೮ |
| ಶನಿವಾರ | ೧ | ೮ | ೧೫ | ೨೨ | ೨೯ |

### ಅಕ್ಟೋಬರ್

| | | | | | |
|---|---|---|---|---|---|
| ಭಾನುವಾರ | | ೭ | ೧೪ | ೨೧ | ೨೮ |
| ಸೋಮವಾರ | ೧ | ೮ | ೧೫ | ೨೨ | ೨೯ |
| ಮಂಗಳವಾರ | ೨ | ೯ | ೧೬ | ೨೩ | ೩೦ |
| ಬುಧವಾರ | ೩ | ೧೦ | ೧೭ | ೨೪ | ೩೧ |
| ಗುರುವಾರ | ೪ | ೧೧ | ೧೮ | ೨೫ | |
| ಶುಕ್ರವಾರ | ೫ | ೧೨ | ೧೯ | ೨೬ | |
| ಶನಿವಾರ | ೬ | ೧೩ | ೨೦ | ೨೭ | |

### ನವೆಂಬರ್

| | | | | | |
|---|---|---|---|---|---|
| ಭಾನುವಾರ | | ೪ | ೧೧ | ೧೮ | ೨೫ |
| ಸೋಮವಾರ | | ೫ | ೧೨ | ೧೯ | ೨೬ |
| ಮಂಗಳವಾರ | | ೬ | ೧೩ | ೨೦ | ೨೭ |
| ಬುಧವಾರ | | ೭ | ೧೪ | ೨೧ | ೨೮ |
| ಗುರುವಾರ | ೧ | ೮ | ೧೫ | ೨೨ | ೨೯ |
| ಶುಕ್ರವಾರ | ೨ | ೯ | ೧೬ | ೨೩ | ೩೦ |
| ಶನಿವಾರ | ೩ | ೧೦ | ೧೭ | ೨೪ | |

### ಡಿಸೆಂಬರ್

| | | | | | |
|---|---|---|---|---|---|
| ಭಾನುವಾರ | ೩೦ | ೨ | ೧೯ | ೧೬ | ೨೩ |
| ಸೋಮವಾರ | ೩೧ | ೩ | ೧೦ | ೧೭ | ೨೪ |
| ಮಂಗಳವಾರ | | ೪ | ೧೧ | ೧೮ | ೨೫ |
| ಬುಧವಾರ | | ೫ | ೧೨ | ೧೯ | ೨೬ |
| ಗುರುವಾರ | | ೬ | ೧೩ | ೨೦ | ೨೭ |
| ಶುಕ್ರವಾರ | | ೭ | ೧೪ | ೨೧ | ೨೮ |
| ಶನಿವಾರ | ೧ | ೮ | ೧೫ | ೨೨ | ೨೯ |

# ಬಹುತ್ವದ ನೆಲೆಗಳು

ಬಿ. ಸುರೇಶ

ಬಹುತ್ವ ಎನ್ನುವುದು ಬಹುಕಾಲದಿಂದ ಈ ನಾಡಿನಲ್ಲಿ, ಈ ಜಂಬೂ ದ್ವೀಪೇ ಭರತ ಖಂಡೇ ಎಂದು ಗುರುತಿಸಲಾದ ನೆಲದಲ್ಲಿ ಚರ್ಚೆಯಾಗಿರುವ, ಚರ್ಚೆ ಆಗುತ್ತಿರುವ ಮತ್ತು ಚರ್ಚೆಯಾಗುವ ವಿಷಯ. ಸಮಕಾಲೀನ ಕಾಲಘಟ್ಟದಲ್ಲಂತೂ ಮತ್ತೆ ಮತ್ತೆ ಚರ್ಚೆಯಾಗಬೇಕಾದ, ಸಂವಾದಗಳ ಮೂಲಕ ಘಾಸಿಗೊಂಡ ಮನಸ್ಸುಗಳನ್ನು ತಣಿಸಬೇಕಾದ, ಆಗಿರುವ ಗಾಯಗಳಿಗೆ ಔಷಧ ಆಗಬೇಕಾದ ವಿಷಯ.

**ಕೆಲವು ಘಟನೆಗಳು ಮತ್ತು ಪುರಾಣದ ಉದಾಹರಣೆಗಳು**

ಮೊದಲಿಗೆ, ಎರಡು ಸಣ್ಣ ಘಟನೆ ಮತ್ತು ಒಂದೆರಡು ಪುರಾಣ ಕತೆಗಳ ವಿವರಗಳನ್ನು ಉದಾಹರಿಸಿ ಮುಂದುವರೆಯುತ್ತೇನೆ.

ಎಂ. ಎಫ್. ಹುಸೇನ್ ಅವರಿಗೆ ೯೧ ವರ್ಷಗಳಾಗಿದ್ದಾಗ ಆತನ ನಿರಂತರ ಕ್ರಿಯಾಶೀಲತೆ ಕುರಿತು ಮೀನಾ ವಾನಿ ಎಂಬಾಕೆ ಸಂದರ್ಶನವೊಂದರಲ್ಲಿ ಕಾರಣ ಕೇಳುತ್ತಾರೆ. ಆತ ಉತ್ತರಿಸುತ್ತಾ, "ವಿಮರ್ಶಕರ ಮತ್ತು ಮೂಲಭೂತವಾದಿಗಳ ಮಾತುಗಳನ್ನು ಕುರಿತು ತಲೆಕೆಡಿಸಿಕೊಳ್ಳದೆ ನನ್ನ ಪಾಡಿಗೆ ನನ್ನ ಕೆಲಸವನ್ನು ಪ್ರತಿನಿತ್ಯ ಮಾಡುತ್ತಿರುವುದು ಹಾಗೂ ಪಾದರಕ್ಷೆಯಾಗಿ ಬೂಟುಗಳನ್ನು ಹಾಕದೇ ಇರುವುದೇ ನನ್ನ ನಿರಂತರವಾದ ಕೃಷಿಗೆ ಕಾರಣ" ಎನ್ನುತ್ತಾನೆ. (Quartz.com) ಆದರೆ ಆ ಮಾತಾಡಿದ ಕೆಲವೇ ವರ್ಷಗಳಲ್ಲಿ ಆತ ತನ್ನದಲ್ಲದ ನೆಲದಲ್ಲಿ (೨೦೧೧) ಹತಾಶನಾಗಿ, ತಾಯಿನಾಡಿನ ಸ್ಪರ್ಶಕ್ಕೆ ಹಾತೊರೆಯುತ್ತಾ ಅನಾರೋಗ್ಯದಿಂದಾಗಿ ಕೊನೆಯುಸಿರೆಳೆಯುತ್ತಾನೆ.

**ಎರಡನೆಯ ಘಟನೆ:** ತಮಿಳುನಾಡಿನಲ್ಲಿ ಮಹಾಭಾರತದ ನಾಟಕ ಪ್ರಯೋಗದಲ್ಲಿ ನಡೆಯುವಂತಹದು. ತಮಿಳುನಾಡಿಗರಿಗೆ ದ್ರೌಪದಿ ಪೂಜಾರ್ಹಳು. ಆಕೆಯ ಸೀರೆಯನ್ನು ಸೆಳೆಯಬೇಕಾದ ಸನ್ನಿವೇಶ ಮಾಡುವ ಮುನ್ನ ದುಶ್ಯಾಸನ ಪಾತ್ರಧಾರಿಯು ದ್ರೌಪದಿ ಪಾತ್ರ ಮಾಡುವವಳ ಕಾಲಿಗೆ ಬಿದ್ದು, "ಅಮ್ಮಾ, ನೀನು ನನ್ನ ಪಾಲಿನ ದೇವರು. ನಿನಗೆ ನಿತ್ಯ ಕೈ ಮುಗಿಯುವ ಮಗ ನಾನು. ನಾನೀಗ ಪಾತ್ರಧಾರಿಯಾಗಿ ಮಾತ್ರ ನಿನ್ನ ಸೀರೆ ಸೆಳೆಯಬೇಕಿದೆ. ನನ್ನ ಈ ಪಾಪವನ್ನು ಕ್ಷಮಿಸು ತಾಯಿ" ಎಂದು ಪ್ರಾರ್ಥಿಸಿ ನಂತರ ಸೆರಗೆಳೆಯುವ ಅಭಿನಯವನ್ನು ಮಾಡುತ್ತಾನೆ. (ಪುರುಷೋತ್ತಮ ಬಿಳಿಮಲೆ, ಪ್ರಜಾವಾಣಿ ದೀ.ವಿ. ೨೦೧೭)

ಪುರಾಣ ಕತೆಯಲ್ಲಿನ ಉದಾಹರಣೆಯಾಗಿ ಜನಪದ ಮಹಾಭಾರತವೊಂದರಲ್ಲಿ (ಈಶಾನ್ಯ ಭಾರತದ್ದು) ಬರುವ ಕತೆಯೊಂದನ್ನು ಗಮನಿಸಿ: "ಕೃಷ್ಣನು ಪಾಂಡವರ ಜೊತೆಗೆ ನದಿಯೊಂದರಲ್ಲಿ ಈಜುವಾಗ ಆತನ ಕೋಮಣವು (ಲಂಗೋಟಿ) ಬಿದ್ದುಹೋಗುತ್ತದೆ. ಅದರಿಂದಾಗಿ ಎಲ್ಲರೂ ನೀರಿನಿಂದಾಚೆಗೆ ಹೋದರೂ ತಾನು ನೀರಿನಲ್ಲಿಯೇ ಉಳಿಯುತ್ತಾನೆ. ಅವನ ಸಂಕಟವನ್ನು ಅರಿತ ದ್ರೌಪದಿಯು ತನ್ನ ಸೀರೆಯ ಸೆರಗನ್ನು ಹರಿದು ಆತನ ಕಡೆಗೆ ಎಸೆಯುತ್ತಾಳೆ. ಹಾಗೆ ತನ್ನ ಮಾನ ಉಳಿಸಿದವಳನ್ನು ತಾನೂ ಕಾಪಾಡುತ್ತೇನೆ ಎಂದು ಕೃಷ್ಣ ಮಾತು ಕೊಡುತ್ತಾನೆ" (ಗೊಂಡಿ ರಾಮಾಯಣ ಕುರಿತ ಲೇಖನ, ಮೈತ್ರಿ, ಕನ್ನಡ ವಿವಿ)

ಇದೇ ಬಗೆಯ ಮತ್ತೊಂದು ಜನಪದ ರಾಮಾಯಣದಲ್ಲಿ "ರಾಮನ ಪಟ್ಟಾಭಿಷೇಕ ಕಾಲದಲ್ಲಿ ರಾಮನ ಕಾಲಿನ ಬಳಿ ಹನುಮ ಕೂತಿರುವಾಗಲೇ ರಾಮನ ರಾಜ ಉಂಗುರವು ಕೈಯಿಂದ ಜಾರಿ ಇರುವೆ ಗೂಡೊಂದರಲ್ಲಿ ಬಿದ್ದು, ನಾಪತ್ತೆಯಾಗಿ ಹೋಗುತ್ತದೆ. ಕೂಡಲೇ ರಾಮನ ದೂತನು ತನ್ನ ದೇಹ ಚಿಕ್ಕದು ಮಾಡಿಕೊಂಡು ಇರುವೆ ಗೂಡಿನ ಮೂಲಕ ಪಾತಾಳ ಲೋಕಕ್ಕೆ ಹೋಗುತ್ತಾನೆ. ಅಲ್ಲಿದ್ದ ಇರುವೆಗಳ ಸೈನ್ಯ ಹನುಮನನ್ನು ಬಂಧಿಸಿ ರಾಜನಲ್ಲಿಗೆ ಕರೆದೊಯ್ಯುತ್ತದೆ. ಆ ಪಾತಾಳ ರಾಜನು ಹನುಮನು ಪಾತಾಳಕ್ಕೆ ಬಂದ ಕಾರಣವನ್ನು ಕೇಳಿ ತಿಳಿದು, ಆತನ ಎದುರು ಒಂದು ಹರಿವಾಣವನ್ನು ಇಡುತ್ತಾನೆ. ಅದರ ತುಂಬ ಇರುವ ರಾಜಮುದ್ರೆಗಳನ್ನು ತೋರಿಸಿ, 'ಇದೆಲ್ಲಾ ಹಲವು ರಾಮರ ರಾಜಮುದ್ರೆಗಳು. ನಿನಗೆ ಬೇಕಾದ್ದನ್ನು ಆರಿಸಿಕೊ' ಎನ್ನುತ್ತಾನೆ. ಆ ಮೂಲಕ ಈ ನಾಡಲ್ಲಿ ಇದ್ದುದು ಒಬ್ಬ ರಾಮ ಅಲ್ಲ ಹಲವು ರಾಮರುಗಳು ಎಂದು ಜನಪದ ಕವಿ ತಿಳಿಸುತ್ತಾನೆ" (ಮುನ್ನೂರು ರಾಮಾಯಣಗಳು, ಎ. ಕೆ. ರಾಮಾನುಜನ್)

ಬಹುತ್ವದ ನೆಲೆಗಳನ್ನು ಕುರಿತು ಮಾತಾಡುವಾಗ ಈ ಕೆಲವು ಉದಾಹರಣೆಗಳು ಬಹುಮುಖ್ಯ ವೇದಿಕೆಯನ್ನು ಒದಗಿಸುತ್ತವೆ. ಇಂತಹ ಉದಾಹರಣೆಗಳ ಮೂಲಕ ನಮ್ಮ ಕಣ್ಣೆದುರೇ ಆನಂದ್ ಪಟವರ್ಧನ್ ಅವರ "ರಾಮ್ ಕೇ ನಾಮ್" ಸಾಕ್ಷ್ಯಚಿತ್ರ ಅನುಭವಿಸಿದ ಕಷ್ಟಗಳನ್ನು, ದೆಹಲಿ ವಿವಿಯಲ್ಲಿ ಪಠ್ಯವಾಗಿದ್ದ ಎ. ಕೆ. ರಾಮಾನುಜನ್ ಅವರ "ಮುನ್ನೂರು ರಾಮಾಯಣಗಳು" ಪುಸ್ತಕವನ್ನು ಹೊಸ ಸರ್ಕಾರ ಹಿಂದಕ್ಕೆ ಪಡೆದದ್ದನ್ನು, ಪೆರುಮಾಳ್ ಮುರುಗನ್ ತರಹದ ಲೇಖಕರು ಅನುಭವಿಸಿದ ಸಂಕಟವನ್ನು, ನಮ್ಮವರೇ ಆದ ಯೋಗೇಶ್ ಮಾಸ್ತರ್ ಅವರು "ಢುಂಢಿ" ಕಾದಂಬರಿಯ ಸಂದರ್ಭದಲ್ಲಿ ಎದುರಿಸಿದ ಸಮಸ್ಯೆಗಳನ್ನು ನೋಡಬೇಕಿದೆ. ದಾಭೋಲ್ಕರ್, ಪನ್ಸಾರೆ, ಕಲ್ಬುರ್ಗಿ ಮತ್ತು ಗೌರಿಯವರ ಹತ್ಯೆಯನ್ನು ಸಹ ಗಮನಿಸಬೇಕಿದೆ. ಈ ಪ್ರಕರಣಗಳು ನೇರವಾಗಿ ನಮ್ಮನ್ನು ಬಹುತ್ವ ಎಂದರೇನು? ಬಹುತ್ವವು ಪ್ರಜಾಪ್ರಭುತ್ವದಲ್ಲಿ ಹೇಗೆ ಕೆಲಸ ಮಾಡುತ್ತದೆ? ಪ್ರಜಾಪ್ರಭುತ್ವದ ನಿರ್ವಚನ ಏನು? ಎಂಬ ಪ್ರಶ್ನೆಗಳಿಗೆ ಮುಖಾಮುಖಿಯಾಗಿಸುತ್ತವೆ. "ಹಲವು ದನಿಗಳ, ಹಲವು ಅಭಿಪ್ರಾಯಗಳ ನಡುವೆ ನಿರಂತರ ಚರ್ಚೆ, ವಿಚಾರ ವಿನಿಮಯದ ಮೂಲಕ ಎಲ್ಲರೂ ಒಪ್ಪುವ ಒಂದು ದಾರಿಯಲ್ಲಿ ನಡೆಯುವ ವ್ಯವಸ್ಥೆ" ಎಂಬುದು ಪ್ರಜಾಪ್ರಭುತ್ವಕ್ಕೆ ಇರುವ ನಿರ್ವಚನಗಳಲ್ಲಿ ಒಂದು.

ಈ ಹಿನ್ನೆಲೆಯಲ್ಲಿ, ಫ್ಲಾರಿಡಾ ವಿಶ್ವವಿದ್ಯಾಲಯದ ಪ್ರೊಫೆಸರ್ ಆದ ಡಾ॥ ಮದನ್‌ಲಾಲ್ ಅವರು ಪ್ಲೂರಲಿಸಂ, ಡಿಸೆಂಟ್ ಆ್ಯಂಡ್ ಡೆಮಾಕ್ರಸಿ

(Ivarta.com) ಎಂಬ ಲೇಖನದಲ್ಲಿ ಭಾರತದ ಬಗ್ಗೆ ಬರೆಯುತ್ತಾ ಹೀಗೆನ್ನುವುದನ್ನು ಗಮನಿಸಿ: "ಭಾರತದಲ್ಲಿನ ಪ್ರಜಾಪ್ರಭುತ್ವದ ಯಶಸ್ಸಿಗೆ ಅಲ್ಲಿನ ವಾದ – ಚರ್ಚೆಗಳ ಸಂಪ್ರದಾಯವು ಪ್ರಧಾನ ಕಾರಣ. ಚರ್ಚೆ ಎಂಬುದು ಸ್ವಾತಂತ್ರ್ಯ ಎಂಬುದರ ಬಹುಮುಖ್ಯವಾದ, ಆದರೆ ಸಣ್ಣದಾದ ಗುರುತು. ಸ್ವತಂತ್ರವಾಗಿ ಭಿನ್ನಾಭಿಪ್ರಾಯ ವ್ಯಕ್ತಪಡಿಸುವುದು, ಮತ್ತೊಬ್ಬರ ನಿಲುವಿಗೆ ವಿರೋಧ ವ್ಯಕ್ತಪಡಿಸುವುದು ಅಭಿವ್ಯಕ್ತಿ ಸ್ವಾತಂತ್ರ್ಯ ಇರುವ ತಾಣಗಳಲ್ಲಿ ಬಹುಮುಖ್ಯವಾದುದು." ಹೀಗೆ ಎನ್ನುತ್ತಾ ಮುಂದುವರೆದು, "ಭಗವದ್ಗೀತೆ ಸಹ ಪ್ರವಚನ ಅಲ್ಲ, ಬದಲಿಗೆ ಕೃಷ್ಣ – ಅರ್ಜುನರ ನಡುವಿನ ಸಂವಾದ... ಉಪನಿಷದ್‌ಗಳು ಸಹ ಗುರು – ಶಿಷ್ಯರೊಡನೆ, ಪಂಡಿತರುಗಳು ಪಂಡಿತರುಗಳ ಜೊತೆಗೆ ನಡೆಸಿದ ಸಂವಾದ... ಶಂಕರಾಚಾರ್ಯ ಸಹ ಭಾರತದ ಉದ್ದಗಲಕ್ಕೂ ಎರಡೆರಡು ಸಲ ಸಂಚರಿಸುತ್ತಾ ಆ ಕಾಲದ ಬೌದ್ಧ ಮತ್ತು ಜೈನ ಗುರುಗಳ ನಡುವೆ ತನ್ನ ವಾದಗಳನ್ನು ಮಂಡಿಸಿದ, ಚರ್ಚೆಗಳನ್ನು ನಡೆಸಿದ" ಎನ್ನುತ್ತಾರೆ. ಅಂದರೆ ಯಾವುದೇ ಭಿನ್ನಾಭಿಪ್ರಾಯವನ್ನು ಚರ್ಚೆ, ಸಂವಾದಗಳ ಮೂಲಕ ಪರಿಹರಿಸಿಕೊಳ್ಳುವ ಸಂಪ್ರದಾಯ ಈ ನೆಲದ್ದು. ಭಿನ್ನಾಭಿಪ್ರಾಯ ಇದೆ ಎಂದೊಡನೆ ದೇಶದ್ರೋಹಿ ಪಟ್ಟ ಕಟ್ಟುವ, ಅಂತಹವರ ಮೇಲೆ ಸಾಮಾಜಿಕ ತಾಣಗಳಲ್ಲಿ ವೈಯಕ್ತಿಕ ದಾಳಿಗೆ ಇಳಿಯುವ, ಕಡೆಗೆ ಜೀವ ತೆಗೆಯುವ ಹಂತಕ್ಕೆ ನಮ್ಮ ನಾಡು ಸರಿಯುತ್ತಾ ಇರುವುದು ಬಹುತ್ವದಿಂದ ದೂರ ಸರಿಯುತ್ತಾ ಇರುವುದಕ್ಕೆ ಸಾಕ್ಷಿ. ಇದು ಆತಂಕದ ಸಂಗತಿಯೂ ಹೌದು. ನಾವು ನಮ್ಮ ಬಹುತ್ವದ ನೆಲೆಯನ್ನು ಉಳಿಸಿಕೊಳ್ಳಲು ಹೋರಾಡಬೇಕಾಗಿ ಬಂದಿದೆ ಎಂಬುದು ಸಹ ವಾಸ್ತವ. ಈ ಹಿನ್ನೆಲೆಯಲ್ಲಿ, ನಾವು ಕಳೆದುಕೊಂಡ ಸಂಗಾತಿಗಳನ್ನು ಕೊಂದವರಾರು ಎಂಬ ಪ್ರಶ್ನೆಗೆ ಆಳುವ ವ್ಯವಸ್ಥೆಗಳ ಎದುರಿಗೆ ಗಟ್ಟಿ ದನಿಯಲ್ಲಿ ಉತ್ತರ ಕೊಡಿ ಎಂದು ಕೇಳುತ್ತಿದ್ದೇವೆ. ಆದರೆ ಇಂತಹುದೇ ಸಂದರ್ಭದಲ್ಲಿ ತಮ್ಮ ಸಂಗಾತಿಗಳ ಕೊಲೆಗೆ ಕಾರಣರಾದವರನ್ನು ಹುಡುಕಿ ಎಂದು ಕೇಳುವಾಗ ಬಹುತ್ವ ವಿರೋಧಿ ಬಣಗಳು ಹಿಂಸೆಗೆ ಇಳಿದು ನಾಡನ್ನು ಮತ್ತಷ್ಟು ಜರ್ಜರಿತವಾಗಿಸುತ್ತಾ ಇರುವುದು ಸಹ ಕಣ್ಣ ಮುಂದಿದೆ. ನಮ್ಮ ಹಾದಿ ಸ್ಪಷ್ಟವಾಗಿರಬೇಕಿದೆ. ನಾವು ಚರ್ಚೆ, ಸಂವಾದಗಳಿಗೆ ತೆರೆದುಕೊಂಡಿರೋಣ, ಆದರೆ ಭಿನ್ನಾಭಿಪ್ರಾಯ ಹೊಂದಿದವರ ಪ್ರಾಣವನ್ನು ಉಳಿಸುವ ಪಣವನ್ನೂ ತೊಡಬೇಕಿದೆ. ಇಲ್ಲವಾದರೆ ಬಹುತ್ವದ ನಾಡು ಎಂಬುದು ರಕ್ತದ ಬೀದಿಗಳ ನಾಡಾಗುವ ಸಾಧ್ಯತೆ ಇದೆ ಎಂಬುದನ್ನು ನೆನಪಲ್ಲಿ ಇಡಬೇಕಿದೆ.



ಸ್ವಲ್ಪ ಎಣ್ಣೆ, ಹೊಟ್ಟೆತುಂಬ ಊಟ, ಕೈ ಖರ್ಚಿಗೆ ಒಂದಿಷ್ಟು ಹಣ ಬಿದ್ದರೆ ನಾವು ಯಾರಿಗೂ 'ಜೈ' ಎನ್ನಲು ರೆಡಿ ಸಾರ್!

ಮೇಲೆ ಉಲ್ಲೇಖಿಸಿದ ಲೇಖನದಲ್ಲಿಯೇ ಮದನ್‌ಲಾಲ್ ಅವರು ರಾಮಾಯಣದ ಉತ್ತರಕಾಂಡದ ಶ್ಲೋಕವೊಂದನ್ನು (ಪದ್ಯ ೧೦೮, ಉ. ಕಾಂ.) ಉದಾಹರಿಸುತ್ತಾ ದಶರಥನ ಮಂತ್ರಿಗಳಲ್ಲಿ ಒಬ್ಬನಾದ ಜಾವಳಿ ಎಂಬುವನು ರಾಮನಿಗೆ, "ಎಲವೋ ರಾಮಚಂದ್ರ, ಈ ಲೌಕಿಕ ಜಗತ್ತು ಎಂಬುದನ್ನು ಬಿಟ್ಟು ಮತ್ತೊಂದಿಲ್ಲ. ಯಾವುದೋ ಜನ್ಮದ ಮಾತುಗಳನ್ನೆಲ್ಲ ಬಿಟ್ಟು ನೀನು

ಅನುಭವಿಸಬೇಕಾದ ಸಿಂಹಾಸನವನ್ನು ಮುದಿ ತಂದೆಯಿಂದ ಪಡೆದು ರಾಜ್ಯಭಾರ ಮಾಡು" ಎನ್ನುವುದನ್ನು ಉದಾಹರಿಸುತ್ತಾರೆ. ಸ್ಪಷ್ಟವಾಗಿ ಇಂತಹ ಮಾತು ಆ ಕಾಲದ ಚಾರ್ವಾಕ ಸಿದ್ಧಾಂತದಿಂದ ಹೊರಟ ಮಾತು. ರಾಮಾಯಣದಲ್ಲಿ ಇದು ದಾಖಲಾಗಿದೆ ಎಂಬುದೇ ಈ ಜಂಬೂ ದ್ವೀಪದಲ್ಲಿ ಎಲ್ಲ ಬಗೆಯ ತತ್ವ ಸಿದ್ಧಾಂತಗಳ ಮಾತಿಗೆ ಅವಕಾಶವಿತ್ತು ಎಂಬುದರ ಸೂಚಿ. ಈ ಹಿನ್ನೆಲೆಯಲ್ಲಿ ನಾಥನ್ ಕಾಟ್ಜ್ ಎಂಬ ಕ್ಯಾಲಿಫೋರ್ನಿಯಾ ವಿವಿಯ ಪ್ರಾಧ್ಯಾಪಕರ, "ಭಾರತದಲ್ಲಿ ಮಾತ್ರ ಯಹೂದಿಗಳನ್ನು ಯಾರೂ ಕೊಲ್ಲದೆ ಬದುಕಲು ಅವಕಾಶ ಕೊಟ್ಟದ್ದು" ಎಂಬ ಮಾತನ್ನೂ ಗಮನಿಸಬೇಕಿದೆ. ಜಗತ್ತಿನ ಎಲ್ಲಾ ನೆಲೆಗಳಲ್ಲಿಗಿಂತ ಭಿನ್ನವಾಗಿ ಭಾರತಕ್ಕೆ ಬಂದ ಯಹೂದಿಗಳಿಗೆ ಮೌಂಟ್ ಅಬುದಂತಹ ಜಾಗದಲ್ಲಿ ಅವರ ಪ್ರಾರ್ಥನ ಮಂದಿರವನ್ನು ಕಟ್ಟುವುದಕ್ಕೆ ಮಾತ್ರವಲ್ಲ, ನಾಡಿನಾದ್ಯಂತ ಬದುಕುವುದಕ್ಕೆ ಅವಕಾಶ ಮಾಡಿಕೊಟ್ಟ ನಾಡು ಇದು. ಹಾಗಾಗಿಯೇ ಜೆಆರ್‌ಡಿ ಟಾಟಾ, ಹೋಮಿ ಭಾಭಾ ಮುಂತಾದವರು ಈ ನಾಡಿನಲ್ಲಿ ಬೃಹತ್ ಉದ್ದಿಮೆಗಳನ್ನು ಬೃಹತ್ ಪ್ರಯೋಗ ಶಾಲೆಗಳನ್ನು ಸ್ಥಾಪಿಸಲು, ಅವುಗಳ ಮೂಲಕ ಈ ನಾಡನ್ನು ಕಟ್ಟಲು ಸಾಧ್ಯವಾಗಿದ್ದನ್ನು ನಾವಿಲ್ಲಿ ನೆನೆಯಬೇಕು. ಎಲ್ಲ ಬಗೆಯ, ಎಲ್ಲ ಜಾತಿ ಧರ್ಮಗಳ ಜನರ ಮುಕ್ತವಾದ ಬದುಕಿಗೆ ಅವಕಾಶ ಇರುವ ನಾಡಾಗಿ ಉಳಿದಾಗ ಮಾತ್ರ ನಮ್ಮ ನಾಡು ಬಹುತ್ವದ ಭಾರತವಾಗಿ ಉಳಿಯಬಲ್ಲದು.

**ಭಾಷೆ ಎಂಬ ಬಹುತ್ವದ ಮುಖ**

ಬಹುತ್ವದ ನೆಲೆಗೆ ಬಹುಮುಖ್ಯವಾದ ಜಾಗವೆಂದರೆ ನಮ್ಮ ಪುರಾಣಗಳು ಗುರುತಿಸುವ ಜಂಬೂ ದ್ವೀಪದ ಭರತಖಂಡವೇ ಎನ್ನಬಹುದು. ಈ ಭಾರತದಲ್ಲಿ ಇರುವ ಜಾತಿ, ಧರ್ಮ, ಸಿದ್ಧಾಂತಗಳು ಮಾತ್ರವಲ್ಲ, ಭಾಷೆಗಳೂ ಅನೇಕ. ಪ್ರತಿ ನದಿಯನ್ನು ದಾಟಿದಾಗ ಹೊಸ ಭಾಷೆ, ಹೊಸ ಸಂಸ್ಕೃತಿಗಳು ಇರುವ ನಾಡಿದು. ಒಂದು ಅಂದಾಜಿನ ಪ್ರಕಾರ ಭಾರತದಲ್ಲಿ ಲಿಪಿ ಇರುವ ಭಾಷೆಗಳು ಐವತ್ತರ ಆಸುಪಾಸಲ್ಲಿ ಇದ್ದರೆ ಲಿಪಿ ರಹಿತ ಭಾಷೆಗಳು ಎರಡು ಸಾವಿರಕ್ಕಿಂತ ಹೆಚ್ಚಿವೆ. ಹಾಗಾಗಿಯೇ ೧೯೪೭ರಲ್ಲಿ ಸ್ವಾತಂತ್ರ್ಯ ಪಡೆದು ಪ್ರತ್ಯೇಕ ದೇಶವಾದ ಈ ಭಾರತವನ್ನು "ಇದು ಒಂದು ಭಾಷೆಯ, ಒಂದು ಧರ್ಮದ, ಒಂದು ಜನಾಂಗದ ದೇಶವಲ್ಲ. ಇದು ಸಾಮಾಜಿಕವಾಗಿ ಹರಿದು ಹಂಚಿಹೋದ ಅನೇಕ ಬಗೆಯ ಜನರು ಕೂಡಿರುವ ರಾಷ್ಟ್ರ.... ಇಂತಹ, ಅಸಮಾನತೆಗಳಿರುವ ಬಹುಮುಖಿ ಸಮಾಜದಲ್ಲಿ ಸಾಮರಸ್ಯ ಕಾಪಾಡಲು ತಾತ್ವಿಕವಾಗಿ ವಿಕೇಂದ್ರೀಕರಣವನ್ನು ಒಪ್ಪಿ, ಭಾಷೆಯ ಆಧಾರದ ಮೇಲೆ ವಿಂಗಡಿಸಿ (ಅನೇಕ ದೇಶಗಳೆಂದು ಗುರುತಿಸಲಾಗುತ್ತಿದ್ದ ನಾಡುಗಳನ್ನು) ರಾಜ್ಯವಾಗಿ ಗುರುತಿಸಿ, ಸ್ವಾಯತ್ತ ಅಧಿಕಾರ ನೀಡಲಾಗಿದೆ" (ರವಿವರ್ಮಕುಮಾರ್, ವಾ.ಭಾ./ವಾ.ವಿ.೨೦೧೭) ಎಂಬ ಮಾತನ್ನು ಗಮನಿಸಬೇಕಿದೆ. ಇಂತಹದೊಂದು ತೀರ್ಮಾನಕ್ಕೆ ಭಾರತ ಎಂದು ಗುರುತಿಸಲಾದ ಹಲವು ದೇಶಗಳ ಒಕ್ಕೂಟದ ಸ್ಥಾಪನೆಯನ್ನು ಮಾಡಲು ಸಂವಿಧಾನ ಸಿದ್ಧಪಡಿಸುವಾಗಲೂ, "ಇದು ಹಿಂದೂಸ್ಥಾನ, ಇದನ್ನು ಹಿಂದೂರಾಷ್ಟ್ರವಾಗಿ ಘೋಷಿಸಬೇಕು. ಇಲ್ಲಿ ಒಂದೇ ಭಾಷೆ, ಒಂದೇ ಧರ್ಮ, ಸ್ಥಾಪನೆಯಾಗಬೇಕು" ಎಂದು ಒತ್ತಾಯಿಸುತ್ತಿದ್ದ ಗುಂಪು ಇತ್ತು. ಆಗ ದೇಶಕ್ಕೆ 'ಒಂದೇ ಭಾಷೆ, ಒಂದೇ ಧರ್ಮ' ಎಂಬ ಸಲಹೆಯನ್ನು ಸ್ಪಷ್ಟವಾಗಿ ನಿರಾಕರಿಸಲಾಯಿತು. ಹಿಂದಿ ಭಾಷೆಯನ್ನು ಇತರ ಭಾಷೆಗಳ ಮೇಲೆ ಹೇರುವುದನ್ನು ಸಹ ಸಂಪೂರ್ಣವಾಗಿ ತಿರಸ್ಕರಿಸಲಾಯಿತು (ಭಾರತದ ಸಂವಿಧಾನ ರಚನೆಯ ಇತಿಹಾಸ, ಕ್ವಿಂಟ್.ಇನ್) ಎಂಬ ವಿವರವು ನಮ್ಮ ಕಣ್ಣೆದುರಿಗೆ ಇರುವಾಗಲೇ ಆ ಬಗೆಯ ಮಾತಾಡುತ್ತಾ ಇದ್ದವರು ಇಂದು ಒಕ್ಕೂಟ ವ್ಯವಸ್ಥೆಯ ಕೇಂದ್ರದಲ್ಲಿ ಆಡಳಿತದಲ್ಲಿ ಕುಳಿತಿದ್ದಾರೆ. ಪಾರ್ಲಿಮೆಂಟ್ ಭವನದ ಮೆಟ್ಟಿಲಿಗೆ ಸಾಷ್ಟಾಂಗ ನಮಿಸಿ ಗದ್ದುಗೆ ಏರಿ, ಸಂವಿಧಾನದ ಹೆಸರಲ್ಲಿ ಪ್ರಮಾಣ ವಚನ ಸ್ವೀಕರಿಸಿದವರೇ ಇಂದು ಸಂವಿಧಾನವನ್ನು ಆಮೂಲಾಗ್ರವಾಗಿ ಬದಲಿಸುವ ಮಾತಾಡುತ್ತಾ ಇದ್ದಾರೆ. ಈಚೆಗೆ ಕರಾವಳಿಯಲ್ಲಿ ನಡೆದ ಧರ್ಮ ಸಂಸದ್ ಎಂಬ ಕಾರ್ಯಕ್ರಮದಲ್ಲಿ ನಮ್ಮ ಸಂವಿಧಾನವನ್ನು ಆಮೂಲಾಗ್ರವಾಗಿ ಬದಲಿಸಬೇಕು ಎಂಬ ಕರೆಯನ್ನು ನೀಡಲಾಗಿದೆ ಎಂಬುದು ಈ ನಾಡಿನಲ್ಲಿ ಬಹುತ್ವ ಕಾಪಾಡಬೇಕೆನ್ನುವವರಿಗೆ ಎಚ್ಚರಿಕೆ ಗಂಟೆಯೇ ಆಗಿದೆ. ಬಹುತ್ವದ ಭಾರತದಲ್ಲಿ ಪ್ರತ್ಯೇಕ ಸಂಸದ್ ಭವನ ಎಂಬುದನ್ನು ರೂಪಿಸಿರುವಾಗ ಪ್ರತ್ಯೇಕ



ಧರ್ಮ ಸಂಸದ್ ಎಂಬುದು ನಡೆಯುತ್ತದೆ ಎಂಬುದೇ ಬಹುತ್ವಕ್ಕೆ ಒದಗಿರುವ ದೊಡ್ಡ ಸವಾಲಾಗಿದೆ.

ಇದರ ಜೊತೆಗೆ ಒಂದು ಭಾಷೆಯನ್ನು ಇಡಿಯಾಗಿ ದೇಶದ ಮೇಲೆ ಹೇರುವ ಪ್ರಯತ್ನ ಮಾಡುತ್ತಾ ಇದ್ದಾರೆ. ಇದು ಈ ನೆಲದ ಬಹುತ್ವದ ನೆಲೆಗೆ ವಿರುದ್ಧ ಎಂಬುದನ್ನು ಮತ್ತೆ ಮತ್ತೆ ಹೇಳುತ್ತಾ ಆ ಜನರಿಗೆ ಸಂವಿಧಾನ ರಚನೆಯ ಇತಿಹಾಸವನ್ನು ಮತ್ತು ಭಾರತ ಎಂಬುದು ಹಲವು ದೇಶಗಳ ಒಕ್ಕೂಟ ಎಂಬುದುನ್ನು ನೆನಪಿಸಬೇಕಿದೆ. ಭಾರತದ ಸಂವಿಧಾನದ ಪರಿಚ್ಛೇದ ೩೪೫ರ ಪ್ರಕಾರ ಆಯಾ ರಾಜ್ಯದ ಆಡಳಿತ ಭಾಷೆಯಾಗಿ ಆಯಾ ಪ್ರದೇಶದಲ್ಲಿನ ಆಡುಭಾಷೆಗಳಲ್ಲಿ ಒಂದನ್ನು ಆಯ್ಕೆ ಮಾಡಿಕೊಳ್ಳುವ ಅಧಿಕಾರವನ್ನು ನೀಡಿರುವ ಹಾಗೆಯೇ, ಪರಿಚ್ಛೇದ ೩೪೪ ಮತ್ತು ೩೫೧ರ ಪ್ರಕಾರ ಈ ನಾಡಿನಲ್ಲಿ ೨೨ ಭಾಷೆಗಳಿಗೆ ಈ ಒಕ್ಕೂಟ ವ್ಯವಸ್ಥೆಯ ಅಧಿಕೃತ ಭಾಷೆಗಳು (ಷೆಡ್ಯೂಲ್ಡ್) ಎಂಬ ಸ್ಥಾನ ನೀಡಲಾಗಿದೆ ಎಂಬುದನ್ನು ಆಡಳಿತಾರೂಢರಿಗೆ ನೆನಪಿಸಬೇಕಿದೆ. ಈ ಒತ್ತಡಗಳ ಮೂಲಕ ಭಾರತ ಎಂಬ ದೇಶದಲ್ಲಿ ಎಲ್ಲಾ ಭಾಷೆಗಳ ಜೀವಂತಿಕೆಯು ಭಾರತದ ಬಹುತ್ವದ ವ್ಯವಸ್ಥೆಗೆ ಅಗತ್ಯ ಎಂದು ತಿಳಿಸಬೇಕಿದೆ. ಯಾವುದೇ ಒಂದು ಧರ್ಮ, ಒಂದು ಭಾಷೆಯನ್ನು ಇಡಿಯ ದೇಶದ ಮೇಲೆ ಹೇರುವುದನ್ನು ಅಂಬೇಡ್ಕರ್ ನೇರವಾಗಿ ವಿರೋಧಿಸಿದ್ದು ಭಾರತದ ಬಹುತ್ವವನ್ನು ಕಾಪಾಡುವುದಕ್ಕಾಗಿಯೇ. ಆದರೆ ಈಗ ಏಕಧರ್ಮ, ಏಕಭಾಷೆಯ ಮಾತುಗಳು ಮತ್ತೆ ಕೇಳಿಸುತ್ತಿವೆ. ದ್ರಾವಿಡ ರಾಜ್ಯಗಳ ಮೇಲೆ ಉತ್ತರದ ಭಾಷೆಯೊಂದನ್ನು ಹೇರುವ ಪ್ರಯತ್ನಗಳಾಗುತ್ತಿವೆ. ಈ ಹಿನ್ನೆಲೆಯಲ್ಲಿ ಮೆಟ್ರೋದಂತಹ ಜಾಗದಲ್ಲಿ ಹಿಂದಿ ಹೇರಿಕೆಯ ವಿರುದ್ಧ ಆದ ಅಭಿಯಾನವನ್ನು ಗಮನಿಸಬೇಕಿದೆ.

**ಬಹುತ್ವ ವರ್ಸಸ್ ಬಹುಮತೀಯವಾದ**

ಬಹುತ್ವವೇ ಭಾರತದ ಧರ್ಮ. ಜೊತೆಗೆ, "ದೇಶ ಕಟ್ಟುವ ಕೆಲಸದಲ್ಲಿ ಪಾಲುದಾರರಾಗಿರುವವರು ದೇಶಕ್ಕಿಂತ ಜಾತಿ, ಧರ್ಮ ಮಿಗಿಲು ಎಂಬ ಮಾತಾಡಿದರೆ ನಮಗೆ ಸಿಕ್ಕಿರುವ ಸ್ವಾತಂತ್ರ್ಯವೇ ನಾಶವಾಗಬಹುದು" ಎಂಬ ಅಂಬೇಡ್ಕರ್ ಅವರ ಮಾತನ್ನು (ಅಂಬೇಡ್ಕರ್ ಭಾಷಣಗಳು, ನವೆಂಬರ್ ೨೫, ೧೯೪೯ರಲ್ಲಿ ಮಾಡಿದ ಭಾಷಣ, ಕ.ಸಂ.ಇ.) ನೆನಪಿಸಿಕೊಳ್ಳಬೇಕಿದೆ. ಈ ಭಾಷಣದಲ್ಲಿಯೇ ಅಂಬೇಡ್ಕರ್ ಅವರು, "ಸಾಂವಿಧಾನಿಕವಾಗಿಯೇ ನಾವು ನಮ್ಮ ಸಮಾಜೋ ಆರ್ಥಿಕ ಆದರ್ಶಗಳನ್ನು ಪೂರೈಸಿಕೊಳ್ಳಬೇಕಿದೆ.... ಅರಾಜಕತೆಯ ವ್ಯಾಕರಣ ಮತ್ತು ಭಾಷೆಗಳಿಂದ ನಾವು ಎಷ್ಟು ಬೇಗ ದೂರ ಸರಿಯುತ್ತೇವೋ ಅಷ್ಟೂ ನಮಗೆ ಒಳ್ಳೆಯದು" ಎನ್ನುತ್ತಾರೆ. ಅರಾಜಕತೆಯ ವ್ಯಾಕರಣ ಎಂದು ಅಂಬೇಡ್ಕರ್ ಅವರು ಗುರುತಿಸುವುದು ಬಹುಮತೀಯವಾದವನ್ನು (Majoritarianism). ಈ ಬಹುಮತೀಯ ವಾದವು ಏಕರೂಪತೆಯನ್ನು ವೈವಿಧ್ಯಮಯ ದೇಶದ ಮೇಲೆ ಹೇರುವ ಪ್ರಯತ್ನ ಮಾಡುತ್ತಲೇ ಇದೆ. ಕಳೆದ ಎರಡು ಮೂರು ದಶಕಗಳಿಂದಂತೂ ಈ

ಬಹುಮತೀಯವಾದದ ದನಿ ಗಟ್ಟಿಯಾಗುತ್ತಲೇ ಇದೆ. ಈ ಮಾತಿಗೆ ಅದ್ವಾನಿಯವರ ರಥ ಯಾತ್ರೆಯ ಸಮಯದ ಭಾಷಣಗಳಿಂದ ಈಚೆಗೆ ನಡೆದ ಧರ್ಮಸಂಸದ್‌ನಲ್ಲಿನ ಭಾಷಣಗಳವರೆಗೆ ಅನೇಕ ಉದಾಹರಣೆಗಳನ್ನು ನೀಡಬಹುದು. ಅರಾಜಕತೆಯ ವ್ಯಾಕರಣವಂತೂ ಈಚೆಗಿನ ಬಹುತೇಕ ನಾಯಕರ ಮಾತುಗಳಲ್ಲಿ ಹಾಸುಹೊಕ್ಕಾಗಿದೆ. 'ಅವರದ್ದು ಯಾವ ರಕ್ತ, ಇವರದ್ದು ಯಾವ ರಕ್ತ' ಎಂಬ ಅಸಂಬದ್ಧ ಮಾತುಗಳು ಹುಟ್ಟುವುದೇ ಬಹುತ್ವಕ್ಕೆ ಧಕ್ಕೆ ಉಂಟಾಗುವುದರ ಸೂಚನೆ. 'ಮರ್ಸಲ್' ಚಿತ್ರದ ಸಂದರ್ಭದಲ್ಲಿ ಆ ಚಿತ್ರದ ನಟನ ಜಾತಿಯನ್ನು ಹಿಡಿದು ಅವಹೇಳನ ಮಾಡಿದ್ದು ಸಹ ಇದೇ ಮಾದರಿಯ ಉದಾಹರಣೆ. ಪ್ರಕಾಶ್ ರೈ ಅವರ ಜಾತಿಯನ್ನು ಕುರಿತ ಮಾತುಗಳನ್ನು ಕೂಡ ಇಲ್ಲಿ ನೆನೆಯಬಹುದು. ಸಣ್ಣ ಜಗಳಗಳ ಸಂದರ್ಭದಲ್ಲಿ ಗೆಲ್ಲುವುದು ಕಷ್ಟವಾದಾಗ ಎದುರಾಳಿಯ ಜಾತಿ, ವ್ಯಕ್ತಿತ್ವ, ಚಾರಿತ್ರ್ಯ ಹರಣ ಮಾಡಲು ಶುರುಮಾಡುವುದನ್ನು ನೋಡುತ್ತಿದ್ದೇವೆ. ಆದರೆ ಒಂದು ಸಮಾಜದ ಜನನಾಯಕ ಎನಿಸಿಕೊಂಡವರು ಇಂತಹ ಕೆಲಸಕ್ಕೆ ಇಳಿದಾಗ ಸಂವಿಧಾನದ ಆಶಯವು ನಾಶವಾಗುತ್ತಾ ಇರುವುದಕ್ಕೆ ಇಡಿಯ ನಾಡು ಸಾಕ್ಷಿಯಾಗುತ್ತಾ ಇರುತ್ತದೆ. ಹೀಗೆ ಜಾತಿ, ಧರ್ಮದ ಸಮೀಕರಣವನ್ನು ಹಿಡಿದು ಮಾತಾಡುವ ಸಂಸದರು ಮತ್ತು ಶಾಸಕರನ್ನು, ಅವರು ಯಾವುದೇ ವೇದಿಕೆಯಲ್ಲಿ ಮಾತಾಡಿರಲಿ, ಆ ಕ್ಷಣವೇ ಜನಪ್ರತಿನಿಧಿಗಳ ಸ್ಥಾನದಿಂದ ಹಿಂದಕ್ಕೆ ತೆಗೆದು ಕೊಳ್ಳುವ ಕಾಯಿದೆಯೊಂದು ಜಾರಿಯಾಗಬೇಕಿದೆ. ಹಾಗಾದಾಗ ಮಾತ್ರ ಈ ನಾಲಿಗೆಗಳಿಗೆ ಕತ್ತರಿ ಬಿದ್ದು ಈ ನೆಲದ ಬಹುತ್ವವು ಉಳಿಯಬಲ್ಲುದು.

**ಬಹುತ್ವ ಮತ್ತು ಒಕ್ಕೂಟ ವ್ಯವಸ್ಥೆ**

ಭಾರತವನ್ನು ಒಕ್ಕೂಟ ವ್ಯವಸ್ಥೆಯಲ್ಲಿ ರೂಪಿತವಾದ ದೇಶ ಎಂದು ಗುರುತಿಸಲಾಗಿದೆ. ಅಂದರೆ ಹಲವು ದೇಶಗಳನ್ನೊಳಗೊಂಡ ಒಂದು ದೇಶವು ಒಕ್ಕೂಟ ಎಂದು ಅರ್ಥ ಮಾಡಿಕೊಳ್ಳಬೇಕಿದೆ. ಹಾಗಾಗಿಯೇ ಇಲ್ಲಿ ಪ್ರತೀ ರಾಜ್ಯಕ್ಕೂ ಆರ್ಥಿಕ ಮತ್ತು ರಾಜಕೀಯ ಸ್ವಾಯತ್ತತೆಯನ್ನು ಸಹ ಸಾಂವಿಧಾನಿಕವಾಗಿಯೇ ನೀಡಲಾಗಿದೆ. ಆದರೆ "ಈಚೆಗೆ ಭಾರತದಲ್ಲಿ ಆಗುತ್ತಾ ಇರುವ ಬಹುತೇಕ ಬದಲಾವಣೆಗಳನ್ನು ಗಮನಿಸಿದರೆ ಕೇಂದ್ರದಲ್ಲಿ ಅಧಿಕಾರವು ಹೆಚ್ಚಾಗುತ್ತಾ ಇರುವುದು ಮಾತ್ರವಲ್ಲದೆ ಒಂದೇ ಧರ್ಮದ ರಾಷ್ಟ್ರ ಕಟ್ಟಬೇಕೆಂಬ ಮಾತು ಕೇಳಿ ಬರುತ್ತಿರುವುದು ರಾಷ್ಟ್ರದ ಸ್ವಾಯತ್ತತೆ ನಾಶ ಮಾಡುವ ಯತ್ನವೇ ಆಗಿದೆ" ಎಂಬ ಮಾತನ್ನು (ರವಿವರ್ಮಕುಮಾರ್, ವಾ.ಭಾ., ವಾ.ವಿ. ೨೦೧೭) ಗಮನಿಸಿ. ಭಾರತ ಒಕ್ಕೂಟದ ಪ್ರತೀ ರಾಜ್ಯವೂ ತನ್ನ ಸ್ವಾಯತ್ತತೆಯನ್ನು ಸಾಧಿಸುತ್ತಾ ಇದ್ದುದು ತನ್ನ ತೆರಿಗೆಯ ಹಣದಿಂದ. ಈಗ ಆ ಸ್ವಾಯತ್ತತೆಯನ್ನು ಸರಿಸಿ, ಮರಳಿ ಊಳಿಗಮಾನ್ಯ ಪದ್ಧತಿಗೆ ಸಾಗಲು ಅನುವಾಗುವಂತೆ ಜಿ.ಎಸ್.ಟಿ. ಎಂಬ ವ್ಯವಸ್ಥೆ ತರಲಾಗಿದೆ. ಇನ್ನು ತೆರಿಗೆ ಸಂಗ್ರಹಿಸಿದ ರಾಜ್ಯಗಳು ತಮ್ಮದೇ ಹಣಕ್ಕಾಗಿ ಕೇಂದ್ರದ ಎದುರು ಮಂಡಿಯೂರುವ ಪರಿಸ್ಥಿತಿ ಬರಬಹುದು. ಹಾಗಾದಾಗ ಅದು ಬಹುತ್ವ ವ್ಯವಸ್ಥೆಗೆ ತಗಲುವ ಭಾರೀ ಪೆಟ್ಟು. ಈ ಜಿ.ಎಸ್.ಟಿ. ಎಂಬ ವ್ಯವಸ್ಥೆಯು ಜಾರಿಯಾಗಲು ಕಳೆದ ಒಂದೂವರೆ ದಶಕದಿಂದ ಪ್ರಯತ್ನಿಸುತ್ತಲೇ ಇದೆ. ಇದಕ್ಕೆ ವಿಶ್ವಬ್ಯಾಂಕಿನ ಜೊತೆಗೆ ಭಾರತ ಸರ್ಕಾರವು ಮಾಡಿಕೊಂಡಿದ್ದ ಒಪ್ಪಂದವೂ ಕಾರಣ. ಬೃಹತ್ ಕಾರ್ಪೊರೇಟ್ ಸಂಸ್ಥೆಗಳು ತಮ್ಮ ಸರಕುಗಳನ್ನು ಒಂದು ರಾಜ್ಯದಿಂದ ಮತ್ತೊಂದು ರಾಜ್ಯಕ್ಕೆ ಸಾಗಿಸುವಾಗ ಹಲವು ತೆರಿಗೆಗಳನ್ನು ನೀಡುವುದನ್ನು ತಪ್ಪಿಸಿಕೊಳ್ಳಲು ಮಾಡಿದ ಪ್ರಯತ್ನವಿದು. ಮೇಲ್ನೋಟಕ್ಕೆ ವಣಿಕರಿಗೆ ಅನುಕೂಲವಾಗುತ್ತದೆ ಎಂಬ ಮಾತನ್ನು ಹೇಳಿಯೇ ನಾಡಿನ ಜನರನ್ನು ಈ ವ್ಯವಸ್ಥೆಗೆ ಒಗ್ಗಿಸಲಾಗುತ್ತಿದೆ. ಆದರೆ ಈ ವ್ಯವಸ್ಥೆಯು ಸಣ್ಣ ಉದ್ದಿಮೆದಾರರಿಗೆ ಮತ್ತು ಸಣ್ಣ ವ್ಯಾಪಾರಿಗಳ ಮೇಲೆ ಹೇರುವ ಸಂಕಟ ಭಿನ್ನ ರೀತಿಯದು. ಆ ವಿಷಯದ ಬಗ್ಗೆ ಹೆಚ್ಚು ಹೇಳುವುದಕ್ಕೆ ಈ ಲೇಖನದ ವ್ಯಾಪ್ತಿ ಅನುವುಮಾಡುವುದಿಲ್ಲವಾದರೂ ತಮ್ಮ ಗಮನಕ್ಕೆ ಕರಕುಶಲ ವಸ್ತುಗಳ ಮೇಲಿನ ಕರ ನಿರಾಕರಣೆ ಕುರಿತಂತೆ ನಡೆಯುತ್ತಾ ಇರುವ ಚಳುವಳಿಯನ್ನು ನೆನಪಿಸಬಹುದು. ಇನ್ನೂ ಈ ಜಿ.ಎಸ್.ಟಿ. ಹೇರುವಾಗಲೂ ಮದ್ಯಪಾನ ವಸ್ತುಗಳನ್ನು, ಇಂಧನಗಳನ್ನು ಬಿಟ್ಟಿರುವುದನ್ನು ಸಹ ತಾವು ಗಮನಿಸಬಹುದು. ಶಕ್ತಿಯುತ ವ್ಯಾಪಾರಿಗಳ ಲಾಬಿಯ ಎದುರಿಗೆ ಕೇಂದ್ರ ಸರ್ಕಾರವು ಹೇಗೆ

## ನಾನು ಮಾಯೆಯಲ್ಲ



**ನಾ**ನು ಮಾಯೆಯಲ್ಲ
ನಾನು ನಿಮ್ಮ ಮಗಳು
ನಾನು ನಿಮ್ಮ ಸೋದರಿ
ನಾನು ನಿಮ್ಮ ಸತಿ
ನಾನು ನಿಮ್ಮ ಒಡನಾಡಿ
ನಾನು ನಿಮ್ಮ ಸ್ನೇಹಿತೆ

ನಿಮ್ಮನ್ನು ಆರೈಕೆ ಮಾಡುವವಳು
ನಿಮಗೆ ವಾತ್ಸಲ್ಯ ನೀಡುವವಳು
ನಿಮ್ಮ ಮಗುವನ್ನು ಹೆರುವವಳು
ನಿಮ್ಮ ಕಷ್ಟಕ್ಕೆ ಹೆಗಲು ಕೊಡುವವಳು
ನಿಮಗೆ ಪ್ರೀತಿಯ ಸಿಂಚನ ಮಾಡುವವಳು
ನಾನು ಮಾಯೆಯೇ ?

ನನ್ನ ಆಕರ್ಷಣೆಗೆ ನೀವು ಬಲಿಯಾಗಿ
ಪ್ರೀತಿ ಕುದುರದಿದ್ದಾಗ
ನಾನು ಮಾಯೆಯಾದೆ !
ದಾಂಪತ್ಯದಲಿ ಬಿರುಕು ಉಂಟಾಗಿ
ಮೈ ದಾಹ ಇಂಗದಿದ್ದಾಗ
ನಾನು ಮಾಯೆಯಾದೆ !
ಪತ್ನಿಯೊಬ್ಬಳೇ ಸಾಲದಾಗಿ ಬಂದು
ಸೂಳೆಗೇರಿಯ ಮೆಟ್ಟಿಲು ಹತ್ತಿದಾಗ
ನಾನು ಮಾಯೆಯಾದೆ !
ಪುರುಷಾಧಿಕಾರ ಮಲೆತು
ಹೊಡೆತ ಬಡಿತಕ್ಕಿಳಿದಾಗ
ನಾನು ಮಾಯೆಯಾದೆ !

ಬಣ್ಣ ಬಣ್ಣಗಳಲ್ಲಿ ಕಣ್ಣುಮುಚ್ಚಾಲೆಯಾಡುವ
ಭ್ರಮೆಯ ಅಪ್ಸರೆ ನಾನಲ್ಲ
ನನಗೆ ಬೇಕು
ಜೀವಕ್ಕೆ ಜೀವ ಕೊಡುವ ನಿಜದ ಪ್ರೀತಿ
ಮಾಯಾಂಗನೆಯ ಥಳಕು ಬೇಡ
ಸುಳ್ಳಿನ ಸರಮಾಲೆಯ ಬಳಕು ಬೇಡ !

**ಎಸ್. ಮಾಲತಿ**
'ಮಹಾಲಸ ನಿಲಯ' ಜೋಗ ರಸ್ತೆ, ಶಿವಮೊಗ್ಗ ಜಿಲ್ಲೆ, ಸಾಗರ – ೫೭೭ ४०१

ಮಣಿಯುತ್ತದೆ ಎಂಬುದಕ್ಕೆ ಈಚೆಗೆ ಚಿನ್ನದ ವ್ಯಾಪಾರದಲ್ಲಿ ಐವತ್ತು ಸಾವಿರ ರೂಪಾಯಿಗಳ ಒಳಗಿನ ವಹಿವಾಟಿಗೆ ಜಿ.ಎಸ್.ಟಿ. ಮನ್ನಾ ಮಾಡಿದ್ದನ್ನು ಸಹ ನೆನೆಯಬಹುದು. ಒಟ್ಟಾರೆಯಾಗಿ, ಈ ಜಿಎಸ್‌ಟಿ ಎಂಬುದು ಒಕ್ಕೂಟ ವ್ಯವಸ್ಥೆಯ ಮೇಲೆ ಹಲವು ಹೊಸ ಒತ್ತಡಗಳನ್ನು ಹೇರುತ್ತಿರುವುದು ಕಣ್ಣೆದುರಿಗೆ ಇದೆ. ಮುಂದೆ ಇದು ರಾಜಕೀಯವಾಗಿ ಒಂದು ಎಂಬಂತೆ ರೂಪಿತವಾದ ಭಾರತ ಎಂಬ ದೇಶದ ವಿಭಜನೆಗೆ ದಾರಿಯಾಗದೆ ಇರಲಿ ಎಂದು ಹಾರೈಸೋಣ.




ಅಂತೆಯೇ ಎಲ್ಲಾ ವಿಶ್ವವಿದ್ಯಾಲಯಗಳನ್ನು ಯುಜಿಸಿ ಕೆಳಗೆ ತರುವ ವಿವರವನ್ನು ಸಹ ಗಮನಿಸಬಹುದು. ಪ್ರತೀ ವಿಶ್ವವಿದ್ಯಾಲಯವು ಅದರ ಅನನ್ಯತೆಯಿಂದ ಈ ನಾಡಿಗೆ ಕೊಟ್ಟಿರುವ ಕೊಡುಗೆ ದೊಡ್ಡದು. ಇದಾಗಬೇಕಾದರೂ ಆ ವಿವಿಗಳಿಗೆ ಸ್ವಾಯತ್ತತೆ ಇದ್ದುದು ಕಾರಣವಾಗಿತ್ತು. ಈಗ ಆ ಸ್ವಾಯತ್ತತೆಯನ್ನು ಕೊಡಹಿ ಎಲ್ಲವನ್ನೂ ಒಂದು ಆಡಳಿತದ ಕೆಳಗೆ ತರುವ ಯತ್ನ ಆಗುತ್ತಾ ಇರುವುದು ಸಹ ಬಹುತ್ವದ ವ್ಯವಸ್ಥೆಗೆ ಬಿದ್ದಿರುವ ಹೊಡೆತವೇ ಆಗಿದೆ. ಜೆಎನ್‌ಯು ತರಹದ ವಿವಿಗಳ ಮೇಲೆ ನಿಯಂತ್ರಣ ಸಾಧಿಸಲು ನಾಡಿನ ಎಲ್ಲಾ ವಿವಿಗಳನ್ನು ಒಂದು ಕೇಂದ್ರೀಕೃತ ವ್ಯವಸ್ಥೆಯ ಅಡಿಗೆ ತರುವುದನ್ನು ವಿರೋಧಿಸುವುದು ಸಹ ನಾವು ನಮ್ಮ ಬಹುತ್ವ ವ್ಯವಸ್ಥೆಯನ್ನು ಉಳಿಸಿಕೊಳ್ಳುವ ಕೆಲಸವೇ ಆಗಿದೆ.

ಈಗ ಆರಂಭಿಸಲಾಗಿರುವ "ನೀಟ್" ಪರೀಕ್ಷೆಗಳನ್ನು ಸಹ ಗಮನಿಸಿ. ಆಯಾ ರಾಜ್ಯಗಳು ನಿರ್ವಹಿಸಬೇಕಾದ ವಿದ್ಯಾ ಇಲಾಖೆಯ ಕೆಲಸಗಳನ್ನು (೨೦೧೦ರಲ್ಲಿ ಕಲಿಕಾ ಮಾಧ್ಯಮವಾಗಿ ನಾಡಭಾಷೆ ಜಾರಿಗೆ ತರುವ ಕುರಿತು ಕೇಂದ್ರ ಸರ್ಕಾರಕ್ಕೆ ಕನ್ನಡ ಅಭಿವೃದ್ಧಿ ಪ್ರಾಧಿಕಾರವು ಮನವಿ ಕೊಟ್ಟಾಗ ಆಗಿನ ಕೇಂದ್ರ ಸರ್ಕಾರದ ವಿದ್ಯಾಮಂತ್ರಿಗಳು 'ಶಿಕ್ಷಣವು ಆಯಾ ರಾಜ್ಯಗಳ ಆಯ್ಕೆ ಮತ್ತು ವ್ಯವಸ್ಥೆ' ಎಂದು ಲಿಖಿತವಾಗಿ ತಿಳಿಸಿದ್ದನ್ನು ಇಲ್ಲಿ ನೆನೆಯಬಹುದು.) ಈಗ ಕೇಂದ್ರ ಸರ್ಕಾರ ತಾನೇ ವೈದ್ಯಕೀಯ ಪ್ರವೇಶ ಪರೀಕ್ಷೆ ಮಾಡಲು ಮುಂದಾಗಿದೆ. ದೇಶಕ್ಕೇ ಪ್ರಥಮ ಎಂಬಂತೆ ಕರ್ನಾಟಕ ಸರ್ಕಾರವು ಜಾರಿಗೆ ತಂದ ಸಿಇಟಿ ಎಂಬ ವ್ಯವಸ್ಥೆಯು ಅನೇಕ ವಿದ್ಯಾರ್ಥಿಗಳಿಗೆ ಸಾಮಾಜಿಕ ನ್ಯಾಯವನ್ನು ಒದಗಿಸುತ್ತಿತ್ತು. ಈಗ ಕೇಂದ್ರವು ಜಾರಿಗೆ ತಂದಿರುವ ನೀಟ್ ವ್ಯವಸ್ಥೆಯು ರಾಜ್ಯಗಳ ಅಧಿಕಾರವನ್ನು ಮೊಟಕುಗೊಳಿಸುವುದು ಮತ್ತು ಕೇಂದ್ರದ ನಿಯಂತ್ರಣವನ್ನು ಶಿಕ್ಷಣದಲ್ಲಿ ಹೆಚ್ಚಿಸುವ ಪ್ರಯತ್ನವೇ ಆಗಿದೆ. ಹೀಗೆ ರಾಜ್ಯಗಳ ಅಧಿಕಾರಕ್ಕೆ ಏಟು ಬಿದ್ದಾಗೆಲ್ಲಾ ಬಹುತ್ವ ಎಂಬ ವ್ಯವಸ್ಥೆಗೆ ಏಟು ಬೀಳುತ್ತದೆ ಎಂಬುದು ನೆನಪಿರಬೇಕು.

ಇದೇ ಸಂದರ್ಭದಲ್ಲಿ ಅಂಬೇಡ್ಕರ್ ಅವರು ಹೇಳಿರುವ ಮತ್ತೊಂದು ಮಾತನ್ನು ಗಮನಿಸಬೇಕು "ನಿಮ್ಮ ಸ್ವಾತಂತ್ರ್ಯವನ್ನು ಯಾವುದೇ ಮಹಾಪುರುಷನಾದರೂ ಸರಿ, ಆತನ ಪದತಲದಲ್ಲಿ ಇರಿಸಬೇಡಿ. ಯಾವುದೇ ಮಹಾವ್ಯಕ್ತಿಯ ಕೈಯಲ್ಲಿ ಅಂತಹ ಅಧಿಕಾರವನ್ನು ಇರಿಸಿದಲ್ಲಿ ಅದು ಒಟ್ಟು ಪ್ರಜಾಪ್ರಭುತ್ವ ವ್ಯವಸ್ಥೆಯ ನಾಶಕ್ಕೆ ಮತ್ತು ಸರ್ವಾಧಿಕಾರಕ್ಕೆ ಕಾರಣವಾಗುತ್ತದೆ" ಎಂದು ಅಂಬೇಡ್ಕರ್ ಅವರ ೧೯೪೯ರ ಭಾಷಣದಲ್ಲಿ ಆಡಿರುವ ಮಾತುಗಳು ಇಂದಿಗೂ ಪ್ರಸ್ತುತವಾಗಿವೆ. ನಮ್ಮ ಬಹುತ್ವದ ನೆಲೆಗಳನ್ನು ಕಾಪಾಡಿಕೊಳ್ಳಲು ಬೇಕಾದ ಬಹುಮುಖ್ಯ ಅಸ್ತ್ರವೆಂದರೆ "ಸ್ವಾಮಿ ನಿಷ್ಠೆ, ಸ್ವಾಮಿ ಭಕ್ತಿ ಮತ್ತು ದುರಭಿಮಾನ" ಇವುಗಳ ಹಿಂದೆ ಬೀಳದಿರುವುದೇ ಆಗಿದೆ. ನಾನು ಕಂಡ ಕಳೆದ ನಾಲ್ಕು ದಶಕಗಳಲ್ಲಿ ಈ ದೇಶದಲ್ಲಿ ಆಗಿರಬಹುದಾದ ಬಹುತೇಕ ಹಾನಿಗಳಿಗೆ ಈ ಖಾಯಿಲೆಗಳೇ ಕಾರಣವಾಗಿವೆ.

ಹೀಗಾಗಿ "ಸ್ವಾತಂತ್ರ್ಯವೂ ಸಮಾನತೆಯಿಂದ ದೂರ ಸರಿಯಬಾರದು. ಸಮಾನತೆಯು ಸ್ವಾತಂತ್ರ್ಯದಿಂದ ದೂರ ಸರಿಯಬಾರದು. ಸ್ವಾತಂತ್ರ್ಯ ಮತ್ತು ಸಮಾನತೆಗಳು ಸಹೋದರತ್ವದಿಂದ ದೂರ ಸರಿಯಬಾರದು" ಅನ್ನುವ ಅಂಬೇಡ್ಕರ್ ಅವರ ಮಾತುಗಳು ಸ್ವಾತಂತ್ರ್ಯ ಮತ್ತು ಸಮಾನತೆಗಳು ಸೋದರತ್ವ ಮತ್ತು ಬಹುತ್ವದ ಬಂಡಿಯನ್ನು ಎಳೆಯಬೇಕಾದ ಬಹುಮುಖ್ಯ ಧಾರೆಗಳು ಎಂದು ಸೂಚಿಸುತ್ತಿವೆ. ಈ ಹಿನ್ನೆಲೆಯಲ್ಲಿ ಜಾತ್ಯತೀತ ಎಂಬ ಪದವನ್ನು ಮರುವ್ಯಾಖ್ಯಾನಿಸಿ, ಜಾತಿಗಳಿಂದ ದೂರ ಉಳಿಯುವುದು ಎನ್ನಬೇಕಿದೆ. ಏಕೆಂದರೆ ಈ ಸಮಾಜದ ಬಹುತೇಕ ಒಡಕುಗಳಿಗೆ ಈ ಜಾತಿ ಮತ್ತು ಧರ್ಮ ಎಂಬುದೇ ಪ್ರಧಾನ ಕಾರಣವಾಗಿದೆ. "ಜಾತಿ ಎಂಬುದು ದೇಶವಿರೋಧಿ. ಏಕೆಂದರೆ ಅದು ಸಮಾಜದಲ್ಲಿ ಒಡಕನ್ನು ತರುತ್ತದೆ. ಅದು ದೇಶದ್ರೋಹಿಯೂ ಹೌದು. ಏಕೆಂದರೆ ಅದು ಜಾತಿ ಜಾತಿಗಳ ನಡುವೆ ಅಸೂಯೆ ಮತ್ತು ದ್ವೇಷಗಳನ್ನು ಹುಟ್ಟಿಸುತ್ತದೆ. ಹೀಗಾಗಿ ಜಾತಿಯನ್ನು ದೂರ ಇಡುವುದೇ ದೇಶ ಕಟ್ಟುವ ಹಾದಿಯಲ್ಲಿ ಸರಿಯಾದ ಮಾರ್ಗ" ಎಂಬುದು ಸಹ ಅಂಬೇಡ್ಕರ್ ಅವರ ನಿಲುವು. (ಅನಿಹಲೇಷನ್ ಆಫ್ ಕಾಸ್ಟ್ / ಡಾ॥ ಬಿ. ಆರ್. ಅಂಬೇಡ್ಕರ್)

ಈ ಹಿನ್ನೆಲೆಯಲ್ಲಿ ನೋಡಿದರೆ ನಮ್ಮ ಬಹುತ್ವದ ನೆಲೆ ಎಂಬುದು ನಮ್ಮ ದೇಶವೇ ಆಗಿದೆ. ನಮ್ಮ ಧರ್ಮ ಸಹ ಬಹುತ್ವವೇ ಆಗಬೇಕಿದೆ. ಹಿಂದ್ ಸ್ವರಾಜ್ ಪುಸ್ತಕದಲ್ಲಿ ಗಾಂಧೀಜಿಯವರು ಹೇಳುವ "ವಿವಿಧ ಧರ್ಮಗಳು ಒಂದೇ ತೋಟದ ಸುಂದರ ಪುಷ್ಪಗಳು ಅಥವಾ ಅವು ಒಂದೇ ಮರದ ಕೊಂಬೆಯ ಟಿಸಿಲುಗಳು" ಎಂಬ ಮಾತನ್ನು ಗಮನಿಸಬೇಕಿದೆ. ಗಾಂಧೀಜಿಯವರ ಮಾತನ್ನು ಆದರ್ಶವಾಗಿ ಇರಿಸಿಕೊಂಡು ನಮ್ಮ ಶಾಲೆಗಳನ್ನು, ಕಾಲೇಜುಗಳನ್ನು ಸರ್ವ ಜನಾಂಗದ ಶಾಂತಿಯ ತೋಟವನ್ನಾಗಿ ಮಾಡದ ಹೊರತು ನಮ್ಮ ನಾಡಿನ ಬಹುತ್ವವನ್ನು ಉಳಿಸುವುದು ಕಷ್ಟ. ನಮ್ಮ ಸರ್ಕಾರಗಳು ಮೊದಲಿಗೆ ಜಾತಿ, ಧರ್ಮದ ಹೆಸರಿಟ್ಟುಕೊಂಡ ಎಲ್ಲಾ ವಿದ್ಯಾಸಂಸ್ಥೆಗಳಿಗೂ ಹೆಸರು ಬದಲಿಸುವ ಮತ್ತು ಆ ವಿದ್ಯಾಸಂಸ್ಥೆಗಳಲ್ಲಿ ಎಲ್ಲಾ ಜಾತಿ, ಧರ್ಮದ ಹೂವುಗಳು ಅರಳುತ್ತಿವೆಯೆ ಎಂದು ಗಮನಿಸುವಂತಹ ಕಾಯಿದೆ ತರಬೇಕಿದೆ. ಇಲ್ಲವಾದರೆ "ಈ ದೇಶವು ಜಾತ್ಯತೀತವಾಗಿರುವುದು ಅನೈತಿಕ ಸಂಬಂಧಗಳಲ್ಲಿ ಮಾತ್ರ" ಎಂದು ನಾಗತಿಹಳ್ಳಿ ಚಂದ್ರಶೇಖರ್ ಅವರ ಲೇಖನವೊಂದರಲ್ಲಿನ (ವಾರ್ತಾಭಾರತಿ, ವಾರ್ಷಿಕ ವಿಶೇಷಾಂಕ, ೨೦೧೭) ಪಾತ್ರವೊಂದರ ಮಾತಾಗಿ ಗುರುತಿಸಿರುವದು ಸತ್ಯವಾದೀತು ಎಂಬ ಭಯವಿದೆ.

ಕಡೆಯದಾಗಿ, ಮತ್ತೊಂದು ಜನಪದ ರಾಮಾಯಣದ ಉಪಕಥೆಯನ್ನು ನೆನಪಿಸಿಕೊಳ್ಳುತ್ತೇನೆ: "ಹನುಮ ಸೀತೆಯನ್ನು ಅರಸುತ್ತಾ ಸಮುದ್ರ ಹಾರಿ ಲಂಕೆಯ ಕಡೆಗೆ ಹೋಗುತ್ತಾ ಇದ್ದನಂತೆ. ಅದನ್ನು ಕಂಡ ಲಂಕೆಯ ಕಾವಲಿಗೆ ನಿಂತಿದ್ದ ಲಂಕಿಣಿಯ ಸೋದರಿಯಾಗಿದ್ದ ರಕ್ಕಸಿಯೊಬ್ಬಳು ಸಮುದ್ರದ ಮೇಲೆ ಹರಿಯುತ್ತಿದ್ದ ಹನುಮನ ನೆರಳನ್ನು ಬಿಗಿಯಾಗಿ ಮುಷ್ಟಿಯಲ್ಲಿ ಹಿಡಿದಳಂತೆ. ಆಕೆ ನೆರಳನ್ನು ಹಿಡಿದ ಕಾರಣವಾಗಿ ಹನುಮನಿಗೆ ಹಾರಲಾಗಲಿಲ್ಲವಂತೆ. ಆಗ ಹನುಮನು ತನ್ನ ದೇಹವನ್ನು ಕುಬ್ಜಗೊಳಿಸುತ್ತಾ ಸಾಗಿ, ಆ ಮೂಲಕ ರಕ್ಕಸಿಯ ಮುಷ್ಟಿಯಿಂದ ನೆರಳನ್ನು ಬಿಡಿಸಿಕೊಂಡು ಪಯಣ ಮುಂದುವರೆಸಿದನಂತೆ." ಈಗ ನಾವೆಲ್ಲರೂ ನಮ್ಮ ನೆರಳುಗಳನ್ನು ಹಿಡಿದು, ನಮ್ಮ ಧರ್ಮವಾದ ಬಹುತ್ವವನ್ನು ನಾಶಪಡಿಸುತ್ತಾ ಇರುವವರಿಂದ ತಪ್ಪಿಸಿಕೊಳ್ಳಬೇಕಿದೆ. ಅದಕ್ಕೆ ನಾವು ಕುಬ್ಜರಾಗುವದನ್ನು ಕಲಿಯಬೇಕಿದೆ. ಇಲ್ಲವಾದರೆ ಯಾರದೋ ಕೈಯಲ್ಲಿ ಸಿಕ್ಕ ನಮ್ಮ ನೆರಳುಗಳು ನಮ್ಮ ಪಯಣವನ್ನು ನಾಶಪಡಿಸಬಹುದು. ಇಂತಹ ಎಲ್ಲ ನೆರಳುಗಳ ಬೇಟೆಗಾರರಿಂದ ಬಿಡುಗಡೆ ಪಡೆಯುವುದು ಎಂದರೆ ಪೂರ್ವಾಗ್ರಹಗಳಿಂದ ಬಿಡುಗಡೆ ಪಡೆಯುವುದು ಎಂದು ಅರ್ಥ. ಈ ನಾಡು ಎಲ್ಲ ಬಗೆಯ ಸುಳ್ಳು ಬರುಕರಿಂದ ಹಾಗೂ ಪೂರ್ವಾಗ್ರಹಗಳಿಂದ ಬಿಡುಗಡೆ ಪಡೆದಾಗ ಮಾತ್ರ ಭಾರತದ ಒಕ್ಕೂಟ ವ್ಯವಸ್ಥೆ ಮತ್ತು ಭಾರತದಲ್ಲಿನ ಬಹುತ್ವದ ಸಮಾಜವನ್ನು ಉಳಿಸುವುದು ಸಾಧ್ಯ ಎಂಬುದನ್ನು ಈ ನಾಡಿನ ಪ್ರತಿಯೊಬ್ಬರೂ ಅರಿಯಬೇಕಿದೆ.

---

**ಬಿ. ಸುರೇಶ**
ಮೀಡಿಯಾ ಹೌಸ್ ಸ್ಟುಡಿಯೋ, ನಂ. ೧೧೬೨, ೨೨ನೇ ಅಡ್ಡರಸ್ತೆ
೨೩ನೇ ಮುಖ್ಯರಸ್ತೆ, ಬನಶಂಕರಿ ೨ನೇ ಹಂತ
ಬೆಂಗಳೂರು – ೫೬೦ ೦೭೦

ಇಡೀ ಭಾರತವನ್ನು ಕೈವಶ ಮಾಡಿಕೊಂಡ ನಾಟ್ಯರಾಣಿ ಬಾಲಾರ ಭಾಗ್ಯದ ಬಾಗಿಲನ್ನು ತೆರೆದದ್ದು ಈಸ್ಟ್-ವೆಸ್ಟ್ ಸಮ್ಮೇಳನ. ಟೋಕಿಯೋದಲ್ಲಿ ಬಾಲಾರ ಕಾರ್ಯಕ್ರಮ ಆಯೋಜನೆಯಾಗಿತ್ತು. ಸಂಘಟಕ ಶ್ರೀ ನೆಬೊಕೋವ್‌ಗೆ ಬಾಲಾರಿಗೆ ಕಾರ್ಯಕ್ರಮ ಕೊಡುವ ಮನಸ್ಸಿರಲಿಲ್ಲ. ಆದರೆ ಕಾರ್ಯಕ್ರಮ ನೋಡಿದ ನಂತರ ತಮ್ಮ ತಪ್ಪಿನ ಅರಿವಾಗಿ, ನೇಪಥ್ಯದಲ್ಲಿ ನಿಂತಿದ್ದ ಬಾಲಾರ ಮುಂದೆ ಐರೋಪ್ಯ ಶೈಲಿಯಲ್ಲಿ ಮಂಡಿಯೂರಿ ಕುಳಿತು ಅವರ ಕೈಗಳನ್ನು ಹಿಡಿದು "ನಿಮ್ಮನ್ನು ಬರಬೇಡ ಎಂದಿದ್ದರೆ ನಾನು ಅದೆಂತಹ ಅಪರಾಧ ಮಾಡಿಬಿಡುತ್ತಿದ್ದೆ" ಎಂದು ಕಣ್ಣೀರಿಟ್ಟರು. ಅಂದು ಬಾಲಾರ ನೃತ್ಯವನ್ನು ನೋಡಿದ ಲಾರ್ಡ್ ಹೇರ್‌ವುಡ್ ತಮ್ಮ ಸೋದರ ಸಂಬಂಧಿ ಇಂಗ್ಲೆಂಡಿನ ರಾಣಿ ಎಲಿಜಬೆತ್‌ಗೆ "ನಾನಂದು ಶ್ರೇಷ್ಠತೆಯ ಸನ್ನಿಧಿಯಲ್ಲಿದ್ದೆ" ಎಂದು ಹೇಳಿದರು. ೧೯೬೩ರಲ್ಲಿ ವಿಶ್ವವಿಖ್ಯಾತ ಎಡಿನ್‌ಬರೋ ಸಂಗೀತ ನೃತ್ಯ ಉತ್ಸವದಲ್ಲಿ ಪಾಲ್ಗೊಳ್ಳುವಂತೆ ಬಾಲಾರಿಗೆ ಆಹ್ವಾನ ಬಂದಿತು. ಬಾಲಾರ ನೃತ್ಯ ನೋಡಿದ ಪ್ರಖ್ಯಾತ ಬ್ಯಾಲೆ ನರ್ತಕಿ ಮಾರ್ಥಾ ಗ್ರಹಾಂ ಬಾಲಾರನ್ನು ಅಪ್ಪಿಕೊಂಡು, "ಲೋಕದ ಕಣ್ಣಿಗೆ ಬೀಳದಂತೆ ಅದ್ಹೇಗೆ ನೀವು ಹೀಗೆ ಅಡಗಿ ಕುಳಿತಿದ್ದಿರಿ? ನಿಮ್ಮನ್ನು ನಾನು ಹಾರಿಸಿಕೊಂಡು ಹೋಗುತ್ತೇನೆ" ಎಂದರು. ಬಾಲಾರ ನೃತ್ಯದಿಂದ ಅಷ್ಟರ ಮಟ್ಟಿಗೆ ಅವರು ಪ್ರಭಾವಿತರಾಗಿದ್ದರು.

# ಹಸ್ತದಲ್ಲೇ ಮೂಜಗ ತೋರಿದ ಬಾಲಾ

೧೯೬೧ರ ಒಂದು ದಿನ ಉಡುಪಿಯಲ್ಲಿನ ನೀಲಾಕಾಶ ಕೃಷ್ಣನ ವ್ಯಕ್ತಿತ್ವದ ಪ್ರತಿಭೆಯನ್ನೇ ಪ್ರತಿಫಲಿಸುತ್ತಿದೆಯೇನೋ ಎನ್ನುವಂತೆ ಭಾಸವಾಗುತ್ತಿತ್ತು. ಗರ್ಭಗುಡಿಯಲ್ಲಿನ ತೈಲದ ದೀಪಗಳ ಸೌಮ್ಯವಾದ ಬೆಳಕಿನಲ್ಲಿ ನಸುನಗುತ್ತಿರುವ ಕೃಷ್ಣನ ಮನಮೋಹಕ ವಿಗ್ರಹ ಮೋಹಿನಿಯಂತೆ ಭಕ್ತರ ಮನಸೆಳೆಯುತ್ತಿತ್ತು. ಅತ್ಯಂತ ಮಧುರವಾದ ದನಿಯಲ್ಲಿ ಹೊರಹೊಮ್ಮುತ್ತಿದ್ದ ವ್ಯಾಸರಾಯರ ರಚನೆ 'ಕೃಷ್ಣ ನೀ ಬೇಗನೆ ಬಾರೋ...' ಅಲ್ಲಿ ನೆರೆದಿದ್ದ ಊರಿನ ಮತ್ತು ಪರವೂರಿನ ಭಕ್ತಾದಿಗಳ ಕಿವಿ ತುಂಬತೊಡಗಿದಾಗ, ಎಲ್ಲರ ಚಿತ್ತವೂ ಹರಿದದ್ದು ಗರ್ಭಗುಡಿಯೆದುರಿನ ಹಜಾರದಲ್ಲಿ ಹಾಡಿಕೊಂಡು ನರ್ತಿಸುತ್ತಿದ್ದ ನರ್ತಕಿಯತ್ತ. ಆಕೆ ನೋಡಲೇನೂ ಮೋಹಿನಿಯಂತಿರಲಿಲ್ಲ. ನಲ್ವತ್ತರ ಹರೆಯದ ಹೆಣ್ಣುಮಗಳು. ಸ್ವಲ್ಪ ದಢೂತಿ ಎನ್ನಬಹುದಾದ ಎತ್ತರ ಹಾಗೂ ಗಾತ್ರದ ಮೈಮಾಟ. ಪಚ್ಚೆಯ ಅಂಚುಸೆರಗಿದ್ದ ಮುತ್ತಿನ ಬಣ್ಣದ ಸೀರೆಯನ್ನು ಉಟ್ಟಿದ್ದರು. ಅದೇನೂ ಪೂರ್ವನಿರ್ಧಾರಿತವಾದ ಕಾರ್ಯಕ್ರಮವಾಗಿರಲಿಲ್ಲ. ಅಲ್ಲಿ, ಆ ಕ್ಷಣದಲ್ಲಿ ಉಂಟಾದ ತುಡಿತದಿಂದಾಗಿ ಕೃಷ್ಣನಮನ ಸಲ್ಲಿಸ ಹೊರಟಿದ್ದ ಆ ಮಹಿಳೆ ತನ್ನ ಅಸಾಧಾರಣ ಅಭಿನಯದಿಂದ ಆ ಕೃತಿಯನ್ನು ನೃತ್ಯಲೋಕದಲ್ಲಿ ಅಮರಗೊಳಿಸಿದರು. ಹಾಡುವಿಕೆ ಅತಿ

**ಪ್ರೊ|| ಶೈಲಜಾ**
ಚಿತ್ರಕೃಪೆ : ಅವಿನಾಶ್ ಪಾಸರಿಚಾ

ಸೊಗಸಾಗಿತ್ತು. ನೃತ್ಯವಂತೂ ನೋಡುಗರ ಕಲ್ಪನೆ ಗರಿಗೆದರುವಂತೆ ಮಾಡುತ್ತಿತ್ತು. ತನ್ನ ಮುದ್ದು ಕೃಷ್ಣನನ್ನು ಬಾರೆನ್ನುತ್ತಿರುವ ತಾಯಿ ಯಶೋದೆಯನ್ನು ನರ್ತಕಿ ಚಿತ್ರಿಸುತ್ತಿದ್ದಳು. ಹಾಡಿಕೊಂಡು ನರ್ತಿಸುತ್ತಿದ್ದ ಆ ಮಹಿಳೆಯೇ ಶ್ರೇಷ್ಠ ಅಭಿನೇತ್ರಿ ಎನಿಸಿಕೊಂಡಿದ್ದ ನೃತ್ಯಲೋಕದ ಮಾಟಗಾತಿ ಟಿ. ಬಾಲಸರಸ್ವತಿ. ಅವರು ಕೃಷ್ಣನನ್ನು ಕರೆಯುತ್ತಿದ್ದ ವಿಭಿನ್ನ ರೀತಿಗಳು ಭಕ್ತರನ್ನು ದಿಗ್ಭ್ರಾಂತಗೊಳಿಸಿತ್ತು. ಅವರೆಲ್ಲರೂ ಮೋಡಿಗೊಳಗಾದವರಂತೆ, ಬಾಲಕೃಷ್ಣ ಅವರ ಕರೆಗೆ ಓಗೊಡುತ್ತಿದ್ದಾನೆಯೇ ಎನ್ನುವುದನ್ನು ನೋಡುವ ಕುತೂಹಲದಿಂದ ಅಪ್ರಜ್ಞಾಪೂರ್ವಕವಾಗಿ ಗರ್ಭಗುಡಿಯತ್ತ ಸಾಗುತ್ತಿದ್ದರು. ಬಾಲಸರಸ್ವತಿಯ ಕರೆಯನ್ನು ತಿರಸ್ಕರಿಸಲು ಯಾರಿಗಾದರೂ ಸಾಧ್ಯವೇ ಎಂದು ಯೋಚಿಸುತ್ತಾ ನಡೆಯುತ್ತಿದ್ದರು. ಕಾಶೀಪೀತಾಂಬರ ಎಂಬ ಸಾಲನ್ನು ಅವರು ಹಾಡಿ ನರ್ತಿಸುತ್ತಿದ್ದರೆ ಎಲ್ಲರ ಮನದ ಕಣ್ಣಲ್ಲಿ ಸೊಗಸಾದ ಪೀತಾಂಬರವುಟ್ಟು, ವಜ್ರಖಚಿತ ಕೊಳಲನ್ನು ಕೈಯಲ್ಲಿ ಹಿಡಿದು, ವೈಜಯಂತಿ ಹಾರ ತೊಟ್ಟು, ಶ್ರೀಗಂಧದ ಪರಿಮಳ ಸೂಸುವ ಶ್ರೀಕೃಷ್ಣನ ಮೂರುತಿ ಮೂಡಲಾರಂಭಿಸಿತು. ಜಗದೋದ್ಧಾರಕ ನಮ್ಮ ಉಡುಪಿ ಶ್ರೀಕೃಷ್ಣ ಎಂದು ತಾಯಿ ಯಶೋದ ಕೃಷ್ಣನನ್ನು ಕರೆಯುತ್ತಿದ್ದಾಳೆ ಮತ್ತು ಮಗು ಅವಳ ಸಮೀಪಕ್ಕೆ ಬರುತ್ತದೆ. ಮಣ್ಣು ತಿಂದದ್ದೇಕೆಂದು ಅವಳು ಮಗುವನ್ನು ಗದರಿಸಿ, ಬಾಯಿ ತೆರೆಯುವಂತೆ ಜೋರುಮಾಡುತ್ತಾಳೆ. ಆಗ ನಗುತ್ತಾ ಬಾಲಕೃಷ್ಣ ಬಾಯಿ ತೆರೆಯುತ್ತಾನೆ. ಅಬ್ಬಾ! ಅಲ್ಲಿ ನೆರೆದಿರುವ ಭಕ್ತರು ಮತ್ತು ಬಾಲಸರಸ್ವತಿ ಆ ಬಾಯಲ್ಲಿ ಕಂಡದ್ದು ಮಣ್ಣನ್ನಲ್ಲ, ಮೂಜಗವನ್ನು. ಒಂದು ಕ್ಷಣ ಯಶೋದೆಯಾಗುವ, ಮರುಕ್ಷಣ ಕೃಷ್ಣನಾಗುವ ಬಾಲಸರಸ್ವತಿ, ನೀಲವರ್ಣದ ಕೃಷ್ಣ ವಿಶ್ವವೇ ತಾನಾಗಿ, ಮತ್ತೆ ಮರುಕ್ಷಣ ಮುದ್ದು ಮಗುವಾಗಿ ಬದಲಾಗುವ ಅದ್ಭುತ ಪ್ರಕ್ರಿಯೆಯನ್ನು ತನ್ನ ಸೃಜನಶೀಲ ಮನೋಧರ್ಮದಿಂದ ತೋರಿ ಪ್ರೇಕ್ಷಕರನ್ನು ಮತ್ತಷ್ಟು ಮೋಡಿಗೊಳಿಸಿದಳು ಆ ನರ್ತಕಿ. ಆ ಪ್ರೇಕ್ಷಕರ ನಡುವೆ ಒಬ್ಬ ಮಾತ್ರ ಇದ್ಯಾವ ಮೋಡಿಗೂ ಒಳಗಾಗದೆ, ದೇವಾಲಯದ ಪ್ರಾಂಗಣದೊಳಗೆ ನರ್ತಿಸುವ ಧೈರ್ಯ ತೋರಿದವರಾರೆಂದು ಸಿಟ್ಟಿನಿಂದ ಆಕ್ಷೇಪಿಸುತ್ತಾ, ಇಂತಹ ನೃತ್ಯಗಳನ್ನು ಕಾನೂನು ನಿಷೇಧಿಸಿದೆ ಎಂದು ಬಂದರು. ದೇವರ ರಾಜ್ಯವಾದ ಕೃಷ್ಣನ ಆಲಯದಲ್ಲಿ ಬೇರೆ ಚಕ್ರಾಧಿಪತಿಯ ಆಳ್ವಿಕೆಗೆ ಎಡೆಯಾದರೂ ಎಲ್ಲಿ? ಅವರನ್ನು ಸದ್ದಿಲ್ಲದೆ ಹೊರಗೆ ಕರೆದೊಯ್ದು ಕೂಗಾಡಲು ಬಿಟ್ಟು ಮತ್ತೆ ನೃತ್ಯ ನೋಡಲು ಮರಳಿದರು ಜನ.

ಈ ಅಸಾಧಾರಣ ದಿವ್ಯ ಪ್ರತಿಭೆ ಬಾಲಸರಸ್ವತಿ. “ನೀವು ಶ್ರೇಷ್ಠತೆಯ ಸನ್ನಿಧಿಯಲ್ಲಿದ್ದೀರಿ” ಎನ್ನುವ ಭಾವವನ್ನು ಮೂಡಿಸುವ ಅಪ್ರತಿಮ ಕಲಾವಿದೆ. ತಂಜಾವೂರು ಬಾಲಸರಸ್ವತಿ, ಪೂರ್ವ ಪಶ್ಚಿಮಗಳೆರಡರ ನೃತ್ಯರಸಿಕರಲ್ಲಿ ಇನ್ನೊಬ್ಬ ಇಂತಹ ಕಲಾವಿದೆ ಬರುತ್ತಾಳೆಯೇ ಎನ್ನುವ ಪ್ರಶ್ನೆಯನ್ನೂ, ತುಂಬಲಾರದ ಖಾಲಿತನವನ್ನೂ ಉಳಿಸಿಹೋದವರು.

ಇಪ್ಪತ್ತನೆಯ ಶತಮಾನದ ಆದಿಭಾಗದಲ್ಲಿ ಭಾರತೀಯ ಸಂಗೀತ–ನೃತ್ಯ ಕ್ಷೇತ್ರ ಮತ್ತು ಅದನ್ನು ಶ್ರೀಮಂತಗೊಳಿಸಿದ ದೇವದಾಸಿ ಸಮುದಾಯದ ಬದುಕು ಬಗೆಬಗೆಯ ತಲ್ಲಣಗಳು, ತವಕಗಳು, ಬವಣೆ, ಬದಲಾವಣೆಗಳ ಸುಳಿಯಲ್ಲಿ ಸಿಲುಕಿದ್ದಾಗ, ಈ ತಳಮಳದ ಒಡಲಿನಿಂದಲೇ ಮೂಡಿದ ಅಪ್ಪಟ, ಸೃಜನಶೀಲ, ಶ್ರೇಷ್ಠ ಕಲಾವಿದೆ ತಂಜಾವೂರು ಬಾಲಸರಸ್ವತಿ. ಪಶ್ಚಿಮದ ವಸಾಹತು ಸಂಸ್ಕೃತಿಯ ಅಳತೆಗೋಲುಗಳು ಬಹುಸಂಸ್ಕೃತಿಯ ಭಾರತೀಯ ಸಮಾಜದ ‘ಶುದ್ಧೀಕರಣ’ಕ್ಕೆ ಕೈಹಾಕಿದ ಸಂದರ್ಭದಲ್ಲಿ, ಅದರ ವಿರುದ್ಧ ಅತ್ಯಂತ ಗಟ್ಟಿಯಾಗಿ ನಿಂತವರು. ದೇಸೀವಾದ ಅಥವಾ ವಸಾಹತುವಿರೋಧಿ ಸಿದ್ಧಾಂತ ಮುಂತಾದವುಗಳ ಪರಿಚಯವೇ ಇಲ್ಲದ ಬಾಲಾ ತನ್ನ ಪರಂಪರೆ ಮತ್ತು ಅದು ರೂಪಿಸಿ ಬೆಳೆಸಿ ಕಾಪಿಟ್ಟುಕೊಂಡು ಬಂದಿದ್ದ ಶಾಸ್ತ್ರೀಯ ನೃತ್ಯದಲ್ಲಿ ಶುದ್ಧೀಕರಿಸಬೇಕಾದ್ದು ಏನೂ ಇಲ್ಲ ಎಂದು ಗಾಢವಾಗಿ ನಂಬಿದ್ದರು. ಆ ನಂಬಿಕೆ ಮತ್ತು ಶ್ರದ್ಧೆಗಳಿಂದಲೇ ನರ್ತಿಸಿದರು. ಅವರನ್ನು ಮತ್ತು ಅವರ ಕಲೆಯನ್ನು ಶ್ರೇಷ್ಠ ಮತ್ತು ಕಾಲಾತೀತವೆನಿಸುವಂತೆ ಮಾಡಿದ್ದು ಈ ಶ್ರದ್ಧೆ ನಂಬಿಕೆಗಳೇ.

ದೇವದಾಸಿ ಸಮುದಾಯವೆನ್ನುವುದು ಒಂದು ಜಾತಿಯಾಗಿರಲಿಲ್ಲ, ಬದಲಾಗಿ, ಅದೊಂದು ಬದುಕಿನ ಕ್ರಮವಾಗಿತ್ತು. ಮಾತೃಪ್ರಧಾನ ವ್ಯವಸ್ಥೆಯಿದ್ದ ದೇವದಾಸಿ ಸಮುದಾಯದಲ್ಲಿ ಮಹಿಳೆಯರು ತಮ್ಮ ಸಂಗಾತಿಗಳನ್ನು ಆಯ್ಕೆ

ಮಾಡಿಕೊಳ್ಳುತ್ತಿದ್ದರು. ಅವರೊಡನೆ ಭಾವನಾತ್ಮಕ ಸಂಬಂಧವನ್ನು ಹೊಂದಿರುತ್ತಿದ್ದರು. ಈ ಸಂಬಂಧಗಳಿಗೆ ಕುಟುಂಬದ ಹಿರಿಯರು, ಸಮಾಜ ಮತ್ತು ಧರ್ಮದ ಸಮ್ಮತಿಯಿತ್ತು. ದೇವದಾಸಿ ಕೌಟುಂಬಿಕ ವ್ಯವಸ್ಥೆಯಲ್ಲಿ ಮನೆಯ ಆರ್ಥಿಕ ನಿರ್ವಹಣೆ ಮತ್ತು ಸುಸ್ಥಿತಿಗೆ ಹೆಂಗಸರೇ ಹೊಣೆಗಾರರು. ಸಾಮಾನ್ಯವಾಗಿ ದೇವದಾಸಿ ಹೆಣ್ಣುಮಕ್ಕಳು ತೌರಿನಿಂದ ಬೇರೆ ಹೋಗುತ್ತಿರಲಿಲ್ಲ. ಬದಲಾಗಿ, ಅದರ ಭಾಗವಾಗಿಯೇ ಮುಂದುವರಿಯುತ್ತಿದ್ದರು. ಸ್ತ್ರೀವಾದದ ಪರಿಚಯವಿಲ್ಲದಿದ್ದ ಕಾಲದಲ್ಲಿಯೂ ಇವರೆಲ್ಲರೂ ತುಂಬ ಸ್ವಾಭಿಮಾನಿಗಳಾಗಿ, ಸ್ವಾವಲಂಬಿಗಳಾಗಿ ಬದುಕಿದ್ದರು. ಬಾಲಸರಸ್ವತಿ ಬದುಕಿದ್ದು ಕೂಡ ಹೀಗೆಯೇ. ಬಾಲಸರಸ್ವತಿಯ ಬಾಳಸಂಗಾತಿ ೧೯೪೭ರ ನೆಹರೂ ಸಚಿವ ಸಂಪುಟದಲ್ಲಿ ಮೊಟ್ಟಮೊದಲ ವಿತ್ತಮಂತ್ರಿಯಾಗಿದ್ದ ಆರ್. ಕೆ. ಷಣ್ಮುಗಂ. ಆದರೆ ಬಾಲಾ ಎಂದೂ ತನ್ನ ಬದುಕಿನ ಆರ್ಥಿಕತೆಯ ಹೆಚ್ಚಳಕ್ಕೆ ಅವರನ್ನು ಬಳಸಿಕೊಳ್ಳಲಿಲ್ಲ. ಬಾಲಾಳ ಕಾಲಕ್ಕೆ ಉಂಟಾದ ಸಾಮಾಜಿಕ ಸ್ಥಿತ್ಯಂತರದಿಂದಾಗಿ ಹೆಚ್ಚೆಚ್ಚು ಸಾಂಪ್ರದಾಯಿಕ ಕಲಾವಂತ ಕುಟುಂಬಗಳು ಹೊಸ ಸಾಮಾಜಿಕ ವ್ಯವಸ್ಥೆಯೊಳಗೆ ಸೇರಿ ಕೊಳ್ಳಲಾರಂಭಿಸಿದವು. ಆದರೆ ತನ್ನ ಹಿಂದಿನ ಸಾಮಾಜಿಕ ವ್ಯವಸ್ಥೆಗೆ ಮತ್ತು ತನ್ನ ಕುಟುಂಬದ ಸಾಂಸ್ಕೃತಿಕ ಜೀವನಕ್ರಮಕ್ಕೆ ಅನುಗುಣವಾಗಿಯೇ ಸಾರ್ವಜನಿಕ ಬದುಕನ್ನು ಬದುಕುತ್ತೇನೆಂಬ ಬಾಲಾಳ ಆಯ್ಕೆ ತುಂಬ ಅಸಾಧಾರಣವಾದ, ದಿಟ್ಟತನದ ಕ್ರಮ.

ಬಾಲಸರಸ್ವತಿಯ ಕುಟುಂಬ ಕರ್ನಾಟಕ ಸಂಗೀತಲೋಕದ ಒಂದು ಅಪರೂಪದ ಕುಟುಂಬ. ಆರು ತಲೆಮಾರುಗಳಿಂದ ನಿರಂತರ ಸಂಗೀತನೃತ್ಯದಲ್ಲಿ ತೊಡಗಿಸಿಕೊಂಡಿದ್ದ ಹಾಗೂ ಕರ್ನಾಟಕ ಸಂಗೀತದ ತ್ರಿಮೂರ್ತಿಗಳಿಂದ ಸಂಗೀತವನ್ನು ನೇರವಾಗಿ ಕಲಿತಿದ್ದ ಕುಟುಂಬ ಅದು. ಆ ಕುಟುಂಬದ ಅತಿ ಶ್ರೇಷ್ಠ ಕಲಾವಿದೆ ವೀಣಾ ಧನಮ್ಮಾಳ್. ಅವರು ಕರ್ನಾಟಕ ಸಂಗೀತಲೋಕದ ಅನಭಿಷಿಕ್ತ ಸಾಮ್ರಾಜ್ಞಿ. ಕರ್ನಾಟಕ ಸಂಗೀತದ ಅತಿಹೆಚ್ಚು ಸಂಗೀತ ಕಲಾನಿಧಿ ಪ್ರಶಸ್ತಿಗಳನ್ನು ಪಡೆದ ಕುಟುಂಬ ಅವರದು. ಬಾಲಾ, ಧನಮ್ಮಾಳ್ ಅವರ ಮೊಮ್ಮಗಳು. ಬಾಲಾ ಹುಟ್ಟಿದ್ದು ೧೯೧೮ರ ಮೇ ಹದಿಮೂರರಂದು ಮದ್ರಾಸಿನ ಕ್ರಿಶ್ಚಿಯನ್ ರೈಲಿ ಆಸ್ಪತ್ರೆಯಲ್ಲಿ. ಬಾಲಾಳ ತಾಯಿ ಟಿ. ಜಯಮ್ಮಾಳ್, ತಂದೆ ಮೊದರಾಪು ಗೋವಿಂದರಾಜುಲು. ಅವರು ಮದ್ರಾಸಿನ ಪ್ರಮುಖ ದುಬಾಷ್ ಶಿಪ್ಪಿಂಗ್ ಕುಟುಂಬಕ್ಕೆ ಸೇರಿದವರು. ಸ್ವತಃ ಸಂಗೀತ ಪ್ರೇಮಿಯಾಗಿದ್ದ ಗೋವಿಂದರಾಜುಲು ಬಾಲಾಗೆ ಹಲವು ಜಾವಳಿಗಳನ್ನು ಕಲಿಸಿದರು. ಇನ್ನು ಬಾಲಾಳ ತೌರಿನಲ್ಲಿ ಎಲ್ಲವೂ ಸಂಗೀತ ನೃತ್ಯಮಯವಾಗಿತ್ತು. ಅಕ್ಕತಂಗಿಯರು, ಅಣ್ಣತಮ್ಮಂದಿರು, ಅಮ್ಮ, ಚಿಕ್ಕಮ್ಮ, ದೊಡ್ಡಮ್ಮ, ಅಜ್ಜಿ ಎಲ್ಲರಿಗೂ ಸಂಗೀತವೇ ಉಸಿರಾಗಿತ್ತು. ಮನೆಯ ತುಂಬ ಹಾಡುಗಾರರು, ವೀಣೆ, ಪಿಟೀಲು, ಮೃದಂಗ, ಘಟ ನುಡಿಸುವವರು ಇದ್ದರು. ಸಾರ್ವಜನಿಕವಾಗಿ ನರ್ತಿಸದಿದ್ದರೂ ಮನೆಯಲ್ಲಿ ಎಲ್ಲರಿಗೂ ನೃತ್ಯ ಬರುತ್ತಿತ್ತು. ಜೊತೆಗೆ ಆರು ತಲೆಮಾರುಗಳಿಂದ ನೃತ್ಯಕ್ಕೆ ಒಂದು ಅರ್ಥಪೂರ್ಣವಾದ ವಿನ್ಯಾಸವನ್ನು ರೂಪಿಸಿದ ತಂಜಾವೂರು ಸಹೋದರರ ಕುಟುಂಬದೊಂದಿಗೆ ಇವರ ಕುಟುಂಬಕ್ಕೆ ಬಿಡಿಸಲಾಗದ ನಂಟು. ಇಂತಹ ವಾತಾವರಣದಲ್ಲಿ ಹುಟ್ಟಿ ಬೆಳೆದ ಬಾಲಾಳಿಗೆ ಸಂಗೀತ ಬೇರೆ, ನೃತ್ಯ ಬೇರೆ ಎನ್ನುವ ಕಲ್ಪನೆ ಕನಸು ಮನಸಿನಲ್ಲೂ ಇರಲಿಲ್ಲ. "ಸಂಗೀತ ಬಾರದೇ ನರ್ತಿಸುವುದಕ್ಕೆ ಸಾಧ್ಯವೇ?" ಎನ್ನುವುದು ಬಾಲಾರ ಪ್ರಶ್ನೆಯಾಗಿತ್ತು. "ಮುದ್ರೆಗಳಲ್ಲಿ ಅಭಿವ್ಯಕ್ತಿಗೊಳ್ಳುವ ಸಂಗೀತವೇ ನೃತ್ಯ" ಎಂದು ಸ್ವತಃ ಬಾಲಾ ಭಾವಿಸಿದ್ದರು. ಬಾಲಾರ ನೃತ್ಯಕ್ಕೆ ಒಂದು ವಿಶೇಷ ಅಸ್ಮಿತೆಯನ್ನು ನೀಡಿದ್ದೇ ಈ ಅಂಶ.

ಬಾಲಾಳ ಬದುಕಿನಲ್ಲಿ ನೃತ್ಯವೆಂಬುದು ಒಂದು ಆಟವಾಗಿ ಪ್ರಾರಂಭವಾಯಿತು. ಅಜ್ಜಿ ಧನಮ್ಮಾಳರ ಮನೆಯೆದುರು ದಿನವೂ ಒಬ್ಬ ಭಿಕ್ಷುಕ ಬರುತ್ತಿದ್ದ. ನೋಡಲು ಹುಚ್ಚನಂತಿದ್ದ ಆತ ಕೋತಿಯಂತೆ ಹಾರಿ ನರ್ತಿಸುತ್ತಿದ್ದ ಮತ್ತು ನಟುವನಾರ್ ಹೇಳುವ 'ತತ್ತರಿಗಪ್ಪ ತೈ ತಾ, ತತ್ತರಿಗಪ್ಪ ತೈ ತಾ' ಎನ್ನುವ ಪಾಟಾಕ್ಷರಗಳನ್ನು ಹೇಳುತ್ತಿದ್ದ. ಅವನು ಬಂದಾಗ ಪುಟ್ಟ ಬಾಲಾ ಕೂಡ ಅವನ ಹಾಗೇ ಕುಣಿಯುತ್ತಿದ್ದಳು. ಅವನನ್ನು ಹೊರಗಟ್ಟುವ ಹೊತ್ತಿಗೆ ಮನೆಯವರೆಲ್ಲರಿಗೂ ಸಾಕುಸಾಕಾಗುತ್ತಿತ್ತು. "ನನ್ನ ಮೊದಲ ಗುರುವೇ ಹುಚ್ಚರಾಗಿದ್ದರಿಂದ ನನಗೆ ನೃತ್ಯದ ಹುಚ್ಚು ಹಿಡಿಯದೇ ಮತ್ತೇನಾಗುವುದಕ್ಕೆ ಸಾಧ್ಯ?" ಎಂದು ಬಾಲಾ ಹೇಳುತ್ತಿದ್ದರು. ಅವರ ನೃತ್ಯದ ಹಂಬಲ ಮೂರರ ಬಾಲೆಯಾಗಿದ್ದಾಗಲೇ ಪ್ರಕಟವಾಯಿತು. ಬಾಲಾರ ಮನೆಯ ಕೆಳಗಡೆ ಕಾಮಕೋಟಿ ಅಮ್ಮಾಳ್ ಎನ್ನುವವರು ವಾಸವಾಗಿದ್ದರು. ಕೃಷ್ಣಭಕ್ತೆಯಾದ ಅವರು ಮನೆಯ ತುಂಬ ಕೃಷ್ಣನ ಚಿತ್ರಗಳನ್ನು ಹಾಕಿಕೊಂಡಿದ್ದರು. ಕೃಷ್ಣನನ್ನು ಎಬ್ಬಿಸಲು ಪ್ರತಿನಿತ್ಯವೂ ಬಾಲಾಳನ್ನು ಕರೆಯುತ್ತಿದ್ದರು. ದಿನವೂ ಪುಟ್ಟ ಬಾಲಾ ನರ್ತಿಸಿ ಕೃಷ್ಣನನ್ನು ಎಬ್ಬಿಸುತ್ತಿದ್ದರು. ಹಾಗಾಗಿಯೇ ಏನೋ ವ್ಯಾಸರಾಯರ 'ಕೃಷ್ಣ ನೀ ಬೇಗನೆ ಬಾರೋ' ಕೃತಿಯನ್ನು ಬಾಲಾ ಅವಿಸ್ಮರಣೀಯವಾಗಿ ನರ್ತಿಸುತ್ತಿದ್ದರು.

ಮೈಲಾಪುರ ಗೌರಿ ಅಮ್ಮಾಳ್ ಆ ಕಾಲದ ಅತ್ಯದ್ಭುತವಾದ ನರ್ತಕಿ. ಕೇವಲ ತಮ್ಮ ಮುಖಭಾವದ ಮೂಲಕವೇ ಅತ್ಯಂತ ಸಂಕೀರ್ಣ ಭಾವನೆಗಳನ್ನು ವ್ಯಕ್ತ ಪಡಿಸುತ್ತಿದ್ದ ಅಪರೂಪದ ಕಲಾವಿದೆ. ಅವರ ಕಾರ್ಯಕ್ರಮಗಳಿಗೆ ಬಾಲಾರ ತಾಯಿ ಜಯಮ್ಮ ಮತ್ತು ದೊಡ್ಡಮ್ಮ ಲಕ್ಷ್ಮೀರತ್ನಂ ಪದಂಗಳನ್ನು ಹಾಡುತ್ತಿದ್ದರು. ಹೆಂಗಸರು ನೃತ್ಯಕ್ಕೆ ಹಾಡುವ ಪರಿಪಾಠ ಪ್ರಾರಂಭವಾದದ್ದು ಇಲ್ಲಿಂದಲೇ ಎನ್ನಬಹುದು. "ನನಗೆ ನೃತ್ಯಕ್ಕೆ ಮೂಲ ಪ್ರೇರಣೆ ಬಂದಿದ್ದೇ ಮೈಲಾಪುರದ ಗೌರಿ ಅಮ್ಮಾಳ್ ಅವರ ಕಾರ್ಯಕ್ರಮ ನೋಡಿ. ಅವರು ನೃತ್ಯವನ್ನು ಆ ಹಂತಕ್ಕೆ ಬೆಳೆಸಿಲ್ಲದೇ ಹೋಗಿದ್ದರೆ ನಾನು ಪ್ರಯತ್ನಿಸುತ್ತಿದ್ದ ಸಂಗೀತ ಹಾಗೂ ನೃತ್ಯದ ಸಮನ್ವಯ ಬಹುಶಃ ಸಾಧ್ಯವೇ ಆಗುತ್ತಿರಲಿಲ್ಲ" ಎಂದು ಬಾಲಾ ಯಾವಾಗಲೂ ಹೇಳುತ್ತಿದ್ದರು.

ಇಂತಹ ನೃತ್ಯಪ್ರಾಣ ಬಾಲಾರಿಗೆ ನೃತ್ಯವನ್ನು ಅಷ್ಟೇ ಪ್ರೀತಿಸಿ ಅದಕ್ಕೋಸ್ಕರವೇ ಬದುಕಿದ್ದ ತಂಜಾವೂರು ಕಂದಪ್ಪನವರು ಗುರುವಾಗಿ ದೊರಕಿದ್ದು ಇಬ್ಬರದ್ದೂ ಸೌಭಾಗ್ಯವೆನ್ನಬಹುದು. ಬಾಲಾರ ಅಗಾಧ ಪ್ರತಿಭೆ ಹಾಗೂ ಸೃಜನಶೀಲತೆಗೆ ಈಡಾಗುವಂತಹ ಪ್ರತಿಭೆ ಮತ್ತು ಸೃಜನಶೀಲತೆ ಕಂದಪ್ಪ ನಟುವನಾರ್ ಅವರದ್ದು. ಕಂದಪ್ಪನವರು ತುಂಬ ಕಠಿಣವಾದ, ಆದರೆ ತುಂಬ ಅದ್ಭುತವಾದ ಗುರುಗಳು. ಅವರು ಬಾಲಾರಿಗೆ ವಿದ್ಯೆಯನ್ನು ಮಾತ್ರ ಹೇಳಿಕೊಡಲಿಲ್ಲ, ಅದರ ಜೊತೆಗೆ ಖ್ಯಾತಿ ಮತ್ತು ಟೀಕೆ ಇವೆರಡರೊಂದಿಗೆ ಹೇಗೆ ಮುಖಾಮುಖಿ ಆಗಬೇಕೆಂಬುದನ್ನೂ ಕಲಿಸಿದರು.



ಎಳೆಯ ಬಾಲಾ ತುಂಬ ಹೊತ್ತು ಅಭ್ಯಾಸ ಮಾಡಬೇಕಾಗಿತ್ತು. ಬೆಳಿಗ್ಗೆ ತಿಂಡಿಯಾದೊಡನೆ ಪಾಠ ಪ್ರಾರಂಭವಾಗುತ್ತಿತ್ತು. ಮೊದಲು ಬಾಲಾಳಿಗೆ ಅಡವುಗಳನ್ನು ಕಲಿಸಿದರು. ಅದನ್ನು ಗಂಟೆಗಟ್ಟಲೆ ಅಭ್ಯಾಸ ಮಾಡಬೇಕಿತ್ತು. ಕೆಲವೊಮ್ಮೆ ಕುತ್ತಿಗೆಯು ಸರಿಯಾದ ಸ್ಥಾನದಲ್ಲಿ ಇರುವಂತೆ ಮಾಡಲು ಬಾಲಾಳ ತಲೆಯ ಮೇಲೆ ಭಾರವಾದ ಮರಳಿನ ಚೀಲವನ್ನು ಇಡುತ್ತಿದ್ದರು. ಬಾಲಾ ತಪ್ಪು ಮಾಡಿದಾಗ ಬೆತ್ತದಿಂದ ಹೊಡೆಯುತ್ತಿದ್ದರು. ಬಾಲಾಳ ಮೀನಖಂಡ ಹಾಗೂ ಮಣಕಾಲಿನ ಮೇಲೆ ಹೊಡೆತದಿಂದಾದ ಗಾಯದ ಕಲೆಗಳು ಕೊನೆಯವರೆಗೂ ಉಳಿದಿದ್ದವು. ಆ ಹೊಡೆತದ ಭಯದಿಂದಾಗಿ ಬಾಲಾ ತುಂಬ ಹುಷಾರಾಗಿ ತಪ್ಪಾಗದಂತೆ ನರ್ತಿಸುತ್ತಿದ್ದರು. ಒಮ್ಮೆ ಬಾಲಾ ಮುದ್ರೆಯೊಂದನ್ನು ಸರಿಯಾಗಿ ಹಿಡಿಯಲಿಲ್ಲ ಎಂದು ಸಿಟ್ಟಾದ ಕಂದಪ್ಪನವರು ನಿಗಿನಿಗಿಸುತ್ತಿದ್ದ ಕೆಂಡವನ್ನು ತಂದು ಬಾಲಾಳ ಕೈಮೇಲೆ ಇಟ್ಟಿದ್ದರು. ಆ ಕಲೆ ಕೊನೆಯವರೆಗೂ ಬಾಲಾಳ ಕೈಮೇಲೆ ಇತ್ತು.

ಬೆಳಗಿನ ಈ ಕಠಿಣವಾದ ತರಬೇತಿಯ ನಂತರ ಜಯಮ್ಮಾಳ್ ಅವರಿಂದ ಸಂಗೀತದ ಪಾಠ ಸಾಯಂಕಾಲದವರೆಗೆ ಸಾಗುತ್ತಿತ್ತು. ಅಭಿನಯಕ್ಕೂ ರಾಗದ ಚಲನೆಯಲ್ಲಿನ ಏರಿಳಿತಗಳಿಗೂ ಇರುವ ನಿಕಟ ಸಂಬಂಧವನ್ನು ಕುರಿತು ಅವರು ಮಗಳಿಗೆ ತಿಳಿಸುತ್ತಿದ್ದರು. "ನಿನ್ನ ತಲೆ ಮತ್ತು ನಿನ್ನ ಇಡೀ ಶರೀರ ಕೇವಲ ತಾಳದೊಂದಿಗೆ ಮಾತ್ರವಲ್ಲ, ರಾಗದ ಸಂಗತಿಗಳು ಮತ್ತು ಗಮಕಗಳೊಂದಿಗೆ ಚಲಿಸಬೇಕು," ಎನ್ನುತ್ತಿದ್ದರು. ಬಾಲಾ ಸೊಗಸಾಗಿ, ಭಾವಪೂರ್ಣವಾಗಿ ಹಾಡುತ್ತಿದ್ದರು. ಉಸ್ತಾದ್ ಅಬ್ದುಲ್ ಕರೀಂ ಖಾನ್ ಬಾಲಾರ ಬಲು ಮೆಚ್ಚಿನ ಹಾಡುಗಾರರಾಗಿದ್ದರು. ಬಾಲಾರ ರಾಗಾಲಾಪನೆಯಲ್ಲಿ ಕರೀಂಖಾನರ ಪ್ರಭಾವ ಸ್ಪಷ್ಟವಾಗಿ ಕಾಣುತ್ತದೆ. ಬಾಲಾಗೆ ನೃತ್ಯ ಸಂಗೀತಗಳ ಜೊತೆಗೆ ತಮಿಳು, ತೆಲುಗು, ಸಂಸ್ಕೃತ ಇವೆಲ್ಲವನ್ನು ಕಲಿಸುವ ವ್ಯವಸ್ಥೆಯನ್ನೂ ಜಯಮ್ಮಾಳ್ ಮಾಡಿದ್ದರು. ರಾಮಾಯಣ ಮೊದಲಾದ ಹಲವು ಗ್ರಂಥಗಳು ಅವರಿಗೆ ಬಾಯಿಪಾಠವಾಗಿತ್ತು. ದೇವದಾಸಿ ಕುಟುಂಬದೊಳಗೆ ಸಾಂಪ್ರದಾಯಿಕವಾಗಿ ತರಬೇತಿ ಹೊಂದಿದ್ದ ಹೆಂಗಸರಿಂದ ಅವರು ಹಲವು ವಿಶೇಷ ತರಬೇತಿಗಳನ್ನು ಪಡೆದರು. ಅದರಲ್ಲಿ ಮುಖ್ಯವಾಗಿ ಒಂದು ಕೃತಿ ವ್ಯಕ್ತಪಡಿಸುವ ಭಾವನೆಗಳೆಲ್ಲವನ್ನೂ ಹಸ್ತ ಹಾಗೂ ತೋಳುಗಳನ್ನು ಬಳಸದೆ, ಕೇವಲ ಮುಖವನ್ನಷ್ಟೇ ಬಳಸಿ, ಮೊದಲು ಸಂಗೀತದೊಡನೆ, ನಂತರ ಮೌನವಾಗಿ ಅಭಿನಯಿಸಿ, ಅಭಿವ್ಯಕ್ತಿಸುವುದನ್ನು ಕಲಿತರು. ಬಾಲಾ ತಮ್ಮ ಒಡನಾಟಕ್ಕೆ ದಕ್ಕಿದ ಹಲವರಿಂದ ಜ್ಞಾನವನ್ನು ಗಳಿಸಿ ತಮ್ಮ ಕಲೆಯನ್ನು ಬೆಳೆಸಿಕೊಂಡರು. ಚಿನ್ನಯ್ಯ ನಾಯ್ಡು ಅವರಿಂದ ಅಭಿನಯವನ್ನು ಕಲಿತರು. ದೊಡ್ಡವರಾದ ಮೇಲೂ ಕೂಚುಪುಡಿ ನೃತ್ಯದ ಮಹಾರಾಜ ಎನಿಸಿಕೊಂಡಿದ್ದ ವೇದಾಂತಂ ಲಕ್ಷ್ಮೀನಾರಾಯಣ ಶಾಸ್ತ್ರಿಯವರಿಂದ ಅಭಿನಯಕ್ಕೆ ಸಂಬಂಧಿಸಿದಂತೆ ಹೊಸ ಹೊಳವುಗಳನ್ನು ಪಡೆದರು. ಪದಂಗಳನ್ನು ನಿರೂಪಿಸುವುದರಲ್ಲಿ ಶಾಸ್ತ್ರಿಯವರದ್ದು ಎತ್ತಿದ ಕೈ. ಅಭಿನಯವನ್ನು ಸೃಜನಶೀಲವಾಗಿ ವಿಸ್ತರಿಸುವುದು ಹೇಗೆಂಬುದನ್ನು ತಾವು ಕಲಿತದ್ದು ಶಾಸ್ತ್ರಿಗಳಿಂದಲೇ ಎನ್ನುತ್ತಿದ್ದರು ಬಾಲಾ.

ಹೀಗೆ ಕಲೆಯನ್ನು ಹಲವು ಶತಮಾನಗಳಿಂದ ಉಳಿಸಿ, ಬೆಳೆಸಿ, ಅದಕ್ಕೆ ಹೊಸತನ್ನು ಸೇರ್ಪಡಿಸುತ್ತಾ ಬಂದಿದ್ದ ದೇವದಾಸಿ ಸಮುದಾಯದ ಅಸ್ತಿತ್ವವೇ ೧೯೩೦ ಮತ್ತು ೧೯೪೦ರ ದಶಕದಲ್ಲಿ ಗಂಡಾಂತರದಲ್ಲಿತ್ತು. ಯಾವ ಕಲೆಯೊಂದಿಗೆ ಅವರು ಅಷ್ಟು ವರ್ಷಗಳ ಕಾಲ ಅವಿನಾ ಸಂಬಂಧದೊಂದಿಗೆ ಬದುಕಿದ್ದರೋ ಅದು ಅಪವಿತ್ರ, ಅಶುದ್ಧ ಎಂದು ಅದನ್ನು ಶುದ್ಧೀಕರಿಸಹೊರಟಿತ್ತು ಸಮಾಜದ ಒಂದು ವರ್ಗ. ಅದಕ್ಕೆ ವಸಾಹತು ಸರ್ಕಾರ ಒತ್ತಾಸೆ ನೀಡಿತ್ತು. ಆಗ ಪ್ರವಾಹದ ವಿರುದ್ಧ ಈಜಿದವರು ಬಾಲಾ. ನೃತ್ಯದಲ್ಲಿ ಶೃಂಗಾರವೆಂದರೆ ಅದು ಅಶ್ಲೀಲ, ಹಾಗಾಗಿ ನೃತ್ಯದಲ್ಲಿ ಭಕ್ತಿಯೇ ಮುಖ್ಯವಾಗಬೇಕು ಎನ್ನುವುದನ್ನು ಸ್ಥಾಪಿಸುವ ದೊಡ್ಡ ಪ್ರಯತ್ನ ನಡೆಯುತ್ತಿತ್ತು. ಒಂದರ್ಥದಲ್ಲಿ ನೃತ್ಯದ ಬ್ರಾಹ್ಮಣೀಕರಣ ನಡೆಯುತ್ತಿತ್ತು. ಅದರ ಮುಂಚೂಣಿಯಲ್ಲಿ ರುಕ್ಮಿಣೀದೇವೀ ಅರುಂಡೇಲ್ ಇದ್ದರು. ಆ ಸಂದರ್ಭದಲ್ಲಿ ಬಾಲಾ ಅತ್ಯಂತ ದೃಢವಾದ, ಅರ್ಥಪೂರ್ಣ ನಿಲುವನ್ನು ತಳೆದರು. ನೃತ್ಯದಲ್ಲಿ ಶೃಂಗಾರದ

ಸ್ಥಾನವನ್ನೂ ಅದರ ಅಭಿವ್ಯಕ್ತಿಯನ್ನೂ ಕುರಿತು ಸ್ಪಷ್ಟವಾಗಿ ಮನದಟ್ಟು ಮಾಡಿದರು. ಹಾಗೆಯೇ ಶ್ರೇಷ್ಠವಾದ ಭರತನಾಟ್ಯವೆನ್ನುವುದು ಹೇಗಿರುತ್ತದೆ ಎನ್ನುವುದನ್ನು ನಿಖರವಾಗಿ ವಿವರಿಸಿದರು: "ಶೃಂಗಾರದ ಪರಿಕಲ್ಪನೆ ಭಾರತೀಯ ಮೂರ್ತಿಶಿಲ್ಪ, ವರ್ಣಚಿತ್ರ, ಕಾವ್ಯ, ಸಂಗೀತ–ನೃತ್ಯ, ಹಿಂದು ದರ್ಶನಗಳು ಮತ್ತು ವಿಶ್ವಶಾಸ್ತ್ರದಲ್ಲಿ (ಕಾಸ್ಮೋಲಜಿ) ತುಂಬ ವ್ಯಾಪಕವಾಗಿದೆ. ಭಾರತೀಯ ಸೌಂದರ್ಯ ಶಾಸ್ತ್ರದ ಅತ್ಯಂತ ಪ್ರಾಚೀನ ಕಲ್ಪನೆ ಶೃಂಗಾರ. ಭರತನಾಟ್ಯಕ್ಕೆ ರಚಿತವಾದ ಕಾವ್ಯವೆಲ್ಲವೂ ಸಾಮಾನ್ಯವಾಗಿ ಶೃಂಗಾರ ರಸ ಪ್ರಧಾನವಾದುದು. ಭಾರತೀಯ ಸೌಂದರ್ಯಶಾಸ್ತ್ರದ ನವರಸಗಳಲ್ಲಿ ಮೊದಲನೆಯದೇ ಶೃಂಗಾರ ರಸ. ಭರತನಾಟ್ಯದ ಕಲಾತ್ಮಕತೆಯಲ್ಲಿ ಮಾನವ ಪ್ರೇಮ ಮತ್ತು ದೈವಪ್ರೇಮಗಳೆರಡೂ ಭಕ್ತಿ ಮತ್ತು ಶರಣಾಗತಿಯನ್ನು ಅಭಿವ್ಯಕ್ತಿಸುತ್ತವೆ. ಭಕ್ತಿ–ಶೃಂಗಾರದ ಸಂಪ್ರದಾಯದಲ್ಲಿ ಆತ್ಮವು ಪರಮಾತ್ಮನ ಮಿಲನಕ್ಕಾಗಿ ಹಾತೊರೆಯುತ್ತದೆ. ಭರತನಾಟ್ಯದಲ್ಲಿ ಸಖಿಯ ಸಹಾಯದಿಂದ ಒಂದಾಗುವ ನಾಯಕ ಮತ್ತು ನಾಯಕಿಯರು ಅದನ್ನು ಸೂಚಿಸುತ್ತಾರೆ. ಇಲ್ಲಿ ಸಖಿಯೆಂದರೆ ಅಜ್ಞಾನವನ್ನು ಕಳೆಯುವ ಗುರು. ಅನಾದಿಯಿಂದ ತಮಿಳು ನೃತ್ಯ ಪರಂಪರೆ ಯಲ್ಲಿಯೂ ಶೃಂಗಾರ ರಸಕ್ಕೆ ಪ್ರಧಾನವಾದ ಸ್ಥಾನವಿದೆ. ಈ ಕಲೆಗೆ ತಮ್ಮನ್ನು ತಾವು ಸಂಪೂರ್ಣವಾಗಿ ಅರ್ಪಿಸಿಕೊಂಡಿರುವ ಕಲಾವಿದರಿಗೆ ಸಂಗೀತದಂತೆ ನೃತ್ಯವೂ ಕೂಡ ದೈವಸಾಕ್ಷಾತ್ಕಾರದ ಸಾಧನೆಯೇ ಆಗಿರುತ್ತದೆ."

ಅಶ್ಲೀಲತೆ ಅನ್ನುವುದು ನೋಡುವವರ ಕಣ್ಣಿನಲ್ಲಿದೆ. ಭರತನಾಟ್ಯದಲ್ಲಿ ತುಂಬ ಬಿರುಸಾದ ನುಲಿಯುವಿಕೆ ಮತ್ತು ಉಗ್ರವಾದ, ರಭಸವಾದ, ರೋಷಾವೇಶದ ಚಲನೆಗಳಿಗೆ ಅವಕಾಶವೇ ಇಲ್ಲ. ಹಾಗಂತ ಅದು ಕೇವಲ ಬದುಕಿನ ಕೋಮಲವಾದ, ಮೃದುವಾದ ಆಯಾಮವನ್ನಷ್ಟೇ ಚಿತ್ರಿಸುವುದಿಲ್ಲ. ಘನವಾದ, ಗಾಢವಾದ ವಿಷಯಗಳನ್ನು ತುಂಬ ಸೂಚ್ಯವಾಗಿ ಸಮರ್ಥವಾಗಿ ಹೇಳುತ್ತದೆ. ಸಂಯಮಪೂರಿತ ಘನತೆ ಅಭಿನಯದ ಹೆಗ್ಗುರುತು. ಅತ್ಯುತ್ತಮವಾದ ನಗುವಿನಲ್ಲಿಯೂ ಬಾಯಿ ಚಲನೆ ಸಂಯಮಯುತವಾಗಿರುತ್ತದೆ. ಅತ್ಯಾಶ್ಚರ್ಯವನ್ನು ಅಭಿನಯಿಸುವಾಗಲೂ ಕಣ್ಣನ್ನು ಎಷ್ಟು ಅರಳಿಸ ಬೇಕೆನ್ನುವುದಕ್ಕೆ ಒಂದು ಸಂಯಮದ ಚೌಕಟ್ಟು ಇರುತ್ತದೆ. ಅತ್ಯಂತ ಗಾಢವಾದ, ತೀವ್ರವಾದ ಪ್ರೇಮ ಸಲ್ಲಾಪದ ಸನ್ನಿವೇಶದಲ್ಲಿಯೂ ನರ್ತಕಿಯು ಸೊಂಟವನ್ನು, ನಡುವನ್ನು ಬಳಸುವುದೇ ಇಲ್ಲ. ಬದಲಾಗಿ ಕೇವಲ ಹಸ್ತ ಮತ್ತು ಮುಖದ ಅಭಿನಯದ ಮೂಲಕವೇ ಆ ಭಾವ ವ್ಯಕ್ತವಾಗುತ್ತದೆ. ಈ ಶಿಷ್ಟತೆ, ಔಚಿತ್ಯ, ಸೂಕ್ಷ್ಮತೆ, ಸಭ್ಯತೆ, ಘನತೆಯೇ ಭರತನಾಟ್ಯಕ್ಕೆ ಈ ಪವಿತ್ರ ದಿವ್ಯತೆಯನ್ನು ತಂದುಕೊಟ್ಟಿರುವುದು. ಪವಿತ್ರವಾದ ಭರತನಾಟ್ಯ ಪವಿತ್ರವಾಗಿಯೇ ಉಳಿದಿರುವುದು ಅದರ ಸೂಚ್ಯವಾದ ಸೂಕ್ಷ್ಮ ಗುಣದಿಂದಾಗಿಯೇ." ಕಲೆಯ



ಅಭ್ಯಾಸ ಮತ್ತು ದೈವಶ್ರದ್ಧೆ ಎರಡೂ ಬೇರೆ ಬೇರೆ ಎನ್ನುವ ಕಲ್ಪನೆಯೇ ಬಾಲಾರಲ್ಲಿ ಇರಲಿಲ್ಲ. "ನೃತ್ಯವನ್ನು ನನಗೋಸ್ಕರ ಮಾಡುತ್ತೇನೆ. ಅದು ನಾನು ದೇವರಿಗೆ ಸಲ್ಲಿಸುತ್ತಿರುವ ಪ್ರಾರ್ಥನೆ" ಎನ್ನುತ್ತಿದ್ದರು. "ಭರತನಾಟ್ಯದ ಬೇರುಗಳು ಭಕ್ತಿಯಲ್ಲಿವೆ. ಅಷ್ಟೇ ಏಕೆ, ವಾಸ್ತವವಾಗಿ ಎಲ್ಲಾ ಭಾರತೀಯ ಕಲೆಗಳ ಕೇಂದ್ರದಲ್ಲಿ ಇರುವುದೇ ಭಕ್ತಿ. ನಮ್ಮ ಸಂಗೀತ ನೃತ್ಯಗಳೆರಡೂ ದೇವರಿಗೆ ನಾವು ಸಲ್ಲಿಸುವ ಬಹು ಮುಖ್ಯವಾದ ನೈವೇದ್ಯ. ದೈವದ ಅನುಭವ ಪಡೆಯುವ ಹಲವು ದಾರಿಗಳಿವೆ. ಅವುಗಳಲ್ಲಿ ಅತ್ಯಂತ ಸುಲಭ ಹಾಗೂ ವಿಶ್ವಾಸಾರ್ಹವಾದ ದಾರಿಯೆಂದರೆ ನಮ್ಮ ಸಂಗೀತ ಮತ್ತು ನೃತ್ಯ."

ಅಭಿನಯದಲ್ಲಿ ಭರತನಾಟ್ಯಕ್ಕೂ ಉಳಿದ ಕಲಾಪ್ರಕಾರದ ಅಭಿನಯಕ್ಕೂ ಮತ್ತು ದೈನಂದಿನ ಬದುಕಿನಲ್ಲಿ ಬಳಸುವ ಆಂಗಿಕಕ್ಕೂ ಇರುವ ವ್ಯತ್ಯಾಸವನ್ನೂ ಬಾಲಾ ಸ್ಪಷ್ಟವಾಗಿ ಹೇಳುತ್ತಿದ್ದರು: "ಭರತನಾಟ್ಯದಲ್ಲಿ ಬಳಸುವ ಮುದ್ರೆಗಳು ದಿನ ದಿನದ ಬದುಕಿನಲ್ಲಿ ಅಥವಾ ನಾಟಕದಲ್ಲಿ ಅಥವಾ ಸಿನಿಮಾದಲ್ಲಿ ಬಳಸುವ ಮುದ್ರೆಗಳಿಗಿಂತ ಭಿನ್ನ ವಾದವು. ಅದು ನೇರವಾದ ರಂಗನಟನೆಯಂತೆ ಇರುವುದಿಲ್ಲ. ಎರಡೂ ಒಂದೇ ಎಂದು ಯಾವ ಕಾರಣಕ್ಕೂ ಭಾವಿಸಬಾರದು. ಗದ್ಯ ಮತ್ತು ಕಾವ್ಯದ ನಡುವೆ ಇರುವ ವ್ಯತ್ಯಾಸವೇ ಭರತನಾಟ್ಯದ ಅಭಿನಯಕ್ಕೆ ಮತ್ತು ಉಳಿದ ಅಭಿನಯಕ್ಕೆ ಇದೆ. ಭರತನಾಟ್ಯದಲ್ಲಿ ಯಾವುದೇ ಭಾವನೆಯನ್ನಾಗಲಿ, ಮನಃಸ್ಥಿತಿಯನ್ನಾಗಲಿ, ಅನುಭವವನ್ನಾಗಲಿ ಅಥವಾ ಸ್ಥಳವನ್ನಾಗಲಿ ಕಲ್ಪನೆಯಿಂದ ಸೃಜನಶೀಲ, ಸಾಂಕೇತಿಕ ಭಾಷೆಯಲ್ಲಿ ಅಭಿವ್ಯಕ್ತಿಸಲಾಗುತ್ತದೆ."

ಆ ಕಾಲದ ಯುವಪೀಳಿಗೆಯ ಹಲವರಿಗೆ ಭರತನಾಟ್ಯದ ಶ್ರೇಷ್ಠತೆ ಅರ್ಥವಾಗಿದ್ದೇ ಬಾಲಾ ಅವರ ನೃತ್ಯದಿಂದ. ಉಜ್ವಲವಾದ ಬೆಳಕು ಹಾಗೂ ರಂಗಸಜ್ಜಿಕೆಯಿಲ್ಲದ, ಕೇವಲ ಒಂದು ಪುಟ್ಟ ಬಲ್ಬಿನ ಬೆಳಕಿದ್ದ ಸರಳ ವೇದಿಕೆಯ ಮೇಲೆ ಬಾಲಾ ಮಾಂತ್ರಿಕಲೋಕವನ್ನು ಸೃಷ್ಟಿಸುತ್ತಿದ್ದರು. ಕೇವಲ ಕುತೂಹಲದಿಂದ ಹೋದವರು ಅಭಿಮಾನಿಗಳಾಗಿ ಬಿಡುತ್ತಿದ್ದರು. ಅವರ ಜೊತೆಗೆ ಇರುತ್ತಿದ್ದುದು ಅವರ ಪ್ರತಿಭೆ, ಅಮ್ಮನ ಗಾಯನ, ಪಕ್ಕವಾದ್ಯ ದವರು ನುಡಿಸುತ್ತಿದ್ದ ಸಂಗೀತ ಹಾಗೂ ಅವರ ಗುರುಗಳ ನಟುವಾಂಗ, ಅಷ್ಟೇ. ಒಬ್ಬ ನರ್ತಕಿ ಯಲ್ಲಿ ನಿರೀಕ್ಷಿಸಬಹುದಾದ ರೂಪವಾಗಲಿ, ಒಳ್ಳೆಯ ಮೈಮಾಟವಾಗಲಿ, ತಾರುಣ್ಯವಾಗಲಿ, ಒಡವೆವಸ್ತ್ರ ಗಳಾಗಲಿ ಅವರಲ್ಲಿ ಇರಲಿಲ್ಲ. ಜೊತೆಗೆ ಸ್ವಲ್ಪ ಹೆಚ್ಚು ಅನಿಸುವಷ್ಟು ದಪ್ಪವಿದ್ದರು, ಉದ್ದಕ್ಕೂ ಅನಾರೋಗ್ಯ. ಹೃದಯದ ಸಮಸ್ಯೆ, ಸಂಧಿವಾತದ ಸಮಸ್ಯೆ, ಕೊನೆಗೆ ಕ್ಯಾನ್ಸರ್ ಅವರನ್ನು ಕಾಡುತ್ತಿತ್ತು. ಆದರೆ ಇವೆಲ್ಲವನ್ನೂ ಮೀರಿದ ಅವರ ಕಲೆ ಅವರೊಂದಿಗಿತ್ತು. ಎಡಿನ್‌ಬರೋ ಸಂಗೀತೋತ್ಸವ ದಲ್ಲಿ ಬಾಲಾರನ್ನು ಪರಿಚಯಿಸಲು ದಿಢೀರನೆ ವೇದಿಕೆಗೆ ಆಹ್ವಾನಿಸಿ ಆ ಊರು ಮತ್ತು ವಸತಿ ಹೇಗನ್ನಿಸಿತು ಎಂದು ಕೇಳಿದಾಗ, ಅತ್ಯಂತ ಸಾಧಾರಣವಾದ ಸೀರೆಯನ್ನುಟ್ಟಿದ್ದ, ತಲೆಯನ್ನೂ ಸರಿಯಾಗಿ ಬಾಚಿಕೊಳ್ಳದೆ ಹಾಗೇ ಕುಳಿತಿದ್ದ ಬಾಲಾ, ವೇದಿಕೆ ಹತ್ತಿ ಮಾತಿಲ್ಲದೆ ತನ್ನೆಲ್ಲಾ ಭಾವನೆಯನ್ನೂ ಅಭಿನಯದ ಮೂಲಕವೇ ವ್ಯಕ್ತಪಡಿಸಿಬಿಟ್ಟರು. ಅವರ ಎದೆಯ ದನಿ, ಅಲ್ಲಿ ನೆರೆದಿದ್ದ ಹತ್ತು ಸಾವಿರಕ್ಕೂ ಹೆಚ್ಚು ಪ್ರೇಕ್ಷಕರ ಎದೆಗಳನ್ನೂ ಆತ್ಮೀಯವಾಗಿ ಸ್ಪರ್ಶಿಸಿತು. ರೋಮಾಂಚಿತರಾದ ಪ್ರೇಕ್ಷಕರು ಎದ್ದು ನಿಂತು ಚಪ್ಪಾಳೆ ತಟ್ಟಿ ತಮ್ಮ ಮೆಚ್ಚುಗೆ ವ್ಯಕ್ತಪಡಿಸಿದರು.

೧೯೩೦ ಮತ್ತು ೧೯೪೦ರ ದಶಕಗಳು ಬಾಲಾರ ಬದುಕಿನ ಅತಿ ಕಷ್ಟದ ದಿನಗಳು. ದೈಹಿಕ ಆರೋಗ್ಯ ಹದಗೆಟ್ಟಿತ್ತು. ಜೊತೆಗೆ ಮಾನಸಿಕ ವಾಗಿಯೂ ತುಂಬ ಕುಗ್ಗಿದ್ದ ಬಾಲಾ ಎಲ್ಲೋ ಕಳೆದೇ ಹೋಗಿದ್ದರು. ನೃತ್ಯ ವಿಮರ್ಶಕರು ಅವರನ್ನು ಮರಿಆನೆ ಎಂದು ಲೇವಡಿ ಮಾಡುತ್ತಿದ್ದರು. ಇಂತಹ ಹೊತ್ತಿನಲ್ಲಿ ಅವರಿಗೆ ಒತ್ತಾಸೆಯಾಗಿ ನಿಂತವರು ಖ್ಯಾತ ವಿದ್ವಾಂಸರಾದ ಡಾ॥ ವಿ. ರಾಘವನ್, ನಾರಾಯಣ ಮೆನನ್ ಹಾಗೂ ಮದ್ರಾಸ್ ಮ್ಯೂಸಿಕ್ ಅಕಾಡೆಮಿ. ಅಕಾಡೆಮಿಯಲ್ಲಿ ಭರತನಾಟ್ಯ ಕಲಿಸಲು ಶಾಲೆಯೊಂದನ್ನು ತೆರೆದು ಅಲ್ಲಿಗೆ ಬಾಲಾರನ್ನು ನೇಮಿಸಿದರು. ಸಂಗೀತ ನೃತ್ಯಕ್ಕೆ ಸಂಬಂಧಿಸಿದಂತೆ ಸಂಶೋಧನೆ ಮಾಡುತ್ತಿದ್ದ ಡಚ್ ಮಹಿಳೆ ಬೆರಿಲ್ ಡಿ ಝೂಟೆ ಮತ್ತು ನರ್ತಕ ರಾಂಗೋಪಾಲ್ ಇಬ್ಬರೂ ಬಾಲಾರ ಬದುಕಿನಲ್ಲೊಂದು ಹೊಸ ಅಧ್ಯಾಯ ಬರೆದರು. ಬಾಲಾರ ನೃತ್ಯದಿಂದ ತುಂಬ ಪ್ರಭಾವಿತರಾದ ಬೆರಿಲ್ ಬಾಲಾರ ಉಗ್ರ ಅಭಿಮಾನಿ ಯಾಗಿಬಿಟ್ಟರು. ಬಹುಶಃ ಇವರಿಬ್ಬರಿಂದಾಗಿ ದೆಹಲಿ ಯಲ್ಲಿ ಬಾಲಾರ ಕಾರ್ಯಕ್ರಮ ಏರ್ಪಾಡಾಯಿತು. ಬಾಲಾ ಇಡೀ ರಾಜಧಾನಿಯನ್ನೇ ಗೆದ್ದುಕೊಂಡರು. ಕಚೇರಿಗಳು, ಪ್ರಶಸ್ತಿ ಪುರಸ್ಕಾರಗಳು ಬಾಲಾರ ಮುಡಿಗೇರಿದವು. ೧೯೫೫ರಲ್ಲಿ ಸಂಗೀತ ನೃತ್ಯ ಅಕಾಡೆಮಿಯ ಘನ ಪುರಸ್ಕಾರ, ೧೯೫೭ರಲ್ಲಿ

ಪದ್ಮಭೂಷಣ, ರವೀಂದ್ರ ಭಾರತಿ ವಿಶ್ವವಿದ್ಯಾನಿಲಯದ ಗೌರವ ಡಾಕ್ಟರೇಟ್ ಎಲ್ಲವೂ ಅವರಿಗೆ ಸಂದಿತು. ಮದ್ರಾಸ್ ಮ್ಯೂಸಿಕ್ ಅಕಾಡೆಮಿಯ ಪ್ರತಿಷ್ಠಿತ ಸಂಗೀತ ಕಲಾನಿಧಿ ಪ್ರಶಸ್ತಿ ಪಡೆದಿರುವ ಏಕೈಕ ನೃತ್ಯಕಲಾವಿದೆ ಬಾಲಾ.

ಇಡೀ ಭಾರತವನ್ನು ಕೈವಶ ಮಾಡಿಕೊಂಡ ನಾಟ್ಯರಾಣಿ ಬಾಲಾರ ಭಾಗ್ಯದ ಬಾಗಿಲನ್ನು ತೆರೆದದ್ದು ಈಸ್ಟ್–ವೆಸ್ಟ್ ಸಮ್ಮೇಳನ. ಟೋಕಿಯೋದಲ್ಲಿ ಬಾಲಾರ ಕಾರ್ಯಕ್ರಮ ಆಯೋಜನೆಯಾಗಿತ್ತು. ಸಂಘಟಕ ಶ್ರೀ ನೆಬೊಕೋವ್‌ಗೆ ಬಾಲಾರಿಗೆ ಕಾರ್ಯಕ್ರಮ ಕೊಡುವ ಮನಸ್ಸಿರಲಿಲ್ಲ. ಆದರೆ ಕಾರ್ಯಕ್ರಮ ನೋಡಿದ ನಂತರ ತಮ್ಮ ತಪ್ಪಿನ ಅರಿವಾಗಿ, ನೇಪಥ್ಯದಲ್ಲಿ ನಿಂತಿದ್ದ ಬಾಲಾರ ಮುಂದೆ ಐರೋಪ್ಯ ಶೈಲಿಯಲ್ಲಿ ಮಂಡಿಯೂರಿ ಕುಳಿತು ಅವರ ಕೈಗಳನ್ನು ಹಿಡಿದು "ನಿಮ್ಮನ್ನು ಬರಬೇಡ ಎಂದಿದ್ದರೆ ನಾನು ಅದೆಂತಹ ಅಪರಾಧ ಮಾಡಿಬಿಡುತ್ತಿದ್ದೆ" ಎಂದು ಕಣ್ಣೀರಿಟ್ಟರು. ಅಂದು ಬಾಲಾರ ನೃತ್ಯವನ್ನು ನೋಡಿದ ಲಾರ್ಡ್ ಹೇರ್‌ವುಡ್ ತಮ್ಮ ಸೋದರ ಸಂಬಂಧಿ ಇಂಗ್ಲೆಂಡಿನ ರಾಣಿ ಎಲಿಜ಼ಬೆತ್‌ಗೆ "ನಾನಂದು ಶ್ರೇಷ್ಠತೆಯ ಸನ್ನಿಧಿಯಲ್ಲಿದ್ದೆ" ಎಂದು ಹೇಳಿದರು. ೧೯೬೩ರಲ್ಲಿ ವಿಶ್ವವಿಖ್ಯಾತ ಎಡಿನ್‌ಬರೋ ಸಂಗೀತ ನೃತ್ಯ ಉತ್ಸವದಲ್ಲಿ ಪಾಲ್ಗೊಳ್ಳುವಂತೆ ಬಾಲಾರಿಗೆ ಆಹ್ವಾನ ಬಂದಿತು. ಬಾಲಾರ ನೃತ್ಯ ನೋಡಿದ ಪ್ರಖ್ಯಾತ ಬ್ಯಾಲೆ ನರ್ತಕಿ ಮಾರ್ಥಾ ಗ್ರಹಾಂ ಬಾಲಾರನ್ನು ಅಪ್ಪಿಕೊಂಡು, "ಲೋಕದ ಕಣ್ಣಿಗೆ ಬೀಳದಂತೆ ಅದ್ಹೇಗೆ ನೀವು ಹೀಗೆ ಅಡಗಿ ಕುಳಿತಿದ್ದಿರಿ? ನಿಮ್ಮನ್ನು ನಾನು ಹಾರಿಸಿಕೊಂಡು ಹೋಗುತ್ತೇನೆ" ಎಂದರು. ಬಾಲಾರ ನೃತ್ಯದಿಂದ ಅಷ್ಟರ ಮಟ್ಟಿಗೆ ಅವರು ಪ್ರಭಾವಿತರಾಗಿದ್ದರು.

ಭಾಷೆ, ಸಂಸ್ಕೃತಿ, ದೇಶ ಎಲ್ಲಾ ಎಲ್ಲೆಗಳನ್ನೂ ಮೀರಿಕೊಂಡು ಬಾಲಾರ ಕಲೆ ಜನರನ್ನು ಮುಟ್ಟಿಬಿಡುತ್ತಿತ್ತು. ಬಾಲಾರ ನೃತ್ಯ ಜನಾಂಗೀಯ ಅಡ್ಡಗೋಡೆಗಳನ್ನೆಲ್ಲಾ ಅರ್ಥಹೀನ ಎನಿಸುವಂತೆ ಮಾಡಿತ್ತು. ಬಾಲಸರಸ್ವತಿಯವರ ಹಸ್ತಗಳು ಪಾರಿವಾಳಗಳಂತೆ ಹಾರುತ್ತಾ ವಿದೇಶೀಯರಿಗೆ ಅರ್ಥವಾಗದ ಯಾವುದೋ ಕಥೆಯನ್ನು ವಿವರಿಸುವಾಗ, ಅದು ಅರ್ಥವಾಗದೇ ಹೋದಾಗಲೂ ಅದನ್ನು ಮೆಚ್ಚುವುದಕ್ಕೆ ಸಾಧ್ಯವಾಗುತ್ತಿತ್ತು. ಅವರ ಪ್ರತಿಯೊಂದು ಚಲನೆಯೂ ಅತ್ಯಂತ ಮನೋಹರವಾಗಿ, ಮನೋಜ್ಞವಾಗಿ ಸಂಗೀತಕ್ಕೆ ಹೊಂದಿಕೊಳ್ಳುತ್ತದೆ ಮತ್ತು ಒಬ್ಬ ರಸಿಕ ಉಳಿದಂತೆ ಸಂಗೀತದ ಬಗ್ಗೆ ಕೊಡುವುದಕ್ಕಿಂತ ಹೆಚ್ಚಿನ ಗಮನವನ್ನು ಸಂಗೀತಕ್ಕೆ ನೀಡುವಂತೆ ಅವರ ನೃತ್ಯ ಮಾಡುತ್ತದೆ. ನಿರಂತರವಾಗಿ ಆಡುವ ಉಸಿರಿನಂತೆ ಆದರೆ ಮೇಲ್ನೋಟಕ್ಕೆ ಅದರ ಇರುವಿಕೆಯೇ ಭಾಸವಾಗದಂತೆ ಲಯವೆನ್ನುವುದು ಬಾಲಾರ ನೃತ್ಯದಲ್ಲಿ ಹಾಸುಹೊಕ್ಕಾಗಿತ್ತು. ಅವರ ನೃತ್ಯಭಾಗಗಳು ಅತ್ಯಂತ ಸುಲಲಿತವೂ ಪರಿಪೂರ್ಣವೂ ಆಗಿರುತ್ತಿದ್ದವು. ಆಹಾ! ಅದೆಷ್ಟು ಸಲೀಸಾಗಿ, ಲೀಲಾಜಾಲವಾಗಿ ಬರುತ್ತಿದೆ ಎಂಬ ಭಾವ ಮೂಡಿಸುತ್ತಿತ್ತು ಎನ್ನುವುದು ಹಲವು ವಿದೇಶೀಯರ ಅಭಿಪ್ರಾಯವಾಗಿತ್ತು. ಬಾಲಸರಸ್ವತಿಯವರ ಆಂಗಿಕದ ಅಭಿವ್ಯಂಜಕತೆ, ಭಾವನೆಗಳ ತೀವ್ರತೆ ಮತ್ತು ಅವರ ಇಡೀ ವ್ಯಕ್ತಿತ್ವದಲ್ಲಿನ ಏಕಾಗ್ರತೆ ಇವೆಲ್ಲವೂ ಅವರ ನೃತ್ಯವನ್ನು ಮನರಂಜನೆಯ ಸ್ತರದಿಂದ ಪರಮಾನಂದ ತುಂಬಿದ ಭಾವೋತ್ಕರ್ಷದ ಸ್ತರಕ್ಕೆ ಒಯ್ಯುತ್ತಿತ್ತು. "ವಿಶ್ವದ ನೃತ್ಯಗಾರ್ತಿಯರಲ್ಲಿ ಅತ್ಯುತ್ಕೃಷ್ಟವಾದವರು ಬಾಲಾ. ಭಾರತೀಯ ನೃತ್ಯದ ದೈವಿಕ ಮೂಲವನ್ನು ಮಿಂಚಿನೋಪಾದಿಯಲ್ಲಿ ಬಾಲಾ ಹೊಳೆಯಿಸಿಬಿಡುತ್ತಾರೆ" ಎನ್ನುತ್ತಿದ್ದರು ಆನ್ನಾ ಕೆಸಲ್ಲಾಫ್. ಭರತನಾಟ್ಯದ ರುಚಿಯನ್ನು ಸವಿಯಲು ಭರತನಾಟ್ಯದ ವಿದ್ಯಾರ್ಥಿಯೇ ಆಗಬೇಕೆಂದೇನಿಲ್ಲ. ಪ್ರತಿಯೊಂದು ಮುದ್ರೆ ಮತ್ತು ಹಸ್ತವನ್ನು ಅರ್ಥೈಸಬೇಕಾಗಿಯೂ ಇಲ್ಲ. ತಮ್ಮ ಸೂಕ್ಷ್ಮವಾದ ಬೆರಳುಗಳು ಮತ್ತು ದುಂಡಾದ ತೋಳುಗಳ ಮೂಲಕ ಅವರು ಮಾಡುತ್ತಿದ್ದ ಪಾದರಸದಷ್ಟು ಚುರುಕಾದ, ಆದರೆ ಕಡೆದಿಟ್ಟ ವಿಗ್ರಹದಷ್ಟು ನಿಖರವಾದ ಚಲನೆಯನ್ನು ನೋಡುವುದು ಕಣ್ಣಿಗೆ ಹಬ್ಬ. ಅವರ ನಗುಮುಖ, ಕೊಂಕು, ಮೇಲೇರುವ ಹುಬ್ಬು, ಸಿಡುಕಿನ ನೋಟ, ಆಹ್ವಾನಿಸುವ ನೋಟ ಹೀಗೆ ಕ್ಷಣಕ್ಷಣಕ್ಕೂ ಬದಲಾಗುವ ಅವರ ಮುಖಭಾವವನ್ನು ನೋಡುವುದೇ ಒಂದು ಸೊಗಸಿನ ಅನುಭವ. ಅವರ ಹೆಸರನ್ನು ಸರಿಯಾಗಿ ಹೇಳುವುದಕ್ಕೆ ಬಾರದಿರುವವರಿಗೂ ಸರಳ ಬಾಲಾರ ಅಪರೂಪದ ಕಲೆಯನ್ನು ಆಸ್ವಾದಿಸಲು ಸಾಧ್ಯ. ಬಾಲಾರ ನೃತ್ಯ ನೋಡದವರಿಗೆ ಸತ್ಯಜಿತ್ ರಾಯ್ ಅವರನ್ನು ಕುರಿತು ತೆಗೆದಿರುವ ಸಾಕ್ಷ್ಯಚಿತ್ರ ಬಾಲಾ, ಹಾಗೂ ಯು–ಟ್ಯೂಬಿನಲ್ಲಿ ಸಿಗುವ ಒಂದೆರಡು ತುಣುಕುಗಳು ಅವರ ನೃತ್ಯವನ್ನು ಒಂದಿಷ್ಟು ಪರಿಚಯಿಸುತ್ತವೆ. ಇಂಗ್ಲಿಷಿಗೊಬ್ಬನೇ ಷೇಕ್ಸ್‌ಪಿಯರ್ ಇರುವಂತೆ ಭರತನಾಟ್ಯಕ್ಕೆ ಒಬ್ಬಳೇ ರಾಣಿ "ಬಾಲಸರಸ್ವತಿ."




**ಪ್ರೊ|| ಶೈಲಜಾ**
ನಂ. ಸಿ. ಎಚ್. – ೭೩, ೭ನೇ ಮುಖ್ಯರಸ್ತೆ, ಸರಸ್ವತಿಪುರಂ, ಮೈಸೂರು – ೫೭೦ ೦೦೯

# ಹರಪ್ಪ ಸಂಸ್ಕೃತಿ ಮತ್ತು ಖಗೋಳ ವಿಜ್ಞಾನ

**ಹರಪ್ಪ ನಾಗರಿಕತೆಯ ಉತ್ಖನನದಿಂದ ಕಂಡುಬಂದ ಅತಿ ಮಹತ್ವದ ವಿಷಯವೆಂದರೆ ಆ ನಗರಗಳ ಅಚ್ಚುಕಟ್ಟಾದ ವಿನ್ಯಾಸ. ನಿಖರವಾಗಿ ಉತ್ತರ-ದಕ್ಷಿಣವಾಗಿ ಮತ್ತು ಪೂರ್ವ-ಪಶ್ಚಿಮವಾಗಿ ನಿರ್ಮಿಸಲಾದ ರಸ್ತೆಗಳು. ಆಯತಾಕಾರದ ವಿನ್ಯಾಸಗಳು. ಜೊತೆಗೆ ಮಡಿಕೆ, ಕುಡಿಕೆಗಳ ಮೇಲೆ ಕಂಡುಬಂದಿರುವ ನಿಖರವಾದ ಜಾಮಿತಿಯ ಚಿತ್ರಗಳು, ಇದನ್ನು ಗಮನಿಸಿದ ದೇವಿಪ್ರಸಾದ್ ಚಟ್ಟೋಪಾಧ್ಯಾಯ ಅವರು, ಭಾರತೀಯ ಇತಿಹಾಸವನ್ನು ಅಲ್ಲಿಂದ ಆರಂಭಿಸಿ ಅನೇಕ ಹೊಸ ಹೊಸ ಚಿಂತನೆಗಳನ್ನು ಹುಟ್ಟುಹಾಕಿದ್ದಾರೆ.**

**ಡಾ॥ ಬಿ. ಎಸ್. ಶೈಲಜಾ**

ಪ್ರಕೃತಿಯೊಡನೆ ನೇರವಾಗಿ ಸಂವಹನ ನಡೆಸುವ ಖಗೋಳ ವಿಜ್ಞಾನ ಸಹಜವಾಗಿ ಅತಿ ಪ್ರಾಚೀನವಾದದ್ದು. ಆದ್ದರಿಂದ ಯಾವುದೇ ಸಂಸ್ಕೃತಿಯಲ್ಲೂ ಖಗೋಳ ವಿಜ್ಞಾನದ ಕುರುಹುಗಳನ್ನು ಕಾಣಬಹುದು. ಭಾರತಕ್ಕೆ ಕಾಲಿಟ್ಟ ಯೂರೋಪಿಯನ್ನರು ಇಲ್ಲಿ ಖಗೋಳ ವಿಜ್ಞಾನದ ಬೆಳವಣಿಗೆಯನ್ನು ಕಂಡು ಆಶ್ಚರ್ಯಚಕಿತರಾದರು. ಅಷ್ಟೇಕೆ, ೧೧ನೆಯ ಶತಮಾನದಲ್ಲಿಯೇ ಭಾರತಕ್ಕೆ ಭೇಟಿಕೊಟ್ಟಿದ್ದ ಅಲ್-ಬೆರೂನಿ ಸಹ ಈ ಬಗ್ಗೆ ಆಶ್ಚರ್ಯ ವ್ಯಕ್ತಪಡಿಸಿದ್ದಾನೆ. ಇಲ್ಲಿಂದ ಅನೇಕ ಗ್ರಂಥಗಳನ್ನು ಒಯ್ದು ಅರಬ್ಬಿ, ಪರ್ಷಿಯನ್ ಮುಂತಾದ ಭಾಷೆಗಳಿಗೆ ತರ್ಜುಮೆ ಮಾಡಲಾಗಿತ್ತಾದರೂ ಅವು ಯುರೋಪನ್ನು ತಲುಪಿದ್ದು ಅನೇಕ ಶತಮಾನಗಳ ನಂತರ, ಅದೂ ಅರಬ್ ಗ್ರಂಥಗಳಾಗಿ.

ಭಾರತೀಯ ಖಗೋಳದ ಮೂಲವನ್ನು ಹುಡುಕುತ್ತಾ ಹೊರಟ ಐರೋಪ್ಯ ವಿದ್ವಾಂಸರಿಗೆ ಅತಿ ಹಿಂದಿನ ಆಕರಗಳು ಎಂದು ಸಿಕ್ಕಿದ್ದು ವೇದಗಳು. ಆದ್ದರಿಂದ ಅವರು ವೇದಗಳಲ್ಲಿನ ಅಂಶಗಳನ್ನೇ ಆರಂಭದ ಸೂಚಕ ಎಂದು ಭಾವಿಸಿಕೊಂಡರು; ಅದಕ್ಕೆ ತಕ್ಕಂತೆ ಅನೇಕ ಸಿದ್ಧಾಂತಗಳನ್ನು ರೂಪಿಸಿದರು. ಆರ್ಯರು ಎಂಬುವರು ಮಧ್ಯ ಏಷ್ಯದಿಂದ ಭಾರತಕ್ಕೆ ಬಂದರು ಎಂಬುದೂ ಅವುಗಳಲ್ಲೊಂದು. ಸುಮಾರು ೧೨೦ ವರ್ಷಗಳ ಹಿಂದೆ ಈ ಬಗ್ಗೆ ಅಧ್ಯಯನ ನಡೆಸಿದ ಬಾಲಗಂಗಾಧರ ತಿಲಕ್ ಮುಂತಾದವರು ಕೂಡ ಇದೇ ಅಭಿಪ್ರಾಯದ ಪೂರ್ವಗ್ರಹಕ್ಕೆ ಒಳಗಾಗಿದ್ದರು. ಹಾಗಾಗಿ ಕೆಲವು ಗೊಂದಲಮಯ ಸನ್ನಿವೇಶಗಳು ಎದುರಾದವು. ಆದರೂ ಮಹಾಭಾರತ, ರಾಮಾಯಣ – ಈ ಗ್ರಂಥಗಳಲ್ಲಿ ಬರುವ ಖಗೋಳದ ಘಟನೆಗಳನ್ನೂ ಗಣನೆಗೆ ತಂದುಕೊಂಡು ಕಲಿಯುಗ ಎಂಬುದು ಸುಮಾರು ೫೦೦೦ ವರ್ಷಗಳ ಹಿಂದೆ ಆರಂಭವಾಯಿತು (ಕ್ರಿ.ಪೂ. ೩೦೦೦) ಎಂದು ಲೆಕ್ಕ ಹಾಕಿದ್ದರು. ಮುಂದೆ ಆರ್ಯಭಟ, ವರಾಹಮಿಹಿರ ಮುಂತಾದವರ ಪಠ್ಯಗ್ರಂಥಗಳು ಬೆಳಕಿಗೆ ಬಂದವು. ಕಲಿ ಅಹರ್ಗಣ ಎಂಬ ದಿನದ ಸೂಚ್ಯಂಕ ದೊರಕಿತು.

ಈ ಮಧ್ಯೆ ಹರಪ್ಪ ಸಂಸ್ಕೃತಿಯ ಹೊಸ ಶೋಧ ಬೆಳಕಿಗೆ ಬಂದಿತು. (ಅವಿಭಜಿತ) ಭಾರತದ ಇತಿಹಾಸ, ಸಂಸ್ಕೃತಿ, ಭಾಷಾಶಾಸ್ತ್ರ ಈ ಎಲ್ಲ ಶಾಖೆಗಳ ಅಧ್ಯಯನಗಳಿಗೂ ಇದು ಹೊಸ ತಿರುವನ್ನೇ ತಂದುಕೊಟ್ಟಿತು. ಈ ಸಂಸ್ಕೃತಿ ಎಷ್ಟು ಹಳೆಯದು? – ನಮ್ಮ ಇಂದಿನ ಭಾರತೀಯ ಸಂಸ್ಕೃತಿಯ ಮೂಲವೇ ಇದಾಗಿರಬಹುದೇ? – ಈ ಬಗೆಯ ಚಿಂತನೆಯನ್ನು ಮೊದಲು ಹುಟ್ಟುಹಾಕಿದವರೇ ದೇವಿಪ್ರಸಾದ್ ಚಟ್ಟೋಪಾಧ್ಯಾಯ.

ಹರಪ್ಪ ಮತ್ತು ಮೊಹೆಂಜೊದಾರೊ, ಆಮೇಲೆ ಲೋಥಲ್, ಕಾಲಿಬಂಗನ್ ಮುಂತಾದ ಸ್ಥಳಗಳ ಉತ್ಖನನದಲ್ಲಿ ಕಂಡುಬಂದಿರ ಬಹುದಾದ ಖಗೋಳ ವೈಜ್ಞಾನಿಕ ಅಂಶಗಳು ಬಹಳ ಕಡಿಮೆ; ಇಲ್ಲವೇ ಇಲ್ಲ ಎಂದರೂ ತಪ್ಪಾಗಲಾರದು. ಆದ್ದರಿಂದ ಚಟ್ಟೋಪಾಧ್ಯಾಯ ಅವರು ಪರೋಕ್ಷ ಪ್ರಮಾಣಗಳನ್ನು ಪ್ರತಿಪಾದಿಸಲು ಪ್ರಯತ್ನಿಸಿದರು.

ಹರಪ್ಪ ನಾಗರಿಕತೆಯ ಮೊದಲ ನಗರೀಕರಣದ ಹಂತವನ್ನು ಗುರುತಿಸುವಾಗ ಯಾವುದಾದರೂ ಉಪಕರಣಗಳು ದೊರಕಿರುವುದೇ ಎಂಬುದರತ್ತ ಅವರು ಗಮನ ಹರಿಸಿದ್ದಾರೆ. ಅವರಿಗೆ ದೊರಕಿದ್ದು ಅಳತೆ ಪಟ್ಟಿಗಳು, ತೂಗು ಗುಂಡುಗಳು, ತೂಕದ ಅಳತೆಬಟ್ಟುಗಳು – ಇಂತಹವೇ. ಹರಪ್ಪದ ಅಳಿವಿನ ಬಹಳ ಕಾಲದ ನಂತರ ರಚಿತವಾದ ಗ್ರಂಥಗಳಲ್ಲಿ ಕುರುಹುಗಳು ಸಿಗಬಹುದು ಎಂಬುದು ತರ್ಕ. ಇಟ್ಟಿಗೆಗಳ ಅಳತೆಗಳು ಇಲ್ಲಿ ಬಹು ಮುಖ್ಯ ಪಾತ್ರವಹಿಸಿದವು.

ನಮ್ಮನ್ನು ನಾವೇ ಹರಪ್ಪದಲ್ಲಿ ಕಲ್ಪಿಸಿಕೊಳ್ಳೋಣ. ಆಗ್ಗೆ ನಮಗೆ ಎರಡು ಕಣ್ಣುಗಳ ಹೊರತಾಗಿ ಬೇರೆ ಯಾವ ಉಪಕರಣವೂ ಇಲ್ಲ. ಹಾಗಾದರೆ ನಮ್ಮ ಆಕಾಶ ಜ್ಞಾನ ಎಂಬುದರಲ್ಲಿ ಏನೇನು ಅಡಕವಾಗಿರಬೇಕು?

**೧. ಸೂರ್ಯನ ದೈನಂದಿನ ಚಲನೆ**

ಇಲ್ಲಿ ಪೂರ್ವ-ಪಶ್ಚಿಮದ ಚಲನೆ ಮಾತ್ರವಲ್ಲ, ಸೂಕ್ಷ್ಮವಾಗಿ ಗಮನಿಸಿದಲ್ಲಿ ವಾರ್ಷಿಕ ಚಲನೆಯನ್ನೂ ಗುರುತು ಮಾಡಿಕೊಳ್ಳಬಹುದು. ಇನ್ನೂ ಒಂದು ಹೆಜ್ಜೆ ಮುಂದೆ ಹೋಗಿ ಋತುಗಳಿಗೂ, ಸೂರ್ಯನ ವಾರ್ಷಿಕ ಚಲನೆಗೂ ಇರುವ ಸಂಬಂಧವನ್ನು ಕಂಡುಕೊಳ್ಳಬಹುದು. ಹಾಗಾದರೆ ಈ ಚಲನೆಯ ಅಧ್ಯಯನದ ಕುರುಹುಗಳು ಸಿಗುವುವೇ?




*ಮೊಹೆಂಜೊದಾರೊ ನಗರ – ನಕ್ಷೆಯ ಆಧಾರದ ಮೇಲೆ ರಚಿತವಾದ ಕಲಾವಿದನ ಕಲ್ಪನೆ*




*ವೇದಿಗಳಲ್ಲಿ ಮೂರು ಅಗ್ನಿಗಳ ಸ್ಥಾನಗಳು; ಬೋಧಾಯನ ಹಾಗೂ ಕಾತ್ಯಾಯನ ಶುಲ್ಬ ಸೂತ್ರಗಳಲ್ಲಿ ಸೂಚಿಸಿರುವ ಅಳತೆಗಳು*

**೨. ಚಂದ್ರನ ಚಲನೆ**

ಇದು ಕೂಡ ಬರಿಗಣ್ಣಿಗೆ ಗೋಚರವಾಗುವಂತಹುದೇ ಆದ್ದರಿಂದ ಚಂದ್ರಕಲೆಗಳು, ಅವುಗಳ ಉದಯಾಸ್ತ ಸಮಯಗಳಲ್ಲಿನ ನಿಯತಕಾಲಿಕತೆ – ಇಂತಹ ಅಂಶಗಳನ್ನು ದಾಖಲಿಸಿರಬೇಕು.

**೩. ಗ್ರಹಣಗಳು**

ಸೂರ್ಯ ಮತ್ತು ಚಂದ್ರರ ಬಿಂಬಗಳು ಇದ್ದಕ್ಕಿದ್ದಂತೆ ಕುಂದಿಹೋಗುವ ಘಟನೆಗಳು ಅತ್ಯವಶ್ಯಕವಾಗಿ ಅವರ ಗಮನಕ್ಕೆ ಬಂದಿರಲೇಬೇಕು. ಪೂರ್ಣ ಸೂರ್ಯಗ್ರಹಣದ ಘಟನೆಯಂತೂ ಭೀತಿಯನ್ನು ಹುಟ್ಟಿಸಿಯಾದರೂ ದಾಖಲಾಗಿರಬೇಕು.

**೪. ಗ್ರಹಗಳು, ನಕ್ಷತ್ರಗಳು**

ರಾತ್ರಿಯಲ್ಲಿ ಈ ನಾಗರಿಕತೆಯ ಜನ ಏನಾದರೂ ಬೇಟೆಯಂತಹ ಚಟುವಟಿಕೆಗಳಲ್ಲಿ ತೊಡಗಿಕೊಳ್ಳುತ್ತಿದ್ದರೇ? ಈ ಬಗ್ಗೆ ಯಾವುದೇ ಕುರುಹು ಸಿಕ್ಕಿಲ್ಲ. ಆದರೂ ಬೆಂಕಿಯ ಉಪಯೋಗ ತಿಳಿದುಕೊಂಡಿದ್ದವರಾದ್ದರಿಂದ ಕೆಲವೊಂದು ಸೀಮಿತ ಚಟುವಟಿಕೆಗಳು ಇದ್ದಿರಬಹುದು. ಹಾಗಿದ್ದಲ್ಲಿ ನಕ್ಷತ್ರಗಳ ಪರಿಚಯ ಇದ್ದೀತು. ಯಾವ ನಕ್ಷತ್ರಗಳಿರಬಹುದು? – ಇದನ್ನು ಉತ್ತರಿಸುವಾಗ ಈ ತಿಳುವಳಿಕೆಯಿಂದ ಅವರಿಗೆ ಏನು ಉಪಯೋಗವಾಗುತ್ತಿತ್ತು ಎಂಬುದನ್ನೂ ಗಮನದಲ್ಲಿ ಇಟ್ಟುಕೊಳ್ಳಬೇಕು.

ಹರಪ್ಪ ನಾಗರಿಕತೆಯ ಉತ್ಖನನದಿಂದ ಕಂಡುಬಂದ ಅತಿ ಮಹತ್ವದ ವಿಷಯವೆಂದರೆ ಆ ನಗರಗಳ ಅಚ್ಚುಕಟ್ಟಾದ ವಿನ್ಯಾಸ. ನಿಖರವಾಗಿ ಉತ್ತರ–ದಕ್ಷಿಣವಾಗಿ ಮತ್ತು ಪೂರ್ವ–ಪಶ್ಚಿಮವಾಗಿ ನಿರ್ಮಿಸಲಾದ ರಸ್ತೆಗಳು. ಆಯತಾಕಾರದ ವಿನ್ಯಾಸಗಳು. ಜೊತೆಗೆ ಮಡಿಕೆ, ಕುಡಿಕೆಗಳ ಮೇಲೆ ಕಂಡುಬಂದಿರುವ ನಿಖರವಾದ ಜಾಮಿತಿಯ ಚಿತ್ರಗಳು, ಇದನ್ನು ಗಮನಿಸಿದ ಕೂಡಲೇ ಗಣಿತಕ್ಕೆ ಅತಿ ಪ್ರಾಚೀನ ಆಕರ ಗ್ರಂಥಗಳಾದ ಸುಲಭ ಸೂತ್ರಗಳ ಬಗ್ಗೆ ಗಮನಹರಿಸಬೇಕಾಗುತ್ತದೆ.

ಸುಲಭ ಸೂತ್ರಗಳು ಎಂದರೆ ದಾರವನ್ನು ಉಪಯೋಗಿಸಿ ಮಾಡಬಹುದಾದ ರಚನೆಗಳ ವಿನ್ಯಾಸ. ಗಣಿತ ಮತ್ತು ಜ್ಯಾಮಿತಿಯ ಸೂತ್ರಗಳ ವಿವರಣೆ ಇಲ್ಲಿದೆ. ಮುಖ್ಯವಾಗಿ ಚಿತ್ರಗಳನ್ನು ನಿರ್ಮಿಸಲು ಬೇಕಾಗುವ ಗಣಿತ ಸೂತ್ರಗಳು, ಇಟ್ಟಿಗೆಗಳ ಅಳತೆಗಳು ಎಲ್ಲವೂ ಇವೆ. ಇದರಲ್ಲಿ ಅಡಗಿರುವ ಗಣಿತ ಸೂತ್ರಗಳನ್ನು ಹಲವಾರು ವಿದ್ವಾಂಸರು ಹೆಕ್ಕಿ ತೆಗೆದಿದ್ದಾರೆ. ಬಹುಶಃ ದೇವಿಪ್ರಸಾದ್ ಚಟ್ಟೋಪಾಧ್ಯಾಯ ಅವರು ಪುಸ್ತಕ ಬರೆಯುವ ಕಾಲಕ್ಕೆ ಇಂತಹ ಅಧ್ಯಯನಗಳು ಲಭ್ಯವೇ ಇರಲಿಲ್ಲವೆಂದು ತೋರುತ್ತದೆ. ಆದ್ದರಿಂದ ಈ ದೃಷ್ಟಿಯಲ್ಲಿ ಅವರದ್ದು ಕತ್ತಲೆಯ ಕಾಡಲ್ಲಿ ಮೊದಲ ಹೆಜ್ಜೆ. ಸುಲಭ ಸೂತ್ರಗಳ ಬಗ್ಗೆ ಮೊದಲ ಅಧ್ಯಯನ ಪ್ರಕಟವಾಗಿದ್ದು ೧೯೨೬ರಲ್ಲಿ, ಆಪ್ಟೆಯವರದ್ದು. ಅವರು 'ವೃತ್ತೀಯ' ಎಂಬ ಪದವನ್ನು ಮೂರನೆಯ ಒಂದು ಭಾಗವನ್ನು ತೆಗೆದ ವೃತ್ತ ಎಂದು ಅನುವಾದಿಸಿದ್ದರಿಂದ ಕೆಲವೊಂದು ಲೆಕ್ಕಗಳು ತಪ್ಪಾಗಿದ್ದವು ಎಂದು ಆರ್. ಪಿ. ಕುಲಕರ್ಣಿ (೧೯೮೩) ಅವರು ತೋರಿಸಿಕೊಟ್ಟರು. ಆದ್ದರಿಂದ ಚೌಕವನ್ನು ಆವರಿಸಿದ ವೃತ್ತದ ರಚನೆಯಲ್ಲಿ ಮತ್ತು ಇನ್ನಿತರೆ ಜ್ಯಾಮಿತೀಯ ರಚನೆಗಳಲ್ಲಿ ಗೊಂದಲ ಉಂಟಾಗಿತ್ತು.

ಬಹುಶಃ ದೇವಿಪ್ರಸಾದ್ ಅವರಿಂದ ಪ್ರಭಾವಿತರಾದ ಅನೇಕರು ಶುಲ್ಬ ಸೂತ್ರಗಳ ಅಧ್ಯಯನವನ್ನು ಮುಂದುವರಿಸಿದರು. ಹಾಗಾಗಿ ೧೯೮೦ರಲ್ಲಿ ಬಾಗ್ ಮತ್ತು ಸೇನ್ ಅವರ ಅನುವಾದ ಮತ್ತು ವಿವರಣೆಗಳ ಆವೃತ್ತಿ ಪ್ರಕಟವಾಯಿತು. ಸರಸ್ವತಿ ಅಮ್ಮ (೧೯೭೯), ಕುಲಕರ್ಣಿ (೧೯೮೩), ಡೆಲಿರೆ (೧೯೯೩), ಈಚೆಗೆ ಪ್ಲೋಕರ್ (೨೦೦೯) ಇವರು ವಿವರವಾಗಿ ಅಧ್ಯಯನ ನಡೆಸಿದರು. ಶುಲ್ಬ ಸೂತ್ರಗಳು ಮುಖ್ಯವಾಗಿ ಗಣಿತದ ಆಕರ ಗ್ರಂಥ ಎಂದೇ ಪರಿಗಣಿಸಲ್ಪಟ್ಟಿವೆ.

ಬೋಧಾಯನ ಸುಲಭ ಸೂತ್ರ ಎಂಬುದು ಅತಿ ಹಿಂದಿನದು. ಕ್ರಿ. ಪೂ. ೩೦೦೦ ಎಂದು ಅಂದಾಜು. ಕಾತ್ಯಾಯನ ಎಂಬುದು ಸುಮಾರು ಕ್ರಿ. ಪೂ. ೧೫೦೦ರ ಕಾಲದ್ದು. ಮಾನವ ಸುಲಭ ಸೂತ್ರ ಸುಮಾರು ಕ್ರಿ. ಪೂ. ೭೦೦ರದ್ದು ಎಂದು ನಿರ್ಧರಿಸಲಾಗಿದೆ. ಈ ಅಂಶವನ್ನು ಗಮನದಲ್ಲಿ ಇಟ್ಟುಕೊಂಡರೆ ಅವುಗಳಲ್ಲಿ ಇದಕ್ಕೆ ಪುಷ್ಟಿ ನೀಡುವ ಏನಾದರೂ ಖಗೋಳ ವೈಜ್ಞಾನಿಕ ಕುರುಹು ಸಿಗಬಹುದೇ?

ಸುಲಭ ಸೂತ್ರಗಳಲ್ಲಿ ಮೂರು ಅಗ್ನಿಗಳ ಪ್ರಸ್ತಾಪವಿದೆ. ಅವನ್ನು ಸ್ಥಾಪಿಸಬೇಕಾದ ವಿಧಿವಿಧಾನಗಳೂ ಇವೆ. ಇದನ್ನು ಓದಿದಾಗ ನನಗೆ ಅವುಗಳ ನಡುವಿನ ವ್ಯತ್ಯಾಸ ಸ್ಫುಟವಾಗಿ ಕಂಡುಬಂದಿತು. ಬೇರೆ ಬೇರೆ ಪಠ್ಯಗಳಲ್ಲಿ ಬೇರೆ ಬೇರೆ ಸೂತ್ರಗಳಿವೆ. ಹೀಗೇಕೆ?

ಇದರ ಸುಳಿವನ್ನು ನಾವು ಬೇರೆಡೆ ಹುಡುಕಬೇಕು. ಕಾಲಗಣನೆ ಎಂದು ಆರಂಭವಾಗುತ್ತಿತ್ತು? ಈಗಿನಂತೆ ವಸಂತ ವಿಷುವವೇ? ಅಥವಾ

ಉತ್ತರಾಯಣವೇ? ಅಂದರೆ ಮಾರ್ಚ್ ೨೨ ಆಗಿರಬಹುದು; ಅಥವಾ ಡಿಸೆಂಬರ್ ೨೨ರಂದು ಆಗಿರಬಹುದು. ಹೆಚ್ಚಿನ ಪಠ್ಯಗಳಲ್ಲಿ ಉತ್ತರಾಯಣಕ್ಕೆ ಮಹತ್ವ ನೀಡಿರುವುದರಿಂದ ಬಹುಶಃ ಅದು ವರ್ಷಾರಂಭವನ್ನು ಸೂಚಿಸುತ್ತಿರಬೇಕು. ಹಾಗಿದ್ದಲ್ಲಿ ದಕ್ಷಿಣಾಗ್ನಿ ಎಂಬುದು ಉತ್ತರಾಯಣವನ್ನು ಗುರುತಿಸಿ ಕೊಳ್ಳಲು ಮಾಡಿಕೊಂಡ ವ್ಯವಸ್ಥೆ ಇರಬಹುದು.

ಈ ದಿಕ್ಕಿನಲ್ಲಿ ಗಮನಹರಿಸಿ ನಾನು ಮೂರು ಬೇರೆ ಬೇರೆ ವಿಧಾನಗಳು ದಕ್ಷಿಣಾಗ್ನಿಯ ಸಣ್ಣ ವ್ಯತ್ಯಾಸವನ್ನು ಸೂಚಿಸುತ್ತಿರಬಹುದು ಎಂದು ಊಹಿಸಿದೆ. ಈ ವ್ಯತ್ಯಾಸವೇ ಏನನ್ನು ಹೇಳುತ್ತದೆ? ಇದನ್ನು ವಿಮರ್ಶಿಸೋಣ.


**ಪಶುಪತಿ ಎಂದು ಹೆಸರಿಸಿರುವ ಚಿತ್ರದ ಮೊಹರು; ಕೊಂಬುಗಳ ಆಕಾರದ ಮೇಲೆ ಇರುವ ಗೆರೆಗಳನ್ನು ಗಮನಿಸಿ**

ಬೆಂಗಳೂರಿನಿಂದ ಉತ್ತರಾಯಣದಂದು ಸೂರ್ಯೋದಯದ ದಿಕ್ಕನ್ನು ಗುರುತಿಸಿ ಕೊಂಡು ದಕ್ಷಿಣಾಗ್ನಿಯನ್ನು ಸ್ಥಾಪಿಸುತ್ತೇವೆ ಎಂದುಕೊಳ್ಳೋಣ. ಅದೇ ಸೂತ್ರ ದೆಹಲಿಗೆ ಅನ್ವಯವಾಗುವುದಿಲ್ಲ. ಆದ್ದರಿಂದ ಅಕ್ಷಾಂಶವೇ ಈ ಸ್ಥಾಪನೆಯನ್ನು ನಿರ್ಧರಿಸುವುದಾದರೆ ಬೇರೆ ಬೇರೆ ಸೂತ್ರಗಳು ಬೇರೆ ಬೇರೆ ಅಕ್ಷಾಂಶಕ್ಕೆ ಎನ್ನಬಹುದು. ಹೀಗೆ ಲೆಕ್ಕ ಮಾಡಿದಾಗ ನನಗೊಂದು ಆಶ್ಚರ್ಯ ಕಾದಿತ್ತು. ೨೬.೯ ಡಿಗ್ರಿ ಅಕ್ಷಾಂಶ ಎಂಬುದು ಒಂದು ಉತ್ತರವಾದರೆ ಉಳಿದವು ೩೩.೫, ೩೯.೩, ೪೧.೫, ೫೮.೭ – ಹೀಗೆಲ್ಲಾ ಇದ್ದವು. ಆದ್ದರಿಂದ, ೨೬.೯ ಬಿಟ್ಟು ಉಳಿದವು ಅರ್ಥಹೀನ ಎಂದಾಯಿತು. ೨೬.೯ ಡಿಗ್ರಿ ಅಕ್ಷಾಂಶ ಎಂಬುದು ವೇದಗಳಲ್ಲಿ ಸೂಚಿತವಾಗಿರುವ ಬ್ರಹ್ಮಾವರ್ತ ಎಂಬ ಪ್ರದೇಶವಿರಬಹುದು ಎಂಬುದು ಡಾ॥ ಆರ್. ಗಣೇಶ್ (ಅಷ್ಟಾವಧಾನಿ) ಅಭಿಪ್ರಾಯ.

ಹಾಗಾದರೆ ಬೇರೆ ಬೇರೆ ಗ್ರಂಥಗಳಲ್ಲಿ ಬೇರೆ ಬೇರೆ ಸೂತ್ರಗಳೇಕೆ? ಇದನ್ನು ತಿಳಿಯಲು ನಾನು ಇನ್ನೊಂದು ಅಂಶದತ್ತ ಗಮನಹರಿಸಬೇಕಾಯಿತು. ಭೂಮಿಯ ಅಕ್ಷ ೨೩.೫ ಡಿಗ್ರಿ ಎಂದು ಹೇಳುತ್ತೇವೆ. ಆದರೆ, ಬಹಳ ನಿಧಾನವಾಗಿ ವ್ಯತ್ಯಾಸವಾಗುತ್ತಿದೆ. ಒಂದು ಅಂದಾಜಿನ ಪ್ರಕಾರ ಕ್ರಿ. ಪೂ. ೩೦೦೦ದಲ್ಲಿ ೨೪ ಡಿಗ್ರಿ ಇತ್ತು. ಹಾಗೆಯೇ ಕ್ರಿ. ಪೂ. ೮೦೦೦ದಲ್ಲಿ ೨೫.೫ ಡಿಗ್ರಿ ತಲುಪಿತ್ತು ಅದಕ್ಕೆ ಮುನ್ನ ಕಡಿಮೆಯಾಗಿತ್ತು. ಈ ಅಂಶವನ್ನು ಪರಿಗಣಿಸಿದರೆ ಶುಲ್ಬ ಸೂತ್ರಗಳು ರಚಿತವಾದ ಅವಧಿಗಳೇ ಬೇರೆ ಬೇರೆ. ಅಂದರೆ ದಕ್ಷಿಣಾಗ್ನಿ ಎಂಬುದು ಒಂದೇ ಸ್ಥಳಗಳಲ್ಲಿ ಬೇರೆ ಬೇರೆ ಅವಧಿಗಳಲ್ಲಿ ರಚಿತವಾದ ಗ್ರಂಥಗಳು. ಇನ್ನೊಂದು ಸರಳ ವಿಶ್ಲೇಷಣೆಯನ್ನೂ ಮಾಡಬಹುದು. ನಾಗರಿಕರು ದಕ್ಷಿಣಕ್ಕೆ ವಲಸೆ ಬರುತ್ತಿದ್ದರು ಎಂದು ಭಾವಿಸೋಣ. ಅಲ್ಲಲ್ಲಿ ದಕ್ಷಿಣಾಗ್ನಿಯನ್ನು ಸ್ಥಾಪಿಸಲು ಅಗತ್ಯವಾದ ಕಾರಣ ಸೂತ್ರಗಳು ಮಾರ್ಪಾಡಾದವು.

ಹರಪ್ಪ ಸಂಸ್ಕೃತಿಯಲ್ಲಿ ಇದಕ್ಕೆ ಪೂರಕವಾಗುವ ಯಾವುದೇ ಮಾಹಿತಿಯನ್ನು ಕಂಡುಹಿಡಿಯುವುದು ಇದುವರೆಗೆ ಸಾಧ್ಯವಾಗಿಲ್ಲ. ಆದ್ದರಿಂದ 'ಬಹುಶಃ', 'ಆದರೆ' ಇಂತಹ ಪದಗಳನ್ನು ಈ ಸಿದ್ಧಾಂತಗಳಿಂದ ತೆಗೆದುಹಾಕುವ ಹಾಗಿಲ್ಲ. ಚಂದ್ರನ ಚಲನೆಯ ಗುರುತುಗಳೂ ನೇರವಾಗಿ ಲಭ್ಯವಾಗಿಲ್ಲ. ಪಶುಪತಿ ಎಂದು ಕರೆಯುವ ಚಿತ್ರದ ತಲೆಯ ಮೇಲಿರುವ ಕೊಂಬಿನಾಕಾರದಲ್ಲಿ ಇರುವುದು ಚಂದ್ರನ ಕಲೆಗಳು ಎಂದು ಕೆಲವರು ಹೇಳಿದರೆ, ಶುಕ್ರಗ್ರಹದ ಕಲೆಗಳು ಎಂದು ಕಾಮೇಶ್ವರ ರಾವ್ ವಾದಿಸುತ್ತಾರೆ. ಅಂದಿನ ಜನ ಬರಿಗಣ್ಣಿನಿಂದಲೇ ಶುಕ್ರದ ಕಲೆಗಳನ್ನು ಗುರುತಿಸಬಲ್ಲವರಾಗಿದ್ದರು ಎಂಬ ವಾದವೂ ಇದೆ. ಶುಕ್ರಗ್ರಹ ಮುಂಜಾವನ್ನೋ ಮುಸ್ಸಂಜೆಯನ್ನೋ ಸೂಚಿಸುವ ಕಾರಣ ಅದು ಅವರಿಗೆ ಬಹಳ ಪರಿಚಿತವಾಗಿದ್ದಿರಬೇಕು ಎಂಬುದೇ ಈ ವಾದದ ತಿರುಳು.

ಗ್ರಹಣವನ್ನು ಸೂಚಿಸುವ ಯಾವುದೇ ಬರಹ ಅಲ್ಲಿಲ್ಲ. ಇದು ಬಹಳ ಆಶ್ಚರ್ಯವನ್ನೇ ಉಂಟುಮಾಡಿದೆ. ಏಕೆಂದರೆ, ೧೦೦೦೦ ವರ್ಷ ಹಳೆಯದಾದ ಬಂಡೆಯ ಮೇಲಿನ ಚಿತ್ರಗಳಲ್ಲಿ ನಕ್ಷತ್ರ, ಸೂರ್ಯಗಳನ್ನು ಹೋಲುವ ಚಿತ್ರವಿದೆ. ಇದು ಕಾಶ್ಮೀರದ ಬುರ್ಝ್‌ಹೋಂನಲ್ಲಿ ದೊರಕಿದೆ.

ವೃತ್ತಾಕಾರದ ಒಂದು ಭಾವಿಯಂತಹ ರಚನೆ ನೆರಳ ಗಡಿಯಾರ ಇರಬಹುದು. ಹಾಗೆಯೇ ಇನ್ನೊಂದು ಸಣ್ಣ ಉರುಳೆಯಂತಹ ಉಪಕರಣ ಬಹುಶಃ ದಿಕ್ಸೂಚಿ ಇರಬಹುದು – ಹೀಗೆ ಹೊಸ ಹೊಸ ಅಂಶಗಳು ಪ್ರಕಟವಾಗುತ್ತಿವೆ. ಇತ್ತೀಚೆಗೆ ಲೋಥಲ್ ಮತ್ತು ಧೋಲಾವಿರದ ನಕ್ಷೆಗಳನ್ನೂ ತಯಾರಿಸಿದ್ದು ಅವು ಅಂದಿನ ಉತ್ತರ – ದಕ್ಷಿಣ ದಿಕ್ಕುಗಳನ್ನು ಯಥಾವತ್ತಾಗಿ ಸೂಚಿಸುತ್ತವೆ ಎಂದು ತೋರಿಸಿಕೊಡಲಾಗಿದೆ. ಧೋಲಾವಿರದ ಅಕ್ಷಾಂಶ, ೨೩.೮೮ ಲೋಥಲ್‌ನ ಅಕ್ಷಾಂಶ, ೨೨.೫೨ ಇದು ಭೂಮಿಯ ಅಕ್ಷದ


**ಕಾಶ್ಮೀರದ ಬುರ್ಝ್‌ಹೋಂನಲ್ಲಿ ಕಂಡುಬಂದ ಬಂಡೆಯ ಮೇಲಿನ ಚಿತ್ರ; ಇದನ್ನು ಕೆಲವರು ಸೂರ್ಯ ಚಂದ್ರ ಎಂದಿದ್ದಾರೆ; ಕೆಲವರು ಸೂಪರ್‌ನೋವಾ ಎಂದಿದ್ದಾರೆ; ಕೆಲವರು ಪುನರ್ವಸು ನಕ್ಷತ್ರಗಳು ಎಂದೂ ಹೇಳುತ್ತಾರೆ**


**ಕುದುರೆಯನ್ನು ಹೋಲುವ ಪ್ರಾಣಿಯ ಮೊಹರು**




*ಇತ್ತೀಚೆಗೆ (೨೦೧೬) (ಪಳೆಯುಳಿಕೆಗಳ ಅಧ್ಯಯನದ ಆಧಾರದ ಮೇಲೆ) ಪ್ರಕಟವಾದ ಶಿವತೇರಿಯಂ ಗಿಗಾಂಟಿಯುಂ ಎಂಬ ಪ್ರಾಣಿಯ ಪುನರ್ನಿರ್ಮಿತ ಆಕಾರ*



**ಇಶ್ತರ್ ಪ್ರವೇಶ ದ್ವಾರದಲ್ಲಿರುವ ಬ್ಯಾಬಿಲೋನಿಯದ ಮೊಹರು**

ಓರೆಕೋನದ ಸಣ್ಣ ವ್ಯತ್ಯಾಸವನ್ನೂ ಸೂಚಿಸುತ್ತಿರಬಹುದು.

ಹಾಗಿದ್ದಲ್ಲಿ ಹರಪ್ಪದ ನಾಗರಿಕರಿಗೆ ಖಗೋಳ ಜ್ಞಾನ ಎಷ್ಟಿತ್ತು ಎಂದು ನಿರ್ಧರಿಸುವುದು ಹೇಗೆ? ಇದಕ್ಕೆ ನಗರದ ನಕ್ಷೆಯನ್ನೇ ಬಳಸಿ ಉತ್ತರ, ದಕ್ಷಿಣ ಗುರುತಿಸಲು ಅವರು ಧ್ರುವ ನಕ್ಷತ್ರವನ್ನು ಬಳಸಿರಬೇಕು ಎಂದು ಒಂದು ವಾದವಿದೆ. ಆದರೆ ಅದು ಸರಿಯಲ್ಲ. ಏಕೆಂದರೆ ಇಂದು ನಾವು ಗುರುತಿಸುವ ಧ್ರುವ ನಕ್ಷತ್ರ ಆಗ ಧ್ರುವದಿಂದ ಬಹಳ ದೂರದಲ್ಲಿತ್ತು. ಶತಮಾನಗಳ ಹಿಂದಿನಿಂದ ಸುಮಾರು ನೂರು ವರ್ಷಗಳ ಹಿಂದಿನವರೆಗೂ ಕಟ್ಟಡಗಳ ನಿರ್ಮಾಣಕ್ಕೆ ಮುಂಚೆ ನಿಖರವಾಗಿ ಪೂರ್ವ – ಪಶ್ಚಿಮವನ್ನು ಕಂಡುಕೊಳ್ಳಲು "ಶಂಕು ಸ್ಥಾಪನೆ" ಮಾಡುತ್ತಿದ್ದರು. (ಇದು ಇಂದು ನೆಡುವ ಕೇವಲ ಶಿಲಾಫಲಕ ಅಲ್ಲ; ಸೂರ್ಯನ ಚಲನೆಯನ್ನು ಗುರುತಿಸುವ ವಿಧಾನ). ಅಂದರೆ ಸೂರ್ಯೋದಯದ ದಿಕ್ಕು ದಿನದಿನಕ್ಕೆ ಬದಲಾಗುತ್ತದೆ ಎಂದು ಖಚಿತವಾಗಿ ತಿಳಿದಿದ್ದರು. ಸೂರ್ಯೋದಯದಿಂದ ಸೂರ್ಯಾಸ್ತಕ್ಕೆ (ಸೂರ್ಯನ ಉತ್ತರ – ದಕ್ಷಿಣ ಚಲನೆಯ ಕಾರಣ) ಸಣ್ಣ ವ್ಯತ್ಯಾಸವಿರಬೇಕಲ್ಲವೇ? ಇದು ಮಾನಸಾರ ಎಂಬ ಗ್ರಂಥದ ಒಂದು ಶ್ಲೋಕದಲ್ಲಿ ಅಡಗಿರುವುದನ್ನು ಜಪಾನಿನ ಯುಕಿಯೋ ಒಹಾಷಿ ಅವರು ತೋರಿಸಿಕೊಟ್ಟಿದ್ದಾರೆ. ಇಷ್ಟು ನಿಖರತೆಯನ್ನು ಸಾಧಿಸಿದ್ದಾದರೂ ಹೇಗೆ? ಇದು ಬಹುಶಃ ಹರಪ್ಪ ಕಾಲದಿಂದಲೂ ಬಂದಿರುವ ತಂತ್ರಜ್ಞಾನವಾಗಿರಬಹುದು. ಆದ್ದರಿಂದ ಧ್ರುವವನ್ನು ಸೂಚಿಸುವ ಒಂದು ನಕ್ಷತ್ರ ಇಲ್ಲದೇ ಹೋದರೂ ಪೂರ್ವ – ಪಶ್ಚಿಮ ದಿಕ್ಕುಗಳನ್ನು ಬಹಳ ನಿಖರವಾಗಿ ಗುರುತಿಸುವ ಉಪಾಯ ಅವರಿಗೆ ಗೊತ್ತಿದ್ದಿರಲೇಬೇಕು.

ಸಪ್ತರ್ಷಿ ಮಂಡಲದ ಏಳು ನಕ್ಷತ್ರಗಳು ಅವರಿಗೆ ಪರಿಚಿತವಾಗಿದ್ದಿರಬೇಕು ಎಂಬುದು ನನ್ನ ಊಹೆ. ಏಕೆಂದರೆ ಸಪ್ತರ್ಷಿಗಳ ಉದಯ ಯಾವ ನಕ್ಷತ್ರದ ಜೊತೆ ಆಗುತ್ತಿತ್ತು ಎಂಬುದು ಬಹಳ ಸ್ವಾರಸ್ಯಕರವಾದ ಅಂಶ. ಇದನ್ನು ಆರ್ಯಭಟ, ವರಾಹಮಿಹಿರ, ಬ್ರಹ್ಮಗುಪ್ತ ಇವರು ಚರ್ಚಿಸಿದ್ದಾರೆ. ಆದ್ದರಿಂದ ಸಪ್ತರ್ಷಿಗಳು ಆಯಾ ನಕ್ಷತ್ರಕ್ಕೆ ಬದಲಾದಾಗ ಒಂದು ಯುಗವೇ ಹೊಸದಾಗಿ ಆರಂಭವಾಯಿತೆಂಬ ಎಣಿಕೆ ಇದೆ. ಇದರ ಅರ್ಥ ಬಹಳ ಗಹನವಾದದ್ದು. ಸಪ್ತರ್ಷಿಗಳ ಉದಯವಾಗುವಾಗಲೇ ಇಪ್ಪತ್ತೇಳು ನಕ್ಷತ್ರಗಳಲ್ಲಿನ ಯಾವ ನಕ್ಷತ್ರ ಉದಯವಾಗುತ್ತಿತ್ತು? – ಇದೇ ಆ "ಯುಗದ" ಸೂಚಕ. ಈ ಬಗೆಯ ಕಾಲಗಣನೆ ಕಾಶ್ಮೀರದಲ್ಲಿ ಪ್ರಚಲಿತವಿತ್ತು ಎಂಬುದು ಕಲ್ಹಣನ ರಾಜತರಂಗಿಣಿಯಿಂದ ತಿಳಿದುಬರುತ್ತದೆ. ಆ ಗ್ರಂಥದ ಸಹಾಯದಿಂದ ಕಲಿವರ್ಷಗಳು ಮತ್ತು ಸಪ್ತರ್ಷಿ ಯುಗದ ಪರಸ್ಪರ ಹೊಂದಾಣಿಕೆಯನ್ನೂ ಮಾಡಬಹುದು. ಆದರೆ ಹರಪ್ಪ ಕಾಲಕ್ಕೆ ಇದನ್ನು ವಿಸ್ತರಿಸಲು ನಮಗೆ ಏನಾದರೂ ಸುಳಿವು ಬೇಕೇ ಬೇಕು. ಆದರೆ ಸಪ್ತರ್ಷಿಗಳ ಚಿಹ್ನೆ ಏಕೆ ಎಲ್ಲೂ ಮೂಡಿಲ್ಲ?

**ಪುನಃ ನಾವು ಹಳೆಯ ಪ್ರಶ್ನೆಗೇ ಹಿಂದಿರುತ್ತಿದ್ದೇವೆಯೇ?**

ಈಚಿನ ದಿನಗಳಲ್ಲಿ ಇನ್ನೊಂದು ಹೊಸ ಅಂಶ ಚರ್ಚೆಯಾಗುತ್ತಿದೆ. ಹರಪ್ಪದ ಒಂದು ಮೊಹರಿನ ಮೇಲೆ ಒಂದು ಪ್ರಾಣಿಯ ಚಿತ್ರವಿದೆ. ಈ ಪ್ರಾಣಿ ಕುದುರೆಯೂ ಅಲ್ಲ, ಗೋವೂ ಅಲ್ಲ. ಅದರ ಹೆಸರು (ವೇದಗಳಲ್ಲಿ ಕೇಳಿಬರುವ) ಗೋಮೃಗ ಎಂಬುದೊಂದು ಹೊಸ ವಾದ ಕೇಳಿಬರುತ್ತಿದೆ. ಆ ಮೃಗ ಈಗ ಅಳಿದುಹೋಗಿದೆಯಂತೆ. ಇದರ ಪಳೆಯುಳಿಕೆಯನ್ನು ಶಿವಾಲಿಕ್ ಪರ್ವತ ಶ್ರೇಣಿಯಲ್ಲಿ ೧೮೩೬ರಲ್ಲಿ ಪತ್ತೆ ಮಾಡಿದ ಬ್ರಿಟಿಷರು ಅದಕ್ಕೆ ಜಿರಾಫ್ ವರ್ಗಕ್ಕೆ ಸೇರಿದ ಶಿವತೇರಿಯಂ ಗಿಗಾಂಟಿಯುಂ ಎಂದು ಶಿವನ ಹೆಸರನ್ನೇ ಇಟ್ಟಿದ್ದರು. ಆಶ್ಚರ್ಯವೆಂದರೆ ಇದನ್ನೇ ಹೋಲುವ ಮೃಗದ ಚಿತ್ರ ಬ್ಯಾಬಿಲೋನಿಯದ ಇಶ್ತರ್ ದ್ವಾರದಲ್ಲಿ ಕಂಡುಬರುತ್ತದೆ. ಈ ಜೀವಿಯ ಚಿಹ್ನೆ ಬ್ಯಾಬಿಲೋನಿಯನ್ನರ ಕಾಲದಲ್ಲಿಯೂ ಇದ್ದಿತು ಎನ್ನುವುದಾದರೆ ಅದು ಆ ಪ್ರಾಣಿಯ ಕಾಲದ ಗರಿಷ್ಠ ಮಿತಿಯನ್ನು ಸೂಚಿಸುತ್ತದೆ. ಇಶ್ತರ್ ಗೋಡೆಯ ಕಾಲವನ್ನು ಕ್ರಿ. ಪೂ. ೬ನೆಯ ಶತಮಾನ ಎನ್ನುತ್ತಾರೆ. ಆ ಗೋಡೆಯ ಮೇಲೆ ಕುದುರೆ, ಸಿಂಹಗಳ ಚಿತ್ರಗಳೂ ಇವೆ. ಆದರೆ ಈ ಮೃಗ ಆಗ ಇದ್ದಿತೋ ಅಥವಾ ಕಾಲ್ಪನಿಕ ಪ್ರಾಣಿಯೋ ಎಂಬ ಅನುಮಾನವನ್ನು ಅನೇಕರು ವ್ಯಕ್ತಪಡಿಸಿದ್ದಾರೆ. ಏಕೆಂದರೆ ಅದಕ್ಕೆ ಹಲ್ಲಿ / ಮೊಸಳೆಗಳಿಗಿರುವಂತೆ ಕಾಲುಗಳಿವೆ. ಅವರ ಪುರಾಣಗಳಲ್ಲಿ ಆ ಪ್ರಾಣಿಗೆ "ನಡೆಯುವ ಹಾವು" ಎಂಬ ಅರ್ಥ ಬರುವ ಹೆಸರಿದೆ.

ಚಟ್ಟೋಪಾಧ್ಯಾಯ ಅವರು ಕೆಲವು ಸಿದ್ಧಾಂತಗಳನ್ನು ನಿರ್ದಾಕ್ಷಿಣ್ಯವಾಗಿ ಅಸಂಬದ್ಧವೆಂದು ತಳ್ಳಿಹಾಕಿದ್ದಾರೆ. ಅವುಗಳಲ್ಲೊಂದು ಕೃತ್ತಿಕಾ ನಕ್ಷತ್ರ ಕುರಿತಾದದ್ದು. ತಮಿಳಿನಲ್ಲಿ 'ಆರ್‌ಮೀನ್' ಎಂಬ ಹೆಸರಿರುವುದರಿಂದ ಪಶುಪತಿಯ ಪಕ್ಕ ಇರುವ ಆರು ಗೆರೆಗಳ ಚಿಹ್ನೆಯೂ ಕೃತ್ತಿಕೆಯದು ಎಂದು ಅಲೋಕ್ ಅವರ ವಾದ; ಜೊತೆಗೆ ವೇದಗಳಲ್ಲಿ ಕೃತ್ತಿಕೆಯು ಪೂರ್ವದಲ್ಲಿತ್ತು ಎಂಬುದನ್ನು ಉಲ್ಲೇಖಿಸಿದ್ದಾರೆ. (ಅವರು ಕೃತ್ತಿಕೆಯು ಪೂರ್ವದಲ್ಲಿ ಉದಯಿಸುತ್ತಿತ್ತು ಎಂಬ ಅಂಶವನ್ನೇ ವಿಸ್ತಾರವಾಗಿ ಚರ್ಚಿಸಿ, ಇಬ್ಬರು ಖಗೋಳಜ್ಞರ ಅಭಿಪ್ರಾಯಗಳನ್ನು ಸೇರಿಸಿದ್ದಾರೆ.)

**ಇನ್ನೊಂದು ವಾದ :** ಮೊಹೆಂಜೊದಾರೊನಲ್ಲಿರುವ ದೊಡ್ಡ ಸ್ನಾನಗೃಹ (ದಿ ಗ್ರೇಟ್ ಬಾತ್) ವಾಸ್ತವದಲ್ಲಿ ಒಂದು ಖಗೋಳ ವೀಕ್ಷಣಾಲಯವಾಗಿತ್ತು ಎನ್ನುವುದು. ಯಾವುದೇ ಅಂಶ ಇದನ್ನು ಪುಷ್ಟೀಕರಿಸುವುದಿಲ್ಲ.

ಹರಪ್ಪ ಅನೇಕ ರಹಸ್ಯಗಳನ್ನು ತನ್ನ ಗರ್ಭದಲ್ಲಿ ಅಡಗಿಸಿಟ್ಟುಕೊಂಡಿದೆ. ದೇವಿಪ್ರಸಾದ್ ಚಟ್ಟೋಪಾಧ್ಯಾಯ ಅವರು, ಭಾರತೀಯ ಇತಿಹಾಸವನ್ನು ಅಲ್ಲಿಂದ ಆರಂಭಿಸಿ ಅನೇಕ ಹೊಸ ಹೊಸ ಚಿಂತನೆಗಳನ್ನು ಹುಟ್ಟುಹಾಕಿದ್ದಾರೆ. ಅವರನ್ನು ಕೃತಜ್ಞತೆಯಿಂದ ಸ್ಮರಿಸೋಣ.

ದೇವಿಪ್ರಸಾದ್ ಚಟ್ಟೋಪಾಧ್ಯಾಯ ಅವರ ಮಹತ್ವದ ಕೃತಿಗಳನ್ನು ಪರಿಚಯಿಸಿಕೊಟ್ಟದ್ದಕ್ಕಾಗಿ ಡಾ॥ ಜಿ. ರಾಮಕೃಷ್ಣ ಅವರಿಗೆ ಧನ್ಯವಾದಗಳು.

*(೨೦೧೭ರ ಡಿಸೆಂಬರ್ ೨೫ರಂದು ಕನ್ನಡ ಸಾಹಿತ್ಯ ಪರಿಷತ್‌ನಲ್ಲಿ ದೇವಿಪ್ರಸಾದ್ ಚಟ್ಟೋಪಾಧ್ಯಾಯ ಅವರ ಜನ್ಮಶತಾಬ್ದಿಯ ಸಂದರ್ಭದ ಭಾಷಣದ ಸಾರಾಂಶ)*

**ಡಾ॥ ಬಿ. ಎಸ್. ಶೈಲಜಾ**
ಜವಾಹರಲಾಲ್ ನೆಹರು ತಾರಾಲಯ, ಟಿ. ಚೌಡಯ್ಯ ರಸ್ತೆ, ಹೈಗ್ರೌಂಡ್ಸ್
ಬೆಂಗಳೂರು – ೫೬೦ ೦೦೧

# ಮಹದೇವಪುರದ ಎರಡು ಅಪ್ರಕಟಿತ ಶಿಲಾಶಾಸನಗಳು

**ಡಾ॥ ಎಂ. ಎಸ್. ಮಹದೇವ**

ಮಂಡ್ಯ ಜಿಲ್ಲೆ, ಶ್ರೀರಂಗಪಟ್ಟಣ ತಾಲ್ಲೂಕು, ಮಹದೇವಪುರ ಗ್ರಾಮದ ಕಾವೇರಿ ನದಿ ತೀರದಲ್ಲಿ, ಪೂರ್ವ ದಿಕ್ಕಿಗೆ ಕಾಶಿ ವಿಶ್ವೇಶ್ವರ ದೇವಾಲಯವಿದೆ. ಈ ದೇವಾಲಯವನ್ನು ಹೊಯ್ಸಳ ದೊರೆ ವೀರ ಸೋಮೇಶ್ವರನು ಕ್ರಿ. ಶ. ೧೨೪೯ (ಸುಮಾರು ೧೨೩೫–೫೩)ರಲ್ಲಿ ನಿರ್ಮಿಸಿದನೆಂದು ದೇವಾಲಯದಲ್ಲಿ ಕೆತ್ತಲಾಗಿರುವ ಶಾಸನದಿಂದ ತಿಳಿಯುತ್ತದೆ. ದೇವಾಲಯವನ್ನು ಎತ್ತರದ ಜಗತಿಯ ಮೇಲೆ ನಿರ್ಮಿಸಲಾಗಿದೆ. ಗರ್ಭಗುಡಿ, ಪ್ರದಕ್ಷಿಣಾಪಥ, ನಕ್ಷತ್ರಾಕಾರದ ಮೇಲ್ಛಾವಣಿಗಳಿವೆ. ವಾಸ್ತುಶೈಲಿಯ ದೃಷ್ಟಿಯಿಂದ ಇದು ಹೊಯ್ಸಳ ದೇವಾಲಯಗಳ ಮಾದರಿಯಲ್ಲಿದೆ. ದೇವಾಲಯದಲ್ಲಿರುವ ಶಿವಲಿಂಗವನ್ನು ಕಾಶಿಯಲ್ಲಿ ಮಾಡಿಸಿ ಒಂಟೆಯ ಮೇಲೆ ತಂದು ಇಲ್ಲಿ ಪ್ರತಿಷ್ಠಾಪಿಸಲಾಗಿದೆ ಎಂಬ ಐತಿಹ್ಯವಿದೆ. ಗರ್ಭಗೃಹದಲ್ಲಿ ಶಿವಲಿಂಗ, ಅಂತರಾಳದಲ್ಲಿ ನಂದಿ ವಿಗ್ರಹಗಳಿವೆ. ಹೊರಾಂಗಣವು ಚಚ್ಚೌಕಾಕಾರದಲ್ಲಿದ್ದು, ದೇವಾಲಯದ ಹೆಬ್ಬಾಗಿಲಿನಲ್ಲಿ ಸುಂದರವಾದ ಗೋಪುರವಿದೆ. ದೇವಾಲಯದ ಮುಂಭಾಗದಲ್ಲಿ ಎತ್ತರವಾದ ಕಂಬವಿದೆ. ಒಳಗಡೆ ಪ್ರವೇಶಿಸುತ್ತಿದ್ದಂತೆ ಎಡಭಾಗದಲ್ಲಿ ಬೃಹತ್ತಾದ, ಕುಸುರಿ ಕೆಲಸದಿಂದ ಕಂಡರಿಸಿದ ಗಣಪತಿಯ ವಿಗ್ರಹವಿದೆ. ಬಲಭಾಗದಲ್ಲಿ ಅನ್ನಪೂರ್ಣೇಶ್ವರಿ ಅಮ್ಮನವರ ಮನೋಹರವಾದ ವಿಗ್ರಹವಿದ್ದು, ಅದರ ನಾಸಿಕದಲ್ಲಿರುವ ಮೂಗುತಿ ಫಳ ಫಳನೆ ಹೊಳೆಯುತ್ತದೆ. ಈ ಮೂಗುತಿಯನ್ನು ಹಿಂದೆ ಭಕ್ತನೊಬ್ಬ ಕೊಲ್ಲಾಪುರದಿಂದ ತಂದು ಜಗನ್ಮಾತೆಗೆ ಕಾಣಿಕೆಯಾಗಿ ಅರ್ಪಿಸಿದನೆಂದು ಗ್ರಾಮಸ್ಥರು ಹೇಳುತ್ತಾರೆ.

**ದೇವಾಲಯದ ಅಧಿಷ್ಠಾನದ ತ್ರಿಪಟ್ಟಕುಮುದದ ಮೇಲ್ಭಾಗದಲ್ಲಿ ಕೆತ್ತಲಾಗಿರುವ ಶಾಸನ ಹೀಗಿದೆ:**

**೧ನೇ ಶಾಸನ**

*ಶ್ರೀ ಬಾರ್ಯ್ಯ ನಿ xxxxxxxxxxxನು ಶ್ರೀ ವೀರ ಸೋಮೇಶ್ವರ ದೇವರಸೊಡೆಯ(ರು) ರಾಜ್ಯದ ಕಣ್ಣಾನೂರಲ್ಲಿ ರಾಜ್ಯಂಗೆಯ್ಯುತ್ತಲಿರಲು ಸಕವರ್ಷ ೧೧೭೧ ಸೌಮ್ಯ ಸಂವತ್ಸರದ ವೈಶಾಖ ಬಾ ಅಮಾವಾಸ್ಯೆ ರೋಹಿಣಿ ನಕ್ಷತ್ರ xx xxxxxxxxxxxxxxxxxxದ ಹದಿನಾಲ್ಕು ನಾಡಿನೊಳಗಣ ಮಯ್ಸುನಾಡ xx ಬೂರಾದ ಶ್ರೀರಂಗಪುರದಲು॥ ಶ್ರೀಮನು ಮಹಾವಡ್ಡ ಬ್ಯವಹಾರಿ x x x ಯ ನಾಗದೇವ(ತ್ಸ) ಯಾಳ ಮುಖ್ಯ... ಮುತ್ತಿನ xxx ವಲು ಶ್ರೀ ವಿಶ್ವೇಶ್ವರ ದೇವರನು ಪ್ರತಿಷ್ಠೆಯಂ ಮಾಡಿ ಈ ದೇವಾಲ್ಯವನು ಮಾಡಿಸಿ ದೇವರ ನಿತ್ಯ ನಿವೇದ್ಯಕ್ಕೆ ಈ ವೂರ xxxxxxxxxxx ಕಾಲ್ವೆಯ ಗದ್ದ... ಪಡುವಲು ಮೂಡು ಚಂದಯ್ಯನ ಗದ್ದೆಯ ಕಡುಹಿಂ ಬಡಗಲುಬ್ಬೆಯಂ ಮೂಡಲು ಬಲ್ಲಾಳ ಭಟ್ಟರ ಗದ್ದೆಯ ಕಡಹಿಂ ತೆಂಕಲು ಕಂಬ॥ ೩೨೦/ಕಂ। ಬಿತ್ತುವಟ್ಟಸ ೧೦॥ ಈ ಕ್ಷೇತ್ರದ ಕ್ರಯಕ್ಕೆಯುಂ ಆಚಂದ್ರಾರ್ಕ್ಕತಾರಂಬರಲು ತೆ ವ ಸಿದ್ದಾಯಕ್ಕೆಯುಂ ಸಲವಾಗಿಯೀ ವೂರ ಆಶೇಷ ಮಹಾಜನರ್ಕ್ಕೆ ಹೊಂನ್ನ ಕೊಟ್ಟು ಮಣ್ಣ ಕೊಂಡು ಸರ್ವನಮಸ್ಯವಾಗಿ ಬಿಟ್ಟದತ್ತಿ॥ ಹುಣಿಸೆಯ*

**ಈ ದೇವಾಲಯದ ದಕ್ಷಿಣ ಮಂಟಪದ ಕಂಬದಲ್ಲಿ ಲಕ್ಷ್ಮೀನರಸಿಂಹಸ್ವಾಮಿ ಮೂರ್ತಿಯನ್ನು ಕೆತ್ತಲಾಗಿದೆ. ಇದನ್ನು ಶಿಲ್ಪಿ ಕೆತ್ತಿದ್ದಲ್ಲ ಎಂಬ ಐತಿಹ್ಯವೂ ಇದೆ. ಸುಮಾರು ಇಪ್ಪತ್ತೈದು ವರ್ಷಗಳ ಹಿಂದೆ ಈ ಕಂಬದಲ್ಲಿ ಕೇವಲ ರೇಖೆಗಳಿದ್ದು, ಕಾಲಕ್ರಮೇಣ ಈ ರೇಖೆಗಳು ವಿನ್ಯಾಸಗೊಳ್ಳುತ್ತಾ ಲಕ್ಷ್ಮೀನರಸಿಂಹಸ್ವಾಮಿಯ ಸ್ಫುಟವಾದ ಆಕಾರ ರೂಪುಗೊಂಡಿತೆಂದು ದೇವಾಲಯದ ಅರ್ಚಕರಾಗಿರುವ ಶ್ರೀ ಡಿ. ಎಸ್. ವೆಂಕಟೇಶಮೂರ್ತಿಯವರು ಹೇಳುತ್ತಾರೆ. ಕಂಬದಲ್ಲಿ ಲಕ್ಷ್ಮೀನರಸಿಂಹಸ್ವಾಮಿಯ ಆಕಾರದ ಪ್ರತಿಮೆಯ ಚಿತ್ರವು ವರ್ಷದಿಂದ ವರ್ಷಕ್ಕೆ ಸ್ಫುಟವಾಗಿ ಕಾಣುತ್ತಿದೆ ಎಂಬ ನಂಬಿಕೆ ಇದೆ.**



*ಹಳ್ಳದ (ಅಡ್ಡ)... ಕಾಲುಉಮಂ ಮೂಡಲು ಮಾಡ x x ತಲೆಯಿಂ ತೆಂಕಲು ಹೊಳೆಯ ಪಡುವಲು ಕಂಬದವೊಳಗಾಗಿ ೭೫ ಸರ್ವನಮಸ್ಯ॥ ಶ್ರೀಂದಾ ಹೆ ಕಾಅಂ ತೆಂಕಲು xxxxxxxxxx*

ಶಾಸನದಲ್ಲಿ ಉಕ್ತವಾಗಿರುವ ಕಾಲ ಶಕವರ್ಷ ೧೧೭೧, ಸೌಮ್ಯ ಸಂವತ್ಸರದ ಬ ಅಮಾವಾಸ್ಯೆ ರೋಹಿಣಿ ನಕ್ಷತ್ರ. ಇದು ಸರಿಯಾಗಿ ಕ್ರಿ.ಶ. ೧೨೪೮–೧೨೪೯ಕ್ಕೆ ಹೊಂದುತ್ತದೆ. ಅಂದು ಶುಕ್ರವಾರವಾಗಿತ್ತು. ಶಾಸನವು ತ್ರುಟಿತವಾಗಿರುವುದರಿಂದ ವಾರದ ಉಲ್ಲೇಖ ಸ್ಪಷ್ಟವಾಗಿಲ್ಲ.

ಶಾಸನವು ಹೊಯ್ಸಳರ ವೀರಸೋಮೇಶ್ವರನ (೧೨೩೫–೫೩) ಕಾಲಕ್ಕೆ ಸೇರಿದೆ. ವೀರಸೋಮೇಶ್ವರನು ಕಣ್ಣಾನೂರಿನಿಂದ ಆಳ್ವಿಕೆ ಮಾಡುತ್ತಿದ್ದ ಸಂದರ್ಭದಲ್ಲಿ ೧೨ ನಾಡಿನೊಳಗಾದ ಶ್ರೀರಂಗಪುರದಲ್ಲಿ ಒಬ್ಬ ದೊಡ್ಡವಡ್ಡ ವ್ಯವಹಾರಿ (ವೃದ್ಧ ವ್ಯಾಪಾರಸ್ಥ) ಪೇಜ್ಯ(ದ್ಯ)ಯ ಮತ್ತು ಕೆಲವು ಪ್ರಮುಖರು ಸೇರಿ ಶ್ರೀ ವಿಶ್ವೇಶ್ವರ ದೇವರ ವಿಗ್ರಹವನ್ನು ಪ್ರತಿಷ್ಠೆಮಾಡಿ ದೇವರ ನಿತ್ಯ ನೈವೇದ್ಯಕ್ಕೆ ಕೆಲವು ಗದ್ದೆಗಳನ್ನು ದಾನವಾಗಿ ಬಿಟ್ಟುಕೊಟ್ಟಿದ್ದಾರಂತೆ. ಈ ಶಾಸನವು ಕೆಲವೆಡೆ ತ್ರುಟಿತಗೊಂಡಿದೆ. ಶಾಸನದ ಮುಂದುವರಿದ ಭಾಗದಲ್ಲಿ ಆಶೇಷ ಮಹಾಜನಗಳು ಹೊನ್ನನ್ನು ಕೊಟ್ಟು ಭೂಮಿಯನ್ನು ಕೊಂಡು ಸರ್ವನಮಸ್ಯವಾಗಿ ಆ ಭೂಮಿಯನ್ನು ದೇವಾಲಯಕ್ಕೆ ಬಿಟ್ಟರೆಂಬ ವಿಚಾರ ಉಲ್ಲೇಖಗೊಂಡಿದೆ.

**೨ನೇ ಶಾಸನ**

*ರಾಜಾಧಿರಾಜ ಶ್ರೀ ಪರಮೇಶ್ವರಂ ಪರಮ ಭಟ್ಟಾರಕಂ xxxxxxxxxx ಣಗಣ್ಡ ಬೆಸಣಕೆ... ಪ್ರಚಣ್ಡನಸಹಾಯಶೂರ ಸನಿವಾರ ಸಿದ್ದಿಗಿರಿ ದುರ್ಗಮಲ್ಲ x x x x x* ಎಂದಿದ್ದು, ಮುಂದಿನ ಬರಹ ತ್ರುಟಿತಗೊಂಡಿದೆ.

೨ನೆಯ ಶಾಸನದಲ್ಲಿ 'ರಾಜಾಧಿರಾಜ ಶ್ರೀ ಪರಮೇಶ್ವರ ಪರಮಭಟ್ಟಾರಕಮ್... ಸನಿವಾರಸಿದ್ಧಿ ಗಿರಿದುರ್ಗಮಲ್ಲ' ಇತ್ಯಾದಿ ಬಿರುದಾವಳಿಗಳಿದ್ದು ಇವೆಲ್ಲವೂ ಹೊಯ್ಸಳರಿಗೆ ಅನ್ವಯಿಸುವ ಬಿರುದುಗಳು.

ಈ ದೇವಾಲಯದ ದಕ್ಷಿಣ ಮಂಟಪದ ಕಂಬದಲ್ಲಿ ಲಕ್ಷ್ಮೀನರಸಿಂಹಸ್ವಾಮಿ ಮೂರ್ತಿಯನ್ನು ಕೆತ್ತಲಾಗಿದೆ. ಇದನ್ನು ಶಿಲ್ಪಿ ಕೆತ್ತಿದ್ದಲ್ಲ ಎಂಬ ಐತಿಹ್ಯವೂ ಇದೆ. ಸುಮಾರು ಇಪ್ಪತ್ತೈದು ವರ್ಷಗಳ ಹಿಂದೆ ಈ ಕಂಬದಲ್ಲಿ ಕೇವಲ ರೇಖೆಗಳಿದ್ದು, ಕಾಲಕ್ರಮೇಣ ಈ ರೇಖೆಗಳು ವಿನ್ಯಾಸ ಗೊಳ್ಳುತ್ತಾ ಲಕ್ಷ್ಮೀನರಸಿಂಹಸ್ವಾಮಿಯ ಸ್ಫುಟವಾದ ಆಕಾರ ರೂಪುಗೊಂಡಿತೆಂದು ದೇವಾಲಯದ ಅರ್ಚಕರಾಗಿರುವ ಶ್ರೀ ಡಿ. ಎಸ್. ವೆಂಕಟೇಶಮೂರ್ತಿಯವರು ಹೇಳುತ್ತಾರೆ. ಕಂಬದಲ್ಲಿ ಲಕ್ಷ್ಮೀನರಸಿಂಹಸ್ವಾಮಿಯ ಆಕಾರದ ಪ್ರತಿಮೆಯ ಚಿತ್ರವು ವರ್ಷದಿಂದ ವರ್ಷಕ್ಕೆ ಸ್ಫುಟವಾಗಿ ಕಾಣುತ್ತಿದೆ ಎಂಬ ನಂಬಿಕೆ ಇದೆ.




ಮೈಸೂರು ಅರಸರ ಆಸ್ಥಾನದಲ್ಲಿ ಸೇವೆ ಸಲ್ಲಿಸುತ್ತಿದ್ದ ಭಕ್ಷಿ ಭೀಮರಾಯ ಎಂಬುವವರ ಮನೆಯಲ್ಲಿ ನಾರಾಯಣಭಟ್ಟನೆಂಬ ಕರಣಿಕನಿದ್ದ. ಒಮ್ಮೆ ಮಹಾರಾಣಿಯ ವಜ್ರದುಂಗುರ ನಾಪತ್ತೆಯಾಯಿತು, ಅರಮನೆಯ ಊಳಿಗದವರಿಗೆ ನಾರಾಯಣಭಟ್ಟರ ಮೇಲೆ ಅನುಮಾನ ಬಂತು. ಭಕ್ಷಿ ಭೀಮರಾಯರು ಹಿಂದೆ ಮುಂದೆ ಆಲೋಚಿಸದೆ ನಾರಾಯಣಭಟ್ಟರನ್ನು ಆನೆಯಿಂದ ತುಳಿಸಿ ಸಾಯಿಸಿದರಂತೆ; ಆನೆಯಿಂದ ತುಳಿಸಲು ನಾರಾಯಣಭಟ್ಟರನ್ನು ನೆಲದ ಮೇಲೆ ಮಲಗಿಸಿದಾಗ ಅವನು ಕಣ್ಣಲ್ಲಿ ನೀರು ತಂದುಕೊಂಡು 'ವೇದಘೋಷಣೆಗಳು ಮೊಳಗುವ ಜಾಗದಲ್ಲಿ ಗೂಬೆಗಳ ಕರ್ಕಶ ಧ್ವನಿ ಕೇಳಲಿ' ಎಂದು ಶಾಪಕೊಟ್ಟನಂತೆ.

ಒಂದೆರಡು ದಿನಗಳ ಅನಂತರ ಮಹಾರಾಣಿಯವರು ಉಪ್ಪಿನಕಾಯಿ ಜಾಡಿಯ ಮುಚ್ಚಳ ತೆರೆದಾಗ ಅದರಲ್ಲಿ ಉಂಗುರ ಸಿಕ್ಕಿತಂತೆ. ಭಕ್ಷಿ ಭೀಮರಾಯರು ಪಶ್ಚಾತ್ತಾಪದ ದಳ್ಳುರಿಯಲ್ಲಿ ಬೆಂದರು. ಸರಪಳಿಯಿಂದ ಬಂಧಿತರಾಗಿ ನೆಲದ ಮೇಲೆ ಅಸಹಾಯಕತೆಯಿಂದ ಮಲಗಿದ್ದ ನಾರಾಯಣಭಟ್ಟರು ಆನೆ ಪಾದವನ್ನು ಕಂಡು ಮಾಡಿದ ಆರ್ತನಾದವನ್ನು ಕೇಳಿದಂತೆ, ಕುಳಿತಲ್ಲಿ ಕೂರಲಾಗದೆ ನಿಂತಲ್ಲಿ ನಿಲ್ಲಲಾಗದೆ ಚಡಪಡಿಸತೊಡಗಿದರಂತೆ.

ಆ ದಿನ ರಾತ್ರಿ ಅವರ ಕನಸಿನಲ್ಲಿ ಕಾಣಿಸಿಕೊಂಡ ನಾರಾಯಣಭಟ್ಟ 'ನನ್ನ ಪ್ರತಿಮೆಯನ್ನು ದೇವಸ್ಥಾನದಲ್ಲಿ ಪ್ರತಿಷ್ಠಾಪಿಸಿ ಪ್ರತಿದಿನ ದೇವರಿಗೆ ನೈವೇದ್ಯವಾದ ಮೇಲೆ ಕೊನೆಯಲ್ಲಿ ನನ್ನ ವಿಗ್ರಹವನ್ನೂ ಪೂಜೆ ಮಾಡಲಿ' ಎಂದು ಹೇಳಿದಂತಾಯಿತಂತೆ.

ಬ್ರಾಹ್ಮಣಹತ್ಯಾದೋಷದಿಂದ ಪರಿತಪಿಸುತ್ತಿದ್ದ ಭಕ್ಷಿ ಭೀಮರಾಯರು ನಾರಾಯಣಭಟ್ಟರ ವಿಗ್ರಹವೊಂದನ್ನು ಮಾಡಿಸಿ ಅದನ್ನು ಶಿವಲಿಂಗ ಮತ್ತು ಪಾರ್ವತಿ ಅಮ್ಮನವರ ವಿಗ್ರಹದ ಮೂಲೆಯಲ್ಲಿ ಪ್ರತಿಷ್ಠಾಪನೆ ಮಾಡಿಸಿದರು. ಅಂದಿನಿಂದ ಕಾಶಿವಿಶ್ವೇಶ್ವರಸ್ವಾಮಿ ಮತ್ತು ಪಾರ್ವತಿ ಅಮ್ಮನವರಿಗೆ ನೈವೇದ್ಯವಾದ ಮೇಲೆ ನಾರಾಯಣಭಟ್ಟರ ವಿಗ್ರಹವನ್ನು ಪೂಜಿಸುವ ಪದ್ಧತಿ ಅನೂಚಾನವಾಗಿ ನಡೆದುಕೊಂಡು ಬಂದಿದೆ.

**ಡಾ॥ ಎಂ. ಎಸ್. ಮಹದೇವ**
ಸಹಾಯಕ ಪ್ರಾಧ್ಯಾಪಕರು, ಕನ್ನಡ ವಿಭಾಗ, ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ಬನ್ನೂರು, ಟಿ. ನರಸೀಪುರ ತಾಲ್ಲೂಕು
ಮೈಸೂರು ಜಿಲ್ಲೆ – ೫೭೧ ೧೦೧

ವಿದ್ಯಾರ್ಥಿಗಳ ರಾಜಕೀಯದಲ್ಲಿ ತೋಳ್ಬಲ ಮತ್ತು ಹಣದ ಪಾತ್ರವನ್ನು ತಡೆಯುವ ನಿಟ್ಟಿನಲ್ಲಿ ಮುಖ್ಯ ಚುನಾವಣಾ ಆಯುಕ್ತರಾಗಿದ್ದ ಲಿಂಗ್ಡೊ ನೇತೃತ್ವದ ಸಮಿತಿಯನ್ನು ಕೇಂದ್ರ ಸರ್ಕಾರ ರಚಿಸಿತು. ಆದರೆ ಇದರಲ್ಲಿ ಒಬ್ಬ ವಿದ್ಯಾರ್ಥಿ ಪ್ರತಿನಿಧಿಯೂ ಇರಲಿಲ್ಲ. ಆರು ಸದಸ್ಯರ ಪೈಕಿ ಮೂವರು ಉನ್ನತ ವಿದ್ಯಾಭ್ಯಾಸ ಸಂಸ್ಥೆಗಳ ಜೊತೆ ಯಾವ ರೀತಿಯ ಸಂಬಂಧವನ್ನು ಹೊಂದಿರಲಿಲ್ಲ. ಈ ಸಮಿತಿಯ ಯಾವ ಸದಸ್ಯನೂ ವಿದ್ಯಾರ್ಥಿ ರಾಜಕೀಯದಲ್ಲಿ ಪಾತ್ರವನ್ನೇ ವಹಿಸಿರಲಿಲ್ಲ! ೩೫೦ ವ್ಯಕ್ತಿಗಳನ್ನು ಸಂದರ್ಶಿಸಲಾಯಿತು. ಅವರಲ್ಲಿ ವಿದ್ಯಾರ್ಥಿ ಸಮುದಾಯದಿಂದ ಕೇವಲ ೪೧ ಮಂದಿಯನ್ನು ಮಾತ್ರ ಸಂಪರ್ಕಿಸಲಾಯಿತು. ಅಲ್ಲದೆ ಈ ನಿಟ್ಟಿನಲ್ಲಿ ನಡೆಸಿದ ಸರ್ವೇಕ್ಷಣ ಮಹಾನಗರ ಕೇಂದ್ರೀಕೃತವಾಗಿತ್ತು.

ಈ ಸಮಿತಿ ನೀಡಿದ ಶಿಫಾರಸುಗಳ ಪೈಕಿ ರಾಜಕೀಯ ಪಕ್ಷಗಳ ವಿದ್ಯಾರ್ಥಿ ಪ್ರತಿನಿಧಿತ್ವವನ್ನು ರದ್ದುಪಡಿಸಲಾಗಿತ್ತು; ಚುನಾವಣೆಯ ಪ್ರಕ್ರಿಯೆಯನ್ನು ೧೦ ದಿನಗಳಿಗೆ ಸೀಮಿತಗೊಳಿಸಲಾಗಿತ್ತು. ಕೆಲವು ವಯೋಮಾನದವರೆಗೆ ಮಾತ್ರ ವಿದ್ಯಾರ್ಥಿಗಳು ಚುನಾವಣೆಗಳಲ್ಲಿ ಸ್ಪರ್ಧಿಸಬಹುದಿತ್ತು (ಬಿ.ಎ., ಎಂ.ಎ., ಪಿಎಚ್.ಡಿ. ಇತ್ಯಾದಿಗಳಿಗೆ ಪ್ರತ್ಯೇಕ ವಯೋಮಿತಿಯನ್ನು ನಿಗದಿಪಡಿಸಲಾಗಿತ್ತು). ಇವೇ ಮುಂತಾದವು ಇದ್ದವು. ಇವುಗಳನ್ನು ವಿದ್ಯಾರ್ಥಿ ಸಂಘಟನೆಗಳು ವಿರೋಧಿಸಿದವು; ಪ್ರತಿಭಟಿಸಿದವು.

**ಮ. ಶ್ರೀ. ಮುರಳಿ ಕೃಷ್ಣ**

**ಕ**ಳೆದ ವರ್ಷದಿಂದೀಚೆಗೆ ನಮ್ಮ ದೇಶದ ವಿಶ್ವವಿದ್ಯಾಲಯಗಳು ಹೆಚ್ಚು ಸುದ್ದಿ ಮಾಡುತ್ತಿವೆ. ದೆಹಲಿಯ ಜವಹರಲಾಲ್ ನೆಹರು ವಿಶ್ವವಿದ್ಯಾಲಯ, ಹೈದರಾಬಾದ್, ಅಲಹಾಬಾದ್, ಆಲಿಗಢ ಮತ್ತು ಇತರ ಕೆಲವು ವಿಶ್ವವಿದ್ಯಾಲಯಗಳು, ಪುಣೆಯ ಫಿಲ್ಮ್ ಆ್ಯಂಡ್ ಟೆಲಿವಿಷನ್ ಇನ್‌ಸ್ಟಿಟ್ಯೂಟ್ ಆಫ್ ಇಂಡಿಯಾ, ಐಐಟಿ ಚೆನ್ನೈ ಮುಂತಾದ ಪ್ರಮುಖ ವಿದ್ಯಾಸಂಸ್ಥೆಗಳ ವಿದ್ಯಾರ್ಥಿಗಳಿಂದ ಮುಷ್ಕರಗಳು, ಪ್ರತಿಭಟನಾ ಕಾರ್ಯಕ್ರಮಗಳು ಬೇರೆ ಬೇರೆ ಕಾರಣಗಳಿಗಾಗಿ ಜರುಗಿವೆ. ಕೆಲವು ಸಂದರ್ಭಗಳಲ್ಲಿ ಇವು ಸ್ವಲ್ಪ ಹಿಂಸಾತ್ಮಕ ರೂಪವನ್ನು ಪಡೆದಿವೆ. ಇವುಗಳ ಹಿನ್ನೆಲೆಯಲ್ಲಿ ಕೆಲವು ಮೂಲಭೂತ, ಮುಖ್ಯ ಪ್ರಶ್ನೆಗಳು ತಲೆ ಎತ್ತುತ್ತವೆ.

ನಮ್ಮ ವಿದ್ಯಾಸಂಸ್ಥೆಗಳಲ್ಲಿ ರಾಜಕೀಯದ ಅವಶ್ಯಕತೆಯಿದೆಯೇ? ಅದು ಇರಬೇಕೆಂದಾದರೆ, ಎಷ್ಟರಮಟ್ಟಿಗೆ ಇರಬೇಕು? ಇದಕ್ಕೆ ಸಂಬಂಧಿಸಿದಂತೆ ಲಕ್ಷ್ಮಣರೇಖೆಯೊಂದು ಇರಬೇಕೇ? ಅಲ್ಲದೆ, ಮುಖ್ಯವಾಗಿ, ಅವುಗಳಲ್ಲಿ ಯಾವ ರೀತಿಯ ರಾಜಕೀಯ ಇರಬೇಕು? ಎಂಬಿತ್ಯಾದಿ ಪ್ರಶ್ನೆಗಳು ನಮ್ಮ ಸಾರ್ವಜನಿಕ ವಲಯಗಳಲ್ಲಿ ಕೇಳಿಬರುತ್ತಿರುತ್ತವೆ. ಇವುಗಳ ಜೊತೆಜೊತೆಯಲ್ಲೇ ವಿದ್ಯಾರ್ಥಿಗಳ ಪ್ರತಿಭಟನೆಗಳಿಗೆ, ಹಕ್ಕೊತ್ತಾಯಗಳಿಗೆ, ವಿಶ್ವವಿದ್ಯಾಲಯಗಳ ಹಾಗೂ ಇತರ ವಿದ್ಯಾಸಂಸ್ಥೆಗಳ ಆಡಳಿತ ಮಂಡಳಿಗಳ ಸ್ಪಂದನ ಯಾವ ರೀತಿಯಲ್ಲಿರುತ್ತದೆ? ಅವು ಇತ್ಯಾತ್ಮಕವಾಗಿವೆಯೇ ಅಥವಾ ನೇತ್ಯಾತ್ಮಕವಾಗಿವೆಯೇ? ಉನ್ನತ ವ್ಯಾಸಂಗಕ್ಕಾಗಿ ಇರುವ ಶಿಕ್ಷಣ ಸಂಸ್ಥೆಗಳಲ್ಲಿ, ಅವುಗಳಿಗೆ ಇರಬೇಕಾದ ಸ್ವಾಯತ್ತತೆ ಇದ್ದು, ಅವು ನಮ್ಮ ದೇಶದ ಪ್ರಜಾಸತ್ತಾತ್ಮಕ ಆದರ್ಶಗಳಿಗೆ ಅನುಗುಣವಾಗಿ ಕಾರ್ಯ ನಿರ್ವಹಿಸುತ್ತಿವೆಯೇ? ಸ್ವಾಯತ್ತತೆಗೆ ಸಂಬಂಧಿಸಿದಂತೆ ಯಾವ ಅಂಶಗಳು ಅದಕ್ಕೆ ಪ್ರತಿಕೂಲಕರವಾಗಿವೆ? ಏಕೆ ಕೆಲವೇ ಕೆಲವು ವಿದ್ಯಾಸಂಸ್ಥೆಗಳು ರಾಜಕೀಯ ನೇತಾರರನ್ನು ಹುಟ್ಟುಹಾಕುತ್ತಿವೆ? ಈ ಪ್ರಶ್ನೆಗಳು ನಮ್ಮ ವಿಶ್ವವಿದ್ಯಾಲಯಗಳು ಹಾಗೂ ಇತರ ವಿದ್ಯಾಸಂಸ್ಥೆಗಳಿಗೆ ಮಾತ್ರ ಮುಖ್ಯವಾಗುವುದಿಲ್ಲ, ಇಡೀ ನಮ್ಮ ಸಮಾಜಕ್ಕೆ ಗಹನ ಪ್ರಶ್ನೆಗಳಾಗುತ್ತವೆ.

ಯಾವುದೂ ನಿರ್ವಾತದಲ್ಲಿ ಬೆಳೆಯುವುದಿಲ್ಲ. ಶಿಕ್ಷಣ ಸಂಸ್ಥೆಗಳಿಗೂ ಇದು ಅನ್ವಯವಾಗುತ್ತದೆ. ಇವುಗಳ ಬೆಳವಣಿಗೆಯಲ್ಲಿ ರಾಜಕೀಯದ ಪಾತ್ರವಿಲ್ಲವೇ? ಉತ್ತರ ಹೌದು ಎಂದಾದರೆ ಅದನ್ನು (ರಾಜಕೀಯವನ್ನು) ಸಾರಾಸಗಟಾಗಿ ತಳ್ಳಿಹಾಕುವುದಕ್ಕೆ ಆಗುತ್ತದೆಯೇ? ನಮ್ಮ ನಡುವೆ ಇರುವ ಅನೇಕ ತಂದೆ, ತಾಯಂದಿರು ಮತ್ತು ಪೋಷಕರು ತಮ್ಮ ಮಕ್ಕಳು ಶಿಕ್ಷಣದ ಅವಧಿಯಲ್ಲಿ ಪಠ್ಯಪುಸ್ತಕಗಳು ಹಾಗೂ ಅವುಗಳಿಗೆ ಸಂಬಂಧಿಸಿದ ಕಲಿಕಾ ಚಟುವಟಿಕೆಗಳಲ್ಲಿ ಮಾತ್ರ ತಲ್ಲೀನರಾಗಿರಬೇಕೆಂದು ಬಯಸುತ್ತಾರೆ. ಇಷ್ಟಕ್ಕೆ ಮಾತ್ರ ಸೀಮಿತಗೊಂಡರೆ, ವಿದ್ಯಾರ್ಥಿಗಳ ಸರ್ವಾಂಗೀಣ ಬೆಳವಣಿಗೆಯಾಗುತ್ತದೆಯೇ? ವಿದ್ಯಾಸಂಸ್ಥೆಗಳು ವಿದ್ಯಾರ್ಥಿಗಳನ್ನು ಉತ್ತಮ ಮಾನವರನ್ನಾಗಿ ರೂಪುಗೊಳಿಸಬೇಡವೇ? ಒಂದು ದೇಶದ ಸಾಮಾಜಿಕ, ರಾಜಕೀಯ, ಆರ್ಥಿಕ, ಸಾಂಸ್ಕೃತಿಕ ಆಗು–ಹೋಗುಗಳು ಶಿಕ್ಷಣ ವ್ಯವಸ್ಥೆಯ ಮೇಲೆ ಪರಿಣಾಮಗಳನ್ನು ಬೀರುತ್ತವೆ ಎಂಬ ವಾಸ್ತವಾಂಶದ ಅರಿವು ನಮಗಿದ್ದರೆ, ನಾವು ವಿಶ್ವವಿದ್ಯಾಲಯಗಳು ಮತ್ತು ಇತರ ವಿದ್ಯಾಸಂಸ್ಥೆಗಳಲ್ಲಿ

# ವಿದ್ಯಾರ್ಥಿರಂಗ ಮತ್ತು ರಾಜಕೀಯ








ರಾಜಕೀಯ ಇರಬಾರದೆಂದು ತಳೆಯುವ ನಿಲುವು ಎಷ್ಟು ಸರಿ? ನಮ್ಮ ದೃಷ್ಟಿಕೋನಗಳು ಏನೇ ಇರಲಿ, ಶಿಕ್ಷಣ ಸಂಸ್ಥೆಗಳ ಮೇಲೆ ರಾಜಕೀಯ ವಿದ್ಯಮಾನಗಳು ತಮ್ಮ ಪರಿಣಾಮಗಳನ್ನು ಬೀರಿಯೇ ಬೀರುತ್ತವೆ. ಇದು ವಾಸ್ತವಾಂಶ. ಇದನ್ನು ಕೂಲಂಕಷವಾಗಿ ಪರಿಶೀಲಿಸೋಣ.

ನಮ್ಮ ವಿದ್ಯಾಸಂಸ್ಥೆಗಳಲ್ಲಿ ರಾಜಕೀಯದ ಅವಶ್ಯಕತೆಯಿದೆಯೆಂದಾದರೆ, ನಾವು ನಮ್ಮ ಸಮಾಜದ ವಾಸ್ತವಗಳನ್ನು ಮನಗಾಣಬೇಕು. ನಮಗೆ ಇಷ್ಟವಿದೆಯೋ ಇಲ್ಲವೋ ಪ್ರಪಂಚದಾದ್ಯಂತ ರಾಜಕೀಯ ಎನ್ನುವುದು ಎಲ್ಲ ಘಟಕಗಳಲ್ಲೂ ಪಸರಿಸಿದೆ. ವ್ಯತ್ಯಾಸವಿರುವುದು ಅದರ ಪ್ರಮಾಣದಲ್ಲಿ ಮಾತ್ರ. ಬಾಹ್ಯದ ರಾಜಕೀಯದ ಜೊತೆಗೆ ಆಂತರಿಕ ರಾಜಕೀಯವೂ ಇರುತ್ತದೆ. ಕೈಗಾರಿಕೆಗಳು, ಕಾರ್ಪೊರೇಟ್ ಸಂಸ್ಥೆಗಳು, ಸಾಮಾಜಿಕ ಕಲ್ಯಾಣ ಯೋಜನೆಗಳು, ಆರೋಗ್ಯ, ಶಿಕ್ಷಣ ಮತ್ತು ಇತರ ಮೂಲಭೂತ ವ್ಯವಸ್ಥೆಗಳ ಅಭಿವೃದ್ಧಿಗೆ ರಾಜಕೀಯ ನೀತಿಗಳು ಹಾಗೂ ನಡವಳಿಕೆಗಳು ದಾರಿಸೂಚಕಗಳಾಗುತ್ತವೆ. ಸಮಾಜದ ಎಲ್ಲ ಸ್ತರಗಳ ಮೇಲೂ ಅವುಗಳ ಪ್ರಭಾವಗಳು ಇದ್ದೇ ಇರುತ್ತವೆ. ರಾಜಕೀಯ ನಮ್ಮ ವೈಯಕ್ತಿಕ ಜೀವನದ ಮೇಲೂ ಪರಿಣಾಮಗಳನ್ನು ಬೀರುತ್ತಿರುತ್ತದೆ.

ವಿಷಯ ಹೀಗಿರಬೇಕಾದರೆ, ವಿಶ್ವವಿದ್ಯಾಲಯಗಳು ಹಾಗೂ ಇತರ ವಿದ್ಯಾಸಂಸ್ಥೆಗಳು ರಾಜಕೀಯದಿಂದ ವಿಮುಖವಾಗಿರಬೇಕೆಂಬುದು ಅನರ್ಥಕಾರಿಯಲ್ಲವೇ? ಇವುಗಳು ವಿದ್ಯಾರ್ಥಿಗಳನ್ನು ಕೆಲವು ವಿಷಯಗಳಲ್ಲಿ ಮಾತ್ರ ಪಾರಂಗತರನ್ನಾಗಿ ಮಾಡಿದರೆ ಸಾಕೆ? ಅಥವಾ ಅವು ವಿದ್ಯಾರ್ಥಿಗಳನ್ನು ಜೀವನದಲ್ಲಿ ಎದುರಾಗುವ ಸಂಕಷ್ಟ/ ಸವಾಲುಗಳನ್ನು ಸಮರ್ಥವಾಗಿ ಎದುರಿಸುವಂತೆ ತಯಾರು ಮಾಡಬೇಕೇ? ಮೇಲೆ ಪ್ರಸ್ತಾಪಿಸಿರುವ ಎರಡನೇ ಪ್ರಶ್ನೆಗೆ 'ಹೌದು' ಎಂಬುದು ನಮ್ಮ ಜವಾಬಾದರೆ, ಶಿಕ್ಷಣದ ಚಟುವಟಿಕೆಗಳಲ್ಲಿ ಮಾತ್ರವಲ್ಲದೆ, ಒಬ್ಬ ವ್ಯಕ್ತಿಯ ವ್ಯಕ್ತಿತ್ವ ಹಾಗೂ ಚಾರಿತ್ರ್ಯದ ಬೆಳವಣಿಗೆಯಲ್ಲಿ ರಾಜಕೀಯ ಗುರುತರವಾದ ಪಾತ್ರವನ್ನು ವಹಿಸುತ್ತದೆ. ರಾಷ್ಟ್ರ ನಿರ್ಮಾಣದ ಕಾರ್ಯದಲ್ಲಿ ಚಾರಿತ್ರ್ಯದ ನಿರ್ಮಾಣ ಕೂಡ ಪ್ರಥಮ ಹೆಜ್ಜೆಗಳಲ್ಲಿ ಒಂದಾಗಿರುತ್ತದೆ.

ಇತಿಹಾಸದ ಪುಟಗಳತ್ತ ಕಣ್ಣು ಹಾಯಿಸಿದರೆ, ವಿದ್ಯಾರ್ಥಿಗಳ ಸಾಂಘಿಕ (ಯೂನಿಯನ್) ಚಟುವಟಿಕೆಗಳ ಬಗೆಗೆ ಅನೇಕ ಮಹತ್ವದ ಮಾಹಿತಿಗಳು ಲಭಿಸುತ್ತವೆ. ಸ್ವಾತಂತ್ರ್ಯ ಪೂರ್ವದಲ್ಲೇ ವಿದ್ಯಾರ್ಥಿಗಳು ಸಂಘಟಿತರಾಗಿದ್ದ ಸಂಗತಿ ತಿಳಿಯುತ್ತದೆ. ನಮ್ಮ ದೇಶದಲ್ಲಿ ಪ್ರಥಮ ಬಾರಿಗೆ ಅಖಿಲ ಭಾರತ ಮಟ್ಟದಲ್ಲಿ ಒಂದು ವಿದ್ಯಾರ್ಥಿ ಸಂಘ ೧೯೩೬ರಲ್ಲಿ ಪ್ರಾರಂಭವಾಯಿತು. ಅದೇ ಅಖಿಲ ಭಾರತ ವಿದ್ಯಾರ್ಥಿಗಳ ಒಕ್ಕೂಟ (ಎಐಎಸ್‌ಎಫ್). ಇದರ ಸಂಸ್ಥಾಪನಾ ಸಮ್ಮೇಳನ ಆಗಸ್ಟ್ ೧೨, ೧೯೩೬ರಂದು ಲಕ್ನೌನಲ್ಲಿ ಜರುಗಿತು. ದೇಶದ ವಿವಿಧ ಭಾಗಗಳಿಂದ ೯೩೬ ಪ್ರತಿನಿಧಿಗಳು ಇದರಲ್ಲಿ ಭಾಗವಹಿಸಿದ್ದರು. ಜವಹರಲಾಲ್ ನೆಹರು ಇದರ ಉದ್ಘಾಟಕರಾಗಿದ್ದರು. ಅಧ್ಯಕ್ಷತೆಯನ್ನು ಮಹಮ್ಮದ್ ಅಲಿ ಜಿನ್ನಾ ವಹಿಸಿದ್ದರು. ಇದು ಬ್ರಿಟಿಷರ ದಾಸ್ಯದ ವಿರುದ್ಧ ಹೋರಾಡಿ, ಸ್ವತಂತ್ರ ಭಾರತದಲ್ಲಿ ಎಲ್ಲ ಪ್ರಜೆಗಳಿಗೆ ಎಲ್ಲ ಬಗೆಯ ಸಮಾನತೆ ದೊರಕಬೇಕೆಂಬ ಆಶಯವನ್ನು ಹೊಂದಿತ್ತು. ಅಲ್ಲದೆ, ನಾಜೀವಾದ, ಫ್ಯಾಸಿಸಂ, ಜನಾಂಗವಾದ ಇತ್ಯಾದಿಗಳ ವಿರುದ್ಧ ಗಮನಾರ್ಹ ಹೋರಾಟಗಳನ್ನು ಮಾಡಿದ ಚರಿತ್ರೆ ಇದಕ್ಕಿದೆ. ಸ್ವಾತಂತ್ರ್ಯ ಗಳಿಸಿದ ತರುವಾಯ ಇದು ಶಿಕ್ಷಣದ ರಾಷ್ಟ್ರೀಕರಣ, ಶಿಕ್ಷಣ ಮೂಲಭೂತ ಹಕ್ಕಾಗಬೇಕು

## ಅಭಿನಂದನೆಗಳು...

ಕೇಂದ್ರ ಸಾಹಿತ್ಯ ಅಕಾಡೆಮಿ ಸದಸ್ಯರಾಗಿ ಡಾ॥ ಸಿದ್ಧಲಿಂಗಯ್ಯ, ಬಾಳಾಸಾಹೇಬ ಲೋಕಾಪುರ, ಸರಜೂ ಕಾಟ್ಕರ್, ಡಾ॥ ವಿ. ತೇಜಸ್ವಿ ಕಟ್ಟೀಮನಿ ಅವರು ನಾಮನಿರ್ದೇಶನಗೊಂಡಿದ್ದಾರೆ. ಇವರೆಲ್ಲರಿಗೂ ನವಕರ್ನಾಟಕ ಹಾಗೂ ಹೊಸತು ಬಳಗದ ಅಭಿನಂದನೆಗಳು.

ಎಂಬ ಹೋರಾಟ, ಸಮಾನ ಶಿಕ್ಷಣ ಪದ್ಧತಿ, ವಿದ್ಯಾರಂಗದ ಖಾಸಗೀಕರಣ, ಡೊನೇಷನ್ ಹಾವಳಿ ಅಥವಾ ಕ್ಯಾಪಿಟೇಶನ್ ಶುಲ್ಕ ನವ–ಉದಾರ ನೀತಿಗಳು ಮುಂತಾದುವುಗಳ ವಿರುದ್ಧ ಅವಿರತವಾಗಿ ಹೋರಾಡುತ್ತ ಬಂದಿದೆ. ಇದೇ ರೀತಿಯಲ್ಲಿ ನಮ್ಮ ದೇಶಾದ್ಯಂತ ಇನ್ನು ಕೆಲವು ಪುರೋಗಾಮಿ ವಿದ್ಯಾರ್ಥಿ ಸಂಘಟನೆಗಳು ವಿದ್ಯಾರ್ಥಿಗಳ ಸರ್ವಾಂಗೀಣ ಹಿತದಲ್ಲಿ ಶ್ರಮಿಸುತ್ತ ಬಂದಿವೆ.

ಕೆಲವು ವಿಶ್ವವಿದ್ಯಾಲಯಗಳ ಇತ್ತೀಚಿನ ಅವಧಿಯ ಕೆಲವು ವಿದ್ಯಮಾನಗಳತ್ತ ಗಮನವನ್ನು ಹರಿಸೋಣ. ಮೂರುವರೆ ವರ್ಷಗಳ ಹಿಂದೆ ಮೋದಿ ಸರ್ಕಾರ ಅಸ್ತಿತ್ವಕ್ಕೆ ಬಂದಿತು. ಆಗಿನಿಂದಲೂ ರಾಷ್ಟ್ರೀಯತೆ, ರಾಷ್ಟ್ರಭಕ್ತಿ, ರಾಷ್ಟ್ರಪ್ರೇಮ ಮುಂತಾದ ಪರಿಕಲ್ಪನೆಗಳ ಸಂಕುಚಿತ ದೃಷ್ಟಿಕೋನ ವಿಜೃಂಭಿಸುತ್ತಿರುವುದು ಢಾಳಾಗಿ ಕಂಡುಬರುತ್ತಿದೆ. ನೈಜತೆಗಿಂತಲೂ ಡಾಂಭಿಕತೆಯೇ ಮೇಲ್ಗೈ ಪಡೆಯುತ್ತಿದೆ. ಅಬ್ಬರದ, ಅಗ್ಗದ ಪ್ರದರ್ಶನಪ್ರಿಯತೆಗೂ ಜೈಕಾರ ಲಭಿಸುತ್ತಿದೆ. ಇತ್ತೀಚೆಗೆ ನಳಂದಾ ವಿಶ್ವವಿದ್ಯಾಲಯದಲ್ಲಿ ಒಂದು ಇಡೀ ಕೋರ್ಸನ್ನೇ ತೆಗೆದುಹಾಕಲಾಗಿದೆ. ಇದಕ್ಕೆ ಸಂಬಂಧಿಸಿದಂತೆ ಒಬ್ಬ ಪ್ರಾಧ್ಯಾಪಕರನ್ನು ಬಲವಂತವಾಗಿ ಕ್ಷಮೆಕೋರುವಂತೆ ಒತ್ತಡವನ್ನು ಹೇರಲಾಗಿದೆ. ಇವುಗಳಾಗಿರುವುದು ಬಿಹಾರದ ಆಳುವ ಪಕ್ಷದ ಒಬ್ಬ ರಾಜಕಾರಣಿಯ ಟ್ವೀಟ್‌ನ ಪರಿಣಾಮದಿಂದ! ಆಳುವ ಸರ್ಕಾರಗಳು, ವಿದ್ಯಾರ್ಥಿಗಳು ಮತ್ತು ಯುವಜನರಲ್ಲಿ ರಾಷ್ಟ್ರೀಯವಾದವನ್ನು ಬೆಳೆಸಲು, ನೀಡುತ್ತಿರುವ ನಿರ್ದೇಶನಗಳನ್ನು ಗಮನಿಸಿದರೆ ಅಳಬೇಕೋ, ನಗಬೇಕೋ ತಿಳಿಯುವುದಿಲ್ಲ. ಇತ್ತೀಚೆಗೆ ರಾಜಸ್ಥಾನದ ರಾಜ್ಯ ಸರ್ಕಾರ ಅಲ್ಲಿನ ವಿಶ್ವವಿದ್ಯಾಲಯಗಳಲ್ಲಿ ಸ್ವಾಮಿ ವಿವೇಕಾನಂದರ ಪ್ರತಿಮೆಗಳನ್ನು ಸ್ಥಾಪಿಸಬೇಕೆಂಬ ನಿರ್ದೇಶನವನ್ನು ನೀಡಿತು! ಇದು ಒಂದು ತರಹದ 'ಮೇಕ್ ಇನ್ ಇಂಡಿಯಾ' ಉಪಕ್ರಮವೇ ಆಗಿದೆ. ಅಪಾರ ವೆಚ್ಚವಾಗುವ ಈ ಯೋಜನೆಗೆ ವಿದ್ಯಾರ್ಥಿ ಸಂಘಗಳು ಮತ್ತು ಕೆಲವು ದೇಶಪ್ರೇಮಿಗಳು ಮುಂದೆ ಬಂದು ಆರ್ಥಿಕ ಸಹಾಯವನ್ನು ನೀಡಬೇಕೆಂದು ಪ್ರಚೋದಿಸಲಾಯಿತು.

ಕೆಲವು ತಿಂಗಳ ಹಿಂದೆ, ಆಗಿನ ಮಾನವ ಸಂಪನ್ಮೂಲಗಳ ಮಂತ್ರಿ ಸ್ಮೃತಿ ಇರಾನಿ ಎಲ್ಲ ಕೇಂದ್ರೀಯ ವಿಶ್ವವಿದ್ಯಾಲಯಗಳೂ ಹೆಮ್ಮೆಯಿಂದ ನಮ್ಮ ರಾಷ್ಟ್ರಧ್ವಜವನ್ನು ೨೦೭ ಅಡಿ ಎತ್ತರದಲ್ಲಿ ಹಾರಿಸಬೇಕೆಂದು ನಿರ್ದೇಶನವನ್ನು ನೀಡಿದ್ದರು. ಇದಾದ ತರುವಾಯ 'ನಾಯಕರ ಭಿತ್ತಿ'ಯ ಅಭಿಯಾನಕ್ಕೆ ಹಸಿರು ಚಿಹ್ನೆಯನ್ನು ತೋರಿಸಲಾಯಿತು. ಇದಕ್ಕೆ ಹುತಾತ್ಮರ ಭಿತ್ತಿ ಎಂದೂ ಹೆಸರಿಡಲಾಗಿತ್ತು! ಇದರಂತೆ ವಿಶ್ವವಿದ್ಯಾಲಯಗಳ, ಮೊಗಸಾಲೆಗಳ, ಗೋಡೆಗಳ ಮೇಲೆ ಯುದ್ಧದಲ್ಲಿ ವೀರಮರಣವನ್ನಪ್ಪಿದ, ಪರಮವೀರ ಚಕ್ರದಂತಹ ಪ್ರಶಸ್ತಿಗಳಿಗೆ ಭಾಜನರಾದ ಯೋಧರ ಭಾವಚಿತ್ರಗಳನ್ನು ಪ್ರದರ್ಶಿಸಬೇಕಿತ್ತು. ಈ ಪರಿಯ ಕ್ರಮದಿಂದ ವಿದ್ಯಾರ್ಥಿಗಳಲ್ಲಿ ರಾಷ್ಟ್ರೀಯತೆ ಮತ್ತು ತ್ಯಾಗದ ಮನೋಭಾವವನ್ನು ನೆಲಸುವಂತೆ ಮಾಡಬಹುದು ಎಂದು ಎಣಿಸಲಾಗಿತ್ತು. ನಂತರ ವಿದ್ಯಾರ್ಥಿಗಳು ಮತ್ತು ಅಧ್ಯಾಪಕ ವರ್ಗದವರು 'ತಿರಂಗ ರ್‍ಯಾಲಿ'ಗಳನ್ನು ಆಯೋಜಿಸಬೇಕೆಂದು ಕರೆಯನ್ನು ನೀಡಲಾಗಿತ್ತು. ಇದು ಜವಹರಲಾಲ್ ನೆಹರು ವಿಶ್ವವಿದ್ಯಾಲಯದ ಉಪಕುಲಪತಿಯನ್ನು ಎಷ್ಟು ಉತ್ತೇಜಿಸಿತೆಂದರೆ ಅವರು ಮತ್ತು ಒಂದು ಉತ್ಸಾಹಿಗಳ ಗುಂಪು ತುಂಬ ಉದ್ದದ ರಾಷ್ಟ್ರಧ್ವಜವನ್ನು ಹಿಡಿದು ಸುಮಾರು ಒಂದು ಮೈಲಿ ನಡೆದರು! ರ್‍ಯಾಲಿಯ ಅಂತ್ಯದಲ್ಲಿ ಅವರಿಗೆ ಒಂದು ವಿನಂತಿಯನ್ನು ಮಾಡಲಾಯಿತು. ಅದೆಂದರೆ ಆ ವಿಶ್ವವಿದ್ಯಾಲಯದ ಕ್ಯಾಂಪಸ್‌ನಲ್ಲಿ, ಕದನದಲ್ಲಿ ಭಾಗವಹಿಸಿದ ಒಂದು ಮಿಲಿಟರಿ ಟ್ಯಾಂಕನ್ನು ಇರಿಸುವುದು. ಇದರ ಮೂಲಕ ರಾಷ್ಟ್ರೀಯತೆ ಮತ್ತು ದೇಶಪ್ರೇಮವನ್ನು ಉದ್ದೀಪನಗೊಳಿಸಬಹುದೆಂಬ ಆಶಯ ಈ ಮನವಿಯ ಹಿಂದಿತ್ತು. ಬಹುಶಃ ಈ ಕ್ರಮದ ತರುವಾಯ ಕ್ಯಾಂಪಸ್‌ನಲ್ಲಿ ಭಾರತದ ಸೈನ್ಯದ ತುಕಡಿಯೊಂದರ ಸೈನಿಕರ ನಿಯಮಿತ 'ಫ್ಲಾಗ್ ಮಾರ್ಚ್'ಗಳನ್ನು ಮತ್ತು ಪ್ರತಿ ತರಗತಿ ಪ್ರಾರಂಭವಾಗುವ ಮುನ್ನ ಒಬ್ಬ ಸಮವಸ್ತ್ರ ಧರಿಸಿದ ಯೋಧನ ಮಾರ್ಚ್‌ಫಾಸ್ಟ್ ಮಾಡುವ ನಿರೀಕ್ಷೆಗಳೂ ಇತ್ತೇನೋ... ಈ ಪರಿಯ ರಾಷ್ಟ್ರೀಯ ಚಿಹ್ನೆಗಳು ಮತ್ತು ವಸ್ತುಗಳ ಪ್ರದರ್ಶನಗಳ ಮೂಲಕ ರಾಷ್ಟ್ರಪ್ರೇಮವನ್ನು ರೂಢಿಸಬಹುದೇ? ಅಥವಾ ಇವು ರಾಷ್ಟ್ರೀಯತೆ ಮತ್ತು ರಾಷ್ಟ್ರಪ್ರೇಮವನ್ನು ಅಳೆಯುವ ಮಾಪನಗಳೇ ಎಂಬ ಪ್ರಶ್ನೆಗಳು ಉದ್ಭವಿಸಿದರೆ ಅವು ಸಹಜವೇ ಸರಿ.

ಈ ತರಹದ ಪ್ರಶ್ನೆಗಳಿಗೆ ಸುಲಭದ ಉತ್ತರಗಳಿಲ್ಲ. ಏಕೆಂದರೆ ಒಂದರ್ಥದಲ್ಲಿ ರಾಷ್ಟ್ರಪ್ರೇಮ ಅಥವಾ ರಾಷ್ಟ್ರೀಯತೆ ಎಂಬುದು ನೈಜ ಭಾವನೆಗಳಲ್ಲ. ಅವು ರಾಜಕೀಯ ನಿರ್ಮಾಣಗಳು ಹಾಗೂ ಪರಿಕಲ್ಪನೆಗಳು. ಅವುಗಳ ಪರಿಣಾಮಗಳು ನೈಜವಾಗುವುದು ರಾಜಕೀಯ ಕಾರ್ಯಾಚರಣೆಗಳಿಂದ. ಬೇರೆ ರೀತಿಯಲ್ಲಿ ಹೇಳುವುದಾದರೆ, ಅವು ನಂಬಿಕೆಯ ಭಾಗವಾಗಿ ಸಮರ್ಥವಾಗಿ ಅರ್ಥೈಸಲು ಆಗುವುದಿಲ್ಲ. ಆದರೆ ನಮ್ಮ ರಾಜಕೀಯ ಪ್ರಜ್ಞೆಯ ಮೂಸೆಯಲ್ಲಿ ಅವುಗಳನ್ನು ನಿರಂತರವಾಗಿ ಚರ್ಚೆಗೆ, ಮರುವ್ಯಾಖ್ಯಾನಗಳಿಗೆ ಒಳಪಡಿಸಬಹುದು. ಈ ತರಹದ ಹುಡುಕಾಟಗಳಿಗೆ ಪ್ರಸ್ತುತ ನಮ್ಮ ವಿಶ್ವವಿದ್ಯಾಲಯಗಳಲ್ಲಿ ಅವಕಾಶಗಳಿವೆಯೇ? ಈ ಹುಡುಕಾಟಗಳ ಮೂಲಕ

### ಅಭಿನಂದನೆಗಳು...

ಕನ್ನಡ ಪುಸ್ತಕ ಪ್ರಾಧಿಕಾರದ ೨೦೧೬ನೇ ಸಾಲಿನ 'ಅತ್ಯುತ್ತಮ ಪ್ರಕಾಶನ ಪ್ರಶಸ್ತಿ'ಯು ವಸಂತ ಪ್ರಕಾಶನಕ್ಕೆ ಲಭಿಸಿದೆ. ಹಾಗೆಯೇ 'ಡಾ॥ ಎಂ. ಎಂ. ಕಲಬುರ್ಗಿ ಮಾನವಿಕ ಅಧ್ಯಯನ ಪ್ರಶಸ್ತಿ'ಯು ಶ್ರೀ ಸಂಗಮೇಶ ಸವದತ್ತಿಮಠ, 'ಡಾ॥ ಅನುಪಮಾ ನಿರಂಜನ ವೈದ್ಯಕೀಯ ಹಾಗೂ ವಿಜ್ಞಾನ ಸಾಹಿತ್ಯ ಪ್ರಶಸ್ತಿ'ಯು ಡಾ॥ ಪಿ. ಎಸ್. ಶಂಕರ ಮತ್ತು ಮುಖಪುಟ ವಿನ್ಯಾಸದ ಬಹುಮಾನವು ಶ್ರೀ ಸೃಜನ್ ಅವರಿಗೆ ಲಭಿಸಿದೆ. ಇವರೆಲ್ಲರಿಗೂ 'ನವಕರ್ನಾಟಕ' ಹಾಗೂ 'ಹೊಸತು' ಬಳಗದ ಅಭಿನಂದನೆಗಳು.





ಅರಿವಿನ ಜ್ಯೋತಿಯನ್ನು ಬೆಳಗಲು ಬೋಧನಾ ವರ್ಗ ಸಿದ್ಧವಿದೆಯೇ? ಇಂತಹ ಪರಿಕಲ್ಪನೆಗಳ ಬಗೆಗೆ ಮುಕ್ತವಾಗಿ ವಿಷಯ ವಿನಿಮಯ ಮಾಡಿಕೊಳ್ಳಲು ದೇಶಭಕ್ತಿಯನ್ನು ಮೈಮೇಲೆ ಆವಾಹಿಸಿಕೊಂಡವರಂತೆ ವರ್ತಿಸುವ ಕೆಲವು ವಿದ್ಯಾರ್ಥಿ ಸಂಘಟನೆಗಳ ನಾಯಕರು/ಅನುಯಾಯಿಗಳು ಹಾಗೂ ಅವರ ರಾಜಕೀಯ ಪ್ರಭುಗಳು ಸೂಕ್ತವಾದ ವಾತಾವರಣವನ್ನು ವಿಶ್ವವಿದ್ಯಾಲಯಗಳಲ್ಲಿ ಕಲ್ಪಿಸುತ್ತಾರೆಂದು ಭಾವಿಸಿದರೆ, ಅದು ನೀರ ಮೇಲಣ ಅಕ್ಷರಗಳಂತಾಗುತ್ತವೆ) ಅಷ್ಟೇ. ಆದರೆ ಇಂತಹ ಸಂಗತಿಗಳೂ ಸಮಾಜಮುಖಿ ವ್ಯಕ್ತಿಗಳಿಗೆ/ ಸಂಘಟನೆಗಳಿಗೆ ಸವಾಲುಗಳಾಗುತ್ತವೆ. ನಿರಾಶರಾಗಬೇಕಾದ ಪ್ರಮೇಯವಿಲ್ಲ. ಇವುಗಳಿಗೆ ಸೂಕ್ತವಾದ ಪ್ರತಿರೋಧವನ್ನು ಹೇಗೆ ಒಡ್ಡಬೇಕೆಂಬುದು ಅವುಗಳ ಕಾರ್ಯಯೋಜನೆಗಳ ಭಾಗವಾಗಬೇಕು.

ಇತ್ತೀಚೆಗೆ ಬನಾರಸ್ ಹಿಂದೂ ವಿಶ್ವವಿದ್ಯಾಲಯದಲ್ಲಿ (ಬಿ.ಎಚ್.ಯು.) ಜರುಗಿದ ಘಟನೆಗಳತ್ತ ಗಮನವನ್ನು ಹರಿಸೋಣ. ಇದಕ್ಕೆ ಏಷ್ಯಾದಲ್ಲೇ ಅತ್ಯಂತ ದೊಡ್ಡದಾದ ರೆಸಿಡೆನ್ಷಿಯಲ್ ವಿಶ್ವವಿದ್ಯಾಲಯ ಎಂಬ ಹೆಗ್ಗಳಿಕೆಯಿದೆ. ೧೦೧ ವರ್ಷಗಳನ್ನು ಕಂಡಿರುವ ಈ ವಿದ್ಯಾಸಂಸ್ಥೆ ಹಲವು ಏಳುಬೀಳುಗಳಿಗೆ ಸಾಕ್ಷಿಯಾಗಿದೆ. ಸೆಪ್ಟೆಂಬರ್ ತಿಂಗಳಲ್ಲಿ ಕಲಾ ವಿಭಾಗದ ವಿದ್ಯಾರ್ಥಿನಿಯೊಬ್ಬಳು ತನ್ನ ಹಾಸ್ಟೆಲ್‌ಗೆ ಹಿಂದಿರುಗುತ್ತಿದ್ದಾಗ ಮೂರು ಬೈಕ್ ಸವಾರರು ಆಕೆಯ ಮೇಲೆ ಆಕ್ರಮಣ ಮಾಡಿದರು. ಇದಾದದ್ದು ಕ್ಯಾಂಪಸ್‌ನ ಒಳಗೆ. ಆದರೆ ಆಕೆ ದಿಟ್ಟತನದಿಂದ ಪ್ರತಿರೋಧವನ್ನು ಒಡ್ಡಿದಾಗ, ಆ ಪುಂಡರು ಕಂಬಿಕಿತ್ತರು. ಈ ಘಟನೆ ಜರುಗಿದಾಗ, ಕೇವಲ ೧೦೦ ಮೀಟರ್ ದೂರದಲ್ಲಿ ಸೆಕ್ಯುರಿಟಿ ಗಾರ್ಡ್‌ಗಳಿದ್ದರು. ಆದರೆ ಅವರು ಮಧ್ಯಪ್ರವೇಶ ಮಾಡಲಿಲ್ಲ. ಹುಡುಗಿ ಹಾಸ್ಟೆಲ್ ತಲುಪಿದ ಮೇಲೆ, ವಾರ್ಡನ್ ಜರುಗಿದ ಘಟನೆಯ ಬಗೆಗೆ ವಿಚಾರಿಸದೆ, ತಡವಾಗಿ ಬಂದದ್ದಕ್ಕೆ ಆಕೆಯ ಮೇಲೆ ಹರಿಹಾಯ್ದಳು. ಈ ವಿದ್ಯಮಾನಗಳಿಂದ ಬೇಸತ್ತ ವಿದ್ಯಾರ್ಥಿಗಳು ಉಪಕುಲಪತಿಯ ಕಛೇರಿಯ ಮುಂದೆ ಧರಣಿಯನ್ನು ಹೂಡಿದರು. ಅದು ಶಾಂತಿಯುತವಾಗಿತ್ತು. ಸೆಪ್ಟೆಂಬರ್ ೨೩–೨೪ರ ರಾತ್ರಿ ಧರಣಿಯಲ್ಲಿ ನಿರತರಾದವರ ಮೇಲೆ ಪೊಲೀಸರು ಮುಗಿಬಿದ್ದರು. ಅವರ ಆಕ್ರೋಶದ ಹಿಂದೆ ಒಂದು ಕಾರಣವಿತ್ತು.

ಆ ಸಮಯದಲ್ಲಿ ಪ್ರಧಾನಿ ನರೇಂದ್ರ ಮೋದಿ, ರಾಜ್ಯಪಾಲ ರಾಮ್ ನಾಯಕ್, ಮುಖ್ಯಮಂತ್ರಿ ಯೋಗಿ ಆದಿತ್ಯನಾಥ್ ಮತ್ತು ಅನೇಕ ಕೇಂದ್ರ ಮತ್ತು ರಾಜ್ಯ ಸರ್ಕಾರದ ಮಂತ್ರಿಗಳು ವಾರಾಣಸಿಗೆ ಭೇಟಿ ನೀಡಿದ್ದರು. ಬಿ.ಎಚ್.ಯು.ನಲ್ಲಿ ವಿದ್ಯಾರ್ಥಿಗಳ ಪ್ರತಿಭಟನೆ ಜರುಗುತ್ತಿದ್ದ ಕಾರಣದಿಂದ, ವಿವಿಐಪಿಗಳ ವಾಹನಗಳು ಬೇರೆ ದಾರಿಯಿಂದ ಸಾಗಬೇಕಾಯಿತು. ಈ ಬೆಳವಣಿಗೆ ಪೊಲೀಸರನ್ನು ಕೆರಳಿಸಿತು. ಕೆಲವು ಗಂಟೆಗಳಲ್ಲೇ ಹತ್ತಿರದ ೧೮ ಪೊಲೀಸ್ ಠಾಣೆಗಳಿಂದ ಆಯ್ದ ಪೊಲೀಸ್‌ರನ್ನು ಜಮಾಯಿಸಿ, ವಿದ್ಯಾರ್ಥಿಗಳ ಮೇಲೆ ಲಾಠಿಚಾರ್ಜ್ ಮಾಡಿದರು. ಅಶ್ರುವಾಯುವನ್ನು ಪ್ರಯೋಗಿಸಿದರು. ವಿದ್ಯಾರ್ಥಿಗಳು ಕಲ್ಲುಗಳನ್ನು ತೂರಿದ್ದರಿಂದ, ಪೊಲೀಸರು ಫೈರಿಂಗ್ ಮಾಡಿದರು ಎಂಬುದಾಗಿ 'ಕೆಲವು' ವಿದ್ಯಾರ್ಥಿಗಳು ಆಪಾದಿಸಿದರು. ವಿವೇಚನಾರಹಿತ ಪೊಲೀಸ್ ಕಾರ್ಯಾಚರಣೆಯಲ್ಲಿ ಹಲವು ವಿದ್ಯಾರ್ಥಿನಿಯರನ್ನು ಥಳಿಸಲಾಯಿತು; ಅವರ ತಲೆ, ಕೇಶವನ್ನು ಹಿಡಿದು, ಎಳೆದು ದೂಡಲಾಯಿತು. ಪತ್ರಕರ್ತರು ಮತ್ತು ಅಧ್ಯಾಪಕರೂ ಪೊಲೀಸರ ಕೆಂಗಣ್ಣಿಗೆ ಸಿಲುಕಿದರು. ಅವರಿಗೂ ಲಾಠಿರುಚಿಯ ಭಾಗ್ಯ ದೊರೆಯಿತು! ಪ್ರತಿಮಾ ಗೊಂಡ್ ಎಂಬ ಮಹಿಳಾ ಮಹಾವಿದ್ಯಾಲಯದ ಒಬ್ಬ ಸಹ ಪ್ರಾಧ್ಯಾಪಕಿ ಮೀಡಿಯಾ ಮುಂದೆ ಹಾಜರಾದರು. ಅವರು ತಮಗಾದ ಪೊಲೀಸ್ ದೌರ್ಜನ್ಯದ ಬಗೆಗೆ ವಿವರಣೆಯನ್ನು ನೀಡಿದರು. ಅವರಿಗೆ ಗಾಯಗಳಾಗಿದ್ದು ಸ್ಪಷ್ಟವಾಗಿ ಗೋಚರಿಸುತ್ತಿತ್ತು.

ಬಿ.ಎಚ್.ಯು.ನ ಉಪಕುಲಪತಿ ಜಿ. ಸಿ. ತ್ರಿಪಾಠಿ, ಆರ್‌ಎಸ್‌ಎಸ್ ಮತ್ತು ಬಿಜೆಪಿಯ ವರಿಷ್ಠ ನಾಯಕರಿಗೆ ಹತ್ತಿರದವರಾಗಿದ್ದಾರೆ. ಪೊಲೀಸ್ ಹಲ್ಲೆ ಸಾಲದೆಂಬಂತೆ, ಈತ ವಿದ್ಯಾರ್ಥಿಗಳು ಸೆಪ್ಟೆಂಬರ್ ೨೪ರ ಸಂಜೆ ೫ರ ವೇಳೆಗೆ ಹಾಸ್ಟೆಲ್‌ಗಳನ್ನು ಖಾಲಿ ಮಾಡಬೇಕೆಂದು ಆದೇಶಿಸಿದರು. ಇದು ನೆರವೇರದಿದ್ದರೆ, ಸೂಕ್ತ ಕ್ರಮವನ್ನು ಜಾರಿಗೊಳಿಸು ವುದಾಗಿ ಬೆದರಿಸಿದರು! ವಿದ್ಯಾರ್ಥಿಗಳು ಮತ್ತು ಶಿಕ್ಷಕರು ತಲ್ಲಣವನ್ನು ಎದುರಿಸುತ್ತಿದ್ದಾಗ ಇಂತಹ

ಆಡಳಿತ ಕ್ರಮ ಅಮಾನವೀಯ ಹಾಗೂ ಅಸಂಗತವಾದುದೆಂಬ ಅಭಿಪ್ರಾಯಕ್ಕೆ ದೇಶಾದ್ಯಂತ ಸಹಮತವನ್ನು ವ್ಯಕ್ತಪಡಿಸಲಾಯಿತು. ಅನೇಕ ಸಾಮಾಜಿಕ ಮತ್ತು ರಾಜಕೀಯ ಸಂಸ್ಥೆಗಳು ವಿದ್ಯಾರ್ಥಿನಿಯರು ಮುಂಚೂಣಿಯಲ್ಲಿದ್ದ ಪ್ರತಿಭಟನೆಗಳಿಗೆ ಸ್ಪಂದಿಸಿದರು. ತ್ರಿಪಾಠಿ ಸೆಪ್ಟೆಂಬರ್ ೨೩–೨೪ರ ಘಟನೆಗಳನ್ನು ರಾಜಕೀಯ ಪಿತೂರಿ ಎಂದು ಬಣ್ಣಿಸಿ, ನಿಗದಿಯಾಗಿದ್ದ ಕಾಲಾವಧಿಯ ಮುನ್ನವೇ ದಸರಾ ರಜೆಗಳನ್ನು ಘೋಷಿಸಿದರು. ಆದರೆ ವಿದ್ಯಾರ್ಥಿಗಳ ಹೋರಾಟ ಮುಂದುವರಿಯಿತು.



ಬಿ.ಎಚ್.ಯು.ನಲ್ಲಿ ಹಲವು ವರ್ಷಗಳಿಂದ ಲಿಂಗತಾರತಮ್ಯ ನೀತಿಗಳನ್ನು ಅನುಸರಿಸಲಾಗುತ್ತಿತ್ತು. ವಿದ್ಯಾರ್ಥಿನಿಯರು ಮೆಸ್‌ನಲ್ಲಿ ಮಾಂಸಾಹಾರವನ್ನು ಭುಜಿಸುವುದಕ್ಕೆ ನಿರ್ಬಂಧವನ್ನು ಹೇರಲಾಗಿತ್ತು. ಅವರು ರಾತ್ರಿ ೧೦ ಗಂಟೆಯ ತರುವಾಯ ಮೊಬೈಲ್‌ಗಳನ್ನು ಬಳಸುವ ಹಾಗಿರಲಿಲ್ಲ. ಹಾಸ್ಟೆಲ್‌ಗಳಲ್ಲಿ ಇಂಟರ್‌ನೆಟ್ ಬಳಸುವುದನ್ನು ನಿಷೇಧಿಸಲಾಗಿತ್ತು. ವಿಶ್ವವಿದ್ಯಾಲಯದಲ್ಲಿ ಅವರು ಹಾಕಬೇಕಾದ ಉಡುಪುಗಳ ಬಗೆಗೂ ನಿಬಂಧನೆಗಳನ್ನು ಹೇರಲಾಗಿತ್ತು. ರಾತ್ರಿ ೧೦ ಗಂಟೆಯ ತರುವಾಯ ಕ್ಯಾಂಪಸ್ ವಿದ್ಯಾರ್ಥಿನಿಯರಿಗೆ ಕ್ಷೇಮಕರವಾಗಿಲ್ಲ ಎಂಬ ಅಂಶಕ್ಕೆ ಒತ್ತನ್ನು ನೀಡಲಾಗಿತ್ತು. ಅಲ್ಲದೆ, ಮೇಲೆ ಪ್ರಸ್ತಾಪಿಸಿರುವ ವಿದ್ಯಾರ್ಥಿಗಳ ಪ್ರತಿಭಟನೆಯ ಮುನ್ನ ಜರುಗಿದ ಕೆಲವು ನೇಮಕಾತಿಗಳಿಗೆ ಸಂಬಂಧಿಸಿದಂತೆ ಅನುಸರಿಸಬೇಕಾದ ಕ್ರಮಗಳನ್ನು ವಿಶ್ವವಿದ್ಯಾಲಯದ ಆಡಳಿತ ಮಂಡಳಿ ಗಾಳಿಗೆ ತೂರಿದೆ ಹಾಗೂ ಜಾತಿವಾದವು ಕೆಲಸ ಮಾಡಿದೆ ಎಂದು ಆಪಾದಿಸಿ ಶ್ರೇಣೀಕೃತ ಸಮಾಜದ ಕೆಳಸ್ತರದ ಮತ್ತು ಶೋಷಣೆಗೆ ಒಳಗಾಗಿರುವ ಸಮುದಾಯಗಳ ವಿದ್ಯಾರ್ಥಿಗಳು ಎರಡು ತಿಂಗಳಿಂದ ಪ್ರತಿಭಟನೆಗಳನ್ನು ನಡೆಸುತ್ತಲೇ ಇದ್ದರು. ಅಂದರೆ ಒಂದರ್ಥದಲ್ಲಿ, ಮನುವಾದದ ಅಜೆಂಡವನ್ನು ಜಾರಿಮಾಡಿದ್ದಕ್ಕಾಗಿ ಪ್ರತಿಭಟಿಸಿದ್ದರು ವಿದ್ಯಾರ್ಥಿಗಳು. ಆದರೆ ಇಂತಹವರನ್ನು ಹೊರಹಾಕುವುದಾಗಿ ಧಮಕಿ ಹಾಕಲಾಗಿತ್ತು. ಇವೆಲ್ಲ ಸಂಗತಿಗಳು ವಿದ್ಯಾರ್ಥಿ – ವಿದ್ಯಾರ್ಥಿನಿಯರ ಒಳಗುದಿಯನ್ನು ಹೆಚ್ಚಿಸಿದ್ದವು. ಆದುದರಿಂದ ಅವರು ಮತ್ತು ಹಾಲಿ ಹಾಗೂ ಮಾಜಿ ಅಧ್ಯಾಪಕರು ಸೇರಿ ಹೂಡಿದ ಹೋರಾಟ ಒಂದು ಹಂತದ ಯಶಸ್ಸನ್ನು ಪಡೆಯಿತು. ಪ್ರತಿಮಾ ಗೊಂಡ್ ಪೊಲೀಸ್ ದುಂಡಾವರ್ತನೆಯನ್ನು ಸಾರ್ವಜನಿಕವಾಗಿ ಬಹಿರಂಗಗೊಳಿಸಿದ್ದು, ನಂತರ ಚೀಫ್ ಪ್ರೊಕ್ಟರ್ ಓ. ಎನ್. ಸಿಂಗ್ ರಾಜಿನಾಮೆ ಸಲ್ಲಿಸಿದ್ದು, ಉಪಕುಲಪತಿಯ ಪಾಲಿಗೆ ನುಂಗಲಾರದ ತುತ್ತುಗಳಾಗಿ ಪರಿಣಮಿಸಿದವು. ಹೀಗೇ ಮುಂದುವರೆದರೆ, ಪರಿಸ್ಥಿತಿ ವಿಕೋಪಕ್ಕೆ ಹೋಗಬಹುದೆಂದು ಕೇಂದ್ರದ ಮಾನವ ಸಂಪನ್ಮೂಲ ಸಚಿವಾಲಯ ಮಧ್ಯ ಪ್ರವೇಶಿಸಿ, ತ್ರಿಪಾಠಿ ರಜೆಯ ಮೇಲೆ ಹೋಗಬೇಕೆಂದು ನಿರ್ದೇಶಿಸಿತು. ಅಕ್ಟೋಬರ್ ೩ರಂದು ತರಗತಿಗಳಿಗೆ ಹಾಜರಾದ ವಿದ್ಯಾರ್ಥಿಗಳು ಈ ಬೆಳವಣಿಗೆಯಿಂದ ಸ್ವಲ್ಪ ಸಂತುಷ್ಟರಾದರು. ಆದರೆ ಈ ಸಣ್ಣ ಯಶಸ್ಸಿನಿಂದ ವಿಶ್ವವಿದ್ಯಾಲಯದಲ್ಲಿ ಅನೇಕ ದಶಕಗಳಿಂದ ದರ್ಬಾರು ನಡೆಸುತ್ತಿರುವ ಊಳಿಗಮಾನ್ಯ, ಸಾಂಸ್ಕೃತಿಕ, ಸಾಮಾಜಿಕ ಹಾಗೂ ರಾಜಕೀಯ ವ್ಯವಸ್ಥೆಗಳು ಕೊನೆಗೊಳ್ಳುವುದೆಂಬ ತೀರ್ಮಾನಕ್ಕೆ ಬರುವುದು ಆತುರದ ಗ್ರಹಿಕೆಯಾಗುತ್ತದೆ. ಆದರೆ ಅನೇಕ ಪ್ರತಿಕೂಲ ಘಟನೆಗಳನ್ನು ಎದುರಿಸಿ, ವಿದ್ಯಾರ್ಥಿ–ವಿದ್ಯಾರ್ಥಿನಿಯರು ಪ್ರದರ್ಶಿಸಿದ ಒಗ್ಗಟ್ಟಿನ ಪ್ರತಿಭಟನೆಯ ಪ್ರದರ್ಶನವನ್ನು ಸಾರಾಸಗಟಾಗಿ ತಳ್ಳಿಹಾಕುವುದು ಸರಿಯಿಲ್ಲ. ಕಿಡಿಗಳಿಂದಲೇ ತಾನೇ ಜ್ವಾಲೆಯಾಗುವುದು!

ಇತ್ತೀಚೆಗೆ ಜರುಗಿದ ಪಂಜಾಬ್, ದೆಹಲಿ, ಜೆಎನ್‌ಯು, ತ್ರಿಪುರ, ಗುವಹಾತಿ ಮತ್ತು ಇತರ ಕೆಲವು ವಿಶ್ವವಿದ್ಯಾಲಯಗಳ ಚುನಾವಣೆಗಳಲ್ಲಿ ಅಖಿಲ ಭಾರತ ವಿದ್ಯಾರ್ಥಿ ಪರಿಷತ್ (ಎಬಿವಿಪಿ – ಬಿಜೆಪಿಯ ವಿದ್ಯಾರ್ಥಿರಂಗ)ನ ವಿಭಜನೀಯ, ಪ್ರತಿಗಾಮಿ, ಕೋಮು – ಧ್ರುವೀಕರಣ ಹಾಗೂ ಹಿಂಸಾ ರಾಜಕೀಯವನ್ನು ಸದೆಬಡೆಯುವುದರಲ್ಲಿ ಎಡ ಮತ್ತು ಪ್ರಜಾತಾಂತ್ರಿಕ ವಿದ್ಯಾರ್ಥಿ ಸಂಘಟನೆಗಳು ಯಶಸ್ವಿಯಾಗಿರುವುದು ಒಂದು ಆಶಾದಾಯಕವಾದ ಬೆಳವಣಿಗೆಯೇ ಸರಿ.

ನವದೆಹಲಿಯ ಜವಹರಲಾಲ್ ನೆಹರು ವಿಶ್ವವಿದ್ಯಾಲಯವೆಂದರೆ ಅದೊಂದು ಎಡಚಿಂತನೆಯ ವ್ಯಕ್ತಿಗಳನ್ನು ತಯಾರಿಸುವ ವಿದ್ಯಾಸಂಸ್ಥೆಯೆಂದು ಪರಿಗಣಿಸಿ, ಅದನ್ನು ನಾಮಾವಶೇಷಗೊಳಿಸಲು ಕೇಂದ್ರದ ಆಡಳಿತಾರೂಢ ಸರ್ಕಾರ ಎಲ್ಲ ಬಗೆಯ ಪ್ರಹಾರಗಳನ್ನು ಅವ್ಯಾಹತವಾಗಿ ಅದರ ಮೇಲೆ ಮಾಡುತ್ತ ಬಂದಿದೆ. ೧೯೬೬ರಲ್ಲಿ ಜೆಎನ್‌ಯು ಒಂದು ಸಂಸದೀಯ ಕಾಯಿದೆ ಮೂಲಕ ಅಸ್ತಿತ್ವಕ್ಕೆ ಬಂದಿತು. ಅಲ್ಲಿ ಶಿಕ್ಷಣ ಪಡೆದ ಅನೇಕರು ಸಮಾಜದಲ್ಲಿ ಗಣ್ಯಸ್ಥಾನಗಳನ್ನು ಅಲಂಕರಿಸಿ, ಸಾರ್ವಜನಿಕ ಜೀವನಕ್ಕೆ ಅಮೂಲ್ಯವಾದ ಕೊಡುಗೆಗಳನ್ನು ನೀಡಿದ್ದಾರೆ. ಹೀಗಾಗಿ, ಅದು ಬರೀ ಒಂದು ಎಡಪಂಥೀಯ ನೆಲೆ ಎಂದು ಗುರುತಿಸುವುದು ತಪ್ಪಾಗುತ್ತದೆ. ಪ್ರಸ್ತುತ ನಮ್ಮ ದೇಶದ ರಕ್ಷಣಾ ಸಚಿವೆ ನಿರ್ಮಲ ಸೀತಾರಾಮನ್ ಸಹ ಜೆಎನ್‌ಯುನ ಮಾಜಿ ವಿದ್ಯಾರ್ಥಿನಿ. ಕಳೆದ ವರ್ಷದ (೨೦೧೬) ಫೆಬ್ರವರಿ ಮಾಹೆಯ ಪ್ರಾರಂಭದಲ್ಲಿ ಜೆಎನ್‌ಯುನಲ್ಲಿ ಜರುಗಿದ ವಿಚಾರ ಸಂಕಿರಣದಲ್ಲಿ ವಿದ್ಯಾರ್ಥಿ ನಾಯಕ ಕನ್ಹಯ್ಯ ಕುಮಾರ್ ಮತ್ತು ಇತರರು ರಾಷ್ಟ್ರವಿರೋಧಿ ಘೋಷಣೆಗಳನ್ನು ಕೂಗಿದರು ಎಂದು ಆಪಾದಿಸಿ, ಅವರ ವಿರುದ್ಧ ರಾಜ್ಯದ್ರೋಹದ ಆರೋಪವನ್ನು ಜಡಿಯಲಾಗಿತ್ತು. ಈ ವಿಶ್ವವಿದ್ಯಾಲಯದ ಉಮರ್ ಖಾಲಿದ್ ಮತ್ತು ಅನಿರ್‌ಖಾನ್ ಭಟ್ಟಾಚಾರ್ಯ ಸಹ ಇದೇ ಆಪಾದನೆಯನ್ನು ಎದುರಿಸಬೇಕಾಯಿತು. ಇವರೆಲ್ಲ ಜೈಲುವಾಸಿಗಳೂ ಆದರು. ನಂತರ ನ್ಯಾಯಾಲಯಗಳು ಇವರನ್ನು ದೋಷಮುಕ್ತರನ್ನಾಗಿಸಿದವು. ಈಗಲೂ ಇವರು ಹಾಗೂ ಇವರು ಸೇರ್ಪಡೆಯಾಗಿರುವ ವಿದ್ಯಾರ್ಥಿ ಸಂಘಟನೆಗಳು ಶಿಕ್ಷಣ ಕ್ಷೇತ್ರದ ಹಲವು ಪೀಡೆಗಳ ವಿರುದ್ಧ ಹೋರಾಟಗಳನ್ನು ಮಾಡುತ್ತಿದ್ದಾರೆ / ಮಾಡುತ್ತಿವೆ.

ಮುಂದಿನ ವರ್ಷಗಳಲ್ಲಿ ಕನ್ಹಯ್ಯ ಕುಮಾರ್, ಶೆಹ್ಲಾ ರಷೀದ್, ಉಮರ್ ಖಾಲಿದ್, ಅನಿರ್‌ಬಾನ್ ಭಟ್ಟಾಚಾರ್ಯ, ಜಿಗ್ನೇಶ್ ಮೆವಾನಿ ಮತ್ತು ಇತರ ಹಲವು ವಿದ್ಯಾರ್ಥಿ – ಯುವ ನಾಯಕರು ನಮ್ಮ ದೇಶದ ರಾಜಕೀಯ ರಂಗ ಹಾಗೂ ಇತರ ಕ್ಷೇತ್ರಗಳಿಗೆ ಹೊಸ ಚೈತನ್ಯವನ್ನು ನೀಡಿ, ನಿಜವಾದ ಅರ್ಥದಲ್ಲಿ ನಮ್ಮಲ್ಲಿ ಪ್ರಜಾಪ್ರಭುತ್ವ ವ್ಯವಸ್ಥೆ ನೆಲೆಯೂರುವ ನಿಟ್ಟಿನಲ್ಲಿ ಕೊಡುಗೆಗಳನ್ನು ನೀಡಲಿ, ಇವರ ಸಮಸಮಾಜದ ಕನಸುಗಳು ನನಸಾಗಲಿ ಎಂದು ಹಾರೈಸೋಣ.

**ಮ. ಶ್ರೀ. ಮುರಳಿ ಕೃಷ್ಣ**
ನಂ. ೩೮, ೩ನೇ ಅಡ್ಡರಸ್ತೆ, ರಾಜಾ ಗಾರ್ಡನಿಯಾ ಬಡಾವಣೆ
ತುರಹಳ್ಳಿ, ಸುಬ್ರಹ್ಮಣ್ಯಪುರ ಅಂಚೆ, ಬೆಂಗಳೂರು – ೫೬೦ ೦೬೧

# ಸಣ್ತಿಮ್ಮಿ ಬುದ್ಧಾಯಣ

ಎಲ್ರಿಗೂ ನಮಸ್ಕಾರ 'ಸಂಬಂಜ ಅಂದ್ರೆ ದೊಡ್ದು ಕನ' ಉಚ್ಚವ ಮಾಡಿ ಕತೆ ಏಳಕೆ ಕರ್ದಿದಿರಿ. ಈ ಸರ್ತಿ ಬುದ್ನು ಕತೆಯೋಳಕೆ ಬಂದಿದೀನಿ. ಸಣ್ತಿಮ್ಮಿಗು ಬುದ್ದುಂಗು ಎಲ್ಲಿಂದ ಎಲ್ಗೆ ಸಂಬಂಧ ಅಂತಿರಾ? ಯಾಕಿರಬಾರ್ದು ಅಂತಿನಿ ನಾನು. ಅದ್ಸರಿ ಈ ಸಣ್ತಿಮ್ಮಿ ಬುದ್ದನ ಕತೆ ಎಲ್ಲಿ ಕಲ್ತಕಂಡ್ಲು ಅನ್ಕತಿದೀರಾ?

ನಮ್ಮೂರಾಗೆ ಅಟ್ಟಿ ಉಡ್ರು ವರ್ಸ ವರ್ಸ ಅಂಬಿಡ್ಕ್ರು ಜಯಂತಿ ಮಾಡ್ತಾರೆ. ಆ ವಯ್ಯ ನಮ್ಮೊರಂತೆ, ಸ್ಯಾನೆ ವೋದ್ಕಂಡಿತ್ತಂತೆ, ಅದು ಏಸ್ ವೋದಿತ್ತಂತೆ ಅಂದ್ರೆ ಅದ್ನ ಬರಯದ್ಕೆ ಪ್ಯಾಪ್ರು ಮ್ಯಾಗೆ ಈಟುದ್ದ ಜಾಗ ಬೆಂಕಂತಲ್ಲ, ಪಾರಿಂಗ್‌ಗೆಲ್ಲ ವೋಗಿ ಇಂಗ್ಲಿಸ್ನಾಗೆ ವೋದಿ, ಇಂಗ್ಲಿಸ್ನಾಗೆ ಮಾತಾಡದಂತಲ್ಲ, ಇಂಗ್ಲಿಸ್ನಾಗೆ ಬರ್‍ಯದಂತಲ್ಲ. ಯೇದ ಪುರಾಣನೆಲ್ಲ ಜಾಲಾಡಿತ್ತಂತೆ, ಲಾಯ್ರಿ ವೋದ್ಕಂಡು ಪೋಟಿಸವಾಲ್ ಆಕಿರಿ ಅಪ್ಪಂತೊರೂ ಜಬಾಬ್ ಕೊಡಾಕೆ ತಡ್‌ಬಡಾಯ್ಸರಂತಲ್ಲ. ಗಾಡಿಗಟ್ಲೆ ಪುಸ್ತ್ಕ ವೋದಿ ಲಾರಿಗಟ್ಲೆ ಪುಸ್ತ್ಕ ಬರ್ದದಂತಲ್ಲ. ಅಷ್ಟೆಲ್ಲ ವೊದ್ಕಂಡಿದ್ರು ಬಡುವ್ರು, ನೊಂದೋರ ಸಂಕ್ಟ ನೀಗಾಕೆ ಸ್ಯಾನೆ ವಡ್ದಾಡದಂತಲ್ಲ.

ಅಂಬಿಡ್ಕ್ರು ಜಯಂತಿನಾಗೆ ಅಟ್ಟಿ ಉಡ್ರು ನಾವೇ ವೋದಿದೀವಿ, ನಾವೇ ಪಾರಿಂಗ್‌ಗೆ ವೊಗಿದೀವಿ, ನಾವೇ ಸವಾಲ್ ಆಗ್ತಿದಿವಿ, ನಾವೇ ಪುಸ್ತ್ಕ ಬರ್ದಿದೀವಿ ಅನ್ನಂಗೆ ಡಿಕಾವಾಗಿ ವೋಡಾಡದ್ನ ನೋಡ್ಬೇಕು. 'ಲೇ ತಲಲ್ಟೆಗಳಾ ಆ ವಯ್ಯನಂಗೆ ನಿಜವಾಗು ವೋದಿ ಬುದ್‌ಮಂತರಾಗಿ, ಬಂಗಬಡ್ತನ ಅರ್ಸಕೆ ದುಡ್ದ ಮ್ಯಾಲೆ ಈ ಡಿಕಾವ್ ತೋರ್‍ರ್‍ೋ' ಅಂದೆ.

'ತಡಕ್ಕಂಡ್ ನೋಡ್ಕಳ ಪಾಯಿಂಟೇ ಇಡಿತಿಯಾ' ಅಂತವೆ. ಅವೆ ಅಂಬಿಡ್ಕ್ರು ಕತೆನೆಲ್ಲ ನಂಕೆ ಏಳದು.

ಒಂದ್ಸಾರಿ ಉಡ್ರು, ಯಕೊ ಅಂಬಿಡ್ಕ್ರು ನಮ್ಮೊರ್ಗೆಲ್ಲ 'ನಾನು ಬುದ್ದನ ದಾರಿನಾಗೆ ನಡಿಬೇಕು ಅಂತ ತೀರ್ಮಾನ ಮಾಡಿದೀನಿ. ನೀವು ಅದೇ ದಾರಿನಾಗೆ ನಡ್ದು ಮನುಸ್ರಾಗ್ರಿ' ಅಂತೇಳಿ ನಮ್ಮೋರ್ನೆಲ್ಲ ಬುದ್ದ ಧರ್ಮಕ್ಕೆ ಸೇರ್ಸಿದ್ರಂತೆ. 'ಈಗ ನಾವೂ ಅದೇ ದಾರಿನಾಗೆ ವೋಗ್ಬೇಕು ಅಂತ ಸಂಗ್ತೋರೆಲ್ಲ ಅಂದ್ಕಂಡಿದಿವಿ, ನಡಿ ನೀನೂವೆ ಬುದ್ದನ ಗುಡಿ ಇರೋ ಗುಲ್ಬರ್ಗಕ್ಕೆ' ಅಂದ್ರು.

ಯಾಸಟ್ಟ ಉಡ್ರು ಕರಿತವ್ರೆ ಅಂತ ವೋದೆ. ಅಲ್ಲೇನೂ ಊವ, ಅಣ್ಣು, ಕಾಯಿ, ಕಡ್ಡಿ, ಕರ್ಪೂರ, ಈಬತ್ತಿ, ಅಕ್ಕಸ್ತೆ, ಪೂಜೆ ಗೀಜೆ ಏನೂ ಮಾಡಲ್ಲ. ಪೂಜಿಲ್ದ್‌ಮ್ಯಾಲೆ ಪೂಜಾರೆಲ್ಲಿಂದ ಬಂದಾನು? ಇಗ್ರಹ ಇರಗಂಟ ಸಲೀಸಾಗಿ ವೋಗ್ಬೋದು. ಯಾರೂ ಅಚಾ ಅಚಾ ಅನ್ನಲ್ಲ. ಊರಾಗೆ ವನ್ನಮ್ಮನ್ಗುಡಿನಾಗೆ ಈಚೆಲೆ ನಿಂತ್ಕಬೇಕು. ಪೂಜಾರಿ ಬಂದು ಅಣ್ಕಾಯಿ ಇಸ್ಕಂಡೋಗಿ ಪೂಜೆ ಮಾಡಿ ತಂದ್ ಕೊಡ್ತನೆ. ಅಲ್ಲಿ ಅದ್ನೆಲ್ಲ ಏನೂ ಮಾಡಿಸ್ದೆ ಎಲ್ರೂನ ವಟ್ಗೆ ವಂದೆ ತವ್ಲೆ ಕುಂಡ್ರುಸಿ ದಿನ್ವೆಲ್ಲ ದ್ಯಾನ ಮಾಡಿಸ್ತರೆ.

ಧ್ಯಾನ ಮಾಡೊವಾಗ... ದನ ಮೇಸಕಂತ ವಡ್ಕೊಂಡೋಗಿ ಮರ್ದ್ ನೆಳ್ಳಾಗಿ ಸುಮ್ಕೆ ಕೂತ್ಕಂಡಾಗ ದನ ಮೇಯೋಸದ್ದು, ಅದ್ರ ಕೊಳ್ಳಾಗಿನ್ ಗಂಟೆ ಸದ್ದು, ಅಕ್ಕಿ ಸದ್ದು, ಜೀರುಂಡೆ ಸದ್ದು, ಗಾಳಿ ತಣ್ಗೆ ತೀಡೊ ಸದ್ದು, ಆಕಾಸ್ ಮಲ್ಗೆ ಗಮ ಮೂಗೊಳಿಕೆ ಇಳ್ದು ಅಂಗೆ ಅದ್ರೊಳ್ಗೆ ಕಳ್ದೊಯ್ತ ನಾನೆ ಅವೆಲ್ಲ, ಅವೆಲ್ಲ ನಾನೆ ಅನ್ಸದಲ್ಲ ಅಂಗೆ... ...ಏನೇಳನ ಏನಾತು ಅಂತ, ನೀವೆ ವೋಗಿ ವಂದಪ.

ದ್ಯಾನ ವಟ್ಗೆ ಮಾಡ್ಸ ಅಂಗೆ ಎಲ್ಲಾರ್‍ಗೂ ವಂದೆ ತರ್ದ ತಟ್ಟೆನಾಗೆ, ವಂದೆ ತವ ಊಣ್ಣಕಾಕೋರು. ನಾನುವೆ ಮಂಜ್‌ನಾತ್ನು, ಯಂಟ್ರೋಣ್‌ಸಾಮಿ ಅಂತೆಲ್ಲ ಸ್ಯಾನೆ ದೇವ್ರು ತಿರ್‍ಗಿದಿನಿ, ನಮ್ಕೆಲ್ಲ ದ್ಯಾವ್ರು ದೂರ, ಜತೇಲಿ ಬದ್ಕೊ ಜನ್ಗುಳು ದೂರ, ವಟ್ಗೆ ಕುಂತು ಉಣ್ಣಂಗಿಲ್ಲ, ಮುಟ್ಟಿ ಮಾತಾಡಂಗಿಲ್ಲ.

ದು. ಸರಸ್ವತಿ






(ರಂಗನಿರಂತರದವರು ಪ್ರತಿವರ್ಷ ಸಿಜಿಕೆಯವರ ನೆನಪಿನಲ್ಲಿ ಪ್ರತಿವರ್ಷ ರಂಗೋತ್ಸವವನ್ನು ಆಚರಿಸುತ್ತಾರೆ. ಕಳೆದ ವರ್ಷ 'ಸಂಬಂಜ ಅಂದ್ರೆ ದೊಡ್ದು ಕನ' ಎಂಬ ಹೆಸರಿನಲ್ಲಿ ಆಚರಿಸಲಾಯಿತು. ಆ ಸಂದರ್ಭದಲ್ಲಿ ಇನ್ನೂ ತಯಾರಿ ಹಂತದಲ್ಲಿದ್ದ ಏಕವ್ಯಕ್ತಿ ಪ್ರದರ್ಶನ)

ಬುದ್ದನ ಕತ್ತುಗ್ಳಾ ಅಲ್ಲಿರೊ ಗುರ್ಗುಳು ಬೋ ಚೆಂದಾಗೆ ಯೋಳ್ತರೆ. ಅಲ್ಲಿ ಕೇಳಿದ್ ಕತೆನೆಲ್ಲ ನಂಕೆ ತಿಳ್ದಂಗೆ ಯೋಳ್ತೀನಿ

**ನಾನ್ ತಗಳಿಲ್ಲ ತಂಪಾಗಿದೀನಿ, ನೀನಿನ್ನು ಇಟ್ಕಂಡಿದಿಯಾ ಅದ್ಕೆ ಉರಿತಿದಿಯಾ**

ಸಿಟ್ಟುಕ್ವಾಪ ಇಟ್ಕಂಡ್ರೆ ಸಂಬಂಜ ದೊಡ್ಡಾಗದುಂಟಾ? ತನ್ನು ಸುಟ್ಟು ಬ್ಯಾರೆರ್ನು ಸಿಟ್ನ ಬಿಡದೆಂಗೆ?

ಒಂದ್ಸಲ ಒಬ್ ಪಂಡಿತನ್ಗೆ ಬುದ್ದನ ಮ್ಯಾಲೆ ಸ್ಯಾನೆ ಕ್ವಾಪ ಬಂದಿತ್ತು. ಯಾಕೆಂದ್ರೆ ಜನಾದ್‌ಜನ್ವೆಲ್ಲ ಬುದ್ದನ ಉಪ್ದೇಸ ಕೇಳ್ಕಂಡು ಅವನ ದಾರಿ ಹಿಡ್ದಿದ್ರು, ಈ ಪಂಡಿತನ್ನ ಯಾರು ಕ್ಯಾರೆ ಕಿತಾರೆ ಅಂತಿರಲ್ಲಿಲ್ಲ ಅದಕ್ಕೆ 'ಇವತ್ತು ಅವ್ನ ಜಾಡ್ಸದೆ ಬಿಡಲ್ಲ' ಅಂತ ವೋಗಿ ಬಾಯ್ಗೆ ಬಂದಂಗೆ ಕೂಗಾಡಿ, ಕೀರಾಡಿ, ಆರಾಡಿ ಸುಸ್ತಾಗಿ ಕುತ್ಕಂಡ.

ಬುದ್ದ ಮಾತ್ರವಾ ಅಲ್ಲಾಡ್ದೆ ಸಿಲೆ ಅಂಗೆ ಕುತ್ಕಂಡು ತಂಪಾಗಿ ನಗ್ತ ಇದ್ದ.

ಅದನ್ನ ನೋಡಿ ಪಂಡಿತನ್ಗೆ ಇನ್ನೂ ಕ್ವಾಪ ಬಂದು 'ಏನಯ್ಯ ನೀನು? ನಾನು ಕೇಳಿದ್ಕೆಲ್ಲ ಜಬಾಬ್ ಕೊಡ್ದೆ ಕುಂತ್ಕಂಡಿರದು ಅಲ್ಲದೆ ನಗ್ತ ಇದಿಯಾ?' ಅಂತ ದಬಾಯಿಸ್ದ.

**ಬುದ್ದ :** ಗುರು 'ನಿಂದೆಲ್ಲ ಏಳಿ ಮುಗಿತಲ್ವಾ ಕೂತ್ಕ ಈಪಟು, ಕುಡಿ ನೀರು, ನಾನು ಈಗ ನಿಗೊಂದ್ ಪ್ರಶ್ನೆ ಆಕ್ತೀನಿ ನೀನು ಉತ್ರ ಕೊಡು ಅಂದ.

**ಪಂಡಿತ :** ಏನ್ ಬೇಕಾರು ಕೇಳು, ನಾನು ಪಂಡಿತ, ಎಂತ ಪ್ರಶ್ನೆಗಾದ್ರು ಉತ್ರ ಕೊಡ್ತೀನಿ ಅಂದ.

**ಬುದ್ದ :** ಆಯ್ತು 'ಈಗ ನಿಮ್ ಮನೆಗೆ ನಂಟ್ರು ಬಂದು ನಿನಗೆ ಅಂತ ಸ್ಯಾನೆ ಉಡುಗೊರೆ ತಂದು ಕೊಡ್ತಾರೆ, ನೀನು ಅದನ್ನ ತಗಳ್ದೆವೋದ್ರೆ ಏನಾಗುತ್ತೆ ಏಳು'?

**ಪಂಡಿತ :** ಏನಯ್ಯ ನೀನು? ಒಬ್ಬ ಪಂಡಿತನ್ಗೆ ಕೇಳೋ ಪ್ರಶ್ನೆನಾ ಇದು? ಏನಾಗುತ್ತೆ ಅವರತವ್ಲೆ ಬಿದ್ದಿರುತ್ತೆ ಅಷ್ಟೆ ಅಂದ.

**ಬುದ್ದ :** ಅಂಗೆನೆ 'ನೀನು ನಮ್ಮನೆಗೆ ಬಂದಿರೋ ನೆಂಟ, ಈಸೊಂತರ ಬೈಗಳದ ಉಡುಗ್ರೆ ಕೊಟ್ಟೆ, ನಾನು ತಗಳಿಲ್ಲ ಅದ್ಕೆ ತಂಪಾಗಿ ನಗ್ತ ಇದಿನಿ. ನೀನಿನ್ನು ಅದನ್ನ ಇಟ್ಕಂಡಿದಿಯಾ ಅದಿಕ್ಕೆ ಉರಿತಿದಿಯ' ಅಂತ ಬುದ್ದ ಯೋಳ್ತ ಇದ್ದಂಗೆ ಪಂಡಿತನಿಗೆ ಸತ್ಯ ಗೊತ್ತಾಗಿ ಸುಮ್ನೆ ಕುತ್ಕಂಡ, ಗುರುವೇ ನಿನ್ನ ಪಾದ ಅಂತ ಸಿಸ್ಯ ಆದ.

ಈ ಕ್ವಾಪ ಅಂಬೋದು ಬ್ಯಾರೆರ್ನಷ್ಟೆ ಉರ್ಸಲ್ಲ ನಮ್ಮನ್ನು ಉರ್ಸುತ್ತೆ. ಉರುದ್ರೆ ಸಂಬಂಜ ಉಳ್ಕತವಾ? ಉರ್ಯೋ ಬೆಂಕಿನಾ ಬೆಳ್ಗೊ ದೀಪ ಮಾಡ್ಕಂಡ್ರೆ ಅಲ್ವಾ ಬದ್ಕು ಬೆಳ್ಕಾಗದು. ಇನ್ನೊಬ್ರು ಕ್ವಾಪದಾಗೆ ಉರಿತಿದ್ರೆ ನೀರು ಇಟ್ಕಳದು ಬಿಟ್ಟು ಸೀಮೆಣ್ಣೆ ಇಟ್ಕಂಡ್ರೆ ಇಬ್ರು ಉರ್ಯದೆ. ಉರಿತಿದ್ರೆ ಬದ್ಕು ಉಳಿಯುತ್ತಾ?

**ಎಲ್ಲಾರ್ ಕಣ್ಣೀರೂ ಉಪ್ಪೇ**

ಗಂಗಾನದಿತವ ವಂದಪ ಬುದ್ದ ಸಿಸ್ಯರೊಂದ್ಗೆ ಬಿಕ್ಸೆಗೆ ವೋಗಿದ್ದ. ದಾರಿನಾಗ ವೋಯ್ತ ಇದ್ದ ಮಲ ಹೊರೊ ಸುನೀತ ಬುದ್ದನ್ನ ಕಂಡು ಅಂಗೆ ಇಂದ್ಕೆ ಸರ್ಕಂಡ. ಆದ್ರೂ ಬುದ್ದ ಅವನ್ತಕೆ ವೋದ. ಮೈಯಿ, ಬಟ್ಟೆ ಎಲ್ಲ ನಾರ್ತ ಇದ್ದ ಸುನೀತ ಗಾಬ್ರಿ ಬಿದ್ದು ನೀರೊಳ್ಗೆ ವೋಗಿ ಕುತ್ಕಂಡ.

**ಬುದ್ದ :** ಬಾಸಾಮಿ ನಿಂತಾವಸಿ ಮಾತಾಡ್ಬೇಕು.

**ಸುನೀತ :** ಅಯ್ಯೊ ದೂರ ವೊಗಿ ಸಾಮಿ ನನ್ನ ಮುಟ್ಕಂಡ್ರೆ ನೀವು ಗಲೀಜಾತಿರಾ.

**ಬುದ್ದ :** ನಮ್ನ ಗಲೀಜ್ ಮಾಡೋದು ದುರಾಸೆ, ದ್ವೇಷ, ಮೋಹ. ನೀನು ಸುದ್ವಾಗಿದಿಯಾ ಏನು ನಿನ್ನ ಎಸ್ರು.

**ಸುನೀತ :** ಸುನ್ತಾ ಅಂತರೆ ಸಾಮಿ.

**ಬುದ್ದ :** ದೀಕ್ಸೆ ತಗಂಡು ಬಿಕ್ಸು ಆಗು.

**ಸುನೀತ :** ಅದೆಂಗಾದಾತು ನಾನು ಕೀಳ್ ಜಾತಿಯೋನು.

**ಬುದ್ದ :** ಎಲ್ಲಾರ್ ಕಣ್ಣೀರ್ ಉಪ್ಪೆ! ಅರಿವಿನ್ದಾರಿನಾಗೆ ಜಾತಿ ಧರ್ಮ ಇಲ್ಲ.

**ಸುನೀತ :** ಏಲ್ಬಾಚೊ ನನ್ನ ಎಲ್ರೂ ಏಲ್ನಂಗೆ ಅಸಿಸಿ ಮಾಡ್ತರೆ ಇಂಗೆ ಯಾರು ನಂತವ ಮಾತಾಡಿರ್ಲಿಲ್ಲ ದೀಕ್ಸೆ ಕೊಟ್ರೆ ಜೀವಾ ಮುಡ್ಪಾಗಿಡ್ತೀನಿ.

**ಬುದ್ದ :** ಸುನೀತನ ಮೈದಡವಿ ತಲೆ ಬೋಳ್ಸಿ, ಮೈ ತಿಕ್ಕಿ ತೊಳ್ದು ಕರ್ಕೊಂಡೋಗಿ ದೀಕ್ಸೆ ಕೊಟ್ಟ. ಈ ಸಂಗ್ತಿ ಕೇಳಿದ ದರುಮ್‌ಗುರ್ಗೋಳೆಲ್ಲ ದೊರೆಗೆ ದೂರು ಕೊಟ್ರು. ಕೇಳಕೆ ಅಂತ ದೊರೆ ಬುದ್ದನತ್ರ ಬಂದ. ಆಸ್ರಮದೊಳ್ಗೆ

ವೊಗೊವಾಗ ಸಣ್‌ದೊಂದು ಬಂಡೆ ಮ್ಯಾಲೆ ಬಿಕ್ಸು ಒಬ್ಬ ಕುತ್ಕಂಡ ಉಪ್ದೇಸ ಕೊಡ್ತ ಇದ್ದ. ಅವ್ನ ಕಣ್ಣಿನ್ ದೀಪ್ದಾಗೆ ಅವ್ನ ಮಕ ವಳಿತಿತ್ತು. ಅವ್ನಾಡೊ ಮಾತ್ನ ಸಿಲೆ ಅಂಗೆ ಕುಂತು ಕೇಳ್ತ ಇದ್ದೋರ ಮಕ್ದಾಗೆ ಸಾಂತಿ ಅಡ್ಕಂಡಿತ್ತು. ರಾಜಂಗು ಅಲ್ಲೆ ಕುಂತು ಕೇಳ್ಬೇಕು ಅನ್ಸ್‌ತು. ಬುದ್ದನ್ನ ನೊಡ್ಬೇಕಲ್ಲ ಅಂತ ವೋಗಿ ಏನು ಎತ್ತ ಅಂತ ಯಿಚಾರ್ಸಿ ಅಲ್ಲಿ ಕುಂತಿರೊ ಬಿಕ್ಸು ಯಾರು ಅಂತ ಕೇಳ್ದ.

**ಬುದ್ದ :** ಅವ್ನು ಸುನೀತ, ಸ್ಯಾನೆ ಜಾಣ, ಪ್ರಾಮಾಣಿಕ. ಬಂದ್ ಮೂರ್ ತಿಂಗ್ಳಾಗೆ ದೊಡ್ಡ ಸಾದ್ನೆ ಮಾಡಿ ಬೋದ್ನೆ ಮಾಡಂಗೆ ಆಗವ್ನೆ ಅಂದ.

**ರಾಜ :** ದೂರು ಕೊಟ್ಟಿದ್ರೆ ಅಪರಾದ್ವಾಗ್ತಿಲ್ಲ ಅಂದ್ಕಂಡು 'ಯಾರ್ನೂ ಬೇದ ಮಾಡ್ದಿರೊ ನಿನ್ನ ಅಂತಕರ್ಣಕ್ಕೆ ಎಣೆನೇ ಇಲ್ವಲ್ಲಪ್ಪ. ನಿನ್ನ ಮಾರ್ಗ ಎಂತ ಅದ್ಬುತವಪ್ಪ' ಅಂತ ಕೈ ಎತ್ತಿ ಮುಗ್ದ.

**ಬುದ್ದ :** ಅರ್ವಿನ ದಾರಿನಾಗೆ ಜಾತಿಬೇದ ಇಲ್ಲ, ಎಲ್ಲರೂ ವಂದೆ, ಎಲ್ಲರ ರಕ್ತ ಕೆಂಪು, ಎಲ್ರ ಬೆವ್ರು ಉಪ್ಪೇ, ಎಲ್ಲರ ವಳ್ಗೂ ಅರಿವಿನ ದಾರಿ ಕಂಡ್ಕಳ ಬೆಳಕದೆ. ಸುನೀತನ ವಳ್ಗಿರೊ ಬೆಳ್ಕು ನಂಗೆ ಅವತ್ತೇ ಕಾಣ್ತು. ಅದ್ಕೆ ಸುನೀತನ್ನ ಕರ್‍ಕಂಡು ಬಂದೆ, ನೀನು ಇವತ್ತು ಕಂಡ್ಕಂಡೆ. ಕಾಣ್ದಿರೋರು ದೂರ್ಲಿ, ಕಂಡೋರು ಬರ್‍ಲಿ.

ಮನ್ನೆ ದಿನ ಕೆಜೆಪ್‌ನಾಗೆ ಒಂದೇಸಲ್ಕೆ ಮೂರ್ಜನ ಕಕ್ಕಸ್ ಗುಂಡಿನಾಗೆ ಬಿದ್ ಸತ್ತೋದ್ರು, ಆಗೆಲ್ಲ ಏಲ್ನ ಕೈಯಾಗೆ ಬಾಚುಸ್ತಿದ್ರು. ಈಗ ಏಲ್ನಾಗೆ ಈಜಾಡ್ಸಿ ಉಸ್ರುಗಟ್ಟಿ ಸಾಯ್ರಿ ಅಂತರೆ. ಗೊಬ್ರುದಾಗಿರೋ ಊವ ಊವ್ನಾಗಿರೊ ಗೊಬ್ರ ಕಂಡೋರಿಗೆ ಎಲ್ಲೂ ವಂದೇ ಅಂತ ಗೊತ್ತಾತದೆ. ಊವಿಲ್ದೆ ಗೊಬ್ರಿಲ್ಲ, ಗೊಬ್ರಿಲ್ದೆ ಊವಿಲ್ಲ ಅಂತ ಗೊಬ್ರಊವಿನ ಸಂಬಂಧ ಕತ್ರಿಸಾಕ್ದೋರ್‍ಗೆ ಊವ ಬೇರೆ ಗೊಬ್ರ ಬೇರೆ. ಅಂತೋರ್‍ಗೆಲ್ಲ ಅವ್ರ ಏಲೆ ಅವ್ರಿಗೆ ಅಸಯ್ಯ, ಅವರೇಲು ಬಾಚೊರು ಅಸಯ್ಯ. ಇನ್ನ ಅವರೊಳ್ಗಿರೊ ಅರಿವಿನ ಬೆಳ್ಕು ಕಾಣ್ಸದುಂಟಾ?

**ಸರ್‍ದೊಗೊ ಸಂಪತ್ತು ಸರ್‍ದೋಗೊ ಅಂದ**

ಅಮ್ರುಪಾಲಿ ಎಂಬೋಳು ಸ್ಯಾನೆ ಚೆಲ್ವೆ, ಕಾಗೆ ಅಂತ ಜಾಣೆ. ನವಿಲಂಗೆ ಕುಣಿಯೋಳು, ಕೋಗ್ಲಂಗೆ ಆಡೋಳು. ಬಿಂಬ್ಸಾರ ಅಂಬೊ ರಾಜ ಅವಳ್ಗೆ ಮರ್‍ಳಾಗಿ ಮಡಿಕಂಡಿದ್ದ ಅರ್‍ಮನೆನಾಗೆ. ಅರ್‍ಮನೆಯೋರ ಅವಳ್ನ ಸ್ಯಾನೆ ನಿಂದ್ಸೋರು. ಅದ್ಕೆ ನಿಮ್ ಸಾವಾಸ್ವೆ ಬ್ಯಾಡ ನಂಕೆ ಅಂದ್ಕಂಡು ರಾಜಂಗೆ 'ನಿಂಗ್ ಬೇಕಿದ್ರೆ ಬಾ' ಅಂತೇಳಿ ಮಾವಿನ್ ತ್ವಾಟ್ದಾಗೆ ಮನೆ ಮಾಡ್ಕಂಡು ಇದ್ಲು. ಜೀವ್ಕ ಅಂತ ಗಂಡ್ ಮಗ ಇದ್ದ. ಅಸಿನಂತೊನು, ಡಾಕ್ತ್ರಿ ವೋದ್ಕಂಡಿದ್ದ. ಬುದ್ದನ ಬಗ್ಗೆ ತಿಳ್ಕಂಡಿದ್ದ. ಅವ್ನು 'ಮಗ ನಡಿ ವಂದಪ ವೊಗ್ಬರನಾ' ಅಂತ ಸಂಘಕ್ಕೆ ಕರ್‍ಕಂಡು ವೋದ್ಲು. ವೋಗಿ ಬದ್ದನ್ನ ಮುಂದೆ ಕುತ್ಕಂಡು ನೇರ ದಿಟ್ಸಿ ನೋಡಿದ್ಲು. ಬುದ್ದನು ಅವ್‌ಳ್ನಾ ನೋಡ್ದ. ಯಾರು ಇಲ್ಲಿಗಂಟ ಅವ್‌ಳ್ನಾ ಅಂಗೆ ನೋಡಿರ್‍ಲಿಲ್ಲ. ಎಲ್ರು ಅವ್ಳ ರೂಪ ಕಂಡು ದಂಗ್ ಬಡ್ದೋಗೊರು ಇಲ್ಲ ಆಸೆ ಪಡೊರು. ಇವ್ನ ಕಣ್ಣಲ್ಲಿ ಆಸೆನೂ ಇಲ್ಲ,

> **ಕಂಬನಿ**
>
> ಕನ್ನಡದ ಹಿರಿಯ ಲೇಖಕಿ ಶ್ರೀಮತಿ ಸುನಂದಾ ಬೆಳಗಾಂವ್‌ಕರ್ ತಮ್ಮ ೮೨ನೇ ವಯಸ್ಸಿನಲ್ಲಿ ಡಿಸೆಂಬರ್ ೧೮ರಂದು ಬೆಂಗಳೂರಿನಲ್ಲಿ ನಿಧನ ಹೊಂದಿದ್ದಾರೆ. ಪ್ರಖ್ಯಾತ ಕತೆಗಾರ್ತಿ, ಕಾದಂಬರಿಗಾರ್ತಿ ಯಾಗಿದ್ದ ಸುನಂದಾ ಅವರು ಪ್ರಬಂಧ ರಚನೆಗೆ ಹೆಸರಾಗಿದ್ದವರು. ಕರ್ನಾಟಕ ಲೇಖಕಿಯರ ಸಂಘದ ಪ್ರಸಿದ್ಧ ಅನುಪಮಾ ಪ್ರಶಸ್ತಿಯಿಂದ ಸನ್ಮಾನಿತರಾಗಿದ್ದ ಸುನಂದಾ ಬೆಳಗಾಂವ್‌ಕರ್, ಕರ್ನಾಟಕ ಸಾಹಿತ್ಯ ಅಕಾಡೆಮಿಯ ಬಹುಮಾನ ಮತ್ತು ಗೌರವ ಪ್ರಶಸ್ತಿಗೆ ಭಾಜನರಾಗಿದ್ದರು. ಮೃತರಿಗೆ 'ಹೊಸತು' ಗೌರವಪೂರ್ವಕವಾಗಿ 'ನುಡಿ ನಮನ'ವನ್ನು ಸಲ್ಲಿಸುತ್ತದೆ.

ಅಚ್ರೆನೂ ಇಲ್ಲ. ಅಂತಕರ್ಣವೇ ಬೆಳ್ಕಾಗಿ ಅವ್ನ ಕಣ್ಣಾಗಿ ಕೂತದೆ ಅನ್‌ಸ್ತು. ಆ ಬೆಳಕ್ನಾಗೆ ಎಸ್ರು, ಅಂದ, ಐಸ್ಸಿರಿ ಎಲ್ಲ ಅರ್‍ದೋಗಿ ಅವ್ಳ ಮನ್ಸ್‌ನಾಳದ್ದೆಲ್ಲ ಅವನ್ಗೆ ಕಾಣ್ತು ಅದೆನೊ ಅನ್‌ಸ್ತು. ಆ ಬೆಳಕ್ನೆ ದೊಂದಿ ಮಾಡ್ಕಂಡು ಮುಂದ್ನ ದಾರಿ ನಡದ್ಲು.

ಎಂಗ್ಸು ಅಂದ್ರೆ ಒಂದ್ ಜೊತೆ ಮೊಲೆ ವಂದ್ ಯೋನಿ ಅಂದ್ಕೊಳೋರು ಬೆರ್‍ಗಾಗಿ ಅರ್‍ಗುಸ್ಕಳಕೆ ತಿಣ್ಕಾಡ್ತರೆ ಇಲ್ಲ ಆಸೆ ಪಟ್ಟು ಅಜಿರ್ಣವಾಗಿ ಪರ್‍ದಾಡ್ತರೆ. ಅದೂ ವಂದ್ ಜೀವ ಅನ್ಸಿದೊರ್‍ಗೆ ಅದ್ರೊಳ್ಗಿನ ಬೆಳ್ಕು ಕಾಣ್ಬೋದಲ್ವಾ?

**ಇಡಿದೇನೆ ಬಿಟ್ರೆ ಬಿಡ್ಗಡೆ**

ಒಬ್ರುನೊಬ್ರು ಮೆಚ್ಕಂಡು ಮದ್ವೆ ಆಗಿದ್ದ ಗೋತಮ್ನು ಗೋಪಾನೂ ಪಿರೂತಿ ಗೂಡಿನ ಜೋಡಿ ಅಕ್ಕಿಗಳಂಗೆ ಸಂಸಾರ ಮಾಡಿರು. ಬರಿ ಸಂಸಾರ್‍ದಾಗೆ ಕಳ್ದೊಗ್ತಿಲ್ಲ ಜನ್ರ ಕಸ್ಟಸುಕುಕ್ಕೆ ಸಾಯ ಮಾಡೊರು. ಅವರಪ್ನ ತಂಗಿ ಮಗ್ಳೆ ಅವ್ಳು. ರಾಜ್ಕುಮಾರಿ ಆದ್ರೂವೆ ಬಡುವ್ರು ಅಂದ್ರೆ ಮರ್‍ಗೊಳು. ಅಟ್ಟಿನಾಗೆ ವೋಗಿ ಕಾಯ್ಲಾಗಿರೊ ಮಕ್ಳಿಗೆ ಔಸ್ದ ಕುಡ್ಸೋಳು, ಗಾಯ್ವಾಗಿದ್ರೆ ಸೀಟಿ ಮುಲಾಮು ಸವ್ರೋಳು, ಅಸ್ದೋರ್‍ಗೆ ಅನ್ನ ಆಕೋಳು, ದುಕ್ದೊರ ಕಣ್ಣೀರ್ ವರ್‍ಸೋಳು. ಗೋತಮ್ನು ಅವ್ಳ ಕೆಲಸ್ಕೆ ಕೈ ಜೋಡಿಸ್ತಿದ್ದ.

ಏಸೊಂತರ ದುಕ್ಕ ಅದಲ್ಲ ಮನುಸ್ರುಗೆ, ಮೀರ್‍ಕಳದೆಂಗೆ ಅಂತ ಗಂಡ ಎಂಡ್ರು ಗಂಟ್ ಗಟ್ಲೆ ಕುಂತ್ಕಂಡು ಮಾತಾಡೊರು, ಮನ್ಸಿಗೆ ಬಾರ ಅನ್ಸಿರೆ ಮೌನ್ವಾಗಿ ಕುತ್ಕಳೋರು. ಸುಕ್ದಾಗೆ ದುಕ್ದಾಗೆ ಜೊತೆಲಿರೊರು. ಸೇವೆ ಮಾಡದ್ರಾಗೆ ಎಲ್ಲಾನೂ ಕಂಡ್ಕಂಡ್ಲು ಗೋಪ. ದುಕ್ಕ ಮೀರ್‍ಕಳ ದಾರಿ ಕಂಡಿಡಿಲೇ ಬೇಕು ಅಂತ ಅರ್ದರಾತ್ರಿನಾಗೆ ಎದ್ದು ಮನಿಕ್ಕಂಡಿದ್ದ ಎಂಡ್ತಿನೂ ಮಗೂನು ಬಿಟ್ಟು ವಂಟ ಗೊತಮ.

ನಿಜ್ವಾಗೂ ಮನಿಗಿದ್ಲೆ ಗೋಪಾ? ಮಲ್ಗಿದ್ರೆ ಎಚ್ರಾದ್ಮೇಲೆ ಎದ್ದು ಗೋಳಾಡಿ ಉಡುಕ್ತ ಇರ್‍ಲಿಲ್ವಾ? ವಂಟಿರೋನ್ಗೆ ಸಂಕ್ಟಕೊಡದ್ಯಾಕೆ ಅಂತ ಕಣ್ಮುಚ್ಕಂಡಿದ್ಲು ಅಷ್ಟೆ. ಬಿಡಿಸ್ಕಬೇಕು ಅನ್ನದ್ನ ಹಿಡ್ದಾಕಾಕೆ ಆಗುತ್ತಾ? ಕತ್ರುಸ್ಸ ಕಡ್ದಾಕಿರು ಕುಡಿ ವಡ್ಯೊ ನಂಟ್ನ ಬಿಡೋದೇನ್ ಸುಲ್ಬಾನಾ? ಆದ್ರೆ ಅವ್ಳು ಗಂಡನ್ನ ಕಟ್ಟಾಕ್ಲಿಲ್ಲ, ನಿಸೂರಾಗಿ ಬಿಟ್ಟಿತ್ಗೆ ಗೋತಮ, ಬುದ್ದ ಅಂಬೊ ಬೆಳ್ಕಾದ.

**ಕಲ್‌ನಂತ ಕರ್ಮ ಮಾಡಿರೆ ಮುಳುಗ್ತರೆ ಬೆಣ್ಣೆ ಅಂತ ಕರ್ಮ ಮಾಡಿರೆ ತೇಲ್ತರೆ**

ಒಂದ್ಸಲ ಒಬ್ಬ ಬುದ್ದನತ್ರ ಬಂದು 'ಗುರ್‍ವೆ ನಮ್ಮಪ್ಪ ತೀರ್‍ಕಂಡ, ಏನಾರು ಮಾಡಿ ನಮ್ಮಪ್ಪನ್ನ ಆತ್ಮಕ್ಕೆ ಸ್ವರ್ಗ ಕಾಣಿಸ್ಬೇಕು, ಏನಾರು ಮಾಡಕಾಗದು ನಿಂಕೈಲೇ, ಏನಾರು ಮಾಡು' ಅಂತ ಪರಿ ಪರಿಯಾ ಕೇಳ್ಕಂಡ. ಬುದ್ದ ಎಂದುವೆ ದೇವ್ರು, ಆತ್ಮ, ಪರಮಾತ್ಮ ಅನ್ನೊ ಮಾತ್ನೇ ಆಡ್ತಿರ್‍ಲಿಲ್ಲ. ಸರ್‍ಯಾದ್ ಮಾರ್ಗದಾಗೆ ನಡ್ದು, ಸರ್‍ಯಾಗಿ ಬದ್ಕಿ ಅಂತ ಮಾತ್ರ ಏಳ್ತಿದ್ದ. ಈಗ ಇವ್ನಿಗೆ ಏನು ಏಳಿರು ತಿಳ್ಯಲ್ಲ, ಏನಾರು ಮಾಡೆ ಇವ್ನಿಗೆ ತಿಳಿ ಏಳ್ಬೇಕು ಅಂದ್ಕಂಡು 'ವೋಗಿ ಎಲ್ಡು ಮಡ್ಕೆ, ವಸಿ ದುಂಡನೆ ಕಲ್ಲು, ವಸಿ ಬೆಣ್ಣೆ ತಾಂಬಾ' ಅಂದ.

ಅವ್ನು, ವೋ ಬುದ್ದ ಗ್ಯಾರಂಟಿ ನಮ್ಮಪ್ಪನ ಆತ್ಮನ ಸ್ವರ್ಗಕ್ಕೆ ಕಳಿಸ್ತಾನೆ ಅಂತ ದೌಡೊಡ್ಕಂಡು ವೋಗಿ ಏಳಿದ್ನೆಲ್ಲ ತಂದ.

**ವಯ್ಯ :** ಇಗ ಸಾಮಿ ನೀನೇಳಿದ್ದೆಲ್ಲವ ತಂದಿದಿನಿ.

**ಬುದ್ದ :** ಸರಿ ಈಗ ವಂದ್ ಮಡ್ಕೆ ವಳಿಕೆ ಕಲ್ಲಾಕು, ಇನ್ನೊಂದು ಮಡ್ಕೆ ವಳಿಕೆ ಬೆಣ್ಣೆ ಆಕು, ನೀರಿನ್ಮೇಲೆ ಮಡ್ಗಿ ದೊಣ್ಣೆ ತಾಂಡು ವಡ್ದಾಕು.

**ವಯ್ಯ :** ಅವ್ನು ಏಳ್ದಂಗೆ ಮಾಡಿ ಆಯ್ತು ಸಮೆ ಇನ್ನಿಪಟ್ಟು ಏನಾರು ಕಾರ್ಯ ಮಾಡಿ ಅಪ್ಪುಂಗೆ ಸ್ವರ್ಗ ತೋರು.

**ಬುದ್ದ :** ಇನ್ನೇನು ಮಾಡದಿಲ್ಲ, ಮಾಡದೆಲ್ಲ ನೀನೇ ಮಾಡ್ದಲ್ಲ.

**ವಯ್ಯ :** ಅಯ್ಯ ಏನ್ಮಾಡ್ದೆ ಮಡ್ಕೆ ವಡ್ದೆ ಕಲ್ಗುಳು ಮುಳ್ಗೋದ್ವು, ಬೆಣ್ಣೆ ತೇಲ್ತ ಅದೆ ಅಷ್ಟೆ.

**ಬುದ್ದ :** ನಿಮ್ಮಪ್ಪ ಕಲ್ನಂತ ಕರ್ಮ ಮಾಡಿದ್ರೆ ನರ್‍ಕಕ್ಕೆ ವೊಯ್ತನೆ, ಬೆಣ್ಣೆ ಅಂತ ಕರ್ಮ ಮಾಡಿದ್ರೆ ಸ್ವರ್ಗದಾಗೆ ತೇಲ್ತನೆ, ಎಲ್ಲರು ನಮ್ ನಮ್ ಕರ್ಮದಂಗೆ ಸ್ವರ್ಗನರ್‍ಕ ಕಂಡ್ಕತಿವೆ ವರ್‍ತು ಬ್ಯಾರೆರು ಕಳ್ಸಕೆ ಆಗಲ್ಲ ತಿಳಿತಾ?

**ವಯ್ಯ :** ತಿಳಿ ನೀರಂಗಿರ ಸತ್ಯವಾ ಕಾಣ್ದೆ ವೋದ್ನಲ್ಲ ಅನ್ನಾದು ತಿಳಿತು ಗುರ್‍ವೆ.

**ಗೊತ್ತಾದ ದಾರಿನಾಗೆ ನಡ್ದ್ರೆ ತಾನೆ ಊರು ಸಿಗದು**

ಬುದ್ನ ಉಪ್ದೇಸ ಕೇಳಕೆ ಸ್ಯಾನೆ ಜನ ಬರೊರು. ಅದರಾಗೆ ದಿನಾ ಬರೋ ಒಬ್ಬ ಒಂದಿನ ಉಪ್ದೇಸ ಮುಗ್ಸ್‌ಮ್ಯಾಲೆ ಬುದ್ದನತ್ರ ಬಂದು 'ಗುರ್‍ವೆ ಇಸೊಂತರ ಜನ ಉಪ್ದೇಸ ಕೇಳಕೆ ಬತ್ತರಲ್ಲ, ಇದ್ರಾಗೆ ಏಸ್ ಜನ ಅನ್ಸರ್‍ಸಿ ನಿರ್ವಾಣ ಕಾಣ್ಬೊದೇಳಿ?' ಅಂತ ಕೇಳ್ದ.

**ಬುದ್ದ :** ಯಾರಯ್ಯ ನೀನು ಈ ಊರೋನ್ತರ ಕಾಣಲ್ಲ.

**ವಯ್ಯ :** ಊ ಸಾಮೆ ನಂದು ಆ ಊರು, ವ್ಯಾಪರ್‍ಕೆ ಅಂತ ಬಂದು ಇಲ್ಲೆ ನೆಲೆ ನಿಂತೆ, ಕಂಡಿಡ್ದು ಬುಟ್ರಲ್ಲ.

**ಬುದ್ದ:** ಮಖ–ಮೂತಿ–ಮಾತು ನೋಡಿ ಗೊತ್ತಾತು. ಯಂಗೆ ವೋಗ್ಬೇಕು ನಿಮ್ಮೂರ್ಗೆ.

**ವಯ್ಯ:** ಬೆಳ್ಗಾನೆದ್ದು ನಾಕ ಅರ್ದಾರಿ ನಡ್ದು, ಬೆಟ್ಟ ಅತ್ತಿ ಇಳ್ದು ವಳೆ ದಾಟಿ ಉತ್ರಕ್ಕೆ ಒಂದ್ ಮೈಲ್ ನಡ್ದ್ರೆ ಸಿಗುತ್ತೆ ಸಮೆ.

**ಬುದ್ದ:** ದಾರಿ ಗೊತ್ತಾದ್ರೆ ಸಾಕು, ಊರ ತಲ್ಪ್ಬೋದಾ?

**ವಯ್ಯ:** ಅದೆಂಗಾದಾತು ಸಾಮೆ ಗೊತ್ತಾದ ದಾರಿನಾಗೆ ನಡ್ದ್ರೆ ತಾನೆ ಊರು ಸಿಗದು.

**ಬುದ್ದ:** ಅಂಗೆ ಇದುನೂವೆ, ಇಂತದೊಂದು ದಾರಿ ಅದೆ ಅಂತ ಏಳ್ತೀನಿ, ಆ ದಾರಿನಾಗೆ ನಡ್ದು ತಲ್ಪ ಬೇಕಾಗಿರದ್ನ ತಲ್ಪೋದು ಅವರವರಿಗೆ ಬಿಟ್ಟಿದ್ದು ಅಂದ.

**ಕಾಲ್ದೂಳ್ನಾಗೆ ಮಿಂದಿರೊ ನೂಲ್ನಾಗಿರು ಬೆಳ್ಕು**

ಸಿಸ್ಯ: ಗುರ್ವೆ ದಟ್ಟಿ ಸಮ್ದದೆ ಬ್ಯಾರೆದು ತಗಳ್ಲಾ.

**ಬುದ್ದ:** ಇನ್ನು ಗಟ್ಟಿಗದೆ ವದ್ಕಂಡು ಮಲ್ಕ ಮಗಾ.

ಸಿಸ್ಯ: ವದಿಲಾರ್ದಷ್ಟು ಸಮ್ದದೆ ಗುರ್ವೆ.

**ಬುದ್ದ:** ಅಂಗರೆ ಆಸ್ಕ.

ಸಿಸ್ಯ: ಆಸ್ಕಳಾರ್ದಷ್ಟು ಸಮ್ದದೆ ಗುರ್ವೆ.

**ಬುದ್ದ:** ಅಂಗರೆ ಮಡ್ಸಿ ದಿಂಬಿನ್ಚೀಲ ಮಾಡ್ಕ.

ಸಿಸ್ಯ: ದಿಂಬಿನ್ಚೀಲಾನು ಸಮಿತು ಗುರ್ವೆ.

**ಬುದ್ದ:** ನೆಲವರ್ಸ್ಲೊ ಬಟ್ಟೆ ಮಾಡ್ಕ.

ಸಿಸ್ಯ: ನೆಲವರ್ಸ್ಲೊ ಬಟ್ಟೆನೂ ಜೂಲಾಗದೆ ಗುರ್ವೆ.

**ಬುದ್ದ:** ಜೂಲ್ನೆಲ್ಲ ಸೇರ್ಸಿ ಕಾಲೊರ್ಸ್ಲೊ ಬಟ್ಟೆ ಮಾಡ್ಕೊ.

> ### ಗೆಳೆಯ
>
> ನಗೆಯ ಬೆಳದಿಂಗಳಲಿ  
> ಮೌನ ಮಾತಾಡಿ  
> ನೆನಪನ್ನು ಪಿಸುಗುಟ್ಟಿತೇ?
>
> ನೆನಪಿನ ಪಿಸುನುಡಿಯು  
> ಅಂತರಾಳವನ್ನು ಕೆಣಕಿ  
> ಕಾವು, ಇಬ್ಬನಿಯಾಗಿಸಿತೇ?
>
> ಇಬ್ಬನಿಯ ಮೌನದಲಿ  
> ಇದೆಂತಹ ಹೊಳಹು?  
> ಗೆಳೆಯ ನೀ ನಗೆ ಚೆಲ್ಲಿದೆಯಾ?
>
> **ಡಾ॥ ಷಾಕಿರಾ ಖಾನಂ,** ಬೆಂಗಳೂರು

ಸಿಸ್ಯ: ಕಾಲೊರ್ಸ್ಲೊ ಬಟ್ಟೆನೂ ನೂಲಾಗದೆ ಗುರ್ವೆ.

**ಬುದ್ದ:** ನೂಲೆಲ್ಲ ಸೇರ್ಸಿ ಬತ್ತಿ ಮಾಡಿ ದೀಪ ವಚ್ಚಿ ಕತ್ಲಿಗೆ ಬೆಳ್ಕ್ ಮಾಡ್ಕೊ.

ಕಾಲ್ದೂಳಾಗೆ ಮಿಂದಿರೋ ನೂಲ್ನಾಗೂ ಬೆಳಕ್ನ ಕಾಣ್ತಿಯಲ್ಲ ಗುರ್ವೆ ನಿನ್ ಪಾಠ ಅರ್ತವಾಯ್ತು, ಶರ್ಣು ಗುರ್ವೆ ಅಂದ ಸಿಸ್ಯ.

ಒಂದ್ ದಟ್ಟಿನ ಈಟೂ ಎಸ್ಟ್ ಆಗ್ದಂಗೆ ಬಳ್ಸದ್ರಾಗೆ ಏಟೊಂದು ಪಾಟ ಏಳ್ಬುಡ್ತು ಆವಯ್ಯ! ದಟ್ಟಿ ಇರ್ಲಿ ಒಂದ್ ಮುಷ್ಟಿ ಅನ್ನಾನು ಎಚ್ಗೆ ಬಿಕ್ಸೆ ಬೇಡಂಗಿಲ್ಲ ಅಂದ.

ವಸಿ ಜನದ ಕಳ್ಳು ಅನ್ನಿಲ್ದೆ ಸೀದೋತವೆ, ವಸಿ ಜನ ಕಳ್ ಬಿರ್ಯೊವಷ್ಟು ಉಣ್ತರೆ. ಅಂಚ್ಕಂಡು ಉಣ್ಡ್ರೆ ಮಾತ್ರ ಕಳ್ಳು ಸೀಯದು ಇಲ್ಲ ಬಿರಿಯ್ದು ಇಲ್ಲ ಅಲ್ವಾ?

ಸಂಬಂಜ ಅಂದ್ರೆ ಗಂಡೆಂಡ್ರುಮಕ್ಳುನಂಟ್ರು ಅಷ್ಟೆಯಾ? ಭೂಮಿ ಮ್ಯಾಲಿರೊ ಮನುಸ್ರು ಅಷ್ಟೆ ಅಲ್ಲ ಗಿಡಮರಪಸುಪಕ್ಸಿ ಸಕಲೇಷ್ಟು ಜೀವಜಂತುಗಳು ಎಣ್ಕಂಡಲ್ವಾ ಸಂಬಂಜ ಅನ್ನೊದಾಗಿರೋದು? ಅದ್ಕೆ ಅಲ್ವಾ ಅದು ದೊಡ್ದು? ಆ ಸತ್ಯ ತಿಳ್ಕಂಡಿದ್ಕೆ ಆ ಬುದ್ದಗುರು ಯಾರ ಬದ್ಕಿಗೂ ದುಕ್ಕದ ಕತ್ಲಾಗ್ದೆ ಅರಿವಿನ ಬೆಳ್ಕಾದ.

ಅವ್ನು  
ಉಟ್ಟಿದ್ದು ಬಯಲ್ನಾಗೆ, ಮರ್ದಡಿ, ಬೆಳ್ದಿಂಗ್ಳಾಗೆ  
ಸತ್ಯ ಕಂಡ್ಕಂಡಿದ್ದು ಬಯಲ್ನಾಗೆ, ಮರ್ದಡಿ, ಬೆಳ್ದಿಂಗ್ಳಾಗೆ  
ತೀರೋದ್ದು ಬಯಲ್ನಾಗೆ, ಮರ್ದಡಿ, ಬೆಳ್ದಿಂಗ್ಳಾಗೆ  
ಅರ್ವು ಅಂದ್ರೆ ಆದಿ ಅಂತ್ಯವಿಲ್ದ ಬೆಳ್ಕಿನ ಬಯ್ಲು  
ಆ ಬೆಳ್ಕಿಗೆ ಶರ್ಣು

**ದು. ಸರಸ್ವತಿ**  
ಮಹಿಳಾ ಅಧ್ಯಯನ ವಿಭಾಗ, ಜ್ಞಾನಶಕ್ತಿ ಕ್ಯಾಂಪಸ್, ಅಥಣಿ ರಸ್ತೆ, ತೊರವಿ, ವಿಜಯಪುರ – ೫೮೬ ೧೦೮



धर्म संसद, उड़पि, २०१७
Dharma Sansad, Udupi, 2017

# ಧರ್ಮಸಂಸತ್

## ಸಾಂಸ್ಕೃತಿಕ ಬಂಡವಾಳದ ಶಕ್ತಿಪ್ರದರ್ಶನ

ಪ್ರೊ॥ ರಾಜಾರಾಮ ತೋಳ್ಪಾಡಿ

ಪ್ರೊ॥ ನಿತ್ಯಾನಂದ ಬಿ. ಶೆಟ್ಟಿ

೨೦೧೭ರ ನವೆಂಬರ್ ೨೪ರಿಂದ ೨೬ರವರೆಗೆ ಉಡುಪಿಯಲ್ಲಿ ನಡೆದ ಧರ್ಮಸಂಸತ್‌ನ ಅಧಿವೇಶನದಲ್ಲಿ ಶೈಕ್ಷಣಿಕ ಕುತೂಹಲದಿಂದ ವೀಕ್ಷಕರಾಗಿ ಭಾಗವಹಿಸಿದ ನಾವು, ಅಲ್ಲಿ ಕಂಡ ದೃಶ್ಯಗಳ ಹಾಗೂ ಕೇಳಿದ ವಿಭಿನ್ನ ರೀತಿಯ ಸಂಕಥನ–ಪ್ರವಚನಗಳ ಹಿನ್ನೆಲೆಯಲ್ಲಿ ನಮ್ಮಲ್ಲಿ ಒಡಮೂಡಿದ ಕೆಲವು ವಿಚಾರಗಳನ್ನು ಇಲ್ಲಿ ಮಂಡಿಸುತ್ತಿದ್ದೇವೆ.

ಶೋಭಾಯಾತ್ರೆ ಮತ್ತು ಹಿಂದೂ ಸಮಾಜೋತ್ಸವಗಳಂತಹ ಸಾರ್ವಜನಿಕ ಉತ್ಸವಗಳನ್ನು ಹೊರತುಪಡಿಸಿ ಈ ಧರ್ಮ ಸಂಸತ್ತಿನ ಕಲಾಪದಲ್ಲಿ ವೈಚಾರಿಕ ಎಂದು ಕರೆಯಬಹುದಾದ ನಾಲ್ಕು ಗೋಷ್ಠಿಗಳಿದ್ದವು. ಈ ಗೋಷ್ಠಿಗಳಲ್ಲಿ ಅಯೋಧ್ಯೆಯ ರಾಮಮಂದಿರ ನಿರ್ಮಾಣದ ಕಾರ್ಯಸೂಚಿ, ಗೋಹತ್ಯೆ–ಗೋರಕ್ಷಣೆಗೆ ಸಂಬಂಧಿಸಿ ರೂಪಿಸಬೇಕಾದ ಕಾರ್ಯತಂತ್ರಗಳು, ಸಾಮರಸ್ಯದ ಜಿಜ್ಞಾಸೆ ಹಾಗೂ ಮತಾಂತರವನ್ನು ತಡೆಗಟ್ಟುವ ಕುರಿತು ಚರ್ಚಿಸಲಾಯಿತು. ಈ ಬಾರಿಯ ಧರ್ಮಸಂಸತ್ತು ಸಾಮರಸ್ಯದ ಪ್ರಶ್ನೆಯನ್ನು ಎತ್ತಿರುವುದು ಮತ್ತು ಅದಕ್ಕಾಗಿ ಒಂದು ಪ್ರತ್ಯೇಕವಾದ ಗೋಷ್ಠಿಯನ್ನು ಏರ್ಪಡಿಸಿರುವುದು ವಿಶೇಷವಾಗಿ ಕಾಣಿಸುತ್ತದೆ.

ಹಿಂದೂ ಧರ್ಮದ ವಿಭಿನ್ನ ಸಂಪ್ರದಾಯಗಳನ್ನು ಮತ್ತು ಸಮುದಾಯಗಳನ್ನು ಪ್ರತಿನಿಧಿಸುವ ಧರ್ಮಗುರುಗಳ ಈ ಸಮಾವೇಶವನ್ನು ವಿಶ್ವ ಹಿಂದೂ ಪರಿಷತ್ ಧರ್ಮಸಂಸತ್ತು ಎಂದು ಕರೆಯುತ್ತದೆ. ನಮ್ಮಲ್ಲಿ ಮೂಡಿದ ಮೊದಲ ಸಮಸ್ಯೆ ಏನೆಂದರೆ ಸಾಧು–ಸನ್ಯಾಸಿಗಳನ್ನೊಳಗೊಂಡ ಈ ಧರ್ಮಸಂಸತ್‌ಗೂ ಸುದೀರ್ಘ ಸ್ವಾತಂತ್ರ್ಯ ಹೋರಾಟದ ಮೂಲಕ ನಾವು ಸಾಧಿಸಿಕೊಂಡ ಪ್ರಜಾತಾಂತ್ರಿಕ ಗಣರಾಜ್ಯದ ಸಂವಿಧಾನ ಸಂಘಟಿಸಿದ ಸಂಸತ್‌ಗೂ ಏನು ಸಂಬಂಧ? ಏಕಕಾಲದಲ್ಲಿ ಬೃಹತ್ ಹಿಂದೂ ಸಮಾಜದ ಸದಸ್ಯನಾಗಿರುವ ಮತ್ತು ಭಾರತದ ನಾಗರಿಕನೂ ಆಗಿರುವವನೊಬ್ಬ ಈ ಎರಡು ಸಂಸತ್ತುಗಳನ್ನು ಯಾವ ಸಂಬಂಧದಲ್ಲಿ ಗ್ರಹಿಸಿಕೊಳ್ಳಬೇಕು? ಎನ್ನುವುದು.

ವಿಶ್ವ ಹಿಂದೂ ಪರಿಷತ್‌ನ ನಿಲುವಿನಂತೆ ಸಾಧು–ಸನ್ಯಾಸಿಗಳು ಪ್ರತಿನಿಧಿಸುವ ಧರ್ಮ ಸಂಸತ್ತು, 'ಸಾಂಸ್ಕೃತಿಕ ಭಾರತ'ದ ಮಾರ್ಗದರ್ಶೀ ಸಂಸ್ಥೆ. ಸಂವಿಧಾನದ ಮೂಲಕ ಸಂಘಟಿತಗೊಂಡ ಸಂಸತ್ತು, 'ರಾಜಕೀಯ ಭಾರತ'ದ ಕಾರ್ಯ ನಿರ್ವಾಹಕ ಸಂಸ್ಥೆ. ಭಾರತ ಮೂಲತಃ ಒಂದು ಸಾಂಸ್ಕೃತಿಕ ಅಸ್ತಿತ್ವವಾಗಿರುವುದರಿಂದ ಧರ್ಮಸಂಸತ್ತು ರಾಜಕೀಯ ಭಾರತದ ಸಂಸತ್‌ಗೆ ಮಾರ್ಗದರ್ಶಿಯಾಗಬಲ್ಲಂತಹುದು. ಭಾರತದ ಪಾರಂಪರಿಕ ಇತಿಹಾಸಕ್ಕೆ ಅನುಗುಣವಾಗಿ ರಾಜಗುರುವಿನ ಸ್ಥಾನವನ್ನು ಆಧುನಿಕ ಪ್ರಜಾತಾಂತ್ರಿಕ ಭಾರತದಲ್ಲಿ ಧರ್ಮಸಂಸತ್ತು ನಿರ್ವಹಿಸುತ್ತದೆ ಎಂದು ವಿಶ್ವ ಹಿಂದೂ ಪರಿಷತ್ ತಿಳಿಯುತ್ತದೆ. ಈ ಹಿನ್ನೆಲೆಯಲ್ಲಿ ಸ್ವಾತಂತ್ರ್ಯ ಹೋರಾಟದ ಮೂಲಕ ನಾವು ದಕ್ಕಿಸಿಕೊಂಡ ಸಾಂವಿಧಾನಿಕ ಪ್ರಜಾತಾಂತ್ರಿಕ ಸಂಸದೀಯ ವ್ಯವಸ್ಥೆಗೂ ವಿಶ್ವ ಹಿಂದೂ ಪರಿಷತ್ ಪರಿಕಲ್ಪಿಸಿದ ಧರ್ಮಸಂಸತ್‌ಗೂ ಅಗಾಧವಾದ ಮತ್ತು ಬಗೆಹರಿಸಲಾಗದ ವಿರೋಧಾಭಾಸ ಎದ್ದುಕಾಣುತ್ತದೆ.

ಯಾವುದೇ ಆಧುನಿಕ ಪ್ರಜಾತಾಂತ್ರಿಕ ಸಂಸತ್ತು ಎಷ್ಟೇ ಕ್ಷೀಣವಾದ ರೂಪದಲ್ಲಾದರೂ ಒಂದು ಅಧಿಕೃತ ಪ್ರತಿಪಕ್ಷವನ್ನು ಹೊಂದಿರುತ್ತದೆ. ಈ ಪ್ರತಿಪಕ್ಷ ಸಂಸದೀಯ ಕಾರ್ಯಕಲಾಪಗಳಿಗೆ ಅವಶ್ಯಕ ಮತ್ತು ಅನಿವಾರ್ಯ. ಪ್ರತಿಪಕ್ಷವಿಲ್ಲದ ಸಂಸತ್ತನ್ನು ತಾತ್ವಿಕವಾಗಿ ಪರಿಕಲ್ಪಿಸಲು ಸಾಧ್ಯವಿಲ್ಲ. ಅಂತಹ ವಿರೋಧ ಪಕ್ಷದ ಸಂಪೂರ್ಣ ಗೈರುಹಾಜರಿ ಈ ಧರ್ಮಸಂಸತ್‌ನಲ್ಲಿ ಎದ್ದುಕಾಣುತ್ತದೆ. ಅಂತೆಯೇ, ಸಂಸತ್‌ನ ಪರಿಕಲ್ಪನೆ ತನ್ನ ಮೂಲ ಸ್ವರೂಪದಲ್ಲಿಯೇ ಪ್ರಾತಿನಿಧಿಕತೆಯನ್ನು ಬಿಂಬಿಸುವಂತಹುದು. ಈ ನೆಲೆಯಿಂದ ನೋಡಿದಾಗಲೂ ಧರ್ಮ ಸಂಸತ್ತು ಅಪರಿಪೂರ್ಣವಾಗಿದೆ. ಉಡುಪಿಯಲ್ಲಿ ನಡೆದ ಧರ್ಮ ಸಂಸತ್ತು, ತಾನು ಹಿಂದೂ ಧರ್ಮದ ಒಳಗಿನ ಎಲ್ಲ ಕವಲುಗಳನ್ನು ಒಳಗೊಂಡಿದ್ದೇನೆ ಎಂದು ಭಾವಿಸಿದರೂ ಹಿಂದೂ ಧರ್ಮದ ಹೊರಗಿರುವ; ಆದರೂ ಭಾರತೀಯವಾಗಿರುವ ಅನೇಕ ಧಾರ್ಮಿಕ ಅಸ್ಮಿತೆಗಳನ್ನು ಇದು ಒಳಗೊಳ್ಳದೆ ಇರುವುದು ಸ್ಪಷ್ಟವಾಗಿ ಕಾಣಿಸುತ್ತದೆ. ಹಾಗಾಗಿ, ಸಂಸತ್‌ನ ಕಲ್ಪನೆಗೆ ಅಂತರ್ಗತವಾಗಿರುವ ಪ್ರತಿನಿಧಿತ್ವದ ನೆಲೆಯಲ್ಲಿ ಪ್ರಮುಖವಾದ ಟೀಕೆಯೊಂದನ್ನು ಧರ್ಮಸಂಸತ್‌ಗೆ ಎಸೆಯಬಹುದಾಗಿದೆ.

ಧರ್ಮಸಂಸತ್‌ನ ಈ ಸಮಾವೇಶದಲ್ಲಿ ಗೂಢವೂ ಗಾಢವೂ ಆದ ಮತ್ತು ನಿರ್ವಹಿಸಲು ಕಷ್ಟಕರವೂ ಆಗಬಹುದಾದ ಸಂಪ್ರದಾಯಗಳ ಮತ್ತು ಸಮುದಾಯಗಳ ಸಂಕೀರ್ಣತೆ ಹಾಗೂ ಬಹುರೂಪತೆ ಎದ್ದುಕಾಣಿಸುತ್ತಿತ್ತು. ಯಾಕೆಂದರೆ ಹಿಂದೂ ಸಮಾಜದಲ್ಲಿ ಕಂಡುಬರುವ ಬಹುಸಂಸ್ಕೃತೀಯತೆ ಸರಳವಾಗಿ ಮತ್ತು ಸುಲಭವಾಗಿ ನಿರ್ವಹಿಸಬಹುದಾದುದು ಅಲ್ಲ. ಭಾರತದಂತಹ ಅಸಮಾನ ಸಮಾಜದಲ್ಲಿ ಬಹುಸಂಸ್ಕೃತೀಯತೆ ಕೇವಲ ಅನೇಕತೆಯ ಪ್ರಶ್ನೆ ಮಾತ್ರವಲ್ಲ. ಅದು ಅಧಿಕಾರ ಮತ್ತು ಸಂಪನ್ಮೂಲಗಳ ನ್ಯಾಯಸಮ್ಮತ ಹಂಚಿಕೆಯ ಪ್ರಶ್ನೆಯೂ ಆಗಿದೆ. ತೋರುಬೆರಳಲ್ಲಿ ತೋರಿಸಿದ ಸ್ಥಾನದಲ್ಲಿ ಕೂರುವ ವಿಧೇಯತೆ ಈ ಎಲ್ಲ ಸಂಪ್ರದಾಯ ಮತ್ತು ಸಮುದಾಯಗಳಲ್ಲಿದೆ ಎಂದು ನಿರೀಕ್ಷಿಸಲು ಸಾಧ್ಯವಿಲ್ಲ. ಅವಿಧೇಯ ಅಥವಾ ಭಿನ್ನಮತೀಯ ಸಾಧು ಸಂಸದರನ್ನು ಈ ಧರ್ಮಸಂಸತ್ತು ಹೇಗೆ ನಿಯಂತ್ರಿಸುತ್ತದೆ ಎನ್ನುವುದು ಅತ್ಯಂತ ಕುತೂಹಲಕಾರಿಯಾದ ಸಂಗತಿಯಾಗಿದೆ.

ಉಡುಪಿಯ ಧರ್ಮಸಂಸತ್ತಿನ ಪರಿದೃಶ್ಯವನ್ನು ಗಮನಿಸಿದಾಗ ಅಲ್ಲಿ ಅತ್ಯಂತ ಚಾಣಾಕ್ಷತನದಿಂದ ಪರಿಸ್ಥಿತಿಯನ್ನು ನಿಭಾಯಿಸುತ್ತಿದ್ದವರು ರಾಷ್ಟ್ರೀಯ ಸ್ವಯಂಸೇವಕ ಸಂಘದ ಸರಸಂಘಚಾಲಕರಾದ ಮೋಹನ ಭಾಗವತರು. 'ಸಂಘದ ಮುಂದಿನ ಕೆಲಸಗಳಿಗೆ ಬೇಕಾದ ಮಾರ್ಗದರ್ಶನವನ್ನು ಸಾಧು-ಸಂತರು ಸೇರಿರುವ ಈ ಧರ್ಮಸಂಸತ್‌ನಿಂದ ಪಡೆಯಲು ಬಂದಿದ್ದೇವೆ' ಎಂದ ಅವರು ಸ್ವತಃ ಧರ್ಮಸಂಸತ್‌ನ ಮಾರ್ಗದರ್ಶಕರಾಗಿದ್ದರು ಮತ್ತು ವಿಹಿಂಪದ ಕಾರ್ಯಸೂಚಿಯನ್ನು ನಿರೂಪಿಸಿದರು. ಅನೇಕ ಸಾಧುಸಂತರು ಭಾಗವತ್ ಮತ್ತು ತೊಗಾಡಿಯಾರಿಗೆ ನಡುಬಗ್ಗಿಸಿ ನಮಸ್ಕರಿಸುತ್ತಿದ್ದುದು ಧರ್ಮಸಂಸತ್‌ನ ನಿಜವಾದ ಶಕ್ತಿಕೇಂದ್ರಗಳು ಯಾರು ಎನ್ನುವುದನ್ನೂ ಸೂಚಿಸುವಂತಿತ್ತು.

ಧರ್ಮಸಂಸತ್ ಸಮಾವೇಶದ ಉದ್ಘಾಟನಾ ಸಮಾರಂಭದ ಅಧ್ಯಕ್ಷೀಯ ಭಾಷಣ ಮಾಡಿದ ಪೇಜಾವರ ಶ್ರೀಗಳು ಹಿಂದೂ ಸಮಾಜದ ಪ್ರಸ್ತುತ ಕಾಲಘಟ್ಟವನ್ನು ಸಮುದ್ರಮಥನದ ಕಾಲ ಎಂದು ವರ್ಣಿಸಿದರು. ಸಮುದ್ರಮಥನದಲ್ಲಿ ಮೊದಲಿಗೆ ಕಾಲಕೂಟ ವಿಷ ಹೇಗೆ ಬಂದಿದೆಯೋ ಹಾಗೆಯೇ ಹಿಂದೂ ಸಮಾಜದ ಇಂದಿನ ಸಮುದ್ರ ಮಥನದಲ್ಲಿ ಮೊದಲಿಗೆ ಅಸ್ಪೃಶ್ಯತೆ ಹಾಗೂ ಅಸಮಾನತೆಗಳೆಂಬ ಕಾಲಕೂಟ ವಿಷ ಹೊರಬಂದಿದೆ ಎಂದು ಅವರು ವಿವರಿಸಿದರು. ಪೌರಾಣಿಕ ವಿಶ್ವದಲ್ಲಿ ಕಾಲಕೂಟದ ವಿಷವನ್ನು ಕುಡಿದವನು ನೀಲಕಂಠನಾದರೆ ನಮ್ಮ ಕಾಲದ ಸಮದ್ರಮಥನದಲ್ಲಿ ಹೊರಬಂದ ಅಸ್ಪೃಶ್ಯತೆ ಹಾಗೂ ಅಸಮಾನತೆಗಳೆನ್ನುವ ಕಾಲಕೂಟವನ್ನು ಕುಡಿಯುವ ನೀಲಕಂಠರಾರು? ಎನ್ನುವ ಪ್ರಶ್ನೆಯನ್ನು ಪೇಜಾವರರು ಎತ್ತಲಿಲ್ಲ. (ವಿಶ್ವ ಹಿಂದೂ ಪರಿಷತ್ತಿನ ಲೋಕದೃಷ್ಟಿಯಲ್ಲಿ ಈ ಕಾಲಕೂಟ ವಿಷವನ್ನು ಕುಡಿಯುವ ನೀಲಕಂಠರು ಗಾಂಧಿ ಅಥವಾ ಅಂಬೇಡ್ಕರ್ ಆಗಲು ಸಾಧ್ಯವೇ?)

ಅಪರಾಹ್ನದ ಗೋಷ್ಠಿಯಲ್ಲಿ ಮತ್ತೆ ಮಾತಾಡಿದ ಮೋಹನ ಭಾಗವತರು ಹಿಂದೂ ಸಮಾಜವನ್ನು ಪುನರ್‌ರಚಿಸುವ ನೆಲೆಯಲ್ಲಿ ನಡೆಯಬೇಕಾದ ಕಾರ್ಯಸೂಚಿಯ ವಿವರಗಳನ್ನು ಧರ್ಮಸಂಸತ್‌ನ ಮುಂದಿರಿಸಿದರು. ಅಭ್ಯಾಸದ ನೆಲೆಯಲ್ಲಿ ರೂಢಿಸಿಕೊಂಡ ನಡೆ-ನುಡಿಗಳನ್ನು ನಾವು ಮತ್ತೆ ಪರಿಶೀಲನೆಗೆ ಒಳಪಡಿಸುವ ಅಗತ್ಯವನ್ನು ಒತ್ತಿ ಹೇಳುತ್ತ ಅವರು ಹೆಡಗೇವಾರರನ್ನು ಪರಮಪೂಜನೀಯ ಎಂದು ಕರೆಯುವಂತೆ ಅಂಬೇಡ್ಕರ್ ಅವರನ್ನೂ ಪರಮಪೂಜನೀಯರೆಂದು ಕರೆಯುವ ರೂಢಿಯನ್ನು ನಾವು ಬೆಳೆಸಿಕೊಳ್ಳಬೇಕು ಎಂದರು. ಸಂಘದ ಸಂಕಥನದಲ್ಲಿ ಅಂಬೇಡ್ಕರ್ ಸ್ಪಷ್ಟವಾಗಿ ಮೂಡಿಬಂದಿರುವುದು ಅದರ ಒಳಗೊಳ್ಳುವಿಕೆಯ ರಾಜಕಾರಣದ ಭಾಗವಾಗಿ ಎನ್ನಬಹುದು. ಅಂತೆಯೇ ಇಡೀ ಸಭಾಮಂಟಪವನ್ನು ನಾರಾಯಣಗುರು ಸಭಾಮಂಟಪವೆಂದು ಕರೆದಿರುವುದೂ ಮತ್ತು ವೇದಿಕೆಗೆ ದಲಿತ ಸಮುದಾಯದವರಾದ ಕೇಂದ್ರ ಸರಕಾರದ ಉನ್ನತ ಆಡಳಿತಾಧಿಕಾರಿ





ಆಗಿದ್ದ ಆರ್. ಭರಣಯ್ಯರ ಹೆಸರು ಇಟ್ಟಿರುವುದೂ ಸಂಘಪರಿವಾರದ 'ಒಳಗೊಳ್ಳುವಿಕೆಯ ರಾಜಕಾರಣ'ದ ಇನ್ನೊಂದು ನಿದರ್ಶನವಾಗಿದೆ.

ಈ ಒಳಗೊಳ್ಳುವಿಕೆಯ ರಾಜಕಾರಣದ ಮತ್ತೊಂದು ನಿದರ್ಶನವನ್ನು ಇಲ್ಲಿ ನಡೆದ ಸಾಮಾಜಿಕ ಸಾಮರಸ್ಯದ ಬಗೆಗಿನ ಗೋಷ್ಠಿಯಲ್ಲಿ ನೋಡಬಹುದು. ಸಂಘಪರಿವಾರ ಇಂದು ಸಾಮರಸ್ಯದ ಮಾತನ್ನಾಡುತ್ತಿರುವುದು ಈ ದೇಶದಲ್ಲಿ ವ್ಯಾಪಕವಾಗಿ ಹಬ್ಬುತ್ತಿರುವ ಹಿಂಸೆ ಮತ್ತು ಅಸಹಿಷ್ಣುತೆಗೆ ಸೆಕ್ಯುಲರ್ ರಾಜಕಾರಣ ತೋರಿಸಿದ ಪ್ರತಿರೋಧದ ಒತ್ತಡದ ನೆಲೆಯಲ್ಲಿಯೇ ಎನ್ನುವುದನ್ನು ನಾವು ಇಲ್ಲಿ ಗುರುತಿಸಲು ಬಯಸುತ್ತೇವೆ. ಈ ಅರ್ಥದಲ್ಲಿ ಗಾಂಧಿ, ಅಂಬೇಡ್ಕರ್ ಅವರನ್ನು ಒಳಗೊಂಡ ಆಧುನಿಕ ಭಾರತದ ಪ್ರಜಾತಾಂತ್ರಿಕ ಸೆಕ್ಯುಲರ್ ರಾಜಕಾರಣದ ಸಂಕಥನ; ಸಂಘಪರಿವಾರದ ಯೋಚನಾ ಕ್ರಮಗಳನ್ನು ಮತ್ತು ಕ್ರಿಯಾಚರಣೆಗಳನ್ನು ಆಳವಾಗಿ ಬಾಧಿಸಿರುವುದನ್ನು ನಾವಿಲ್ಲಿ ಕಾಣಬಹುದು. ಸಮಾವೇಶದಲ್ಲಿ ಮಾತಾಡಿದ ಸುತ್ತೂರು ಶ್ರೀಗಳು ಮಾತ್ರ ಈ ಪ್ರಜಾತಾಂತ್ರಿಕ ಸೆಕ್ಯುಲರ್ ಆಶಯಗಳನ್ನು ಅತ್ಯಂತ ಪ್ರಖರವಾಗಿ ಮತ್ತು ವಿಮರ್ಶಾತ್ಮಕವಾಗಿ ಮಂಡಿಸಿದರು. ಗೋರಕ್ಷಣೆಯ ನೆಪದಲ್ಲಿ ಮಾಡುವ ಅತಿರೇಕಗಳು, ಅನೈತಿಕ ಪೊಲೀಸ್‌ಗಿರಿ ಮತ್ತು ಅಸಹಿಷ್ಣುತೆ ಇವುಗಳನ್ನು ಪ್ರಸ್ತಾವಿಸಿದ ಶ್ರೀಗಳ ಭಿನ್ನಸ್ವರದ ಮಾತು ಭಾರತೀಯ ಸೆಕ್ಯುಲರ್ ರಾಜಕಾರಣದ ಕಾಳಜಿಯ ಪ್ರತಿಫಲನದಂತೆ ಭಾಸವಾಗುತ್ತಿತ್ತು.

ವಿಸ್ಮಯದ ಸಂಗತಿಯೆಂದರೆ, ರಾಮ ಜನ್ಮಭೂಮಿ ಮತ್ತು ಬಾಬರಿ ಮಸೀದಿ ವಿವಾದಕ್ಕೆ ಸಂಬಂಧಿಸಿ ರಾಮಮಂದಿರದ ನೀಲನಕ್ಷೆ ಮತ್ತು ಮಂದಿರದ ಕೆಲಸ ಆರಂಭಿಸಿ ಮುಗಿಸಬೇಕಾದ ಕಾಲಮಿತಿಯ ಕುರಿತು ವಿಶ್ವ ಹಿಂದೂ ಪರಿಷತ್ತಿಗೆ ಅಸಾಧಾರಣವಾದ ಸ್ಪಷ್ಟತೆ ಇದೆ. ಆದರೆ ಹಿಂದೂ ಸಮಾಜದ ಸುಧಾರಣೆ ಮತ್ತು ಪುನರ್‌ರಚನೆಗೆ ಸಂಬಂಧಿಸಿದ ಅನೇಕ ಮಹತ್ವದ ಪ್ರಶ್ನೆಗಳ ಬಗ್ಗೆ ಈ ಧರ್ಮಸಂಸದರಲ್ಲಿ ತಾತ್ತ್ವಿಕ ರಾಜಕೀಯ ಸ್ಪಷ್ಟತೆ ಇಲ್ಲ ಎನ್ನುವುದು ಗೋಷ್ಠಿಯಲ್ಲಿ ನಡೆದ ಸಂಕಥನಗಳಲ್ಲಿ ಅಭಿವ್ಯಕ್ತಗೊಳ್ಳುತ್ತಿತ್ತು. ಅಸ್ಪೃಶ್ಯತೆಯನ್ನು ಹೊಡೆದೋಡಿಸುವ ಬಗ್ಗೆ ಕಾರ್ಯತಂತ್ರಗಳನ್ನು ರೂಪಿಸಬೇಕು ಎನ್ನುವ ಮಾತನ್ನು ನಿರಂತರವಾಗಿ ಉದ್ಘೋಷಿಸುತ್ತ ಬಂದ ಸಾಧುಗಳಿಗೆ ಅದನ್ನು ನಿವಾರಿಸಲು ರೂಪಿಸಬೇಕಾದ ಕಾರ್ಯನೀತಿಗಳೇನು? ಮತ್ತು ಜಾತಿ-ಪಂಥಗಳ ನಡುವಿನ ಅಸಮಾನತೆಯ ನಿವಾರಣೆ ಹೇಗೆ ಎನ್ನುವುದರ ಕುರಿತು ಸ್ಪಷ್ಟತೆ ಇರಲಿಲ್ಲ. ಈ ನಿಟ್ಟಿನಲ್ಲಿ ಎದುರಿಸಬೇಕಾದ ಸಂರಚನಾತ್ಮಕ ಸವಾಲುಗಳ ಬಗೆಗೂ ಅವರು ಚರ್ಚೆ ನಡೆಸಲಿಲ್ಲ. ಆದ್ದರಿಂದ ಅಂತರ್ಜಾತೀಯ ವಿವಾಹದ ಕುರಿತು ಈ ಸಮಾವೇಶದಲ್ಲಿ ಒಂದು ಅರ್ಥಪೂರ್ಣ ಮೌನ ಕಾಣಿಸಿತು. ಈ ಹಿನ್ನೆಲೆಯಲ್ಲಿ ಹಿಂದೂಧರ್ಮ, ಜಾತಿಪದ್ಧತಿ ಹಾಗೂ ಅಸ್ಪೃಶ್ಯತೆಗಳ ನಡುವಿನ ಸಂರಚನಾತ್ಮಕ ಸಂಬಂಧಗಳ ಕುರಿತು ಅಂಬೇಡ್ಕರ್ ಹೇಳಿದ ಮಾತುಗಳ ಪ್ರಸ್ತುತತೆ ನಮಗೆ ಮತ್ತೊಮ್ಮೆ ಮನದಟ್ಟಾಯಿತು.

ಧರ್ಮಸಂಸತ್‌ನ ಈ ಅಧಿವೇಶನದಲ್ಲಿ ಮುಖ್ಯವಾಗಿ ಮೂರು ವಿಷಯಗಳ ಕುರಿತು ನಿರ್ಣಯಗಳನ್ನು ಅಂಗೀಕರಿಸಲಾಯಿತು. ಅವುಗಳಲ್ಲಿ ಮೊದಲನೆಯದು ರಾಮಮಂದಿರ ನಿರ್ಮಾಣ, ಎರಡನೆಯದು ಗೋರಕ್ಷಣೆ, ಮೂರನೆಯದು ಮತಾಂತರ ನಿಷೇಧ. ಇವುಗಳಲ್ಲದೆ ಇನ್ನೂ ಕೆಲ ನಿರ್ಣಯಗಳನ್ನು ಅಂಗೀಕರಿಸಲಾಗಿದ್ದರೂ ಮೇಲೆ ಸೂಚಿಸಿದ ಮೂರು ನಿರ್ಣಯಗಳು ಧರ್ಮಸಂಸತ್ತು ಮತ್ತು ಸಂಘಪರಿವಾರದ ಕಾರ್ಯಸೂಚಿಯ ಪ್ರಧಾನ ಅಂಶಗಳಾಗಿದ್ದವು.

ಬಹುಮುಖ್ಯವಾದ ಸಂಗತಿಯೆಂದರೆ ಈ ಧರ್ಮಸಂಸತ್ತು ಸಂಘಪರಿವಾರದ ಸಾಂಸ್ಕೃತಿಕ ಬಂಡವಾಳದ ಶಕ್ತಿಪ್ರದರ್ಶನವಾಗಿತ್ತು. ಈ ಶಕ್ತಿಪ್ರದರ್ಶನದ ನಡುವೆಯೂ ಆಧುನಿಕ ಭಾರತದ ಸಾಮಾಜಿಕ ರಾಜಕೀಯ ಹಾಗೂ ಸಾಂಸ್ಕೃತಿಕ ರೂಪುರೇಷೆಗಳನ್ನು ನಿರ್ಧರಿಸುವಲ್ಲಿ ನಿರ್ಣಾಯಕ ಪಾತ್ರವನ್ನು ವಹಿಸಿದ ಗಾಂಧಿ ಮತ್ತು ಅಂಬೇಡ್ಕರ್‌ರವರಂಥ ನಾಯಕರು ಹೊರನೋಟಕ್ಕೆ ನಾಪತ್ತೆಯಾದಂತೆ ಕಂಡರೂ ಪ್ರಭಾವದ ನೆಲೆಯಲ್ಲಿ ಅವರ ಉಪಸ್ಥಿತಿ ಸ್ಪಷ್ಟವಾಗಿ ಕಾಣಿಸಿತು. ಇದು ಈ ದೇಶದಲ್ಲಿ ಯಾವ ತರಹದ ರಾಜಕಾರಣವನ್ನು ತಾವು ನಿರ್ವಹಿಸಲು ಬಯಸಿದರೂ ಮತ್ತು ತಾವು ನಡೆಸುವ ರಾಜಕಾರಣದಲ್ಲಿ ತಮಗಿಷ್ಟವಿಲ್ಲದಿದ್ದರೂ, ತಾವು ಪ್ರತಿಪಾದಿಸುವ ಸೈದ್ಧಾಂತಿಕ ಕಾರ್ಯಸೂಚಿಗೆ ವ್ಯತಿರಿಕ್ತವಾಗಿದ್ದರೂ ಕೆಲವರನ್ನು ಗುರುತಿಸಲೇಬೇಕಾದ, ಕೆಲವರ ಉಪಸ್ಥಿತಿಯನ್ನು ಗೌರವಿಸಿಯೇ ತಾವು ನಡೆಸಬೇಕೆಂದಿರುವ ರಾಜಕಾರಣವನ್ನು ನಡೆಸಬೇಕಾದ ಅನಿವಾರ್ಯತೆಯನ್ನು ಬಿಂಬಿಸಿತು.

ಧರ್ಮಸಂಸತ್ ಕುರಿತ ನಮ್ಮ ಈ ವಿಮರ್ಶಾತ್ಮಕ ಸಮೀಕ್ಷೆಯ ಹಿನ್ನೆಲೆಯಲ್ಲಿ ಭಾರತದ ಸೆಕ್ಯುಲರ್ ರಾಜಕಾರಣದ ಕಾರ್ಯಸೂಚಿಯನ್ನು ಮರುನಿರೂಪಿಸುವ ನೆಲೆಯಲ್ಲಿ ಮೂರು ಸಂಗತಿಗಳನ್ನು ಸಂಕ್ಷಿಪ್ತವಾಗಿ ಇಲ್ಲಿ ಮುಂದಿಡಬಯಸುತ್ತೇವೆ.

೧. ಮೊದಲನೆಯದಾಗಿ, ಸಂಘಪರಿವಾರ ಮತ್ತು ಅದು ಪ್ರತಿಪಾದಿಸುವ ನಿರ್ದಿಷ್ಟ ಬಗೆಯ ಧರ್ಮ ಸಂಕಥನ ಮತ್ತು ರಾಷ್ಟ್ರ ಸಂಕಥನ ಅಥವಾ ಸಾಂಸ್ಕೃತಿಕ ನೆಲೆಯ ರಾಷ್ಟ್ರ ಸಂಕಥನ ಭಾರತದಲ್ಲಿ ಕೆಲವು ವಿಶೇಷ ಬಗೆಯ ಅನುಕೂಲಗಳನ್ನು ಹೊಂದಿದೆ. ಈ ಅನುಕೂಲಗಳೇ ಅದನ್ನು ಇಂದು ರಾಷ್ಟ್ರವ್ಯಾಪಿಗೊಳಿಸಿದೆ ಹಾಗೂ ಜನಪ್ರಿಯಗೊಳಿಸಿದೆ. ಸಂಘಪರಿವಾರ ಹೊಂದಿರುವ ಈ ವಿಶೇಷ ಅನುಕೂಲಗಳನ್ನು ನಾವು ಎರಡು ನೆಲೆಗಳಲ್ಲಿ ಗುರುತಿಸಲು ಬಯಸುತ್ತೇವೆ. ಒಂದು, ಭಾರತದಲ್ಲಿರುವ ವಿಪುಲವಾದ ಹಾಗೂ ಅಗಾಧವಾದ ಧಾರ್ಮಿಕ ಮತ್ತು ಸಾಂಸ್ಕೃತಿಕ ಸಂಪತ್ತು ಸಂಘಪರಿವಾರಕ್ಕೆ ಸರಾಗವಾಗಿ ಮತ್ತು ನಿರಾಳವಾಗಿ ಒದಗಿಬಂದಿದೆ. ಮಾತ್ರವಲ್ಲದೇ, ಅದನ್ನು ತನ್ನ ಬಗಲಿಗೆ ಹಾಕಿಕೊಳ್ಳುವಲ್ಲಿ ಸಂಘಪರಿವಾರ ಸಾಕಷ್ಟು ಪರಿಶ್ರಮ ವಹಿಸಿದೆ. ಎರಡು, ತನಗೆ ಸುಲಭವಾಗಿ ದಕ್ಕುವ ಸಾಂಸ್ಕೃತಿಕ ಸಂಪತ್ತನ್ನು ಸಂಘಟಿಸುವಲ್ಲಿ ಹಾಗೂ ಅದನ್ನು ತನ್ನ ರಾಜಕೀಯ ಬಂಡವಾಳವನ್ನಾಗಿ ಪರಿವರ್ತಿಸುವಲ್ಲಿ ಸಂಘಪರಿವಾರ ವ್ಯವಸ್ಥಿತವಾದ, ಕೆಲವೊಮ್ಮೆ ಅಸದೃಶವಾದ ಸಂಘಟನಾ ಜಾಲವನ್ನು ರಚಿಸಿದೆ. ಇದರಿಂದಾಗಿ, ಭಾರತದ ಧಾರ್ಮಿಕ ಮತ್ತು ಸಾಂಸ್ಕೃತಿಕ ಸ್ತರಗಳಲ್ಲಿ ಅದರ ಪ್ರಭಾವ ಅವ್ಯಾಹತವಾಗಿ ಕಾಣಿಸುತ್ತದೆ. ಇದಕ್ಕೆ ಶಕ್ತಿಯುತವಾದ ಮತ್ತು ಪರಿಣಾಮಕಾರಿಯಾದ ಪರ್ಯಾಯವನ್ನು ರೂಪಿಸುವುದು ಭಾರತದಲ್ಲಿ ಸೆಕ್ಯುಲರ್‌ವಾದವನ್ನು ಪ್ರತಿಪಾದಿಸುವ ಶಕ್ತಿಗಳಿಗೆ ಮತ್ತು ಸಂಘಟನೆಗಳಿಗೆ ಸಾಧ್ಯವಾಗಿಲ್ಲ. ಈ ಮಾತಿನ ಅರ್ಥ ಭಾರತದ ಸೆಕ್ಯುಲರ್ ಚಿಂತನೆ ಮತ್ತು ಕ್ರಿಯಾಚರಣೆ ಧರ್ಮ ಮತ್ತು ಸಂಸ್ಕೃತಿಗಳಿಗೆ ಸಂಬಂಧಿಸಿದ ವಿಷಯಗಳಿಗೆ ತಲೆಕೆಡಿಸಿಕೊಂಡಿಲ್ಲ ಎಂದಲ್ಲ. ಭಾರತದ ಸಾಂಸ್ಕೃತಿಕ ಬದುಕಿನಲ್ಲಿ ಅಡಕವಾಗಿರುವ ಸಮ್ಮಿಲನದ ಅಥವಾ ಸಾಮರಸ್ಯದ ಪ್ರಜಾತಾಂತ್ರಿಕ ಆಯಾಮಗಳನ್ನು ಜನರ ಮುಂದಿಡುವ ಶ್ಲಾಘನೀಯ ಪ್ರಯತ್ನಗಳನ್ನು ಭಾರತದ ಸೆಕ್ಯುಲರ್‌ವಾದಿ ರಾಜಕಾರಣ ನಡೆಸಿದೆ. ಆದರೆ ಈ ಪ್ರಯತ್ನಗಳಿಗೆ ಸಂಘಪರಿವಾರ ನಡೆಸುತ್ತಿರುವ ಸಾಂಸ್ಕೃತಿಕ ರಾಜಕಾರಣದ ನಿರಂತರತೆಯಾಗಲಿ ಯಶಸ್ಸಾಗಲಿ ಒದಗಿಬಂದಿಲ್ಲ. ಸೆಕ್ಯುಲರ್ ರಾಜಕಾರಣ ನಡೆಸುತ್ತಿರುವ ಸಾಂಸ್ಕೃತಿಕ ಪ್ರಯತ್ನಗಳು ಅಥವಾ ಮುಂದಿಡುತ್ತಿರುವ ಪರ್ಯಾಯಗಳು ಸಂಘಪರಿವಾರದ

ಸಾಂಸ್ಕೃತಿಕ ಭೋರ್ಗರೆತದ ನಡುವೆ ಅಲ್ಲಲ್ಲಿ ಚೆಲ್ಲಾಪಿಲ್ಲಿಯಾದ ಕ್ಷೀಣ ಸ್ವರಗಳಾಗಿ ಕಾಣಿಸುತ್ತವೆ. ಬಹುಶಃ ಭಾರತದ ಸೆಕ್ಯುಲರ್‌ವಾದ ತನ್ನ ಉಳಿವಿಗಾಗಿ ಧರ್ಮ ಮತ್ತು ಸಂಸ್ಕೃತಿಗಳಿಗೆ ಸಂಬಂಧಿಸಿದಂತೆ ಒಂದು ಆಳವಾದ ಮತ್ತು ಗಂಭೀರವಾದ ಚಿಂತನೆಯನ್ನು ಅಥವಾ ಮರುಚಿಂತನೆಯನ್ನು ನಡೆಸಬೇಕಾಗಿದೆ ಮತ್ತು ಈ ವಿಷಯಗಳನ್ನು ತನ್ನ ಕಾರ್ಯಸೂಚಿಯ ಕೇಂದ್ರಕ್ಕೆ ತರಬೇಕಾಗಿದೆ. ಹಾಗೆ ಮಾಡುವ ಮೂಲಕ ಭಾರತದ ಸೆಕ್ಯುಲರ್ ಚಿಂತನೆಯಲ್ಲಿ ಒಂದು ಸಾಂಸ್ಕೃತಿಕ ಪುನರುಜ್ಜೀವನವನ್ನು ಸಾಧಿಸಬೇಕಾಗಿದೆ.

೨. ಎರಡನೆಯದಾಗಿ, ಸಂಘಪರಿವಾರ ತನ್ನ ಸಂಘಟನಾ ಚಟುವಟಿಕೆಗಳಲ್ಲಿ ತೋರಿಸುತ್ತಿರುವ ಸಾಮರ್ಥ್ಯ ಮತ್ತು ಕೌಶಲ್ಯ ಅಸಾಧಾರಣವಾದದ್ದು. ನಿರಂತರವಾದ, ಏಕೋದ್ದೇಶದ ಹಾಗೂ ಏಕಾಗ್ರತೆಯ ಅದರ ಪ್ರಯತ್ನಗಳು ಇಂದು ಅದನ್ನು ಈ ದೇಶದ ರಾಜಕಾರಣದ ಮುಂಚೂಣಿಗೆ ತಂದು ನಿಲ್ಲಿಸಿದೆ. ತನಗೆ ಒಲ್ಲದ್ದನ್ನು, ಒಗ್ಗದ್ದನ್ನು ಒಳಗೊಳ್ಳುವ, ಬಗ್ಗಿಸುವ, ಕುಗ್ಗಿಸುವ ಹಾಗೂ ಜೀರ್ಣಿಸಿಕೊಳ್ಳುವ ತನ್ನ ಅಸಾಧಾರಣ ಶಕ್ತಿಯಿಂದಾಗಿ ಅದು ತನ್ನನ್ನು ರಾಜಕೀಯವಾಗಿ ವಿಸ್ತರಿಸಿಕೊಳ್ಳುತ್ತಿದೆ ಹಾಗೂ ತನ್ನ ಬೇರುಗಳನ್ನು ಆಳಕ್ಕಿಳಿಸಿ ಕೊಳ್ಳುತ್ತಿದೆ. ಸಂಘಪರಿವಾರದ ಈ ವಿರಾಟ್ ದರ್ಶನದ ಎದುರಿಗೆ ಸೆಕ್ಯುಲರ್ ರಾಜಕಾರಣ ಬಲಹೀನಗೊಂಡಂತೆ ಕಾಣಿಸುತ್ತಿದೆ. ಸಂಘಪರಿವಾರ ತನ್ನ ಬಣ್ಣ ಬಣ್ಣಗಳಲ್ಲಿ ಉತ್ಸವ–ಆಚರಣೆಗಳಲ್ಲಿ ರಾರಾಜಿಸುತ್ತಿದ್ದರೆ ಸೆಕ್ಯುಲರ್ ರಾಜಕಾರಣ ವಿವರ್ಣಗೊಂಡು ಕಳೆಗುಂದಿದಂತಿದೆ. ತನ್ನನ್ನು ತಾನು ಹೆಚ್ಚು ಚೈತನ್ಯಶಾಲಿಯಾಗಿ ಪ್ರದರ್ಶಿಸಿಕೊಳ್ಳುವ ಹೊಸ ದಾರಿಗಳನ್ನು ಅಥವಾ ವಿಧಾನಗಳನ್ನು ಭಾರತದ ಸೆಕ್ಯುಲರ್ ರಾಜಕಾರಣ ಕಂಡುಕೊಳ್ಳಬೇಕಾಗಿದೆ.

೩. ಮೂರನೆಯದು, ರಾಜಕೀಯ ಅನಾಸಕ್ತ ಜನರಲ್ಲಿ ರಾಜಕಾರಣದ ಕುರಿತು ಆಸಕ್ತಿಯನ್ನು ಹುಟ್ಟಿಸುವ ಹಾಗೆಯೇ ರಾಜಕೀಯ ಅತ್ಯಾಸಕ್ತ ಯುವ ಜನಸಮುದಾಯಗಳನ್ನು ಸೈದ್ಧಾಂತಿಕವಾಗಿ ಪ್ರೇರೇಪಿಸಿ ತಾನು ಪ್ರತಿಪಾದಿಸುವ ರಾಜಕಾರಣದಲ್ಲಿ ಅವರನ್ನು ಒಳಗೊಳ್ಳುವುದು ಹೇಗೆ ಎಂಬುದರ ಕುರಿತೂ ಅದು ಚಿಂತನೆ ನಡೆಸಬೇಕಾಗಿದೆ. ಒಟ್ಟಿನಲ್ಲಿ ಭಾರತದ ಸೆಕ್ಯುಲರ್ ಚಿಂತನೆ ಮತ್ತು ರಾಜಕಾರಣ ಹೊಸ ದಿಕ್ಕು–ದಿಗಂತಗಳನ್ನು ಕಂಡುಕೊಳ್ಳಬೇಕಾದ ಸಂಕ್ರಮಣದ ಸ್ಥಿತಿಯಲ್ಲಿದೆ. ಭಾರತದ ಪ್ರಜಾಸತ್ತೆಯ ಹಾಗೂ ಬಹುಸಂಸ್ಕೃತೀಯತೆಯ ಭವಿಷ್ಯ ಈ ದೇಶದ ಸೆಕ್ಯುಲರ್ ರಾಜಕಾರಣ ತನ್ನನ್ನು ಹೇಗೆ ನಿರ್ವಹಿಸಿಕೊಳ್ಳುತ್ತಿದೆ ಎನ್ನುವುದರ ಮೇಲೆ ನಿಂತಿದೆ.

**ಪ್ರೊ॥ ರಾಜಾರಾಮ ತೋಳ್ಪಾಡಿ**
ಪ್ರಾಧ್ಯಾಪಕರು, ರಾಜಕೀಯ ಶಾಸ್ತ್ರ ಅಧ್ಯಯನ ವಿಭಾಗ
ಮಂಗಳೂರು ವಿಶ್ವವಿದ್ಯಾನಿಲಯ, ಮಂಗಳಗಂಗೋತ್ರಿ, ಮಂಗಳೂರು

**ಪ್ರೊ॥ ನಿತ್ಯಾನಂದ ಬಿ. ಶೆಟ್ಟಿ**
ಪ್ರಾಧ್ಯಾಪಕರು, ಕನ್ನಡ ಅಧ್ಯಯನ ಮತ್ತು ಸಂಶೋಧನಾ ಕೇಂದ್ರ
ತುಮಕೂರು ವಿಶ್ವವಿದ್ಯಾನಿಲಯ, ಬಿ. ಎಚ್. ರಸ್ತೆ, ತುಮಕೂರು

# ಸಾದರ ಸ್ವೀಕಾರ

**ನಾಮಪದ** (ನವಕರ್ನಾಟಕ ಕನ್ನಡ ಕಲಿಕೆ)
*ಟಿ. ಎಸ್. ಗೋಪಾಲ್*
***ಪುಟ : ೬೦*** ***ಬೆಲೆ : ರೂ. ೩೫***

**ಕ್ರಿಯಾಪದ** (ನ.ಕ.ಕ.) *ಟಿ. ಎಸ್. ಗೋಪಾಲ್*
***ಪುಟ : ೪೮*** ***ಬೆಲೆ : ರೂ. ೩೫***

**ವಿರುದ್ಧಾರ್ಥ ಪದಕೋಶ** (ನ.ಕ.ಕ.) *ಟಿ. ಎಸ್. ಗೋಪಾಲ್*
***ಪುಟ : ೪೮*** ***ಬೆಲೆ : ರೂ. ೩೫***

**ತತ್ಸಮ–ತದ್ಭವ ಪದಕೋಶ** (ನ.ಕ.ಕ.) *ಟಿ. ಎಸ್.ಗೋಪಾಲ್*
***ಪುಟ : ೫೬*** ***ಬೆಲೆ : ರೂ. ೪೦***

**ಕನ್ನಡ ನುಡಿಗಟ್ಟುಗಳು** (ನ.ಕ.ಕ.) *ಟಿ. ಎಸ್. ಗೋಪಾಲ್*
***ಪುಟ : ೫೬*** ***ಬೆಲೆ : ರೂ. ೪೦***

**ಕನ್ನಡವನ್ನು ತಪ್ಪಿಲ್ಲದೆ ಓದಿ ಬರೆಯುವುದು ಹೇಗೆ?**
(ನ.ಕ.ಕ.) *ಟಿ. ಎಸ್. ಗೋಪಾಲ್*
***ಪುಟ : ೪೦*** ***ಬೆಲೆ : ರೂ. ೩೦***

**ಕನ್ನಡ ಪದಸಂಪತ್ತು** (ನ.ಕ.ಕ.) *ಟಿ. ಎಸ್. ಗೋಪಾಲ್*
***ಪುಟ : ೫೬*** ***ಬೆಲೆ : ರೂ. ೩೫***

**ಸಮಾನಾರ್ಥ ಪದಕೋಶ** (ನ.ಕ.ಕ.) *ಟಿ. ಎಸ್. ಗೋಪಾಲ್*
***ಪುಟ : ೭೨*** ***ಬೆಲೆ : ರೂ. ೪೫***

**ನಾನಾರ್ಥ ಪದಕೋಶ** (ನ.ಕ.ಕ.) *ಟಿ. ಎಸ್. ಗೋಪಾಲ್*
***ಪುಟ : ೮೦*** ***ಬೆಲೆ : ರೂ. ೫೦***

**ಕನ್ನಡ ವ್ಯಾಕರಣ ಪದಕೋಶ** (ನ.ಕ.ಕ.)
*ಟಿ. ಎಸ್. ಗೋಪಾಲ್*
***ಪುಟ : ೯೬*** ***ಬೆಲೆ : ರೂ. ೫೫***

*ಮೇಲಿನ ಹತ್ತು ಪುಸ್ತಕಗಳ ಪ್ರಕಾಶಕರು*
**ನವಕರ್ನಾಟಕ ಪ್ರಕಾಶನ,** ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು – ೫೬೦ ೦೦೧.

**ಮಹಿಳೆ** (ದಲಿತತ್ವ ಮತ್ತು ರಾಜಕೀಯ ಪ್ರಜ್ಞೆ)
*ಸಂಪಾದಕರು : ಡಾ॥ ಎಚ್. ಎಸ್. ಅನುಪಮಾ*
***ಪುಟ : ೧೬೦*** ***ಬೆಲೆ : ರೂ. ೧೨೦***

**ಅಸಮಾನತೆಯ ಜಾಗತೀಕರಣ – ಭಾಷಣ ಮತ್ತು ಲೇಖನ**
*ಪಿ. ಸಾಯಿನಾಥ್, ಕನ್ನಡಕ್ಕೆ : ಸಿಂಚನ ತಂಡ*
***ಪುಟ : ೬೨*** ***ಬೆಲೆ : ರೂ. ೪೦***

**ಜೀನ್ಸ್ ತೊಟ್ಟ ದೇವರು** (ಕವನಗಳು)
*ಕಾವ್ಯಾ ಕಡಮೆ ನಾಗರಕಟ್ಟೆ*
***ಪುಟ : ೧೧೬*** ***ಬೆಲೆ : ರೂ. ೯೦***

**ಕರಿ ಕಣಗಿಲ** (ತೆಲುಗು ದಲಿತ ಕಾವ್ಯ)
*ಮೂಲ : ಕೆ. ಪುರುಷೋತ್ತಮ್,*
*ಕನ್ನಡಕ್ಕೆ : ಡಾ॥ ಎಚ್. ಎಸ್. ಅನುಪಮಾ*
***ಪುಟ : ೧೮೬*** ***ಬೆಲೆ : ರೂ. ೧೪೦***

**ಜಾತಿ – ಸಾಮಾಜಿಕ ಪ್ರತ್ಯೇಕತೆ ಮತ್ತು ಬಡತನ**
(ಪರಿಕಲ್ಪನೆ, ಮೌಲ್ಯಮಾಪನ ಮತ್ತು ಪ್ರಾಯೋಗಿಕ ಸಾಕ್ಷಿಗಳು)
*ಸುಖದೇವ್ ಥೋರಟ್ ಅನುವಾದ : ಬಿ. ಶ್ರೀಪಾದ*
***ಪುಟ : ೫೨*** ***ಬೆಲೆ : ರೂ. ೪೦***

**ಲಿಂಗವಂತ ಧರ್ಮದಲ್ಲಿ ಏನುಂಟು ಏನಿಲ್ಲ?**
(ಲಿಂಗಾಯತ ದರ್ಶನ ಮಾಲೆ : ೩) *ರಂಜಾನ್ ದರ್ಗಾ*
***ಪುಟ : ೬೪*** ***ಬೆಲೆ : ರೂ. ೩೦***

**ಒಡೆದ ಬಣ್ಣದ ಚಿತ್ರಗಳು** (ಕವನಗಳು)
*ಡಾ॥ ಮಹಾಂತೇಶ ಪಾಟೀಲ*
***ಪುಟ : ೧೧೨*** ***ಬೆಲೆ : ರೂ. ೮೫***

**ಅಸ್ಪೃಶ್ಯತೆಯೆಂಬ ವಿಷಕೂಸಿನ ಸುತ್ತ** (ಉಗಮ ಬೆಳವಣಿಗೆಯ ಸಮಾಜಶಾಸ್ತ್ರೀಯ ನೆಲೆಗಳು)
*ಡಾ॥ ಎಸ್. ಬಿ. ಜೋಗುರ*
***ಪುಟ : ೧೧೦*** ***ಬೆಲೆ : ರೂ. ೯೦***

*ಮೇಲಿನ ಎಂಟು ಪುಸ್ತಕಗಳ ಪ್ರಕಾಶಕರು*
**ಲಡಾಯಿ ಪ್ರಕಾಶನ,** ನಂ. ೨೧, ಪ್ರಸಾದ್ ಹಾಸ್ಟೆಲ್, ಗದಗ – ೫೮೨ ೧೦೧.

**ಗಾಂಧಾರಿ ಸ್ವಗತ** *ಡಾ॥ ಎಂ. ಬಿ. ಹೂಗಾರ*
***ಪುಟ : XVIII+೧೩೪=೧೫೨*** ***ಬೆಲೆ : ರೂ. ೧೧೦***

**ಕಾಲ ಪ್ರಕಾಶನ,** ನಂ. ೩೯/೩, ಶಿವನಗರ, ವೆಸ್ಟ್ ಆಫ್ ಕಾರ್ಡ್ ರಸ್ತೆ, ರಾಜಾಜಿನಗರ, ಬೆಂಗಳೂರು – ೧೦.

**ಮಹಿಳಾ ಅಧ್ಯಯನ ಪರಿಭಾಷೆ**
*ಡಾ॥ ಟಿ. ಆರ್. ಚಂದ್ರಶೇಖರ್*
***ಪುಟ : XVIII+೧೩೦*** ***ಬೆಲೆ : ರೂ. ೭೫***

**ಕುವೆಂಪು ಭಾಷಾ ಭಾರತಿ ಪ್ರಾಧಿಕಾರ,** ಕಲಾಗ್ರಾಮ, ಜ್ಞಾನಭಾರತಿ, ಬೆಂಗಳೂರು ವಿಶ್ವವಿದ್ಯಾಲಯ ಆವರಣದ ಹಿಂಭಾಗ, ಮಲ್ಲತ್ತಹಳ್ಳಿ ಬೆಂಗಳೂರು–೫೬೦ ೦೫೬.

**ಕನ್ನಡ ಸಾಹಿತ್ಯದಲ್ಲಿ ಅನುಭಾವ**
*ಸಂ॥ ಡಾ॥ ದೇವಕನ್ನಿಕಾ. ಡಿ. ನಗರಕರ*
***ಪುಟ : ೧೬ +೧೬೫*** ***ಬೆಲೆ : ರೂ. ೨೦೦***

**ಅಜೀತ ಪ್ರಕಾಶನ,** ಭಾವಸಾರ ನಗರ, ವಿಜಯಪುರ

**ನನ್ನದಲ್ಲ ನನಗಲ್ಲ** (ಚಿಂತನ, ವಿವೇಚನಾತ್ಮಕ ಬರಹಗಳು)
*ಅರ್ಜುನ ಕೋರಟಕರ*
***ಪುಟ : xiv+೨೦೨*** ***ಬೆಲೆ : ರೂ. ೧೮೦***

**ಅರ್ಜುನ ತಾ. ಕೋರಟಕರ,** ಶ್ರೀ ರಾಘವೇಂದ್ರ ಬೋರ್ಡಿಂಗ್, ಜಮಖಂಡಿ – ೫೮೭ ೩೦೧.

**ಸಂಸ್ಕೃತಿ ಸಮಾಜ ಮತ್ತು ದೇಶ** (ಪ್ರಬಂಧ ಸಂಗ್ರಹ)
*ಎಂ. ವಿ. ಭಟ್ (ಶ್ರೀಮಿತ್ತೂರು)*
***ಪುಟ : xiv + ೧೩೮*** ***ಬೆಲೆ : ರೂ. ೧೨೦***

**ಯುಗಪುರುಷ ಮುದ್ರಣಾಲಯ,** ಕಿನ್ನಿಗೋಳಿ – ೫೭೪ ೧೫೦, ದಕ್ಷಿಣ ಕನ್ನಡ.

**ಬದುಕಲು ಬಿಡದವರು** (ಕಥಾ ಸಂಕಲನ)ಬಸಪ್ಪ ಉಪ್ಪಾರ
***ಪುಟ : xviii + ೧೨೦*** ***ಬೆಲೆ : ರೂ. ೯೫***

**ಕುವೆಂಪು ಗ್ರಂಥಾಲಯ ಬಳಗ,** ಬಾಚಿಗೊಂಡನಹಳ್ಳಿ–೫೮೩೨೧೨, ಹಗರಿಬೊಮ್ಮನಹಳ್ಳಿ ತಾ. ಬಳ್ಳಾರಿ ಜಿ.





# ಬ್ಯಾಂಗಲೋರ್‌ನಿಂದ ಬೆಂಗಳೂರು ೨೦೨೦ರ ಹೊತ್ತಿಗೆ ನಿರ್ಜೀವ ನಗರದೆಡೆಗೆ

**ಮೆ**ಸೊಪೊಟೇಮಿಯ, ಈಜಿಪ್ಟ್, ಸಿಂಧೂ ಕಣಿವೆ ಮತ್ತು ಚೀನಾದ ನದಿ ಕಣಿವೆ ನಾಗರಿಕತೆಗಳ ಕಾಲದಲ್ಲಿ ನಗರಗಳ ಉಗಮವಾಯಿತೆಂದು ಹೇಳಬಹುದು. ಈ ವಸಾಹತುಗಳು ಆರಂಭದಲ್ಲಿ ಬಹುತೇಕ ಕೃಷಿ ಅವಲಂಬಿತವಾಗಿದ್ದವು; ಆದರೆ ಜನಸಂಖ್ಯೆ ವೃದ್ಧಿಸುತ್ತಾ ಹೋದಂತೆ ನಗರದ ವಿಸ್ತಾರ ಹೆಚ್ಚಾಗಿ, ಆರ್ಥಿಕ ಚಟುವಟಿಕೆಯು ವ್ಯಾಪಾರವಾಗಿ ಪರಿವರ್ತನೆಯಾಯಿತು. ಸುಮಾರು ೨೦೦ ವರ್ಷಗಳ ಹಿಂದೆ ಜರುಗಿದ ಕೈಗಾರಿಕಾ ಕ್ರಾಂತಿಯಿಂದ ನಗರೀಕರಣ ಪ್ರಕ್ರಿಯೆ ಚೈತನ್ಯ ಪಡೆಯಿತು; ಹಾಗೂ ೧೯೯೦ರ ದಶಕದಲ್ಲಿ ಜಾರಿಗೆ ಬಂದ ಜಾಗತೀಕರಣ ನೀತಿ ಮತ್ತು ತದನಂತರ ಸಡಿಲಗೊಂಡ ಮಾರುಕಟ್ಟೆ ಆರ್ಥಿಕತೆಯ ನಿಯಮಗಳಿಂದಾಗಿ ಇನ್ನೂ ಹೆಚ್ಚು ತ್ವರಿತಗೊಂಡಿತು. ಉದ್ಯಾನನಗರಿ ಮತ್ತು ತಂಪುನಗರವೆಂದೇ ಹೆಸರುವಾಸಿಯಾಗಿರುವ ಭಾರತದ ಹೆಮ್ಮೆಯ ನಗರ ಬೆಂಗಳೂರು ಸುಮಾರು ೫೦೦ ವರ್ಷಗಳಷ್ಟು ಹಳೆಯದು. ಒಂದು ಕಾಲದಲ್ಲಿ ಸಣ್ಣ ನೆಲೆಬೀಡಾಗಿದ್ದ ಬೆಂಗಳೂರಿಗೆ ಕ್ರಿ. ಶ. ೧೫೩೭ರಲ್ಲಿ ಅದರ ನಿರ್ಮಾತೃ ಕೆಂಪೇಗೌಡರು ಮಣ್ಣಿನ ಕೋಟೆ ಕಟ್ಟಿದರು. ತರುವಾಯ ಆತನ ಮಗ ನಾಲ್ಕು ಕಾವಲುಗೋಪುರಗಳನ್ನು ನಿರ್ಮಿಸಿ ನಗರದ ಗಡಿಗಳನ್ನು ಗುರುತು ಮಾಡಿದ. ಬೆಟ್ಟದ ತಪ್ಪಲಿನಲ್ಲಿರುವ ಬೆಂಗಳೂರಿನಲ್ಲಿ ಮಳೆ ಬಿದ್ದಾಗ ಕಣಿವೆಗಳ ಉದ್ದಕ್ಕೂ ಮೂರು ದಿಕ್ಕುಗಳಲ್ಲಿ ನೀರು ಹರಿಯುತ್ತಾ ಮೂರು ಜಲಾನಯನ ಪ್ರದೇಶಗಳು ನಿರ್ಮಾಣವಾಗುತ್ತವೆ – ಕೋರಮಂಗಲ ಚಲ್ಲಘಟ್ಟ ಕಣಿವೆ (ಕೆ – ಸಿ ಕಣಿವೆ), ಹೆಬ್ಬಾಳ ಕಣಿವೆ (ಎಚ್ ಕಣಿವೆ) ಮತ್ತು ವೃಷಭಾವತಿ ಕಣಿವೆ (ವಿ ಕಣಿವೆ). ೧೮೦೦ರಲ್ಲಿ ೩೫ ಟಿಎಮ್‌ಸಿ ಶೇಖರಣಾ ಸಾಮರ್ಥ್ಯವುಳ್ಳ ೧೪೫೨ ಜಲಮೂಲಗಳಿದ್ದವು (ಪ್ರಸ್ತುತ ಇರುವ ೭೪೧ ಚದರ ಕಿ. ಮೀ. ಹರಿವಿನೊಳಗೆ) ಮತ್ತು ಮೇ ಮಾಸದಲ್ಲಿ (ಬೇಸಿಗೆಯಲ್ಲಿ) ೧೪°–೧೬° ಸೆ.ನಷ್ಟು ಉಷ್ಣಾಂಶ ದಾಖಲಾಗಿತ್ತು. ನಗರದ ಪ್ಯಾಲೆಸ್ ಆರ್ಚರ್ಡ್ಸ್‌ನಲ್ಲಿ ಸೇಬು ಬೆಳೆಯುತ್ತಿದ್ದ ಖ್ಯಾತಿಯೂ ಇದೆ (ಡಿಸೆಂಬರ್‌ನಲ್ಲಿ ಕೆಲವು ದಿನಗಳು ಉಷ್ಣಾಂಶ ೦° ಸೆ. ಇರುತ್ತಿತ್ತು). ಆದರೆ ತೊಂಭತ್ತರ ಕೊನೆಯ ಭಾಗದಲ್ಲಿ ವೇಗವಾಗಿ ನಡೆದ ಯೋಜನಾರಹಿತ ನಗರೀಕರಣ ಪ್ರಕ್ರಿಯೆಯು ಕೆರೆಗಳ ಅಕ್ಕಪಕ್ಕದಲ್ಲಿ ಬೃಹದಾಕಾರವಾಗಿ, ಅವಾಸ್ತವಿಕವಾಗಿ, ಅನಿಯಂತ್ರಿತವಾಗಿ ನಡೆದ ಅಭಿವೃದ್ಧಿ ಚಟುವಟಿಕೆಗಳಿಗೆ ಸಾಕ್ಷಿಯಾಯಿತು. ಈಗ ಸುಮಾರು ೧೯೪ ಕೆರೆಗಳು ಇರುತ್ತವೆ. **(ಚಿತ್ರ ೧)**

ಗ್ರಾಮೀಣ ಪ್ರದೇಶಗಳನ್ನು ಬಲಿಕೊಟ್ಟು ನಗರ ಪ್ರದೇಶಗಳಲ್ಲಿ ಮತ್ತು ಉಪನಗರಗಳಲ್ಲಿ ವಾಸಿಸುವ ಅಸಂಖ್ಯಾತ ಜನರಿಂದ ಉಂಟಾಗಿರುವ ಪಟ್ಟಣಗಳ ಮತ್ತು ನಗರಗಳ ಬೆಳವಣಿಗೆಯನ್ನು ನಗರೀಕರಣ ಎಂದು ಹೇಳಬಹುದು. ಬಹಳಷ್ಟು ದೇಶಗಳಲ್ಲಿ ಎರಡನೆಯ ಜಾಗತಿಕ ಮಹಾಯುದ್ಧದ ತರುವಾಯ ನಗರ ಪ್ರದೇಶಗಳಲ್ಲಿ ವಾಸಿಸುವ ಒಟ್ಟು ಜನಸಂಖ್ಯೆ ವ್ಯಾಪಕವಾಗಿ ಹೆಚ್ಚಿದೆ. ಜಾಗತಿಕವಾಗಿ ನಗರ ಪ್ರದೇಶದ ಜನಸಂಖ್ಯೆ ತೀವ್ರ ಏರಿಕೆಯನ್ನು ಕಂಡಿದ್ದು, ೨೦ನೇ ಶತಮಾನದಲ್ಲಿ ಕ್ಷಿಪ್ರಗೊಂಡ ನಗರೀಕರಣ ಪ್ರಕ್ರಿಯೆಗೆ ಸಾಕ್ಷಿ ಒದಗಿಸುತ್ತದೆ. ಇದರ ಪ್ರಮಾಣವು ಶೇ. ೧೩ರಿಂದ (೧೯೯೦ರಲ್ಲಿ ೨೨೦ ದಶಲಕ್ಷ), ಶೇ. ೨೯ಕ್ಕೆ (೧೯೫೦ರಲ್ಲಿ ೭೩೨ ದಶಲಕ್ಷ), ಶೇ. ೪೯ಕ್ಕೆ ಏರಿ (೨೦೦೫ರಲ್ಲಿ ೩.೨ ಬಿಲಿಯನ್) ೨೦೩೦ರ ಹೊತ್ತಿಗೆ ಶೇ. ೬೦ರಷ್ಟು (೪.೯ ಬಿಲಿಯನ್) ಮತ್ತು ೨೦೫೦ರ ಸುಮಾರಿಗೆ ೯.೬ ಬಿಲಿಯನ್ ಆಗಬಹುದೆಂದು ಅಂದಾಜಿಸಲಾಗಿದೆ. ಜಗತ್ತಿನ ಈ ಸದ್ಯದ ಜನಸಂಖ್ಯೆ ೭.೪ ಬಿಲಿಯನ್ ಆಗಿದ್ದು ಗ್ರಾಮೀಣ ಜನಸಂಖ್ಯೆಗಿಂತಲೂ ಮೂರು ಪಟ್ಟು ಹೆಚ್ಚು ವೇಗವಾಗಿ ನಗರಗಳ ಜನಸಂಖ್ಯೆ ಏರುತ್ತಿರುವುದು ಕಂಡುಬಂದಿದೆ. ವಿಶ್ವದ ಬಹುತೇಕ ಭಾಗಗಳಲ್ಲಿ ಜನ ವಲಸೆ ಹೋಗುತ್ತಿರುವುದೇ ಇದಕ್ಕೆ ಕಾರಣ. ಗ್ರಾಮೀಣ ಪ್ರದೇಶಗಳಿಗೆ ಹೋಲಿಸಿದರೆ ಒಳ್ಳೆಯ ಮೂಲಭೂತ ಸೌಕರ್ಯಗಳು (ಶಿಕ್ಷಣ, ಮನರಂಜನೆ, ಆರೋಗ್ಯ ಕೇಂದ್ರಗಳು, ಬ್ಯಾಂಕಿಂಗ್, ಸಾರಿಗೆ ಮತ್ತು ಸಂಪರ್ಕ) ಮತ್ತು ಹೆಚ್ಚಿನ ತಲಾ ಆದಾಯವಿರುವುದನ್ನು ಪರಿಗಣಿಸಿ ಉತ್ತಮ ಬದುಕಿನ ನಿರೀಕ್ಷೆಯೊಂದಿಗೆ


ಮೂಲ : **ರಾಮಚಂದ್ರ ಟಿ. ವಿ., ಭರತ್ ಎಚ್. ಎ., ವಿನಯ್ ಎಸ್.**

ಕನ್ನಡಕ್ಕೆ : **ಜ್ಯೋತಿ ಎ.**








ಜನರು ನಗರ ಪ್ರದೇಶಗಳಿಗೆ ವಲಸೆ ಹೋಗುತ್ತಾರೆ. ಅವ್ಯವಸ್ಥಿತವಾಗಿ ನಡೆಯುವ ನಗರೀಕರಣ ಪ್ರಕ್ರಿಯೆಯು ಭೂಬಳಕೆಯಲ್ಲಿ ಬೃಹತ್ ಪ್ರಮಾಣದ ಬದಲಾವಣೆಗಳಿಗೆ ಕಾರಣವಾಗುತ್ತದೆ. ಇದು ಸ್ಥಳೀಯ ನೈಸರ್ಗಿಕ ಸಂಪನ್ಮೂಲಗಳ ಪೋಷಣೆಯ ಮೇಲೆ ದುಷ್ಪರಿಣಾಮ ಬೀರುತ್ತದೆ. ಭಾರತದ ಬಹುತೇಕ ನಗರಗಳಲ್ಲಿ ವೇಗವಾಗಿ ಸಾಗುತ್ತಿರುವ ಯೋಜನಾರಹಿತ ನಗರೀಕರಣ ಪ್ರಕ್ರಿಯೆಯು ನಗರ ಪ್ರದೇಶಗಳಲ್ಲಿ ಗಂಭೀರ ಸಮಸ್ಯೆಗಳಿಗೆ ದಾರಿ ಮಾಡಿಕೊಟ್ಟಿದೆ. ಹೆಚ್ಚಿದ ಮಾಲಿನ್ಯ (ವಾಯು, ಜಲ, ಭೂ ಮತ್ತು ಶಬ್ದಮಾಲಿನ್ಯ), ನೈಸರ್ಗಿಕ ಸಂಪನ್ಮೂಲಗಳ ಅಸಮಾನ ಹಂಚಿಕೆ, ಸಂಚಾರ ದಟ್ಟಣೆ, ಕೊಳೆಗೇರಿಗಳ ಹೆಚ್ಚಳ, ನಿರುದ್ಯೋಗ, ಪಳೆಯುಳಿಕೆ ಇಂಧನಗಳ ಮೇಲಿನ ಹೆಚ್ಚಿದ ಅವಲಂಬನೆ ಮತ್ತು ಅನಿಯಂತ್ರಿತ ಬೆಳವಣಿಗೆ ಅಥವಾ ಪರಿಧಿಯ ವಿಸ್ತರಣೆ ಇವೇ ಮೊದಲಾದವುಗಳು ಈ ಸಮಸ್ಯೆಗಳ ಮೂಲ. ೨೧ನೇ ಶತಮಾನದಲ್ಲಿ ಪರೀಕ್ಷೆಗೊಳಪಟ್ಟಿರುವ ಜನಸಂಖ್ಯೆಗೆ ಸಂಬಂಧಿಸಿದ ಸಮಸ್ಯೆಗಳಲ್ಲಿ ನಗರೀಕರಣವೂ ಒಂದು. ನೈಸರ್ಗಿಕ ಸಂಪನ್ಮೂಲಗಳ ಸುಸ್ಥಿರ ನಿರ್ವಹಣೆಗಾಗಿ ಮತ್ತು ಹವಾಮಾನ ವೈಪರೀತ್ಯಗಳನ್ನು ತಗ್ಗಿಸುವ ಸಲುವಾಗಿ ಭೂಪ್ರದೇಶದ ಮಾದರಿಗಳಲ್ಲಿನ ಬದಲಾವಣೆಗಳನ್ನು ಅರ್ಥೈಸಿಕೊಂಡು ಬೆಳವಣಿಗೆಯ ಪ್ರಗತಿಯನ್ನು ಮನಗಾಣುವುದು ಅತ್ಯಗತ್ಯವಾಗಿದೆ. ಇದು ಅಧಿಕಗೊಂಡ ನಗರ ಪ್ರದೇಶ ವ್ಯಾಪ್ತಿ ಮತ್ತು ಜನಸಂಖ್ಯೆಗೆ ಸಂಬಂಧಿಸಿದ ಸಮಸ್ಯೆಗಳನ್ನು ಕಡಿಮೆಮಾಡಿ ಅಂತಿಮವಾಗಿ ಸುಸ್ಥಿರ ನಗರಗಳನ್ನು ಕಟ್ಟಲು ನಗರ ಯೋಜಕರಿಗೆ ನೆರವಾಗಲಿದೆ.

ಬೆಂಗಳೂರಿನ ಆರ್ಥಿಕ ಅಭಿವೃದ್ಧಿಗಾಗಿ ಕೈಗಾರಿಕೀಕರಣಕ್ಕೆ ಹೆಚ್ಚು ಒತ್ತು ನೀಡಿದ, ಅವಾಸ್ತವಿಕವಾಗಿ ಕೇಂದ್ರೀಕರಿಸಿದ ಅಭಿವೃದ್ಧಿ ಕ್ರಿಯೆಗಳಿಂದಾಗಿ ಇತ್ತೀಚಿನ ದಿನಗಳಲ್ಲಿ ಈ ಪ್ರದೇಶವು ಅಭೂತಪೂರ್ವ ಮತ್ತು ಕ್ಷಿಪ್ರ ನಗರೀಕರಣ ಪ್ರಕ್ರಿಯೆಗೆ ಸಾಕ್ಷಿಯಾಗಿದ್ದಲ್ಲದೆ ಅತಿ ವೇಗವಾಗಿ ವಿಸ್ತಾರಗೊಂಡಿತು. ಇದರ ಪರಿಣಾಮವಾಗಿ ತೀವ್ರ ಪರಿಸರ ಅವನತಿ ಉಂಟಾಗಿದ್ದು ಬೃಹದಾಕಾರವಾದ ಭೂ ಮೇಲ್ಮೈ ಬದಲಾವಣೆಗಳು ಕಂಡುಬಂದಿವೆ. ಇದರಿಂದಾಗಿ ಹವಾಮಾನ ಬದಲಾವಣೆ, ವರ್ಧಿತ ಹಸಿರುಮನೆ ಅನಿಲಗಳ ಹೊರಸೂಸುವಿಕೆ, ಹಲವು ಪ್ರದೇಶಗಳಲ್ಲಿ ಸಮರ್ಪಕ ಮೂಲಸೌಕರ್ಯಗಳ ಕೊರತೆ, ಸಂಚಾರ ದಟ್ಟಣೆ, ಮೂಲಭೂತ ಸೌಲಭ್ಯಗಳ (ವಿದ್ಯುತ್, ನೀರು ಮತ್ತು ನೈರ್ಮಲ್ಯ) ಅಭಾವದಂತಹ ಅನೇಕ ಗಂಭೀರ ಸವಾಲುಗಳನ್ನು ನಗರ ಯೋಜನೆ ಮತ್ತು ಆಡಳಿತ ವ್ಯವಸ್ಥೆಯ ನಿರ್ಧಾರಕರು ಎದುರಿಸಬೇಕಾಗಿದೆ. ಇವುಗಳಲ್ಲದೆ ನಗರೀಕರಣದ ಪ್ರಮುಖ ಪರಿಣಾಮಗಳು ಹೀಗಿವೆ :

**ನಗರೀಕರಣ ಮತ್ತು ನೈಸರ್ಗಿಕ ಸಂಪನ್ಮೂಲಗಳ (ತೇವ ಭೂಮಿ ಮತ್ತು ಹಸಿರುಹಾಸುಗಳು) ಕಣ್ಮರೆ**

೧೯೭೩ರಿಂದ ೨೦೧೭ರವರೆಗೆ ನಡೆದ ನಗರೀಕರಣ (ಶೇ. ೧೦೨೮ರಷ್ಟು ಕಾಂಕ್ರೀಟ್‌ಕರಣ ಅಥವಾ ಕಲ್ಲುಹಾಸಿನ ರಸ್ತೆಗಳ ಹೆಚ್ಚಳ) ನೈಸರ್ಗಿಕ ಸಂಪನ್ಮೂಲಗಳ ಮೇಲೆ ಗಣನೀಯ ಪ್ರಭಾವ ಬೀರಿದೆ. ಹಸಿರುಹಾಸಿನ ಪ್ರಮಾಣದಲ್ಲಿ ಇಳಿಕೆ (ಸಸ್ಯಪ್ರಭೇದದಲ್ಲಿ ಶೇ. ೮೮ರಷ್ಟು ಕಡಿತ), ತೇವ ಭೂಮಿ (ಶೇ. ೭೯ರಷ್ಟು ಇಳಿಕೆ), ವಾಯುಮಾಲಿನ್ಯಕಾರಕಗಳ ಹೆಚ್ಚಳ, ಅಂತರ್ಜಲ

ಮಟ್ಟದಲ್ಲಿ ತೀವ್ರ ಕುಸಿತ – ಹೀಗೆ ಇದರ ಪರಿಣಾಮ ಗೋಚರವಾಗುತ್ತಿದೆ. ಬೆಂಗಳೂರು ನಗರದಲ್ಲಿ ಶೇ. ೬೮.೨ರಷ್ಟಿದ್ದ ಹಸಿರು ಹೊದಿಕೆ (ಪ್ರಸ್ತುತ ಭೌಗೋಳಿಕ ವಿಸ್ತಾರ ೭೪೧ ಚದರ ಕಿ. ಮೀ.) ಈಗ ಕೇವಲ ಶೇ. ೬.೪೬ರಷ್ಟಕ್ಕೆ ಕುಸಿದಿದೆ. ನಗರದ ಭೂವಿನ್ಯಾಸವನ್ನು ಇಂದು ಕಲ್ಲುಹಾಸಿನ ಮೇಲ್ಮೈ (ಶೇ. ೭೮.೭ ಕಾಂಕ್ರೀಟ್ ಕಟ್ಟಡಗಳು, ರಸ್ತೆಗಳು, ಇತ್ಯಾದಿಗಳು) ಆವರಿಸಿದೆ. ಕಳೆದೆರಡು ದಶಕಗಳಲ್ಲಿ ಅವಾಸ್ತವಿಕವಾಗಿ ನಡೆದಿರುವ ನಗರಾಭಿವೃದ್ಧಿಯ ಚಿತ್ರಣವನ್ನು ಒದಗಿಸುತ್ತದೆ. ಬೆಂಗಳೂರಿನ ಸುಮಾರು ೮.೫ ದಶಲಕ್ಷದಷ್ಟು ಜನರಿಗೆ ಆಧಾರವಾಗಲು ಕೇವಲ ೧.೫ ದಶಲಕ್ಷ ಮರಗಳು ಮಾತ್ರ ಇವೆ ಎಂದು ಈ ಪ್ರದೇಶದಲ್ಲಿ ರಿಮೋಟ್ ಸೆನ್ಸಿಂಗ್ ಮೂಲಕ ನಡೆಸಿದ ಮರಗಳ ಸಂಖ್ಯೆಯ ದಾಖಲೀಕರಣ ಮತ್ತು ಕ್ಷೇತ್ರ ಗಣತಿ ಅಂಕಿಅಂಶಗಳು ಹೇಳುತ್ತವೆ. ನಗರದ ಪ್ರತಿ ಏಳು ಜನರಿಗೆ ಒಂದು ಮರವಿದೆ ಎಂಬುದನ್ನು ಇದು ಸೂಚಿಸುತ್ತದೆ. ಈ ಪ್ರಮಾಣವು ಕನಿಷ್ಠ ಉಸಿರಾಟದ ಇಂಗಾಲವನ್ನು ಶುದ್ಧಗೊಳಿಸಲೂ ಸಾಲದು (ಪ್ರತಿ ಮನುಷ್ಯನ ಉಸಿರಾಟದಲ್ಲಿ ದಿನಂಪ್ರತಿ ೫೪೦–೯೦೦ ಗ್ರಾಂಗಳಷ್ಟು ಇಂಗಾಲದ ಡೈಆಕ್ಸೈಡ್ ಉತ್ಪತ್ತಿಯಾಗುತ್ತದೆ ಎಂದು ಅಂದಾಜಿಸಲಾಗಿದೆ). ಈ ಪ್ರದೇಶದಲ್ಲಿ ಸಾಕಷ್ಟು ಆಮ್ಲಜನಕ ಒದಗಿಸಿ ಆರೋಗ್ಯಪೂರ್ಣ ವಾತಾವರಣವನ್ನು ಖಾತರಿಗೊಳಿಸಲು ಪ್ರತಿ ಮನುಷ್ಯನಿಗೆ ಏಳು ಮರಗಳ ಅವಶ್ಯಕತೆ ಇರುತ್ತದೆ. ಬೆಂಗಳೂರು ಭೂವಿನ್ಯಾಸದ ಶೇ. ೯೩ರಷ್ಟು ಭಾಗ ಕಲ್ಲುಹಾಸಿನಿಂದ ಆವೃತವಾಗಿದ್ದು (ನಗರ ಮೇಲ್ಮೈ) ತೆರೆದ ಸ್ಥಳಗಳು ಮತ್ತು ಹಸಿರು ಹೊದಿಕೆಯ ಪ್ರಮಾಣದಲ್ಲಿ ಗಣನೀಯ ಇಳಿಕೆ ಕಂಡುಬಂದಿದೆ. ಬಹುವಿಧಗಳ ಮಾನದಂಡಗಳನ್ನು ಉಪಯೋಗಿಸಿ ನಿರ್ಧಾರಕ ತಂತ್ರಗಳ ಮೂಲಕ ಸಂಗ್ರಹಿಸಲಾದ ೨೦೨೦ರ ಸಂಭಾವ್ಯ ಭೂಬಳಕೆಯ ಭೌಗೋಳಿಕ ದೃಶ್ಯೀಕರಣವು ಈ ಆತಂಕಕಾರಿ ಸಂಗತಿಯನ್ನು ಬಹಿರಂಗಗೊಳಿಸಿದೆ (ಫಜ್ಜಿ – ಎಎಚ್‌ಪಿ : ಅನಲಿಟಿಕಲ್ ಹೈಯರಾರ್ಕಿಯಲ್ ಪ್ರೊಸೆಸ್). ಇದು ಹಸಿರುಮನೆ ಅನಿಲಗಳ ಹೆಚ್ಚಳ ಮತ್ತು ನೀರಿನ ಕೊರತೆಗೆ ಕಾರಣವಾಗಿ ನಗರವನ್ನು ಅಸಹನೀಯವಾಗಿಸಿದೆ. ವಾಸಿಸಲು ಬೆಂಗಳೂರು ಯೋಗ್ಯವಲ್ಲ ಎಂಬಂತಾಗಿಸಿದೆ. ನಗರವಾಸಿಗಳು ಶುದ್ಧ ಗಾಳಿ, ನೀರು ಮತ್ತು ಪರಿಸರದಿಂದ ವಂಚಿತರಾಗುತ್ತಾರೆ. ನೈಸರ್ಗಿಕ ಸಂಪನ್ಮೂಲಗಳ (ಶುದ್ಧ ನೀರು, ಆಮ್ಲಜನಕ, ಮನರಂಜನೆಗೆ ಅವಕಾಶ, ಸ್ವಸ್ಥ ಯುವಜನತೆ, ಇತ್ಯಾದಿ) ತೀವ್ರ ಕೊರತೆಯಿಂದಾಗಿ ನಗರ ಪ್ರದೇಶವು ಬಳಲುತ್ತದೆ.

ಶೇ. ೯೮ರಷ್ಟು ಕೆರೆಗಳನ್ನು ಅಕ್ರಮ ಕಟ್ಟಡಗಳಿಗಾಗಿ (ಗಗನಚುಂಬಿ ಅಪಾರ್ಟ್‌ಮೆಂಟ್‌ಗಳು, ವಾಣಿಜ್ಯ ಕಟ್ಟಡಗಳು, ಕೊಳೆಗೇರಿಗಳು ಇತ್ಯಾದಿ) ಒತ್ತುವರಿ ಮಾಡಲಾಗಿದ್ದು ಶೇ. ೯೨ರಷ್ಟು ಕೆರೆಗಳಿಗೆ ಕೊಳಚೆ ನೀರನ್ನು ಹರಿಸಲಾಗಿದೆ. ಅಲ್ಲದೆ, ಕೆರೆ ಏರಿಗಳಲ್ಲಿ ಕಟ್ಟಡಗಳ ಅವಶೇಷಗಳನ್ನು ಸುರಿದು ಇಲ್ಲವೇ ನಗರದ ಘನತ್ಯಾಜ್ಯ ವಿಲೇವಾರಿಗಾಗಿ ದುರ್ಬಳಕೆ ಮಾಡುತ್ತಾ ಅವುಗಳನ್ನು ತಿಪ್ಪೆಗುಂಡಿಗಳಾಗಿ ಪರಿವರ್ತಿಸಲಾಗಿದೆ. ಘನ ಮತ್ತು ದ್ರವರೂಪದ ತ್ಯಾಜ್ಯವಸ್ತುಗಳನ್ನು (ಇವುಗಳಲ್ಲಿ ಜೈವಿಕ ಪೌಷ್ಟಿಕಾಂಶ ಅಧಿಕವಾಗಿರುತ್ತದೆ) ವಿವೇಚನಾರಹಿತವಾಗಿ ವಿಲೇವಾರಿ ಮಾಡುತ್ತಿರುವುದರಿಂದ ಸುತ್ತಮುತ್ತಲಿನ ಜಲಮೂಲಗಳಲ್ಲಿ ನೈಟ್ರೇಟ್ ಪ್ರಮಾಣ ಏರಿದೆ. ಈ ಬೆಳವಣಿಗೆ ಸುತ್ತಮುತ್ತಲಿನ ನಿವಾಸಿಗಳ ಆರೋಗ್ಯಕ್ಕೆ ಅತ್ಯಂತ ಅಪಾಯಕಾರಿಯಾಗಿ ಪರಿಣಮಿಸಿದೆ (ಮೂತ್ರಕೋಶ ವೈಫಲ್ಯ, ಕ್ಯಾನ್ಸರ್ ಇತ್ಯಾದಿ). ಕೆಲವು ಕಲುಷಿತ ಕೆರೆಗಳಲ್ಲಿ ಗೃಹಕೃತ್ಯಗಳನ್ನು ಕೈಗೊಳ್ಳುವುದು, ತೊಳೆಯುವುದು, ತರಕಾರಿ ಬೆಳೆಯುವುದು ಮತ್ತು ಮೀನುಗಾರಿಕೆಯಂತಹ ಚಟುವಟಿಕೆಗಳನ್ನೂ ಕೂಡ ಕಾಣಬಹುದು. ಕಣಿವೆ ವಲಯಗಳಲ್ಲಿ, ಕೆರೆಕಟ್ಟೆಗಳ ಮತ್ತು ಮಳೆ ನೀರಿನ ಚರಂಡಿಗಳ ಮೇಲೆ ಕೈಗೊಳ್ಳಲಾಗಿರುವ ಅಕ್ರಮ ನಿರ್ಮಾಣಗಳು ನೀತಿ ನಿರ್ಧಾರಕರ ನಿರ್ಲಕ್ಷ್ಯ ಧೋರಣೆಗೆ ಸಾಕ್ಷಿಯಾಗಿದೆ; ಮಾತ್ರವಲ್ಲ ಇದು ದುರ್ಬಲ ಮತ್ತು ಛಿದ್ರಗೊಂಡ ಆಡಳಿತ ವ್ಯವಸ್ಥೆಯನ್ನು ಪ್ರತಿಬಿಂಬಿಸುತ್ತದೆ. ಪುರ ಯೋಜನೆಯ ನಿಯಮಗಳನ್ನು (ನಗರಾಭಿವೃದ್ಧಿ ಯೋಜನೆ) ಉಲ್ಲಂಘಿಸಿ ಹೆಚ್ಚಿರುವ ಅಕ್ರಮ ನಿರ್ಮಾಣಗಳಿಗೂ ಇಂತಹ ಆಡಳಿತಕ್ಕೂ ಪರಸ್ಪರ ಸಂಬಂಧವಿದೆ. ಈ ಪ್ರಕ್ರಿಯೆ ತೆರೆದ ಸ್ಥಳಗಳ, ಅದರಲ್ಲೂ ವಿಶೇಷವಾಗಿ ಜಲಮೂಲಗಳ ಮೇಲೆ ದುಷ್ಪರಿಣಾಮ ಬೀರುತ್ತದೆ.

ಇತ್ತೀಚಿನ ತಿಂಗಳುಗಳಲ್ಲಿ ಏರಿಕೆ ಕಂಡಿರುವ ಮೀನುಗಳ ಮರಣ ಪ್ರಮಾಣ ದರವು ನೀರಿನ ಆಗರಗಳ ಕಲ್ಮಶ ಮಟ್ಟವನ್ನೂ, ಬೇಜವಾಬ್ದಾರಿಯುತ ನಿರ್ವಹಣೆಯನ್ನೂ ಸೂಚಿಸುತ್ತದೆ. ಜಲಾಗರಗಳಲ್ಲಿ ಸಂಸ್ಕರಿಸದ ಒಳಚರಂಡಿ ತ್ಯಾಜ್ಯದ ನಿರಂತರ ಒಳಹರಿವು, ಅವುಗಳ ಪರಿಹಾರ ಸಾಮರ್ಥ್ಯದ ಪರಿಮಿತಿಯನ್ನೂ ಮೀರಿ ಜೈವಿಕ ರಾಸಾಯನಿಕಗಳ ಪ್ರಮಾಣವನ್ನು ಹೆಚ್ಚಿಸಿದೆ. ಬೇಸಿಗೆಯ ಆರಂಭದೊಂದಿಗೆ ಏರುತ್ತಿರುವ ತಾಪಮಾನ (೩೪° ಸೆ.ನಿಂದ ೩೫° ಸೆ.) ಜೈವಿಕ ಚಟುವಟಿಕೆಯನ್ನು ಅಧಿಕಗೊಳಿಸಿದೆ (ವರ್ಧಿತ ಅಮೋನಿಯಾ ಮತ್ತು ಬಿಒಡಿ – ಜೀವರಾಸಾಯನಿಕ ಆಮ್ಲಜನಕ ಬೇಡಿಕೆ, ಇವುಗಳಿಂದ ವಿಷಯ ಸ್ಪಷ್ಟವಾಗುತ್ತದೆ). ಇದರಿಂದಾಗಿ ನೀರಿನೊಳಗೆ ಮಿಶ್ರಣಗೊಂಡ ಆಮ್ಲಜನಕ ಪ್ರಮಾಣವು ತಗ್ಗಿ ಮೀನುಗಳು ಉಸಿರುಕಟ್ಟಿ ಸಾವನ್ನಪ್ಪುತ್ತಿವೆ.

ಪ್ರವಾಹ : ಕೃತಕ ಕಲ್ಲುಹಾಸಿನ ಪ್ರದೇಶದ ಹೆಚ್ಚಳ, ಜಲಸಂಗ್ರಹಣಾ ಪ್ರದೇಶಗಳಲ್ಲಿ ಜನಸಾಂದ್ರತೆ ಅಧಿಕಗೊಂಡ ನಗರಾಭಿವೃದ್ಧಿ ಮಾದರಿ ಹಾಗೂ ತೇವಭೂಮಿ ಮತ್ತು ಸಸ್ಯಪ್ರಭೇದಗಳ ವಿನಾಶ – ಇವುಗಳ ಪರಿಣಾಮವಾಗಿ ಬೆಂಗಳೂರಿನಲ್ಲಿ ಆಗಾಗ್ಗೆ (೨೦೦೦ದಿಂದೀಚೆಗೆ ಸಾಮಾನ್ಯ ಮಳೆಗೂ) ಪ್ರವಾಹ ಸಂಭವಿಸುತ್ತಿದೆ. ನೈಸರ್ಗಿಕ ಚರಂಡಿಗಳ ಅತಿಕ್ರಮಣ, ಗಗನಚುಂಬಿ ಕಟ್ಟಡಗಳ ನಿರ್ಮಾಣದಿಂದಾಗಿ ಸ್ಥಳವಿನ್ಯಾಸದ ಬದಲಾವಣೆ, ಸಸ್ಯರಾಶಿಯ ಹೊದಿಕೆಯನ್ನು ತೆರವುಗೊಳಿಸಿರುವುದು, ತೇವಭೂಮಿ ಪ್ರದೇಶಗಳನ್ನು ಕೃಷಿಗಾಗಿ ಪರಿವರ್ತಿಸಿರುವುದು, ಇವೇ ಮೊದಲಾದವುಗಳು ಸಾಮಾನ್ಯ ಮಳೆಯಲ್ಲೂ ಆಗಾಗ್ಗೆ ಮಹಾಪೂರ ಉಂಟಾಗಲು ಪ್ರಮುಖ ಕಾರಣಗಳಾಗಿವೆ. ಇವುಗಳ ಜೊತೆಗೆ ಮಳೆನೀರಿನ ಚರಂಡಿಗಳನ್ನು ಕಾಂಕ್ರೀಟೀಕರಣದ ಮೂಲಕ ಕಿರಿದಾಗಿಸಿ, ಹೊರಹರಿವನ್ನು ಹೆಚ್ಚಿಸುತ್ತ ಚರಂಡಿಗಳ ಸಮರ್ಪಕ ನಿರ್ವಹಣೆಯಲ್ಲಿ ವ್ಯತ್ಯಯವಾಗಿರುವುದು, ಜಲಮಾರ್ಗಗಳ ಪ್ರವಾಹಬಯಲನ್ನು ತುಂಬಿಸುವುದು, ಚರಂಡಿಯ ಕೊಳವೆಗಳು, ಮ್ಯಾನ್‌ಹೋಲ್‌ಗಳು ಮತ್ತಿತರ ತತ್ಸಂಬಂಧಿ ನಿರ್ಮಾಣಗಳಿಂದ ಅಡಚಣೆಯಾಗುವುದು, ಕಟ್ಟಡಗಳ ಉಳಿಕೆ ಮತ್ತು ಘನತ್ಯಾಜ್ಯ ವಸ್ತುಗಳನ್ನು ಸುರಿಯುವುದರ ಪರಿಣಾಮವಾಗಿ ವ್ಯವಸ್ಥೆಗೆ ಅಡೆತಡೆ ಒಡ್ಡುತ್ತಾ, ರಸ್ತೆಗೆ ಅಡ್ಡಹಾಯುವ ಕಡಿಮೆ ಸಾಮರ್ಥ್ಯದ ಸೇತುವೆ ಮತ್ತು ಕಲ್ವರ್ಟ್‌ಗಳ ಕೆಳಗಿನ ಹರಿವನ್ನು ನಿರ್ಬಂಧಿಸುವುದೂ ಸೇರಿವೆ. ಯೋಜನೆ ಮತ್ತು ಅನುಷ್ಠಾನದಲ್ಲಿನ ನ್ಯೂನತೆಗಳು ಜಲಮಾರ್ಗಗಳನ್ನು ಗಮನಾರ್ಹವಾಗಿಯೇ ಕಿರಿದುಗೊಳಿಸಿ ಅಕ್ರಮ ಚಟುವಟಿಕೆಗಳ ಮೂಲಕ ಪ್ರವಾಹಬಯಲನ್ನು ಭರ್ತಿಗೊಳಿಸಲು ಅವಕಾಶ ಮಾಡಿಕೊಟ್ಟಿವೆ. ಪ್ರವಾಹಕಾರಕಗಳನ್ನು ಹೀಗೆ ಗುರುತಿಸಬಹುದು : (೧) ಒಳಚರಂಡಿಗಳ ಅತಿಕ್ರಮಣ ಅಥವಾ ಘನ ತ್ಯಾಜ್ಯ







ವಸ್ತುಗಳನ್ನು ಸುರಿಯುವುದರಿಂದ ಕೆರೆಗಳ ನಡುವೆ ಅಂತರ್‌ಸಂಪರ್ಕ ಕಡಿತಗೊಳ್ಳುವುದು, ನಿರ್ಮಾಣ ಮತ್ತು ಒಡೆಯುವ ತ್ಯಾಜ್ಯ ; (೨) ಪ್ರವಾಹಬಯಲು ಮತ್ತು ತೇವಭೂಮಿಯನ್ನು ಒತ್ತುವರಿ ಮಾಡಿರುವುದು (ಕಣಿವೆ ವಲಯಗಳಲ್ಲಿ, ಪ್ರವಾಹಬಯಲುಗಳಲ್ಲಿ ಮತ್ತು ಕೆರೆಹಾಸಿನಲ್ಲಿ ನಿರ್ಮಾಣ) ಹಾಗೂ ಕೆರೆಗಳ ಡಿನೋಟಿಫಿಕೇಶನ್ ('ಸತ್ತ ಕೆರೆಗಳ' ಸೋಗಿನಲ್ಲಿ – ಆದರೆ ಯಾವ ಕೆರೆಯೂ ಸಾಯಲು ಸಾಧ್ಯವಿಲ್ಲ, ಏಕೆಂದರೆ ಅಂತರ್ಜಲ ಮರುಪೂರಣದ ಕೆಲಸವನ್ನು ಕೆರೆಗಳು ನಿರ್ವಹಿಸುತ್ತವೆ); (೩) ಮಳೆನೀರಿನ ಚರಂಡಿಗಳನ್ನು ಸಂಕುಚಿತಗೊಳಿಸಿ ಕಾಂಕ್ರೀಟ್‌ಮಯಗೊಳಿಸಿ ನೈಸರ್ಗಿಕ ಚರಂಡಿಗಳ ಜಲವೈಜ್ಞಾನಿಕ ಕ್ರಿಯೆಗಳನ್ನು ದುರ್ಬಲಗೊಳಿಸುವುದು; ಮತ್ತು (೪) ವ್ಯಾಪ್ಯ ಭೂಮಿಯನ್ನು ಕಳೆದು ಕೊಂಡಿರುವುದು – ತೆರೆದ ಪ್ರದೇಶಗಳು, ತೇವಭೂಮಿ ಮತ್ತು ಸಸ್ಯಪ್ರವರ್ಗದ ಹೊದಿಕೆಯ ಪ್ರಮಾಣ ಕುಸಿದಿರುವುದು. ಆದ್ದರಿಂದ ಇವುಗಳನ್ನು ನಿವಾರಿಸಿ ಪ್ರವಾಹದ ಪರಿಣಾಮಗಳನ್ನು ತಗ್ಗಿಸಲು ಪರಿಹಾರಾತ್ಮಕ ಕ್ರಮಗಳನ್ನು ಕೈಗೊಳ್ಳಬೇಕಾಗಿದೆ.

**ಅಂತರ್ಜಲ ಮಟ್ಟದಲ್ಲಿ ಕುಸಿತ :** ೨೦ ವರ್ಷಗಳ ಅವಧಿಯಲ್ಲಿ ಅಂತರ್ಜಲ ಮಟ್ಟವು ೨೮ ಮೀ. ಗಳಿಂದ ೩೦೦ ಮೀ.ಗಳಿಗೆ ಕುಸಿದಿದ್ದು ತೀಕ್ಷ್ಣವಾಗಿ ನಗರೀಕರಣಕ್ಕೊಳಗಾದ ವೈಟ್‌ಫೀಲ್ಡ್‌ನಂತಹ ಪ್ರದೇಶಗಳಲ್ಲಿ ೪೦೦ ಮೀ.ಗಳಿಂದ ೫೦೦ ಮೀ. ಗಳಿಗೆ ಕುಸಿತ ಕಂಡಿದೆ.

**ತಾಪ ದ್ವೀಪ :** ಇಂಧನ ಬಳಕೆ, ಅಧಿಕ ಶಾಖ ಸಾಮರ್ಥ್ಯ ಮತ್ತು ವಾಹಕತೆಗಳುಳ್ಳ ಕೃತಕ ಸಾಮಗ್ರಿಗಳ ಬಳಕೆಯಿಂದ ಹೆಚ್ಚಿದ ಭೂಮೇಲ್ಮೈ ಹರವು ಹಾಗೂ ಇದರಿಂದಾಗಿ ಸಸ್ಯವರ್ಗ ಮತ್ತು ಭೂಮಿಯ ಮೇಲಿನ ತಾಪಮಾನವನ್ನು ಬಾಷ್ಪೀಕರಣದ ಮೂಲಕ ತಗ್ಗಿಸುವಂತಹ ಜಲವ್ಯಾಪ್ಯ ಮೇಲ್ಮೈ ಪ್ರದೇಶಗಳು ಇಳಿಮುಖವಾಗುತ್ತಾ ಮಾನವಜನ್ಯ ತಾಪ ವಿಸರ್ಜನೆಯಿಂದಾಗಿ ಭೂಮೇಲ್ಮೈನ ಮತ್ತು ವಾತಾವರಣದ ಉಷ್ಣಾಂಶಗಳು ಏರಿವೆ. ನಗರದ ಸ್ಫೋಟಕ ಬೆಳವಣಿಗೆಯು ಸ್ಥಳೀಯ ಹವಾಮಾನದ ಮೇಲೆ ಬೀರಿರುವ ಪ್ರಭಾವವನ್ನು ಕಳೆದ ಮೂರು ದಶಕಗಳಲ್ಲಿ ಸುಮಾರು ೨°ಗಳಿಂದ ೨.೫° ಸೆ.ಗಳಷ್ಟು ಹೆಚ್ಚಿರುವ ತಾಪಮಾನ ಒತ್ತಿ ಹೇಳುತ್ತದೆ. ಹಾಗೆಯೇ ನೈಸರ್ಗಿಕ ಸಂಪನ್ಮೂಲಗಳ ಸುಸ್ಥಿರ ನಿರ್ವಹಣೆಗಾಗಿ ಸಮರ್ಪಕ ಕಾರ್ಯತಂತ್ರಗಳ ಅಗತ್ಯವನ್ನು ಅದು ಸೂಚಿಸುತ್ತದೆ.

**ಕುಸಿಯುತ್ತಿರುವ ಆರೋಗ್ಯ :** ಕಲುಷಿತ ನೀರು (ಸಂಸ್ಕರಿಸದ ಒಳಚರಂಡಿ ತ್ಯಾಜ್ಯ ಮತ್ತು ಕೈಗಾರಿಕಾ ತ್ಯಾಜ್ಯಗಳ ನಿರಂತರ ಒಳಹರಿವು) ಹಾಗೂ ತತ್ಪರಿಣಾಮವಾಗಿ ಅಂತರ್ಜಲ ಮತ್ತು ಭೂಮಿ ಮಲಿನವಾಗಿ, ಕಲುಷಿತ ತರಕಾರಿ, ನೀರು, ಮೀನು ಇತ್ಯಾದಿಗಳ ಉತ್ಪಾದನೆಗೆ ಕಾರಣವಾಗಿದೆ. ಏರಿದ ಮೂತ್ರಪಿಂಡ ವೈಫಲ್ಯ ಪ್ರಕರಣಗಳು (ಮೊದಲು ೧ ಲಕ್ಷಕ್ಕೆ ಒಂದರಂತಿದ್ದದ್ದು ಈಗ ೫೦೦೦ಕ್ಕೆ ಒಂದಾಗಿದೆ) ಮತ್ತು ಕ್ಯಾನ್ಸರ್ ಕಾಯಿಲೆಗಳು ಕೊಳೆಯುತ್ತಿರುವ ನಗರದ ದುಃಸ್ಥಿತಿಯ ದ್ಯೋತಕವಾಗಿದೆ. ಹಾಗೆಯೇ ಉಸಿರಾಟಕ್ಕೆ ಸಂಬಂಧಿಸಿದ ತೊಂದರೆಗಳು ಮತ್ತು ಅಸ್ತಮಾ ವಾಯುಮಾಲಿನ್ಯಕ್ಕೆ ಸಾಕ್ಷಿಯಾಗಿವೆ. ನಗರದ ಮಕ್ಕಳು ಶುದ್ಧ ಗಾಳಿ, ನೀರು ಮತ್ತು ಪರಿಸರಗಳಿಂದ ವಂಚಿತರಾಗಿದ್ದಾರೆ (ನಮ್ಮ ಸಂವಿಧಾನದ ಪರಿಚ್ಛೇದ ೨೧ರ ಪ್ರಕಾರ ಬದುಕುವ ಹಕ್ಕು ಮೂಲಭೂತ ಹಕ್ಕಾಗಿದೆ).

**ಅಧಿಕಗೊಂಡ ಕಾರ್ಬನ್ ಹೆಜ್ಜೆ ಗುರುತು :** ಉಷ್ಣವಲಯದ ಹವಾಮಾನದಲ್ಲಿ ಅಸಮರ್ಪಕ ಕಟ್ಟಡ ವಿನ್ಯಾಸದ ಅಳವಡಿಕೆಯ ಕಾರಣದಿಂದಾಗಿ ಕೆಲವು ಕಾರ್ಪೊರೇಶನ್ ವಾರ್ಡುಗಳಲ್ಲಿ ವಿದ್ಯುಚ್ಛಕ್ತಿ ಬಳಕೆಯ ವಿಪರೀತ ಹೆಚ್ಚಳ ಕಂಡುಬಂದಿದೆ. ಗಾಜಿನ ಹೊರಾಲಂಕಾರವಿರುವ ಗಗನಚುಂಬಿ ಕಟ್ಟಡಗಳು ಅಧಿಕ ಸಂಖ್ಯೆಯಲ್ಲಿರುವ ವಲಯಗಳಲ್ಲಿ ತಲಾವಾರು ವಿದ್ಯುಚ್ಛಕ್ತಿ ಬಳಕೆ ಪ್ರತಿ ವರ್ಷಕ್ಕೆ ೧೪೦೦೦–೧೭೦೦೦ ಯೂನಿಟ್‌ಗಳು (kWh) ಆಗಿದ್ದು, ಇದೇ ಪ್ರಮಾಣವು ಪರಿಸರಸ್ನೇಹಿ ಕಟ್ಟಡಗಳುಳ್ಳ ವಲಯಗಳಲ್ಲಿ ೧೩೦೦–೧೫೦೦ ಯೂನಿಟ್‌ಗಳಾಗಿರುತ್ತವೆ.

ಬೆಂಗಳೂರಿನ ಹೊರವಲಯದಲ್ಲಿ ಖಾಸಗಿ ವಾಹನಗಳ ಅತಿಯಾದ ಬಳಕೆಯಿಂದಾಗಿ ಸಾರಿಗೆ ಕ್ಷೇತ್ರದ ಹೊರಸೂಸುವಿಕೆ ಸುಮಾರು ಶೇ. ೪೩.೮೩ರಷ್ಟಿದೆ. ಅಸಮರ್ಪಕ ಸಾರ್ವಜನಿಕ ಸಾರಿಗೆ ವ್ಯವಸ್ಥೆ ಮತ್ತು ಯೋಜನಾರಹಿತ ನಗರೀಕರಣ ಜೊತೆಗೂಡಿದ ಅವ್ಯವಸ್ಥಿತ ಬೆಳವಣಿಗೆಯ ಪರಿಣಾಮ ಶೇ. ೬೦ರಷ್ಟು ಹೊರಸೂಸುವಿಕೆಗೆ ಉದ್ಯೋಗ ಸಂಬಂಧಿತ ಚಲನೆ ಕಾರಣ ಒದಗಿಸುತ್ತದೆ. ಅಧಿಕ ಇಂಧನ ಬಳಕೆ, ಖಾಸಗಿ ವಾಹನಗಳಿಂದಾಗಿ ಹೆಚ್ಚಿದ ಮಾಲಿನ್ಯ ಪ್ರಮಾಣ, ಸಂಚಾರ ದಟ್ಟಣೆಗಳು ಕಾರ್ಬನ್ ಹೊರಸೂಸುವಿಕೆಗೆ ಗಣನೀಯವಾಗಿ ಕೊಡುಗೆ ನೀಡಿವೆ. ಸಮಗ್ರ ಭೂಬಳಕೆಯ ಕೊರತೆ ಮತ್ತು ಯೋಜನಾರಹಿತ ಸಂಚಾರದಿಂದಾಗಿ ಅಸಂಖ್ಯಾತ ಜನರು ಹೆಚ್ಚು ದೂರ ಕ್ರಮಿಸುವಂತಾಗಿದೆ. ಇದು ಹೊರಸೂಸುವಿಕೆಗೆ ಕೊಡುಗೆ ನೀಡಿದೆ. ಇವುಗಳ ಜೊತೆಗೆ ಘನತ್ಯಾಜ್ಯ ಮತ್ತು ದ್ರವರೂಪದ ತ್ಯಾಜ್ಯಗಳ ಅಸಮರ್ಪಕ ನಿರ್ವಹಣೆ ಪರಿಸ್ಥಿತಿಯನ್ನು ಹದಗೆಡಿಸಿದೆ. ಜಲಾಗರಗಳಲ್ಲಿ ಘನತ್ಯಾಜ್ಯ ಮತ್ತು ದ್ರವತ್ಯಾಜ್ಯಗಳನ್ನು ಸುರಿಯುವುದರಿಂದ ಅವುಗಳ ಆಮ್ಲಜನಕರಹಿತ ಪರಿಸರ ವೃದ್ಧಿಸಿ ಹಸಿರುಮನೆ ಅನಿಲಗಳ (ಮಿಥೇನ್, ಕಾರ್ಬನ್ ಡೈಆಕ್ಸೈಡ್ ಇತ್ಯಾದಿ) ಹೊರಸೂಸುವಿಕೆಗೆ ಕಾರಣವಾಗಿದೆ.

ಆದ್ದರಿಂದ ಯೋಜನಾರಹಿತವಾಗಿ ಬೆಳೆದ ನಗರಗಳು ಬಹುತೇಕ ಮಾನವಜನ್ಯ ಹಸಿರುಮನೆ ಅನಿಲಗಳನ್ನು ಹೊರಸೂಸುವುದರ ಮೂಲಕ ಜಾಗತಿಕ ಹವಾಮಾನ ಬದಲಾವಣೆಗೆ ಕಾರಣವಾಗಿರುವುದೇ ಅಲ್ಲದೆ ವಿಶೇಷವಾಗಿ ಹವಾಮಾನ ಬದಲಾವಣೆ ಮತ್ತು ವಾಯುಗುಣ ವೈಪರೀತ್ಯದ ದುಷ್ಪರಿಣಾಮಗಳಿಗೆ ಬಲಿಯಾಗುತ್ತಿವೆ. ಆವಿಷ್ಕಾರಗಳ ಮೂಲಕ ನಗರದ ಸುಸ್ಥಿರತೆಯನ್ನು ಉತ್ತಮಪಡಿಸುವ ಅಗತ್ಯತೆಯನ್ನು ಇದು ಸೂಚಿಸುತ್ತದೆ. ಹಾಗೆಯೇ ತಾಂತ್ರಿಕ, ಪರಿಸರ, ಆರ್ಥಿಕ ಮತ್ತು ರಾಜಕೀಯ ಸಮಸ್ಯೆಗಳನ್ನು ಬಗೆಹರಿಸಿ ಅಲ್ಪ ಪ್ರಮಾಣದಲ್ಲಿ ಕಾರ್ಬನ್ ಹೊಂದಿರುವ, ಸ್ಥಿತಿಸ್ಥಾಪಕತ್ವ ಉಳ್ಳ, ವಾಸಯೋಗ್ಯ ನಗರಗಳನ್ನು ನಿರ್ಮಿಸಬೇಕಿದೆ.

**ಜಲ ಸುಸ್ಥಿರತೆ :** ಎಲ್ಲರ ಅವಶ್ಯಕತೆಗಳನ್ನೂ ಪೂರೈಸಲು ಸಾಕಷ್ಟು ನೀರು ನಮ್ಮಲ್ಲಿ ಲಭ್ಯವಿದೆ. ಆದರೆ ಈ ಕ್ರಮಗಳನ್ನು ಕೈಗೊಂಡಾಗ ಮಾತ್ರ ಅದು ಲಭ್ಯವಾಗುವುದು : (೧) ಮೇಲ್ಮೈ ಜಲಾಗರಗಳ ಮೂಲಕ ಜಲ ಕೊಯ್ಲು ಕೈಗೊಳ್ಳುವುದು (೧೪.೮ ಟಿಎಂಸಿ); ಇದಕ್ಕಾಗಿ ಕೆರೆಗಳ ಪುನರುಜ್ಜೀವನ ಕಾರ್ಯ ಕೈಗೊಂಡು ಅಂತರ್‌ಸಂಪರ್ಕವನ್ನು ಪುನರ್ ಸ್ಥಾಪಿಸಿ, (ವಿಕೇಂದ್ರೀಕೃತ ಮಟ್ಟಗಳಲ್ಲಿ) ಮಳೆನೀರಿನ ಕೊಯ್ಲು ಮತ್ತು ಸಂಸ್ಕರಣೆಗಳಿಗೆ ಮುಂದಾಗಬೇಕು;








(೨) ಒಳಚರಂಡಿ ನೀರಿನ ಸಂಸ್ಕರಣೆ ಮತ್ತು ಪುನರ್ಬಳಕೆ (೧೬.೦೪ ಟಿಎಂಸಿ). ಆದರೆ ಸುಸ್ಥಿರ ಜಲಮಾರ್ಗದ ಸಫಲತೆ ರಾಜಕೀಯ ಇಚ್ಛಾಶಕ್ತಿಯನ್ನು, ವಸಾಹತುಶಾಹಿ ಮಾದರಿಯ ಕಾರ್ಯನಿರ್ವಹಣೆ ಅಧಿಕಾರಶಾಹಿಯನ್ನು ತ್ಯಜಿಸುವ ಹಾಗೂ ಬಹುಮುಖ್ಯವಾಗಿ ಸಮಪ್ರಮಾಣದ ಮತ್ತು ಗುಣಮಟ್ಟದ ನೀರಿಗಾಗಿ ತಮ್ಮ ಹಕ್ಕನ್ನು ಎತ್ತಿಹಿಡಿದು ನಾಗರಿಕರು ನಡೆಸುವ ಹೋರಾಟವನ್ನು ಅವಲಂಬಿಸಿದೆ.

(೧) ಬೆಂಗಳೂರಿನ ಸರಾಸರಿ ಮಳೆ ಸುಮಾರು ೭೮೭ ಮಿ.ಮೀ.ಗಳಷ್ಟಿದ್ದು ಮಳೆಯ ವಿಶ್ವಾಸಾರ್ಹತೆ ಶೇ. ೭೫ರಷ್ಟು ಮತ್ತು ಪುನರಾವೃತ್ತಿ ಅವಧಿ ೫ ವರ್ಷಗಳೆಂದು ಹೇಳಲಾಗಿದೆ. ವೃಷಭಾವತಿ ಕಣಿವೆಯಲ್ಲಿ (ಅರ್ಕಾವತಿ ಮತ್ತು ಸುವರ್ಣಮುಖಿ ಸೇರಿದಂತೆ) ಸುಮಾರು ಶೇ. ೪೯.೫ರಷ್ಟು (೭.೩೨ ಟಿಎಂಸಿ) ನೀರಿನ ಹರಿವನ್ನು, ಕೋರಮಂಗಲ – ಚಲ್ಲಘಟ್ಟ ಕಣಿವೆಯಲ್ಲಿ ಶೇ. ೩೫.೨ರಷ್ಟು (೫.೨ ಟಿಎಂಸಿ) ಹಾಗೂ ಹೆಬ್ಬಾಳ ಕಣಿವೆಯಲ್ಲಿ ಶೇ. ೧೫.೩ (೪.೨ ಟಿಎಂಸಿ) ಎಂಬುದಾಗಿ ಅಚ್ಚುಕಟ್ಟು ಪ್ರದೇಶವಾರು ಜಲ ಹರಿವಿನ ವಿಶ್ಲೇಷಣೆ ಸೂಚಿಸುತ್ತದೆ. ಅಲ್ಲದೆ ಬೆಂಗಳೂರಿನ ವಾರ್ಷಿಕ ಒಟ್ಟು ಜಲ ಕೊಯ್ಲು ಸುಮಾರು ೧೪.೮೦ ಟಿಎಂಸಿ ಆಗಿರುತ್ತದೆ. ಗೃಹಬಳಕೆಗಾಗಿ ನೀರಿನ ಬೇಡಿಕೆ (ಪ್ರತಿ ಗ್ರಾಹಕನಿಗೆ ದಿನವೊಂದಕ್ಕೆ ೧೫೦ ಲೀ.ಗಳಂತೆ) ವರ್ಷಂಪ್ರತಿ ೨೦.೦೫ ಟಿಎಂಸಿಗಳಾಗಿವೆ (೧೫೭೩ ಎಂಎಲ್‌ಡಿ). ಮಳೆನೀರನ್ನು ಸಮರ್ಥವಾಗಿ ಕೊಯ್ಲು ಮಾಡುವ ಮೂಲಕ ಬೆಂಗಳೂರಿನ ಶೇ. ೭೩ರಷ್ಟು ನೀರಿನ ಬೇಡಿಕೆಯನ್ನು ಪೂರೈಸಲು ಸಾಧ್ಯವಿದೆ ಎಂಬುದೇ ಇದರ ಅರ್ಥ. ಬೆಂಗಳೂರು ನಗರದಲ್ಲಿ ಸುಮಾರು ೧೬.೦೪ ಟಿಎಂಸಿಯಷ್ಟು (೧೨೫೮ ಎಂಎಲ್‌ಡಿ) ಒಳಚರಂಡಿ ತ್ಯಾಜ್ಯ ಉತ್ಪತ್ತಿಯಾಗುತ್ತದೆ ಎಂದು ಒಳಚರಂಡಿ ತ್ಯಾಜ್ಯ ಉತ್ಪಾದನೆಯ ಪರಿಮಾಣಾತ್ಮಕ ವಿಶ್ಲೇಷಣೆ ಸೂಚಿಸುತ್ತದೆ.

(೨) ಜಕ್ಕೂರು ಕೆರೆಯಲ್ಲಿ ಆರಂಭಿಸಲಾಗಿರುವ ಯಶಸ್ವಿ ಘಟಕದ (ತೇವಭೂಮಿ ಮತ್ತು ಪಾಚಿ ಕೊಳಗಳನ್ನು ನಿರ್ಮಿಸಿ ಅದಕ್ಕೆ ಹೊಂದಿಕೊಳ್ಳುವಂತೆ ಸಂಸ್ಕರಣಾ ಘಟಕವನ್ನು ಸಂಯೋಜಿಸಿರುವುದು) ಮಾದರಿಯಲ್ಲೇ ವಿಕೇಂದ್ರೀಕೃತ ಸಂಸ್ಕರಣಾ ಘಟಕಗಳನ್ನು ಅಳವಡಿಸಿಕೊಂಡರೆ ಪೌಷ್ಟಿಕ ಮತ್ತು ರಾಸಾಯನಿಕ ಕಲ್ಮಶಗಳನ್ನು ಸಂಪೂರ್ಣವಾಗಿ ತೆಗೆದು ಒಳಚರಂಡಿ ತ್ಯಾಜ್ಯವನ್ನು ಸಂಸ್ಕರಿಸಲು ಸಾಧ್ಯವಾಗುತ್ತದೆ. ಇದರ ಜೊತೆಗೆ, ಮಳೆನೀರಿನ ಕೊಯ್ಲು ಕಾರ್ಯವನ್ನು ಸಮರ್ಥವಾಗಿ ಕೈಗೊಂಡರೆ ಸುಮಾರು ೧೪.೮ ಟಿಎಂಸಿ ನೀರು ಲಭ್ಯವಾಗುತ್ತದೆ. ಇದರಿಂದ ವಾರ್ಷಿಕವಾಗಿ ಲಭ್ಯವಾಗುವ ನೀರಿನ ಪ್ರಮಾಣ ೩೦.೮೫ ಟಿಎಂಸಿ ಆಗುತ್ತದೆ ಮತ್ತು ನಗರದ ಬೇಡಿಕೆಯಾಗಿರುವ ೨೦.೦೫ ಟಿಎಂಸಿ ನೀರನ್ನು ಪೂರೈಸಬಹುದು. ಇದಕ್ಕಾಗಿ ನಗರಾಡಳಿತವು ಇವುಗಳ ಮೂಲಕ ವಿಕೇಂದ್ರೀಕೃತ ಸಮರ್ಪಕ ಜಲ ನಿರ್ವಹಣೆಗೆ ಮುಂದಾಗಬೇಕು : (೧) ಕೆರೆಗಳನ್ನು ಪುನರುಜ್ಜೀವಗೊಳಿಸಿ ಮಳೆನೀರಿನ ಕೊಯ್ಲು ಕಾರ್ಯ ಕೈಗೊಳ್ಳುವುದು – ಕೆರೆಕಟ್ಟೆಗಳ ನಡುವೆ ಅಂತರ್‌ಸಂಪರ್ಕ ಕಲ್ಪಿಸುವುದರ ಮುಖಾಂತರ ಮಳೆನೀರಿನ ಕೊಯ್ಲು ಮಾಡುವುದು ಅತ್ಯುತ್ತಮ ಆಯ್ಕೆಯಾಗಿದೆ (೨) ಪ್ರತಿ ಬಡಾವಣೆಯಲ್ಲೂ ಮನೆಗಳಲ್ಲಿ ಉತ್ಪತ್ತಿಯಾದ ಒಳಚರಂಡಿ ತ್ಯಾಜ್ಯವನ್ನು ಸಂಸ್ಕರಿಸಿ ತೇವಭೂಮಿ ಮತ್ತು ಪಾಚಿ ಕೊಳಗಳ ಜೊತೆ ಸಂಯೋಜಿಸುವುದು (ಜಕ್ಕೂರು ಕೆರೆಯಲ್ಲಿ ೨೦೧೦ರಿಂದ ಕಾರ್ಯ ನಿರ್ವಹಿಸುತ್ತಿರುವ ಒಳಚರಂಡಿ ಸಂಸ್ಕರಣಾ ಘಟಕದ ಮಾದರಿಯಲ್ಲಿ) (೩) ಸೋರಿಕೆ (ಸರಬರಾಜು ವ್ಯವಸ್ಥೆಯಲ್ಲಿನ ನ್ಯೂನತೆಗಳಿಂದಾಗುವ) ತಡೆದು ಜಲ ಸಂರಕ್ಷಣೆ ಮಾಡುವುದು (೪) ದಿನದ ಇಪ್ಪತ್ತನಾಲ್ಕೂ ಗಂಟೆಗಳ ಕಾಲ ನೀರಿನ ಪೂರೈಕೆಯನ್ನು ಖಾತರಿಗೊಳಿಸುವುದು (೫) ನಗರದಲ್ಲಿ ಹಸಿರು ಹೊದಿಕೆಯನ್ನು ಕಾಯ್ದುಕೊಳ್ಳುವುದು (ಕೆರೆ ಅಚ್ಚುಕಟ್ಟು ಪ್ರದೇಶದಲ್ಲಿ ಕನಿಷ್ಠ ೩೩೫ ಹಸಿರು ಹೊದಿಕೆಗಳು) ಮತ್ತು ಕಣಿವೆ ವಲಯಗಳನ್ನೂ ತೇವಭೂಮಿ ಪ್ರದೇಶಗಳ ಬಫರ್ ವಲಯಗಳನ್ನು ಸಂರಕ್ಷಿಸುವುದು (೬) ಸಮಾಜದ ಎಲ್ಲಾ ವಿಭಾಗಗಳ ಜನರಿಗೂ ಸಮಪ್ರಮಾಣದ ಮತ್ತು ಗುಣಮಟ್ಟದ ನೀರಿನ ಲಭ್ಯತೆಯನ್ನು ಖಾತರಿಪಡಿಸುವುದು. ಮಳೆನೀರನ್ನು ಹಿಡಿದಿಡುವಲ್ಲಿ ಈ ಪ್ರದೇಶದ ಕೆರೆಗಳನ್ನು ಪುನರುಜ್ಜೀವಗೊಳಿಸುವ ಕಾರ್ಯ ನೆರವಾಗುತ್ತದೆ. ಒಳಚರಂಡಿ ತ್ಯಾಜ್ಯವನ್ನು ಸಂಸ್ಕರಿಸುವುದು ಹಾಗೂ ಪುನರ್ಬಳಕೆ ಮಾಡುವ ವ್ಯವಸ್ಥೆಯು ಈ ಪ್ರದೇಶದ ಹೊರಗಿನಿಂದ ತಂದು ಪೂರೈಸಬೇಕಾದ ನೀರಿನ ಬೇಡಿಕೆಯನ್ನು ಕಡಿತಗೊಳಿಸುತ್ತದೆ. ಆದರೆ ನಗರದ ಜವಾಬ್ದಾರಿಯುತ ಮತ್ತು ಪರಿಸರ ಸಾಕ್ಷರ ನಾಗರಿಕರಿಂದ ಮಾತ್ರ ಈ ಕೆಲಸ ಸಾಧಿಸಲು ಸಾಧ್ಯ. ಬೆಂಗಳೂರಿನ ೩೦೦ ನಾಗರಿಕರ ಸಮೀಕ್ಷೆ ನಡೆಸಿ ವಿಶ್ಲೇಷಿಸಿದಾಗ ಕೇವಲ ಶೇ. ೩.೫ರಷ್ಟು ಮಂದಿ ಮಾತ್ರ ಪರಿಸರ ಸಾಕ್ಷರರೆಂದು ಹೇಳಬಹುದಾದ ನಿರಾಶಾದಾಯಕ ಸಂಗತಿ ಬೆಳಕಿಗೆ ಬಂದಿತು. ಶಿಕ್ಷಣದ ಎಲ್ಲಾ ಹಂತಗಳಲ್ಲೂ ಪರಿಸರ ಶಿಕ್ಷಣದ ಮುಖಾಂತರ ಪರಿಸರ ಜಾಗೃತಿ ಮೂಡಿಸುವ ಅಗತ್ಯವನ್ನು ಈ ಸಮೀಕ್ಷೆ ದೃಢಪಡಿಸುತ್ತದೆ. ಸ್ವಸ್ಥ ಮತ್ತು ಪರಿಸರ ಸೂಕ್ಷ್ಮ ನಾಗರಿಕರು ರಾಷ್ಟ್ರದ ಆಸ್ತಿ ಹೌದು. ಇದು ನೈಸರ್ಗಿಕ ಸಂಪನ್ಮೂಲಗಳ (ಆರೋಗ್ಯವಂತ ಯುವಜನರನ್ನೂ ಒಳಗೊಂಡಂತೆ) ಆರೋಗ್ಯವನ್ನು ಹಾಳುಗೆಡಹದೆ ಮುಂದುವರಿದ ರಾಷ್ಟ್ರಗಳ ಗುರಿ ಸಾಧಿಸಲು ಸಹಕಾರಿಯಾಗಬಲ್ಲದು.

**ಸಮಗ್ರ ಉತ್ತಮ ಆಡಳಿತ :** ಜೂನ್ ೨೦೧೫ರಲ್ಲಿ ಭಾರತ ಸರ್ಕಾರ ಆರಂಭಿಸಿದ ಸ್ಮಾರ್ಟ್ ಸಿಟಿ ಮಿಷನ್, ಆಯ್ದ ನಗರಗಳಲ್ಲಿ ಭೌತಿಕವಾಗಿ ಮತ್ತು ಸಾಂಸ್ಥಿಕವಾಗಿ ಸಾಮಾಜಿಕ ಮೂಲ ಸೌಕರ್ಯಗಳನ್ನು ಅಭಿವೃದ್ಧಿಗೊಳಿಸಲು ಯೋಜನೆ ರೂಪಿಸಿದೆ. ಇದಕ್ಕಾಗಿ ಆಯಾ ನಗರ ಕೇಂದ್ರಗಳಲ್ಲಿ ಜೀವನ ಗುಣಮಟವನ್ನು ಉತ್ತಮಪಡಿಸುವುದರ ಜೊತೆಗೆ ಆರ್ಥಿಕವಾಗಿ ಮುನ್ನಡೆಯುವಂತಹ ಗುರಿಯನ್ನಿರಿಸಿಕೊಂಡು ಕೇಂದ್ರದ ನೆರವನ್ನು ಪಡೆದಿದೆ. ಇದರ ನಾಲ್ಕು ಪ್ರಮುಖ ಅಂಶಗಳು : (೧) ಸಮಗ್ರ ಭೂ ನಿರ್ವಹಣಾ ವ್ಯವಸ್ಥೆಯನ್ನು ಅಳವಡಿಸಿಕೊಂಡು ಸ್ಮಾರ್ಟ್ ಟೌನ್‌ಶಿಪ್‌ಗಳ ಮೂಲಕ ಹಸಿರು ಬಯಲು ಅಭಿವೃದ್ಧಿ, (೨) ಸಾರಿಗೆ, ತ್ಯಾಜ್ಯ ನೀರಿನ ಸಂಸ್ಕರಣೆ ಮತ್ತು ಪುನರ್ಬಳಕೆ, ಸ್ಮಾರ್ಟ್ ಮೀಟರ್‌ಗಳ ಅಳವಡಿಕೆ ಮತ್ತು ಘನತ್ಯಾಜ್ಯ ಇತ್ಯಾದಿಗಳನ್ನು ಇಂಧನವಾಗಿ ಬಳಸುವುದು, ಇವೇ ಮೊದಲಾದ ಸ್ಮಾರ್ಟ್ ಸಾಧನಗಳನ್ನು ಅಳವಡಿಸಿಕೊಳ್ಳುವುದರ ಮೂಲಕ ಪ್ಯಾನ್ ಸಿಟಿ ಅಭಿವೃದ್ಧಿ, (೩) ಹಸಿರುಮನೆ ಅನಿಲದ ಹೆಜ್ಜೆ ಗುರುತನ್ನು ಕಡಿತಗೊಳಿಸಿ, ಸಂಸ್ಕರಿತ ನೀರು ಸರಬರಾಜು ಮತ್ತು ವಿದ್ಯುತ್ ಪೂರೈಕೆಯನ್ನು ಸುಧಾರಿಸುತ್ತಾ, ಸಂವಹನ ಮತ್ತು






# ಗುರಿ

ಗುರಿಯು ಸುಸ್ಥಿರವೆ ? ಅಥವಾ ಅದಕು ಗರಿಯುಂಟೆ ?
ದೂರ ಬಾನಿಗೆ ಹಾರಿ, ಮರಳಿ ಗೂಡಿಗೆ ಬರುವ
ಸಂಭ್ರಮ ಪರಿಭ್ರಮಣ ? ಮರಿಗೆ ರೆಕ್ಕೆ ಬಲಿಯುವ
ನಲಿವು, ಪ್ರಕೃತಿ–ಪ್ರಪಂಚಕೆಂದಿಗೂ ಬ್ರಹ್ಮಗಂಟೆ ?

ಗುರಿ ತಲುಪಿದಷ್ಟಕೂ ಪೂರ್ಣತೆಯೆಲ್ಲಿ ಬಂತು ?
ಒಡಗೂಡಿ ತುಡಿವ, ದುಡಿವ ಸಾಧನೆಯಲ್ಲೆ ಸುಖ
ಕುತೂಹಲದ ಕೈಹಿಡಿದು ಕಣ್ದೆರೆಯೆ ಸಮ್ಮುಖ
ಕರುಳರಿತ ಚೇತನ ಒಂದರೊಳಗೊಂದು ಬೆರೆತು.

ಒಂದು ಗೆಲುವಿಗೆ ನೂರು ಸೋಲುಗಳ ಮೆಟ್ಟಿಲು
ಸಾಹಸವನಿಟ್ಟು ತೂಗಿರುವ ತೊಟ್ಟಿಲ ಜೀಕ.
ಆಯಾಸ ಪರಿಹಾರದಲಿ ಏರಿಳಿವ ತವಕ –
ಹರಿವಾಗ ಮಾತ್ರವೆ ನಾದ ಹೊಮ್ಮಿಸುವ ಹೊನಲು.

ಆದರ್ಶ: ಕರ್ತವ್ಯದಲಿ ಪಡೆವ ಸಂತೋಷ
ಮರ್ತ್ಯಕ್ಕೆ ಬೇಕು ಕಾತರದ ಪ್ರೀತಿಯ ಸ್ಪರ್ಶ.

**ನಾಡೋಜ ಡಾ॥ ಚೆನ್ನವೀರ ಕಣವಿ**
'ಚೆಂಬೆಳಕು', ೯ನೆಯ ಅಡ್ಡರಸ್ತೆ, ಕಲ್ಯಾಣನಗರ, ಧಾರವಾಡ –೫೮೦ ೦೦೭

ಮೂಲಸೌಕರ್ಯ ಸಂಪರ್ಕ, ಭದ್ರತೆಗಳನ್ನು ಉತ್ತಮಪಡಿಸುವುದರ ಮೂಲಕ ಹಾಲಿ ಇರುವ ಪ್ರದೇಶವನ್ನು ಇನ್ನಷ್ಟು ಸಮರ್ಥಗೊಳಿಸಲು, ವಾಸಯೋಗ್ಯವಾಗಿಸಲು ಪುನರ್‍ರಚನೆ ಮಾಡುವುದು, (೪) ಪ್ರಸ್ತುತವಿರುವ ನಿರ್ಮಿತ ಪ್ರದೇಶವನ್ನು ಪುನರ್ ಅಭಿವೃದ್ಧಿಗೊಳಿಸುವುದು, ಸಮ್ಮಿಶ್ರ ಭೂಬಳಕೆಯ ಮೂಲಕ ಹೊಸ ಬಡಾವಣೆಯನ್ನು ರಚಿಸುವುದು, ಅಸ್ತಿತ್ವದಲ್ಲಿರುವ ಮೂಲಸೌಕರ್ಯ ಅಭಿವೃದ್ಧಿ ಮಟ್ಟ ಹಾಗೂ ಅದರ ಸುಧಾರಣೆಗೆ ಇರುವ ಅವಕಾಶವನ್ನು ಪರಿಗಣಿಸಿ ಸೂಕ್ತವಾದ ಫ್ಲೋರ್–ಏರಿಯಾ ಸೂಚ್ಯಂಕವನ್ನು ಅಳವಡಿಸಿಕೊಳ್ಳುವುದು; ಇದು ನಗರದ ಬೆಳವಣಿಗೆಯನ್ನು "ಪ್ರದೇಶದ ಒಯ್ಯುವ ಸಾಮರ್ಥ್ಯದ ಪರಿಧಿ"ಯೊಳಗಿಟ್ಟು ನಗರದ ಮೂಲಸೌಕರ್ಯ ಎಲ್ಲರನ್ನೂ ಒಳಗೊಳ್ಳಲು ಅನುಕೂಲ ಮಾಡಿಕೊಡುತ್ತದೆ. ಇದರಿಂದಾಗಿ ಪರಿಣಾಮಕಾರಿ ನಿರ್ಧಾರಗಳನ್ನು ಕೈಗೊಳ್ಳಬಹುದು : (೧) ಉದ್ಯೋಗ ಸಂಬಂಧಿತ ಚಲನೆಯನ್ನು ಕಡಿತಗೊಳಿಸಲು ನಗರದ ಅಗತ್ಯಗಳಿಗೆ ಅನುಗುಣವಾಗಿ ಸಮಗ್ರ ಭೂ ಬಳಕೆಯ ಯೋಜನೆ; (೨) ಬಳಕೆದಾರ ಸ್ನೇಹಿ ಮತ್ತು ಮಿತವ್ಯಯದ ಸಾರ್ವಜನಿಕ ಸಾರಿಗೆ ವ್ಯವಸ್ಥೆಯ ಮೂಲಕ ಕ್ರಿಯಾತ್ಮಕ ಸಾಮರ್ಥ್ಯವನ್ನು ವರ್ಧಿಸುವುದು (೩) ನಗರಗಳ ನಡುವೆ ಮತ್ತು ನಗರಗಳ ಒಳಗೆ ಸುಲಭ ಚಲನೆಗಾಗಿ ಸಾಮೂಹಿಕ ಕ್ಷಿಪ್ರ–ಸಾರಿಗೆ ವ್ಯವಸ್ಥೆಯನ್ನು ಅಭಿವೃದ್ಧಿಗೊಳಿಸುವುದು; ಮತ್ತು (೪) ಸೇವೆಗಳ ಗುಣಮಟ್ಟವನ್ನು ಸುಧಾರಿಸಲು ಕ್ರಿಯಾತ್ಮಕ ತಂತ್ರಜ್ಞಾನವಾಗಿ ಮಾಹಿತಿ ಮತ್ತು ಸಂವಹನ ತಂತ್ರಜ್ಞಾನದ ಪರಿಣಾಮಕಾರಿ ಬಳಕೆ. ವಿವೇಚನೆಯಿಲ್ಲದೆ ಯೋಜನಾರಹಿತವಾಗಿ ಶರವೇಗದಲ್ಲಿ ಕೈಗೊಳ್ಳುವ ನಗರೀಕರಣದಿಂದಾಗಿ ಬಹುತೇಕ ನಗರಗಳು ನಾಗರಿಕ ಮತ್ತು ಹಣಕಾಸಿನ ಅವ್ಯವಸ್ಥೆಯಲ್ಲಿ ಮುಳುಗಿರುವುದರಿಂದ ಈ ಕ್ರಮಗಳನ್ನು ಶೀಘ್ರದಲ್ಲೇ ಜಾರಿಗೊಳಿಸಬೇಕಿದೆ. ಆದರೆ ಭಾರತೀಯ ಅಧಿಕಾರಶಾಹಿಯ ವಸಾಹತುಶಾಹಿ ಮನಸ್ಥಿತಿಯು ಹಂಚಿಕೆಯಾದ ಸಂಪನ್ಮೂಲಗಳನ್ನು (ಅನುದಾನ!) ಖರ್ಚು ಮಾಡುವುದರಲ್ಲಿ ಮಾತ್ರ ಉತ್ಸುಕವಾಗಿದೆಯೇ ಹೊರತು ನಗರದಲ್ಲಿ ಲಭ್ಯವಿರುವ ಮಾಹಿತಿ ಮತ್ತು ಸಂವಹನ ತಂತ್ರಜ್ಞಾನವನ್ನು ವಿವೇಕಯುತವಾಗಿ ಸದ್ಬಳಕೆ ಮಾಡಿಕೊಂಡು ಉತ್ತಮ ಆಡಳಿತ ಉಪಕ್ರಮಗಳ ಮೂಲಕ ದಕ್ಷ ಸೇವೆಗಳನ್ನು ಒದಗಿಸಲು ವಿಫಲವಾಗಿರುವುದರಿಂದ ಭಾರತದಲ್ಲಿ ಸ್ಮಾರ್ಟ್ ಸಿಟಿ ಯೋಜನೆಯ ಕಾರ್ಯಕ್ಷಮತೆ ತೀರಾ ನಿರಾಶಾದಾಯಕವಾಗಿದೆ.

ಅಗತ್ಯ ಮೂಲಭೂತ ಸೌಲಭ್ಯಗಳು ಮತ್ತು ಸುಧಾರಿತ ಮೂಲಸೌಕರ್ಯಗಳನ್ನು ಹೊಂದಿದ (ಸಂವೇದಕಗಳು, ವಿದ್ಯುನ್ಮಾನ ಸಾಧನಗಳು ಮತ್ತು ಜಾಲಗಳಂತಹ ಸೌಲಭ್ಯಗಳು) ಪರಿಸರ ಸ್ನೇಹಿ ನಗರ ಕೇಂದ್ರಗಳು, ನಾಗರಿಕ ಸೇವೆಗಳಲ್ಲಿ ಸುಸ್ಥಿರ ಆರ್ಥಿಕ ಬೆಳವಣಿಗೆ ಮತ್ತು ಸುಧಾರಣೆಗಳನ್ನು ಉತ್ತೇಜಿಸುತ್ತವೆ. ದಕ್ಷ ಮತ್ತು ಸಮಗ್ರ ಆಡಳಿತಕ್ಕಾಗಿ ಮಾಹಿತಿ ಮತ್ತು ಸಂವಹನ ತಂತ್ರಜ್ಞಾನ ಮೂಲಸೌಕರ್ಯಗಳ ನಿಯೋಜನೆಯು ಸುಧಾರಿತ ಆರ್ಥಿಕತೆ ಮತ್ತು ನಾಗರಿಕರ ಸಕ್ರಿಯ ಪಾಲ್ಗೊಳ್ಳುವಿಕೆಯ ಮೂಲಕ ಸಮಾಜದ ಹಾಗೂ ನಗರದ ಬೆಳವಣಿಗೆಯನ್ನು ಉತ್ತೇಜಿಸುತ್ತದೆ. ತಂತ್ರಜ್ಞಾನದ ಆವಿಷ್ಕಾರಗಳು ಮತ್ತು ಸಂಪರ್ಕಶೀಲತೆಯನ್ನು ಪ್ರದರ್ಶಿಸುತ್ತ ಭಾರತೀಯ ನಗರಗಳು ಪ್ರತಿ ನಾಗರಿಕನಿಗೂ ಸಮರ್ಪಕವಾದ ಮೂಲಸೌಕರ್ಯಗಳು, ಹಸಿರುಹಾಸುಗಳು ಹಾಗೂ ಅಗತ್ಯ ಮೂಲಸೌಲಭ್ಯಗಳನ್ನು ಒದಗಿಸುವ ಮೂಲಕ ಅವನ/ಳ ಜೀವನಮಟ್ಟ ಸುಧಾರಿಸಲು ಒತ್ತು ನೀಡಬೇಕಿದೆ.

*ಆಕರಗಳು : ಮೂಲ ಲೇಖನದಿಂದ ಪಡೆಯುವುದು (ಅನುವಾದ ಅಗತ್ಯವಿಲ್ಲದ ಕಾರಣ)*

ಮೂಲ : **ರಾಮಚಂದ್ರ ಟಿ. ವಿ., ಭರತ್ ಎಚ್. ಎ., ವಿನಯ್ ಎಸ್.**
ಎನರ್ಜಿ ಮತ್ತು ವೆಟ್‌ಲ್ಯಾಂಡ್ ರಿಸರ್ಚ್ ಗ್ರೂಪ್ [ಸಿಇಎಸ್ ಟಿಇ೧೫]
ಸೆಂಟರ್ ಫಾರ್ ಎಕಲಾಜಿಕಲ್ ಸೈನ್ಸಸ್, ನ್ಯೂ ಬಯೋಸೈನ್ಸ್ ಬಿಲ್ಡಿಂಗ್
(ಮೂರನೆ ಮಹಡಿ, 'ಇ' ವಿಂಗ್), ಭಾರತೀಯ ವಿಜ್ಞಾನ ಸಂಸ್ಥೆ
ಬೆಂಗಳೂರು – ೫೬೦ ೦೧೨

ಕನ್ನಡಕ್ಕೆ : **ಜ್ಯೋತಿ ಎ.**
ಪ್ಲಾಟ್ ನಂ. ಎಸ್–೩, ಮನೆ ನಂ. ೩೭, "ಅನಂತರತ್ನ ರೆಸಿಡೆನ್ಸಿ"
೧೬ನೇ ಮುಖ್ಯರಸ್ತೆ, ವಿಜಯನಗರ, ಬೆಂಗಳೂರು – ೫೬೦ ೦೪೦

# ಇತಿಹಾಸ : ಅಧ್ಯಯನದ ಮುಂದುವರಿದ ಮಾದರಿಗಳು

ಡಾ॥ ಎಚ್. ಎಸ್. ಗೋಪಾಲ ರಾವ್

**ಅಸ್ಪೃಶ್ಯ ಎಂದರೆ ಎಲ್ಲಕ್ಕೂ ದೂರ ಎಂದು ಪರಿಗಣಿಸಿದ್ದಂತಹ ಸಂದರ್ಭ. ಇವರನ್ನು ಕುರಿತು ಹಿಂದೆ ಒಬ್ಬ ಬುದ್ಧ, ಒಬ್ಬ ಬಸವ ಮಾಡಿದ ಆಲೋಚನೆಗಳು ೧೯ನೆಯ ಶತಮಾನದಲ್ಲಿ ಪುನಃ ಚಾಲನೆಗೊಂಡದ್ದು ಆರೋಗ್ಯಕರ ಬೆಳವಣಿಗೆ. ೨೦ನೆಯ ಶತಮಾನದಲ್ಲಿ ಮಹಾತ್ಮ ಗಾಂಧಿ, ಜ್ಯೋತಿ ಬಾ ಫುಲೆ, ಶಾಹೂ ಮಹಾರಾಜ, ನಾಲ್ವಡಿ ಕೃಷ್ಣರಾಜ ಒಡೆಯರ್ ಮತ್ತು ಪ್ರಮುಖವಾಗಿ ಡಾ॥ ಬಿ. ಆರ್. ಅಂಬೇಡ್ಕರ್ ದಲಿತರ ಧ್ವನಿಯಾದರು. ಈ ಧ್ವನಿಗಳು ಕರ್ನಾಟಕದಲ್ಲಿ ಒಂದು ಚಳವಳಿಯ ರೂಪ ಪಡೆದದ್ದು ಕಳೆದ ಶತಮಾನದ ೭೦ರ ದಶಕದಲ್ಲಿ; ನಿರ್ದಿಷ್ಟ ಗೊತ್ತುಗುರಿಗಳೊಂದಿಗೆ ದಲಿತ ಸಂಘಟನೆಗಳು ಅಸ್ತಿತ್ವಕ್ಕೆ ಬಂದವು. ಈ ಸಂಘಟನೆಗಳು ನಿರ್ದಿಷ್ಟವಾಗಿ ಹೋರಾಟಗಳಿಗೆ ತೊಡಗಲು ಬಸವಲಿಂಗಪ್ಪನವರ ಬೂಸಾ ಸಾಹಿತ್ಯ ಪ್ರಕರಣವು ಪ್ರೇರಣೆಯಾಯಿತು. ದ. ಸಂ. ಸ. ಬೆಳೆಯಿತು.**

ಬ್ರಿಟಿಷರು ಭಾರತಕ್ಕೆ ಬರುವುದಕ್ಕೆ ಮೊದಲು ಭಾರತೀಯರು ಇತಿಹಾಸವನ್ನು ದಾಖಲಿಸುತ್ತಿದ್ದ ವಿಧಾನವೇ ಬೇರೆ; ಬ್ರಿಟಿಷರು ಇತಿಹಾಸವನ್ನು ತಿಳಿಸಿದ ವಿಧಾನವೇ ಬೇರೆ. ಅಂದಂದಿನ ಉದ್ದೇಶಗಳಿಗೆ ತಕ್ಕಂತೆ ಅಂದಂದಿನ ವಿದ್ಯಾಭ್ಯಾಸ ಕ್ರಮ ಮತ್ತು ತಿಳಿಯುವ ಕ್ರಮಗಳು ಇರುತ್ತವೆ. ಈ ಕ್ರಮಗಳು ನಿರಂತರ ಬದಲಾವಣೆಗೆ ಗುರಿಯಾಗುವುದು ಅನಿವಾರ್ಯ. ಕುರಿತೋದದೆಯುಂ ಕಾವ್ಯಪ್ರಯೋಗ ಪರಿಣತಮತಿಗಳಾಗಿರುತ್ತಿದ್ದ ಕವಿರಾಜಮಾರ್ಗಕಾರನ ಕಾಲ ಇದಲ್ಲ. ಬ್ರಿಟಿಷರ ಕಾಲಕ್ಕೇ ಕುರಿತೋದುವ ಸಂದರ್ಭ ಒದಗಿಬಂದಿತ್ತು. ಸರ್ಕಾರದ ವಿವಿಧ ಇಲಾಖೆಗಳಲ್ಲಿ ನಿರ್ದಿಷ್ಟ ಕೆಲಸವನ್ನು ನಿಭಾಯಿಸಬಲ್ಲ ಸಿಬ್ಬಂದಿಯನ್ನು ಸಿದ್ಧಪಡಿಸಬೇಕಾಗಿದ್ದ ಸಂದರ್ಭದಲ್ಲಿ ಆಳುವವರು ತಮ್ಮ ನಿರೀಕ್ಷೆಗೆ ಸರಿಹೊಂದುವ ಪಠ್ಯಕ್ರಮವನ್ನು ಜಾರಿಗೊಳಿಸುತ್ತಿದ್ದರು. ಅಧಿಕಾರಿಗಳನ್ನು ಮತ್ತು ಕಾರಕೂನರನ್ನು ಸಿದ್ಧಪಡಿಸುವ ಜವಾಬ್ದಾರಿ ಹೊತ್ತವರು ಪಠ್ಯಗಳನ್ನು ಸಿದ್ಧಪಡಿಸುತ್ತಾರೆ. ತಾಂತ್ರಿಕ ವಿದ್ಯಾಭ್ಯಾಸ ಮಾಡಿದವರು ಅವರ ತಿಳಿವಳಿಕೆಗೆ ತಕ್ಕ ಕೆಲಸ ಮಾಡಬೇಕು; ತಂತ್ರಜ್ಞ ವೈದ್ಯನ ಕೆಲಸವನ್ನು ನಿರ್ವಹಿಸಲು ಸಾಧ್ಯವಿಲ್ಲ. ಹಾಗೇನಾದರೂ ಆದರೆ ರೋಗಿಯ ಪಾಡು ಏನಾಗಬಹುದು ಎಂದು ಊಹಿಸುವುದೂ ಕಷ್ಟ. ಆಡಳಿತ ಯಂತ್ರದ ಚುಕ್ಕಾಣಿ ಹಿಡಿದವರು ಯಾವುದೇ ಇಲಾಖೆಗಳಿಗೆ ಅಧಿಕಾರಿಗಳ ನೇಮಕ ಮಾಡುವಾಗ ಆ ಹುದ್ದೆಗೆ ಅರ್ಹರಾದವರನ್ನು ಆಯ್ಕೆ ಮಾಡಿದರೆ, ಇಲಾಖೆಯ ಕೆಲಸಗಳು ಅಭಿವೃದ್ಧಿ ಪಥದಲ್ಲಿ ಮುಂದುವರಿಯುತ್ತವೆ. ಪುರಾತತ್ತ್ವ ಇಲಾಖೆಗೆ ಉತ್ಖನನ ಎಂದರೇನು ಎಂದೇ ತಿಳಿಯದ ಅಧಿಕಾರಿಯನ್ನು ನೇಮಿಸಿದರೆ, ಉತ್ಖನನದ ಬದಲು ಅಗೆತ ಆಗುತ್ತದೆ. ಶಾಸನಗಳು ಎಂದರೆ ವರ್ತಮಾನದಲ್ಲಿ ಸಂವಿಧಾನ ರೂಪಿಸಿರುವ ಕಾನೂನುಗಳು ಎನಿಸಿಕೊಳ್ಳುತ್ತವೆ. ಆದ್ದರಿಂದ ಹುದ್ದೆಗೆ ತಕ್ಕ ವಿದ್ಯಾಭ್ಯಾಸ ಅವಶ್ಯಕ ಎನ್ನುವುದರಲ್ಲಿ ಎರಡನೆಯ ಮಾತಿಗೆ ಅವಕಾಶವಿಲ್ಲ. ಆದರೆ, ಶಿಕ್ಷಣದಲ್ಲಿನ ಪಠ್ಯಕ್ರಮವು ಒಂದೇ ಆಗಿರುವುದು ಸೂಕ್ತ ಮತ್ತು ನೇಮಕಾತಿಯ ಸಂದರ್ಭದಲ್ಲಿ ಆಯಾ ಇಲಾಖೆಗೆ ಸಂಬಂಧಿಸಿದ ವಿಶೇಷ ತಿಳಿವಳಿಕೆಯನ್ನು ಪ್ರತ್ಯೇಕವಾಗಿ ತರಬೇತಿಯ



ಮೂಲಕ ನೀಡುವುದು ಸರಿ ಎನಿಸುತ್ತದೆ.

ಇತಿಹಾಸದ ಅಧ್ಯಯನ ಮತ್ತು ಇತಿಹಾಸಕ್ಕೆ ಸಂಬಂಧಿಸಿದ ನಾಲ್ಕು ಕೃತಿಗಳು ನನ್ನ ಇತ್ತೀಚಿನ ಸಂಗ್ರಹದಲ್ಲಿವೆ. ಅವುಗಳ ಮೂಲಕ ಇತಿಹಾಸದ ಅಧ್ಯಯನ ಮುಂದುವರಿದಿರುವ ಕ್ರಮವನ್ನು ಅರ್ಥ ಮಾಡಿಕೊಳ್ಳುವುದು ಈ ಲೇಖನದ ಉದ್ದೇಶ.

ವಸಾಹತುಶಾಹಿಗಳ ಕಾಲದಲ್ಲಿ ಅವರ ಅಗತ್ಯಕ್ಕೆ ತಕ್ಕಂತೆ ಅಧ್ಯಯನ ಕ್ರಮ ರೂಪುಗೊಂಡಿತ್ತು. ರಾಷ್ಟ್ರೀಯತೆ ಮುಖ್ಯ ಎನಿಸಿದಾಗ ಅದಕ್ಕೆ ತಕ್ಕಂಥ ಅಧ್ಯಯನ ನಡೆಯಿತು. ಶಿಕ್ಷಣವು ಮಾರಾಟದ ಸರಕಾದಾಗ ಅದರ ಸ್ವರೂಪ ಬೇರೆಯಾಗುತ್ತದೆ. ಇಲ್ಲಿ ಯಾವುದು ಸರಿ, ಯಾವುದು ತಪ್ಪು ಎಂದು ನಿರ್ಧರಿಸಲು ಸಾಧ್ಯವಿಲ್ಲ. ಆಯಾ ಸಂದರ್ಭದ ಆಳುವ ವರ್ಗದ ಮರ್ಜಿಗೆ ತಕ್ಕಂತೆ ಅಧ್ಯಯನ ನಡೆಯುತ್ತದೆ. ಆಡಳಿತ ವರ್ಗ ಬೇರೆಯಾದಾಗ, ಹಿಂದಿನ ಅಧ್ಯಯನದ ಫಲಿತಗಳು ಹಿಂದೆ ಸರಿಯುತ್ತವೆ.



ಒಂದು ಕಾಲಕ್ಕೆ ಆಳುವ ವರ್ಗದ ಇತಿಹಾಸವಷ್ಟೇ ಮುಖ್ಯವಾಗಿತ್ತು. ದುಡಿಯುವ ವರ್ಗದವರ ಪಾತ್ರ ಇತಿಹಾಸದಲ್ಲಿ ಇಲ್ಲವೇ ಇಲ್ಲ ಎಂಬ ಭಾವವಿತ್ತು. ರೈತರಾಗಲೀ, ಕುಶಲ ಕರ್ಮಿಗಳಾಗಲೀ ಇತಿಹಾಸದಲ್ಲಿ ಮುಖ್ಯವಾಗುತ್ತಿರಲಿಲ್ಲ. ದೇವರ ಕಾರಣದಿಂದಷ್ಟೇ ದೇವಾಲಯಗಳ ಅಧ್ಯಯನ ನಡೆಯುತ್ತಿತ್ತು. ವಾಸ್ತುಶಿಲ್ಪ, ಮೂರ್ತಿಶಿಲ್ಪಗಳ ಚರ್ಚೆ ಮುಖ್ಯವಾಗುತ್ತಿರಲಿಲ್ಲ. ಅದಕ್ಕಾಗಿ ಶ್ರಮಿಸಿದ ವಾಸ್ತುತಜ್ಞರು, ಮೂರ್ತಿಶಿಲ್ಪಿಗಳು, ಇತ್ಯಾದಿ ಕುಶಲಕರ್ಮಿಗಳ ವಿಚಾರ ಗೌಣವಾಗಿತ್ತು. ಮೊದಲಿಗೆ ಸ್ಥೂಲವಾದ ಅಧ್ಯಯನ ನಡೆದು, ಈಗ ಸೂಕ್ಷ್ಮಾಧ್ಯಯನಕ್ಕೆ ಅವಕಾಶವಾಗಿದೆ ಎಂದು ಸಮಾಧಾನಪಡಬೇಕು.

ಈ ಹಿನ್ನೆಲೆಯಲ್ಲಿ ಆಂಟೋನಿಯೋ ಗ್ರಾಂಶಿಯ ಚಿಂತನೆಗಳು ಇತಿಹಾಸದ ಅಧ್ಯಯನಕ್ಕೆ ಹೊಸ ರೂಪ ನೀಡಿವೆ. ಇತಿಹಾಸದಲ್ಲಿ ಮೇಲ್ವರ್ಗದವರ ಬದುಕಿನಷ್ಟೇ ಕೆಳವರ್ಗದವರ ಬದುಕೂ ಮುಖ್ಯ. ಅವರನ್ನು ಹೊರತುಪಡಿಸಿ ಇತಿಹಾಸವಿಲ್ಲ. ಸುಖ ಪಡೆದವರಿಗಿಂತಲೂ ಕಷ್ಟಪಟ್ಟವರ ಬದುಕನ್ನು ಅರ್ಥ ಮಾಡಿಕೊಳ್ಳುವುದು ಮುಖ್ಯ. ಒಪ್ಪಿತವಾಗಿರುವ ಮೇಲ್ವರ್ಗದ ಇತಿಹಾಸಕ್ಕಿಂತ ಮರೆಮಾಚಿರುವ ಕೆಳವರ್ಗದ ಇತಿಹಾಸ ಮುಖ್ಯವೆಂದು ಇತ್ತೀಚಿನ ದಿನಗಳಲ್ಲಿ ಸ್ಪಷ್ಟವಾಗುತ್ತಿದೆ. ಈ ಬಗೆಯ ಅಧ್ಯಯನವನ್ನು ಯಾವ ಹೆಸರಿನಿಂದಾದರೂ ಕರೆಯಿರಿ; ಅದು ಕೆಳವರ್ಗದವರ, ಉಪೇಕ್ಷಿತರ ಇತಿಹಾಸವಾಗಿರುತ್ತದೆ. ಇದು ಉಪಸಂಸ್ಕೃತಿಯ ಅಧ್ಯಯನ. ವಸಾಹತುಶಾಹಿಗಳು ಮೇಲ್ವರ್ಗದವರ ಇತಿಹಾಸಕ್ಕೆ ಹೆಚ್ಚು ಗಮನ ನೀಡಿದರೆ, ಮಾರ್ಕ್ಸ್‌ವಾದಿಗಳು ವರ್ಗಕೇಂದ್ರಿತ ವಿಚಾರಗಳಿಗೆ ಒತ್ತು ನೀಡಿದರು. ಇಲ್ಲೆಲ್ಲಾ ಚರ್ಚೆಯಲ್ಲಿ ಸಂಘರ್ಷವೇ ಪ್ರಧಾನವಾಗಿದ್ದುದನ್ನು ಮರೆಯುವಂತಿಲ್ಲ. ರೈತನ, ಮಹಿಳೆಯರ ಸಂಘರ್ಷವನ್ನು ದಾಖಲಿಸುವ ಪ್ರಯತ್ನವು ಪ್ರಮುಖವಾಗಿ ಆಗಲೇ ಇಲ್ಲ. ಕುಶಲಕರ್ಮಿಗಳ ಬದುಕೂ ಅಲ್ಲಿ ಸೇರಲಿಲ್ಲ. ಅಕಸ್ಮಾತ್ ಚರ್ಚಿಸಲು ಅವಕಾಶ ದೊರೆತರೂ, ಸಂಕ್ಷಿಪ್ತವಾಗಿ ತಿಳಿಸಲಾಗುತ್ತಿತ್ತು.

ಇತ್ತೀಚೆಗೆ ನನ್ನ ಸಂಗ್ರಹಕ್ಕೆ ಸೇರ್ಪಡೆಯಾದ ನಾಲ್ಕು ಪುಸ್ತಕಗಳು ಇತಿಹಾಸದ ಅಧ್ಯಯನ ಮುಂದುವರಿದಿರುವ ಸ್ವರೂಪವನ್ನು ಅರ್ಥ ಮಾಡಿಕೊಳ್ಳಲು ಸಹಕಾರಿಯಾಗಿವೆ. ಆ ಪುಸ್ತಕಗಳು ಯಾವುವೆಂದರೆ :

೧. ಡಾ॥ ವಿಜಯ ಪೂಣಚ್ಚ ತಂಬಂಡ ಅವರ 'ವರ್ಗದಿಂದ ಸಂಸ್ಕೃತಿಯೆಡೆಗೆ ಸಬಾಲ್ಟರ್ನ್ ಅಧ್ಯಯನ' (ಪ್ರ: ಕ. ವಿ. ವಿ., ಹಂಪಿ)
೨. ಡಾ॥ ಡಿ. ಎನ್. ಯೋಗೀಶ್ವರಪ್ಪ ಅವರ 'ನಾಯಕತನ ಪದ್ಧತಿ' (ಪ್ರ: ಪ್ರಗತಿ ಗ್ರಾಫಿಕ್ಸ್, ಬೆಂಗಳೂರು)
೩. ಡಾ॥ ಸಿ. ಆರ್. ಶ್ಯಾಮಲಾ ಅವರ 'ಪೂರ್ವ ಕರ್ನಾಟಕದ ಪಾಳೆಯಗಾರರು' (ಪ್ರ: ಕ. ವಿ. ಮುಂಬೈ ವಿಶ್ವವಿದ್ಯಾಲಯ, ಮುಂಬೈ)
೪. ಡಾ॥ ವಿ. ಮುನಿವೆಂಕಟಪ್ಪ ಅವರ 'ದಲಿತ ಚಳವಳಿ – ಒಂದು ಅವಲೋಕನ' (ಪ್ರ: ವಿಚಾರವಾದಿ ಪ್ರಕಾಶನ, ಮೈಸೂರು)

೧

ಒಂದು ಪ್ರದೇಶದ ಇತಿಹಾಸವು ಕೇವಲ ಕೆಲವೇ ಗಣ್ಯರಿಂದ ಪ್ರಭಾವಿತವಾಗಿರುವುದಿಲ್ಲ. ಗಣ್ಯರದ್ದೇ ಆದ ಇತಿಹಾಸವು ಎಲೈಟ್ ಇತಿಹಾಸ ಎನಿಸಿಕೊಳ್ಳುತ್ತದೆ. ಆಗ ಸಮಾಜಕ್ಕೆ ಕೆಳವರ್ಗದವರ ಕೊಡುಗೆ ಗಣನೆಗೇ ಬರುವುದಿಲ್ಲ. ಸೈನಿಕರನ್ನು ಸಬಾಲ್ಟರ್ನ್ ಎಂದು ಕರೆಯಲಾಗುತ್ತಿತ್ತು ಎಂಬ ಅಭಿಪ್ರಾಯದ ಹಿನ್ನೆಲೆಯಲ್ಲಿ, ಯುದ್ಧ ಗೆದ್ದವನು ರಾಜನಾದರೂ, ಹೋರಾಡಿ, ಗೆಲುವು ತಂದುಕೊಟ್ಟವನು ಸೈನಿಕ ಎನ್ನುವುದನ್ನು ತಳ್ಳಿಹಾಕಲಾಗುವುದಿಲ್ಲ. ದುಡಿಮೆಯ ಕಾರಣದಿಂದ ಆದ ವಲಸೆಯು ಸಂಸ್ಕೃತಿಯ ವಲಸೆಗೂ ದಾರಿಮಾಡಿತು. ಆಗ ಸೃಷ್ಟಿಯಾದದ್ದು ಅಸ್ಮಿತೆಯ ಸಮಸ್ಯೆ. ಇಂತಹ ಸಮಸ್ಯೆಗಳ ಕಾರಣದಿಂದಲೇ ಸಂಸ್ಕೃತಿಯ ಅಧ್ಯಯನವು ಸಬಾಲ್ಟರ್ನ್ ಚರಿತ್ರೆಯಲ್ಲಿ ಪ್ರಾಮುಖ್ಯ ಪಡೆಯಿತು. ಗ್ರಾಂಶಿಯ ವಿಚಾರಗಳ ವ್ಯಾಪ್ತಿ ವಿಸ್ತಾರವಾದುದು. ಕೈಗಾರಿಕೆಗಳನ್ನು ಆಶ್ರಯಿಸಿದ ಕಾರ್ಮಿಕ ವರ್ಗ, ಭೂಮಿಯನ್ನು ಆಶ್ರಯಿಸಿದ ಅಸಂಘಟಿತ ರೈತ ವರ್ಗದ ಸಮಸ್ಯೆಗಳು ಹೆಚ್ಚುತ್ತಲೇ ಇದ್ದಾಗ, ತಂತ್ರಗಾರಿಕೆ ಮತ್ತು ಸಂಸ್ಕೃತಿಗಳ ನಡುವೆ ಸಂಘರ್ಷ ಸಹಜವಾಗಿಯೇ ಇತ್ತು. ಇವೆಲ್ಲವುಗಳ ಹಿನ್ನೆಲೆಯಲ್ಲಿ ಗ್ರಾಂಶಿಯ ವಿಚಾರಗಳ ಅರ್ಥ ವಿಸ್ತಾರಗೊಂಡು ಸಬಾಲ್ಟರ್ನ್ ಹೆಸರಿನಲ್ಲಿ ಕೆಳಸ್ತರದ ಚರಿತ್ರೆ ಬೆಳೆದುಬಂದಿದೆ. ಉಳ್ಳವರು (ಎಲೈಟ್) ಮತ್ತು ಇಲ್ಲದವರ ನಡುವಿನ ಸಮಸ್ಯೆಗಳೇ ಕೆಳಸ್ತರದ ಚರಿತ್ರೆಯ ಅಧ್ಯಯನಕ್ಕೆ ಪ್ರೇರಣೆಯಾಗಿವೆ. ಈ ಸಂಘರ್ಷದಲ್ಲಿ ಆದರ್ಶ ಮತ್ತು ವಾಸ್ತವಗಳ ಪಾತ್ರವೂ ಇರುತ್ತದೆ.

ಮಾರ್ಕ್ಸಿಸ್ಟ್ ಮತ್ತು ಮಾರ್ಕ್ಸೇತರರ ವಿಮರ್ಶೆಯನ್ನು ಒಟ್ಟಿಗೆ ಗ್ರಹಿಸುತ್ತಲೇ ಸಬಾಲ್ಟರ್ನ್ ಅಧ್ಯಯನ ಮುಂದುವರಿದಿದೆ. ರೈತರ ಹೋರಾಟಗಳನ್ನು ಉಪೇಕ್ಷಿಸುವ ಮತ್ತು ಬುಡಕಟ್ಟು ಜನರ ಸಮಸ್ಯೆಗಳತ್ತ ಕಣ್ಣೆತ್ತಿಯೂ ನೋಡದ ಪರಿಸ್ಥಿತಿ ಇರುವಾಗ, ರಾಷ್ಟ್ರೀಯ ಮತ್ತು ಅಂತರರಾಷ್ಟ್ರೀಯ ಸಮಸ್ಯೆಗಳ ಬಗ್ಗೆ ಚರ್ಚಿಸುವುದು ಎಷ್ಟು ಪ್ರಸ್ತುತವಾಗುತ್ತದೆ? ಮೇಲಿನ ಸಮಸ್ಯೆಗಳನ್ನು ಉಪೇಕ್ಷಿಸದೆಯೇ ಸ್ಥಳೀಯ ಸಮಸ್ಯೆಗಳತ್ತ ಗಮನ ಹರಿಸುವುದು ಆರೋಗ್ಯಕರ. ಈ ಸಂದರ್ಭದಲ್ಲಿ ಲೇಖಕರು ಗ್ರಾಂಶಿ ಮಾತ್ರವಲ್ಲದೆ, ಎರಿಕ್ ಹಾಬ್ಸ್‌ಬಾಮ್, ಐಜಾಜ್ ಅಹಮದ್, ಪಾರ್ಥ ಚಟರ್ಜಿ, ರಣಜಿತ್ ಗುಹಾ ಇತ್ಯಾದಿ ವಿಮರ್ಶಕರ ಅಭಿಪ್ರಾಯಗಳನ್ನೂ ಪರಿಶೀಲನೆಗೆ ಒಳಪಡಿಸಿದ್ದಾರೆ.

ರೈತರ ನೆಲೆ ಗ್ರಾಮಗಳು. ಗ್ರಾಮಾಧಿಕಾರ ಪಡೆದವರು ಮೇಲ್ವರ್ಗದವರು. ಸಾಮಾನ್ಯವಾಗಿ ಇವರೇ ಅಧಿಕ ಪ್ರಮಾಣದ ಭೂಮಿಗಳ ಮಾಲೀಕರು. ಸಣ್ಣ ಹಿಡುವಳಿದಾರನು ಒಂದಲ್ಲ ಒಂದು ಕಾರಣಕ್ಕೆ ಭೂಮಾಲೀಕರ ಅಧೀನನಾಗಿರುತ್ತಾನೆ. ಆಳುವ ಅಧಿಕಾರ ಪಡೆದವರು ರೈತರ ಹಿತಕ್ಕೆಂದು ಘೋಷಿಸುವ ಯಾವುದೇ ಪರಿಹಾರ ಅಥವಾ ನೆರವು ದೊಡ್ಡ ಹಿಡುವಳಿದಾರನ ಪಾಲಾಗುವುದನ್ನು ಎಲ್ಲರೂ ಬಲ್ಲರು. ಧ್ವನಿ ಕಳೆದುಕೊಂಡ ರೈತನ ಸಮಸ್ಯೆ ನಿವಾರಣೆಯಾಗುವುದೇ ಇಲ್ಲ. ಸಬಾಲ್ಟರ್ನ್ ಅಧ್ಯಯನವು ಮುಂದುವರಿದ ಮಾರ್ಕ್ಸಿಸ್ಟ್ ಧ್ವನಿ ಎಂದರೂ, ಅದು ಮಾರ್ಕ್ಸಿಸ್ಟ್ ವಿಮರ್ಶೆಗಳನ್ನೂ ಪರಿಶೀಲಿಸಿತು. ಹಿಂದುಳಿದ ಪ್ರದೇಶಗಳ ಬುಡಕಟ್ಟು ಜನಾಂಗಗಳ ಇತಿಹಾಸವನ್ನು ಕಟ್ಟಿಕೊಡುವ ನಿಟ್ಟಿನಲ್ಲಿ ಮುಂದುವರಿದ ಸಬಾಲ್ಟರ್ನ್ ಅಧ್ಯಯನವು ವೈಚಾರಿಕ ಮತ್ತು ವೈಜ್ಞಾನಿಕ ಹಿನ್ನೆಲೆ ಮತ್ತು ತಾರ್ಕಿಕ ನೆಲೆಗಟ್ಟಿನಲ್ಲಿ ನಡೆದದ್ದು ವಿಶೇಷ.



ಯಾವುದೇ ವಿಚಾರವನ್ನು ವೈಭವೀಕರಿಸುವಾಗ ಅಥವಾ ನಿರಾಕರಿಸುವಾಗ ವಾಸ್ತವವನ್ನು ಮರೆಮಾಚುವುದು ಸಹಜ. ಇತಿಹಾಸದ ಅಧ್ಯಯನಕ್ಕೆ ಇದು ಸಲ್ಲದ ಮಾತು. ಹಾಗೇನಾದರೂ ಆದರೆ ಇತಿಹಾಸದ ವ್ಯಾಖ್ಯೆಯೇ ಬದಲಾಗುತ್ತದೆ. ಕನಸಿನ ಕಥೆಯೇ ಬೇರೆ; ವಾಸ್ತವವೇ ಬೇರೆ. ಈವರೆಗೆ ಇತಿಹಾಸವನ್ನು ಮೇಲ್ವರ್ಗದವರು ಅಧ್ಯಯನ ಮಾಡಿರುವ ಕ್ರಮವೇ ಬೇರೆ, ಕೆಳವರ್ಗದವರು ಅಧ್ಯಯನ ಮಾಡಿರುವ ಕ್ರಮವೇ ಬೇರೆ. ಅವರವರ ಭಾವಕ್ಕೆ, ಅವರವರ ಭಕುತಿಗೆ, ಅವರವರ ನಿರೀಕ್ಷೆಗೆ ತಕ್ಕಂತೆ ಆಗಿರುವ ಅಧ್ಯಯನವನ್ನು ಮೂಸೆಯಲ್ಲಿ ಹಾಕಿ ಭಟ್ಟಿ ಇಳಿಸಿದಾಗ ಉಳಿಯುವ ವಿಚಾರಗಳನ್ನು ಸಮಗ್ರವಾಗಿ ಪರಿಶೀಲಿಸಿದಾಗ, ಇಂದಿನ ಮಟ್ಟಿಗಾದರೂ ತಾರ್ಕಿಕವಾಗಿ ಒಪ್ಪಬಹುದಾದ ಇತಿಹಾಸವನ್ನು ತಿಳಿಯಬಹುದು. ಈ ನಿಟ್ಟಿನಲ್ಲಿ ಡಾ॥ ವಿಜಯ ಪೂಣಚ್ಚ ತಂಬಂಡ ಅವರ 'ವರ್ಗದಿಂದ ಸಂಸ್ಕೃತಿಯೆಡೆಗೆ...' ಒಂದು ದಾರಿಯನ್ನು ಸೂಚಿಸುವ ಸಾಧ್ಯತೆಗಳಿವೆ.

೨

ಮೇಲ್ವರ್ಗದ ಇತಿಹಾಸದ ಮಾದರಿಯನ್ನು ಮುರಿದಂತೆ, ಸಾಮ್ರಾಜ್ಯಶಾಹಿ ಇತಿಹಾಸವನ್ನು ಸ್ವಲ್ಪಮಟ್ಟಿಗೆ ದೂರವಿಟ್ಟು, ಹೆಚ್ಚಿಗೆ ಬರ್ಟನ್ ಸ್ಟೈನ್, ನೊಬೂರು ಕರಾಶಿಮಾ, ಡಿ. ಸಿ. ಸರ್ಕಾರ್ ಇತ್ಯಾದಿ ಇತಿಹಾಸಕಾರರ ಮಾದರಿಯ ಹಿನ್ನೆಲೆಯಲ್ಲಿ ನಾಯಕತನದ ವಿಚಾರದತ್ತ ಡಾ॥ ಡಿ. ಎನ್. ಯೋಗೀಶ್ವರಪ್ಪ ಗಮನ ಹರಿಸಿದ್ದಾರೆ. ವಿಜಯನಗರ ಸಾಮ್ರಾಜ್ಯದ, ಕೊನೆಯ ಅವಧಿಯ ಶಾಸನಗಳಲ್ಲಿ ಉಲ್ಲೇಖಗೊಂಡಿರುವ ಅಮರನಾಯಕರೇ ಮುಂದೆ ಪಾಳೆಯಗಾರರು ಎಂಬ ಹೆಸರಿನಲ್ಲಿ ಮುಂದುವರಿದರು ಎಂಬ ಯೋಗೀಶ್ವರಪ್ಪ ಅವರ ಅಭಿಪ್ರಾಯವನ್ನು ನಿರಾಕರಿಸುವಂತಿಲ್ಲ. ರಾಜ್ಯ ವಿಸ್ತಾರಗೊಂಡು, ಆಡಳಿತದ ಮೇಲೆ ಹಿಡಿತ ಸಾಧಿಸಲು ಹಾಗೂ ಶತ್ರುಗಳ ಧಾಳಿಯನ್ನು ತಡೆಯಲು ಸಹಕಾರಿಯಾಗುವಂತೆ ಆಂತರಿಕವಾಗಿ ಮಾಡಿಕೊಂಡಿದ್ದ ಸೇನಾಬಲದ ವ್ಯವಸ್ಥೆಯ ನಾಯಕರೇ ಮುಂದೆ ಅಮರನಾಯಕರು ಅಥವಾ ಪಾಳೆಯಗಾರರು ಎನ್ನುವ ಹೆಸರಿನಲ್ಲಿ ಪ್ರಸಿದ್ಧಿ ಪಡೆದವರು. ಸಾಮ್ರಾಟರು ಮತ್ತು ಜನತೆಯ ನಡುವೆ ಮಧ್ಯವರ್ತಿಗಳಾಗಿದ್ದವರು ಪಾಳೆಯಗಾರರು. ಪಾಳೆಯ, ಎಂದರೆ ಸೇನಾನೆಲೆ. ಸೇನಾನೆಲೆಯ ನಾಯಕರು ಪಾಳೆಯಗಾರರು. ಅವರು ಯಾವುದೇ ನಿರ್ದಿಷ್ಟ ಜಾತಿ ಅಥವಾ ಪಂಗಡಕ್ಕೆ ಸೇರಿದವರಲ್ಲ ಎಂಬುದನ್ನು ಯೋಗೀಶ್ವರಪ್ಪ ಸ್ಪಷ್ಟಪಡಿಸಿದ್ದಾರೆ. ಕೆಲವು ಸಂದರ್ಭಗಳಲ್ಲಿ ಮೇಲ್ಜಾತಿಯವರು ಎಂದು ಗುರುತಿಸಲಾದವರೂ ಪಾಳೆಯಪಟ್ಟಿನ ನಾಯಕರಾಗಿರುತ್ತಿದ್ದುದನ್ನು ಯೋಗೀಶ್ವರಪ್ಪ, ಶಾಸನಗಳು ಮತ್ತು ಸಮಕಾಲೀನ ಸಾಹಿತ್ಯ ಕೃತಿಗಳ ಮೂಲಕ ಗುರುತಿಸಿ, ತಮ್ಮ ಅಭಿಪ್ರಾಯಕ್ಕೆ ಸಮರ್ಥನೆ ಒದಗಿಸಿದ್ದಾರೆ. ಅಮರನಾಯಕರು ಸಾಮ್ರಾಟರಿಂದ ಆಯ್ಕೆಯಾಗುತ್ತಿದ್ದರು ಅಥವಾ ನೇಮಕಗೊಳ್ಳುತ್ತಿದ್ದರು. ಇವರಿಗೆ ಭೂಕಂದಾಯವನ್ನು ಸಂಗ್ರಹಿಸಿ, ಸಾಮ್ರಾಟನಿಗೆ ಅವನ ಪಾಲನ್ನು ಕಾಣಿಕೆ (ಕಪ್ಪ)ಯ ರೂಪದಲ್ಲಿ ಸಲ್ಲಿಸಲಾಗುತ್ತಿತ್ತು ಮತ್ತು ಇದು ಒಂದು ರೀತಿಯ ಊಳಿಗಮಾನ್ಯ ವ್ಯವಸ್ಥೆ ಎಂಬುದು ಯೋಗೀಶ್ವರಪ್ಪ ಅವರ ಅಭಿಪ್ರಾಯ. ರಾಜನ ಅನುಮತಿ ಇಲ್ಲದೆ ಇವರು ದಾನ, ಕಂದಾಯ ರದ್ದತಿ ಇತ್ಯಾದಿ ವಿಚಾರಗಳಲ್ಲಿ ಸ್ವಂತ ನಿರ್ಧಾರ ತೆಗೆದುಕೊಳ್ಳುವ ಸ್ವಾತಂತ್ರ್ಯ ಇರಲಿಲ್ಲ.

ವಿಜಯನಗರ ಸಾಮ್ರಾಜ್ಯದ ಪತನಾನಂತರ ಅಮರನಾಯಕರು ಸ್ವತಂತ್ರವಾಗಿ ಆಳ್ವಿಕೆ ಮಾಡತೊಡಗಿದರು. ಆ ಸಂದರ್ಭದಲ್ಲಿ ಸೈನ್ಯದ ವ್ಯವಸ್ಥೆಗಾಗಿ ಪ್ರಜೆಗಳ ಮೇಲೆ ತೆರಿಗೆಯ ಭಾರ ಹೇರಿ, ಸುಲಿಗೆಯ ಆರೋಪವನ್ನೂ ಎದುರಿಸಿದರು. ಷರತ್ತಿನ ಮೇಲೆ ಅಧಿಕಾರ ಪಡೆಯುತ್ತಿದ್ದ ಅಮರನಾಯಕರು ಕೃಷ್ಣದೇವರಾಯನ ಕಾಲದಿಂದಲೂ ಗುರುತಿಸಲ್ಪಟ್ಟಿದ್ದಾರೆ. ಆ ಕಾಲಕ್ಕೇ ೫೪ ಅಮರನಾಯಕತನದ ಸೀಮೆಗಳನ್ನು ಗುರುತಿಸಲಾಗಿದೆ. ಯೋಗೀಶ್ವರಪ್ಪ ಅವರು ನಾಯಕತನದ ಅಧಿಕಾರ ಪಡೆದ ಕೆಲವು ಬ್ರಾಹ್ಮಣ ಕುಟುಂಬಗಳ ಗೋತ್ರಗಳ ವಿವರಗಳನ್ನೂ ನೀಡಿರುವುದು ಈ ಅಧಿಕಾರವು ಜಾತಿಯನ್ನು ಆಧರಿಸಿರುತ್ತಿರಲಿಲ್ಲ ಎಂದು ಸ್ಪಷ್ಟಪಡಿಸುತ್ತದೆ. ಅಮರನಾಯಕರನ್ನು

ಒಂದು ಪ್ರದೇಶದಿಂದ ಮತ್ತೊಂದು ಪ್ರದೇಶಕ್ಕೆ ವರ್ಗಾವಣೆ ಮಾಡಿರುವ ಸಂಗತಿಯನ್ನೂ ಶಾಸನಗಳ ಆಧಾರದಿಂದಲೇ ಸಮರ್ಥಿಸಲಾಗಿದೆ. ವಿಜಯನಗರ ಸಾಮ್ರಾಜ್ಯ ಕುರಿತಂತೆ ಮೂರು ಕಾಲಘಟ್ಟಗಳಲ್ಲಿ ಆಗಿರುವ ಅಧ್ಯಯನಗಳನ್ನು ಪರಿಶೀಲಿಸುತ್ತಾ, ನಾಯಕ ವ್ಯವಸ್ಥೆಯನ್ನು ವಿಮರ್ಶಿಸಿರುವುದು ವಿಶೇಷವಾಗಿ ಗಮನ ಸೆಳೆಯುತ್ತದೆ. ವಿಜಯನಗರ ಸಾಮ್ರಾಜ್ಯದ ಪತನಾನಂತರ ಹದಿನಾರನೆಯ ಶತಮಾನದಲ್ಲಿ ಅಧಿಕಾರಕ್ಕೆ ಬಂದ ಪಾಳೆಯಗಾರರು ತಮ್ಮ ಅಧಿಕಾರವನ್ನು ಉಳಿಸಿಕೊಳ್ಳಲು ಪರಸ್ಪರ ಹೋರಾಟಗಳಲ್ಲಿ ತೊಡಗಿಕೊಂಡುದನ್ನೂ ಶಾಸನೋಲ್ಲೇಖಗಳ ಮೂಲಕ ಯೋಗೀಶ್ವರಪ್ಪ ಅಭ್ಯಾಸ ಮಾಡಿದ್ದಾರೆ. ಅಮರ ಮಾಗಣಿಗಳು, ಪಾಳೆಯಪಟ್ಟುಗಳು, ಅಮರನಾಯಕರು ಮತ್ತು ಪಾಳೆಯಗಾರರನ್ನು ಕುರಿತಂತೆ ಹೊಸ ಮತ್ತು ತರ್ಕಬದ್ಧ ಆಲೋಚನೆಗಳಿಗೆ ಅವಕಾಶವಿರುವುದನ್ನು ಯೋಗೀಶ್ವರಪ್ಪ ದಾಖಲಿಸಿದ್ದಾರೆ.

೩

ಪಿಎಚ್. ಡಿ., ಅಧ್ಯಯನದ ಫಲವಾದ 'ಪೂರ್ವ ಕರ್ನಾಟಕದ ಪಾಳೆಯಗಾರರು – ಒಂದು ಅಧ್ಯಯನ'ವು ಈಗ ಪ್ರಕಟವಾಗಿದೆ. ಈಚಿನ ದಿನಗಳಲ್ಲಿ ಬೃಹತ್ ಎನ್ನಬಹುದಾದ (೮೭೮ ಪುಟಗಳು) ಕೃತಿಯಲ್ಲಿ ಕರ್ನಾಟಕದ ಪೂರ್ವ ಭಾಗದಲ್ಲಿನ ೩೫ ಪಾಳೆಯಪಟ್ಟುಗಳ ಇತಿಹಾಸವನ್ನು ತಿಳಿಸುವ ಈ ಪ್ರಯತ್ನವು, ಇಂತಹ ವಿಷಯಗಳ ಅವಲೋಕನಕ್ಕೆ ಆ ಹೊತ್ತಿಗೆ ಪರಿಚಿತವಾಗಿದ್ದ ಮಾದರಿಯನ್ನು ಅನುಸರಿಸಿರುವುದು ಸ್ವಾಭಾವಿಕ. ಅಲ್ಲದೆ, ಒಂದು ಪದವಿಗಾಗಿ ಮಹಾಪ್ರಬಂಧವನ್ನು ಸಲ್ಲಿಸುವ ಹೊತ್ತಿನಲ್ಲಿ ಯಾವುದೇ ಹಂತದಲ್ಲಿ ಯಾವುದೇ ರೀತಿಯ ಅಡಚಣೆ ಆಗದಿರಲಿ ಎಂಬ ಕಾರಣದಿಂದಲೂ ಸಿದ್ಧಸೂತ್ರಗಳನ್ನು ಆಧರಿಸಿಯೇ ಅಧ್ಯಯನ ಮಾಡಬೇಕಾಗುತ್ತದೆ. ಆ ಹಿನ್ನೆಲೆಯಲ್ಲಿ ಶ್ಯಾಮಲಾ ಅವರ ಕೃತಿಗೆ ಮಾದರಿಯ ವಿಷಯದಲ್ಲಿ ಒಂದಷ್ಟು ವಿನಾಯಿತಿ ಸಿಗಬಹುದರೂ, ಒಟ್ಟಾರೆಯಾಗಿ ಸಬಾಲ್ಟರ್ನ್ ಮಾದರಿಯನ್ನು ಅನುಸರಿಸಿದ್ದಿದ್ದರೆ, ಈ ಕೃತಿಯ ಪರಾಮರ್ಶೆಯಲ್ಲಿ ಒಂದಷ್ಟು ಹೊಸ ವಿಷಯಗಳು ಅನಾವರಣಗೊಳ್ಳಬಹುದಾಗಿತ್ತು. ಕರ್ನಾಟಕದ ಇತಿಹಾಸದ ಅಧ್ಯಯನದ ಆರಂಭ ಘಟ್ಟದಲ್ಲಿ ಪಾಳೆಯಗಾರರನ್ನು ಕುರಿತ ಅಧ್ಯಯನಗಳು ಆಗಲೇ ಇಲ್ಲ ಎನ್ನಬಹುದು. ಎಂ. ಎಸ್. ಪುಟ್ಟಣ್ಣ ಅವರ ನಂತರ, ಆಗಿನ ಮೈಸೂರು ಸಂಸ್ಥಾನಕ್ಕೆ ಸೇರಿದ್ದ, ವಿಶೇಷವಾಗಿ ಚಿತ್ರದುರ್ಗದ ಪಾಳೆಯಗಾರರ ಅಧ್ಯಯನದ ಮೂಲಕ ಪಾಳೆಯಗಾರರ ಅಧ್ಯಯನ ಗಮನಸೆಳೆಯಿತು. ನಂತರ ಈವರೆಗೂ ನಿರಂತರವಾಗಿ ಪಾಳೆಯಗಾರರನ್ನು ಕುರಿತ ಅಧ್ಯಯನ ಮುಂದುವರಿದಿದೆ. ಈ ಅಧ್ಯಯನಕ್ಕೆ ಬೇಕಾದ ಆಕರ ಸಾಮಗ್ರಿಗಳ ಅಲಭ್ಯತೆಯ ಬಗ್ಗೆ ಆಕ್ಷೇಪಣೆಗಳಿವೆ. ಇವರನ್ನು ಕುರಿತ ಶಾಸನಗಳ ಸಂಖ್ಯೆ ಕಡಿಮೆ. ಆದರೆ ಬಖೈರುಗಳು, ಕೈಫಿಯತ್ತು ಇತ್ಯಾದಿ ದಾಖಲೆಗಳಿವೆ. ಅವುಗಳ ಬಳಕೆಗೆ ಪತ್ರಾಗಾರಗಳ ಮೊರೆ ಹೋಗಬೇಕಾದ್ದು ಅನಿವಾರ್ಯ. ಆಳ್ವಿಕೆ ಮಾಡಿದ ಸಾಮ್ರಾಟರನ್ನು ಮಾದರಿಯಾಗಿಟ್ಟುಕೊಂಡು ಇವರ ಅಧ್ಯಯನ ಮಾಡಲಾಗುವುದಿಲ್ಲ. ಆರಂಭಿಕ ದೆಸೆಯಲ್ಲಿ ಇವರು ಒಬ್ಬನಲ್ಲ ಒಬ್ಬ ಸಾಮ್ರಾಟ ಅಥವಾ ರಾಜನ ಅಧೀನರಾಗಿ ಆಳ್ವಿಕೆಗೆ ತೊಡಗಿ, ಅವರು ದುರ್ಬಲರಾದ ಹೊತ್ತಿನಲ್ಲಿ ತಮ್ಮ ಪ್ರಾಬಲ್ಯವನ್ನು ಮೆರೆದವರು. ಮೂಲತಃ ಅವರು ಸೈನಿಕ ವ್ಯವಸ್ಥೆಯ ನಿರ್ವಹಣೆ ಮಾಡುತ್ತಿದ್ದು, ಯುದ್ಧ ಕಾಲದಲ್ಲಿ ಮಾತ್ರ ಅವರ ಚಟುವಟಿಕೆ ಹೆಚ್ಚುತ್ತಿದ್ದುದರಿಂದ ಉಳಿದಂತೆ ಅವರು ತಮ್ಮ ಕೃಷಿ ಅಥವಾ ಮತ್ತಾವುದೇ ಕೆಲಸದಲ್ಲಿ ನಿರತರಾಗಿರುತ್ತಿದ್ದರು. ಅಮರಂ, ಪಾಳೆಯ ಇತ್ಯಾದಿ ಪದಗಳ ಅರ್ಥವ್ಯಾಪ್ತಿಯನ್ನು ಕುರಿತು ಚರ್ಚಿಸುತ್ತಾ, ಅಮರನಾಯಕರೇ ಪಾಳೆಯಗಾರರು




ಎನಿಸಿಕೊಂಡರು ಎಂಬ ಅಂಶವನ್ನು ಶ್ಯಾಮಲಾ ಅವರು ಸ್ಪಷ್ಟಪಡಿಸಿದ್ದಾರೆ. ದಕ್ಷಿಣ ಭಾರತದ ಬೇರೆಬೇರೆ ಭಾಗಗಳಲ್ಲಿ ಪಾಳೆಯಗಾರರನ್ನು ಬೇರೆಬೇರೆ ಹೆಸರುಗಳಲ್ಲಿ ಗುರುತಿಸಲಾಗಿದೆ. ಕರ್ನಾಟಕದ ಪೂರ್ವ ಭಾಗದಲ್ಲಿದ್ದ ೩೫ ಪಾಳೆಯಪಟ್ಟುಗಳನ್ನು ಕುರಿತ ಇತಿಹಾಸವನ್ನು ಕೃತಿಯು ಪರಿಶೀಲಿಸಿದೆ.

ಕೃತಿಯ ಆರಂಭದ ಹೆಚ್ಚು ಭಾಗ ಎಲ್ಲ ೩೫ ಪಾಳೆಯಗಾರರ ಕೌಟುಂಬಿಕ ವಿವರಗಳಿಗೆ ಮೀಸಲಾಗಿದೆ. ಕುಟುಂಬದ ಮೂಲ, ವಂಶಾವಳಿ ಇತ್ಯಾದಿ ವಿವರಗಳು, ಸಹಜವಾಗಿಯೇ ಮಾಮೂಲು ಎನ್ನುವ ಅಭಿಪ್ರಾಯಕ್ಕೆ ಕಾರಣವಾಗಿವೆ. ರಾಜಕೀಯ ವ್ಯವಸ್ಥೆಗೆ ಸಂಬಂಧಿಸಿದಂತೆ, 'ನಾಯಕಪದ್ಧತಿ'ಯ ಪ್ರಕಾರ ಸಪ್ತಾಂಗ ಸೂತ್ರಗಳಿಗೆ ಅನುಗುಣವಾಗಿ ಆಡಳಿತ ನಡೆಯುತ್ತಿತ್ತು ಎಂದು ತಿಳಿಸುತ್ತಾ, ಕೇಂದ್ರಾಡಳಿತ ಮತ್ತು ರಾಜ್ಯಾಡಳಿತ ವ್ಯವಸ್ಥೆಯ ಬಗ್ಗೆ ಗಮನ ಸೆಳೆಯಲಾಗಿದೆ. ಬಹುತೇಕ ಪಾಳೆಯಗಾರರು ತಮ್ಮ ಹೆಚ್ಚು ಕಾಲವನ್ನು ತಮ್ಮ ಪಾಳೆಯಪಟ್ಟುಗಳ ರಕ್ಷಣೆಯ ವಿಚಾರಕ್ಕೆ ಮೀಸಲಾಗಿಟ್ಟಿದ್ದರು; ಹೋರಾಟ ಅವರ ದಿನನಿತ್ಯದ ಕಾರ್ಯಕ್ರಮವಾಗಿದ್ದಂತೆ ತೋರುತ್ತದೆ. ಪ್ರತಿಯೊಬ್ಬ ಪಾಳೆಯಗಾರನ ಕಾಲದಲ್ಲಿ ಅವನು ಮತ್ತು ಅವನ ಕುಟುಂಬದವರು ನೀಡಿದ ದಾನಗಳ ಉಲ್ಲೇಖಗಳನ್ನು ದಾಖಲಿಸುವ ಸಂದರ್ಭದಲ್ಲಿ ವಿವಿಧ ಕುಶಲಕರ್ಮಿಗಳಿಗೆ ಪ್ರೋತ್ಸಾಹದ ರೂಪದಲ್ಲಿ ನೀಡುತ್ತಿದ್ದ ನೆರವನ್ನು ಉಲ್ಲೇಖಿಸಿರುವುದು ಇವರಿಗೆ ಸ್ಥಳೀಯ ಕುಶಲಕರ್ಮಿಗಳ ಬಗ್ಗೆ ಇದ್ದ ಆಸಕ್ತಿಯ ಪರಿಚಯ ಮಾಡುತ್ತದೆ. ರಾಜ್ಯಾಡಳಿತದ ಹಸ್ತಾಂತರದ ಸಂದರ್ಭದಲ್ಲಿ ಆಗುತ್ತಿದ್ದ ದಾಯಾದಿ ಕಲಹಗಳು ಸೃಷ್ಟಿಸುತ್ತಿದ್ದ ಅವಾಂತರಗಳು ಪಾಳೆಯಗಾರರ ಸ್ವಭಾವವನ್ನು ಕ್ರೂರವೆನ್ನುವಂತೆ ಪರಿಚಯಿಸುತ್ತವೆ. ಬಹುತೇಕ ಎಲ್ಲ ಪಾಳೆಯಪಟ್ಟುಗಳಲ್ಲೂ ಈ ವಿಚಾರದಲ್ಲಿ ಒಂದೇ ರೀತಿಯ ಪರಿಸ್ಥಿತಿ ಇತ್ತು ಎಂದು ಸ್ಪಷ್ಟವಾಗುತ್ತದೆ. ಕೆಲವು ಸಂದರ್ಭಗಳಲ್ಲಿ ನಾಗತಿಯರೇ ಅಪ್ರಾಪ್ತವಯಸ್ಕ ರಾಜಕುಮಾರರ ಪರವಾಗಿ ಆಡಳಿತ ನಡೆಸಿರುವ ಉದಾಹರಣೆಗಳೂ ಇರುವುದನ್ನು ಗಮನಿಸಿದಾಗ, ರಾಣಿವಾಸದವರೂ ರಾಜ್ಯಾಡಳಿತದ ಬಗ್ಗೆ ತಿಳಿವಳಿಕೆ ಇದ್ದವರಾಗಿದ್ದರು ಎಂದು ಖಚಿತವಾಗುತ್ತದೆ. ಮಹಿಳೆಯರು ಮತ್ತು ಕುಶಲಕರ್ಮಿಗಳಿಗೆ ದೊರೆತಿದ್ದ ಆದ್ಯತೆಯು ಪಾಳೆಯಗಾರರ ಉದಾತ್ತ ಮನಸ್ಸುಗಳನ್ನು ಸೂಚಿಸುತ್ತದೆ. ಅಲ್ಲದೆ, ಆಡಳಿತವನ್ನು ವಿಕೇಂದ್ರೀಕರಣಗೊಳಿಸುವತ್ತ ಅವರು ಪ್ರಯತ್ನಗಳನ್ನು ಮಾಡುತ್ತಿದ್ದಂತೆ ತೋರುತ್ತದೆ. ಕೇಂದ್ರದಂತೆಯೇ, ಪಾಳೆಯಪಟ್ಟುಗಳಲ್ಲೂ ರಾಜನಿಗೆ ನೆರವಾಗಿ ಮಂತ್ರಿಮಂಡಲವಿರುತ್ತಿತ್ತು. ಸೈನ್ಯದಲ್ಲಿ ದಂಡನಾಯಕನ ಪಾತ್ರ ಮಹತ್ವ ಪಡೆದಿದ್ದ ಸೂಚನೆಗಳಿವೆ. ರಾಜನ ನೇತೃತ್ವದಲ್ಲೇ ನ್ಯಾಯಾಂಗ ವ್ಯವಸ್ಥೆಯು ಅತ್ಯಂತ ಚೆನ್ನಾಗಿ ಕಾರ್ಯ ನಿರ್ವಹಿಸುತ್ತಿತ್ತು ಎಂಬುದಕ್ಕೆ ಉದಾಹರಣೆಯಾಗಿ ಲೇಖಕರು ಹಲವು ವಿಷಯಗಳನ್ನು ಪ್ರಸ್ತಾಪಿಸಿದ್ದಾರೆ. ಅಪರಾಧಿಗೆ ಶಿಕ್ಷೆ ವಿಧಿಸುವ ಮುನ್ನ ಮಾನವೀಯ ದೃಷ್ಟಿಯಿಂದ, ಅಪರಾಧ ಮತ್ತು ವಿಧಿಸಬಹುದಾದ ಶಿಕ್ಷೆಯ ಬಗ್ಗೆ ಪರಿಶೀಲಿಸುತ್ತಿದ್ದರು. ನ್ಯಾಯಕ್ಕೆ ಸಂಬಂಧಿಸಿದ ಹಲವು ಪ್ರಸಂಗಗಳು ಗಮನ ಸೆಳೆಯುತ್ತವೆ.

ರಾಜ್ಯವನ್ನು ನಾಡು, ಸೀಮೆ ವಳಿತ, ವೇಂಠೆ ಇತ್ಯಾದಿ ವಿಭಾಗಗಳಾಗಿ ಮಾಡಿಕೊಂಡು ಆಡಳಿತವನ್ನು ನಡೆಸಲಾಗುತ್ತಿತ್ತು. ಸೈನ್ಯಕ್ಕೆ ಅಧಿಕಾರಿಗಳಿರುತ್ತಿದ್ದಂತೆ ಬೊಕ್ಕಸದ ಅಧಿಕಾರಿಗಳೂ ಇದ್ದರು. ಕುಶಲಕರ್ಮಿಗಳು ತಮ್ಮದೇ ಸಂಘಗಳನ್ನು ರಚಿಸಿಕೊಂಡು ತಮ್ಮ ಆಡಳಿತವನ್ನು ನಿಭಾಯಿಸಿಕೊಳ್ಳುತ್ತಿದ್ದರು. ಗ್ರಾಮಗಳ ಆಡಳಿತವು ಆಯಗಾರ ಪದ್ಧತಿಯ ಪ್ರಕಾರ ನಡೆಯುತ್ತಿತ್ತು. ಯುದ್ಧದಲ್ಲಿ ಹೋರಾಡಿ ಮಡಿದ ವೀರರ ಕುಟುಂಬಗಳಿಗೆ ನೀಡುತ್ತಿದ್ದ ದಾನ, ದತ್ತಿಗಳನ್ನು ಸಾಮ್ರಾಟರ ಹಾಗೆ ಇವರೂ ಮುಂದುವರಿಸಿದ್ದುದಕ್ಕೆ ದಾಖಲೆಗಳಿವೆ. ಇವರ ಯುದ್ಧ ಕ್ರಮವು ಆಕ್ರಮಣಕಾರಿಯಾಗಿರುತ್ತಿದ್ದ ಕಾರಣ ಹಲವು ಸಂದರ್ಭಗಳಲ್ಲಿ ಇತರ ಪಾಳೆಯಗಾರರಿಗೂ ಪರಸ್ಪರ ನೆರವನ್ನು ಒದಗಿಸುತ್ತಿದ್ದರು. ಆನವಟ್ಟಿಯಲ್ಲಿ

ಮರಾಠರು ಹೈದರ್ ಆಲಿಯನ್ನು ಸೋಲಿಸಲು ಮದಕರಿನಾಯಕನ ನೆರವು ಪಡೆದರು; ಅದೇ ಹೈದರ್ ಆಲಿ ಬಿದನೂರು ಮತ್ತು ನಿಜಗಲ್ಲುಗಳನ್ನು ಗೆಲ್ಲಲು ಮದಕರಿನಾಯಕನ ಸಹಾಯವನ್ನು ಪಡೆಯಬೇಕಾಯಿತು. ಇದೇ ಹೈದರ್ ಆಲಿಯು ಚಿತ್ರದುರ್ಗವನ್ನು ವಶಪಡಿಸಿಕೊಂಡ. ಯಾವ ಪಾಳೆಯಗಾರರ ನಡುವೆಯೂ ಶಾಶ್ವತ ದ್ವೇಷ ಅಥವಾ ಸ್ನೇಹ ಇದ್ದಂತೆ ಕಾಣುವುದಿಲ್ಲ. ಕರ್ನಾಟಕದ ಬಹುತೇಕ ಪಾಳೆಯಪಟ್ಟುಗಳು ಹೈದರ್ ಮತ್ತು ಟಿಪ್ಪುವಿನ ಆಕ್ರಮಣ ನೀತಿಯಿಂದ ನಷ್ಟವನ್ನು ಅನುಭವಿಸಿ, ಕೊನೆಗೆ ಬ್ರಿಟಿಷರ ಕಾಲದಲ್ಲಿ ಇಲ್ಲವಾದವು.

ಪೂರ್ವಕರ್ನಾಟಕದ ಪಾಳೆಯಪಟ್ಟುಗಳ ಸ್ಥಳನಾಮದ ವಿಚಾರವಾಗಿ ಗಮನಾರ್ಹ ಚಿಂತನೆಗಳು ನಡೆದಿವೆ. ಪಾಳೆಯಪಟ್ಟುಗಳ ಆರ್ಥಿಕ ವ್ಯವಸ್ಥೆಯು ವ್ಯವಸಾಯ ಮತ್ತು ಕುಶಲಕರ್ಮಿಗಳನ್ನು ಅವಲಂಬಿಸಿತ್ತು. ಕೃಷಿಗೆ ಮಾತ್ರವಲ್ಲದೆ ಕುಡಿಯುವ ಸಲುವಾಗಿಯೂ ನೀರಿನ ವ್ಯವಸ್ಥೆಗೆ ಸ್ಥಳೀಯ ಆಡಳಿತಗಾರರು ಗಮನ ಕೊಟ್ಟಿದ್ದಕ್ಕೆ ಉದಾಹರಣೆಯಾಗಿ ಹಲವು ಕೆರೆಗಳು ಮತ್ತು ಭಾವಿಗಳ ನಿರ್ಮಾಣಕ್ಕೆ ಒದಗಿಸಲಾಗಿದ್ದ ಅವಕಾಶಗಳ ಬಗ್ಗೆ ಹಲವು ಶಾಸನಗಳ ದಾಖಲೆಗಳಿವೆ. ಆಳುವವರು ಮಾತ್ರವಲ್ಲದೆ, ಇತರರೂ ಈ ವಿಚಾರದಲ್ಲಿ ಆಸಕ್ತಿ ವಹಿಸುತ್ತಿದ್ದರು. ವಾಣಿಜ್ಯ ಚಟುವಟಿಕೆಗಳಿಗೂ ಆದ್ಯತೆ ನೀಡಲಾಗಿತ್ತು.

ತಮ್ಮ ಎಲ್ಲ ಅಭಿವೃದ್ಧಿ ಕಾರ್ಯಗಳಿಗಾಗಿ ಅವಶ್ಯಕವಾದ ಆರ್ಥಿಕ ಅನುಕೂಲತೆಗಳನ್ನು ಕಂದಾಯ ಮತ್ತು ತೆರಿಗೆಗಳ ಮೂಲಕ ಸಂಗ್ರಹಿಸಿಕೊಳ್ಳುತ್ತಿದ್ದರು. ಪಾಳೆಯಗಾರರ ಕುಟುಂಬದವರು ಯಾವುದೇ ಧರ್ಮದವರಾಗಿದ್ದರೂ, ಉಳಿದ ಎಲ್ಲಾ ಧರ್ಮಗಳನ್ನೂ ಗೌರವಿಸುತ್ತಿದ್ದರು. ಹಲವು ದೇವಾಲಯಗಳ ಮಾತ್ರವಲ್ಲದೆ ಮಠಗಳ ನಿರ್ಮಾಣ ಮತ್ತು ನಿರ್ವಹಣೆಗೂ ಅವಕಾಶ ಕಲ್ಪಿಸಿದ್ದರು. ಸಮಾಜದಲ್ಲಿ ವರ್ಣ ವ್ಯವಸ್ಥೆಯನ್ನು ಅನುಸರಿಸಲಾಗುತ್ತಿತ್ತು. ಶ್ರಮಿಕರ ಶ್ರಮಕ್ಕೆ ಗೌರವ ಲಭ್ಯವಿತ್ತು. ವಂಶಪಾರಂಪರ್ಯವಾಗಿ ಜಾತಿ ಪದ್ಧತಿಯನ್ನು ಅನುಸರಿಸಲಾಗುತ್ತಿತ್ತು. ಜಾತಿ ಧರ್ಮದಲ್ಲಿ ಲೋಪವಾದಾಗ ಬಹಿಷ್ಕಾರದ ಶಿಕ್ಷೆಯನ್ನು ವಿಧಿಸಲಾಗುತ್ತಿತ್ತು. ಬುಖನನ್ ಪ್ರಕಾರ ಪಾಳೆಯಗಾರರ ಆಳ್ವಿಕೆಯ ಕೊನೆಯ ಘಟ್ಟದಲ್ಲಿ ಸುಮಾರು ಹದಿನೆಂಟು ಜಾತಿಗಳನ್ನು ಗುರುತಿಸಲಾಗಿದೆ. ಆ ಕಾಲದ ವೀರಗಲ್ಲುಗಳು ಮತ್ತು ಮಾಸ್ತಿಗಲ್ಲುಗಳು ವೀರಮೌಲ್ಯಕ್ಕೆ ನೀಡಲಾಗಿದ್ದ ಗೌರವದ ಸಂಕೇತಗಳಾಗಿವೆ. ಹಲವು ದೇವಾಲಯಗಳ ನಿರ್ಮಾಣವಾಗಿರುವ ಮತ್ತು ಹಲವು ಪಾಳೆಯಗಾರರೂ ಸೇರಿದಂತೆ ಅನೇಕ ಕವಿಗಳು ಸಾಹಿತ್ಯರಚನೆಯಲ್ಲಿ ತೊಡಗಿದ್ದುದನ್ನು ಗುರುತಿಸಲಾಗಿದೆ. ಸಬಾಲ್ಟರ್ನ್ ಮಾದರಿಯಲ್ಲಲ್ಲವಾದರೂ, ೧೬ರಿಂದ ೧೯ನೆಯ ಶತಮಾನಗಳ ಅವಧಿಯಲ್ಲಿ ಕರ್ನಾಟಕವು ಬೆಳೆಸಿದ ಉಪಸಂಸ್ಕೃತಿಯನ್ನು ಡಾ॥ ಸಿ. ಆರ್. ಶ್ಯಾಮಲಾ ಅವರು ವಿವರವಾಗಿಯೇ ಪರಿಶೀಲಿಸಿದ್ದಾರೆ.

೪

ಸುಮಾರು ೧೯ ವರ್ಷಗಳ ಹಿಂದೆ ಪ್ರಕಟವಾಗಿ, ಈಗ ಮರುಮುದ್ರಣಗೊಂಡಂತಿರುವ 'ದಲಿತ ಚಳವಳಿ – ಒಂದು ಅವಲೋಕನ' ಕೃತಿಯು ಡಾ॥ ವಿ. ಮುನಿವೆಂಕಟಪ್ಪ ಅವರು ಸಂಪಾದಿಸಿರುವ ೧೯ ಲೇಖನಗಳ ಸಂಗ್ರಹ. ಒಂದು ಕಾಲದವರೆಗೆ ದಲಿತರನ್ನು ಮುಟ್ಟುವುದಿರಲಿ, ಅವರ ವಿಷಯವಾಗಿ ಮಾತನಾಡುವುದನ್ನೂ ಮೇಲ್ವರ್ಗದವರು ಮಾನ್ಯ ಮಾಡಿದಂತೆ ಕಾಣುವುದಿಲ್ಲ. ಇನ್ನು ಅವರ ಸಮಸ್ಯೆಗಳನ್ನು ಕುರಿತು ಚರ್ಚಿಸುವ ಮತ್ತು ಸಾಧ್ಯವಾದರೆ ಘಟ್ಟಿಸಿ, ಕೇಳುವ ಪ್ರಯತ್ನಗಳನ್ನೂ ಮಾಡಿದಂತೆ ಕಾಣುವುದಿಲ್ಲ. ಅಸ್ಪೃಶ್ಯ ಎಂದರೆ ಎಲ್ಲಕ್ಕೂ ದೂರ ಎಂದು ಪರಿಗಣಿಸಿದ್ದಂತಹ ಸಂದರ್ಭ. ಇವರನ್ನು ಕುರಿತು ಹಿಂದೆ ಒಬ್ಬ ಬುದ್ಧ, ಒಬ್ಬ ಬಸವ ಮಾಡಿದ ಆಲೋಚನೆಗಳು ೧೯ನೆಯ ಶತಮಾನದಲ್ಲಿ ಪುನಃ ಚಾಲನೆಗೊಂಡದ್ದು ಆರೋಗ್ಯಕರ ಬೆಳವಣಿಗೆ. ೨೦ನೆಯ ಶತಮಾನದಲ್ಲಿ ಮಹಾತ್ಮ ಗಾಂಧಿ, ಜ್ಯೋತಿ ಬಾ ಫುಲೆ, ಶಾಹೂ ಮಹಾರಾಜ, ನಾಲ್ವಡಿ ಕೃಷ್ಣರಾಜ ಒಡೆಯರ್ ಮತ್ತು ಪ್ರಮುಖವಾಗಿ ಡಾ॥ ಬಿ. ಆರ್. ಅಂಬೇಡ್ಕರ್ ದಲಿತರ ಧ್ವನಿಯಾದರು. ಈ ಧ್ವನಿಗಳು

## ಅಭಿನಂದನೆ...

ಕನ್ನಡ ಸಾಹಿತ್ಯ ಪರಿಷತ್ತು ನೀಡುವ ೨೦೧೮ನೇ ಸಾಲಿನ 'ಕುವೆಂಪು ಸಿರಿಗನ್ನಡ ದತ್ತಿಪ್ರಶಸ್ತಿ'ಗೆ ಲೇಖಕರಾದ ಶ್ರೀ ಸರಜೂ ಕಾಟ್ಕರ್ ಆಯ್ಕೆಯಾಗಿದ್ದಾರೆ. ಇವರಿಗೆ 'ನವಕರ್ನಾಟಕ' ಹಾಗೂ 'ಹೊಸತು'ವಿನ ಅಭಿನಂದನೆಗಳು.

ಕರ್ನಾಟಕದಲ್ಲಿ ಒಂದು ಚಳವಳಿಯ ರೂಪ ಪಡೆದದ್ದು ಕಳೆದ ಶತಮಾನದ ೭೦ರ ದಶಕದಲ್ಲಿ; ನಿರ್ದಿಷ್ಟ ಗೊತ್ತುಗುರಿಗಳೊಂದಿಗೆ ದಲಿತ ಸಂಘಟನೆಗಳು ಅಸ್ತಿತ್ವಕ್ಕೆ ಬಂದವು. ಈ ಸಂಘಟನೆಗಳು ನಿರ್ದಿಷ್ಟವಾಗಿ ಹೋರಾಟಗಳಿಗೆ ತೊಡಗಲು ಬಸವಲಿಂಗಪ್ಪನವರ ಬೂಸಾ ಸಾಹಿತ್ಯ ಪ್ರಕರಣವು ಪ್ರೇರಣೆಯಾಯಿತು. ದ. ಸಂ. ಸ. ಬೆಳೆಯಿತು. ದಲಿತರ ಮಲಹೊರುವ ಪದ್ಧತಿಯ ನಿರ್ಮೂಲನೆಗಾಗಿ ಹೋರಾಟ ನಡೆಯಿತು. ತಮ್ಮ ಹಕ್ಕುಗಳಿಗಾಗಿ ಹೋರಾಟವನ್ನು ಆರಂಭಿಸಿದ ದಲಿತಪರ ಸಂಘಟನೆಗಳಿಗೆ ಮೊದಲಿಗೆ ನಾಯಕತ್ವದ ಕೊರತೆಯಿತ್ತು. ಕ್ರಮೇಣ ತಮ್ಮ ನಾಯಕರ ಅಧಿಕಾರದಾಹದಿಂದ ಮತ್ತು ತಮ್ಮಲ್ಲಿಯೇ ಇದ್ದ ಒಳಪಂಗಡಗಳ ನಡುವಿನ ಘರ್ಷಣೆ ಹೆಚ್ಚಿ, ಹತ್ತು ಹಲವು ದಲಿತ ಸಂಘಟನೆಗಳು ಹುಟ್ಟಿಕೊಂಡವು. ಕ್ರಮೇಣ ಇವುಗಳ ಶಕ್ತಿ ಕುಂದಿತು ಎಂಬಂತಹ ಮುಖ್ಯ ವಿಚಾರಗಳನ್ನು ಡಾ॥ ಎಚ್. ಟಿ. ಪೋತೆ ಅವರ ಲೇಖನದಲ್ಲಿ ಕಾಣಬಹುದು.

ಬಾಬು ಜಗಜೀವನರಾಮ್ ಸ್ವಂತ ಪರಿಶ್ರಮದಿಂದ ಮೇಲೆ ಬಂದವರು; ಹಲವು ಪ್ರಮುಖ ಹುದ್ದೆಗಳಿಂದ ವಂಚಿತರಾದರೂ, ದೊರೆತ ಅವಕಾಶಗಳನ್ನು ಸಮರ್ಥವಾಗಿ ಬಳಸಿಕೊಂಡು ದೇಶದ ಹಿತಕ್ಕೆ ಶ್ರಮಿಸಿದ ದೊಡ್ಡ ಜೀವ ಅವರದು. ಅಧಿಕಾರದಾಹವಿಲ್ಲದೆ, ದೇಶಕ್ಕೆ ಒಳಿತನ್ನು ಮಾಡಿದ ಬಾಬು ಜಗಜೀವನರಾಮ್ ದಲಿತರ ಅಪ್ಪಟ ಪ್ರತಿಭೆಯಾಗಿ ನಿಜಕ್ಕೂ ದೊಡ್ಡವರಾಗಿರುವುದನ್ನು ಪ್ರೊ॥ ಎಲ್ಲಪ್ಪ ಬೂತಯ್ಯ ಅವರು ತಿಳಿಸಿದ್ದಾರೆ.

ಎಂ. ನಂಜಯ್ಯ ಹೊಂಗನೂರು ಅವರು ಬಿ. ಬಸವಲಿಂಗಪ್ಪನವರನ್ನು ಸಾಮಾಜಿಕ ಹರಿಕಾರನಾಗಿ ಪರಿಚಯಿಸುತ್ತಾ, ಅವರ ಸಂಪ್ರದಾಯ ವಿರೋಧಿ ಮನೋಭಾವ ಮತ್ತು ಪ್ರಖರ ವೈಚಾರಿಕತೆಯನ್ನು ಪರಿಚಯಿಸುತ್ತಾ, ಅಧಿಕಾರದಲ್ಲಿದ್ದಾಗ, ಕೆಳವರ್ಗದವರ ಒಳಿತಿಗಾಗಿ ಅವರು ಮಾಡಿದ ಕೆಲಸಗಳನ್ನು ಮನವರಿಕೆ ಮಾಡಿದ್ದಾರೆ.

ದಲಿತ ಸಂಘರ್ಷ ಸಮಿತಿಯ ಸೂತ್ರಧಾರರಾಗಿದ್ದ ಪ್ರೊ॥ ಬಿ. ಕೃಷ್ಣಪ್ಪನವರು ಯಾವುದೇ ದುಶ್ಚಟಗಳಿಗೆ ಬಲಿಯಾಗದೆ, ಕೊನೆಯವರೆಗೂ ನಿಷ್ಠಾವಂತ ಸಂಘಟಕರಾಗಿದ್ದುದನ್ನು, ಚಿಕ್ಕವಯಸ್ಸಿನಲ್ಲೇ ತೀರಿಕೊಂಡ ಪ್ರಾಮಾಣಿಕ ದೇವಯ್ಯ ಹರವೆ, ಸ್ವಚ್ಛ ಆಡಳಿತಕ್ಕೆ ಹೆಸರಾದ 'ಜೀವಂತ ದಂತಕಥೆ' ಬಿ. ರಾಚಯ್ಯ, ಕರ್ನಾಟಕ ದಲಿತ ಕ್ರಿಯಾ ಸಮಿತಿಯ ಸ್ಥಾಪಕ ಅಧ್ಯಕ್ಷರಾದ ಡಿ. ಎಂ. ತಿಮ್ಮರಾಯಪ್ಪ ಅವರಂತಹ ದಲಿತ ಹೋರಾಟಗಾರರನ್ನು ಪರಿಚಯಿಸುತ್ತಲೇ, ದಲಿತ ಸಂಘರ್ಷ ಸಮಿತಿ ದುಷ್ಟ ಹಾದಿ ಹಿಡಿಯಿತೆಂದು ಸಿಟ್ಟು ಮಾಡಿಕೊಳ್ಳುವ ಜಾಣಗೆರೆ ವೆಂಕಟರಾಮಯ್ಯ, ಕರ್ನಾಟಕದಲ್ಲಿನ ದಲಿತ ಚಳವಳಿಯ ಆಗುಹೋಗುಗಳನ್ನು ಕುರಿತು ಚಿಂತಿಸಿರುವ ಮುನಿವೆಂಕಟಪ್ಪ, ಜ. ಹೊ. ನಾರಾಯಣ ಸ್ವಾಮಿ, ಮೈಸೂರು ರಾಜು, ಮುಳ್ಳೂರು ನಾಗರಾಜ, ಬಿ. ಎಂ. ಪುಟ್ಟಯ್ಯ ಇತ್ಯಾದಿ ಲೇಖಕರ ಲೇಖನಗಳು ದಲಿತ ಹೋರಾಟದ ಮುಂಚೂಣಿಯಲ್ಲಿದ್ದ ನಾಯಕರು, ಅವರ ಹೋರಾಟಗಳು ಹಾಗೂ ಸಾಧನೆಗಳನ್ನು ಪರಿಚಯಿಸಿವೆ. ಈ ಸಂಗ್ರಹದಲ್ಲಿನ ಇನ್ನೂ ಹಲವು ಲೇಖನಗಳು ದಲಿತರ ವಿವಿಧ ಸಮಸ್ಯೆಗಳು, ಅವುಗಳ ನಿವಾರಣೆಗೆ ನಡೆದ ಹೋರಾಟಗಳು, ಪಡೆದ ಯಶಸ್ಸು ಇತ್ಯಾದಿ ವಿಚಾರಗಳನ್ನು ವಿವರವಾಗಿ ಚರ್ಚಿಸಿವೆ.

ದಲಿತರ ಹೋರಾಟಗಳು ನಡೆದಿರುವ ಹಾದಿ, ಅಲ್ಲಿನ ಸಾಫಲ್ಯ ಮತ್ತು ವೈಫಲ್ಯಗಳನ್ನು ಸಬಾಲ್ಟರ್ನ್ ಅಧ್ಯಯನದ ಹಿನ್ನೆಲೆಯಲ್ಲಿ ಡಾ॥ ವಿ. ಮುನಿವೆಂಕಟಪ್ಪ ಅವರು ಹಲವು ಲೇಖಕರ ಅಭಿಪ್ರಾಯಗಳ ಮೂಲಕ ಮನವರಿಕೆ ಮಾಡಲು ನಡೆಸಿರುವ ಪ್ರಯತ್ನ ಯಶಸ್ಸು ಕಂಡಿದೆ.

**ಡಾ॥ ಎಚ್. ಎಸ್. ಗೋಪಾಲ ರಾವ್**
'ಅಕ್ಷರ', ಐ. ವೈ. ಡಿ. ೨ನೇ ರಸ್ತೆ, ಅರಶಿನಕುಂಟೆ
ನೆಲಮಂಗಲ ತಾಲ್ಲೂಕು, ಬೆಂಗಳೂರು ಗ್ರಾಮಾಂತರ ಜಿಲ್ಲೆ – ೫೬೨ ೧೨೩




೧

**ಅ**ಪ್ಪಾ,
ನಾ ಹುಟ್ಟಿದ ದಿನವೇ ನೀನು
ಸೈನ್ಯ ಸೇರಿದೆಯಂತೆ
ನಿತ್ಯ ನನ್ನ ಕಾಲುಗುಣದ ಕೊಂಡಾಟ
ನೆಲಕ್ಕೆ ಹೆಜ್ಜೆ ಊರುವಾಗಲೇ
ಅಪ್ಪನ ದೂರ ಕಳಿಸಿದ
ಈ ಪಾಪಿ ಕಾಲುಗಳೆಂದರೆ
ನನಗೆ ಅಪಾರ ಸಿಟ್ಟು
ಹುಟ್ಟಿದ ಕೆಟ್ಟ ಗಳಿಗೆಯನು
ಸದಾ ಶಪಿಸುತ್ತಿರುವೆ
ಯಾವಾಗ ಬರುವಿ ಅಪ್ಪಾ?

೨

ಅಪ್ಪಾ,
ನೀ ಶಾಶ್ವತವಾಗಿ ಮನೆಗೆ ಮರಳಲು
ಹದಿನೆಂಟು ವರುಷ ಬೇಕಂತೆ
ಅಷ್ಟರಲ್ಲೇ ನಾ ದೊಡ್ಡವನಾಗಿ ಬಿಡುವೆ
ನಿನ್ನ ವಾತ್ಸಲ್ಯದ ನಿತ್ಯ ಅಪ್ಪುಗೆಯಿಂದ
ವಂಚಿತವಾದ ಬಾಲ್ಯ
ರೋದಿಸುತ್ತಿದೆ
ಯಾವಾಗ ಬರುವಿ ಅಪ್ಪಾ?

೩

ಅಪ್ಪಾ, ಅಪ್ಪಾಜಿ, ಅಪ್ಪಯ್ಯ, ಪಪ್ಪಾ...
ಅಪ್ಪಂದಿರನ್ನು ಕರೆಯುವ
ಅಕ್ಕರೆಯ ದನಿಗಳ ಕೇಳಿದಾಗೊಮ್ಮೆ
ಕಣ್ಣು ಒದ್ದೆಯಾಗಿ
ಗುಡ್ಡದೋರೆಗೆ ಓಡಿ ಹೋಗುತ್ತೇನೆ
ಎಲ್ಲ ಪದಗಳಿಂದಲೂ
ನಿನ್ನನ್ನು ಕೂಗಿ ಕೂಗಿ ಕರೆಯುವೆ
ಗುಡ್ಡ ಬೆಟ್ಟಗಳಲ್ಲಿ
'ಅಪ್ಪಾ' ಎಂಬ ದನಿ ಪ್ರತಿಧ್ವನಿಸುತ್ತದೆ
'ಓ' ಎಂಬ ಮರುದನಿ ಕೇಳುವುದೇ ಇಲ್ಲ !
ಯಾವಾಗ ಬರುವಿ ಅಪ್ಪಾ?

೪

ಅಪ್ಪಾ,
ಹುತಾತ್ಮ ಯೋಧ
ಸರಕಾರಿ ಗೌರವಗಳೊಂದಿಗೆ
ಮಣ್ಣು ಸೇರುವುದು
ಟಿವಿಯಲ್ಲಿ ಕಂಡೆ
ಹೇಗೆ ಮಲಗಲಿ ತಂದೆ?
ಬಿಕ್ಕುತ್ತಿದ್ದಾಳೆ ಅಮ್ಮ
ಆ ಕಡೆಗೆ ಮುಖ ತಿರುವಿ
ಕಣ್ಣು ಮುಚ್ಚಿರುವೆ ನಾ
ಈ ಕಡೆಗೆ ಮುಖ ತಿರುವಿ
ಮೆದುಳಿನ ಕಪ್ಪು ಲೋಕದಲ್ಲಿ
ತೇಲಿ ಬರುತ್ತದೆ
ನಿನ್ನ ಬಿಳಿ ಬಿಳಿ ಹೆಣ
ಮೇಲೆ ಕೇಸರಿ, ಬಿಳಿ, ಹಸಿರು ನಿಶಾನೆ
ಬೆಚ್ಚನೇ ಚೀರುತ್ತೇನೆ
ಅಮ್ಮ ಗಟ್ಟಿಯಾಗಿ ಅಪ್ಪಿಕೊಳ್ಳುತ್ತಾಳೆ
ಯಾವಾಗ ಬರುವಿ ಅಪ್ಪಾ?

೫

ಅಪ್ಪಾ,
ಭಾರತದ ನಕಾಶೆಯಲ್ಲಿ
ಕಾಶ್ಮೀರದ ಗಡಿರೇಖೆಗಳನ್ನು ಎಳೆಯುವಾಗ
ದಳ ದಳ ಕಣ್ಣೀರು ಉದುರಿ
ಗಡಿರೇಖೆಗಳು ತೊಳೆದು ಹೋದವು
ಮತ್ತೆ ಬಿಡಿಸಲು ಹೆದರಿಕೆ
ಯಾವಾಗ ಬರುವಿ ಅಪ್ಪಾ?

೬

ಅಪ್ಪಾ,
ನೀನು ಬರುವಾಗ
ಆ ಉದ್ದ ನಳಿಕೆ ಬಂದೂಕನ್ನು
ಅಲ್ಲಿಯೇ ಬಿಟ್ಟು ಬಾ
ಸೈನಿಕರ ಡ್ರೆಸ್ಸನ್ನು
ಅಲ್ಲಿಯೇ ಕಳೆದು ಬಾ
ಕಾಶ್ಮೀರ ಟೋಪಿಯನ್ನು
ತರಲು ಮರೆಯಬೇಡ
ಯಾವಾಗ ಬರುವಿ ಅಪ್ಪಾ?

೭

ಅಪ್ಪಾ,
ಕೈಯಲ್ಲಿ ಬಂದೂಕು ಹಿಡಿದ
ಸೈನಿಕ ವೇಷದ ನಿನ್ನ ದೊಡ್ಡ ಫೋಟೊ
ಒಡೆದು ಹಾಕಿದೆ
ಯಾಕೆಂದರೆ
ಮನೆಯಲ್ಲಿ ಯಾರೂ ಇಲ್ಲದಾಗ
ನನಗೆ ಭಯವಾಗುತ್ತದೆ !
ಯಾವಾಗ ಬರುವಿ ಅಪ್ಪಾ?

೮

ಅಪ್ಪಾ,
ನಾ ಬರೆಯುವ ಪ್ರತಿ ಅಕ್ಷರದಲ್ಲೂ
ನಿನ್ನದೇ ಮುಖ
ಮುತ್ತಿಡುತ್ತೇನೆ
ನಿನ್ನ ತುಟಿ, ಗಲ್ಲ, ಹಣೆಗಳಿಗೆ
ಪಾಟಿಯ ಮೇಲಿನ ಅಕ್ಷರಗಳು ಛಿದ್ರವಾಗಿ
ಒಂದರೊಳಗೊಂದು ಸೇರಿಹೋಗುತ್ತವೆ
ಅಮ್ಮ ತುಟಿಗೆ ತಾಗಿದ ಬಿಳಿಯ ಕಂಡು
ಬಳಪವ ತಿನ್ನಬೇಡವೆಂದು ಬುದ್ಧಿ ಹೇಳುತ್ತಾಳೆ
ಯಾವಾಗ ಬರುವಿ ಅಪ್ಪಾ?

೯

ಅಪ್ಪಾ,
ನಾನು ಓದುವ ಸಾಲುಗಳಗುಂಟ
ನೀನು ಹೆಜ್ಜೆ ಹಾಕುತ್ತೀ
ನಿನ್ನ ಡುಬ್ಬದ ಮೇಲೆ
ಹೊರಡುತ್ತದೆ ನನ್ನ ಕನಸಿನ ಸವಾರಿ
ಓದುವಾಗ ನಡುನಡುವೆ
ನಗುವೆ ಏಕೆಂದು
ಅಮ್ಮ ಗದರಿಸುತ್ತಾಳೆ
ನಿನ್ನ ಡುಬ್ಬದ ಮೇಲಿಂದ
ನಾನು ನೆಲಕ್ಕೆ ಬೀಳುತ್ತೇನೆ
ಯಾವಾಗ ಬರುವಿ ಅಪ್ಪಾ?

೧೦

ಅಪ್ಪಾ,
ನೀ ತಂದ ಹೊಸ ಬಟ್ಟೆಗಳನ್ನು
ಹೊಲಿದು ಕೊಡುವದರೊಳಗೆ
ನೀ ಹೋಗಿ ಬಿಟ್ಟಿ
ಹಬ್ಬ ಬಂದಿದೆ
ಹೊಸ ಬಟ್ಟೆ ತೊಡಿಸಿ
ಅಮ್ಮ ನೆದರು ತೆಗೆಯುತ್ತಾಳೆ
ನೀ ಬರುವ ದಿನಕ್ಕಿಂತ
ದೊಡ್ಡ ಹಬ್ಬ ಯಾವುದಿದೆ?
ಯಾವಾಗ ಬರುವಿ ಅಪ್ಪಾ?


**ಡಾ|| ಎಂ. ಡಿ. ಒಕ್ಕುಂದ**
'ನೆಮ್ಮದಿ', ಸಂಖ್ಯೆ. ೧೨೪, ಸಿ.ಐ.ಟಿ.ಬಿ. ಕಾಲೋನಿ, ಶ್ರೀನಗರ, ಧಾರವಾಡ – ೫೮೦ ೦೦೩

ಚಿತ್ರಲೇಖನ : ಪರಂಜ್ಯೋತಿ



ಆಯಾ ಕಡಲ ತೀರದಲ್ಲಿ ವಾಸಿಸುವ ಮೀನುಗಾರರು ಮೀನುಗಳಿಗೆ ಹೆಸರು ನೀಡುವ ಮಂದಿ. ಮಂಗಳೂರು ತೀರದ ಬಂಗುಡೆ ಅತ್ತ ಮಲಯಾಳ ತೀರದಲ್ಲಿ 'ಐಲ' ಎನ್ನಿಸಿಕೊಳ್ಳುತ್ತದೆ. ಭೂತಾಯಿ ಅಲ್ಲಿ 'ಮತ್ತಿ' ಆಗುತ್ತದೆ. ಶಾರ್ಕ್‌ಅನ್ನು ಅವರು 'ಸುರಾ' ಅನ್ನುತ್ತಾರೆ. ಮತ್ಸ್ಯ ತಜ್ಞರು ಎಲ್ಲ ಜಲಚರಗಳಿಗೆ ಇಟ್ಟಿರುವ ಇಂಗ್ಲಿಷ್ ಹೆಸರುಗಳಿಂದ, ಮಕರೆಲ್ – ಬಂಗುಡೆ ಎಂದು, 'ಸಾರ್ಡಿನಿ' ಭೂತಾಯಿ ಎಂದು ಗುರುತಿಸಬಹುದು.



# ಮಂಗಳೂರು ಮೀನುಗಳು

ನಾವೊಂದನ್ನು ಅರಸುತ್ತ ಹೋಗುತ್ತೇವೆ. ಅದಕ್ಕೆ ಸಂಬಂಧವೇ ಇಲ್ಲದ ಮತ್ತೊಂದು ನಮಗೆದುರಾಗುತ್ತದೆ. ಅದರಿಂದ ನಮ್ಮ ತಿಳಿವಳಿಕೆ ಸ್ವಲ್ಪ ಹೆಚ್ಚುತ್ತದೆ ಎಂದಾದರೆ, ಒಮ್ಮೆ ಅದರತ್ತ ಇಣುಕಿ ನೋಡೋಣ ಎನ್ನಿಸುತ್ತದೆ ಅಲ್ಲವೆ? ಅಂಥ ಒಂದು ಪ್ರಕರಣ ಇದು.

'ವೈರಲ್ ಫೀವರ್' ಸಾಕಷ್ಟು ಪೀಡಿಸಿ ತೊಲಗಿಹೋಗಿ ಹತ್ತು ದಿನಗಳಷ್ಟೆ ಕಳೆದಿತ್ತು. 'ನಿಮ್ಮ ಆರೋಗ್ಯ ಸುಧಾರಿಸಿದೆಯಲ್ಲವೆ? ಮಂಗಳೂರಿಗೆ ಹೋಗಿಬರುವ ಕಾರ್ಯಕ್ರಮ ಹಾಕಿಕೊಂಡಿದ್ದೇವೆ. ಬರಲು ಸಾಧ್ಯವಾಗುತ್ತದೆಯೇ?' – ಎಂದು ಪೂರ್ಣ ಫೋನ್ ಮಾಡಿದಾಗ, ಹಿಂದೆ ಮುಂದೆ ನೋಡದೆ 'ಓಹೋ ಯಾಕಾಗಬಾರದು?' ಎಂದು ಕೂಡಲೇ ಸಮ್ಮತಿಸಿದೆ. ಕಾಯಿಲೆಯ ಕಾರಣ ಬರಹ ಅರ್ಧಕ್ಕೆ ನಿಂತಿತ್ತು. ಅದನ್ನು ಮುಂದುವರಿಸುವ ತುಡಿತ ನನ್ನದು.

ನಾನು ಬರೆಯಲು ಪ್ರಾರಂಭಿಸಿದ್ದ ಪುಸ್ತಕಕ್ಕಾಗಿ ಸ್ವಾತಂತ್ರ್ಯ ಹೋರಾಟಗಾರ ಮತ್ತು ಸಾಹಿತಿ ಕುಮಾರ ವೆಂಕಣ್ಣನವರ ಹುಟ್ಟೂರಿಗೆ ಹೋಗಿ ಮಾಹಿತಿ ಸಂಗ್ರಹಿಸುವುದು ನಮ್ಮ ಪ್ರವಾಸದ ಉದ್ದೇಶವಾಗಿತ್ತು. ಅವರ ಮಕ್ಕಳಾದ ವಿಜಯಕುಮಾರ್ ಮತ್ತು ರಘು, ಇವರ ಪತ್ನಿ ಪೂರ್ಣ ನಮ್ಮ ಜೊತೆಯಲ್ಲಿ ಬರುವವರಿದ್ದರು. ನಮ್ಮನ್ನು ಕಾರಿನಲ್ಲಿ ಕರೆದೊಯ್ಯಲು ಹಾಗೂ ಮಂಗಳೂರಿನಲ್ಲಿ ಲಾಡ್ಜಿನಲ್ಲಿ ಉಳಿದುಕೊಳ್ಳಲು ಏರ್ಪಾಟು ಮಾಡಿದ್ದರು.

ನನ್ನ ಶ್ರೀಮತಿ ಶಾಂತಾ ಪಯಣಕ್ಕೆ ಸಿದ್ಧತೆ ಮಾಡಿಕೊಳ್ಳತೊಡಗಿದಳು. ಚೆನ್ನೈನಿಂದ ಬಂದಿದ್ದ ಮೊಮ್ಮಗ ನಿಶಾಂತ ನಮ್ಮೊಂದಿಗಿದ್ದ. ಪೂರ್ವ ತೀರದಿಂದ ಬಂದಿದ್ದ ಆತನಿಗೆ ದಕ್ಷಿಣ ಕನ್ನಡದ ನಿಸರ್ಗ ಸೌಂದರ್ಯದ ಜೊತೆಗೆ ಪಶ್ಚಿಮ ಸಮುದ್ರ ತೀರವನ್ನು ತೋರಿಸುವ ಉದ್ದೇಶ ನಮ್ಮದು. ಆತನಿಗೂ ಒಂದು ಪುಕ್ಕಟೆ ಪ್ರವಾಸದ ಅವಕಾಶ ಸಿಕ್ಕಿತು! ತಿರುಗಾಟದ ಸಂದರ್ಭದಲ್ಲಿ ನನ್ನ ಕ್ಯಾಮರಾ ಬ್ಯಾಗ್ ಹೊರುವ ಕೆಲಸ ಆತನದಾಯಿತು. 'ತುಂಬಾ ಭಾರವಿದೆ' – ಎಂದು ಅಜ್ಜಿಯ ಜೊತೆಗೆ ಗೊಣಗಿಕೊಂಡರೂ ಆ ಕೆಲಸವನ್ನು ಆತ ಸರಿಯಾಗಿ ನಿಭಾಯಿಸಿದ.

ಮುಂಜಾನೆ ಐದು ಗಂಟೆಗೆ ಟ್ಯಾಕ್ಸಿಯವನು ನಮ್ಮನ್ನು ಕರೆದೊಯ್ಯಲು ಬರುವವನಿದ್ದ. ಅದಕ್ಕಾಗಿ ನಾವು ನಾಲ್ಕು ಗಂಟೆಗೇ ಎದ್ದು ತಯಾರಾಗಬೇಕಿತ್ತು. ನಾವೆಲ್ಲರೂ ತುಮಕೂರು ರಸ್ತೆಯ ಕೊನೆಯ ಮೆಟ್ರೋ ಸ್ಟೇಷನ್ ಬಳಿ ಒಂದುಗೂಡಿ, ಅಲ್ಲಿಂದ ಪ್ರಯಾಣ ಮುಂದುವರಿಸಲಿದ್ದೆವು.

ಮಂಜು ಕವಿದಿದ್ದ ಮುಂಜಾವು. ಕೆಲವು ಕಿ.ಮೀ.ವರೆಗೆ ಮಂಜಿನ ಮಧ್ಯೆ ಸಾಗಿತು ಕಾರು. ನಿಶಾಂತ ಹಿಂದಿನ ಸೀಟಿನಲ್ಲಿ ಲಗೇಜಿನ ಮಧ್ಯೆ ಆರಾಮವಾಗಿ ಕುಳಿತ. ಕುಣಿಗಲ್ ರಸ್ತೆಯಲ್ಲಿ ಸ್ವಲ್ಪದೂರ ಸಾಗಿದ ನಂತರ ಸೂರ್ಯನ ದರ್ಶನವಾಯಿತು.

ರಾಷ್ಟ್ರೀಯ ಹೆದ್ದಾರಿ ಸಾಕಷ್ಟು ಅಗಲವೂ, ಸ್ವಚ್ಛವೂ ಆಗಿತ್ತು. ಹಾಸನಾಂಬ ಜಾತ್ರೆಗೆ ಹಿಂಡುಗಟ್ಟಿ ಹೊರಟಿದ್ದ ಕಾರುಗಳು, ಒಂದನ್ನೊಂದು ಹಿಂದೆ ಹಾಕಲು ಪ್ರಯತ್ನಿಸುತ್ತ ವೇಗವಾಗಿ ಚಲಿಸುತ್ತಿದ್ದವು. ಅಲ್ಲಲ್ಲಿ ಸಿಗುತ್ತಿದ್ದ ಸುಂಕದ ಕಿಂಡಿ (ಟೋಲ್)ಗಳಿಂದ ನಮ್ಮ ವೇಗಕ್ಕೆ ಆಗಾಗ ಅಡ್ಡಿಯುಂಟಾಗುತ್ತಿತ್ತು. ಸುಂಕ ತೆರಲು ವಾಹನಗಳು ಸಾಲುಗಟ್ಟಿ ನಿಲ್ಲುತ್ತಿದ್ದವು.

ನದಿ ತೀರಗಳಲ್ಲಿ ನಾಗರಿಕತೆ ವಿಕಾಸಗೊಂಡಂತೆ, ಹೆದ್ದಾರಿಯ ಎರಡೂ



ಬದಿ ಅಲ್ಲಲ್ಲಿ ಆಧುನಿಕ ಹೋಟೆಲ್‌ಗಳು ತಲೆಯೆತ್ತಿ ನಿಂತಿರುವುದನ್ನು ಕಾಣಬಹುದಿತ್ತು. ಅವುಗಳ ಮುಂದೆಯೂ ನಿಂತಿದ್ದ ಕಾರುಗಳ ಹಿಂಡು.

ಹಿಂದುಗಡೆ ಏಕ ಸೀಟಾಧಿಪತಿಯಾಗಿದ್ದ ನಿಶಾಂತ, ಎಲ್ಲರೂ ನನ್ನನ್ನು ಮರೆತೇ ಬಿಟ್ಟರಲ್ಲ ಎಂದು ಭಾವಿಸಬಾರದಲ್ಲ ಎಂಬ ನೆನಪಿನಿಂದ, ನಾನು ಆಗಾಗ 'ಅಗೋ ಅತ್ತಕಡೆ ನೋಡು, ಮುಂದುಗಡೆ ಗಮನ ಹರಿಸು!' – ಮುಂತಾಗಿ ಆತನನ್ನು ಪುಸಲಾಯಿಸುತ್ತಿದ್ದೆ.

ಮುಂದಿನ ಸೀಟಿನಲ್ಲಿ ಕುಳಿತಿದ್ದ ಪೂರ್ಣ, 'ಮಾಮಾ, ಆಯಾಸವೆನಿಸಿದರೆ ಹೇಳಿ. ನೀವು ಎಲ್ಲಿ ನಿಲ್ಲಿಸಬೇಕೆನ್ನುತ್ತೀರೋ ಅಲ್ಲಿ ನಿಲ್ಲಿಸಿ ರೆಸ್ಟ್ ತೆಗೆದುಕೊಳ್ಳೋಣ' ಎಂದು ವಿಚಾರಿಸುತ್ತ ನನ್ನ ಬಗ್ಗೆ ಕಾಳಜಿ ತೋರಿಸುತ್ತಿದ್ದಳು.

ಪಕ್ಕದಲ್ಲಿ ಕುಳಿತಿದ್ದ ವಿಜಯಕುಮಾರ್ ಸೀಟ್ ಬೆಲ್ಟ್ ಬಿಗಿದುಕೊಂಡು ಮೊದಲು ಸಣ್ಣಗೆ ತೂಕಡಿಸುತ್ತ, ಅನಂತರ ನಿದ್ದೆಗೆ ಜಾರಿದ್ದರು. ಸ್ವಲ್ಪ ತೂಕಡಿಸಿದರೆ ಆಯಾಸ ನೀಗುತ್ತದೆ ಎಂದುಕೊಂಡು ನಾನೂ ಕಣ್ಣುಮುಚ್ಚಿದೆ. ಎಷ್ಟು ಪ್ರಯತ್ನಿಸಿದರೂ ತೂಕಡಿಕೆ ಬಳಿ ಸುಳಿಯಲಿಲ್ಲ! ಇಂಪಾದ ಸಂಗೀತಕ್ಕೆ ಕಿವಿ ತೆರೆದುಕೊಂಡಿದ್ದೆ.

ಹಿರೀಸಾವೆ ದಾಟುವಷ್ಟರಲ್ಲಿ ಎಲ್ಲರ ಹೊಟ್ಟೆಗಳೂ ಚುರುಗುಡತೊಡಗಿದ್ದವು!

ಸಕಲೇಶಪುರದಿಂದ ಮಂಗಳೂರು ರಸ್ತೆಗೆ ಹೊರಳಿದ ನಂತರ, ಕಾರಿನ ವೇಗ ಕಡಿಮೆಯಾಯಿತು. ಪೂರ್ಣ ಕುರುಕು ತಿಂಡಿಗಳ ಪೊಟ್ಟಣ ಬಿಚ್ಚಿದಳು. ಪ್ರಯಾಣದ ಬೇಸರ ಕಳೆಯುವ ತಂತ್ರ. ಶಾಂತಾ ಮಾಡಿ ತಂದಿದ್ದ ಮುರುಕಿನ ಡಬ್ಬಿ ತೆರೆದಳು. ಅದರ ರುಚಿ ಮತ್ತು ಕುರುಂ ಕುರುಂ ರಘು ಅವರಿಗೆ ಮೆಚ್ಚಾಯಿತು. ಗಾಡಿ ಓಡಿಸುತ್ತಲೇ ಅದನ್ನು ತಯಾರಿಸುವ ವಿಧಾನವನ್ನು ತಿಳಿದುಕೊಳ್ಳಲು ಪ್ರಯತ್ನಿಸಿದರು. ಮುಂದೆ ಸಾಗಿದಂತೆ ಘಾಟಿ ರಸ್ತೆಯಲ್ಲಿ ನಮ್ಮ ಸುಗಮ ಸಂಚಾರಕ್ಕೆ ಭಂಗ ಬಂದಿತು. ಅನೇಕ ಕಡೆ ರಸ್ತೆ ಹಳ್ಳ ತಿಟ್ಟುಗಳಾಗಿ ಮಾರ್ಪಟ್ಟು, ನಮ್ಮ ಮುಂದಿನ ಪ್ರವಾಸ ಸ್ವಲ್ಪ ಪ್ರಯಾಸದ್ದಾಯಿತು!

ಮಧ್ಯಾಹ್ನದ ಊಟದ ಸಮಯಕ್ಕೆ ಬಂಟ್ವಾಳ.

ಅಲ್ಲಿಂದ ನಮ್ಮನ್ನು ಕೊಯಿಲಕ್ಕೆ ಕರೆದೊಯ್ಯಲು ರಾಜು ಹೊಳ್ಳರು ನಮಗಾಗಿ ಕಾಯುತ್ತಿದ್ದರು. ಅವರ ಮಾರ್ಗದರ್ಶನದಲ್ಲಿ ನಾವು ಕೊಯಿಲದತ್ತ ಹೊರಟೆವು. ಹಸಿರು ಕಂಗೊಳಿಸುವ ಹೊಲ ಗದ್ದೆಗಳು ಮತ್ತು ತೆಂಗು, ಅಡಿಕೆ ಮರಗಳು, ಅಲ್ಲಲ್ಲಿ ಅಡಗಿ ಕುಳಿತಂತಿರುವ ಮನೆಗಳ ಮಧ್ಯೆ ಪ್ರಶಾಂತ ಸ್ಥಳದಲ್ಲಿರುವ ಕೊಯಿಲ ಗ್ರಾಮದಲ್ಲಿ, ನೂರು ವರ್ಷಗಳ ಹಿಂದೆ (೧೯೧೬), ಕುಮಾರ ವೆಂಕಣ್ಣ ಹುಟ್ಟಿ ಬೆಳೆದ, ತಿರುಗಾಡಿದ ಪ್ರದೇಶದಲ್ಲಿ ಹೆಜ್ಜೆ ಹಾಕಿದೆವು. ಅವರ ಮೂಲ ಮನೆಗೆ, ಬಂಧು ಬಳಗದವರು ಬದುಕುತ್ತಿರುವ ಮನೆಗಳಿಗೆ, ಅವರ ವಂಶದವರು ಸ್ಥಾಪಿಸಿದ್ದ ನಾಗ ಬನಕ್ಕೆ ಹೋಗಿ ಬಂದೆವು.

ಮರುದಿನವೂ ತಿರುಗಾಟ. ಮಂಗಳೂರಿನಿಂದ ಮೂಡಬಿದರೆ, ಕಾಂತಾವರ ಮುಂತಾದ ಕಡೆಗೆ. ಬೇರೆಬೇರೆ ವ್ಯಕ್ತಿಗಳಿಂದ ಮಾಹಿತಿ ಸಂಗ್ರಹಿಸುವ ಪ್ರಯತ್ನ. ನಿರೀಕ್ಷಿಸಿದಷ್ಟು ಮಾಹಿತಿ ಲಭ್ಯವಾಗದ ಬಗ್ಗೆ ನಿರಾಶೆ. ಸಿಕ್ಕಿದಷ್ಟರಿಂದಲೇ ತೃಪ್ತಿಪಟ್ಟುಕೊಳ್ಳಬೇಕಾಯಿತು.




ಕ್ಯಾಮೆರಾ ಕಂಡಾಗ ಅರಳುವ ಮುಖಗಳು



ಮೀನು ಹರಾಜು – ರಾಜಣ್ಣ

ಈ ಮಧ್ಯೆ, ವೈರಲ್‌ಫೀವರಿನ ಅಡ್ಡ ಪರಿಣಾಮಗಳು ಒಂದೊಂದಾಗಿ ಗಮನಕ್ಕೆ ಬರತೊಡಗಿದವು. ರಾತ್ರಿ ಕಣ್ಣಿಗೆ ನಿದ್ದೆ ಹತ್ತದಿರುವುದು, ಭುಜಗಳ ನೋವು, ಪಾದಗಳು ಸಣ್ಣಗೆ ಬಾತುಕೊಂಡಂತೆ ಕಾಣಿಸಿದ್ದು, ಕಾಲುಗಳು ಸೋತಂತೆ ತಿರುಗಾಡಲು ಶ್ರಮಪಡಬೇಕಾದ್ದು – ಇತ್ಯಾದಿ. ಆದರೆ ಹಿಡಿದ ಕೆಲಸ ಮೊದಲು, ಆಯಾಸ ಗೀಯಾಸವೆಲ್ಲ ಎರಡನೆಯದು ಎಂಬ ಹಟ ನನ್ನದು.

ಒಂದೆರಡು ದಿನಗಳ ಹಿಂದೆ ಅಲ್ಲಿ ಮಳೆಯಾಗಿತ್ತು. ನಮಗೆ ರಿಯಾಯಿತಿ ತೋರಿಸಿತ್ತು! ಬೆಂಗಳೂರಿಗರಿಗೆ ಬಿಸಿಲು ಚುರುಕು ಮುಟ್ಟಿಸುವಂತಿತ್ತು. ಒಂದೆರಡು ಸಲ ಗುರುಪುರ ಹೊಳೆಯ ಸೇತುವೆ ಮೇಲೆ ಹಾಯುವಾಗ "ಅರರೇ ನಿಶಾಂತನಿಗೆ ಸಮುದ್ರ ತೋರಿಸಲೇ ಇಲ್ಲವಲ್ಲ" – ಎನ್ನಿಸಿತು. ದಾರಿಯಲ್ಲಿ ಎಲ್ಲಿಯಾದರೂ ಸಮುದ್ರ ಕಾಣಿಸಿದರೆ ಅಲ್ಲಿಂದಲೇ ಆತನಿಗೆ ತೋರಿಸಿಬಿಡುವುದು ನನ್ನ ಯೋಜನೆ! ಆದರೆ ನಮ್ಮ ದಾರಿಗೆ ಸಮುದ್ರ ಕಾಣಿಸುವಂತಿರಲಿಲ್ಲ.

ನಮ್ಮ ಅಲೆದಾಟದಲ್ಲಿ, ನಾವು ಇಳಿದುಕೊಂಡಿದ್ದ ಬಲ್ಮಠದಲ್ಲಿರುವ ರೂಪಾ ಲಾಡ್ಜ್‌ನಿಂದ ಸಂಜೆ ಅಥವಾ ಮುಂಜಾನೆ ಅತ್ತಿತ್ತ ತಿರುಗಾಡಿದ್ದೂ ಇಲ್ಲ. ಮಾರನೆಯ ದಿನ ಬೆಳಗ್ಗೆ ಎಂಟು ಗಂಟೆಗೆ ನಮ್ಮ ಮರುಪಯಣ.

ಆಗ, ಅಕಸ್ಮಾತ್ ಎಂಬಂತೆ ಸಮುದ್ರತೀರಕ್ಕೆ ಮೀನು ಬಂದಿಳಿಯುವ ದಕ್ಕೆಗೆ ಹೋಗಿಬರುವ ಯೋಜನೆ ರೂಪುಗೊಂಡಿತು. ಯಂತ್ರ ದೋಣಿಯ ಮಾಲೀಕ ಮತ್ತು ಮೀನು ವ್ಯಾಪಾರಿಯಾದ ರಾಜಣ್ಣ ಅಗತ್ಯ ಮಾಹಿತಿ ಒದಗಿಸಲು ನಮ್ಮ ಸಹಾಯಕ್ಕೆ ಬಂದರು. ರಾತ್ರಿ ಮೂರು ಗಂಟೆಗೆಲ್ಲ ಸಮುದ್ರದಿಂದ ಮೀನು ಇಳಿಸುವ ಚಟುವಟಿಕೆ ಪ್ರಾರಂಭವಾಗುತ್ತದಂತೆ. ಆದರೆ ನಮಗೆ ರಿಯಾಯಿತಿ ಎಂಬಂತೆ, ಐದು ಗಂಟೆಯ ವೇಳೆಗೆ ಬರುವಂತೆ ಸೂಚಿಸಿದ್ದರು.

ಮುಂಜಾನೆ ಐದು ಗಂಟೆಗೆ ತಯಾರಾಗಬೇಕಿತ್ತು. ಅಲ್ಲಿಂದ ಏಳು ಗಂಟೆಗೆ ಹಿಂದಿರುಗಿ, ಸ್ನಾನ ತಿಂಡಿ ಮುಗಿಸಿ ಹೊರಟುಬಿಡಬೇಕಿತ್ತು. ಮೀನು ಬಂದರು ನೋಡಲು ನಿಶಾಂತ ಒಪ್ಪಿದ. ವೀಡಿಯೋ ಚಿತ್ರೀಕರಣ ಆತನದ್ದು. ಪೂರ್ಣ ನಮ್ಮ ಮಾರ್ಗದರ್ಶಿ. ಮೊದಲಿಗೆ 'ನೀವು ಬರುವವರೆಗೆ ಒಂದು ನಿದ್ರೆ ತೆಗೆಯುತ್ತೇನೆ' – ಎಂದಿದ್ದ ಶಾಂತಾ, ಕೊನೆಯ ನಿಮಿಷದಲ್ಲಿ ತಾನೂ ತಯಾರಾದಳು.

ಸೂರ್ಯ ಮುಖ ತೋರಿಸಲು ಇನ್ನೂ ಒಂದು ಗಂಟೆಯಷ್ಟು ಸಮಯವಿತ್ತು. ಕಣ್ಣು ಕೋರೈಸುವ ಫ್ಲಡ್ ಲೈಟಿನ ಬೆಳಕಿನಲ್ಲಿ ಚಟುವಟಿಕೆ ನಡೆಯುತ್ತಿತ್ತು. ನಾವು ಒಂದು ಕಡೆ ಇಳಿದು ನಿಧಾನಕ್ಕೆ ನಡೆದೆವು. ಉದ್ದಕ್ಕೂ ಯಂತ್ರದೋಣಿಗಳು ಸಾಲಾಗಿ ಕಿಕ್ಕಿರಿದು ನಿಂತಿದ್ದವು. ದೋಣಿಗಳಿಂದ ಮೀನು ಇಳಿಸುವ ಕೆಲಸ ಭರದಿಂದ ಸಾಗಿತ್ತು.

ಅಲ್ಲಿ ನೆರೆದಿದ್ದ ಜನಸಾಗರ, ಗದ್ದಲ, ಗಡಿಬಿಡಿ 'ಫಿಶ್ ಮಾರ್ಕೆಟ್' ಪದಕ್ಕೆ ಅನ್ವಯವಾಗುವಂತಿತ್ತು. 'ಮೀನುಜಾತ್ರೆ' ಎಂದೂ ಹೇಳಬಹುದಿತ್ತು. ಕನ್ನಡ, ತುಳು, ಕೊಂಕಣಿ, ಮಲಯಾಳ, ಬ್ಯಾರಿ, ಹಿಂದಿ, ಮರಾಠಿ, ತಮಿಳು, ಇಂಗ್ಲಿಷ್ – ಹೀಗೆ ವಿವಿಧ ಭಾಷೆಗಳ ಬಳಕೆ. ಕಿವಿಗಡಚಿಕ್ಕುವಷ್ಟು ಕೂಗಾಟ, ಎಷ್ಟು ಬಗೆಯ, ಎಷ್ಟು ಬಣ್ಣದ, ಎಂತೆಂಥ ಆಕಾರದ ಮೀನುಗಳು! ಪ್ರಕೃತಿ ಭೂಮಿಯ ಮೇಲೆ ಸಾವಿರಾರು ಬಗೆಯ ಗಿಡ, ಮರ, ಹೂವು, ಹಣ್ಣುಗಳನ್ನು ಮತ್ತು ಪ್ರಾಣಿ ಪಕ್ಷಿಗಳನ್ನು ಸೃಷ್ಟಿಸಿದಂತೆ, ಸಮುದ್ರದೊಳಗೆ ಕುಳಿತು ಇಷ್ಟು ವೈವಿಧ್ಯಮಯ ಮೀನುಗಳನ್ನು ಸೃಷ್ಟಿಸಿರುವ ಬಗ್ಗೆ ಅಚ್ಚರಿಪಡದೆ ಇರಲಾಗಲಿಲ್ಲ! ಮೀನು ಪ್ರಿಯರಿಗಂತೂ ಬಾಯಲ್ಲಿ ನೀರೂರುತ್ತದೆ. ಒಂದು ಕ್ಷಣ ಮೈಮರೆತು ನಿಲ್ಲುವಂತಿಲ್ಲ. 'ಸೈಡ್ ಸೈಡ್' ಎಂದು ಬೊಬ್ಬರಿಯುತ್ತ ಮೀನಿನ ಕ್ರೇಟ್‌ಗಳನ್ನು ತಲೆಯ ಮೇಲೆ ಹೊತ್ತು ಲಾರಿಗಳಿಗೆ ತುಂಬಿಸಲು ಹೊರಟಿರುವ ಕೆಲಸಗಾರರ ಕೂಗು. ನಿಂತಲ್ಲಿಂದ ಸರಿಯದಿದ್ದರೆ ಕ್ರೇಟ್‌ನಿಂದ ಕರಗಿದ ಬರ್ಫ ತಲೆಯ ಮೇಲೆ ಸುರಿಯುವುದು ಖಚಿತ.

'ಮೀನು ಬಂದರಿನಲಿ ನಿಂತು ವಾಸನೆಗಂಜಿದಡೆಂತಯ್ಯ' – ಎಂದು ನನ್ನ ಮೂಗಿಗೆ ತಿಳಿವಳಿಕೆ ನೀಡಿ, ಫೋಟೋ ಕ್ಲಿಕ್ಕಿಸತೊಡಗಿದೆ.

ತಲೆಗೆ ಹ್ಯಾಟ್ ಧರಿಸಿ ಮೀನು ಹರಾಜು ಮಾಡುವವರು, ಹರಾಜಿನಲ್ಲಿ ಅವನ್ನು ಕೊಳ್ಳಲು ಮುಕುರಿರುವ ಗ್ರಾಹಕರು. ಇಲ್ಲಿ ಎಲ್ಲವೂ ನಗದು ವ್ಯಾಪಾರ.

ಮೀನುಗಳ ಹೆಸರುಗಳು ತುಳು ಭಾಷೆಯಲ್ಲಿವೆ. ತೇಡೆ, ಕೊಡಂದೆ, ಕಡವಾಯಿ, ಮದ್‌ಮಲ್, ಮಲ್‌ಮಲ್, ಬಂಗುಡೆ, ಭೂತಾಯಿ, ಅಂಜಲ್, ಕಾಣೆ, ಮಾಂಜಿ, ಇರ್ಪೆ, ತೊರಕ, ಬಂಡಸೆ, ಮಂಡೇಲಿ – ಇತ್ಯಾದಿ.

ಆಯಾ ಕಡಲ ತೀರದಲ್ಲಿ ವಾಸಿಸುವ ಮೀನುಗಾರರು ಮೀನುಗಳಿಗೆ ಹೆಸರು ನೀಡುವ ಮಂದಿ. ಮಂಗಳೂರು ತೀರದ ಬಂಗುಡೆ ಅತ್ತ ಮಲಯಾಳ ತೀರದಲ್ಲಿ 'ಐಲ' ಎನ್ನಿಸಿಕೊಳ್ಳುತ್ತದೆ. ಭೂತಾಯಿ ಅಲ್ಲಿ 'ಮತ್ತಿ' ಆಗುತ್ತದೆ. ಶಾರ್ಕ್‌ಅನ್ನು ಅವರು 'ಸುರಾ' ಅನ್ನುತ್ತಾರೆ. ಮತ್ಸ್ಯ ತಜ್ಞರು ಎಲ್ಲ ಜಲಚರಗಳಿಗೆ ಇಟ್ಟಿರುವ ಇಂಗ್ಲಿಷ್ ಹೆಸರುಗಳಿಂದ, ಮಕರೆಲ್– ಬಂಗುಡೆ ಎಂದು, 'ಸಾರ್ಡಿನಿ' ಭೂತಾಯಿ ಎಂದು ಗುರುತಿಸಬಹುದು. ಒಂದು ಮೀನನ್ನು ಇಂಥ ಹೆಸರಿನಿಂದ ಕರೆಯಬೇಕು ಎಂದು ಪೂರ್ವಿಕರಿಗೆ ತೋಚಿದ್ದು ಹೇಗೆ? ಉಳಿದವರು ಅದನ್ನು ವಿರೋಧಿಸದೆ ಒಪ್ಪಿಕೊಂಡದ್ದು ಹೇಗೆ? ಉದಾಹರಣೆಗೆ, ಬಂಗುಡೆಯನ್ನು ನಾವು ಹಾಗೆ ಕರೆಯುವುದಿಲ್ಲ ಎಂದು ಆಗಿನ ತಕರಾರಪ್ಪಗಳು ಕೂಗಾಡಿರಬಹುದೆ? ಇತ್ಯಾದಿ ವಿಚಿತ್ರ ಪ್ರಶ್ನೆಗಳು ತಲೆಯಲ್ಲಿ ಮೂಡಿದವು.

ಒಂದು ಜಾತಿಯ ಮೀನಿಗೆ 'ಮದುಮಗಳು' ಎಂದು ಹೆಸರಿಟ್ಟ ಮಂದಿ ರಸಿಕರೇ ಆಗಿರಬೇಕು!

ಮೀನು ದೋಣಿಗಳ ಸ್ವರೂಪವೂ ಬದಲಾಗಿದೆ. ಒಬ್ಬ ಅಥವಾ ಇಬ್ಬರು ದೋಣಿಗೆ ಹುಟ್ಟುಹಾಕುತ್ತ ಸಮುದ್ರದೊಳಕ್ಕೆ ಸ್ವಲ್ಪ ದೂರ ಹೋಗಿ ಮೀನು ಹಿಡಿಯುವ ಚಿತ್ರ, ಹಾಗೆಯೇ 'ಕಟ್ಟುಮರ' ಮತ್ತು ಹಾಯಿ ದೋಣಿಗಳ ಚಿತ್ರ ನಮ್ಮ ಕಲ್ಪನೆಗೆ ಬರಬಹುದು. ನದಿನೀರು ಮೀನು ಕೃಷಿಯಲ್ಲಿ ಈಗಲೂ ಅವು ಬಳಕೆಯಾಗುತ್ತಿವೆ.

ನಾವು ನೋಡುತ್ತಿದ್ದ ಯಂತ್ರ ದೋಣಿಗಳು ೧೮ರಿಂದ ೨೦ ಅಡಿ ಅಗಲ ಮತ್ತು ೫೫ರಿಂದ ೬೦ ಅಡಿ ಉದ್ದದವು. ೨೦೦ ಅಶ್ವಶಕ್ತಿಯ ಎಂಜಿನ್ ಅಳವಡಿಸಿದವುಗಳು. ಇದರಿಂದ ಅವು ಸಮುದ್ರದಲ್ಲಿ ಗಂಟೆಗೆ ೧೦ ನಾಟಿಕಲ್ ಮೈಲ್ ಕ್ರಮಿಸಲು ಸಾಧ್ಯವಾಗುತ್ತದೆ. ಈ ಯಂತ್ರದೋಣಿಗಳ ಬೆಲೆ ಅಂದಾಜು ೫೦ ಲಕ್ಷದಿಂದ ೧ ಕೋಟಿ ರೂಪಾಯಿಗಳಷ್ಟಾಗುತ್ತದೆ. ಅಳವಡಿಸುವ ಉಪಕರಣಗಳಿಗೆ ತಕ್ಕಂತೆ ಅವುಗಳ ಬೆಲೆ ಮತ್ತಷ್ಟು ಹೆಚ್ಚುತ್ತದೆ. ಮೀನುಗಾರಿಕೆಗಾಗಿ ಪರವಾನಗಿ ಪಡೆದವು. ಈ ದೋಣಿಗಳಲ್ಲಿ ಕ್ಯಾಪ್ಟನ್, ಮೆಕಾನಿಕ್, ಜೊತೆಗೆ ಹತ್ತು ಮಂದಿ ನುರಿತ ಮೀನುಗಾರರಿರುತ್ತಾರೆ. ಒಮ್ಮೆ ತೀರದಿಂದ ಹೊರಟರೆ ತಿರುಗಿ ಬರಲು ಸುಮಾರು ಹತ್ತು ದಿನಗಳಾಗುತ್ತವೆ. ಅದರಲ್ಲಿ ಅಷ್ಟು ದಿನಕ್ಕಾಗುವಷ್ಟು ಡೀಸೆಲ್, ಅಡುಗೆ ಅನಿಲ, ಕುಡಿಯುವ ನೀರಿನ, ಸ್ನಾನದ ನೀರಿನ ಟ್ಯಾಂಕುಗಳು, ಮೀನು ಬಲೆ, ದೊಡ್ಡ ಶೀತಕಗಳು,

ಅಕ್ಕಿ, ಬೇಳೆ, ಅಡುಗೆ ಎಣ್ಣೆ, ಸಾಂಬಾರು ಪುಡಿ, ಪಾತ್ರೆಗಳು ಇತ್ಯಾದಿ ವಸ್ತುಗಳಿರುತ್ತವೆ. ಇವೆಲ್ಲವುಗಳ ಕ್ರಯ ಅಂದಾಜು ಐದು ಲಕ್ಷ ರೂ. ಅವರಿಗಿಷ್ಟವಾದ ಮೀನನ್ನು ಸಾಕಷ್ಟು ತಿನ್ನಲು ಅಡ್ಡಿಯಿಲ್ಲ.

ಅಕಸ್ಮಾತ್ ಯಾರಿಗಾದರೂ ಅಸೌಖ್ಯವಾದರೆ ಪ್ರಥಮ ಚಿಕಿತ್ಸೆಗೆ ಬೇಕಾದ ಔಷಧಿ ಸಾಮಗ್ರಿಗಳಿರುತ್ತವೆ. ಮುಂದಿನ ಹತ್ತು ದಿನ ಅವರಿಗೆ ಬಿಡುವಿರುವುದಿಲ್ಲ. ಮಳೆ ಬರಲಿ, ಬಿಸಿಲಿರಲಿ ಸಂಚರಿಸುವ ಕಡೆ ಬಲೆ ಬೀಸಿ ಮೀನು ಹಿಡಿದು ಶೀತಕಗಳಲ್ಲಿ ಸಂಗ್ರಹಿಸುವ ಕೆಲಸ ಮುಂದುವರಿಯುತ್ತದೆ. ಆಧುನಿಕ ಉಪಕರಣಗಳ ಸಹಾಯದಿಂದ ಹವಾಮಾನ ಸ್ಥಿತಿಯನ್ನು ತಿಳಿದುಕೊಳ್ಳಲು ಸಾಧ್ಯವಿದೆ. ಈ ಮೀನು ಕೃಷಿಕರನ್ನು ಭೂಮಿಯ ಮೇಲಿನ ರೈತರೊಂದಿಗೆ ಹೋಲಿಸಲು ಸಾಧ್ಯವೇ ಇಲ್ಲ. ರೈತರು ಹೊಲಗದ್ದೆಗಳಲ್ಲಿ ಕೆಲಸ ಮಾಡುವಾಗ ಮಳೆ ಬಂದರೆ ಮರದ ಕೆಳಗೆ ನಿಲ್ಲಬಹುದು. ಕೊಡೆ ಬಿಡಿಸಿ ಮನೆಯ ಕಡೆಗೆ ಹೆಜ್ಜೆ ಹಾಕಬಹುದು. ಆದರೆ ಮೀನು ಕೃಷಿ ಹಾಗೆ ಮಾಡಲು ಬಾರದು. ಅವರು ಸಮುದ್ರದ ಅಲೆಗಳ ಮಧ್ಯೆ ತೇಲಾಡುತ್ತ, ಮಳೆ, ಗಾಳಿ ಇತ್ಯಾದಿ ಪ್ರಕೃತಿ ಶಕ್ತಿಗಳ ವಿರುದ್ಧ ಜಾಗರೂಕತೆಯಿಂದ ಹೋರಾಟದ ಕಾಯಕದಲ್ಲಿ ತೊಡಗಿಕೊಳ್ಳುವವರು.



ಒಮ್ಮೆ ಕರೆಯಿಂದ ಹತ್ತು ನಾಟಿಕಲ್ ಮೈಲ್ ಸಮುದ್ರದೊಳಕ್ಕೆ ತಲುಪಿದ ನಂತರ ನೆಲದ ಮೇಲಿನ ಆ ದೋಣಿಯ ಮುಖ್ಯ ಕಚೇರಿಯೊಂದಿಗಿನ ಸಂಪರ್ಕ ಕಡಿದುಹೋಗುತ್ತದೆ. ದೋಣಿ ಇತ್ತ ಕೇರಳ ಎಲ್ಲೆಯವರೆಗೆ. ಅತ್ತ ಮುಂಬೈ ಎಲ್ಲೆಯವರೆಗೆ ಚಲಿಸುತ್ತ ಹತ್ತು ದಿನಗಳಲ್ಲಿ ಸುಮಾರು ಒಂದು ಸಾವಿರ ನಾಟಿಕಲ್ ಮೈಲು ಪ್ರಯಾಣ ಮಾಡಿರುತ್ತದೆ. ಸಮುದ್ರದೊಳಗಿರುವಾಗ ಮುಖ್ಯ ಕಚೇರಿಯೊಂದಿಗೆ ಸಂಪರ್ಕ ಕಳೆದುಕೊಂಡರೂ, ಆಫೀಸಿನಲ್ಲಿ ಜಿ.ಪಿ.ಎಸ್. ಮೂಲಕ ದೋಣಿ ಯಾವ ಪ್ರದೇಶದಲ್ಲಿದೆ ಎಂಬುದನ್ನು ಗುರುತಿಸಬಹುದು. ದೋಣಿಯಲ್ಲಿ ಏನಾದರೂ ಯಾಂತ್ರಿಕ ದೋಷ ಅಥವಾ ಸಿಬ್ಬಂದಿ ಪೈಕಿ ಯಾರಿಗಾದರೂ ಅನಾರೋಗ್ಯ ಉಂಟಾಗಿ ವೈದ್ಯಕೀಯ ಸೇವೆ ಅತ್ಯಗತ್ಯ ಎನ್ನಿಸಿದಾಗ ಕೋಸ್ಟ್‌ಗಾರ್ಡ್ ದೋಣಿಗಳೊಂದಿಗೆ ಸಂಪರ್ಕ ಗಳಿಸಿ ಅವರ ಸಹಾಯ ಪಡೆಯಬಹುದಾಗಿದೆ. ಈ ವಿಷಯಗಳಲ್ಲಿ ದೋಣಿಯ ಕ್ಯಾಪ್ಟನ್ ಸೂಕ್ತ ಕ್ರಮ ಕೈಗೊಳ್ಳಲು ಸಮರ್ಥನಾಗಿರಬೇಕಾಗುತ್ತದೆ.

ದೋಣಿಯ ಕ್ಯಾಪ್ಟನ್ ಮತ್ತು ಸಿಬ್ಬಂದಿಗೆ ನಿಗದಿತ ಸಂಬಳದ ವ್ಯವಸ್ಥೆ ಇಲ್ಲ ಎಂದು ತಿಳಿದಾಗ ಆಶ್ಚರ್ಯವಾಯಿತು. ಅವರು ಸಮುದ್ರದಿಂದ ಹೊತ್ತು ತರುವ ಒಟ್ಟು ಇಳುವರಿಯ ಮೊತ್ತದಲ್ಲಿ ಶೇಕಡಾ ಇಷ್ಟೆಂದು ನಿಗದಿಯಾಗಿರುತ್ತದೆ. ಹತ್ತು ದಿನಗಳ ಅವರ ದುಡಿಮೆಗೆ ಸಿಬ್ಬಂದಿಗೆ ಕೆಲವೊಮ್ಮೆ ಕನಿಷ್ಠ ಹತ್ತು ಸಾವಿರದಿಂದ ಇಪ್ಪತ್ತು ಸಾವಿರ ಸಿಗಬಹುದು. ಕ್ಯಾಪ್ಟನ್ನನಿಗೆ ಇನ್ನೂ ಹೆಚ್ಚಾಗಿರುತ್ತದೆ. ಹೆಚ್ಚು ಬೆಲೆ ಬಾಳುವ ಮೀನು ಹೊತ್ತು ತಂದರೆ, ನಿರೀಕ್ಷೆಗೆ ಮೀರಿ ಜೇಬು ತುಂಬುತ್ತದೆ.

ವೈಟ್ ಪಾಂಫ್ರೆಟ್, ಟೈಗರ್ ಪ್ರಾನ್ಸ್, (ಸಿಗಡಿ) ಅಂಜೆಲ್ ಮೀನುಗಳು ದಂಡಿಯಾಗಿ ಸಿಕ್ಕಿದಾಗ ದೋಣಿ ಒಡೆಯರ ಮತ್ತು ಸಿಬ್ಬಂದಿಯ ಅದೃಷ್ಟ ಖುಲಾಯಿಸುತ್ತದೆ! ಹಾವು ಮೀನಿಗೆ ಚೀನಾದಲ್ಲಿ ಬೇಡಿಕೆ ಹೆಚ್ಚು, ಅವು ಭೂಮಿಗೆ ಬಂದಕೂಡಲೇ ವಿಮಾನದ ಮೂಲಕ ಚೀನಾದತ್ತ ಹಾರುತ್ತವೆ! ಎಲ್ಲ ಸಂದರ್ಭಗಳಲ್ಲಿ ಹೆಚ್ಚು ಇಳುವರಿ ನಿರೀಕ್ಷಿಸುವಂತಿಲ್ಲ. ಮೀನು ಹಿಂಡುಗಳು ಮೊಟ್ಟೆ ಇಟ್ಟು ಮರಿ ಮಾಡುವ ಸಂದರ್ಭಗಳಲ್ಲಿ, ಸಮುದ್ರದಲ್ಲಿ ಬಿರುಗಾಳಿ ಬೀಸುವ ದಿನಗಳಲ್ಲಿ ಮೀನುಗಾರರಿಗೆ ಬಿಡುವಿನ ಕಾಲ. ವರ್ಷದಲ್ಲಿ ಕೆಲವೊಮ್ಮೆ ಎರಡು ಮೂರು ತಿಂಗಳು ಅವರು ಬರಿದೆ ಕುಳಿತಿರಬೇಕಾಗಬಹುದು.

ಯಂತ್ರದೋಣಿಗಳ ಸಿಬ್ಬಂದಿ ವಿಶೇಷ ವೃತ್ತಿ ಕೌಶಲಿಗಳು ಮತ್ತು ಪ್ರಕೃತಿಯ ಸ್ವಭಾವಗಳನ್ನು ಗುರುತಿಸಬಲ್ಲ ಸೂಕ್ಷ್ಮ ಮತಿಗಳು ಹಾಗೂ ಅದಕ್ಕೆ ತಕ್ಕಂತೆ ಕಾರ್ಯಪ್ರವೃತ್ತರಾಗುವ ಚುರುಕು ಬುದ್ಧಿಯವರೂ ಆಗಿರಬೇಕು. ಜೊತೆಗೆ, ಅವರ ದೇಹ ದಾರ್ಢ್ಯವೂ ಮುಖ್ಯವಾಗುತ್ತದೆ.

ಸ್ವಲ್ಪ ಬೆಳಕು ಬಂದಂತಿತ್ತು. ಕಿಕ್ಕಿರಿದಿದ್ದ ದೋಣಿಗಳ ನಡುವೆ ನಿಶಾಂತನಿಗೆ ಸಮುದ್ರ ನೋಡಲು ಸಾಧ್ಯವಾಯಿತೋ ತಿಳಿಯಲಿಲ್ಲ. ಆತ ತನ್ನಷ್ಟಕ್ಕೆ ವೀಡಿಯೋ ಚಿತ್ರೀಕರಣದಲ್ಲಿ ತೊಡಗಿದ್ದ. ನಿಧಾನಕ್ಕೆ ತಿರುಗಾಡುತ್ತ, ಮೀನು ರಾಶಿಗಳನ್ನು ನೋಡುತ್ತ, ಮೀನುಗಾರರ ಬದುಕಿನ ಬಗ್ಗೆ ಮತ್ತಷ್ಟು ತಿಳಿದುಕೊಳ್ಳಲು ಅವಕಾಶವಿರಲಿಲ್ಲ. ಆರೂವರೆ ಏಳು ಗಂಟೆಗೆಲ್ಲ ಹೋಟೆಲಿಗೆ ತಲುಪಿ, ಸ್ನಾನ ತಿಂಡಿ ಮುಗಿಸಿ ಹೊರಡಲು ತಯಾರಾಗಬೇಕಿತ್ತು.

ಮಂಗಳೂರಿಗೆ ಬಂದಿರುವ ನಿಶಾಂತನಿಗೆ ಅಲ್ಲಿನ ವಿಶೇಷವಾದ 'ಗಡ್‌ಬಡ್' ಐಸ್‌ಕ್ರೀಮ್ ತೆಗೆಸಿಕೊಡ ಬೇಕೆಂದು ನಿನ್ನೆಯೇ ರಘು ಮತ್ತು ಪೂರ್ಣ ಮಾತಾಡಿಕೊಂಡಿದ್ದರು. ವಾಸ್ತವದಲ್ಲಿ ತಾತ ಮತ್ತು ಅಜ್ಜಿಯರಿಗೆ ಈ ವಿಷಯ ಹೊಳೆದಿರಲಿಲ್ಲ! ನಾವು ಹೊರಡುವ ವೇಳೆಗೆ ಐಸ್‌ಕ್ರೀಮ್ ಪಾರ್ಲರ್‌ಗಳು ಬಾಗಿಲು ತೆರೆದಿರಲಿಲ್ಲ. ದಾರಿಯಲ್ಲಿ ಎಲ್ಲಿಯಾದರೂ ಕೊಡಿಸುವುದೆಂದುಕೊಂಡರು. ನಿಶಾಂತ ಹಿಂದಿನ ಸೀಟಿನಲ್ಲಿ ಆರಾಮ ಕುಳಿತು ಹೊರಗಿನ ದೃಶ್ಯಗಳನ್ನು ನೋಡುವುದರಲ್ಲಿ ಮಗ್ನನಾಗಿದ್ದ. ತೆಂಗು ಮತ್ತು ಅಡಿಕೆ ಮರಗಳ ನಡುವಣ ವ್ಯತ್ಯಾಸ ತಿಳಿದುಕೊಂಡ. ಕಾಫಿ ಗಿಡ ನೋಡಬೇಕೆಂಬ ಆತನ ಆಶಯವನ್ನು ಕಾರಿನಲ್ಲಿ ಕುಳಿತಂತೆಯೇ ಪೂರೈಸಿದೆವು. ಹಿಂದಿರುಗುವ ದಾರಿಯಲ್ಲಿ ಒಂದು ಕಡೆ ವಿಜಯಕುಮಾರರು ಅಂಗಡಿಗಳಲ್ಲಿ ಉಪ್ಪಿಗಾಗಿ ಹುಡುಕಾಟ ನಡೆಸಿದ್ದನ್ನು ಕಂಡು ನನಗೆ ಆಶ್ಚರ್ಯವಾಯಿತು! ಅವರು ಹುಡುಕಿದ್ದು ಸಿಕ್ಕಲಿಲ್ಲ. ತೆಂಗಿನ ಮರಗಳ ಬುಡಕ್ಕೆ ಸುರಿಯಲು ತೋಟದವರು ಮೂಟೆಗಟ್ಟಲೆ ಉಪ್ಪು ಖರೀದಿಸುತ್ತಾರಂತೆ!

ಮತ್ತೊಂದು ಕಡೆ ಗುಳ್ಳಬದನೆ, ಮಂಗಳೂರು ಸೌತೆ, ಇನ್ನೊಂದು ಕಡೆ ಅನಾನಸ್ ಹಾಗೂ ಪೇರಳೆ ಕಾಯಿ ಖರೀದಿಸಿ ಮೂರು ಚೀಲಗಳಿಗೆ ತುಂಬಿಸಿದರು. ಸಕಲೇಶಪುರದಲ್ಲಿ ಕಾಫಿಪುಡಿ ಖರೀದಿಸಿದರು.

ಸ್ವಲ್ಪ ದೂರ ಪೇರಳೆ ಉಪ್ಪಿನಕಾಯಿ ತಯಾರಿಸುವ ಕುರಿತು ವಿಚಾರ ವಿನಿಮಯ ನಡೆಯಿತು!

ರಘು ಮತ್ತು ಪೂರ್ಣ ದಾರಿಯುದ್ದಕ್ಕೂ ಐಸ್‌ಕ್ರೀಮ್ ಸಿಗುವ ಸ್ಥಳಗಳನ್ನೇ ಸೂಕ್ಷ್ಮವಾಗಿ ಗಮನಿಸತೊಡಗಿದರು! ಕುಣಿಗಲ್ ಸಮೀಪದಲ್ಲಿ ಒಂದು ಬೋರ್ಡ್ ಕಣ್ಣಿಗೆ ಬಿತ್ತು. ಅಲ್ಲೂ ಕಾರುಗಳು!

ಅಲ್ಲಿಗೆ ತಲುಪುವ ವೇಳೆಗೆ ನಿಶಾಂತನಲ್ಲಿ ಏನೋ ಪರಿವರ್ತನೆಯಾಗಿತ್ತು. 'ಗಡ್‌ಬಡ್'ಗಿಂತ, ಟೀ ಕುಡಿಯುತ್ತೇನೆಂದು ನಮ್ಮೆಲ್ಲರನ್ನೂ ಆಶ್ಚರ್ಯಗೊಳಿಸಿದ.

ಅಲ್ಲಿಂದ ಹೊರಟನಂತರ ಅಜ್ಜಿ–ಮೊಮ್ಮಗನ ನಡುವೆ ನಡೆಯುತ್ತಿದ್ದ ಮಾತುಕತೆಯಿಂದ ನಾವು ಉಳಿದುಕೊಂಡಿದ್ದ ಹೋಟೆಲಿನ ಅಲೆಮಾರಿನಲ್ಲಿ ನನ್ನ ಒಂದು ಪ್ಯಾಂಟ್ ಮತ್ತು ಶರ್ಟ್ ಬಿಟ್ಟು ಬಂದಿರುವುದು ತಿಳಿದುಬಂತು. ಎಷ್ಟೋ ಕಡೆಗಳಿಗೆ ಪ್ರವಾಸ ಮಾಡಿದ್ದೇವೆ. ಈವರೆಗೆ ಏನನ್ನೂ ಮರೆತುಬಂದಿದ್ದಿಲ್ಲ ಎಂದು ಶಾಂತಾ ಲೊಚಗುಟ್ಟಿದಾಗ, ಚಿಂತೆಯಿಲ್ಲ – ಎಂದು ನಾನೇ ಸಮಾಧಾನಪಡಿಸಿದೆ.

ಮನೆಗೆ ಹಿಂದಿರುಗಿ, ಪ್ಯಾಂಟ್ – ಶರ್ಟ್ ಬಿಟ್ಟುಬಂದದ್ದನ್ನು ಖಚಿತಪಡಿಸಿಕೊಂಡನಂತರ, ಪೂರ್ಣ ಕೂಡಲೇ ರಾಜಣ್ಣನವರಿಗೆ ಫೋನು ಮಾಡಿ ವಿಷಯ ತಿಳಿಸಿದಳು. ಮರುದಿನ ನಾವು ಕಳೆದುಕೊಂಡೆವೆಂದು ಭಾವಿಸಿದ್ದ ಉಡುಪು ಸಿಕ್ಕಿರುವ ಬಗ್ಗೆ ಮಾಹಿತಿ ಸಿಕ್ಕಿತು. ಒಂದೆರಡು ವಾರಗಳ ನಂತರ ಅವನ್ನು ನಮಗೆ ತಲುಪಿಸಲು ರಾಜಣ್ಣ ಸಹಾಯ ಮಾಡಿದರು!

---

**ಚಿತ್ರಲೇಖನ : ಪರಂಜ್ಯೋತಿ**

ನಂ. ೧೦, ೧ನೇ ಮಹಡಿ, ೨೧–ಬಿ ಕ್ರಾಸ್, ಶ್ರೀರಾಮ ದೇವಾಲಯದ ರಸ್ತೆ, ಈಜಿಪುರ
ವಿವೇಕನಗರ ಅಂಚೆ, ಬೆಂಗಳೂರು – ೫೬೦ ೦೪೭

# ಮೋದಿಯವರ ಹ್ಯಾಟ್ ಟ್ರಿಕ್ ಅವಘಡಗಳು!







ಮೂಲ : **ಎನ್. ಸುಂದರಮೂರ್ತಿ,** ಕನ್ನಡಕ್ಕೆ : **ವಿ. ಎನ್. ಉಷಾ**

ಪ್ರಧಾನ ಮಂತ್ರಿ ನರೇಂದ್ರ ಮೋದಿ ಅಧಿಕಾರದ ಗದ್ದುಗೆಯನ್ನು ಏರುವ ಸಂದರ್ಭದಲ್ಲಿ ಅತ್ಯೋನ್ಮತ್ತರಂತೆ ಕಂಡುಬಂದರು. "ನನಗೆ ೧೦೦ ದಿನಗಳ ಅವಕಾಶ ನೀಡಿ. ವಿದೇಶದ ಬ್ಯಾಂಕುಗಳಲ್ಲಿ ಹುದುಗಿಹೋಗಿರುವ ಕಪ್ಪು ಹಣವನ್ನು ಭಾರತಕ್ಕೆ ವಾಪಾಸು ತರುತ್ತೇನೆ ಮತ್ತು ಅದನ್ನು ಭಾರತೀಯರ ಠೇವಣಿಗಳಲ್ಲಿ ಜಮಾ ಮಾಡುತ್ತೇನೆ. ಒಂದೊಮ್ಮೆ ಈ ಕಾರ್ಯದಲ್ಲಿ ನಾನು ವಿಫಲನಾದರೆ ನನ್ನನ್ನು ಸುಟ್ಟುಬಿಡಿ!" ಎಂಬ ಉನ್ಮಾದದ ಮಾತುಗಳನ್ನು ಆಡಿದ್ದರು. ಅಲ್ಲಿಂದ ಇಂದಿಗೆ ೪ ವರ್ಷಗಳು ಸಂದಿವೆ. ೧೦೦೦ ದಿನಗಳಿಗೂ ಮೀರಿ ಕಾಲ ಉರುಳಿದೆ. ಆದರೆ ನುಡಿದಂತೆ ಕಪ್ಪು ಹಣವನ್ನು ಮುಟ್ಟುಗೋಲು ಹಾಕಿಕೊಂಡು ಜನರ ಬ್ಯಾಂಕ್ ಖಾತೆಗೆ ಜಮಾ ಮಾಡುವ ಬದಲು ಮೋದಿಯವರ ಸರ್ಕಾರ ಮಿಲಿಯಾಂತರ ಭಾರತೀಯ ಬ್ಯಾಂಕ್ ಗ್ರಾಹಕರ ಠೇವಣಿ ಹಣವನ್ನು ಲೂಟಿಮಾಡುವ ಹುನ್ನಾರ ನಡೆಸಿದೆ. ಮೋದಿಯವರ ಸರ್ಕಾರ ಜನರು ಬೆವರು ಸುರಿಸಿ ದುಡಿದು ಉಳಿಸಿದ ಹಣವನ್ನು ದುರುಪಯೋಗಮಾಡಿಕೊಳ್ಳುವ ಮೂಲಕ ಆ ಹಣವನ್ನು ಆರ್ಥಿಕವಾಗಿ ಸಂಕಷ್ಟದಲ್ಲಿರುವ ಬ್ಯಾಂಕುಗಳಿಗೆ ಪುನಶ್ಚೇತನ ನೀಡಲು ಬಳಸಿಕೊಳ್ಳುವ ಯೋಜನೆ ಹಾಕಿಕೊಂಡಿದೆ.

೨೦೧೭ರಲ್ಲಿ ಫೈನಾನ್ಶಿಯಲ್ ರೆಸಲ್ಯೂಶನ್ ಅಂಡ್ ಡಿಪಾಸಿಟ್ ಇನ್ಶೂರೆನ್ಸ್ (ಎಫ್‌ಆರ್‌ಡಿಐ) ಹೆಸರಿನಲ್ಲಿ ಮಂಡಿಸಲಾದ ಮಸೂದೆಯು ಪಾರ್ಲಿಮೆಂಟಿನ ಸಮ್ಮತಿಯನ್ನು ಪಡೆದುಕೊಳ್ಳಲು ಈಗ ಪ್ರಸ್ತುತ ಆ ಮಸೂದೆ ಜಂಟಿ ಪಾರ್ಲಿಮೆಂಟರಿ ಸಮಿತಿಯ ಪರಾಮರ್ಶೆಗೆ ನೀಡಲಾಗಿದೆ. ಜನಸಾಮಾನ್ಯರು ಈ ಬೇಯ್ಲ್-ಇನ್ ಪದಪುಂಜದ ಬಗ್ಗೆ ತೀವ್ರ ಕಳವಳಗೊಂಡಿದ್ದಾರೆ. ತಮ್ಮ ಉಳಿತಾಯದ ಹಣ ಸುರಕ್ಷಿತವಾಗಿರಲಿ ಎಂಬ ದೃಷ್ಟಿಯಿಂದ ಮಿಲಿಯಾಂತರ ಜನ ತಮ್ಮ ಹಣವನ್ನು ಬ್ಯಾಂಕುಗಳ ಸ್ಥಿರ ಠೇವಣಿಯಲ್ಲಿ ಹೂಡಿಕೆ ಮಾಡಿರುತ್ತಾರೆ. ಆದರೆ ಪ್ರಸ್ತುತ ಬೇಯ್ಲ್-ಇನ್ ಕಲಮಿನ ಅನ್ವಯ ಸಂಕಷ್ಟದಲ್ಲಿರುವ ಬ್ಯಾಂಕುಗಳು ಜನರ ಈ ಉಳಿತಾಯದ ಹಣದ ಮೇಲೆ ಕಣ್ಣುಹಾಕಿವೆ. ಸಾಮಾನ್ಯ ಜನ ಈಗಲೂ ತಮ್ಮ ಠೇವಣಿಯ ಹಣಕ್ಕೆ ಬ್ಯಾಂಕುಗಳ ಖಾತ್ರಿ, ಹೊಣೆಗಾರಿಕೆಯನ್ನು ನಂಬಿದ್ದಾರೆ. ಭಾರತದಲ್ಲಿ ಡೆಪಾಸಿಟ್ ಇನ್ಶೂರೆನ್ಸ್ ಅಂಡ್ ಕ್ರೆಡಿಟ್ ಗ್ಯಾರಂಟಿ ಕಾರ್ಪೊರೇಷನ್, ಪ್ರತಿ ಗ್ರಾಹಕನ ತಲಾ ೧ ಲಕ್ಷ ರೂಪಾಯಿವರೆಗಿನ ಠೇವಣಿಯ ಹಣಕ್ಕೆ ಖಾತ್ರಿ ನೀಡುತ್ತದೆ.

ಆದರೆ ಈ ಎಫ್‌ಆರ್‌ಡಿಐ ಮಸೂದೆಯು ಜನರಲ್ಲಿ (ಠೇವಣಿದಾರರಲ್ಲಿ) ಭಯ, ಆತಂಕ, ಗಾಬರಿಯನ್ನು ಹುಟ್ಟುಹಾಕಿದೆ. ಇಲ್ಲಿ ಉದ್ಭವಿಸುತ್ತಿರುವ ಪ್ರಶ್ನೆ ಎಂದರೆ, ಆರ್ಥಿಕವಾಗಿ ಮುಳುಗುತ್ತಿರುವ ಬ್ಯಾಂಕುಗಳ ದ್ರವ್ಯತಾ ಶಕ್ತಿಯನ್ನೂ ಮರುಪೂರಣಗೊಳಿಸಲು ಇದು ಸರ್ಕಾರ ನಡೆಸುತ್ತಿರುವ ಹುನ್ನಾರವೇ? ಇದು ನಿಜವಾದರೆ ಠೇವಣಿದಾರರು ತಮ್ಮ ಠೇವಣಿ ಹಣವನ್ನು ಮರಳಿ ಪಡೆಯಲು ಸಾಧ್ಯವಿಲ್ಲವೇ? ಬ್ಯಾಂಕು ಗ್ರಾಹಕರ ಹಿತರಕ್ಷಣೆ ಮಾಡಬೇಕಾದ ಸರ್ಕಾರದ ನಡಾವಳಿ "ಬೇಲಿಯೇ ಎದ್ದು ಹೊಲ ಮೇಯ್ದಂತೆ" ಎಂಬಂತಾಗಿದೆ.

ದೊಡ್ಡ ಮೊತ್ತದ ಠೇವಣಿದಾರರು, ದೊಡ್ಡ ತಿಮಿಂಗಲಗಳು, ಸರ್ಕಾರದ ಬದಲಾಗುತ್ತಿರುವ ಧೋರಣೆಗಳ ಆಂತರಿಕ ಮಾಹಿತಿಯನ್ನು ಕೂಡಲೇ ಪತ್ತೆಹಚ್ಚುವ ಸಾಮರ್ಥ್ಯ ಹೊಂದಿದ್ದು, ಅದಕ್ಕೆ ತಕ್ಕಂತೆ ತಮ್ಮ ಹೂಡಿಕೆಯನ್ನು ಪರ್ಯಾಯ ಆಯ್ಕೆಗಳ ಕಡೆಗೆ ಹರಿಸುವ ಅವಕಾಶ ಹೊಂದಿದ್ದಾರೆ. ಆದರೆ ಈ ಬೇಯ್ಲ್-ಇನ್ ಸುಳಿಗೆ ಸಿಕ್ಕಿಹಾಕಿಕೊಂಡು ಸಂದರ್ಭ ಎದುರಿಸುವ ಅನಿವಾರ್ಯತೆ ಸಣ್ಣ ಉಳಿತಾಯದಾರರ ತಲೆಗೆ ಬರುತ್ತದೆ.

ಇಲ್ಲಿ ಉದ್ಭವಿಸುವ ಮೂಲಭೂತ ಪ್ರಶ್ನೆ ಎಂದರೆ – ಬ್ಯಾಂಕುಗಳ ಈ ಆರ್ಥಿಕ ಬವಣೆಗೆ ಕಾರಣಗಳೇನು? ಏಕೆ ಕೆಲವು ಬ್ಯಾಂಕುಗಳು ಆರ್ಥಿಕ ದಿವಾಳಿತನದ ಅಂಚಿಗೆ ಬಂದು ನಿಂತಿವೆ? ಬಹುಶಃ ಇದಕ್ಕೆ ಕಾರಣ ಎಂದರೆ, ಬ್ಯಾಂಕುಗಳ ಕಾರ್ಯ ನಿರ್ವಹಿಸದ ಸ್ವತ್ತುಗಳು (ಎನ್‌ಪಿಎ) ಅತ್ಯಂತ ವೇಗವಾಗಿ ಹೆಚ್ಚಳವನ್ನು ಕಾಣುತ್ತಿರುವುದು. ಒಂದು ಮಧ್ಯಮ ಅಂದಾಜಿನ ಪ್ರಕಾರ ಈ ಕಾರ್ಯ ನಿರ್ವಹಿಸದ ಸ್ವತ್ತುಗಳ ಮೌಲ್ಯ ರೂಪಾಯಿ ೮ ಲಕ್ಷ ಕೋಟಿಯಷ್ಟಿದೆ. ಏತನ್ಮಧ್ಯೆ ಬ್ಯಾಂಕುಗಳು ಲಾಭವನ್ನು ಗಳಿಸುತ್ತಿವೆ. ಆದರೆ ಈ ಲಾಭಾಂಶದ ಬಹುಪಾಲು, ಮರುಪಾವತಿಯಾಗಬೇಕಾದ ಸಾಲಗಳ ಮನ್ನಾ ಮಾಡುವಿಕೆಗೆ ಬಳಸಲ್ಪಡುತ್ತಿದೆ.

## ಎಫ್‌ಆರ್‌ಡಿಐ ಮಸೂದೆ–ಬ್ಯಾಂಕ್ ಠೇವಣಿದಾರರ ಮೇಲೆ ಅದರ ಪ್ರಭಾವ

- ಬ್ಯಾಂಕಿಂಗ್ ವ್ಯವಸ್ಥೆಯೊಂದಿಗೆ ಅತ್ಯಂತ ನಂಬಿಕೆ, ವಿಶ್ವಾಸವನ್ನು ಹೊಂದಿದ ಸಾಮಾನ್ಯ ಜನರು ಬ್ಯಾಂಕಿನೊಂದಿಗೆ ತಮ್ಮ ಹಣವನ್ನು ಠೇವಣಿಯ ರೂಪದಲ್ಲಿ ಇಡುತ್ತಾರೆ. ಇದರ ಹಿಂದಿನ ಉದ್ದೇಶಗಳೆಂದರೆ, ತಮ್ಮ ಠೇವಣಿಯ ಮೇಲೆ ನಿರ್ದಿಷ್ಟ ಪ್ರಮಾಣದ ಬಡ್ಡಿಯನ್ನು ಗಳಿಸುವುದು ಮತ್ತು ತಮ್ಮ ಹಣವನ್ನು ಅಗತ್ಯ ಬಿದ್ದಾಗ ಹಿಂಪಡೆಯುವುದು.
- ಬ್ಯಾಂಕುಗಳು ರಾಷ್ಟ್ರೀಕರಣವಾದಾಗಿನಿಂದ ಇಲ್ಲಿಯವರೆಗೆ ಯಾವ ಬ್ಯಾಂಕೂ ದಿವಾಳಿಯಾದ ಉದಾಹರಣೆಗಳಿಲ್ಲ. ಅದಕ್ಷ ಕಾರ್ಯ ನಿರ್ವಹಣೆಯ ಬ್ಯಾಂಕುಗಳನ್ನು ಇತರೆ ಬ್ಯಾಂಕುಗಳೊಂದಿಗೆ ವಿಲೀನಗೊಳಿಸಲಾಗಿದೆ ಮತ್ತು ಸಾರ್ವಜನಿಕರ ಠೇವಣಿ ಹಣವು ಸುಭದ್ರವಾಗಿದೆ.
- ೧೯೬೧ರಲ್ಲಿ ಭಾರತದ ಸಂಸತ್ತು "ಡೆಪಾಸಿಟ್ ಇನ್ಶೂರೆನ್ಸ್ ಮತ್ತು ಕ್ರೆಡಿಟ್ ಗ್ಯಾರೆಂಟಿ ಕಾರ್ಪೊರೇಷನ್" ಕಾಯ್ದೆಯನ್ನು ಜಾರಿಗೊಳಿಸಿತು. ಇದರ ಅನ್ವಯ ಬಡ್ಡಿಯೂ ಸೇರಿದಂತೆ ೧ ಲಕ್ಷ ರೂಪಾಯಿ ಮೌಲ್ಯದವರೆಗಿನ ಹಣ ಬ್ಯಾಂಕುಗಳ ವಿಮಾ ವ್ಯಾಪ್ತಿಗೆ ಒಳಪಟ್ಟು ಸುರಕ್ಷಣಾ ಖಾತ್ರಿ ಹೊಂದಿರುತ್ತದೆ. ಆದರೆ ೧ ಲಕ್ಷ ರೂ. ಮಿತಿಯ ಮೇಲ್ಪಟ್ಟ ಯಾವುದೇ ಹಣಕ್ಕೆ ರಕ್ಷಣೆ ಅಥವಾ ಭದ್ರತೆ ಇರುವುದಿಲ್ಲ. ಅಂದರೆ ಒಂದು ವೇಳೆ ಬ್ಯಾಂಕು ಆರ್ಥಿಕವಾಗಿ ಮುಳುಗುವ ಪರಿಸ್ಥಿತಿ ಬಂದಾಗ, ಒಬ್ಬ ಠೇವಣಿದಾರ ತನ್ನ ೧ ಲಕ್ಷಕ್ಕೂ ಮೀರಿದ ಠೇವಣಿ ಹಣಕ್ಕೆ ಯಾವುದೇ ಭದ್ರತೆ ಇಲ್ಲದೆ ಕಳೆದುಕೊಂಡು ನಷ್ಟ ಅನುಭವಿಸಬೇಕಾಗುತ್ತದೆ.
- ದಿ ಡೆಪಾಸಿಟ್ ಇನ್ಶೂರೆನ್ಸ್ ಮತ್ತು ಕ್ರೆಡಿಟ್ ಗ್ಯಾರೆಂಟಿ ಕಾರ್ಪೊರೇಷನ್ ರಿಸರ್ವ್ ಬ್ಯಾಂಕಿನ ಒಂದು ಸಹವರ್ತಿ ಸಂಸ್ಥೆ.
- ಎಫ್‌ಆರ್‌ಡಿಐ ಮಸೂದೆಯ ಅನ್ವಯ, ಠೇವಣಿಗಳ ಮೇಲಿನ ವಿಮೆಯನ್ನು ಕುರಿತ ಸಂಗತಿಗಳು ಅಸ್ಪಷ್ಟವಾಗಿವೆ.
- ಎಫ್‌ಆರ್‌ಡಿಐ ಮಸೂದೆಯ ಅನ್ವಯ ಬೇಯ್ಲ್–ಇನ್ ಆಯ್ಕೆ ನೀಡಲಾಗಿದೆ. ಇದರ ಪ್ರಕಾರ, ಠೇವಣಿದಾರರು ತಮ್ಮ ಠೇವಣಿ ರೂಪದ ಹೂಡಿಕೆಯ ಹಣದ ಮೇಲೆ ತಮ್ಮ ನಿಯಂತ್ರಣವನ್ನು, ಅಧಿಕಾರವನ್ನು ಕಳೆದುಕೊಳ್ಳುವ ಎಲ್ಲಾ ಸಾಧ್ಯತೆಗಳು ನಿಚ್ಚಳವಾಗಿದ್ದು, ನಷ್ಟವನ್ನು ಅನುಭವಿಸಬೇಕಾಗುವ ಲಕ್ಷಣಗಳು ಗೋಚರಿಸುತ್ತಿವೆ. ಒಂದು ವೇಳೆ ಬ್ಯಾಂಕು ಹಣಕಾಸಿನ ಮುಗ್ಗಟ್ಟಿನಲ್ಲಿ ಸಿಲುಕಿದಾಗ ಈ ಬೇಯ್ಲ್–ಇನ್ ಕ್ರಮದ ಪ್ರಕಾರ ಬ್ಯಾಂಕ್ ಠೇವಣಿಗಳನ್ನು ಬ್ಯಾಂಕ್ ಷೇರುಪತ್ರಗಳು, ಸೆಕ್ಯೂರಿಟಿಗಳಾಗಿ ಪರಿವರ್ತಿಸುವ ಅವಕಾಶವಿದೆ.

  ಸಂಕಷ್ಟದಲ್ಲಿರುವ ಬ್ಯಾಂಕುಗಳನ್ನು ಸರ್ಕಾರ ಹೊರತರುವ ಪ್ರಯತ್ನಕ್ಕೆ ಬದಲಾಗಿ ಸಣ್ಣ ಸಣ್ಣ ಠೇವಣಿದಾರರು ಈ ಆರ್ಥಿಕ ಮುಗ್ಗಟ್ಟಿನ ಬ್ಯಾಂಕುಗಳಿಗೆ ಜಾಮೀನುದಾರರಾಗಿ ಸಹಾಯ ಮಾಡಬೇಕಾದ ಪರಿಸ್ಥಿತಿಯೇ ಎಫ್‌ಆರ್‌ಡಿಐ ಕಾನೂನಿನ ಬೇಯ್ಲ್–ಇನ್ ಉಪವಾಕ್ಯ ಎಂದು ಅರ್ಥೈಸಬಹುದು.
- ಫೈನಾನ್ಷಿಯಲ್ ರೆಸಲ್ಯೂಷನ್ ಕಾರ್ಪೊರೇಷನ್ (ಎಫ್‌ಆರ್‌ಸಿ), ಇದು ಭಾರತೀಯ ರಿಸರ್ವ್ ಬ್ಯಾಂಕ್, ಐಆರ್‌ಡಿಎ ಹಾಗೂ ವೈಯಕ್ತಿಕ ಬ್ಯಾಂಕುಗಳ ಎಲ್ಲಾ ಅಧಿಕಾರಗಳನ್ನು ಅಪಹರಿಸಿಬಿಡುವ ಸಾಧ್ಯತೆಗಳಿವೆ. ನಂತರ ಎಫ್‌ಆರ್‌ಸಿ ತಾನೇ ಸಂಪೂರ್ಣ ಅಧಿಕಾರ ಹೊಂದುವ ಅವಕಾಶವಿದೆ.

  ನಂತರ ಈ ಎಫ್‌ಆರ್‌ಸಿಯಾದರೋ ಸಾರ್ವಜನಿಕ ವಲಯದ ಬ್ಯಾಂಕುಗಳನ್ನು ಅಂಬಾನಿ ಮತ್ತು ಅದಾನಿಯಂಥವರ ಕೈಗೆ ಹಸ್ತಾಂತರಿಸಿಬಿಡಬಹುದು. ಶೇ. ೭೦ರಿಂದ ಶೇ. ೭೫ರಷ್ಟು ಜನರ ಹಣ ಈ ಸಾರ್ವಜನಿಕ ವಲಯದ ಬ್ಯಾಂಕುಗಳಲ್ಲಿ ಠೇವಣಿ ರೂಪದಲ್ಲಿದೆ. ಹೀಗಿರುವಲ್ಲಿ ಎಫ್‌ಆರ್‌ಡಿಐ ಎನ್ನುವುದು ಸಾರ್ವಜನಿಕ ವಲಯದ ಬ್ಯಾಂಕುಗಳ ಖಾಸಗೀಕರಣದ ದಿಸೆಯಲ್ಲಿ ಒಂದು ಅಪಾಯಕಾರಿ ಹೆಜ್ಜೆ.
- ಸ್ಟೇಟ್ ಬ್ಯಾಂಕ್ ಆಫ್ ಇಂಡಿಯಾ ಸೇರಿದಂತೆ ಇತರ ಎಲ್ಲಾ ಹಣಕಾಸಿನ ಸಂಸ್ಥೆಗಳ ಪ್ರಸ್ತುತ ಆಡಳಿತಾತ್ಮಕ ಕಾನೂನನ್ನು, ಈ ಹೊಸ ಎಫ್‌ಆರ್‌ಡಿಐ ಕಾನೂನು ಸಂಪೂರ್ಣ ತಿದ್ದುಪಡಿ ಮಾಡಿಬಿಡುವ ಸಂಭವವಿದೆ. ಆದರೆ ಸ್ಟೇಟ್ ಬ್ಯಾಂಕ್ ಆಫ್ ಇಂಡಿಯಾದ ಕಾನೂನು ಪ್ರಕಾರ ಸ್ಟೇಟ್ ಬ್ಯಾಂಕ್ ದಿವಾಳಿಯಾಗುವ ಸಾಧ್ಯತೆಯೇ ಇಲ್ಲ. ಎಫ್‌ಆರ್‌ಡಿಐ ಮಸೂದೆ, ಸ್ಟೇಟ್ ಬ್ಯಾಂಕ್ ಕಾನೂನನ್ನು ರದ್ದುಗೊಳಿಸುವ ಕ್ರಮವಾಗಬಹುದು.
- ಈ ಉದ್ದೇಶಿತ ಹೊಸ ಕಾನೂನಿನ ಅನ್ವಯ ಬ್ಯಾಂಕುಗಳ ಆರ್ಥಿಕ ದಿವಾಳಿತನದ ಬಗೆಗಿನ ಯಾವುದೇ ಕಾನೂನು ಕ್ರಮ, ಕಟ್ಟಳೆಗಳನ್ನು ಎನ್‌ಸಿಎಲ್‌ಟಿ (ನ್ಯಾಷನಲ್ ಕಂಪನಿ ಲಾ ಟ್ರಿಬ್ಯೂನಲ್)ನ ಹೊರತಾಗಿ ಮತ್ತಾವುದೇ ಕೋರ್ಟ್ ಕೈಗೆತ್ತಿಕೊಳ್ಳುವಂತೆ ಇಲ್ಲ. ಆದರೆ ಪ್ರಸ್ತುತ ಬ್ಯಾಂಕುಗಳು ಕೇವಲ ಬ್ಯಾಂಕಿಂಗ್ ರೆಗ್ಯುಲೇಶನ್ ಆಕ್ಟ್‌ಗೆ ಒಳಪಟ್ಟದಿಯೇ ವಿನಾ ಕಂಪನಿಗಳ ಕಾನೂನಿನ ವ್ಯಾಪ್ತಿಯ ಅಡಿಗೆ ಬರುವುದಿಲ್ಲ.
- ಇಂದು ಬ್ಯಾಂಕುಗಳು ಹಣಕಾಸಿನ ಬಿಕ್ಕಟ್ಟು, ಬಂಡವಾಳದ ಕೊರತೆಯಂತಹ ಸಮಸ್ಯೆಗಳನ್ನು ಎದುರಿಸುತ್ತಿವೆ. ಇದಕ್ಕೆ ಕಾರಣ ಬ್ಯಾಂಕುಗಳ ಕಾರ್ಯ ನಿರ್ವಹಿಸದ ಸ್ವತ್ತುಗಳ ಪ್ರಮಾಣದಲ್ಲಿ ಏರಿಕೆಯಾಗುತ್ತಿರುವುದು. ಅಂದರೆ ಕಾರ್ಪೊರೇಟ್ (ಕೋಟ್ಯಧಿಪತಿಗಳ) ವಲಯವು ಪಡೆದ ಸಾಲದ ಮೊತ್ತ ಬ್ಯಾಂಕಿಗೆ ಹಿಂತಿರುಗಿಸದೇ ಇರುವುದು.
- ಈ ಎಫ್‌ಆರ್‌ಡಿಐ ಕಾನೂನಿನ ಪ್ರಕಾರ, ಬ್ಯಾಂಕುಗಳ ಆರ್ಥಿಕ ನಷ್ಟವನ್ನು ಜನಸಾಮಾನ್ಯರ ಠೇವಣಿ ಹಣವು ತುಂಬಿಕೊಡಬೇಕಾಗುವುದು. ಇದರಿಂದ ಕಾರ್ಪೊರೇಟ್ ಸುಸ್ತಿದಾರ ಕುಳಗಳು ಸಣ್ಣ ಠೇವಣಿದಾರರ ವೆಚ್ಚದಲ್ಲಿ ಜಾಮೀನಿನ ನಿರಾಳತೆ ಹೊಂದುವಂತಾಗುತ್ತದೆ.
- ಈ ಎಫ್‌ಆರ್‌ಡಿಐ ಕಾನೂನು ಜಾರಿಗೊಳ್ಳುತ್ತಿರುವ ಹಿಂದಿನ ಕಾರ್ಯಸೂಚಿ ಪಡೆ ಎಂದರೆ ಅಮೆರಿಕಾ ನಾಯಕತ್ವದ ಅಂತರಾಷ್ಟ್ರೀಯ ಬಂಡವಾಳಗಾರರ ಆದೇಶವೇ ಆಗಿದೆ.
- ಸಹಕಾರಿ ಬ್ಯಾಂಕುಗಳ ವಿಚಾರದಲ್ಲಿಯೂ ಸಹ ಅತ್ಯಂತ ಅಪಾಯಕಾರಿ ಸನ್ನಿವೇಶ ಎದುರಾಗುವ ಸಾಧ್ಯತೆ ಇದೆ. ಈ ಸಹಕಾರಿ ಬ್ಯಾಂಕುಗಳು ವಿಶೇಷವಾಗಿ ಗ್ರಾಮೀಣ ವಲಯದಲ್ಲಿ ಸಣ್ಣ ಸಣ್ಣ ರೈತರು, ಸೀಮಿತ ಜನರ ಬದುಕಿನ ಹಣಕಾಸಿನ ಅಗತ್ಯತೆಗಳನ್ನು ಪೂರೈಸಬಲ್ಲ ಬಂಧು. ಆದರೆ ಈ ಎಫ್‌ಆರ್‌ಸಿ ಸಹಕಾರಿ ಬ್ಯಾಂಕುಗಳನ್ನು ದಿವಾಳಿತನದ ಅಂಚಿಗೆ ತಂದು ನಿಲ್ಲಿಸಬಹುದು. ಇದರಿಂದ ನಮ್ಮ ದೇಶದ ಸಹಕಾರಿ ಸಂಘಗಳ ವ್ಯವಸ್ಥೆಯೇ ಕುಸಿದುಬೀಳುವ ಅಪಾಯವಿದೆ. ಈ ಎಫ್‌ಆರ್‌ಸಿಗೆ ರಾಜ್ಯಗಳ ಹಕ್ಕುಬಾಧ್ಯತೆಗಳನ್ನು ಉಲ್ಲಂಘಿಸುವ ಅವಕಾಶವಿದೆ.
- ಮತ್ತೊಂದೆಡೆ, ಕಾರ್ಮಿಕ ಹಕ್ಕುಗಳ ಉಲ್ಲಂಘನೆಯ ಅತಿರೇಕವನ್ನೂ ತಳ್ಳಿಹಾಕುವಂತಿಲ್ಲ. ಎಫ್‌ಆರ್‌ಸಿ ಉದ್ಯೋಗಾವಕಾಶಗಳನ್ನೇ ತೆಗೆದುಹಾಕಿಬಿಡಬಹುದು ಅಥವಾ ಬ್ಯಾಂಕುಗಳು ಹಲವಾರು ಹಂತಗಳ ನಿರ್ಣಾಯಕ ಬದಲಾವಣೆಗೆ ಒಳಪಡಬೇಕಾದಾಗ, ಬ್ಯಾಂಕುಗಳ ಉದ್ಯೋಗಿಗಳ ಪ್ರತಿಫಲಗಳ ವಿನ್ಯಾಸಗಳಲ್ಲೂ ನಕಾರಾತ್ಮಕ ಬದಲಾವಣೆಗಳು ಸಂಭವಿಸಬಹುದು.
- "ಬೇಯ್ಲ್–ಇನ್ ಎಂದರೆ ಕಾರ್ಪೊರೇಟ್ ವಲಯದ ಸಾಲಗಾರರನ್ನು, ಅಪ್ರಾಮಾಣಿಕ ಮೋಸಗಾರರನ್ನು ಸಾಮಾನ್ಯ ಜನರ ಠೇವಣಿ ಹಣವನ್ನು ಉಪಯೋಗಿಸಿ, ಜಾಮೀನು ಸಹಿತ ಕಾನೂನಿನ ವ್ಯಾಪ್ತಿಯಿಂದ ಪಾರುಮಾಡುವುದು," ಎಂದು ಹೇಳುತ್ತಾರೆ ಎಐಬಿಇಎನ ಪ್ರಧಾನ ಕಾರ್ಯದರ್ಶಿ ಸಿ. ಎಚ್. ವೆಂಕಟಾಚಲಂ.

*(ನ್ಯೂ ಏಜ್ ಪತ್ರಿಕೆಯ ೫೨ನೇ ಸಂಚಿಕೆಯಲ್ಲಿ ಪ್ರಕಟವಾದದ್ದು.)*

ಪಾವತಿಯಾಗದ ಸಾಲಗಳಿಗೆ ತಪ್ಪಿಸಿಕೊಳ್ಳುವ ಒಂದು ಕಳ್ಳ ದಾರಿಯನ್ನು ಮಾಡಿಕೊಡುತ್ತಿವೆ. ಇದು ಬ್ಯಾಂಕುಗಳ ಆರ್ಥಿಕ ಸಂಕಷ್ಟಕ್ಕೆ ಎಡೆಮಾಡಿಕೊಟ್ಟಿದೆ. ಬ್ಯಾಂಕುಗಳು ದುಃಸ್ಥಿತಿ ಅನುಭವಿಸಬೇಕಾಗಿದೆ. ಮಿಲಿಯಾಂತರ ಸಾಮಾನ್ಯ ಗ್ರಾಹಕರು ಇದರಿಂದ ತೊಂದರೆ ಅನುಭವಿಸಬೇಕಾಗಿದೆ. ದೊಡ್ಡ ತಿಮಿಂಗಲಗಳು ನುಣುಚಿಕೊಳ್ಳುತ್ತಿವೆ. ಸರ್ಕಾರ ಈಗಾಗಲೇ ಬ್ಯಾಂಕುಗಳ ಬಂಡವಾಳ ಮರುಪೂರಣಕ್ಕೆ ಆದೇಶವನ್ನೂ ಹೊರಡಿಸಿದೆ.

ಬ್ಯಾಂಕುಗಳ ಈ ಬಂಡವಾಳದ ಕೊರತೆ ನೀಗಿಸಲು ಸರ್ಕಾರ ಕೇಂದ್ರ ಬಜೆಟ್‌ನಲ್ಲಿ ಸಾರ್ವಜನಿಕ ಹಣವನ್ನು ಬಳಸಿಕೊಳ್ಳಲು ಮುಂದಾಗಿದೆ ಮತ್ತು ಬ್ಯಾಂಕುಗಳ ಮರು ಬಂಡವಾಳ ಹೂಡಿಕೆ ಬಾಂಡ್‌ಗಳನ್ನು ಕೊಳ್ಳುವುದರ ಮೂಲಕ ಬ್ಯಾಂಕುಗಳಿಗೆ ಸಹಾಯಹಸ್ತ ನೀಡಲು ಜೀವವಿಮಾ ನಿಗಮ (ಎಲ್‌ಐಸಿ)ದಂತಹ ಹಣಕಾಸಿನ ಸಂಸ್ಥೆಗಳಿಗೆ ಸರ್ಕಾರ ನಿರ್ದೇಶನವನ್ನೂ ನೀಡಲಿದೆ. ಇದು ಒಂದು ವಿಷವರ್ತುಲ, ಚಕ್ರವ್ಯೂಹ. ಈ ಸಾಲಸುಸ್ತೀದಾರರ ವಿರುದ್ಧ, ಕ್ರಿಮಿನಲ್‌ಗಳ ವಿರುದ್ಧ ಮೋದಿ ಸರಕಾರ ಯಾವುದೇ ಕ್ರಿಮಿನಲ್ ಮೊಕದ್ದಮೆಗಳನ್ನು ಏಕೆ ಹೂಡುತ್ತಿಲ್ಲ? ಸುಸ್ತಿದಾರರ ಸಾಲದ ಹಣವನ್ನು ಹಿಂಪಡೆಯಲು ಅವರ ಆಸ್ತಿಗಳನ್ನು ಏಕೆ ಮುಟ್ಟುಗೋಲು ಹಾಕಿಕೊಳ್ಳುತ್ತಿಲ್ಲ? ಕೋಟ್ಯಧಿಪತಿಗಳ ಮೇಲೆ ಕ್ರಮ ಜರುಗಿಸುವ ಹೊರತಾಗಿ ಮೋದಿ ತನ್ನ ಶೌರ್ಯ, ತಾಕತ್ತನ್ನು ಸಾಮಾನ್ಯ ಜನರ ಮೇಲೆ ಪ್ರದರ್ಶಿಸುತ್ತಿದ್ದಾರೆ. ಇದಕ್ಕೆ ತಾಜಾ ಉದಾಹರಣೆ ಎಫ್‌ಆರ್‌ಡಿಐ ಮಸೂದೆ.

ಈ ಎಫ್‌ಆರ್‌ಡಿಐ ಮಸೂದೆಯಾದರೋ, ಫೈನಾನ್ಸಿಯಲ್ ರೆಸಲ್ಯೂಷನ್ ಕಾರ್ಪೊರೇಷನ್ (ಎಫ್‌ಆರ್‌ಸಿ) ಎಂಬ ಹೊಸ ಪ್ರಾಧಿಕಾರವನ್ನು ಹುಟ್ಟುಹಾಕಲಿದೆ. ಇದು ಬ್ಯಾಂಕುಗಳು, ವಿಮಾ ಕಂಪನಿಗಳು ಮತ್ತು ಇತರ ಹಣಕಾಸಿನ ಸಂಸ್ಥೆಗಳ ದ್ರವ್ಯತಾ ಪ್ರಮಾಣವನ್ನು ನಿರ್ಧರಿಸುವ, ಸಂಕಲ್ಪಿಸುವ ಉದ್ದೇಶವನ್ನು ಹೊಂದಿದೆ. ಪ್ರಸ್ತುತ ಬ್ಯಾಂಕುಗಳ ಠೇವಣಿಯ ಮೇಲಿನ ಖಾತ್ರಿಯ ಮಿತಿ ಕನಿಷ್ಠ ೧ ಲಕ್ಷ ರೂಪಾಯಿವರೆಗೆ ಮಾತ್ರ ಇದೆ. ಇನ್ನುಮುಂದೆ ಈ ಖಾತ್ರಿ ಠೇವಣಿಯ ಮೌಲ್ಯವನ್ನೂ ರದ್ದುಗೊಳಿಸಬಹುದು. ಎಫ್‌ಆರ್‌ಸಿ ಇನ್ನೂ ಮುಂದೆ ಈ ಠೇವಣಿ ಖಾತ್ರಿಯ ಮೌಲ್ಯವನ್ನು ನಿರ್ಧರಿಸಲಿದೆ.

೧ ಲಕ್ಷ ರೂಪಾಯಿ ಮೌಲ್ಯದವರೆಗಿನ ಠೇವಣಿಯ ಭದ್ರತೆಯನ್ನು, ಖಾತ್ರಿಯನ್ನು ೧೯೬೫ರಲ್ಲಿ ಡೆಪಾಸಿಟ್ ಇನ್ಶೂರೆನ್ಸ್ ಕಾರ್ಪೊರೇಷನ್ (ಡಿಐಸಿ) ಜಾರಿಗೆ ತಂದಿತ್ತು. ಪ್ರಸ್ತುತ ೨೧೨೫ ವಾಣಿಜ್ಯ ಬ್ಯಾಂಕುಗಳು ಮತ್ತು ಸಹಕಾರಿ ಬ್ಯಾಂಕುಗಳು ಈ ಡಿಐಸಿ ವ್ಯಾಪ್ತಿಯಲ್ಲಿ, ತಮ್ಮ ೧೦೩ ಲಕ್ಷ ಕೋಟಿ ರೂಪಾಯಿಗಳ ಒಟ್ಟು ಠೇವಣಿಯ ಮೌಲ್ಯದಲ್ಲಿ ಕೇವಲ ೩೦ ಲಕ್ಷ ಕೋಟಿಗಳಷ್ಟನ್ನು ಮಾತ್ರ ಈ ಯೋಜನೆಯ ವ್ಯಾಪ್ತಿಗೆ ಒಳಪಡಿಸಿವೆ. ಉಳಿದಂತಹ ಮೌಲ್ಯದ ಠೇವಣಿ ಈ ಭದ್ರತೆಯ ಅಡಿಯಲ್ಲಿ ಬರುವುದಿಲ್ಲ. ಇಂತಹ ಒಂದು ಸ್ಫೋಟಕ ಮಾಹಿತಿಯನ್ನು ಎಐಬಿಇಎ (ಅಖಿಲ ಭಾರತ ಬ್ಯಾಂಕ್ ನೌಕರರ ಸಂಘ) ಬಹಿರಂಗಗೊಳಿಸಿದೆ.

ಆದ್ದರಿಂದ ಬ್ಯಾಂಕುಗಳ ಠೇವಣಿಯ ಮೇಲಿನ ವಿಮೆಯ ಮಿತಿಯನ್ನು ಗಣನೀಯವಾಗಿ ಹೆಚ್ಚಿಸಬೇಕಾಗಿರುವುದು ಅನಿವಾರ್ಯವಾಗಿದೆ. ಅಲ್ಲದೆ ಬ್ಯಾಂಕ್ ಠೇವಣಿಯ ಸಂಪೂರ್ಣ ಹಣದ ಮೌಲ್ಯಕ್ಕೆ ಭದ್ರತಾ ಖಾತ್ರಿ ಒದಗಿಸುವ ಅತ್ಯಂತ ಅವಶ್ಯಕತೆ ಇದೆ. ಇದರಿಂದ ಮಾತ್ರ ಸಾರ್ವಜನಿಕರು ತಮ್ಮ ಉಳಿತಾಯದ ಹಣ ಬ್ಯಾಂಕುಗಳಲ್ಲಿ ಸುರಕ್ಷಿತವಾಗಿದೆ ಎಂಬ ನೆಮ್ಮದಿ ತಾಳಲು ಸಾಧ್ಯ.

ಯಾವಾಗ ಬ್ಯಾಂಕುಗಳ ವ್ಯವಹಾರದೊಂದಿಗೆ ಸಾರ್ವಜನಿಕರ ವಿಶ್ವಾಸದ ಬುನಾದಿ ಅಲುಗಾಡಲು ಪ್ರಾರಂಭಿಸುವುದೋ, ನಂಬಿಕೆ ತೊಡೆದುಹೋಗುವುದೋ ಆಗ ಬ್ಯಾಂಕುಗಳಲ್ಲಿನ ಸ್ಥಿರ ಠೇವಣಿಯ ಮೊತ್ತ ಗಮನಾರ್ಹವಾಗಿ ಕುಸಿಯ ತೊಡಗುತ್ತದೆ. ಇದು ಬ್ಯಾಂಕು ಮತ್ತು ಸಾರ್ವಜನಿಕರ ನಡುವಿನ ನಂಬಿಕಾರ್ಹ ಬಾಂಧವ್ಯವನ್ನು ಸವೆಯುವಂತೆ ಮಾಡುತ್ತದೆ. ಜನರ ಉಳಿತಾಯ ಮನೋಪ್ರವೃತ್ತಿಗೆ ತೊಡಕನ್ನು ಉಂಟುಮಾಡುತ್ತದೆ. ಆದ್ದರಿಂದ ಈ ಸಂಭವನೀಯ ಶಕ್ಯತೆಯ ಭಯ ದೂರಾಗಬೇಕಿದೆ. ಜನರ ನಂಬಿಕೆ, ವಿಶ್ವಾಸವನ್ನು ಕಾಯ್ದುಕೊಳ್ಳಬೇಕಾಗಿದೆ.

ಭಾರತದಲ್ಲಿ ೧೯೧೩ರಿಂದ ೧೯೬೦ರ ನಡುವೆ ಸುಮಾರು ೧೬೦೦ ಖಾಸಗೀ ಬ್ಯಾಂಕುಗಳು ಮುಚ್ಚಿಹೋದವು. ಪರಿಣಾಮವಾಗಿ ಆ ಬ್ಯಾಂಕುಗಳ ಠೇವಣಿದಾರರು ತಮ್ಮ ಉಳಿತಾಯದ ಎಲ್ಲ ಹಣವನ್ನೂ ಕಳೆದುಕೊಳ್ಳ ಬೇಕಾಯಿತು. ಈ ತಗಾದೆಯನ್ನು ಎಐಬಿಇಎನ ವತಿಯಿಂದ ಸಂಸತ್ತಿನ ಮುಂದೆ ತರಲಾಗಿ, ಬ್ಯಾಂಕುಗಳ ನಿಯಂತ್ರಣ ಕಾಯ್ದೆಗೆ ೧೯೬೦ರಲ್ಲಿ ತಿದ್ದುಪಡಿಯನ್ನು ತರಲಾಯ್ತು. ಅಂತೆಯೇ, ಈ ಸೋಲಿನ ಸುಳಿಯಲ್ಲಿ ಸಿಲುಕಿದ ಬ್ಯಾಂಕುಗಳ ಕಾರ್ಯಾಚರಣೆಯನ್ನು ನಿಷೇಧಿಸಲಾಯ್ತು ಮತ್ತು ಅವುಗಳನ್ನು ಇತರ ಬ್ಯಾಂಕು ಗಳೊಂದಿಗೆ ವಿಲೀನಗೊಳಿಸಲಾಯ್ತು. ಆದ್ದರಿಂದ ಈ ಕಳೆದ ೫೫ ವರ್ಷಗಳಲ್ಲಿ ಯಾವ ಖಾಸಗಿ ಬ್ಯಾಂಕು ದಿವಾಳಿತನದ ಅಂಚನ್ನು ತಲುಪಿದರೂ ಅವುಗಳನ್ನು ಬಲಿಷ್ಠ ಬ್ಯಾಂಕುಗಳೊಂದಿಗೆ ವಿಲೀನಗೊಳಿಸಲಾಗುತ್ತಿದೆ. ಯಾವ ಠೇವಣಿದಾರನೂ ತನ್ನ ಠೇವಣಿಯನ್ನು ಕಳೆದುಕೊಳ್ಳುವ ಭಯವಿಲ್ಲದಂತಾಗಿದೆ. ಈ ದಿಸೆಯಲ್ಲಿ ಎಐಬಿಇಎ ನೀಡಿದ ಈ ಕೊಡುಗೆಯ ಪರಂಪರೆ ಮುಂದುವರಿದುಕೊಂಡು ಬರಬೇಕು. ಒಂದೊಮ್ಮೆ ಸರ್ಕಾರ ಎಫ್‌ಆರ್‌ಡಿಐ ಮಸೂದೆಯನ್ನು ಜಾರಿಗೊಳಿಸಿದ್ದೇ ಆದಲ್ಲಿ ಅದರ ಪರಿಣಾಮ ಮಾತ್ರ ಸಂಪೂರ್ಣ ಋಣಾತ್ಮಕ ಅಂಶಗಳಿಂದ ತುಂಬಿರುತ್ತದೆ ಎನ್ನುವುದರಲ್ಲಿ ಸಂಶಯವಿಲ್ಲ. ಆದ್ದರಿಂದ ಈ ಹಿನ್ನೆಲೆಯಲ್ಲಿ ಸರ್ಕಾರವು ರಾಷ್ಟ್ರೀಕೃತ ಬ್ಯಾಂಕುಗಳ ಸಾರ್ವಭೌಮತ್ವದ ಅಧಿಕಾರಕ್ಕೆ ಅವಕಾಶವನ್ನು ನೀಡಬೇಕಾಗಿದೆ. ಅದಕ್ಕಾಗಿ ಸರ್ಕಾರ ಈ ಎಫ್‌ಆರ್‌ಡಿಐ ಮಸೂದೆಯನ್ನು ತಿರಸ್ಕರಿಸಬೇಕು ಮತ್ತು ವಾಪಸ್ ಪಡೆಯಬೇಕು.

ಸದ್ಯದ ಪರಿಸ್ಥಿತಿಯನ್ನು ಅವಲೋಕಿಸಿದರೆ ಅಂತರರಾಷ್ಟ್ರೀಯ ಆರ್ಥಿಕ ಶಕ್ತಿಗಳು, ಬಂಡವಾಳಗಾರರು ತಯಾರಿಸಿರುವ ಈ ಆರ್ಥಿಕ ಸುಧಾರಣೆಗಳ ಕಾರ್ಯಸೂಚಿಯನ್ನು ಮೋದಿ ಸರ್ಕಾರ ತರಾತುರಿಯಲ್ಲಿ ಜಾರಿಗೊಳಿಸಲಿರುವ ಲಕ್ಷಣಗಳು ಗೋಚರಿಸುತ್ತಿವೆ. ಬ್ಯಾಂಕುಗಳ ಮರು ಪಾವತಿಯಾಗದ ಸಾಲಗಳು ದೇಶಕ್ಕೆ ಕಪ್ಪು ಚುಕ್ಕೆಯಾಗಿ ಪರಿಣಮಿಸಿದೆ. ಕಾರ್ಪೊರೇಟ್ ಸುಸ್ತೀದಾರರು ಕಾನೂನಿನ ಚೌಕಟ್ಟಿನ ವ್ಯಾಪ್ತಿಗೆ ಒಳಪಡಬೇಕು, ಅವರ ಆಸ್ತಿಪಾಸ್ತಿಗಳನ್ನು ಮುಟ್ಟುಗೋಲು ಹಾಕಿಕೊಳ್ಳಬೇಕು. ಅಂತೆಯೇ ಅವರ ಸಾಲ ಹಿಂಪಡೆಯುವ ಸರ್ವಪ್ರಯತ್ನಗಳೂ ಆಗಬೇಕು. ಸಾಮಾನ್ಯ ಠೇವಣಿದಾರನ ಠೇವಣಿ ಹಣಕ್ಕೆ ಸರ್ಕಾರ ತನ್ನ ಸಂಪೂರ್ಣ ಭರವಸೆ ನೀಡುವ ಮೂಲಕ ಗ್ರಾಹಕನ ಹಿತಾಸಕ್ತಿಯನ್ನು ರಕ್ಷಿಸಬೇಕು. ಆದರೆ ಇದಕ್ಕೆ ಹೊರತಾಗಿ ಎಫ್‌ಆರ್‌ಡಿಐ ಮಸೂದೆಯು ವಂಚಕರಿಗೆ, ಅಪರಾಧಿಗಳಿಗೆ ಸರ್ವರೀತಿಯ ರಕ್ಷಣೆ ನೀಡುವಲ್ಲಿ ಯೋಜನಾಬದ್ಧ ತಯಾರಿಯಾಗಿದೆ. ಕಾರ್ಪೊರೇಟ್‌ಗಳ ದಿವಾಳಿತನ ದೇಶದ ದಿವಾಳಿತನಕ್ಕೆ ಅಸ್ತಿಭಾರ ಹಾಕುವುದನ್ನು ತಡೆಯಬೇಕು. ಇದು ಎಂದೆಂದಿಗೂ ಸಂಭವಿಸಲು ಅನುವುಮಾಡಿಕೊಡಬಾರದು.

ಈಗಾಗಲೇ ನರೇಂದ್ರ ಮೋದಿ ಅವರು ಆಲೋಚನಾರಹಿತವಾಗಿ ತೆಗೆದುಕೊಂಡ ಎರಡು ಆತುರದ ನಿರ್ಧಾರಗಳಾದ ನೋಟುಗಳ ಅಮಾನ್ಯೀಕರಣ ಮತ್ತು ಜಿಎಸ್‌ಟಿ ಕಾರ್ಯಾಚರಣೆಗಳಿಂದ ದೇಶದಲ್ಲಿ ಗೊಂದಲದ ವಾತಾವರಣ ನಿರ್ಮಾಣವಾಗಿದೆ. ಜನರು ಅತ್ಯಂತ ಹೆಚ್ಚಿನ ಅನಾನುಕೂಲತೆ, ತೊಂದರೆ ಅನುಭವಿಸುವಂತಾಗಿದೆ. ದೇಶದ ಆರ್ಥಿಕ ಪರಿಸ್ಥಿತಿ ಅಲ್ಲೋಲಕಲ್ಲೋಲವಾಗಿದೆ. ಇಷ್ಟು ಸಾಲದೆಂಬಂತೆ ಮೋದಿ ತಮ್ಮ ಮುಂದಿನ ಮೂರನೇ ಅಚಾತುರ್ಯದ ಗುರಿಯನ್ನೂ ಹೊಂದಿದ್ದಾರೆ. ಅದೇ ಎಫ್‌ಆರ್‌ಡಿಐ ಮಸೂದೆ. ಇದೂ ಸೇರಿದರೆ ಮೋದಿಯವರು ಅವಘಡಗಳ ಹ್ಯಾಟ್ ಟ್ರಿಕ್ ಸಾಧಿಸಿದಂತಾಗುತ್ತದೆ. ಪರಿಣಾಮ – ಜನರು ಸರ್ಕಾರದ ವಿರುದ್ಧ ತಿರುಗಿಬೀಳುವ ಪರಿಸ್ಥಿತಿ ನಿರ್ಮಾಣಗೊಳ್ಳುವುದು. ಯಾವ ಕಾರಣಕ್ಕೂ ಮೋದಿ ಜನರು ಕಷ್ಟಪಟ್ಟು ಕೂಡಿಸಿದ ಉಳಿತಾಯದ ಹಣದೊಂದಿಗೆ ಹುಡುಗಾಟ ಆಡಬಾರದು. ಈ ನಿಟ್ಟಿನಲ್ಲಿ ಜನರು ತಮ್ಮ ಪ್ರಜಾಪ್ರಭುತ್ವದ ಹಕ್ಕನ್ನು ಕಳೆದುಕೊಳ್ಳುವಂತಹ ಹುನ್ನಾರಗಳ ವಿರುದ್ಧ ಮೈಯೆಲ್ಲಾ ಕಣ್ಣಾಗಿ ಜಾಗೃತರಾಗಿರಬೇಕಾಗಿದೆ.

**ಕೊನೆಯ ಮೊಳೆ**

ಇಷ್ಟೆಲ್ಲಾ ಆದನಂತರ, ಈ "ಬೇಯ್ಲ್-ಇನ್" ಮತ್ತು "ಬೇಯ್ಲ್-ಔಟ್" ಪದಗಳನ್ನು ತಿಳಿಯಲು ನಮಗೆ ಇಂಗ್ಲಿಷ್ ಪ್ರಾಧ್ಯಾಪಕರು, ಆರ್ಥಿಕ ವಿಶ್ಲೇಷಕರು ಮತ್ತು ಕಾನೂನಿನ ತಜ್ಞರ ಅವಶ್ಯಕತೆ ಇದೆಯೇ ಎಂದು ಪ್ರಶ್ನಿಸಿಕೊಂಡರೆ ಅಂತಿಮವಾಗಿ ಅದರ ತಾತ್ಪರ್ಯವನ್ನು ಒಬ್ಬ ಸಾಮಾನ್ಯ ವ್ಯಕ್ತಿ ಅರ್ಥೈಸಿಕೊಳ್ಳಬೇಕಾಗಿರುವುದು ಇಷ್ಟೇ – **ಮೋಸಗಾರಿಕೆ.**

**ಮೂಲ : ಎನ್. ಸುಂದರಮೂರ್ತಿ**
ಉಪಾಧ್ಯಕ್ಷರು, ಆಲ್ ಇಂಡಿಯಾ ಎಲ್.ಐ.ಸಿ. ಎಂಪ್ಲಾಯೀಸ್ ಫೆಡರೇಷನ್, ಬೆಂಗಳೂರು
**ಕನ್ನಡಕ್ಕೆ : ವಿ. ಎನ್. ಉಷಾ**
ನಂ. ೧೦೦, ೧ನೇ ಅಡ್ಡರಸ್ತೆ, ಸಾರ್ವಭೌಮನಗರ, ಚಿಕ್ಕಲಸಂದ್ರ, ಬೆಂಗಳೂರು – ೫೬೦ ೦೬೧




# ಸಿನಿಮಾ ಪ್ರಸಂಗ

**ಸಿ. ಆರ್. ಕೃಷ್ಣರಾವ್**

ಪುಸ್ತಕವನ್ನೇ ಓದದೆ, ಕಲಾಕೃತಿಯೊಂದನ್ನು ನೋಡದೆ ಅದರ ವಿರುದ್ಧವಾಗಿ ಚಳವಳಿ ನಡೆಸುವ ಪ್ರವೃತ್ತಿ ಬೆಳೆಯುತ್ತಿರುವುದು ಆತಂಕದ ಸಂಗತಿ. ಯಾವುದೋ ಒಂದು ವರ್ಗದ, ಒಂದು ಜನಸಮುದಾಯದ, ಒಂದು ಪಂಥ ಅಥವಾ ಮತದ ಹಿತಾಸಕ್ತಿಯನ್ನು ಕಾಪಾಡಲು, ಇಲ್ಲವೆ ಮಡಿವಂತಿಕೆಯಿಂದ, ಸಂಸ್ಕೃತಿ ಕಾಪಾಡುವ ಹೆಸರಿನಲ್ಲಿ ಆಡಳಿತಾರೂಢವಾಗಿರುವವರು ಪುಸ್ತಕವನ್ನೋ, ಕಲಾಕೃತಿಯನ್ನೋ ಮುಟ್ಟುಗೋಲು ಮಾಡುವುದು ಎಲ್ಲ ದೇಶಗಳಲ್ಲೂ ನಡೆದಿರುವಂಥದ್ದೆ. ನನಗೆ ತಿಳಿದಿರುವ ಹಾಗೆ ಫ್ರಾನ್ಸ್‌ನಲ್ಲಿ ಗುಸ್ತಾವ್ ಫ್ಲಾಬೇರ್‌ನ 'ಮ್ಯಾಡಮ್ ಬಾವರಿ' ಕಾದಂಬರಿಯನ್ನು ನಿಷೇಧಿಸಿದ್ದು, ಇಂಗ್ಲೆಂಡಿನಲ್ಲಿ ಡಿ. ಎಚ್. ಲಾರನ್ಸ್‌ನ 'ಲೇಡಿ ಚಾಟರ್ಲೀಸ್ ಲವರ್ಸ್' ಕಾದಂಬರಿಯ ಕೆಲಭಾಗಗಳನ್ನು ಕಿತ್ತುಹಾಕಿ ಪ್ರಕಟಿಸಿದ್ದು ಶತಮಾನಗಳ ಹಿಂದೆ ಸಂಭವಿಸಿದ ಘಟನೆ. ಎರಡೂ ಪ್ರಕಟಣೆಗಳು ಭಿನ್ನ ಕಾರಣಗಳಿಂದ ಸಾಕಷ್ಟು ದೀರ್ಘಕಾಲ ಓದುಗರಿಗೆ ಲಭ್ಯವಾಗಲಿಲ್ಲ. ನ್ಯಾಯಾಲಯದ ಮೆಟ್ಟಿಲು ಏರಿ ತೀರ್ಮಾನವಾದ ಮೇಲೆ ಓದಲು ಅವಕಾಶವಾಯಿತು. ಆಗಿನಿಂದ ಬೇಕಾದಷ್ಟು ಬದಲಾವಣೆಗಳು ಸಂಭವಿಸಿವೆ. ಎಷ್ಟೊ ಕೃತಿಗಳು ಬೇರೆ ಬೇರೆ ದೇಶಗಳಲ್ಲಿ ಈ ಬಗೆಯ ದಮನಕ್ಕೊಳಗಾಗಿವೆ. ಭಾರತ ವಸಾಹತು ಆಗಿದ್ದಾಗ ಬ್ರಿಟಿಷ್ ಸಾಮ್ರಾಜ್ಯಶಾಹಿಗಳು ಕಟ್ಟುನಿಟ್ಟಾದ ಸೆನ್ಸಾರ್ ನೀತಿ ಅನುಸರಿಸುತ್ತಿದ್ದರು. ಬ್ರಿಟಿಷ್ ಆಡಳಿತದ ವಿರುದ್ಧ ಚಕಾರವೆತ್ತಿದ್ದರೂ ಕೃತಿಯೊಂದು ಮುಟ್ಟುಗೋಲು ಆಗುತ್ತಿತ್ತು, ಪತ್ರಿಕೆಯ ಪ್ರಕಟಣೆ ನಿಂತುಹೋಗುತ್ತಿತ್ತು. ಸ್ವತಂತ್ರ ಭಾರತದಲ್ಲಿ ಕೂಡ ಇಂಥದೇ ಮರ್ದನದ ಬ್ರಿಟಿಷ್ ಸರಕಾರದ ತುಕ್ಕು ಹಿಡಿದ ಕಾನೂನುಗಳನ್ನು ಮುಂದುವರಿಸಿದೆ. ಆಳುವ ವರ್ಗಗಳು ತಮ್ಮ ಸಂಕುಚಿತ ಹಿತಾಸಕ್ತಿಗಳನ್ನು ಕಾಪಾಡಿಕೊಳ್ಳಲು ಅಭಿವ್ಯಕ್ತಿ ಸ್ವಾತಂತ್ರ್ಯದ ಮೇಲೆ ಹಲ್ಲೆ ನಡೆಸುವುದು ಬಹು ಹಿಂದಿನಿಂದಲೂ ನಡೆದುಕೊಂಡು ಬಂದಿರುವುದು.

ಭಾರತದಲ್ಲಿ ಧಾರ್ಮಿಕ ಕಾರಣಗಳಿಗಾಗಿ ನಾಸ್ತಿಕವಾದಿ ಚಾರ್ವಾಕ ಪಂಥದ ಕೃತಿಗಳು ಅಲಭ್ಯವಾದ್ದು ಇತಿಹಾಸ. ಈಗಲೂ ಧರ್ಮದ ಹೆಸರಿನಲ್ಲಿ ಅಂಥ ಉಪಟಳ ನಡೆಯುತ್ತಿರುವುದು ವಿಷಾದದ ಸಂಗತಿ. ಸ್ವತಂತ್ರ ಭಾರತದಲ್ಲಿ ಕೂಡ ಇದೇ ಪ್ರವೃತ್ತಿ ಮುಂದುವರಿಯುತ್ತಿರುವುದೀಗ ಶೋಚನೀಯ. ಸಲ್ಮಾನ್ ರಶ್ದಿಯ ಕೃತಿ 'ಫ್ರೀಡಮ್ ಅಟ್ ಮಿಡ್‌ನೈಟ್' ಮೇಲೆ ಮುಟ್ಟುಗೋಲು, ಎಂ. ಎಫ್. ಹುಸೇನರ ಕಲಾಕೃತಿಗಳ ಮೇಲೆ ನಡೆದ ಹಲ್ಲೆ, ಆತ ದೇಶವನ್ನೇ ತ್ಯಜಿಸುವಂತೆ ಮಾಡಿದ್ದು, ಮುಂತಾದವೆಲ್ಲ ತಲೆತಗ್ಗಿಸುವಂತೆ ಮಾಡಿರುವ ಪ್ರಕರಣಗಳು. ಆಳುವ ವರ್ಗಗಳ ಅವಕೃಪೆಗೆ ಒಳಗಾಗಿರುವ ಪ್ರಕರಣಗಳನ್ನು ಪಟ್ಟಿಮಾಡುವುದು ಈ ಬರಹಕ್ಕೆ ಹೊರತಾದ್ದು. ಕರ್ನಾಟಕದಲ್ಲೂ ಇಂಥವು ಜರುಗಿವೆ. ಮಾಸ್ತಿಯವರ 'ಚಿಕವೀರ ರಾಜೇಂದ್ರ' ಕಾದಂಬರಿ ಬಗ್ಗೆ ನಡೆದ ದಾಂಧಲೆ ನೆನಪಾಗುತ್ತದೆ. ಸದ್ಯ ಕೃತಿ ಮುಟ್ಟುಗೋಲು ಆಗಲಿಲ್ಲ. 'ಧರ್ಮಕಾರಣ' ಕಾದಂಬರಿ 'ಆನುದೇವಾ ಹೊರಗಣವನು' ಕೃತಿಯ ನಿಷೇಧ ಒಂದೆರಡು ಉದಾಹರಣೆಗಳು, ಅಷ್ಟೆ. ಅಭಿವ್ಯಕ್ತಿ ಸ್ವಾತಂತ್ರ್ಯ ಎತ್ತಿಹಿಡಿಯಲು ಎಷ್ಟೇ ಪ್ರತಿಭಟನೆಗಳು ನಡೆದರೂ ಅದರ ಮೇಲೆ ದಾಳಿ ಮಾತ್ರ ಹಾಗೆಯೇ ಮುಂದುವರಿಯುತ್ತಿದೆ.

ಈಚಿನ ದಿನಗಳಲ್ಲಿ ಹಿಂದುತ್ವವಾದಿಗಳ ಪ್ರಾಬಲ್ಯ ಹೆಚ್ಚಿದಂತೆ ಅಭಿವ್ಯಕ್ತಿ ಸ್ವಾತಂತ್ರ್ಯದ ಮೇಲೆ ಹಲ್ಲೆಯೂ ಹೆಚ್ಚುತ್ತಿದೆ. ಹಿಡಿದು ಮುಟ್ಟಿದ್ದಕ್ಕೆಲ್ಲ ಸಂಘಪರಿವಾರದ

ಅಂಗಸಂಸ್ಥೆಗಳಾದ ಹಿಂದೂ ಸಂಘಟನೆಗಳಿಂದ ದಾಂಧಲೆ ನಡೆಯುತ್ತಿದೆ. ಏನು ಓದಬೇಕು, ಏನು ತಿನ್ನಬೇಕು, ಏನು ನೋಡಬೇಕು ಎಂಬುದನ್ನು ನಿರ್ಧರಿಸುವ, ನಿರ್ಬಂಧಿಸುವ ಹಕ್ಕನ್ನು ಹಿಂದುತ್ವವಾದಿಗಳು ಪಡೆದು ಕೊಂಡಿರುವಂತೆ ತೋರುತ್ತಿದೆ ಪರಿಸ್ಥಿತಿ ಅವಲೋಕಿಸಿದಲ್ಲಿ. ಅಧಿಕಾರ ನಡೆಸುತ್ತಿರುವ ಭಾಜಪ ನೇತೃತ್ವದ ಮೋದಿ ಸರಕಾರ ಇಂಥ ದುಷ್ಕೃತ್ಯಗಳನ್ನು ನೋಡಿದರೂ ನೋಡದವರಂತೆ ಕಣ್ಮುಚ್ಚಿ ಕುಳಿತಿದೆ. ಪ್ರಾಯಶಃ ಅಂಚಿನಲ್ಲಿರುವ ಈ ಹಿಂದೂ ಸಂಘಟನೆಗಳನ್ನು ಉದ್ದೇಶ ಪೂರ್ವಕವಾಗಿಯೇ ಹರಿಯಬಿಟ್ಟಿರುವುದಾಗಿ ತೋರುತ್ತದೆ. ಜರ್ಮನಿಯಲ್ಲಿ ಫಾಸಿಸ್ಟರು ಅಧಿಕಾರಕ್ಕೇರಿದಾಗ ಸಂಭವಿಸಿದ ಘಟನೆಗಳಂತೆಯೇ ಹಿಂದುತ್ವವಾದಿಗಳ ಚರ್ಯೆಯೂ ತೋರುತ್ತಿದೆ. ಕಳೆದ ಮೂರು ಚಿಲ್ಲರೆ ವರ್ಷಗಳಲ್ಲಿ ಸಂಭವಿಸಿರುವ ಘಟನೆಗಳನ್ನು ಅವಲೋಕಿಸಿದಲ್ಲಿ, ಹಿಂದುತ್ವವಾದಿಗಳ ಕಾನೂನುಬಾಹಿರ ಚಟುವಟಿಕೆಗಳಿಗೆ ಮೌನಸಮ್ಮತಿ ಇರುವುದು ಎದ್ದುಕಾಣುತ್ತಿದೆ. ಹೊಸ ಹೊಸ ಅವತಾರಗಳಲ್ಲಿ ಹಿಂದೂ ಪರ ಸಂಘಟನೆಗಳು ಹುಟ್ಟಿಕೊಳ್ಳುತ್ತಿವೆ. ಹಿಂದೂ ಧಾರ್ಮಿಕ ಆಚರಣೆಗಳು ಕೂಡ ಸಾಮೂಹಿಕ ರೂಪ ತಾಳುತ್ತಿರುವುದನ್ನು ಕಾಣುತ್ತಿದ್ದೇವೆ. ಇತ್ತೀಚೆಗೆ ಪ್ರಧಾನ ಮಂತ್ರಿ ಮೋದಿಯವರು ಬೆಂಗಳೂರಿನಲ್ಲಿ ಜರುಗಿದ ಸಾಮೂಹಿಕ ಶಂಕರಾಚಾರ್ಯರ ಕೃತಿ ಎನ್ನುವ 'ಸೌಂದರ್ಯ ಲಹರಿ' ಪಠಣ ಕಾರ್ಯಕ್ರಮದಲ್ಲಿ ಭಾಗವಹಿಸಿದ್ದನ್ನು ನೆನಪಿಸಿಕೊಳ್ಳಬಹುದು.

ಇನ್ನೂ ಸೆನ್ಸಾರ್ ಆಗದೆ, ಚಿತ್ರ ತಂಡದವರನ್ನು ಬಿಟ್ಟು ಯಾರೂ ಚಿತ್ರ ನೋಡದೆ ಇರುವ ಚಿತ್ರವೊಂದರ ಕುರಿತು ಅಬ್ಬರದ ಅಭಿಯಾನ ನಡೆದಿರುವುದು ಇದೇ ಮೊದಲ ಬಾರಿ. ಹಿಂದೆ ಎಷ್ಟೋ ಚಿತ್ರಗಳು ಇಂಥ ಮತೀಯ ತುಂಡು ಸಂಘಟನೆಗಳ ಗಲಾಟೆಯನ್ನು ಎದುರಿಸಿವೆ. ಸಂಜಯ್ ಲೀಲ ಬನ್ಸಾಲಿ ನಿರ್ದೇಶನದ, ದೀಪಿಕಾ ಪಡುಕೋಣೆ, ರಣವೀರ ಸಿಂಗ್ ಮತ್ತು ಶಾಹಿದ್ ಕಪೂರ್ ನಟಿಸಿರುವ 'ಪದ್ಮಾವತಿ' ಚಿತ್ರ ಕುರಿತು ನವೆಂಬರ್ ತಿಂಗಳು ನಡೆದ ದೊಡ್ಡ ಆಂದೋಳನ, ಭಾಜಪದ ಕೆಲವು ನಾಯಕರು, ಸಚಿವರು, ಚಿಲ್ಲರೆ ಕಾರ್ಯಕರ್ತರು ನಡೆದುಕೊಂಡ ರೀತಿ ತಲೆ ತಗ್ಗಿಸುವಂಥದ್ದು. ಚಿತ್ರ ತಯಾರಾಗುತ್ತಿದ್ದಾಗಲೇ ರಾಜಾಸ್ಥಾನದಲ್ಲಿ ರಜಪೂತ ಸೇನೆ ಎಂಬ ಹಿಂದುತ್ವವಾದಿ ತುಂಡು ಸಂಸ್ಥೆ ಚಿತ್ರೀಕರಣಕ್ಕೆ ನಿರ್ಮಿಸಿದ್ದ ಸೆಟ್‌ಅನ್ನು ಧ್ವಂಸ ಮಾಡಿತ್ತು. ಚಿತ್ರದಲ್ಲಿ ರಜಪೂತ ಮಹಿಳೆಯರನ್ನು ಅವಮಾನಿಸಲಾಗಿದೆ ಎಂಬುದೇ ಆರೋಪ. ರಾಣಿ ಪದ್ಮಾವತಿ ಪಾತ್ರವಹಿಸಿರುವ ನಟಿ ದೀಪಿಕಾ, ನಿರ್ದೇಶಕ ಲೀಲಾ ಬನ್ಸಾಲಿಯವರ ತಲೆ ತೆಗೆಯಲು ಕೋಟಿಗಟ್ಟಲೆ ಇನಾಮು






*ಪದ್ಮಾವತಿ ನಿರ್ದೇಶಕ ಲೀಲಾ ಬನ್ಸಾಲಿ*

ಪ್ರಕಟಿಸಿದರು ಕೆಲ ಸಂಘಪರಿವಾರದ ನಾಯಕರು. ಆದರೆ ಭಾಜಪದವರೇ ಅಧಿಕಾರದಲ್ಲಿರುವುದರಿಂದ ಅವರಾರ ಮೇಲೂ ಕ್ರಮ ಕೈಗೊಳ್ಳಲಿಲ್ಲ. ಸುಪ್ರೀಮ್ ಕೋರ್ಟು ಮಧ್ಯೆ ಪ್ರವೇಶಿಸಿದ ನಂತರವಷ್ಟೆ ಚಳವಳಿ ಸ್ಥಗಿತಗೊಂಡದ್ದು ಎಂದು ಹೇಳಬಹುದು. 'ಈವರೆಗೂ ಕೇಂದ್ರ ಚಲನಚಿತ್ರ ಪ್ರಮಾಣೀಕರಣ ಮಂಡಳಿಯಿಂದ (ಸೆನ್ಸಾರ್ ಬೋರ್ಡ್) ಪ್ರಮಾಣ ಪತ್ರ ಪಡೆದಿಲ್ಲದ ಸಿನಿಮಾ ಬಗ್ಗೆ ತೀರ್ಮಾನ ನೀಡುತ್ತಿರುವುದು ಸರಿಯಲ್ಲ. ಸೆನ್ಸಾರ್ ಬೋರ್ಡ್‌ನಿಂದ ಸಿನಿಮಾಗೆ ಅನುಮೋದನೆ ದೊರೆಯುವವರೆಗೆ ವಿವಿಧ ರಾಜ್ಯಗಳ ಮುಖ್ಯಮಂತ್ರಿಗಳು, ಸಚಿವರುಗಳು ಸೇರಿದಂತೆ ಸಾರ್ವಜನಿಕ ಹುದ್ದೆಗಳಲ್ಲಿರುವವರು ಹೇಳಿಕೆಗಳನ್ನು ನೀಡುವುದನ್ನು ನಿಲ್ಲಿಸಬೇಕು.' ಈರೀತಿ ಸುಪ್ರೀಮ್ ಕೋರ್ಟು ತಾಕೀತು ಮಾಡಿದ ನಂತರ ಸ್ತಬ್ಧವಾಗಿದೆ ಚಳವಳಿ. ರಾಜಾಸ್ಥಾನದಲ್ಲಿ ಪ್ರಾರಂಭವಾದ ಸಿನಿಮಾ ವಿರುದ್ಧ ಗಲಾಟೆ ಮಧ್ಯಪ್ರದೇಶ, ಉತ್ತರಪ್ರದೇಶ ಹಾಗೂ ಇತರ ಭಾಜಪ ಸರಕಾರಗಳಿರುವ ರಾಜ್ಯಗಳಿಗೂ ಪಸರಿಸಿತು. ಹೊಸದಾಗಿ ಭಾಜಪದ ಹಿಂದೆ ಬಿದ್ದಿರುವ ಬಿಹಾರದ ಮುಖ್ಯಮಂತ್ರಿ ನೀತೀಶ್ ಕುಮಾರ್ ರಾಜ್ಯದಲ್ಲಿ ಚಿತ್ರದ ಬಿಡುಗಡೆಗೆ ಅವಕಾಶ ನೀಡುವುದಿಲ್ಲ ಎಂದು ಹೇಳಿಕೆ ನೀಡಿದರು. ಚಿತ್ರ ಡಿಸೆಂಬರ್ ೧ರಂದು ಬಿಡುಗಡೆಯಾಗಬೇಕಿತ್ತು. ಈಗ ತೀರ್ಮಾನ ಸೆನ್ಸಾರ್ ಬೋರ್ಡಿನ ಮೇಲಿದೆ."

'ಊರಿಗೊಬ್ಬಳೆ ಪದ್ಮಾವತಿ ಅಲ್ಲ' ಎಂಬ ಮಾತಿದೆ ಕನ್ನಡದಲ್ಲಿ, ಹಾಗೆಯೇ ನೂರಾರು ಪದ್ಮಾವತಿ ಪ್ರಸಂಗಗಳಿವೆ ಇತಿಹಾಸದಲ್ಲಿ, ಸಾಹಿತ್ಯದಲ್ಲಿ. ಬನ್ಸಾಲಿ ಅವರ 'ಪದ್ಮಾವತಿ' ೧೫೪೦ರಲ್ಲಿ ಸೂಫಿ ಕವಿ ಮಾಲಿಕ್ ಮಹಮ್ಮದ್ ಜಯಸಿ ವಿರಚಿತ 'ಪದ್ಮಾವತ್' ಎಂಬ ಕಾವ್ಯದ ಮೇಲೆ ಆಧಾರಿತವಾಗಿರುವ ಚಿತ್ರ. ೧೫–೧೬ನೇ ಶತಮಾನಗಳಲ್ಲಿ 'ಪದ್ಮಾವತಿ' ರಾಣಿಯ ಕುರಿತು ಹಲವು ಕಥನಗಳಿವೆ. ದೆಹಲಿಯ ಸುಲ್ತಾನ ಅಲ್ಲಾವುದ್ದೀನ್ ಖಿಲ್ಜಿ ರಜಪೂತರ ಚಿತ್ತೂರಿನ ಮೇಲೆ ದಾಳಿ ನಡೆಸಿದ್ದು ೧೩೦೩ರಲ್ಲಿ. ಅನಂತರ ೨೦೦ ವರ್ಷಗಳಾದ ಮೇಲೆ ಕವಿ ಜಯಸಿಯವರ ಕಾಲ್ಪನಿಕ 'ಪದ್ಮಾವತಿ' ಕತೆ ಮೂಡಿಬಂದುದು. ಹಾಗೆ ನೋಡಿದರೆ ಇತಿಹಾಸದಲ್ಲಿ ರಾಣಿ ಪದ್ಮಾವತಿ ಪ್ರಕರಣವೇ ಇಲ್ಲ, ಆಕೆ ಕೇವಲ ಕಾಲ್ಪನಿಕ ಸುಂದರಿ ಹೆಣ್ಣು ಎಂಬ ವಿಚಾರವೂ ಇದೆ. ನೂರು ರಾಮಾಯಣಗಳಿರುವ ಉದಾಹರಣೆಯನ್ನೂ ಇದಕ್ಕೆ ಹೋಲಿಸಬಹುದು. ಹಿಂದುತ್ವವಾದಿಗಳು ಒಪ್ಪದಿದ್ದರೂ ಈಗ ಏಕಾಏಕಿ ರಾಣಿ ಪದ್ಮಾವತಿ ತ್ಯಾಗಮಯಿ ಹಿಂದೂ ಮಹಿಳೆಯ ಪ್ರತೀಕವಾಗಿದ್ದಾಳೆ. ಇತಿಹಾಸವನ್ನು ತಿರುಚುವುದು ಹಿಂದುತ್ವವಾದಿಗಳಿಗೆ ಅತೀ ಸುಲಭದ ಕೆಲಸ. ಅವರ ಪ್ರಕಾರ ಭಾರತದ ಇತಿಹಾಸದಲ್ಲಿ ಮುಸಲ್ಮಾನರ ಆಳ್ವಿಕೆಯೇ ಒಂದು ಕಪ್ಪು ಚುಕ್ಕೆ. ಭಾರತೀಯ ಸಂಸ್ಕೃತಿಗೆ, ವಾಸ್ತುಶಿಲ್ಪಕ್ಕೆ, ಸಂಗೀತ ನೃತ್ಯಗಳಿಗೆ ಮೊಗಲರು ನೀಡಿರುವ ಕಾಣಿಕೆಯನ್ನು ಅಂಗೀಕರಿಸಲು ಸಂಘಪರಿವಾರದವರು ಸಿದ್ಧರಿಲ್ಲ. ಇತ್ತೀಚೆಗೆ ಉತ್ತರಪ್ರದೇಶದಲ್ಲಿ ಭಾಜಪ ಸರಕಾರ ಅಧಿಕಾರಕ್ಕೆ ಬಂದಮೇಲೆ 'ತಾಜ್‌ಮಹಲ್' ಕುರಿತು ಸೃಷ್ಟಿಯಾದ ವಿವಾದವೇ ಅದಕ್ಕೆ ಸಾಕ್ಷಿ. ನಾವೀಗ ಇಪ್ಪತ್ತೊಂದನೇ ಶತಮಾನದ ಎರಡನೆ ದಶಕದ ಕೊನೆಯ ವರ್ಷಗಳಲ್ಲಿದ್ದೇವೆ. ಸುಮಾರು ಇನ್ನೂರು ವರ್ಷಗಳ ಹಿಂದೆಯೇ ಸತಿಪದ್ಧತಿ ರದ್ದಾಯಿತು, ಅದಕ್ಕಾಗಿ ಕಾನೂನು ಬಂತು. ಅಂಥದ್ದರಲ್ಲಿ ಈಗ ಇತಿಹಾಸವನ್ನು ಸಂಕುಚಿತ ದೃಷ್ಟಿಕೋನದಿಂದ ಕೆದಕುವುದು ಎಷ್ಟು ಸರಿ ಎನ್ನುವುದು ನಮ್ಮ ಮುಂದಿರುವ ಪ್ರಶ್ನೆಯಾಗಿದೆ. ಇವೆಲ್ಲ ಈಚೆಗೆ ಬೆಳೆಯುತ್ತಿರುವ ಅಸಹಿಷ್ಣುತೆಯ ಸಂಕೇತ.

**ಸಿ. ಆರ್. ಕೃಷ್ಣರಾವ್**
'ಚೌಬೀನ', ನಂ. ೮೯೯, ೬ನೇ ಕ್ರಾಸ್, ಬನಶಂಕರಿ ೩ನೇ ಹಂತ
೩ನೇ ಬ್ಲಾಕ್, ಕತ್ರಿಗುಪ್ಪೆ, ಬೆಂಗಳೂರು – ೫೬೦ ೦೮೫

ಕನ್ನಡವನ್ನು ಚೆನ್ನಾಗಿ ಅರಿತಿದ್ದ ಟಿಪ್ಪುವು ಅವನ ೧೭ ವರ್ಷಗಳ ಆಳ್ವಿಕೆಯಲ್ಲಿ "ಅಂತರರಾಷ್ಟ್ರೀಯವಾದ"ದ ಕಡೆಗೆ ವಾಲಿದ್ದ. ಆಗ ಸಂಭವಿಸಿದ್ದ ಅಮೆರಿಕಾದ ಕ್ರಾಂತಿ ಮತ್ತು ಫ್ರಾನ್ಸಿನ ಮಹಾಕ್ರಾಂತಿಗಳ ಜೊತೆ ಸಹಮತದಲ್ಲಿದ್ದ. ಕನ್ನಡವನ್ನು ಮಾತ್ರ ಟಿಪ್ಪುವು ಉಪಯೋಗಿಸಿದ್ದಲ್ಲಿ ಅದು ಈಗಿನ ಕಾಲದ "ಪ್ರಾಂತೀಯ ಭಾವನೆ"ಗಳಿಗೆ ಸರಿಯೆಂದು ಅನಿಸುತ್ತಿತ್ತೋ ಏನೋ. ಆದರೆ ಪರ್ಷಿಯನ್ ಭಾಷೆಯನ್ನು ಅಳವಡಿಸಿಕೊಂಡಿದ್ದು ಟಿಪ್ಪುವನ್ನು "ಕಡಿಮೆ ಕನ್ನಡಿಗ" ನನ್ನಾಗಿಸದೆ ಅವನನ್ನು "ಅಂತರರಾಷ್ಟ್ರೀಯವಾದಿ" ಯನ್ನಾಗಿಸಿದೆ.



# ಟಿಪ್ಪು ಸುಲ್ತಾನ್‌ನ ಸಂದರ್ಭದ ಹಿನ್ನೆಲೆ

೧೮ನೇ ಶತಮಾನದಲ್ಲಿ ಬ್ರಿಟಿಷರ ವಿರುದ್ಧ ನಾಲ್ಕು ಯುದ್ಧಗಳನ್ನು ಮಾಡಿ ಹುತಾತ್ಮನಾದ ಟಿಪ್ಪು ಸುಲ್ತಾನನ ಜಯಂತಿಯನ್ನು ಪ್ರತಿ ವರ್ಷವೂ ಆಚರಿಸಲು ಕರ್ನಾಟಕದ ಕಾಂಗ್ರೆಸ್ ಸರ್ಕಾರವು ನಿರ್ಧರಿಸಿರುವುದು ಸೈದ್ಧಾಂತಿಕ ಕೆಸರೆರಚಾಟಕ್ಕೆ ಅನುವು ಮಾಡಿಕೊಟ್ಟಿದೆ.

೨೦೧೫ರಲ್ಲಿ ರಾಜ್ಯ ಸರ್ಕಾರ ಪ್ರಾಯೋಜಿತ "ಟಿಪ್ಪು ಸುಲ್ತಾನ್ ಜಯಂತಿ" ಆಚರಣೆಯನ್ನು ವಿರೋಧಿಸಿ ನಡೆದ ಘಟನೆಗಳಲ್ಲಿ ಇಬ್ಬರು ಮೃತಪಟ್ಟಿದ್ದರು. ೨೦೧೭ರಲ್ಲಿಯೂ ಸಹ ಭಿನ್ನಾಭಿಪ್ರಾಯ ತಲೆಯೆತ್ತಿದೆ. ಕೋಮು ದ್ವೇಷವನ್ನು ಕೆರಳಿಸುವ ಆಪಾದನೆಯನ್ನು ಹೊತ್ತಿರುವ, ಬಿಜೆಪಿಯ ಕೇಂದ್ರ ಸರ್ಕಾರದ ಮಂತ್ರಿಯಾಗಿರುವ ಹಾಗೂ ಟಿಪ್ಪು ಜಯಂತಿಗೆ ತನ್ನನ್ನು ಆಹ್ವಾನಿಸಿರುವ ಕಾಂಗ್ರೆಸ್ ಸರ್ಕಾರದ ನಿರ್ಧಾರವನ್ನು ಅಪಹಾಸ್ಯ ಮಾಡಿದ ಶ್ರೀ ಅನಂತ ಕುಮಾರ್ ಹೆಗ್ಡೆಯವರ ಪ್ರಕಾರ, "ಟಿಪ್ಪು ಸುಲ್ತಾನ್ ಒಬ್ಬ ಕ್ರೂರ ಹಂತಕ, ಮತೀಯವಾದಿ ಹಾಗೂ ಸ್ತ್ರೀಯರನ್ನು ಸಾಮೂಹಿಕವಾಗಿ ಬಲಾತ್ಕಾರ ಮಾಡಿದವ."

ಈ ರೀತಿಯಾಗಿ ತೀವ್ರವಾದ ರಾಜಕೀಯ ಚರ್ಚೆಗೆ ಹಾಗೂ ಧ್ರುವೀಕರಣಕ್ಕೆ ಕಾರಣನಾಗಿರುವ ಟಿಪ್ಪುವು, "ಇತಿಹಾಸದ ವಸ್ತುನಿಷ್ಠ ಅಧ್ಯಯನ ಹಾಗೂ ಓದಿನಿಂದ ಟಿಪ್ಪು ನಮ್ಮ ದೇಶದ ಪ್ರಪ್ರಥಮ ಸ್ವಾತಂತ್ರ್ಯ ಹೋರಾಟಗಾರನೋ ಅಥವಾ ಅತಿ ಕ್ರೂರಿಯಾದ ಹಂತಕನೋ" ಎಂಬ ಪ್ರಶ್ನೆಗೆ ಕಾರಣನಾಗುತ್ತಾನೆ.

ಯುದ್ಧದಲ್ಲಿ ರಾಕೆಟ್ಟುಗಳನ್ನು ಉಪಯೋಗಿಸುವುದರಲ್ಲಿ, ಸೌರ-ಚಾಂದ್ರಮಾನದ ಕ್ಯಾಲೆಂಡರ್(ಪಂಚಾಂಗ)ಗಳ ಬಳಕೆ, ಭೂ ಕಂದಾಯ ವ್ಯವಸ್ಥೆಯನ್ನು ಜಾರಿಗೊಳಿಸಿದ್ದು, ಸೈನಿಕರಿಗೆ ಪರಿಹಾರ ನೀಡುವುದು ಮುಂತಾದ ಹೊಸ ಹೊಸ ವಿಚಾರಗಳನ್ನು ಅಳವಡಿಸುವುದರಲ್ಲಿ ಮೊದಲಿಗನಾದ ಟಿಪ್ಪುವು ೧೭೯೯ರಲ್ಲಿ ಅವನ ಮರಣ ಕಾಲದವರೆಗೂ ನಾಡಿನ ಸ್ವಾತಂತ್ರ್ಯಕ್ಕೋಸ್ಕರ ಬ್ರಿಟಿಷರ ವಿರುದ್ಧ ಹೋರಾಡುತ್ತಾನೆ.

ಜಮೀನ್ದಾರರಿಂದ, ಮೇಲ್ಜಾತಿಯವರಿಂದ ಮತ್ತು ಮಠಮಾನ್ಯಗಳಿಂದ ಜಮೀನನ್ನು ವಶಪಡಿಸಿಕೊಂಡು ಬಡವರಿಗೆ ಹಂಚಿದ ಟಿಪ್ಪುವಿನ ಕ್ರಮ ಕ್ರಾಂತಿಕಾರಿ ಕ್ರಮವಾಗಿತ್ತು. ಸೂಫೀ ಪಥದಲ್ಲಿ ಚಿಸ್ತಿ / ಬಂದೇ ನವಾಜ್ ಪದ್ಧತಿಯ ಅನುಯಾಯಿಯಾಗಿದ್ದ ಟಿಪ್ಪುವು ಬಹುಚರ್ಚಿತ ಶೃಂಗೇರಿ ಮಠವನ್ನೂ ಒಳಗೊಂಡಂತೆ ೧೫೬ ದೇವಸ್ಥಾನಗಳಿಗೆ ವಾರ್ಷಿಕ ಅನುದಾನವನ್ನು ಕಲ್ಪಿಸಿಕೊಡುತ್ತಾನೆ. ಶೃಂಗೇರಿ ಮಠವನ್ನು ಮರಾಠಾ ಸೈನ್ಯವು ಹಾಳುಗೆಡವಿದಾಗ ಅಲ್ಲಿ ಮೂರ್ತಿಯನ್ನು ಪುನರ್‌ಪ್ರತಿಷ್ಠಾಪಿಸಿ ಪೂಜಾ ಕಾರ್ಯಗಳಿಗೆ ಮತ್ತೊಮ್ಮೆ ಚಾಲನೆ ಕೊಟ್ಟವನು ಟಿಪ್ಪು. ನಂಜನಗೂಡು, ಮೇಲುಕೋಟೆ, ಕಂಚಿ, ಕಳಲೆ, ದೇವನಹಳ್ಳಿ ಮತ್ತು ಇನ್ನೂ ಅನೇಕ ದೇವಸ್ಥಾನಗಳನ್ನು ಪುನರುಜ್ಜೀವನಗೊಳಿಸಿ ಅಲ್ಲಿ ಪೂಜಾ ಕಾರ್ಯಗಳನ್ನು ಆರಂಭಿಸುತ್ತಾನೆ. ಮೈಸೂರಿನ ಮೊತ್ತ ಮೊದಲ ಚರ್ಚ್ ಸಹ ಟಿಪ್ಪುವಿನ ಆಶ್ರಯದಲ್ಲೇ ಕಟ್ಟಲ್ಪಟ್ಟಿದ್ದಾಗಿದೆ.

ಮೂಲ : **ಚೇತನ್. ಅಹಿಂಸಾ**
ಅನುವಾದ : **ಎಮ್. ಸಿ. ಡೋಂಗ್ರೆ**

ಬ್ರಿಟಿಷರ ಟಿಪ್ಪು ವಿರೋಧೀ ಪ್ರಚಾರದ ಜ್ವಾಲೆಗೆ ಸಿಲುಕಿರುವ ಕೆಲವು ಇತಿಹಾಸಕಾರರು ಟಿಪ್ಪುವಿನ "ವೈವಿಧ್ಯಮಯ ಗತಕಾಲದ" ಬಗ್ಗೆ ವಾದಗಳನ್ನು ಮುಂದಿಟ್ಟಿದ್ದಾರೆ. ದಕ್ಷಿಣ ಕನ್ನಡದ ಕ್ಯಾಥೊಲಿಕ್ ಕ್ರಿಶ್ಚಿಯನ್ನರ ಮೇಲೆ ಮತ್ತು ಕೊಡಗಿನವರ ಮೇಲೆ ಟಿಪ್ಪು ನಡೆಸಿದ ಕ್ರೌರ್ಯ ಹಾಗೂ ಬಲಾತ್ಕಾರದ, ಮತಾಂತರದ ವಿಚಾರಗಳು ರಾಜಕೀಯವಾಗಿ ಭಿನ್ನಾಭಿಪ್ರಾಯಗಳಿಗೆ ಎಡೆಮಾಡಿವೆ. ಅರಸನೊಬ್ಬನ ನಿರಂಕುಶ ಪ್ರಭುತ್ವದಲ್ಲಿ ಸಾವಿರಾರು ಜನ ಕೊಲ್ಲಲ್ಪಟ್ಟರು ಹಾಗೂ ಮತಾಂತರಿಸಲ್ಪಟ್ಟರು ಎನ್ನುವುದು ಗಮನಿಸಬೇಕಾದ ಮಾತಾಗಿದೆ. ಆದರೆ ಇದು ೧೭-೧೮ನೇ ಶತಮಾನದಲ್ಲಿ ಚಾಲ್ತಿಯಲ್ಲಿದ್ದ (ಕೇವಲ ಹಳೇ ಮೈಸೂರಿನಲ್ಲಿ ಅಲ್ಲ) "ಯುದ್ಧನೀತಿ"ಗೆ ಅನುಸಾರವಾಗಿ ಘಟಿಸಿದೆ. ಗೆರಿಲ್ಲ ಯುದ್ಧ ತಂತ್ರದಲ್ಲಿ ಕೊಡಗಿನವರು ಟಿಪ್ಪುವಿಗೆ ಶತ್ರುಗಳಾಗಿದ್ದರು, ದಕ್ಷಿಣ ಕನ್ನಡದ ಕ್ಯಾಥೊಲಿಕರು ಬ್ರಿಟಿಷರ ಪರವಾಗಿ ನಿಂತು ಟಿಪ್ಪು ವಿರೋಧಿಗಳಾಗಿದ್ದರು. ಹೀಗಾಗಿ ಟಿಪ್ಪುವಿನ ಕ್ರಮವು ಮತೀಯ ಭಾವನೆಯಿಂದ ಕೂಡಿದ್ದಾಗಿರಲಿಲ್ಲವಾದರೂ ಹಿಂಸೆಯು ಕ್ಷಮಾರ್ಹವಲ್ಲ. ಮತೀಯ ಭೇದಭಾವವಿಲ್ಲದ ಟಿಪ್ಪುವು ಮಾಪಿಳೆ ಮುಸ್ಲಿಮರನ್ನೂ ಸಹ ಕೊಂದಿದ್ದಾನೆ. ೧೮ನೇ ಶತಮಾನದ ಕಾಲಾವಧಿಯಲ್ಲಿ "ಶತ್ರು ರಾಜ್ಯಗಳ" ನಡುವೆ ಯುದ್ಧಗಳು ನಡೆಯುತ್ತಿದ್ದವೇ ವಿನಾ ಧಾರ್ಮಿಕ ಅಥವಾ ಮತೀಯ ಗುಂಪುಗಳ ನಡುವೆ ನಡೆಯುತ್ತಿರಲಿಲ್ಲವೆಂಬುದನ್ನು ನೆನಪಿನಲ್ಲಿಟ್ಟುಕೊಳ್ಳಬೇಕು. ಈ ರೀತಿ ಹೊಸ ಹೊಸ ಪ್ರಾಂತ್ಯಗಳನ್ನು ವಶಪಡಿಸಿ ಕೊಳ್ಳುವುದರ ಮೂಲಕ ತನ್ನ ಸಾಮ್ರಾಜ್ಯದ ಆದಾಯವನ್ನು ಹೆಚ್ಚಿಸಿಕೊಳ್ಳುವುದು ಟಿಪ್ಪುವಿನ ಅಭಿಲಾಷೆಯಾಗಿತ್ತೇ ಹೊರತು ಮತೀಯ ಭಾವನೆಗಳು ಈ ಪ್ರಕ್ರಿಯೆಯಲ್ಲಿ ಪ್ರಮುಖವಾಗಿರದೆ ಕೇವಲ ಆಕಸ್ಮಿಕ ಅಂಶಗಳಾಗಿದ್ದವು.

ತನ್ನ ಆಡಳಿತದಲ್ಲಿ ಟಿಪ್ಪುವು ಕನ್ನಡ ಪದಗಳ ಬದಲಾಗಿ ಪರ್ಷಿಯನ್ ಭಾಷೆಯನ್ನು ಚಾಲ್ತಿಗೆ ತಂದ ಹಿನ್ನೆಲೆಯಲ್ಲಿ ಕೆಲವು ಕನ್ನಡ ಪರ ಸಂಘಟನೆಗಳು ಕೂಡ ಟಿಪ್ಪುವಿನ ವಿರುದ್ಧ ದನಿಯೆತ್ತಿವೆ. ಕನ್ನಡವನ್ನು ಚೆನ್ನಾಗಿ ಅರಿತಿದ್ದ ಟಿಪ್ಪುವು ಅವನ ೧೬ ವರ್ಷಗಳ ಆಳ್ವಿಕೆಯಲ್ಲಿ "ಅಂತರರಾಷ್ಟ್ರೀಯವಾದ"ದ ಕಡೆಗೆ ವಾಲಿದ್ದ. ಆಗ ಸಂಭವಿಸಿದ್ದ ಅಮೆರಿಕಾದ ಕ್ರಾಂತಿ ಮತ್ತು ಫ್ರಾನ್ಸಿನ ಮಹಾಕ್ರಾಂತಿಗಳ ಜೊತೆ ಸಹಮತದಲ್ಲಿದ್ದ. ಕನ್ನಡವನ್ನು ಮಾತ್ರ ಟಿಪ್ಪುವು ಉಪಯೋಗಿಸಿದ್ದಲ್ಲಿ ಅದು ಈಗಿನ ಕಾಲದ "ಪ್ರಾಂತೀಯ ಭಾವನೆ"ಗಳಿಗೆ ಸರಿಯೆಂದು ಅನಿಸುತ್ತಿತ್ತೋ ಏನೋ. ಆದರೆ ಪರ್ಷಿಯನ್ ಭಾಷೆಯನ್ನು ಅಳವಡಿಸಿಕೊಂಡಿದ್ದು ಟಿಪ್ಪುವನ್ನು "ಕಡಿಮೆ ಕನ್ನಡಿಗ" ನನ್ನಾಗಿಸದೆ ಅವನನ್ನು "ಅಂತರರಾಷ್ಟ್ರೀಯವಾದಿ"ಯನ್ನಾಗಿಸಿದೆ.

ಆದರೂ ಈ ರೀತಿಯ "ಜಯಂತಿ"ಗಳ ಆಚರಣೆಗಳು ರಾಜಕೀಯ ಪಕ್ಷವೊಂದರ ಕಾರ್ಯಕ್ರಮ (ಅಜೆಂಡಾ)ವನ್ನು ಉತ್ತಮ ಸಮಾಜದ ನಿರ್ಮಾಣದ ಬದಲು "ಮತ ಬ್ಯಾಂಕು"ಗಳಲ್ಲಿ ಗಟ್ಟಿಗೊಳಿಸುವುದರಲ್ಲಿ ಬಳಸಲ್ಪಡುತ್ತವೆ ಎಂಬುದು ಯೋಚಿಸಬೇಕಾದ ವಿಷಯ (ಬಸವ ಜಯಂತಿ, ವಾಲ್ಮೀಕಿ ಜಯಂತಿ ಇತ್ಯಾದಿ ಧಾರ್ಮಿಕ ವ್ಯಕ್ತಿಗಳ ಜಯಂತಿಗಳೂ ಸಹ ಜಾತಿ ಲೆಕ್ಕಾಚಾರದಿಂದ ಕೂಡಿರುವಂತಹುದೆಂದೇ ವ್ಯಾಖ್ಯಾನಿಸಬಹುದಾಗಿದೆ). ನನ್ನನ್ನು ತಪ್ಪಾಗಿ ಅರ್ಥೈಸಬಾರದು. ಟಿಪ್ಪುವಿನ ಮುನ್ನೋಟಗಳ ಕುರಿತು ನನಗೆ ಅಪಾರ ಮೆಚ್ಚುಗೆಯಿದೆ. ದಲಿತರು ಹಾಗೂ ಮುಸ್ಲಿಮರು ರಾಜ್ಯಗಳ ಹಾಗೂ ರಾಷ್ಟ್ರದ ಅನೇಕ ಅಭಿವೃದ್ಧಿ ಸೂಚ್ಯಂಕಗಳಲ್ಲಿ ಇತರರಿಗಿಂತ ಹಿಂದೆ ಬಿದ್ದಿರುವಾಗ, ಈ ರೀತಿಯ ಸಾಂಕೇತಿಕ ಆಚರಣೆಗಳಿಂದ ಆರ್ಥಿಕ, ಶೈಕ್ಷಣಿಕ, ಆರಕ್ಷಕ ವ್ಯವಸ್ಥೆ ಹಾಗೂ ಇತರ ಸುಧಾರಣೆಗಳು ನಿರ್ಲಕ್ಷ್ಯಕ್ಕೆ ಒಳಗಾಗಬಾರದು.

"ಮೈಸೂರಿನ ಹುಲಿ" ಎಂಬ ಹೆಸರಿನಲ್ಲಿ ಕೇವಲ ಮುಸ್ಲಿಮರನ್ನು ಮಾತ್ರ ಸೀಮಿತಗೊಳಿಸಿ ಆಚರಣೆಗಳನ್ನು ಮಾಡದೆ ಎಲ್ಲರಿಗೂ ಒಪ್ಪಿಗೆಯಾಗುವಂತಹ ವ್ಯಕ್ತಿಗಳ ಕುರಿತಾದ ಸಂಭ್ರಮಾಚರಣೆಯನ್ನು ಕೈಗೆತ್ತಿಕೊಳ್ಳುವುದು ಸಮಾಜಕ್ಕೆ ಹೆಚ್ಚು ಕ್ಷೇಮಕರವೆಂದೆನಿಸುತ್ತದೆ.

"ಎರಡನೇ ಇಬ್ರಾಹಿಮ್ ಅದಿಲ್ ಶಾಹ್" ನಿರ್ಲಕ್ಷ್ಯಕ್ಕೊಳಗಾಗಿದ್ದಾನೆ. "ಜಗದ್ಗುರು ಬಾದಶಾಹ್" ಎಂದೇ ಹೆಸರಾದ ಇವನು ಟಿಪ್ಪುವಿಗಿಂತಲೂ ಇನ್ನೂರು ವರ್ಷಗಳ ಮೊದಲು ಕರ್ನಾಟಕದಲ್ಲಿ ಇದ್ದವನು. ಬಿಜಾಪುರದಿಂದ ಮೈಸೂರಿನವರೆಗೂ ತನ್ನ ಆಳ್ವಿಕೆಯನ್ನು ವಿಸ್ತರಿಸಿದವನು. ಸಂಗೀತದ ಮೂಲಕ ಹಿಂದೂ ಮತ್ತು ಮುಸ್ಲಿಮರನ್ನು ಹಾಗೂ ಶಿಯಾ – ಸುನ್ನಿಯರನ್ನು ಒಂದುಗೂಡಿಸುವುದು ಅದಿಲ್ ಶಾಹ್‌ನ ಕನಸಾಗಿತ್ತು. ಈ ಉದ್ದೇಶದಿಂದ ಗಣಪತಿ, ಸರಸ್ವತಿ ಸ್ತುತಿಗಳ ಜೊತೆಗೆ ಸೂಫೀ ಸಂತ ಹಜರತ್ ಬಂದೇ ನವಾಜರ ಸ್ತುತಿಗಳನ್ನು ಮೇಳೈಸಿದ್ದ. ತನ್ನ ಅರಮನೆಯಲ್ಲಿ ದೇವಸ್ಥಾನವನ್ನು ನಿರ್ಮಿಸಿದ್ದ. ಕನ್ನಡ, ಮರಾಠಿ, ದಖ್ಖನಿ, ಮತ್ತು ಉರ್ದು ಭಾಷೆಗಳನ್ನು ಮಾತಾಡಬಲ್ಲವನಾಗಿದ್ದ. ಸಾಮ್ರಾಜ್ಯಶಾಹಿ ಕ್ರೌರ್ಯತೆಗೆ ಪ್ರತಿಯಾಗಿ ಒಂದು ಜಾತ್ಯತೀತ ಐಕ್ಯತೆಗೆ ಎರಡನೇ ಇಬ್ರಾಹಿಂ ಅದಿಲ್ ಶಾಹ್ ಉತ್ತಮ ಆದರ್ಶನಾಗಿದ್ದು, ಎಲ್ಲ ಕನ್ನಡಪರ ಸಂಘಗಳು ಇವನ ಕುರಿತು ಅಧ್ಯಯನ ಮಾಡಬೇಕು.

೨೫೦ ವರ್ಷಗಳ ಹಿಂದೆ ವೈವಿಧ್ಯಮಯ ಹಾಗೂ ವೈರುಧ್ಯಮಯ ವಾತಾವರಣದಲ್ಲಿ ಜೀವಿಸಿದ್ದ ಟಿಪ್ಪು ಸುಲ್ತಾನ್ ಪ್ರಸ್ತುತದಲ್ಲಿ ಅನೇಕ ರಾಜಕೀಯ ಹಿತಾಸಕ್ತಿಗಳ ಹಿನ್ನೆಲೆಯಲ್ಲಿ ಬೇರೆ ಬೇರೆ ರೀತಿಯಲ್ಲಿ ಅರ್ಥೈಸಿಕೊಳ್ಳುತ್ತಿದ್ದಾನೆ. "ಜಾಗತಿಕ ವ್ಯಕ್ತಿ"ಯೊಬ್ಬನ ಈಗಿನ "ರಾಷ್ಟ್ರ"ದ ಪರಿಕಲ್ಪನೆಯಲ್ಲಿ ನೋಡುವುದು ತಪ್ಪಾಗುತ್ತದೆ. ಒಂದು ಶತಮಾನದಿಂದ ಈಚೆಗಿನ ಅವಧಿಯಲ್ಲಿ "ಟಿಪ್ಪು" ಹಾಗೂ "ಭಾರತವೆಂಬ ಪರಿಕಲ್ಪನೆ"ಗಳು ಇಲ್ಲವಾಗಿವೆ. ಒಂದಂತೂ ನಿಜ: "ಮೈಸೂರಿನ ಹುಲಿ"ಯು ಪ್ರಾದೇಶಿಕ ನಿಯಂತ್ರಣವನ್ನು ಬಯಸಿ ಎಲ್ಲ ರೀತಿಯ ಧಾರ್ಮಿಕ ಪಾಲನೆಗಳ ವಿರುದ್ಧ (ಬ್ರಿಟಿಷರನ್ನೂ ಸೇರಿಸಿದಂತೆ) ಯುದ್ಧಗಳನ್ನು ಕೈಗೊಂಡವನು. ಈಗಿನ ಕಾಲಘಟ್ಟದಲ್ಲಿ ನಿಂತು ಅವನನ್ನು ಕೇವಲ ಮುಸ್ಲಿಮರ ಪ್ರತಿನಿಧಿಯೆಂದು ಮೂಲೆಗುಂಪು ಮಾಡುವುದು ನ್ಯಾಯವಲ್ಲ. ಟಿಪ್ಪುವನ್ನು ೧೮ನೇ ಶತಮಾನದ ಒಂದು ಹೊಸ ಆಡಳಿತಗಾರನೆಂದು ಗುರ್ತಿಸುವುದು ಅವನಿಗೆ ನೀಡುವ ನ್ಯಾಯೋಚಿತ ಸನ್ಮಾನವಾಗಿರುತ್ತದೆ.

ಮೂಲ : ಚೇತನ್. ಅಹಿಂಸಾ
ಅನುವಾದ : ಎಮ್. ಸಿ. ಡೋಂಗ್ರೆ 'ಆಶೀರ್ವಾದ' ೩ನೇ ಅಡ್ಡರಸ್ತೆ, ೨ನೇ ಮುಖ್ಯರಸ್ತೆ
ಆದರ್ಶನಗರ, ಹಾಸನ – ೫೭೩ ೨೦೧

ಕಾವ್ಯಲೋಕ

## ಹೀಗೆಲ್ಲ ಆಗುತ್ತ ?

ಮಗು ಅತ್ತಾಗ ಹಾಲು
ಕೊಡಲಾಗಲಿಲ್ಲ ನೀರು ಕೊಟ್ಟೆ
ಹತ್ತು ರೂಪಾಯಿ ತೆಗೆದಿಟ್ಟೆ
ಅಜ್ಜಿಗೆ ಏನೆಲ್ಲ ಔಷಧ
ಹೇಳಿದ್ದರೂ... ಕೊಡಿಸಲಾಗಲಿಲ್ಲ ಎಲ್ಲ
ಔಷಧ... ಉಳಿಸಲಾಗಲಿಲ್ಲ ಅಜ್ಜಿ
ಆದರೂ ಚಿಲ್ಲರೆ ಐದಾರು ನಾಣ್ಯ ಮುಚ್ಚಿಟ್ಟೆ
ಅವನಿಗೆ ಕುಡಿಯುವ ಚಟ
ನನಗೆ ಬದುಕುವ ಹಟ...
ಕತ್ತಲೆಯಲ್ಲೂ ಕಣ್ಣಾಗಿ ಹುಡುಕುವ ಗಂಡ
ಹಾಗೆ ಮಾಡಿದೆ ಹೆಂಡ.
ಗುದ್ದು ಬಿದ್ದು ಒದ್ದರೂ ಸಿಗಲಿಲ್ಲ
ಹರಕು ಸೀರೆ ಚುಂಗಿನಲ್ಲಿ ಕಟ್ಟಿಟ್ಟ ಹಣ
ನನಗೆ ಮಕ್ಕಳ ಋಣ, ಗಂಡನ ಋಣ
ಪ್ರಕೃತಿಯ ಋಣ...
ಮೊನ್ನೆ ಯಾರೋ ಹೇಳಿದರು ನೋಟು
ರದ್ದಾಯಿತೆಂದು... ಕಳ್ಳ ಹಣಕ್ಕೆ
ಮದ್ದಾಯಿತೆಂದು...
ನನಗೆ ಭಯವಾಯಿತು... ನಾನು ಕಳ್ಳಿಯೇ...
ಇಲ್ಲ...ಇಲ್ಲ... ಇದೆಲ್ಲ ಋಣ ಬದುಕುವ
ಪಣ ಎಂದು ಇಟ್ಟುಕೊಂಡಿದ್ದೆ.
ಬರಲಿಲ್ಲ ನಿದ್ದೆ...
ಕಣ್ಣು ಯಾವಾಗಲೂ ಒದ್ದೆ...

ತಮ್ಮಣ್ಣ ಬೀಗಾರ
'ಪ್ರಕೃತಿ' ಹೊಸೂರು, ಸಿದ್ದಾಪುರ, ಉತ್ತರ ಕನ್ನಡ ಜಿಲ್ಲೆ – ೫೮೧ ೩೫೫



# ಸಾಹಿತ್ಯ ಮತ್ತು ಲಿಂಗರಾಜಕಾರಣ

ಲಿಂಗರಾಜಕಾರಣದ ಛದ್ಮವೇಷ ಎಲ್ಲ ಕಡೆ ಹರಡಿಕೊಂಡು ಸುತ್ತಿಕೊಂಡು ನಮಗರಿವಿಲ್ಲದೇ ನಾವೆಲ್ಲರೂ ಅದರಲ್ಲಿ ಸಿಲುಕಿಕೊಂಡು ಒದ್ದಾಡುವಂತಾಗಿದೆ. ಲಿಂಗರಾಜಕಾರಣದ ಮೂರ್ತ ನೆಲೆಗಳಿಗಿಂತ ಅಮೂರ್ತನೆಲೆಗಳೇ ಹೆಚ್ಚು. ಪ್ರಶ್ನಿಸುವುದಕ್ಕೇ ಅಸಾಧ್ಯ ಎನ್ನುವ ರೀತಿಯಲ್ಲಿ ಹೆಣ್ಣಿನ ಪಾತ್ರ ನಿರ್ದೇಶನವಾಗಿದೆ. ಅದು ಈಗ ರಾಜಕೀಯ ವಿಷಯವಾಗಿರುವುದರಿಂದ ತುಂಬ ಪ್ರಾಮುಖ್ಯತೆ ಬರ್ತಿದೆ. ಹೆಣ್ಣಿನ ಅನುಭವ ಲೋಕವನ್ನು ಶ್ರೇಣೀಕರಿಸುವ ರೀತಿ ಇರಬಹುದು. ಅಡುಗೆ ಮನೆಯ ಸಾಹಿತ್ಯ ಎಂದು ಕರೆಸಿಕೊಳ್ಳುತ್ತಿದ್ದ ಮಹಿಳಾ ಸಾಹಿತ್ಯ ಇಂದು ಪೂರ್ತಿ ಬದಲಾಗಿದೆ.

ಭಾಷೆಯ ರಚನೆಯಲ್ಲಿಯೇ ಲಿಂಗರಾಜಕಾರಣದ ಪ್ರಾಧಾನ್ಯತೆ ಎದ್ದು ಕಾಣುತ್ತದೆ. ಪ್ರತಿಯೊಂದು ಸಾಧನೆಗಳ ಸಂಬೋಧನೆಯಲ್ಲೂ ಅವನು ಬಳಕೆಯಾಗುತ್ತಾನೆಯೇ ಹೊರತು ಅವಳು ಬಳಕೆಯಾಗುವುದಿಲ್ಲ. ಉದಾಹರಣೆ : ಮನುಷ್ಯ ಎಂದರೆ ಪುರುಷ ಪ್ರಧಾನತೆಯೇ ಹೊರತು ಅಲ್ಲಿ ಮಹಿಳೆ ಗೌಣವಾಗುತ್ತಾಳೆ. ಅದೇ ರೀತಿ ಭಾಷೆಯೊಳಗೆ ಸಾಮಾನ್ಯೀಕರಣಗೊಂಡ ಪ್ರಯೋಗಗಳು ಹೆಚ್ಚಾಗಿ ಬಳಕೆಯಾಗುವುದು ಅವನನ್ನು ಉದ್ದೇಶಿಸಿಯೇ ಹೊರತು ಅವಳನ್ನು ನಿರ್ದೇಶಿಸಿದಂತೆ ಅಲ್ಲ. ಇಲ್ಲಿ ಭಾಷೆಯ ಸೃಜನಶೀಲ ಪ್ರಕಾರಗಳನ್ನು ನೋಡಿದಾಗ ಆ ಎಲ್ಲ ಪ್ರಕಾರಗಳಲ್ಲೂ 'ಅವನು' ಮುಖ್ಯವಾಗುತ್ತಾನೆಯೇ ಹೊರತು ಅವಳು ಮುಖ್ಯವಾಗುವುದಿಲ್ಲ.

ಜಗತ್ತಿನ ಯಾವುದೇ ಜ್ಞಾನದ ಬೆಳವಣಿಗೆಯಲ್ಲಿ ಪುರುಷಾಹಂಕಾರ ಪ್ರತಿಷ್ಠೆಯಂತೆ ಮೆರೆದಿದೆ. ಉದಾಹರಣೆ : ಮೂರು ಹೊತ್ತು ಅಡುಗೆ ಮನೆಯಲ್ಲಿ ಜೀವ ಸವೆಸುತ್ತ ಎಷ್ಟೇ ಭಕ್ಷ್ಯ ಭೋಜನಗಳನ್ನು ತಯಾರಿಸಿ ಈ ಪುರುಷ ಕೋಟಿಗೆ ತಿನ್ನಿಸಿದರೂ ಆ ಪಾಕಶಾಸ್ತ್ರದ ಪ್ರಾವೀಣ್ಯತೆ ಹೆಣ್ಣಿನ ಪರವಾಗಿಲ್ಲ. ಅದನ್ನು ಕೂಡ ಗಂಡು ನಳಪಾಕ / ಭೀಮಪಾಕ ಎಂಬ ಹೆಸರಲ್ಲಿ ಪುರುಷನ ಪೇಟೆಂಟ್ ಮಾಡಿಸಿಕೊಂಡಿದೆ. ಜಗತ್ತಿನ ಬಹುತೇಕ ಸಾಹಿತ್ಯದಲ್ಲಿ ಮಹಿಳೆಯನ್ನು ಮಾಯೆಯಂತೆ ಚಂಚಲೆಯಾಗಿ ಚಿತ್ರಿಸಿರುವುದೇ ಹೆಚ್ಚು. ಜಗತ್ತಿನ ಪ್ರಮುಖ ನಾಟಕಕಾರನೆನಿಸಿರುವ ಷೇಕ್ಸ್‌ಪಿಯರ್ ಕೂಡ ಇದಕ್ಕೆ ಹೊರತಲ್ಲ.

ವೇದಕಾಲದಿಂದ ಆರಂಭಿಸಿದರೆ ಗಾರ್ಗಿ, ಮೈತ್ರೇಯಿ, ತಾತ್ವಿಕ ಚಿಂತನೆ ಮತ್ತು ಸಂವಾದದಲ್ಲಿ ಪಾಲ್ಗೊಳ್ಳುತ್ತಿದ್ದರು ಎಂಬುದನ್ನು ನಾವು ಕೇಳಿಬಲ್ಲ ಮಾತು. ಆದರೆ ನಾಲ್ಕು ವೇದಗಳಲ್ಲಿ ರಚಿತವಾದ ಸೂಕ್ತಗಳಲ್ಲಿ ಮಹಿಳೆಯರ ಪಾಲು ಎಷ್ಟಿತ್ತು ಅಂತ ನೋಡಿದಾಗ ೯೮:೨ ಅಂತ ವಿದ್ವಾಂಸರೇ ಹೇಳಿದ್ದಾರೆ. ಅವರ ಹೆಸರೇ ಇರುವುದಿಲ್ಲ.

ಭಾಷೆಯ ರಚನೆಯಲ್ಲಿಯೇ ಅಂಗರಾಜಕಾರಣದ ಪ್ರಾಧಾನ್ಯತೆ ಎದ್ದು ಕಾಣುತ್ತದೆ. ಪ್ರತಿಯೊಂದು ಸಾಧನೆಗಳ ಸಂಬೋಧನೆಯಲ್ಲೂ ಅವನು ಬಳಕೆಯಾಗುತ್ತಾನೆಯೇ ಹೊರತು ಅವಳು ಬಳಕೆಯಾಗುವುದಿಲ್ಲ. ಉದಾಹರಣೆ : ಮನುಷ್ಯ ಎಂದರೆ ಪುರುಷ ಪ್ರಧಾನತೆಯೇ ಹೊರತು ಅಲ್ಲಿ ಮಹಿಳೆ ಗೌಣವಾಗುತ್ತಾಳೆ. ಅದೇ ರೀತಿ ಭಾಷೆಯೊಳಗೆ ಸಾಮಾನ್ಯೀಕರಣಗೊಂಡ ಪ್ರಯೋಗಗಳು ಹೆಚ್ಚಾಗಿ ಬಳಕೆಯಾಗುವುದು ಅವನನ್ನು ಉದ್ದೇಶಿಸಿಯೇ ಹೊರತು ಅವಳನ್ನು ನಿರ್ದೇಶಿಸಿದಂತೆ ಅಲ್ಲ. ಇಲ್ಲಿ ಭಾಷೆಯ ಸೃಜನಶೀಲ ಪ್ರಕಾರಗಳನ್ನು ನೋಡಿದಾಗ ಆ ಎಲ್ಲ ಪ್ರಕಾರಗಳಲ್ಲೂ 'ಅವನು' ಮುಖ್ಯವಾಗುತ್ತಾನೆಯೇ ಹೊರತು ಅವಳು ಮುಖ್ಯವಾಗುವುದಿಲ್ಲ.

**ಡಾ॥ ವಸುಂಧರಾ ಭೂಪತಿ**

ಭಾರತೀಯ ಸಮಾಜದಲ್ಲಿ ಮಹಿಳೆಗೆ ಆರ್ಥಿಕ, ಸಾಮಾಜಿಕ, ರಾಜಕೀಯ ಸಮಾನತೆ ಇನ್ನೂ ಸಿಕ್ಕಿಲ್ಲ. ೧೦ನೇ ಶತಮಾನದಲ್ಲಿ ಪಂಪನ ದ್ರೌಪದಿ ಲಿಂಗ ರಾಜಕಾರಣದ ಬಗ್ಗೆ ಮಾತಾಡ್ತಾಳೆ. 'ರಾಜಕಾರಣದ ನಯಮೆತ್ತ ಅಬಲಾ ಜನಾದೊಂದು ಬುದ್ಧಿ.' ಕೃಷ್ಣನಿಗೆ ಅವನು ಯುದ್ಧವನ್ನು ಆಯ್ಕೆ ಮಾಡಿಕೊಳ್ಳಲು ಪ್ರೇರೇಪಿಸುತ್ತಾಳೆ. ಅಲ್ಲಿ ದ್ರೌಪದಿ ಒಬ್ಬ ನಿಜವಾದ ರಾಜಕಾರಣಿಯಾಗಿ ಚಿತ್ರಿತಳಾಗಿದ್ದಾಳೆ. ಕೃಷ್ಣ ಸಂಧಾನ ಮುರಿದುಬಿದ್ದು ಯುದ್ಧವಾಗುವಂತೆ ಮಾಡುವಲ್ಲಿ ಯಶಸ್ವಿಯಾಗುತ್ತಾಳೆ. ಪಂಪನಿಗೆ ಆ ಕಾಲದಲ್ಲಿ ಮಹಿಳಾ ಮಾದರಿ ಯಾರಿರಬಹುದು? ಇದೊಂದು ಕುತೂಹಲದ ಪ್ರಶ್ನೆಯಾಗಿ ನಮ್ಮನ್ನು ಕಾಡುತ್ತದೆ.

ಇನ್ನು ೧೨ನೇ ಶತಮಾನವಂತೂ ಅದುವರೆಗಿನ ವೈದಿಕ ಸಂಸ್ಕೃತಿಯನ್ನು ಧಿಕ್ಕರಿಸಿ ದೇವರು, ಧರ್ಮ, ಯಜ್ಞಯಾಗಾದಿಗಳನ್ನು ಬೇಡವೆಂದು ತಿರಸ್ಕರಿಸಿ ದೇಹವೇ ದೇವಾಲಯ ಎಂದು ವೈದಿಕ, ವಚನಕಾರರು/ವಚನಕಾರ್ತಿಯರು ಮತವನ್ನೇ ಧಿಕ್ಕರಿಸಿದವರು. ಪರ್ಯಾಯ ಸಂಸ್ಕೃತಿಯ ಮುಖ್ಯ ಆಶಯವೇ ಪ್ರಶ್ನಿಸುವುದು. ಲಿಂಗರಾಜಕಾರಣದ ಬಗ್ಗೆ ಆ ಸಮಯದಲ್ಲಿ ವಚನಕಾರ್ತಿಯರು ಮಾತನಾಡಿದರು. ಪ್ರಶ್ನಿಸುವುದಕ್ಕೆ ಶುರುಮಾಡಿದರು.

*ಗಂಡು ಗಂಡಾದೆಡೆ ಹೆಣ್ಣಿನ ಸೂತಕ*
*ಹೆಣ್ಣು ಹೆಣ್ಣಾದೆಡೆ ಗಂಡಿನ ಸೂತಕ*
*ಮನದ ಸೂತಕ ಹಿಂಗಿದೆಡೆ*
*ತನುವಿನ ಸೂತಕಕ್ಕೆ ತೆರಹುಂಟೆ*
*ಮುನ್ನಿಲ್ಲದ ಸೂತಕಕ್ಕೆ ಜನ ಮರುಳಾಯಿತ್ತು*
*ನೋಡು ಚನ್ನಮಲ್ಲಿಕಾರ್ಜುನ*

ಇದು ಕನ್ನಡದ ಪ್ರಥಮ ಕವಯತ್ರಿ ಅಕ್ಕಮಹಾದೇವಿಯ ವಚನವಾಗಿದೆ. ಇಲ್ಲಿ ಅವಳು ಗಂಡು–ಹೆಣ್ಣು ಎರಡು ಜೀವಿಗಳ ಜೈವಿಕ ಲಕ್ಷಣ ಕುರಿತು ಹೇಳುತ್ತಾಳೆ. ಗಂಡು–ಹೆಣ್ಣು ಎಂಬ ಭೇದಭಾವನೆ ಮನಸ್ಸಿಗೆ ಅಂಟಿದ ಮೈಲಿಗೆಯಾಗಿದೆಯೇ ಹೊರತು ನಿಸರ್ಗಜನ್ಯ ತಾರತಮ್ಯ ಅಲ್ಲ ಎಂದು ಸ್ಪಷ್ಟವಾಗಿ ಹೇಳಿದ್ದಾಳೆ. ಸೃಷ್ಟಿಯ ನಿರಂತರ ಚಲನೆಗಾಗಿ ಹೆಣ್ಣು–ಗಂಡು ಎಂಬ ಲಿಂಗ ವೈವಿಧ್ಯ ಅತ್ಯಂತ ಅವಶ್ಯ ಮತ್ತು ಅನಿವಾರ್ಯ ಅಭಿಮಾನ. ಎಲ್ಲ ಬಗೆಯ ಶಕ್ತಿ ಸಂಚಲನೆಗೆ ಧನಾತ್ಮಕ ಋಣಾತ್ಮಕ ಎಂಬ ಅಂಶಗಳು ಬೇಕೇ ಬೇಕು. ಆದ್ದರಿಂದ ಸೃಷ್ಟಿಯ ಎಲ್ಲ ಪಶು, ಪಕ್ಷಿ, ಪ್ರಾಣಿ ಮುಂತಾದ ಜೀವರಾಶಿಗಳಲ್ಲಿ ಉಭಯಲಿಂಗಿಗಳು ಅಸ್ತಿತ್ವದಲ್ಲಿವೆ. ಅಕ್ಕಮಹಾದೇವಿಯೇ ಹೀಗೆ ನುಡಿದಿದ್ದಾಳೆ :

*ಪುರುಷನ ಮುಂದೆ ಸ್ತ್ರೀ ಎಂಬ*
*ಅಭಿಮಾನವಾಗಿ ಕಾಡಿತ್ತು ಮಾಯೆ*
*ಸ್ತ್ರೀಯ ಮುಂದೆ ಪುರುಷನೆಂಬ*
*ಅಭಿಮಾನವಾಗಿ ಕಾಡಿತ್ತು ಮಾಯೆ.*

ಇಲ್ಲಿ ಪರಸ್ಪರದ ಶಕ್ತಿ ಸಾಧನೆಯನ್ನು ನೈಸರ್ಗಿಕ ನೆಲೆಯಲ್ಲಿ ಒಪ್ಪಿಸುತ್ತಾಳೆ. ಇದೇ ಅವಧಿಯಲ್ಲಿ ಬಸವಣ್ಣನ ಪತ್ನಿಯರಾದ ನೀಲಾಂಬಿಕೆ, ಗಂಗಾಂಬಿಕೆ, ಅಜಗಣ್ಣನ ತಂಗಿ ಮುಕ್ತಾಯಕ್ಕ, ಆಯ್ದಕ್ಕಿ ಲಕ್ಕಮ್ಮ, ಮೋಳಿಗೆ ಮಹಾದೇವಯ್ಯ, ಸೂಳೆ ಸಂಕವ್ವ, ಕಸಗುಡಿಸುವ ಸತ್ಯಕ್ಕ, ದಲಿತರ ಕಾಳವ್ವೆ, ಗೊಗ್ಗವ್ವೆ, ಬೊಂತಾದೇವಿ ಮುಂತಾದ ೩೦ಕ್ಕೂ ಹೆಚ್ಚು ಮಹಿಳೆಯರು ಸಾಹಿತ್ಯ ರಚಿಸಿದ್ದಾರೆ. ಪುರುಷನ ಸಮಾನವಾಗಿ ಅನುಭವ ಮಂಟಪದಲ್ಲಿ ಕುಳಿತು ತಮ್ಮ ಬದುಕುವ ಹಕ್ಕಿನ ಕುರಿತು ಮಾತನಾಡಿದ್ದಾರೆ. ಕೆಲವು ವಚನಕಾರ್ತಿಯರಂತೂ ತೀರಾ ಮೂಲಭೂತ ಪ್ರಶ್ನೆಯನ್ನೆತ್ತಿ ದಂಗುಬಡಿಸಿದ್ದಾರೆ. ಗೊಗ್ಗವ್ವೆ ಲೈಂಗಿಕ ಸ್ವಾತಂತ್ರ್ಯದ ಬಗ್ಗೆ ಮಾತನಾಡಿ ಹೇಳುತ್ತಾಳೆ :

*ಗಂಡು ಮೋಹಿಸಿ ಹೆಣ್ಣು ಹಿಡಿದಡೆ*
*ಅದು ಒಬ್ಬರ ಒಡವೆ ಎಂದರಿಯಬೇಕು*
*ಹೆಣ್ಣು ಮೋಹಿಸಿ ಗಂಡ ಹಿಡಿದಡೆ*

ಉತ್ತರವಾವುದೆಂದರಿಯಬೇಕು.

ಇದರರ್ಥ ಗಂಡಸು ಹೆಣ್ಣನ್ನು ಮೋಹಿಸಿ ಅವರನ್ನು ತಮ್ಮ ಬಯಕೆಗೆ ಬಳಸಿಕೊಂಡರೆ ಅದಕ್ಕೆ ಸಮ್ಮತಿಸುವ ಸಮಾಜ ಅದೇ ಕೆಲಸ ಸ್ತ್ರೀಯರು ಮಾಡಿದರೆ ಶಿಕ್ಷಿಸುವುದೇಕೆ? ಎಂದು ತಾರ್ಕಿಕ ಪ್ರಶ್ನೆ ಎತ್ತುತ್ತಾಳೆ. ಲೈಂಗಿಕ ಮಡಿವಂತಿಕೆ ಸ್ತ್ರೀಯರಿಗೆ ಮಾತ್ರ ಮೀಸಲು; ಪುರುಷರಿಗೆ ಏಕೆ ಈ ವಿಷಯದಲ್ಲಿ ನಿರ್ಬಂಧವಿಲ್ಲ? ಅವನು ಮುಕ್ತವಾಗಿ ಅವನ ಲೈಂಗಿಕ ಬಯಕೆಗಳನ್ನು ತೀರಿಸಿಕೊಳ್ಳಬಹುದು. ಅದು ಅವನ ಹಕ್ಕು. ಆದರೆ ಮಹಿಳೆಯರಿಗೆ ಈ ಹಕ್ಕು ಇಲ್ಲ. ಮದುವೆ ಮುಂಚಿನ ಲೈಂಗಿಕ ಬದುಕು ಅವಳಿಗೆ ವರ್ಜ್ಯ. ಹಾಗೇನಾದರೂ ಆದರೆ ಆಕೆಯನ್ನು ಕುಲಟಿ, ಜಾರಿಣಿ, ಶೀಲಗೆಟ್ಟವಳು ಅಂತ ಜರಿದಿದ್ದಾರೆ. ಗೊಗ್ಗವ್ವೆ ಈ ಅನ್ಯಾಯವನ್ನು ಪ್ರತಿಭಟಿಸುತ್ತಾಳೆ. ಲೈಂಗಿಕ ಬದುಕಿನಲ್ಲಿ ಪುರುಷರಿಗೊಂದು ಸ್ತ್ರೀಯರಿಗೊಂದು ನಿಯಮ ಸಲ್ಲದು ಎನ್ನುತ್ತಾಳೆ.

ಆಯ್ದಕ್ಕಿ ಲಕ್ಕಮ್ಮನಂತೂ ಕುಟುಂಬ ಒಡ್ಡಿದ ನಿರ್ಬಂಧನೆಗಳನ್ನು ಕುರಿತು ಪ್ರಶ್ನಿಸುತ್ತಾಳೆ :

*ಆವ ಬೀಜ ಮೊಳೆಯುವಲ್ಲಿ*
*ಹಿಂಚುಮುಂಚುಂಟೆ?*

ಕೂಟಕ್ಕೆ ಸತಿಪತಿಯೆಂಬ ನಾಮವಲ್ಲದೇ ಅರಿವಿಗೆ ಬೇರೊಂದು ಒಡಲುಂಟೆ? ಎಂದು ಕೇಳುತ್ತಾಳೆ. ಈ ವಚನ ತುಂಬ ಸ್ಪಷ್ಟವಾಗಿ ಗಂಡ–ಹೆಂಡತಿಯರ ದಾಂಪತ್ಯ ಸಂಬಂಧ ವ್ಯಾಪ್ತಿಯನ್ನು ಕುರಿತು ಮಾತನಾಡುತ್ತದೆ. ಬೀಜ ಮೊಳೆಯಬೇಕಾದರೆ ಬೀಜದ ಮೇಲ್ಭಾಗ ಮೊದಲು, ಬೀಜದ ಕೆಳಭಾಗ ಹಿಂದೆ ಇರುತ್ತದೆ. ಹೀಗಿರುವುದು ನಿಸರ್ಗದ ನಿಯಮ. ಪುರುಷ, ಸ್ತ್ರೀ ಪರಸ್ಪರ ಮಿಲನದಲ್ಲಿ ಸಂತಾನ ಅಂಕುರಿಸುತ್ತದೆ. ಪುರುಷನಿಂದ ವೀರ್ಯಾಣು ಪಡೆದು ಸ್ತ್ರೀ ಗರ್ಭ ಧರಿಸುತ್ತಾಳೆ. ಇದೇ ಗರ್ಭ ಬೆಳೆದು ಮಗುವಾಗಿ ಭೂಮಿಗೆ ಬರುತ್ತದೆ. ಇದೊಂದು ನೈಸರ್ಗಿಕ ಪ್ರಕ್ರಿಯೆ. ಈ ಪ್ರಕ್ರಿಯೆಯಲ್ಲಿ ಸ್ತ್ರೀಪುರುಷರಿಬ್ಬರಿಗೂ ಪ್ರಕೃತಿ ಭಿನ್ನಪಾತ್ರ ನೀಡಿದೆ. ಈ ದಾಂಪತ್ಯಗಳು ಪರಸ್ಪರ ಸಹಜ ಮತ್ತು ಸಮಾನ. ಇದರಲ್ಲಿ ಯಾರೂ ಮೇಲಲ್ಲ. ಯಾರೂ ಕೀಳಲ್ಲ. ಯಾರ ಪಾತ್ರ ಕಡಿಮೆ, ಹೆಚ್ಚು ಅಲ್ಲ. ಸಂತಾನ ಸೃಷ್ಟಿಯಲ್ಲಿ ಪುರುಷನು ಮಾತ್ರ ಗೌಣ ಎಂದಾಗಲಿ ಅಥವಾ ಅದು ಸ್ತ್ರೀಯರ ಕರ್ಮ ಎಂದಾಗಲಿ ಅಲ್ಲ. ಸಂತಾನಕ್ಕಾಗಿ ಅವರು ಸತಿಪತಿಗಳೆಂಬ ಅಭಿಧಾನ ಕರ್ತವ್ಯ ಪಾಲಿಸುತ್ತಿರಬೇಕು. ಅಷ್ಟೇ ಹೊರತು, ಪತಿ ಅಂದರೆ ಶ್ರೇಷ್ಠ, ಅವನು ಮನಬಂದಂತೆ ನಡೆದುಕೊಳ್ಳಬಹುದು ಎಂದಲ್ಲ. ಪುರುಷ ಎಂಬ ಕಾರಣಕ್ಕಾಗಿಯೇ ಅವನು ಸ್ತ್ರೀಯನ್ನು ಯಾವುದೇ ರೀತಿಯಿಂದಲೂ ಶೋಷಿಸಲಾಗದು. ಹೀಗೆ ಶೋಷಿಸುವುದನ್ನು ಸ್ತ್ರೀಯರು ಒಪ್ಪಿಕೊಳ್ಳಲಾಗದು ಎಂದು ಆಯ್ದಕ್ಕಿ ಲಕ್ಕಮ್ಮ ಪ್ರತಿಭಟಿಸುತ್ತಾಳೆ.

ಸ್ತ್ರೀಪುರುಷ ಎಂಬ ಭೇದ ಸಲ್ಲದು ಎಂಬುದಕ್ಕೆ ಕಸಗುಡಿಸುವ ಕಾಯಕದ ಸತ್ಯಕ್ಕನ ವಚನ :

*ಮೊಲೆ ಮುಡಿ ಇದ್ದುದೇ*
*ಹೆಣ್ಣೆಂದು ಪ್ರಮಾಣಿಸಲಲ್ಲ*
*ಕಾಸೆ ಮೀಸೆ ಕಠಾರೆ ಇದ್ದುದೇ*
*ಗಂಡೆಂದು ಪ್ರಮಾಣಿಸಲಲ್ಲ.*
*ಅದು ಜಗನದ ಹಾಹೆ : ಬಲ್ಲವರ ನೀತಿಯಲ್ಲ*
*ಏತರ ಹಣ್ಣಾದರು ಮಧುರವೇ ಕಾರಣ*
*ಅಂದವಿಲ್ಲದ ಕುಸುಮಕ್ಕೆ ವಾಸನೆಯೇ ಕಾರಣ*
*ಇದರಂದವ ನೀನೇ ಬಲ್ಲೆ ಶಂಭುಜಕ್ಕೇಶ್ವರಾ ॥*

ಹೆಣ್ಣುತನ, ಗಂಡುತನಗಳು ಸೃಷ್ಟಿಯ ವೈರುಧ್ಯವೇ ಹೊರತು ಭೇದವಲ್ಲ.

ರಾಜಪ್ರಭುತ್ವದಲ್ಲಿ ರಾಜರುಗಳು ತೀರಿಹೋದಾಗ ಆ ಸಂಸ್ಥಾನವನ್ನು ಉಳಿಸುವುದು ಹೆಂಡತಿಯಾಗಿ, ಆ ಹೊತ್ತಿನ ಅನಿವಾರ್ಯತೆಯಾಗಿ, ಆಡಳಿತ ಮಾಡಿದ ಕಿತ್ತೂರು ಚೆನ್ನಮ್ಮ, ರಾಣಿ ಅಬ್ಬಕ್ಕ ಮುಂತಾದವರಿಗೆ ಆ ಕಾಲದ ರಾಜಕೀಯ ಅನಿವಾರ್ಯತೆಯಾಗಿತ್ತು. ನಾವು ಅವರ ಬಗ್ಗೆ ಹೆಮ್ಮೆ ಪಡಲೇಬೇಕು.

ಜನಪದದಲ್ಲಿ ಕೆಲವರು ಲಿಂಗರಾಜಕಾರಣದ ಪ್ರಶ್ನೆಯನ್ನು ಹಾಕಿದ್ದಾರೆ. ಕೃಷಿ, ಹೈನುಗಾರಿಕೆ ಮುಂತಾದ ಎಲ್ಲ ಆರ್ಥಿಕ ಚಟುವಟಿಕೆಗಳಲ್ಲಿ ಆಕೆಯ ಪಾಲು ಗಂಡಿಗೆ ಸಮನಾಗಿದ್ದರೂ ಅದರ ಫಲ ಮಾತ್ರ ಆಕೆಗೆ ದಕ್ಕುವುದಿಲ್ಲ. ಜಾನಪದದಲ್ಲಿ ಗ್ರಾಮೀಣ ಬದುಕಿನಲ್ಲಿ ಸ್ತ್ರೀದೇವತೆ, ಶಕ್ತಿದೇವತೆಗಳು, ಮಹಿಷಾಸುರ ಮರ್ದಿನಿಗೆ ಮಹತ್ವ ಸಿಕ್ಕಷ್ಟು ಶಿಷ್ಟ ದೇವತೆಗಳಿಗೆ ಸಿಕ್ಕಿಲ್ಲ. ರಾಮನಿಗೆ ಎಲ್ಲೆಲ್ಲೂ ಆರಾಧನೆ, ಪೂಜೆ; ಸೀತೆಗೆ ಎಲ್ಲೂ ಪೂಜೆ ಮಾಡಿದ್ದೇ ನೋಡಿಲ್ಲ.

ಜನಪದ ಸಾಹಿತ್ಯದಲ್ಲಿ ಹೆಣ್ಣನ್ನು ಶಕ್ತಿ ಎಂದು ಹೊಗಳುವ ಹಾಡುಗಳು ಇವೆ. ಮಾರಮ್ಮ, ದುರ್ಗಮ್ಮ, ಜಾತ್ರೆ, ಬಲಿ ಆಚರಣೆಗಳು ಇವೆ.

ದಾಸ ಸಾಹಿತ್ಯದಲ್ಲಿ ಲಿಂಗರಾಜಕಾರಣದ ಪ್ರಶ್ನೆಗಳನ್ನು ಎತ್ತಿರುವ ಉದಾಹರಣೆ ನಮಗೆ ಸಿಗುವುದಿಲ್ಲ. ಇನ್ನು ಹೆಳವನಕಟ್ಟೆ ಗಿರಿಯಮ್ಮ "ಪೆಣ್ಣು ಪೆಣ್ಣೆಂದೇಕೆ ಬೀಳುಗಳೆಯುವಿರಿ ಕಣ್ಣುಕಾಣದ ಗಾವಿಲರು" ಎಂದು ಹೇಳಿದ್ದಾಳೆ.

ಹೊಸಗನ್ನಡದಲ್ಲಿ ಹೊಸ ಆಲೋಚನೆಗಳು ಹುಟ್ಟಿದ್ದು ಬಂಗಾಳಿ ಸಾಹಿತ್ಯದ ಅನುವಾದದ ನಂತರ; ಅಲ್ಲಿ ಪ್ರಶ್ನೆ ಮಾಡುವ ಕೆಲವು ಮಾದರಿಗಳು ನಮಗೆ ದೊರೆಯುತ್ತವೆ. ಆಗ ಮೊದಲ ತಲೆಮಾರಿನ ಮಹಿಳೆಯರಿಗೆ ಶಾಲೆ, ಕಾಲೇಜಿಗೆ ಹೋಗುವ ಅವಕಾಶ ಸಿಕ್ಕಿದ್ದು. ನಂಜನಗೂಡು ತಿರುಮಲಾಂಬ, ಆರ್. ಕಲ್ಯಾಣಮ್ಮ ಮುಂತಾದವರು ಬೌದ್ಧಿಕ ಚಿಂತನೆಗೆ ತೆರೆದುಕೊಂಡರು. ಕನ್ನಡದ ಆಸ್ತಿಯೆಂದು ಕರೆಯುವ ಮಾಸ್ತಿಯವರು ಕೂಡ ತಿರುಮಲಾಂಬ ಅವರಿಗೆ 'ನೀನೇನು ಪುಸ್ತಕ ಬರೆಯುವುದು?' ಅಂತ ಕೇಳ್ತಾರೆ. ಅದೇ ರೀತಿ ಜ್ಞಾನಪೀಠ ಪುರಸ್ಕೃತೆ ಅಮೃತಾ ಪ್ರೀತಂಗೆ ಖುಷ್ವಂತ್‌ಸಿಂಗ್ ಇದೇ ರೀತಿಯ ಪ್ರಶ್ನೆಗಳನ್ನು ಹಾಕುತ್ತಾರೆ. ಸರಸ್ವತಿಬಾಯಿ ರಾಜವಾಡೆಯವರಿಗೂ ಮಾಸ್ತಿಯವರು 'ನೀನು ಅಡುಗೆ ಮಾಡ್ಕೊಂಡು ಮಕ್ಕಳನ್ನು ನೋಡ್ಕೊಂಡಿರೋದು ಬಿಟ್ಟು ಬರವಣಿಗೆ ಎಲ್ಲ ಯಾಕೆ ಬೇಕು?' ಅಂತ ಹೇಳುತ್ತಾರೆ. ಅದನ್ನು ಅವರು ತಮ್ಮ ಪುಸ್ತಕದಲ್ಲಿ ಹಾಗೆಯೇ ಯಥಾವತ್ ಅಚ್ಚು ಹಾಕಿಸಿದ್ದಾರೆ.

ಒಟ್ಟು ಸಮಾಜ ಎಲ್ಲ ಕಾಲಘಟ್ಟದಲ್ಲಿಯೂ ರೂಪುಗೊಂಡಿರುವುದೇ ಆರ್ಥಿಕ, ಧಾರ್ಮಿಕ ಲಿಂಗಾಧಾರಿತ ಭಿನ್ನ ತಳಹದಿಯ ಮೇಲೆ ಅಲ್ಲವೆ?

ಶ್ರೀಮಂತರು – ಬಡವರು
ಮೇಲ್ಜಾತಿ– ಕೆಳಜಾತಿ
ಪುರುಷರು– ಮಹಿಳೆಯರು

ಈ ಮೂರು ಮುಖ್ಯ ವಿಷಯಗಳ ರಾಜಕಾರಣವೇ ಮುಖ್ಯವಾಗಿರುತ್ತದೆ, ಕುಟುಂಬದಿಂದ ಸಮುದಾಯ, ಸಮಾಜದ ಒಟ್ಟು ವ್ಯವಸ್ಥೆ ರೂಪುಗೊಂಡಿದೆ. ಇದಕ್ಕೆ ಸಾಹಿತ್ಯವು ಹೊರತಲ್ಲ.

ಹೊಸ ಆಲೋಚನೆ, ಸಂವೇದನೆ, ಚಿಂತನೆ ಹುಟ್ಟಿ ತ್ರಿವೇಣಿ, ಎಂ. ಕೆ. ಇಂದಿರಾ, ಅನುಪಮಾ ನಿರಂಜನ (ಮಾಧವಿ), ಕೊಡಗಿನ ಗೌರಮ್ಮ ಎಲ್ಲರೂ ತಮ್ಮ ಕೃತಿಗಳ ಮೂಲಕ ಮಹಿಳಾ ಅಸ್ಮಿತೆಯ ಬಗೆಗೆ ಬೆಳಕು ಚೆಲ್ಲಿದರು.

ನವೋದಯದಲ್ಲಿ ಕವಿಗಳು ಹೆಣ್ಣನ್ನು ಹೊಗಳುವ, ಆರಾಧಿಸುವ, ಹೆಚ್ಚು ಪ್ರೀತಿಸುವ ಹೆಣ್ಣನ್ನು ಚಿತ್ರಿಸಿದರೆ ನವ್ಯದಲ್ಲಿ ಹೆಣ್ಣು ಭೋಗದ ವಸ್ತುವಾಗಿ ಕಾಮದ ವೈಭವೀಕರಣವಾಗಿ ಚಿತ್ರಿತವಾಗುತ್ತಾ ಹೋಗಿದ್ದೇಕೆ? ಮಹಿಳೆಯರ ಸ್ಪಷ್ಟವಾದ ಧ್ವನಿ ಬರವಣಿಗೆಯಲ್ಲಿ ಬಂದಿದ್ದೇ ಬಂಡಾಯ ಸಾಹಿತ್ಯದಲ್ಲಿ. ಲಿಂಗರಾಜಕಾರಣದ ದೃಷ್ಟಿಯಿಂದ ನೋಡಿದರೆ ಲಿಂಗ–ವಿಶ್ಲೇಷಣೆ ನಡೆದಿದ್ದೇ ಬಂಡಾಯ ಸಾಹಿತ್ಯದಲ್ಲಿ. ಚರಿತ್ರೆಯನ್ನು ನಾವು ನೋಡಿದರೆ ಅದು ಅವನ (ಹಿಸ್) ಸ್ಟೋರಿಯೇ ಹೊರತು (ಹರ್) ಸ್ಟೋರಿ ಅಲ್ಲ ಎಂಬ ಮಾತನ್ನು ಪದೇ ಪದೇ ಹೇಳಬೇಕಾಗುತ್ತದೆ. ಮಹಿಳೆಯ ದೃಷ್ಟಿಕೋನದಿಂದ ಚರಿತ್ರೆ ಕಂಡದ್ದೇ ಇಲ್ಲ, ಬರೆದಿದ್ದೇ ಇಲ್ಲ.

ಕುವೆಂಪು ಕನ್ನಡ ಸಾಹಿತ್ಯದಲ್ಲಿ ಒಂದು ಹೊಸ ಮನ್ವಂತರವನ್ನೇ ಹುಟ್ಟುಹಾಕಿದರು. ಇವರು ಯುಗಪ್ರಜ್ಞೆಯನ್ನು ಒಳಗೊಂಡ ಕವಿ. ಕನ್ನಡಕ್ಕೆ ಕೆಲವು ಹೊಸ ಪರಭಾಷೆಗಳನ್ನು ಕೊಡುವ ಮುಖೇನ ಸಾರ್ವಜನಿಕ ವ್ಯವಸ್ಥೆಯೊಳಗೆ ಪಲ್ಲಟವನ್ನುಂಟುಮಾಡಿದರು. ನಮ್ಮ ಸಮಾಜದಲ್ಲಿ ಮಹಿಳೆ ಎರಡನೆಯ ದರ್ಜೆಯ ಪ್ರಜೆ. ಎಷ್ಟು ದುಡಿದರೂ ಅವಳ ದುಡಿಮೆಗೆ ಮಾನ್ಯತೆ ಇಲ್ಲ. ಗೃಹಕೃತ್ಯವನ್ನು ನಿಭಾಯಿಸಿ ಸಮಾಜ ಸುಸ್ಥಿತಿಯಲ್ಲಿ ಸರಿದಾರಿಯಲ್ಲಿ ನಡೆಸುವ ಹೆಣ್ಣಿನ ಜೀವನ, ಸಂಸ್ಕೃತಿ ನಿರ್ವಹಣೆಯ ಸಂದರ್ಭದಲ್ಲಿ ಮಹತ್ವಪೂರ್ಣವಾದುದು. ಈ ದೇಶದಲ್ಲಿ ಋಷಿಮುನಿಗಳನ್ನು ಇತಿಹಾಸದ ಪುಟಗಳಲ್ಲಿ ಕೊಂಡಾಡಲಾಗಿದೆ. ಆದರೆ ಸಂಸಾರ ನೌಕೆಯನ್ನು ಸುಗಮವಾಗಿ ಮುನ್ನಡೆಸುವ ತಾಳ್ಮೆಯ ಪ್ರೀತಿರೂಪವಾದ ಸ್ತ್ರೀಯ ಬದುಕು, ಒಂದು ಮಹಾತಪಸ್ಸಿನ

ಸ್ವರೂಪದ್ದು. ಇದನ್ನು ಗಮನಿಸಿಯೇ ಕುವೆಂಪು ರವರು ಹೆಣ್ಣನ್ನು ಗೃಹತಪಸ್ವಿನಿ ಎಂದು ಕರೆದರು. ಹೀಗೆ ಅವಜ್ಞೆಗೆ ಗುರಿಯಾಗಿದ್ದವರನ್ನು, ಅನಾದರಣೆಗೆ ಒಳಗಾಗಿದ್ದವರನ್ನು, ಉನ್ನತೀಕರಿಸುವ ಕಾರ್ಯವನ್ನು ಕುವೆಂಪು ಮಾಡಿದ್ದಾರೆ. ಹೆಚ್ಚೇನು, ಅವರ ಎರಡು ಮಹಾ ಕಾದಂಬರಿಗಳ ಹೆಸರು ಹೆಣ್ಣನ್ನು ಗೌರವಿಸಿದಂತೆ ಇಟ್ಟ ಹೆಸರುಗಳೇ ಆಗಿವೆ. ಕಾನೂರು ಸುಬ್ಬಮ್ಮ ಹೆಗ್ಗಡತಿ ಕಾನೂರು ಹೆಗ್ಗಡತಿ ಎಂದಾಯಿತು, ಇನ್ನೊಂದು 'ಮಲೆಗಳಲ್ಲಿ ಮದುಮಗಳು'. ಈ ಎರಡು ಮಹಾ ಕಥನಗಳಲ್ಲಿ ಕುವೆಂಪು ಕಾಣಿಸಿರುವ ಅನುಭಾವ ಲೋಕ ಸ್ತ್ರೀ ಶೋಷಣೆಯ ಒಳಸಂಕಟಗಳನ್ನು ಅನಾವರಣಗೊಳಿಸಿರುವ ಲೋಕ. ಕುವೆಂಪು ಅವರ ಮಹಾ ಕಾವ್ಯ ಶ್ರೀ ರಾಮಾಯಣದರ್ಶನಂ ಕೂಡ ಸ್ತ್ರೀ ಸಂವೇದನೆಯ ಮಹಾಕೃತಿ. ಆಧುನಿಕ ಸಂದರ್ಭದ ವೈಜ್ಞಾನಿಕ ವೈಚಾರಿಕ ಆಲೋಚನೆಗಳ ನೆಲೆಯಲ್ಲಿ ಅರಳಿದ ರಾಮಾಯಣ ದರ್ಶನದಲ್ಲಿ ಸೀತೆಯ ವ್ಯಕ್ತಿತ್ವ ಪುಟಕ್ಕಿಟ್ಟ ಚಿನ್ನದಂತೆ ಮಿಂಚಿದೆ. ಒಂದು ರೀತಿಯಲ್ಲಿ ಅದು ಸೀತಾಯಣ.

ಇನ್ನೂ ಮಹತ್ವದ ವಿಚಾರವೆಂದರೆ ಕುವೆಂಪು ಅವರು ಕವನವೊಂದರಲ್ಲಿ ತಮ್ಮ ಪತ್ನಿಯ ಬಗೆಗೆ ತಾಳಿದ ನಿಲುವು. ಸ್ವರ್ಗದ ಬಾಗಿಲನ್ನು ಕುವೆಂಪು ಅವರಿಗೆ ತೆರದದ್ದು ರಾಷ್ಟ್ರಕವಿ, ಪ್ರಕೃತಿ ಕವಿ, ಕುಲಪತಿ ಇತ್ಯಾದಿ ಯಾವುದೇ ವಿಶೇಷಣಗಳ ಪರಿಚಯವಲ್ಲ. ಹೇಮಿಯ ಗಂಡ ಎಂಬ ಪರಿಚಯದಲ್ಲಿ ಸ್ವರ್ಗದ ಬಾಗಿಲು ತೆರೆಯುತ್ತದೆ. ಅಂದರೆ ಪುರುಷನ ಅಸ್ತಿತ್ವ ಸ್ತ್ರೀಯ ವ್ಯಕ್ತಿತ್ವದ ನೈತಿಕಬಲದ ಪೂರಕತ್ವದಲ್ಲಿ ಎಂಬುದನ್ನು ಕುವೆಂಪು ಈ ಪ್ರಕರಣದ ಮೂಲಕವಾಗಿ ಹೇಳಿದ್ದಾರೆ. ಈ ಎಲ್ಲ ಹಿನ್ನೆಲೆಗಳಲ್ಲಿ ಅವರು ಬರೆದ 'ಮನೆಮನೆಯ ತಪಸ್ವಿನಿಗೆ' ಅವರ ಸ್ತ್ರೀ ವೇದನೆಯ ಆಶಯವನ್ನು ಅರ್ಥಪೂರ್ಣವಾಗಿ ಕಟ್ಟಿಕೊಟ್ಟಿರುವ ಕವನ. ಚಾರಿತ್ರಿಕ ಮಹಿಳಾ ಚೇತನಗಳನ್ನು ಹೆಸರಿಸುತ್ತ ಜೊತೆಗೆ ಪ್ರತಿ ಮನೆಯಲ್ಲಿಯೂ ಗೃಹಕೃತ್ಯದಲ್ಲಿ ತೊಡಗಿಕೊಂಡಿರುವ ಸಾಮಾನ್ಯ ಹೆಣ್ಣನ್ನು ಉಲ್ಲೇಖಿಸುತ್ತ ತಮ್ಮ ಮಹಾ ಕೃತಜ್ಞತಾ ಗೌರವವನ್ನು ಉಲ್ಲೇಖಿಸುತ್ತ ಈ ಕವನದಲ್ಲಿ ನಿವೇದಿಸಿದ್ದಾರೆ.

ಪ್ರಜಾಲೋಕದ ಸ್ತ್ರೀಶಕ್ತಿ, ಆದಿಶಕ್ತಿ, ಆದುದನ್ನು ಸ್ಮರಿಸುತ್ತಾ ಲೋಕದ ದೋಷ ಪರಿಹಾರ, ದುಷ್ಟ ಪರಿಹಾರ, ಸಂಹಾರಕ ಶಕ್ತಿಯಾಗಿದ್ದು ಆದಿಶಕ್ತಿ ಶಿವೆ. ಶಿವೆ ಎಂದರೆ ಶಿವನ ಪತ್ನಿ ಎಂದಷ್ಟೇ ಅಲ್ಲ, ಅವಳು ಶುಭಾಕಾಂಕ್ಷಿ, ಅವಳು ಮಂಗಳದಾಯಿನಿ, ಪಾಪನಾಶಿನಿ. ಪುರುಷನಿಗಿಂತ ಸ್ತ್ರೀಶಕ್ತಿ ಲೋಕ ಸಂರಕ್ಷಣೆಯಲ್ಲಿ ಹೇಗೆ ಮಹತ್ತರ ಪಾತ್ರ ವಹಿಸುತ್ತದೆಂಬುದನ್ನು ಹೇಳಿದ್ದಾರೆ.

ಲೋಕದಲ್ಲಿ ಕೀರ್ತಿಶನಿಯ ಬೆನ್ನುಹತ್ತಿದ ಪುರುಷಾಹಂಕಾರದ ಅಟಾಟೋಪಗಳಿಗೆ ಪರ್ಯಾಯವಾಗಿ ಸ್ತ್ರೀಶಕ್ತಿಯ ತಾಳ್ಮೆ, ತಪಸ್ಸು, ಭಕ್ತಿ ಇವುಗಳನ್ನು ಇಡೀ ಕವನದಲ್ಲಿ ಮುಖಾಮುಖಿಯಾಗಿ ಹೆಣ್ಣನ್ನು ಋತದರ್ಶಿನಿ ಎಂದು ಕರೆದಿದ್ದಾರೆ. ಮನುಕುಲಕಲ್ಯಾಣಿ ಎಂದು ಕರೆದಿದ್ದಾರೆ.

೧೯೯೯ರಲ್ಲಿ ಪ್ರಕಟವಾದ ಡಾ॥ ಸಿ. ವೀರಣ್ಣನವರ 'ಕನ್ನಡ ಕಾವ್ಯ ಕಂಡ ಹೆಣ್ಣು' ಪ್ರಶ್ನೆಮಾಡುವ ಕಾವ್ಯದ ಕುರಿತು ಪ್ರತಿಭಟನೆಯ ಕಾವ್ಯದ ವಿಚಾರ ಕಟ್ಟಿಕೊಡುತ್ತದೆ. ಸವಾಲುಗಳನ್ನು ಎಸೆದು ವಿಶ್ಲೇಷಣೆ ಮಾಡಿ ಅನ್ಯಾಯ, ಅಸಮಾನತೆ ಹೋಗಬೇಕು ಎಂಬ ಪ್ರಶ್ನೆಗಳನ್ನು ಇಟ್ಟುಕೊಂಡಂತೆ ಯಾವ ಕಾವ್ಯ ಏನು ಹೇಳುತ್ತದೆಂದು ತಿಳಿಸುತ್ತದೆ. ಕಾವ್ಯದಲ್ಲಿ ಬಿ. ಟಿ. ಲಲಿತಾ ನಾಯಕ್, ಪ್ರತಿಭಾ ನಂದಕುಮಾರ್, ಸುಕನ್ಯಾ ಮಾರುತಿ, ಮಲ್ಲಿಕಾ ಘಂಟಿ, ಎಚ್. ಎಲ್. ಪುಷ್ಪ, ಷರಿಫಾ ಕೆ., ಚ. ಸರ್ವಮಂಗಳ, ಸ್ತ್ರೀವಾದಿ ವಿಮರ್ಶಕಿ ಬಿ. ಎನ್. ಸುಮಿತ್ರಾ ಬಾಯಿ, ಎಚ್. ಎಸ್. ಶ್ರೀಮತಿ, ಡಾ॥ ವಿಜಯಾ ಹೆಸರಿಸ ಬಹುದು. ಸ್ತ್ರೀವಾದ ಲೋಕ ಮೀಮಾಂಸೆಯ ತತ್ವವಾಯಿತು. ಅವಳ ದೃಷ್ಟಿಯಿಂದ ನೋಡುವ ರೀತಿಯ ಬಗ್ಗೆ ಮಹಿಳಾ ಅಸ್ಮಿತೆಯ ಆತ್ಮಕಥಾನಕಗಳ ವಿಷಯದಲ್ಲಿ ಗಿರೀಶ್‌ಕಾರ್ನಾಡ್‌ರ 'ಆಡಾಡ್ತ ಆಯುಷ್ಯ'ಕ್ಕೆ ಸಿಕ್ಕ ಪ್ರತಿಕ್ರಿಯೆ ಪ್ರತಿಭಾ ನಂದಕುಮಾರರ 'ಅನುದಿನದ ಅಂತರಗಂಗೆ'ಗೆ ಸಿಕ್ಕಲಿಲ್ಲ. ಶಶಿಕಲಾ ವೀರಯ್ಯ ಸ್ವಾಮಿಯವರ ಕೃತಿಗೆ ಸಿಕ್ಕ ಪ್ರತಿಕ್ರಿಯೆ ಯಾವ ರೀತಿಯದೆಂದು ನಾವೆಲ್ಲ ನೋಡಿದ್ದೇವೆ. ಎಂ. ಕೆ. ಇಂದಿರಾರ ಫಣಿಯಮ್ಮನಿಗೆ ಸಿಗಬೇಕಾದ ಮಾನ್ಯತೆ ಆ ಕಾಲದಲ್ಲಿ ಸಿಗಲಿಲ್ಲ. ಕವಯತ್ರಿಯೊಬ್ಬರ ಸಮಗ್ರ ಕಾವ್ಯಕ್ಕೆ ಮುನ್ನುಡಿ ಬರೆದ ಹಿರಿಯ ವಿಮರ್ಶಕರು ಸುದೀರ್ಘವಾದ ಮುನ್ನುಡಿ ಏನೋ ಬರೆದಿದ್ದಾರೆ. ಪ್ರತಿಯೊಂದು ಕವಿತೆಯ ಬಗ್ಗೆ ಬಹಳ ವಿಶ್ಲೇಷಣೆ ಮಾಡಿದ್ದಾರೆ, ಆದರೆ ಕನ್ನಡ ಕಾವ್ಯ ಜಗತ್ತಿನಲ್ಲಿ ಕವಯತ್ರಿ ಎಲ್ಲಿ ನಿಲ್ಲುತ್ತಾರೆ ಅಂತ ದಾಖಲಿಸುವುದೇ ಇಲ್ಲ. ಸವಿತಾ ನಾಗಭೂಷಣ್‌ರವರ ಕಾದಂಬರಿ ಸ್ತ್ರೀಲೋಕ ಮಹತ್ವವೆನಿಸುವುದೇ ಇಲ್ಲ. ವೀಣಾ ಶಾಂತೇಶ್ವರ ಅವರು ಹಿನ್ನೆಲೆಗೆ ಸರಿದರೆ ಸುಮಂಗಲಾ ಅವರ ಕಥೆಗಳು, ನಾಗವೇಣಿಯವರ 'ಗಾಂಧಿ ಬಂದ' ಬಗ್ಗೆ ವಿಮರ್ಶಾ ಜಗತ್ತಿನಲ್ಲಿ ಚರ್ಚೆ ನಡೆಯುವುದಿಲ್ಲ. ಬೇರೆ ಕಾರಣಕ್ಕಾಗಿ ಗಾಂಧಿ ಬಂದ ಬ್ಯಾನ್ ಆಗುತ್ತೆಂದಾಗ ಸುದ್ದಿಯಾಗುತ್ತದೆ. ಅನುಪಮಾ ನಿರಂಜನರವರಿಗೆ ತಮ್ಮ ಕಥೆ, ಕಾದಂಬರಿಗಳನ್ನು ವಿಮರ್ಶಕರು ಗಮನಿಸುತ್ತಲೇ ಇಲ್ಲವೆನ್ನುವ ಚಿಂತೆ ಸದಾ ಕಾಡುತ್ತಿತ್ತು.

೧೯೭೦–೧೯೮೦ರ ಅವಧಿಯಲ್ಲಿ ಹುಟ್ಟಿಕೊಂಡ ಹಲವು ಮಹಿಳಾ ಚಳುವಳಿಗಳಲ್ಲಿ ಪ್ರಮುಖವಾದ ಮಹಿಳಾವಾದವನ್ನು ಹುಟ್ಟುಹಾಕಿದ ಆಧುನಿಕ ಚಿಂತಕಿ ಸಿಮನ್ ದ ಬುವಾ. ಚಂದ್ರಗಿರಿಯ ತೀರದಲ್ಲಿ ಕಾದಂಬರಿ ಬರೆದು ಇಡೀ ಒಂದು ಧರ್ಮ ವ್ಯವಸ್ಥೆಯ ಪುರುಷಾಹಂಕಾರದ ವ್ಯವಸ್ಥೆಯನ್ನು ಬಯಲಿಗೆಳೆದ ದಿಟ್ಟ ಲೇಖಕಿ ಸಾರಾ ಅಬೂಬಕ್ಕರ. ಈ ಕೃತಿ ಬರೆದ ನಂತರ ಅವರ ಅನುಭವಗಳು, ನೋವುಗಳು ಅನುಭವಿಸಿದ ತಲ್ಲಣಗಳು ಕೂಡ ಹೆಚ್ಚು.

ರಾಜಕೀಯದ ಒಂದು ವಿಚಾರದ ಬಗ್ಗೆ ಹೇಳದೇ ಇದ್ದರೆ ತಪ್ಪಾಗುತ್ತದೆ. ಮಹಿಳಾ ಮೀಸಲಾತಿಯ ಬಗ್ಗೆ ಬರುತ್ತಿರುವ ವಿರೋಧ ನೋಡಿದರೆ ಮಹಿಳೆಯರ ಬಗ್ಗೆ ಈ ವ್ಯವಸ್ಥೆ ಆಲೋಚಿಸುವ ರೀತಿ ಗೊತ್ತಾಗುತ್ತದೆ. ಇದು ಇವತ್ತಿನ ಮುಖ್ಯ ರಾಜಕೀಯದ ಪ್ರಶ್ನೆಯಾಗಿದೆ. ಸಂಸತ್‌ನಲ್ಲಿ ೧೨% ಮಹಿಳಾ ಪ್ರಾತಿನಿಧ್ಯ ಇದೆ. ಕರ್ನಾಟಕದಲ್ಲಿ ಒಬ್ಬರೇ ಮಹಿಳೆ ಮಂತ್ರಿಯಾಗಿರುವುದು.

ಎಲ್ಲ ರಾಜಕೀಯ ಪಕ್ಷಗಳನ್ನು ನೋಡಿದಾಗ ಚುನಾವಣೆ ಸಮಯದಲ್ಲಿ ಮಹಿಳೆಯರಿಗೆ ಟಿಕೆಟ್ ನೀಡುವ ವಿಚಾರದಲ್ಲಿ ಎಷ್ಟು ತಯಾರಿದ್ದಾರೆ? ಈ ಮಹಿಳಾ ಮೀಸಲಾತಿ ಬಂದ್ರೆ ಮಾತ್ರ ರಾಜಕೀಯವಾಗಿ ಮಹಿಳೆ ಬೆಳೆಯಲು ಸಾಧ್ಯ, ಪ್ರಮುಖ ಪಾತ್ರ ವಹಿಸಲು ಸಾಧ್ಯ. ಅದಲ್ಲದೇ ಲಿಂಗನ್ಯಾಯದ ಬಗ್ಗೆ ನಾವೆಷ್ಟು ಮಾತನಾಡಿದರೂ ಅದು ಏನೂ ಪ್ರಯೋಜನವಿಲ್ಲ. ಈ ವಿಷಯದ ಬಗ್ಗೆ ಸಾಹಿತ್ಯ ಏಕೆ ಮೌನವಾಗಿದೆ? ಇದರ ಬಗ್ಗೆ ಪುರುಷ ಸಾಹಿತಿಗಳಾಗಲೀ ಬೆರಳಣಿಕೆಯಷ್ಟು ಲೇಖಕಿಯರು ಹೊರತುಪಡಿಸಿ ಉಳಿದವರು ಯಾಕೆ ಬರೆಯುತ್ತಿಲ್ಲ? ೨೧ನೇ ಶತಮಾನ ಯಾವ ಯಾವ ಸ್ವರೂಪದಲ್ಲಿ ನಮ್ಮ ಸಮಾಜ ಇವತ್ತು ಅತ್ಯಾಧುನಿಕ ಆಗ್ತಿದೆ! ಆದರೆ ಮಹಿಳೆ ಮಾತ್ರ ಕಳೆದು ಹೋಗ್ತಿದಾಳೆ. ಅವಳ ಅಸ್ಮಿತೆ ಕಳೆದುಹೋಗಿದೆ. ಹಿಲರಿ ಕ್ಲಿಂಟನ್‌ಗೆ ಅಮೇರಿಕಾದಲ್ಲಿ ಜನರು ವೋಟ್ ಮಾಡಿದರೂ ಸೆನೆಟ್ ವೋಟ್ ಮಾಡಲಿಲ್ಲ. ಮಹಿಳೆಯನ್ನು ಅಧ್ಯಕ್ಷೆಯಾಗಿ ಒಪ್ಪಿಕೊಳ್ಳೋಕೆ ಅಧಿಕಾರಶಾಹಿ ಪುರುಷ ಮನಸ್ಸುಗಳು ಸಿದ್ಧವಿರಲಿಲ್ಲ. ಅಷ್ಟೇಕೆ, ಕನ್ನಡ ಸಾಹಿತ್ಯ ಪರಿಷತ್ತಿಗೆ ೧೦೦ ವರ್ಷ ತುಂಬಿದರೂ ಒಬ್ಬ ಮಹಿಳೆ ಅಧ್ಯಕ್ಷೆಯಾಗಲು ಸಾಧ್ಯವಾಗಿಲ್ಲ. ೮೨ ಸಮ್ಮೇಳನಾಧ್ಯಕ್ಷರಲ್ಲಿ ಕೇವಲ ನಾಲ್ಕು ಜನ ಮಹಿಳೆಯರು. ಜಯದೇವಿ ತಾಯಿ ಲಿಗಾಡೆ, ಶಾಂತಾದೇವಿ ಮಾಳವಾಡ, ಕಮಲಾ ಹಂಪನಾ, ಗೀತಾ ನಾಗಭೂಷಣ ಮಾತ್ರ ಸಮ್ಮೇಳನಾಧ್ಯಕ್ಷರಾಗಿದ್ದಾರೆ. ಇವತ್ತು ಸಮಾಜದಲ್ಲಿ ಲಿಂಗಾನುಪಾತ ಇಳೀತಾ ಇದೆ. ೧೦೦೦ ಪುರುಷರು; ಅದಕ್ಕೆ ಕೆಲವು ಕಡೆ ೯೦೮ ಮತ್ತೆ ಕೆಲವೆಡೆ ೮೦೦ ಮಹಿಳೆಯರಿದ್ದಾರೆ. ಸಾಹಿತ್ಯ ಯಾಕೆ ಇದನ್ನು ಪ್ರಶ್ನಿಸೋದಿಲ್ಲ? ಅಲ್ಲೊಬ್ರು ಇಲ್ಲೊಬ್ಬರು ಬರೆದಿದ್ದು ಬಿಟ್ರೆ ಉಳಿದವರು ಮೌನವಾಗಿದ್ದಾರೆ. ಹೆಣ್ಣಿಗೆ ಹುಟ್ಟುವ ಹಕ್ಕನ್ನೇ ಕಸಿದುಕೊಳ್ಳುತ್ತಿರುವ ಮೂಲಭೂತವಾದ ಈ ಸಮಸ್ಯೆಗಿಂತ ಬೇರೆ ಲಿಂಗರಾಜಕಾರಣ ಬೇಕೆ? ಲಿಂಗರಾಜಕಾರಣ ಅನ್ನೋದು ಎಲ್ಲ ನೆಲೆಗಳಲ್ಲಿ ತುಳೀತಿದೆ. ಹೆಣ್ಣು ಹುಟ್ಟದೆ ಇರುವಂತೆ ಮಾಡುವುದಕ್ಕಿಂತ ಕರಾಳ, ದುಷ್ಟತನ ಬೇರೆ ಇದೆಯೆ? ೨೦ ವರ್ಷಗಳಿಂದ ಮಹಿಳಾ ಮೀಸಲಾತಿ ಬಗ್ಗೆ ಮಾತನಾಡ್ತಿದ್ದಾರೆ. ೧೯೯೪ರಿಂದ PC & PNDT ACT ಇದೆ. ಅದು ಸಮರ್ಪಕವಾಗಿ ಜಾರಿಯಾಗಲೇ ಇಲ್ಲ ಎನ್ನುವುದಕ್ಕೆ ಲಿಂಗಾನುಪಾತದ ಕುಸಿತ ನಮ್ಮ ಕಣ್ಣೆದುರೇ ಇದೆ. ಈ ವಿಷಯದ ಬಗ್ಗೆ ಸಾಹಿತಿಗಳಾಗಿರುವ ನಾವು ಮಾತಾಡಲೇಬೇಕಾಗಿದೆ. ಮುಖ್ಯವಾಗಿ ಸಮಾನತೆಯ ನೆಲೆಯಲ್ಲಿ ಬದುಕುವುದು ಎಲ್ಲರಿಗೂ ಸಾಧ್ಯವಾಗಬೇಕಿದೆ.

**ಡಾ॥ ವಸುಂಧರಾ ಭೂಪತಿ**
ನಂ. ೨೨೨, ೨ನೇ 'ಇ' ಕ್ರಾಸ್, ೩ನೇ ಬ್ಲಾಕ್, ೩ನೇ ಸ್ಟೇಜ್
ಬಸವೇಶ್ವರನಗರ, ಬೆಂಗಳೂರು – ೫೬೦ ೦೭೯



# ಚಂಪಾರಣ್ಯದ ನೀಲಿ ಸತ್ಯಾಗ್ರಹ ಶತಮಾನೋತ್ಸವ

ಡಾ॥ ಹೆಚ್. ಚಂದ್ರಶೇಖರ

ಇಪ್ಪತ್ತನೆಯ ಶತಮಾನದ ಮಧ್ಯಭಾಗದವರೆಗೆ ನಮ್ಮ ದೇಶದಲ್ಲಿ ಜರುಗಿದ ಚಳುವಳಗಳ ನೆನಪು ನಮಗೆ ತೀರ ಅವಶ್ಯಕ. ಅಂಥ ಸ್ಮರಣೀಯ ಚಳುವಳಿಗಳಲ್ಲಿ ಚಂಪಾರಣ್ಯದಲ್ಲಿ ಗಾಂಧೀಜಿಯವರು ನೀಲಿ ಬೆಳೆಗಾರರ ಹಿತರಕ್ಷಣೆಗಾಗಿ ನಡೆಸಿದ ಚಳುವಳಿಯು ಅತ್ಯಂತ ಪ್ರಮುಖ. ಈ ಚಳುವಳಿಯು ಗಾಂಧೀಜಿಯವರ ಜೀವನದ ಅತ್ಯಂತ ಪ್ರಮುಖ ಘಟ್ಟ.

**ಚಂ**ಪಾರಣ್ಯದಲ್ಲಿ (ಇಂದಿಗೂ ಬಿಹಾರ ರಾಜ್ಯದ ಭಾಗ. ಈಗ ಅದನ್ನು ಪೂರ್ವ ಚಂಪಾರಣ್ಯ ಮತ್ತು ಪಶ್ಚಿಮ ಚಂಪಾರಣ್ಯವೆಂದು ವಿಭಾಗಿಸಲಾಗಿದೆ) ಬ್ರಿಟಿಷರು ಅಂದಿನ ಭೂಮಿ ಮಾಲೀಕರು, ಸ್ಥಳೀಯ ಬಿಹಾರಿಗಳು ಆ ಭೂಮಿಗಳ ಗೇಣಿದಾರರು. ಗೇಣಿದಾರರ ಮೇಲೆ ನಡೆಯುತ್ತಿರುವ ಆರ್ಥಿಕ ಶೋಷಣೆಗಳನ್ನು ಕೇಳಿದ ಗಾಂಧೀಜಿ ಸಾಬರಮತಿ ಆಶ್ರಮದಿಂದ ಹೊರಟರು. ಸ್ವತಃ ಅಧ್ಯಯನ ಮಾಡಿ ರೈತರನ್ನು ಶೋಷಣೆಯಿಂದ ವಿಮುಕ್ತಿಗೊಳಿಸುವುದು ಅವರ ಉದ್ದೇಶವಾಗಿತ್ತು. ಗಾಂಧೀಜಿಯವರು, ೧೫ನೇ ಏಪ್ರಿಲ್ ೧೯೧೭ರಂದು ಮುಜಾಫರ್‌ಪುರ ನಗರವನ್ನು ಮಧ್ಯರಾತ್ರಿ ರೈಲಿನಲ್ಲಿ ತಲುಪಿದರು. ಅಲ್ಲಿ ಪ್ರೊ॥ ಜೆ. ಬಿ. ಕೃಪಲಾನಿ ಹಾಗೂ ಇತರರೊಂದಿಗೆ ಚರ್ಚಿಸಿ ದಿನಾಂಕ ೨೦-೦೪-೧೯೧೭ರಂದು ಚಂಪಾರಣ್ಯದ ಜಿಲ್ಲಾಕೇಂದ್ರ ಮೋತಿಹಾರಿಯನ್ನು ತಲುಪಿದರು.

**ಗಾಂಧೀಜಿ ಹೊರಗಿನವರು**

ಮಹಾತ್ಮರ ಬರುವಿಗೆ ಕಾಯುತ್ತಿದ್ದ ಸಾವಿರಾರು ಕೂಲಿಕಾರರು, ಗೇಣಿದಾರರು ಮತ್ತು ರೈತರು ಬಂದು ಗಾಂಧೀಜಿಯವರಲ್ಲಿ ತಮಗಾಗುತ್ತಿರುವ ಹಾಗೂ ಹಿಂದೆ ಆಗಿರುವ ಶೋಷಣೆಯನ್ನು ನಿವೇದಿಸಿಕೊಂಡರು. ವಕೀಲರು ಈ ಶೋಷಣೆಯನ್ನು ಕೋರ್ಟಿನಲ್ಲಿ ಪರಿಹರಿಸಿಕೊಳ್ಳಲು ಸಾಧ್ಯವೆಂದು ಹೇಳಿದರು. ಕೆಲವರು ರೈತರಿಂದ ದೊಡ್ಡಮೊತ್ತದ ಫೀಸನ್ನು ಪಡೆದಿದ್ದರು. ಇದು ಇನ್ನೊಂದು ಬಗೆಯ ಶೋಷಣೆ. ಗಾಂಧೀಜಿ, ಇದನ್ನು ಕೋರ್ಟಿನಲ್ಲಿ ಬಗೆಹರಿಸಿಕೊಳ್ಳಲು ಹಣ ಮತ್ತು ಕಾಲಹರಣವಾಗುತ್ತದೆ. ಆದ್ದರಿಂದ ಸಂಧಾನದ ಮೂಲಕ ಬಗೆಹರಿಸಿಕೊಳ್ಳುವುದೇ ಸರಿ ಎಂಬ ನಿರ್ಧಾರಕ್ಕೆ ಬಂದರು.

ಬ್ರಿಟಿಷ್ ಭೂಮಾಲೀಕರು ಗಾಂಧೀಜಿಯನ್ನು ಹೊರಗಿನವರೆಂದು ಕರೆದು ಯಾವ ಮಾಹಿತಿಯನ್ನೂ ನೀಡುವದಿಲ್ಲವೆಂದು ಘೋಷಿಸಿದರು. ನಂತರ ಗಾಂಧೀಜಿ ಬ್ರಿಟಿಷ್ ಕಮೀಷನರ್‌ರನ್ನು ಭೇಟಿಮಾಡಿದಾಗ, ಆ ಕಮೀಷನರ್ ಗಾಂಧೀಜಿಯವರು ತಿರುಹಟ ಡಿವಿಜನ್ನಿನಿಂದ ಹೊರಗೆ ಹೋಗಬೇಕೆಂದು ಆದೇಶ ಹೊರಡಿಸಿದರು. ಮೋತಿಹಾರಿಯಲ್ಲಿ ತಾವು ತಾತ್ಕಾಲಿಕವಾಗಿ ವಸತಿ ಮಾಡಿಕೊಂಡಿದ್ದ ಮನೆಗೆ ತಲುಪುವದರೊಳಗಾಗಿ ಪೊಲೀಸ್ ಜಿಲ್ಲಾ ಮುಖ್ಯಸ್ಥರು ಆದೇಶವನ್ನು ನೀಡಿ ಹೊರಹೋಗುವಂತೆ ಕೋರಿದರು. ಗಾಂಧೀಜಿಯವರು ಇಲ್ಲಿಯೇ ಮೊದಲ ಬಾರಿಗೆ ಕಾನೂನು ಭಂಗ ಚಳುವಳಿಯನ್ನು ಆರಂಭಿಸಿದರು. ಇವರು ನನ್ನನ್ನು ಹೊರ ಹೋಗುವಂತೆ ಆದೇಶ ನೀಡುವಂಥ ಅಧಿಕಾರ ಹೊಂದಿಲ್ಲ. ಇದು ನನ್ನ ದೇಶ. ಆದ್ದರಿಂದ ಇವರಿಗೆ ಆ ಅಧಿಕಾರವಿಲ್ಲ ಎಂದು ಘೋಷಿಸಿದರು. ಅಷ್ಟೊತ್ತಿಗಾಗಲೇ ಬಾಬು ರಾಜೇಂದ್ರ ಪ್ರಸಾದ, ಕೃಪಲಾನಿ ಇತ್ಯಾದಿ ವಕೀಲರು ಅಲ್ಲಿಗೆ ಬಂದು ಸೇರಿ, ಕೋರ್ಟಿನಲ್ಲಿ ವಾದ ಮಾಡಲು ಸಿದ್ಧರಾದರು. ಗಾಂಧೀಜಿ ಇದೆಲ್ಲ ಬೇಡ; ನಾನು ನಿಭಾಯಿಸುತ್ತೇನೆ ಎಂದರು. ಕೋರ್ಟ್‌ನಲ್ಲಿ ಹಾಜರಾಗಿ "ನಾನು ನಿಮ್ಮ ಕಾನೂನನ್ನು ಧಿಕ್ಕರಿಸಿದ್ದೇನೆ ನಿಜ. ನೀವು ಯಾವ ಶಿಕ್ಷೆ ನೀಡಿದರೂ ಸರಿ" ಎಂದರು. ನ್ಯಾಯಾಧೀಶರು ಎರಡು ತಾಸುಗಳ ನಂತರ ನಿರ್ಣಯವನ್ನು ತಿಳಿಸುವುದಾಗಿ ಕೋರ್ಟನ್ನು ಸ್ಥಗಿತಗೊಳಿಸಿದರು. ನಂತರ ಗಾಂಧೀಜಿಯವರು ಜಮಾನತ್‌ನ್ನು (Bail) ನೀಡಿದರೆ ಬಿಡುಗಡೆ ಮಾಡುವುದಾಗಿ ಹೇಳಿದರು. ಸರ್ಕಾರಿ ವಕೀಲರು ಕೇಸನ್ನು ಮುಂದೂಡಲು ಕೋರಿದರು. ಆದರೆ ನ್ಯಾಯಾಧೀಶರು ಒಪ್ಪಲಿಲ್ಲ. ಸರ್ಕಾರಕ್ಕೆ ಇಕ್ಕಟ್ಟಿನ ಪರಿಸ್ಥಿತಿ ಎದುರಾಯಿತು. ಗಾಂಧೀಜಿ ಜಾಮೀನು ನೀಡಲು ನಿರಾಕರಿಸಿದರು. ಗಂಭೀರತೆಯನ್ನು ಅರಿತ ನ್ಯಾಯಾಧೀಶರು ಗಾಂಧೀಜಿಯವರನ್ನು ಬಿಡುಗಡೆಗೊಳಿಸಿದರು. ಗಾಂಧೀಜಿ ಬ್ರಿಟಿಷರ ವಿರುದ್ಧ ಗಳಿಸಿದ ಮೊದಲ ಜಯ ಇದು!!

**ಸಂಧಾನ**

ಅನಿವಾರ್ಯವಾಗಿ ಬ್ರಿಟಿಷ್ ಭೂಮಾಲೀಕರು ರೈತರೊಂದಿಗೆ ಸಂಧಾನಕ್ಕೆ ಸಿದ್ಧರಾದರು. ಯಾಕೆಂದರೆ ಇಲ್ಲಿ ಬೆಳೆಯುವ ನೀಲಿ ಬೆಳೆಯಿಂದ ಹೊರ ತೆಗೆಯುವ ಅಚ್ಚ ನೀಲಿ ಬಣ್ಣಕ್ಕೆ ಮ್ಯಾಂಚೆಸ್ಟರಿನ ಮಿಲ್‌ಗಳು ಅವಲಂಬಿತವಾಗಿದ್ದವು. ಚರ್ಚೆಯಲ್ಲಿ ಈಗ ನಾವೆಷ್ಟು ಹಣವನ್ನು ರೈತರಿಗೆ








ಹಿಂತಿರುಗಿಸಬೇಕೆಂದು ಕೇಳಿದರು. ಬ್ರಿಟಿಷ್ ಭೂಮಾಲೀಕರು ಸೇಕಡ ೫೦ರಷ್ಟು (೫೦%) ಹಣವನ್ನು ಒಂದೇ ಕಂತಿನಲ್ಲಿ ಕೊಡಬೇಕೆಂದು ಕೇಳಿದರೆ, ಏನು ಮಾಡುವದೆಂದು ಮನದಲ್ಲಿಯೇ ಚಿಂತಿತರಾಗಿದ್ದರು. ಜೆ. ಜಡ್. ಹಾಜ್ ಎಂಬ ಬ್ರಿಟಿಷ್ ಸಂಧಾನಕಾರರಿಗೂ ಇದೇ ಭಯವಿತ್ತು. ಅವರು ಈ ಸಮಸ್ಯೆಯನ್ನು ಅಥವಾ ಶೋಷಣೆಯನ್ನು ಬಲ್ಲವರಾಗಿದ್ದರು. ಆದ್ದರಿಂದ ಸೇಕಡ ೨೫ (೨೫%) ಹಂತವನ್ನು ಭೂಮಾಲೀಕರಿಂದ ಕೊಡಿಸುವದಾಗಿ ಭಾಷೆ ಕೊಟ್ಟರು. ಈ ಸಮಸ್ಯೆಯನ್ನು ದೀರ್ಘಕಾಲ ಎಳೆಯುವದು ಸರಿ ಅಲ್ಲ ಎಂದು ಭಾವಿಸಿಕೊಂಡಿದ್ದ ಬಾಪೂಜಿ ಇದಕ್ಕೆ ಒಪ್ಪಿದರು. ಗಾಂಧೀಜಿಯವರು ಸತತವಾಗಿ ಆರು ತಿಂಗಳ ಕಾಲ ಇಲ್ಲಿ ತಂಗಿ ನೀಲಿ ಬೆಳೆಗಾರರಿಗೆ ನ್ಯಾಯ ದೊರಕಿಸಿದರು.

ಕೆಲ ವರ್ಷಗಳಲ್ಲಿ ಜರ್ಮನಿಯಲ್ಲಿ ರಾಸಾಯನಿಕವಾಗಿ ನೀಲಿ ಬಣ್ಣವನ್ನು ಉತ್ಪಾದಿಸಲು ಆರಂಭಿಸಲಾಯಿತು. ಬ್ರಿಟಿಷ್ ಭೂಮಾಲೀಕರು, ರೈತರಿಂದ ಕಡಿಮೆ ಬೆಲೆಗೆ ಖರೀದಿಸಿದ್ದ ಭೂಮಿಯನ್ನು ಸಕ್ಕರೆ ಕಾರ್ಖಾನೆಗಳಿಗೆ ಮಾರಿ ಸ್ವದೇಶಕ್ಕೆ ಹಿಂತಿರುಗಿದರು. ಈಗ ಪಶ್ಚಿಮ ಚಂಪಾರಣ್ಯದಲ್ಲಿ ಬ್ರಿಟಿಷರು ವಾಸಿಸುತ್ತಿದ್ದ ಬಂಗ್ಲೆಗಳು ಮತ್ತು ನೀಲಿ ಬಣ್ಣವನ್ನು ತಯಾರಿಸುತ್ತಿದ್ದ ಘಟಕಗಳು ಹಾಳು ಬಿದ್ದು, ಸ್ಮಾರಕಗಳಾಗಿ ನಿಂತಿವೆ.

ಆಗ ಭೂಮಿಯನ್ನು ಕಳೆದುಕೊಂಡಿದ್ದ ರೈತರ ಸಮಸ್ಯೆಗಳು ಇನ್ನೂ ಜೀವಂತವಾಗಿವೆ. ಬಿಹಾರ ಭೂಕಾಯಿದೆಯಡಿಯಲ್ಲಿ ಇನ್ನೂ ಹಲವಾರು ಹೋರಾಟಗಳು ನಡೆದಿವೆ. ನಿತೀಶ್‌ಕುಮಾರರ ಸರ್ಕಾರ ಸಕ್ರಿಯವಾಗಿಲ್ಲ. ಆದ್ದರಿಂದ ಸುಪ್ರೀಂ ಕೋರ್ಟಿನಲ್ಲಿ ಕೇಸುಗಳು ದಾಖಲಾಗಿವೆ.

ಅಂದಿನ, ಅಂದರೆ ೧೦೦ ವರ್ಷಗಳ ಹಿಂದಿನ ನೀಲಿ ಸತ್ಯಾಗ್ರಹ ಪರದೇಶಿ ಆಡಳಿತದ ವಿರುದ್ಧವಿತ್ತು. ಇಂದು ರೈತರು ಅಂದಿನಂತೆ ಒಗ್ಗಟ್ಟಾಗಿಲ್ಲ. ಅವರಲ್ಲಿಯೂ ರಾಜಕೀಯ ಹಿತಾಸಕ್ತಿಗಳು ಸೇರಿರುವದರಿಂದ ರೈತ ಚಳುವಳಿ ಯಶಸ್ವಿಯಾಗುತ್ತಿಲ್ಲ. ಜರ್ಮನಿಯಲ್ಲಿ ಕೃತಕ ರಾಸಾಯನಿಕ ನೀಲಿ ಬಣ್ಣ ಸುಲಭ ಬೆಲೆಗೆ ಸಿಗಲಾರಂಭಿಸಿದಾಗ ಮ್ಯಾಂಚೆಸ್ಟರ್ ಮಿಲ್‌ಗಳು ಚಂಪಾರಣ್ಯದ ನೈಸರ್ಗಿಕ ಮತ್ತು ಆರೋಗ್ಯಕರ ನೀಲಿಯನ್ನು ತೊರೆದವು. ನೀಲಿ ಬೆಳೆ ನಿಂತುಹೋಯಿತು. ನೀಲಿ ಬೆಳೆಗಾರರ ಭೂಮಿಯನ್ನು ಬ್ರಿಟಿಷರು ಹೊರಡುವಾಗ ಶ್ರೀಮಂತರಿಗೂ, ಸಕ್ಕರೆ ಕಂಪನಿಗಳಿಗೂ ಮಾರಿ ಹಣವನ್ನು ಜೇಬಿನಲ್ಲಿ ತುಂಬಿಕೊಂಡು ಇಂಗ್ಲೆಂಡಿಗೆ ಮರಳಿದರು.

ಚಂಪಾರಣ್ಯದಲ್ಲಿ ಇಂಗ್ಲಿಷ್ ಭೂಮಾಲೀಕರು, ಸುಮಾರು ೪೦,೫೦೦ ಹೆಕ್ಟೇರ್ ಭೂಮಿಯನ್ನು ಶ್ರೀಮಂತರಿಗೂ ಸಕ್ಕರೆ ಕಂಪನಿಗಳಿಗೂ ಮಾರಿದರು. ನ್ಯಾಯವಾಗಿ ಈ ಭೂಮಿ ನೀಲಿ ಬೆಳೆಯುವ ರೈತರಿಗೆ ಸೇರಬೇಕಾಗಿತ್ತು. ಅವರಿಂದ ಒತ್ತಾಯ ಪೂರ್ವಕವಾಗಿ ಬ್ರಿಟಿಷ್ ಭೂಮಾಲೀಕರು ಅತ್ಯಂತ ಕಡಿಮೆ ಬೆಲೆಗೆ ಅಥವಾ ಪುಕ್ಕಟೆಯಾಗಿ ಬರೆಸಿ ಕೊಂಡಿದ್ದರು. ಸುಮಾರು ೧೬,೧೦೦ ಹೆಕ್ಟೇರ್ ಭೂಮಿಯನ್ನು ಸಕ್ಕರೆ ಕಂಪನಿಗಳಿಗೆ ಮಾರಿದರು. (ಒಂದು ಹೆಕ್ಟೇರ್ ಅಂದರೆ ೨.೫ ಎಕ್ರೆಗೆ ಸಮ).




ಸ್ವಾತಂತ್ರ್ಯದ ನಂತರ ಬಿಹಾರ ರಾಜ್ಯ ಸರ್ಕಾರ "ಬಿಹಾರ ಸರ್ಕಾರ ಭೂ ಸುಧಾರಣಾ ಕಾಯ್ದೆ"ಯನ್ನು ಜಾರಿಗೆ ತಂದಿತು (೧೯೬೧). ಈ ಕಾಯ್ದೆ ಅಡಿಯಲ್ಲಿ ಸರ್ಕಾರ ಭೂಮಿತಿಯನ್ನು ಮತ್ತು ಹೆಚ್ಚುವರಿ ಭೂಮಿಯನ್ನು ತನ್ನ ವಶಕ್ಕೆ ಪಡೆಯಲು ಸಾಧ್ಯವಿದೆ. ಆದರೆ ಈ ಭೂ ಸುಧಾರಣಾ ಕಾಯ್ದೆ ಕೇವಲ ಕಾಗದದ ಮೇಲೆ ಉಳಿದಿದೆ. ಆದ್ದರಿಂದ ರೈತರು ತಮ್ಮ ಹಿಂದಿನ ಹಿರಿಯರ ಭೂಮಿಯನ್ನು ಮರಳಿ ಪಡೆಯಲು ಹೋರಾಟ ನಡೆಸಿದ್ದಾರೆ. ಶ್ರೀ ಪಂಕಜ ಎಂಬ ಹೋರಾಟಗಾರರ ಪ್ರಕಾರ, ಪಶ್ಚಿಮ ಚಂಪಾರಣ್ಯದಲ್ಲಿ ೫೦,೦೦೦ ರೈತರು ತಮಗೆ ನೀಡಲಾದ ಭೂಮಿಯನ್ನು ಇನ್ನೂ ಪಡೆದಿಲ್ಲ. ಗಣೇಶ ಪಾಸವಾನ್ ಎಂಬ ರೈತನು 'ನಮಗೆ ನೀಡಲಾದ ಭೂಮಿಯಲ್ಲಿ ನಾವೇ ಕೂಲಿಕಾರರಾಗಿ ದುಡಿಯುತ್ತಿದ್ದೇವೆ' ಎಂದಿದ್ದಾರೆ. ಇದು ಲಾಲು ಪ್ರಸಾದ್ ಯಾದವ್ ಅಧಿಕಾರಕ್ಕೆ ತಂದ ಸ್ವಯಂ ಘೋಷಿತ ಸಮಾಜವಾದಿ ನಿತೀಶ್‌ಕುಮಾರ್‌ರ ಆಡಳಿತದ ಜಂಟಿಫಲ.

ಆದ್ದರಿಂದ ಒಂದು ಶತಮಾನದ ಹಿಂದೆ ಗಾಂಧೀಜಿಯ ನೇತೃತ್ವದಲ್ಲಿ ನಡೆದ ನೀಲಿ ಚಳುವಳಿ ಇಂದಿಗೂ ಪ್ರಸ್ತುತ. ಆದರೆ ಅಂಥ ನಾಯಕರಿಲ್ಲ!! ಇದೇ ಚಂಪಾರಣ್ಯದ ದುರಂತ.

**ಡಾ॥ ಹೆಚ್. ಚಂದ್ರಶೇಖರ**
'ಸಂಗಮ', ಎಮ್.ಐ.ಜಿ.–೭೭, ೬ನೇ ಅಡ್ಡರಸ್ತೆ,
೬ನೇ ಮುಖ್ಯರಸ್ತೆ, ಕೆ.ಹೆಚ್.ಬಿ. ಕಾಲೋನಿ, ೨ನೇ ಹಂತ,
ಬಸವೇಶ್ವರ ನಗರ, ಬೆಂಗಳೂರು – ೫೬೦ ೦೭೯

# ಅಭ್ಯಂಜನದ ಮಂಥನ

ವಿ. ಶ್ರೀನಿವಾಸ

'ಅಜ್ಜಯ್ಯನ ಅಭ್ಯಂಜನ' ಕುವೆಂಪುರವರ ಪ್ರಸಿದ್ಧ ಲಲಿತ ಪ್ರಬಂಧ. "ಈಗ ನಾಗರಿಕತೆ ಬಂದಿರುವುದರಿಂದ ಹಿಂದಿನ ಆಚಾರಗಳೆಲ್ಲ ಪರಿವರ್ತನೆಯಾಗಿ ಹೋಗಿವೆ" ಎಂದು ಆ ಪ್ರಬಂಧದಲ್ಲಿ ಅವರು ಹೇಳುತ್ತಾರೆ. ಹಾಗೆಯೇ ಜಾಗತೀಕರಣದ ನಂತರ ಸ್ನಾನದ ಆಚಾರ ವಿಚಾರಗಳೆಲ್ಲ ಪರಿವರ್ತನೆಯಾಗಿ ಹೋಗಿವೆ ಎಂದು ನನ್ನ ಅಭಿಪ್ರಾಯ. ಹೀಗೆ ಹೇಳುತ್ತಿದ್ದಂತೆ 'ಜಾಗತೀಕರಣಕ್ಕೂ ಸ್ನಾನಕ್ಕೂ ಎತ್ತಲಿಂದೆತ್ತಣ ಸಂಬಂಧವಯ್ಯಾ?' ಎಂಬ ಪ್ರಶ್ನೆ ಮೂಡಿ ನಿಮ್ಮ ಹುಬ್ಬು ಗಂಟಿಕ್ಕಬಹುದು. ಆದರೆ ನಮ್ಮ ಮಕ್ಕಳು "ಅಪ್ಪಾ, ತಂದೆ, ಕಾರ್ಮಿಕ ಸಂಘದ ನಾಯಕರ ಭಾಷಣ ಕೇಳೀ, ಕೇಳೀ ನಿನ್ನ ಕಣ್ಣು ಕೆಂಪಾಗಿ ಹೋಗಿದೆ. ಕಾಮಾಲೆಯವರಿಗೆ ಎಲ್ಲ ಹಳದಿ ಕಂಡರೆ, ನೀವು ಎಲ್ಲವನ್ನೂ ಕೆಂಪು ಕಣ್ಣಿಂದ ನೋಡುತ್ತೀರ. ಎಲ್ಲವನ್ನೂ ತಂದು ಜಾಗತೀಕರಣದ ತಲೆಗೆ ಕಟ್ಟುತ್ತೀರ. ಜಾಗತೀಕರಣ ಆಗದೆ ಹೋಗಿದ್ದರೆ, ನಾವೆಲ್ಲ ನಿರುದ್ಯೋಗಿಗಳಾಗಿ ನಿಮ್ಮ ಹಾಗೆಯೇ ಕಷ್ಟಪಡಬೇಕಾಗುತ್ತಿತ್ತು. ಈಗ ನೋಡಿ ಜಾಬ್ ಆಪರ್ಚ್ಯುನಿಟೀಸ್ ಬೇಜಾನಿದೆ. ಒಂದೆರಡು ವರ್ಷ ಆಗ್ತಿದ್ದಂಗೆ ಟಕ್ಕಂತ ಮತ್ತೊಂದು ಕಂಪನಿಗೆ ಜಂಪಾಗಿಬಿಡ್ತೀವಿ. ಅಲ್ಲ ಹೋಗಿಹೋಗಿ ಸ್ನಾನಕ್ಕೂ ಜಾಗತೀಕರಣಕ್ಕೂ ಸಂಬಂಧ ಕಲ್ಪಿಸ್ತೀಯಲ್ಲ. ಹೇಗೆ ಅಂತ ಕೇಳಿದ್ರೆ, ಅದಕ್ಕೆ ಇನ್ನೊಂದು ಅಸಂಬದ್ಧ ಕತೆ ಕಟ್ತೀಯ. ಅದನ್ನ ಕೇಳೋ ಇಂಟ್ರೆಸ್ಟೂ ನಮಗಿಲ್ಲ, ಬೇಕಾಗೂ ಇಲ್ಲ. ವಿ ಡೋಂಟ್‌ಕೇರ್" ಅಂತ ಸರ್ಜಿಕಲ್ ಸ್ಟ್ರೈಕ್ ಶುರು ಮಾಡಿ ಬಿಡ್ತಾರೆ. ವಿರೋಧ ಅಭಿಪ್ರಾಯವಿಟ್ಟುಕೊಂಡು ರಿಪಬ್ಲಿಕ್ ಟಿ. ವಿ. ಅರ್ನಾಬ್ ಗೋಸ್ವಾಮಿ, ಪಬ್ಲಿಕ್ ಟಿ. ವಿ. ರಂಗನಾಥ ಇಬ್ಬರನ್ನೂ ಒಟ್ಟಿಗೆ ಎದುರಿಸಿದಂತಾಗುತ್ತದೆ ನನ್ನ ಪರಿಸ್ಥಿತಿ. ಕಂಪ್ಯೂಟರು, ಮೊಬೈಲು, ರಾತ್ರಿ ನಿದ್ದೆಯ ವಿಷ್ಯಗಳಂತೆ, ಸ್ನಾನದ ವಿಷ್ಯಕ್ಕೂ ಮಕ್ಕಳಿಗೆ ಏನೂ ಹೇಳುವ ಹಾಗಿಲ್ಲ ಎನ್ನಬೇಡಿ. ಏನು ಬೇಕಾದರೂ ಹೇಳಬಹುದು. ಆದರೆ ಅವರು ಏನನ್ನೂ ಕೇಳುವುದಿಲ್ಲ ! ಆದ್ದರಿಂದಲೇ ನಾನು ಈ ವಿಷಯವನ್ನು ನಿಮ್ಮೊಂದಿಗೆ ಪ್ರಸ್ತಾಪಿಸಿದ್ದು. ಸುಮಾರು ೫೦ ವರ್ಷಕ್ಕಿಂತ ಮೇಲಿನವರಾಗಿದ್ದರೆ ಸಹಾನುಭೂತಿಯಿಂದ ನೀವು ನನ್ನ ಮಾತು ಕೇಳುತ್ತೀರ. ಚಿಕ್ಕ ವಯಸ್ಸಿನವರ ಕೈಗೆ ಸಿಕ್ಕರೆ ನನ್ನ ಈ ಪ್ರಬಂಧಕ್ಕೆ ಕ. ಬು. ಭಾಗ್ಯ ಗ್ಯಾರೆಂಟಿ !

ನಮಗೆ ಸ್ನಾನವೆಂಬುದು ಬೆಳಗಿನ ನಿತ್ಯಕರ್ಮಗಳಲ್ಲೊಂದು ಎಂಬ ಅಭ್ಯಾಸ ಬೇರೂರಿಬಿಟ್ಟಿದೆ. ಕೆಲವರು ಸ್ನಾನಮಾಡುವುದು ಎನ್ನುವುದಕ್ಕೆ 'ಮಡಿ ಉಟ್ಟುಕೊಳ್ಳುವುದು' ಎನ್ನುತ್ತಿದ್ದರು. 'ಮಡಿ, ಮಡಿ, ಮಡಿಯೆಂದು ಅಡಿಗಡಿಗೆ ಹಾರುವೆ' ಎಂದು ಹಾರುವವರನ್ನು ದಾಸರು ಟೀಕಿಸಿದ್ದಾರೆ. ವಚನಗಳಲ್ಲೂ, ಕಗ್ಗದಲ್ಲೂ, ಸ್ನಾನ/ಮಡಿಗಳ ಬಗ್ಗೆ ಅನೇಕ ವಿಚಾರಗಳಿರಬಹುದು. ಆದರೆ ಈ ಪ್ರಬಂಧದ ಮಿತಿಯಲ್ಲಿ ನಾನು ಅಷ್ಟು ಹಿಂದಕ್ಕೆ ಹೋಗುವುದಿಲ್ಲ. ನಮ್ಮ ಬಾಲ್ಯದಿಂದೀಚೆಗಿನ ವಿಷಯವನ್ನಷ್ಟೇ ಪ್ರಸ್ತಾಪಿಸುತ್ತೇನೆ. ಆಗ ಬೆಳಗಾಗೆದ್ದು, ನಿತ್ಯಕರ್ಮಗಳನ್ನು ಮುಗಿಸಿಕೊಂಡು ನಂತರ ಮಡಿ ಉಟ್ಟುಕೊಂಡು, ದೇವರ ಪೂಜೆ, ತಿಂಡಿ, ಅಡುಗೆ ಕಾರ್ಯಗಳನ್ನು ಮಾಡುತ್ತಿದ್ದರು. ಮಡಿಯುಟ್ಟುಕೊಳ್ಳದೆ ತಿಂಡಿ ಅಡುಗೆ ಇರಲಿ, ಕಾಫಿಯನ್ನೂ ಕುಡಿಯುತ್ತಿರಲಿಲ್ಲ. ನಂತರ ಕ್ರಮೇಣವಾಗಿ 'ಕಾಫಿಗೆ ದೋಷವಿಲ್ಲ' ಎಂದು ಕಂಡುಹಿಡಿದು, ಸ್ನಾನಕ್ಕೆ ಮುಂಚೆ ಕಾಫಿ ಕುಡಿಯಲು ಆರಂಭಿಸಿದರು. ನಮ್ಮ ಬಂಧುಗಳೊಬ್ಬರು 'ಕಾಫಿ ಕುಡಿಯುವುದೆಂದರೆ ದೇಹದೊಳಗಿನ ಸ್ನಾನ' ಎಂದು ವ್ಯಾಖ್ಯಾನಿಸುತ್ತಿದ್ದರು. ಏಕೆಂದರೆ ಆ ಕಾಲದಲ್ಲಿ ಕಾಫಿ ಪುಡಿಯ ಚರಟವನ್ನು ಪಾತ್ರೆ ತೊಳೆಯಲು ಬಳಸುತ್ತಿದ್ದರು. ಹಾಗಾಗಿ ಕಾಫಿಯು ದೇಹದ ಒಳಭಾಗವನ್ನು ಶುದ್ಧೀಕರಿಸುತ್ತದೆ ಎಂದು ಸಮರ್ಥಿಸಿಕೊಳ್ಳುತ್ತಿದ್ದರು. ನಂತರ ನಿಧಾನವಾಗಿ ಸ್ನಾನ ಮಾಡದೇ ತಿಂಡಿ ಮಾಡುವುದು ತಿನ್ನುವುದೂ ಆರಂಭವಾದರೂ ಸ್ನಾನ ಬೆಳಗ್ಗೆಯೇ ನಡೆಯುತ್ತಿತ್ತು. ಇಷ್ಟು ಬದಲಾವಣೆಗಳಾಗಲು ಬಹಳಷ್ಟು ವರ್ಷಗಳೇ ಹಿಡಿದವು. ಆದರೆ ಜಾಗತೀಕರಣದ ನಂತರ ಬದಲಾವಣೆಯ ವೇಗ ಅತಿಯಾಗಿ ಸ್ನಾನ ಯಾವಾಗಲಾದರೊಮ್ಮೆ ಮಾಡುವ ಕ್ರಿಯೆಯಾಗಿದೆ. ಮಕ್ಕಳು ಕಂಪ್ಯೂಟರ್, ಮೊಬೈಲ್, ಶಿಫ್ಟ್ ಕೆಲಸಗಳಲ್ಲಿ ತೊಡಗಿ, ರಾತ್ರಿ ಎಷ್ಟೆಷ್ಟೊತ್ತಿಗೋ ಮಲಗುತ್ತಾರೆ, ಎಷ್ಟೆಷ್ಟೊತ್ತಿಗೋ ಏಳುತ್ತಾರೆ. ಇನ್ನು ಸ್ನಾನವಂತೂ 'ಯಾವಾಗ್ಲೋ ಒಟ್ನಲ್ಲಿ ಮಾಡಿದ್ರಾಯ್ತಲ್ಲ. ಬೆಳಗ್ಗೇನೇ ಯಾಕೆ ಮಾಡ್ಬೇಕು ?' ಅಂತ ತಿರುಗಿ ಬೀಳ್ತಾರೆ. ಕುವೆಂಪುರವರು ಅಭ್ಯಂಜನವನ್ನು ಒಂದು ಕ್ರಾಂತಿ ವಿಷಯ ಎಂದು ಆ ಪ್ರಬಂಧದಲ್ಲಿ ಪ್ರಸ್ತಾಪಿಸುತ್ತಾರೆ. ಈಗಿನ ಬೆಳೆದ ಮಕ್ಕಳೂ ಯಾವ್ಯಾವಾಗಲೋ ಸ್ನಾನ ಮಾಡುವ ಮೂಲಕ ಪ್ರತಿಭಟನೆಯ ಕ್ರಾಂತಿ ಮಾಡುತ್ತಿದ್ದಾರೇನೋ ? ಇರಲಿ, ಸ್ನಾನದ ವಿಷಯದಲ್ಲಿ ಕ್ರಾಂತಿಯಾಗಿರುವುದಂತೂ ನಿಜ.



ಹಿಂದೆ ಪರಿವರ್ತನೆ, ಬದಲಾವಣೆಗಳೆಲ್ಲ ಬಹಳ ನಿಧಾನ ಗತಿಯಲ್ಲಿದ್ದವು. ಉದಾಹರಣೆಗೆ, ರೇಡಿಯೋ ಆರಂಭವಾಗಿ ಬಹಳಷ್ಟು ಮನೆಗಳನ್ನು ತಲುಪಲು ಅರ್ಧ ಶತಮಾನಕ್ಕೂ ಹೆಚ್ಚು ಕಾಲ ಬೇಕಾಯಿತು. ಆದರೆ ಮೊಬೈಲ್ ಬಂದು ಕೆಲವೇ ವರ್ಷಗಳಲ್ಲಿ ಅದು ಹೆಚ್ಚೂ ಕಡಿಮೆ ಎಲ್ಲರ ಕೈ ತಲುಪಿತು. ಅಂದರೆ, ಜಾಗತೀಕರಣದ ನಂತರ ಬದಲಾವಣೆಯ ವೇಗ ಅತಿಯಾಯಿತು. ನಮ್ಮ ಜೀವನಶೈಲಿಯಲ್ಲಿ ಬಹಳಷ್ಟು ಬದಲಾವಣೆಯಾದಂತೆಯೇ ಸ್ನಾನದ ಸ್ಥಾನಮಾನಗಳೂ ಬಹಳಷ್ಟು ಬದಲಾಗಿವೆ ಹಾಗೂ ಆಗುತ್ತಲೇ ಇವೆ. ನನ್ನ ಈ ವಾದವನ್ನು ನಮ್ಮ ಮಕ್ಕಳಂತೂ ಕೇಳುವುದಿಲ್ಲ. ಆದರೆ ಸಾಕ್ಷಿ–ಪುರಾವೆಗಳೊಂದಿಗೆ ನಿಮ್ಮ ಮುಂದೆ ಸಮರ್ಥವಾಗಿ ಮಂಡಿಸಬಲ್ಲೆ. ಕುವೆಂಪುರವರು ಭಾನುವಾರದ ಎಣ್ಣೆ, ಸೀಗೆಕಾಯಿಪುಡಿ, ಬಿಸಿನೀರಿನ ಅಭ್ಯಂಜನದ ವೈಭವದ ಬಗ್ಗೆ ಮಾತ್ರ ಬಣ್ಣಿಸಿದ್ದಾರೆ. ದಿನ ನಿತ್ಯದ ಸ್ನಾನದ ಬಗ್ಗೆ ಏನೂ ಹೇಳಿಲ್ಲ. ಆ ವೈಭವ ಅಲ್ಲದಿದ್ದರೂ, 'ಎಣ್ಣೆ–ಸೀಗೆಕಾಯಿ ಸಂಬಂಧ' ಸುಮಾರು ೯೦ರ ದಶಕದವರೆಗೂ ನಮಗೂ ಇತ್ತು! ನಮ್ಮ ಬಾಲ್ಯದಲ್ಲಿ ಒಂದು ವಾರ ಮೈಗೆಲ್ಲ ಹರಳೆಣ್ಣೆ ಹಚ್ಚಿ, ಸೀಗೆಪುಡಿ ಉಜ್ಜಿ, ಬಿಸಿನೀರು ಸುರಿದು 'ಬುಕಾಶಿ' ಮಾಡಿಸಿದರೆ ಇನ್ನೊಂದು ವಾರ ಹರಳೆಣ್ಣೆಯನ್ನು ಕುಡಿಸಿ ಹೊಟ್ಟೆಯನ್ನು ಶುಚಿಗೊಳಿಸುತ್ತಿದ್ದರು. ಯಾಕೆ ನಿಮ್ಮ ಮುಖವೂ ಹರಳೆಣ್ಣೆ ಕುಡಿದವರ ಮುಖದ ಹಾಗೆ ಆಗುತ್ತಿದೆ ?! ಆ ವಿಷಯ ಬೇಡ ಬಿಡಿ. ಅದೊಂದು ಬೇರೆಯೇ ಕತೆ. ಆಗಿನ ಕಾಲದ ಅಭ್ಯಂಜನವೇ ಈಗ ಮಸಾಜ್ ಸೆಂಟರ್, ಸ್ಪಾ, ಸ್ಟೀಮ್ ಬಾತ್, ಆಯುರ್ವೇದಿಕ್, ನ್ಯಾಚುರೋಪತಿ ಮುಂತಾದ ಬೇರೆ ಬೇರೆ ರೂಪಗಳನ್ನು ಧರಿಸಿವೆ !

ಆ ವಿಷಯ ಬಿಡಿ, ನಾನು ಮುಖ್ಯವಾಗಿ ಹೇಳ ಹೊರಟಿರುವುದು ಸ್ನಾನದ ಬಗ್ಗೆ. ನಮ್ಮ ಚಿಕ್ಕಂದಿನಲ್ಲಿ ಇದ್ದುದು ಹಮಾಮ್, ಲಕ್ಸ್ ನಂತರ ಬಂದ ಲೈಫ್‌ಬಾಯ್ ಮುಂತಾದ ಕೆಲವೇ ಸೋಪುಗಳು. ಮನೆಯಲ್ಲಿ ೮–೧೦ ಜನರಿದ್ದರೂ ಸ್ನಾನಕ್ಕೆ ಇರುತ್ತಿದ್ದುದು ಒಂದೇ ಸೋಪು. ಎಷ್ಟೋ ಜನ ಮೈಸೂರ್ ಬಾರ್‌ಸೋಪಲ್ಲೇ ಬಟ್ಟೆ ತೊಳೆದು ನಂತರ ಅದನ್ನೇ ತಲೆ ಕೂದಲು ತೊಳೆದುಕೊಳ್ಳಲೂ ಬಳಸುತ್ತಿದ್ದರು. ಈಗ ನೋಡಿ ಅದೆಷ್ಟು ಬಗೆಯ ಸೋಪುಗಳು, ಶಾಂಪುಗಳು, ಫೇಸ್ವಾಷುಗಳು, ಮೌತ್ವಾಷುಗಳು, ಹ್ಯಾಂಡ್ವಾಷುಗಳು, ಲೆಗ್ವಾಷುಗಳು !, ಡೀಓಡರೆಂಟುಗಳು, ಸೆಂಟ್‌ಗಳು, ಟೂತ್‌ಪೇಸ್ಟ್‌ಗಳು, ಬ್ರಷ್ಷುಗಳು. ಅಬ್ಬಬ್ಬಾ.., ಅಂಗಡಿಗೆ ಹೋಗಿ ನೋಡಿದರೆ ಇವುಗಳ ಜೊತೆ ಬಾತ್‌ರೂಂ ವಸ್ತುಗಳೂ ಸೇರಿ, ಆಹಾರ ಪದಾರ್ಥಗಳ ವಿಭಾಗಕ್ಕಿಂತ ದೊಡ್ಡ ವಿಭಾಗವೇ ಇರುವುದನ್ನು ಕಾಣಬಹುದು. "ಅಯ್ಯೋ ಅಂಕಲ್, ನೀವು ಬೆಳಗ್ಗೆ ಉಪಯೋಗಿಸುವ ಬ್ರಷ್ಷು ಪೇಸ್ಟನ್ನೇ ರಾತ್ರಿ ಹಲ್ಲುಜ್ಜಲು ಬಳಸುತ್ತೀರಾ ? ಛೀ..", "ಅಯ್ಯೋ ಆಂಟಿ, ನೀವು ಕೈಗೆ ಹಚ್ಚುವ ಸೋಪನ್ನೇ ಕಾಲಿಗೂ ಹಚ್ಚೀರಾ ? ಥೂ..." "ಅಯ್ಯೋ ಅಜ್ಜೀ, ನೀನು ಎಡಗೈ ತೊಳೆಯುವ ಹ್ಯಾಂಡ್‌ವಾಷನ್ನೇ ಬಲಗೈ ತೊಳೆಯುವುದಕ್ಕೂ ಬಳಸುತ್ತೀರಾ ? ವ್ಯಾ..." (ಅಯ್ಯೋ ಅನಾಗರಿಕ ಮುಂಡೇವಾ...!!) ಎಂದು ನಮ್ಮ ಮುಸುಡಿ ತಿವಿಯುವ ಜಾಹೀರಾತುಗಳು !!

ಅಜ್ಜಯ್ಯನ ಅಭ್ಯಂಜನ ಪ್ರಬಂಧದಲ್ಲಿ ಕುವೆಂಪುರವರು ತಮ್ಮ ಮನೆಯಲ್ಲಿ ಪ್ರತ್ಯೇಕವಾದ ಸ್ನಾನದ ಮನೆಯಿತ್ತು, ಅದಕ್ಕೆ ಬಚ್ಚಲು ಎನ್ನುತ್ತಾರೆ. ಅಲ್ಲಿ ದೊಡ್ಡ ಹಂಡೆ ಇತ್ತು. ಒಲೆಯಲ್ಲಿ ಹೆಣವನ್ನೂ ಸುಡುವಂಥ ಬೆಂಕಿಯಿರುತ್ತಿತ್ತು ಮುಂತಾಗಿ ಬಣ್ಣಿಸುತ್ತಾರೆ. ಕುಪ್ಪಳಿಯಲ್ಲಿ ಈಗಲೂ ನಾವು ಆ ಮನೆಯನ್ನು ನೋಡಬಹುದು. ಎಷ್ಟೊಂದು ಕೋಣೆಗಳ, ಅಷ್ಟೊಂದು ಜನ ವಾಸವಿದ್ದ, ಅಷ್ಟು ದೊಡ್ಡ ಮನೆಗೆ ಇರುವುದು ಒಂದೇ ಸ್ನಾನದ ಮನೆ! ಈಗ ಒಂದೊಂದು ಸಾಮಾನ್ಯ ಮನೆಗಳಲ್ಲೂ ಎಷ್ಟೊಂದು ಸ್ನಾನದ ಮನೆಗಳಿರುತ್ತವೆ ! ಪ್ರತಿ ರೂಮಿಗೂ ಅಟ್ಯಾಚ್ಡ್ ಬಾತ್‌ರೂಮು, ಜತೆಗೆ ಜನರಲ್ ಬಾತ್‌ರೂಮುಗಳು ಹಾಗೂ ಟಾಯ್‌ಲೆಟ್ಟುಗಳು. ಅವುಗಳ ಸಂಖ್ಯೆ ಹಾಗಿರಲಿ, ಈಗಿನ ಬಾತ್‌ರೂಮುಗಳ ಭವ್ಯತೆಯನ್ನ ಆ ಮಹಾಕವಿ ನೋಡಿದ್ದಿದ್ದರೆ, ಇನ್ನೂ ಹೇಗೆ ಬಣ್ಣಿಸುತ್ತಿದ್ದರೋ ? ಥಳ ಥಳ ಹೊಳೆಯುವ ಟೈಲ್ಸುಗಳು, ಮಿರಿಮಿರಿ ಮಿಂಚುವ ನಲ್ಲಿಗಳು, ಕನ್ನಡಿಗಳು, ನೀರು ಕಾಯಿಸಲು ಸೋಲಾರ್‌ಗಳು, ಗೀಸರ್‌ಗಳು, ಅದಿರಲಿ, ಬಾತ್ ರೂಮಿನಲ್ಲಿಯೇ ರಹಸ್ಯವಾಗಿ ಖಜಾನೆಯನ್ನೇ ನಿರ್ಮಿಸಿದ ವಿಚಾರ ಒಬ್ಬ ಕಳ್ಳನದ್ದು ಮಾತ್ರ ಇತ್ತೀಚೆಗೆ ಬಯಲಿಗೆ ಬಂತು. ರಹಸ್ಯ ಖಜಾನೆಗಳನ್ನು ಮಾಡಿಕೊಂಡಿರುವ ಬಾಕಿ ಖದೀಮರು ಬಚ್ಚಲಲ್ಲಿಯೇ ನಗುತ್ತಿರಬಹುದು ! ನೋಡಿ ವಿಷಯ ಎಲ್ಲೆಲ್ಲಿಗೋ ಜಾರಿಹೋಯಿತು. ಸ್ನಾನದ ವಿಷಯಕ್ಕಿಂತ ಸ್ನಾನದ ಮನೆಯ ವಿಷಯಕ್ಕೆ ಹೋಗಿ, ಕಳ್ಳ ಖದೀಮರ ವಿಷಯಕ್ಕೆ ಹೋಗಿಬಿಟ್ಟಿತು. ಹಿಂದಿನ ಕಾಲದ ಬಚ್ಚಲಿಗೂ ಈಗಿನ ಕಾಲದ ಬಚ್ಚಲಿಗೂ ಇರುವ ಕಾಮನ್ ಗುಣವೆಂದರೆ ಜಾರುವಿಕೆ! ಹಿಂದೆಲ್ಲ ಶುಚಿಗೊಳಿಸದೆ, ಪಾಚಿಕಟ್ಟಿ ಜಾರುತ್ತಿತ್ತು. ಈಗ ಟೈಲ್ಸ್‌ಗಳ ಮೇಲೆ ಸೋಪಿನ ನೀರು ಬಿದ್ದು ಜಾರುತ್ತದೆ. ಒಟ್ಟಿನಲ್ಲಿ ಬಚ್ಚಲೆಂದರೆ ಜಾರುವಿಕೆ. ಬಚ್ಚಲಲ್ಲಿ ಜಾರಿಬಿದ್ದು, ಕೈ ಕಾಲು, ಸೊಂಟ ಮುರಿದುಕೊಂಡಿರುವವರ, ಪ್ರಾಣ ಕಳೆದುಕೊಂಡಿರುವವರ ಬಗ್ಗೆ ಅಂಕಿ – ಅಂಶಗಳನ್ನು ಸಂಗ್ರಹಿಸಿದರೆ ಗಾಬರಿಯಾಗಬಹುದು.

ಸ್ನಾನದ ಮನೆಯಲ್ಲಿ ಒಬ್ಬೊಬ್ಬರದು ಒಂದೊಂದು ಥರ ಅಭ್ಯಾಸ. ಕೆಲವರು ಸ್ನಾನಕ್ಕೆ ಹೀಗೆ ಹೋಗಿ ಹಾಗೆ ಬರುತ್ತಾರೆ. ಗುಬ್ಬಚ್ಚಿಯ ಸ್ನಾನದ ಹಾಗೆ. ಅಂಥವರನ್ನು 'ಅದೇನು ಸ್ನಾನ ಮಾಡುದ್ಯೋ ಅಥವಾ ಸ್ನಾನದ ಶಾಸ್ತ್ರ ಮಾಡುದ್ಯೋ ಅಥವಾ ಸ್ನಾನದ ಮಾತ್ರೆ ನುಂಗಿದ್ಯೋ ಅಂತ ಆಕ್ಷೇಪಿಸುತ್ತಾರೆ. ಇನ್ನು ಕೆಲವರದ್ದು ಸ್ನಾನವೆಂದರೆ ಸುದೀರ್ಘ ಪ್ರಕ್ರಿಯೆ. ಗಂಟೆಗಟ್ಟಲೆ ಮುಗಿಯುವುದೇ ಇಲ್ಲ. ಇಂಥವರಿಗೆ 'ಅದೇನು ಎಷ್ಟು ನೀರು ಹುಯ್ಕೊಂಡ್ರು ಮೈಮೇಲೆ ನಿಲ್ಲುತ್ತೇ ? ಎಷ್ಟು ಉಜ್ಜಿದ್ರೂ ಕರಿನಾಯಿ ಬಿಳಿನಾಯಿ ಆಗುತ್ತೇ ? ಅಲ್ಲೇನು ಸ್ನಾನ ಮಾಡಿದ್ಯೋ ನಿದ್ದೆ ಮಾಡ್ತಿದ್ಯೋ ?' ಮುಂತಾದ ಆಕ್ಷೇಪಣೆ ಎದುರಾಗುತ್ತೆ. ಒಟ್ಟಿನಲ್ಲಿ ಏನೇ ಮಾಡಿದ್ರೂ, ಹೇಗೇ ಮಾಡಿದ್ರೂ ಆಕ್ಷೇಪಣೆ ತಪ್ಪಿದ್ದಲ್ಲ. ಇನ್ನು ಸಿಂಗಿಂಗಿಗೂ ಬಾತ್‌ರೂಮಿಗೂ ಅದೇನು ಸಂಬಂಧವೋ ಗೊತ್ತಿಲ್ಲ. ಬಾತ್‌ರೂಂ ಸಿಂಗರ್ಸ್ ಅಷ್ಟು ಫೇಮಸ್ಸಾಗಿರೋ ಸಿಂಗರ್ಸ್ಸೇ ಇಲ್ಲ. ಯಾರುನ್ನೇ ಕೇಳಿ ನಾನು ಬಾತ್‌ರೂಂ ಸಿಂಗರ್ ಅಂತ ಹೇಳ್ಕೋತಾರೆ !

ಸ್ನಾನದ ಮನೆ ಬಿಟ್ಟು ಹೊರಗೆ ನಡೆಯುವ ಪುಣ್ಯಸ್ನಾನ, ಮಂಗಳ ಸ್ನಾನಗಳಿಗೆ ವಿಶೇಷ ಮಹತ್ವವಿದೆ. ಕುಂಭಮೇಳ ಮುಂತಾದ ವಿಶೇಷ ದಿನಗಳಲ್ಲಿ ತೀರ್ಥ ಕ್ಷೇತ್ರಗಳಲ್ಲಿ ಲಕ್ಷಾಂತರ ಮಂದಿ ಒಟ್ಟಿಗೆ ಸ್ನಾನ ಮಾಡುವ ವಿಚಾರಗಳು ನಿಮಗೆ ಗೊತ್ತೇ ಇದೆ. ಅಲ್ಲಿ ಎಷ್ಟು ಜನಕ್ಕೆ ಎಷ್ಟು ಪುಣ್ಯ ಬಂತು ? ಕೊಳಕು ನೀರಿನಿಂದ ಎಷ್ಟು ಜನಕ್ಕೆ ಕಾಯಿಲೆ ಬಂತು ? ಮುಂತಾದ ಪ್ರಶ್ನೆಗಳನ್ನು ಕೇಳಬಾರದು. ಏಕೆಂದರೆ ಅದು ಭಕ್ತಿಯ ವಿಷಯ. ಬಲವಂತದ ಮಾಘ ಸ್ನಾನವಾದರೂ ಭಕ್ತಿಯ ವಿಷಯ ಬಂದಾಗ ಪ್ರಶ್ನೆ ನಿಷಿದ್ಧ. ಇತ್ತೀಚೆಗೆ ಭಕ್ತಿಯಿಂದ ಬ್ಯಾಂಕುಗಳಲ್ಲಿ, ಎಟಿಎಂಗಳ ಮುಂದೆ ಸಾಲುಗಟ್ಟಿ ನಿಂತಿದ್ದವರನ್ನು ಕಂಡಿಲ್ಲವೇ ? ಎಂದೋ ಸಿಗಬಹುದಾದ ಮುಕ್ತಿಗೋಸ್ಕರ ಈಗ ಚಳಿಯಲ್ಲಿ ತಣ್ಣೀರು ಸ್ನಾನ ಮಾಡುತ್ತಾರಲ್ಲ, ಅಯ್ಯಯ್ಯಪ್ಪ...! ಅದನ್ನು ನೆನೆಸಿಕೊಂಡರೇ ನನಗೆ ಮೈ ಗಡಗಡ ಅಂತ ನಡುಗುತ್ತೆ. ನಮ್ಮ ಜನಗಳ ಭಕ್ತಿಯೆಂದರೆ ಹಾಗೇ. ಯಾರೋ ಒಬ್ಬ ಭಕ್ತಿಯಿಂದ ಜ್ಯೋತಿಷಿಯನ್ನು ಭವಿಷ್ಯ ಕೇಳಿದನಂತೆ. ಜ್ಯೋತಿಷಿ ನಿನ್ನ ಜಾತಕದಲ್ಲಿ ಶನಿ ಅಷ್ಟಮದಲ್ಲಿರುವುದರಿಂದ ಇನ್ನು ೫೦೦ ದಿನ ನಿನಗೆ ಕಷ್ಟದ ದಿನಗಳು ಎಂದನಂತೆ. ನಂತರ ಸುಖವೇ ಸುಖ ಎಂದು ಕಲ್ಪಿಸಿಕೊಂಡು ಆ ಭಕ್ತ ಆಮೇಲೆ ? ಎಂದು ಕೇಳಿದ. ಆಗ ಜ್ಯೋತಿಷಿ ಆಮೇಲೆ ಅದೇ ಅಭ್ಯಾಸವಾಗಿರುತ್ತೆ ಅಂದನಂತೆ. ಒಂದಂತೂ ಒಪ್ಪಿಕೊಳ್ಳಬೇಕು ಜಾಗತೀಕರಣ ನಮ್ಮ ದಿನನಿತ್ಯದ ಸ್ನಾನದ ಮೇಲೆ ಪ್ರಭಾವ ಬೀರಿದೆ. ಆದರೆ ಈ ತೀರ್ಥಸ್ನಾನ, ಮಂಗಳಸ್ನಾನದ ವಿಚಾರದಲ್ಲಿ ಅದರ ಪರಿಣಾಮ ಏನೂ ಆಗಿಲ್ಲ.

ಅಂದಹಾಗೆ ಮಂಗಳಸ್ನಾನದ ವಿಚಾರ ವಿವರಿಸಲಿಲ್ಲ ಅಲ್ಲವೇ ? ಮದುವೆ ಮುಂಜಿ ಮುಂತಾದ ಶುಭಕಾರ್ಯಗಳಲ್ಲಿ, ವಟುವಿಗೆ, ವಧುವಿಗೆ, ವರನಿಗೆ ಅವರ ತಾಯಂದಿರಿಗೆ ಅರಿಸಿನ ನೀರಿನಿಂದ ಸ್ನಾನ ಮಾಡಿಸುತ್ತಾರೆ. ನನಗೆ ಇದರಲ್ಲಿ ಆಸಕ್ತಿಕರವಾಗಿ ಕಂಡದ್ದು ಮದುವೆಯ / ಶೋಭನದ ಮರುದಿನ ವಧೂವರರಿಗೆ ಒಟ್ಟಿಗೇ ಅರಿಸಿನ ನೀರಿನಲ್ಲಿ ಮಂಗಳಸ್ನಾನ ಮಾಡಿಸುತ್ತಾರೆ. ನಂತರ ಒಟ್ಟಿಗೆ ಸ್ನಾನದ ಮನೆಗೆ ಕಳುಹಿಸುತ್ತಾರೆ. ಆಹಾ ಎಂಥ ರಸಿಕ ಕ್ಷಣಗಳು ಅವು ! ಇನ್ನೂ ಹೆಚ್ಚಿಗೆ ಹೇಳಲಾರೆ. ನನ್ನ ಮೂಡೇ ಬದಲಾಗಿ ಹೋಯ್ತು ! ಮುಂದುವರೆಸಿದರೆ ಲಲಿತ ಪ್ರಬಂಧ ಹೋಗಿ ರತಿ ಪ್ರಬಂಧವಾದೀತು !

ವಿ. ಶ್ರೀನಿವಾಸ
ನಂ. ೧೨, ೧ನೇ ತಿರುವು, 'ಆಹ್ಲಾದ' ದೂರವಾಣಿ ಬಡಾವಣೆ, ಶಿವಮೊಗ್ಗ – ೫೭೭ ೨೦೪.

# ಇಲ್ಲ, ಇನ್ನು ಆಕೆ ಅಳುವುದಿಲ್ಲ !






ಅಕ್ಕ
ಅಳಬೇಡ ಸುಮ್ಮನಿರಕ್ಕ
ಬಾಡದ ಹೂವಿನಂತೆ ನಿರಂತರ ನಗುಹೊದ್ದ
ಅಕ್ಕನ ಎದೆಯಾಳದಲ್ಲೆಲ್ಲೋ
ಕಣ್ಣೀರ ಜಾರಿ ಹರಿಯುತ್ತಿದೆ ಎಂದು
ತಮ್ಮನಿಗೆ ಗೊತ್ತಿತ್ತು
ಆದರಿವತ್ತು ಕಣ್ಣೀರ ಪತ್ತೆಹಚ್ಚಿ ಬಿಟ್ಟೆ
ಎಂದಂದುಕೊಳ್ಳುತ್ತಿರುವಾಗಲೇ
ತಿರುಗಿ, ಮತ್ತೆ ಮುಗುಳ್ನಗೆ ತೋರಿ
"ಇಲ್ಲ ಕಣೋ ಅಳುತ್ತಿಲ್ಲ" ಎಂದು
ತಮ್ಮನ ಭುಜದ ಮೇಲೆ ಭಾರ ಹಾಕಿ
ಹೊರಬಂದಳು ಬೆಹೆನ್ ಯಶೋಧ.

ಸಡಗರ ತುಂಬಿದ ಬೀದಿ
ಬಾಜಾ ಬಜಂತ್ರಿ ಊರ ತುಂಬ, ದೇಶದುದ್ದಗಲ
ಇನ್ನು ಮುಂದಿನ ದಿನ ನಿಸ್ಸದ್ದು ಸಾಧ್ಯವಿಲ್ಲ ಎಂಬಷ್ಟು
ಅಭಿಮಾನವೋ ಇನ್ನೇನೋ ಸೇರಿ
ಉದ್ಘೋಷ, ಪರಾಕು, ಪರಾಕಾಷ್ಠೆ
ನರನೂ ಇಂದ್ರನಾಗುತ್ತಿದ್ದ ಹೊತ್ತು
ಪಟ್ಟಾಭಿಷೇಕವಾಗುತ್ತಿದೆ ಪ್ರಜಾಪ್ರಭುತ್ವದರಸನಿಗೆ

ಮುಖಕ್ಕೆ ಮೈಕು ಹಿಡಿದು ಕೇಳಿದರೆ ಇನ್ನೇನು ಹೇಳಬೇಕು
'ಏನನ್ನಿಸುತ್ತದೆ ನಿಮಗೆ' ಎಂದರೆ
'ಸಂತೋಷ ಅನಿಸುತ್ತಿದೆ'
ಎನ್ನುವುದನ್ನು ಬಿಟ್ಟರೆ ಲೋಕದೆಲ್ಲ ಭಾಷೆಗಳ
ಅಷ್ಟೂ ಪದಗಳೂ ಅಪ್ರಸ್ತುತವೇ

ಆದರೆ ಅಸ್ತಿತ್ವಕ್ಕೇ ಕಾಣದಂತೆ
ಅಸ್ತಿತ್ವದಲ್ಲುಳಿದು ಬಿಟ್ಟಿದೆ ಒಳಗೊಳಗಿನ ಮಾತು
ನನಗೇನೆನಿಸುತ್ತಿದೆ ಎಂದರೆ
"ಇರುವುದಾದರೆ ಮನಸ್ಸಾಕ್ಷಿ ಅವನಲ್ಲಿ ಹೊರಬರಲಿ
ಅವನ ಕಂಠ, ನಾಲಗೆ, ತುಟಿಗಳನ್ನು ಹಾದು ನನ್ನ ಹೆಸರು
ಆ ಒಣಗಿದೆಲೆ ಅಲುಗುವ ಸದ್ದು ನನ್ನ ಕಿವಿ ಪೊರೆಗೆ ಬಿದ್ದು
ನಾನು ನಿಟ್ಟುಸಿರು ಬಿಡಬೇಕು ಅವನ
ಕರ್ಮವೆಲ್ಲವೂ ಸ್ವಚ್ಛವಾಗುವಂತೆ"

ಏನನ್ನೂ ಮಾಡಲಾಗದ ಹೊತ್ತು ಇನ್ನೇನನ್ನು ಬಯಸೀತು
ಸತಿಯ ಮನಸ್ಸು
'ದೇಶಕ್ಕೇ ದೊರೆಯಾಗಿರಲಿ ಆತ
ನನಗಂತೂ ಗಂಡನೇ'

'ಆಂಟೀ, ಸ್ವೀಟ್ ತಗೊಳ್ಳಿ ಆಂಟೀ'
ಸಿಹಿಕೊಟ್ಟು ಸುಮ್ಮನೆ ಹೋಗಲ್ಲ ಪೋರಿ
ಕೇಳುತ್ತವೆ,
'ಅಂಕಲ್ ಯಾವಾಗ ಬರ್ತಾರೆ ಮನೆಗೆ'
ಮುಗ್ಧ ಪ್ರಶ್ನೆಯೂ ಈಟಿಯಾಗಿ ಇರಿಯುತ್ತವೆ
ಮೊದಲೇ ಗಾಯಗೊಂಡ ಎದೆಗೆ
ಆದರೂ ಇದ್ದೇ ಇದೆಯಲ್ಲ ನಗುವ ಹೊದಿಕೆ
ಆಂತರ್ಯದ ಉತ್ತರವನು ಮರೆಸುವ
ಲೋಕೋತ್ತರ ಬಗೆ
ಆತನಿನ್ನು ನನ್ನ ಹೆಣಕ್ಕೆ ಹೂವಿಡಲಾದರೂ
ಬಂದಾನೆಂಬ ಭರವಸೆಯೂ ಉಳಿದಿಲ್ಲ ಈಗ
ಆದರೂ ಹೆಣ್ಣ ಹಂಬಲ, ಆಳದ ಪುಟ್ಟ ಸಂದಿನಲ್ಲಿ
ಒಂದು ಇರುವೆ ಗಾತ್ರದ ಮಿಂಚು

ದೊರೆಯೇ ಅಲ್ಲವೇ
ಎಂದಾದರೊಂದು ದಿನ ಬಂದಾನು
ವೇಷ ಮರೆಸಿ ಬೆಂಗಾವಲು ಬದಿಗಿಟ್ಟು
ಆತ ಮರೆತಿರಲಿಕ್ಕಿಲ್ಲ
ಅವತ್ತು, ಮುಂಗೈ ಗಾಯಕ್ಕೆ
ನಾನು ಮುಲಾಮು ಸವರಿದ್ದು ಅವನ
ಗಡಸು ಖಂಡದ ಸ್ಪರ್ಶದಲ್ಲೂ ಎಂಥದೋ ಹಿತವಿತ್ತು
ನಾನವತ್ತೇ ಹೇಳಿದ್ದೆ
"ಏಕ್ ಫೂಲ್, ದೋ ಮಾಲಿ" ನಾಟಕದಲಿ ನಟಿಸಿ
ಆತ ಮನೆಗೆ ಬಂದ ರಾತ್ರಿ
'ನೀನು ಒಳ್ಳೆಯ ನಟನಾಗ್ತೀಯಾ' ಎಂದು ಕಿಚಾಯಿಸಿದರೆ
'ಅಂದ್ರೇನು ಈಗ ಆಗಿಲ್ಲ ಅಂತಾ ಅರ್ಥಾನಾ' ಅಂತ
ಅದೇ ತರ್ಕದ ಮಾತು ಎಂದಿನಂತೆ
'ಮಾತಿನ ಮಲ್ಲ ನೀನು' ಎಂದು ಸುಮ್ಮನಾಗಿದ್ದೆ
ಆಮೇಲೆ ಜೀವನ ಪೂರ್ತಿ ಸುಮ್ಮನೆ
ಸುಮ್ಮನೆ... ಖಾಲಿ ಮನೆ ಮನಸ್ಸು ಎಲ್ಲಾ
ಖಾಲಿ ಅಂತಾ ಕಂಡಲ್ಲಿಯೂ ಕಾಣಲಾಗದ ಸತ್ಯವೊಂದು
ಹೋಳಿಯಾಡ್ತಿರತ್ತೆ ಅನ್ನೋದನ್ನೂ
ನಾನು ಯಾರಲ್ಲೂ ಹೇಳುವಂತಿಲ್ಲ

ಈಗಾತ ದೇಶಕ್ಕೇ ದೊರೆ
ನನ್ನ ತುಟಿ ನಾಲಗೆಗಳಿಂದಷ್ಟೇ ಅಲ್ಲ
ಉಸಿರ ಸದ್ದಿನಲ್ಲೂ ಅಪಶ್ರುತಿ ಹೊರಬೀಳದಂತೆ ಸಭ್ಯ ಆದೇಶ
ನನ್ನ ಒಳಗಿನೊಳಗೂ ನನ್ನನುಮತಿಯಿಲ್ಲದೇ
ಸಿಕ್ಕಿ ಬಿಟ್ಟಿದೆ ಯಾರದೋ ಸುಪರ್ದಿಗೆ
ಭಾರತಮಾತೆಯ ಸುಪುತ್ರಿ ಪಾಲಿಸುತ್ತಿದ್ದೇನೆ ಗರತಿ ಧರ್ಮ
ಪಾಲಿಸುತ್ತೇನೆ, 'ಆ' ಮೂರು ದಿನದ ಸಂಸಾರ
ಸತ್ಯವೆಂದ ಬಳಿಕ ತಾಳಿ ಬಾಳಲೇಬೇಕಲ್ಲ
ನೂರು ವರುಷವಾದರೂ

ಅಗೋ ಮತ್ತೇನೋ ಸುದ್ದಿ
ಊರಿಗೇ ಬರುತ್ತಿದ್ದಾನಂತೆ
ಮನೆಗೇನಾದರೂ ಬಂದು ಬಿಟ್ಟಾನೆಯೇ
ಹೀಗೆಯೇ ಧಿಡೀರನೆ...

ಒಗ್ಗರಣೆ ಹೊತ್ತಿದ ವಾಸನೆ
ಅಕ್ಕಾ ಅಕ್ಕಾ
ಮೆಟ್ಟಿಬಿದ್ದಳು ಬೆಹೆನ್ ಯಶೋಧ
ತಮ್ಮನ ಕಣ್ಣಿನಲ್ಲಷ್ಟೇ ನಿಲ್ಲಲಾಗದೇ
ಸುರಿಯುತ್ತಲೇ ಇರುವ ನೀರು
ಊಹ್ಞೂಂ ಆಕೆ ಇನ್ನು ಅಳುವುದಿಲ್ಲ
ಒಗ್ಗರಣೆ ಕಪ್ಪಾಯಿತಷ್ಟೇ
ಅಕ್ಕ ಸಾರು ಚೆಲ್ಲಲಿಲ್ಲ.

**ಪೀರ್‌ಬಾಷಾ ಬವಾಜಿ**
ಜೆ. ಪಿ. ನಗರ, ಕಾರಟಗಿ – ೫೮೩ ೨೨೯
ಗಂಗಾವತಿ ತಾಲ್ಲೂಕು, ಕೊಪ್ಪಳ ಜಿಲ್ಲೆ







# ಜಿ.ಎಸ್.ಟಿ. : ಅನುಭವ / ಅಭಿಪ್ರಾಯಗಳು



'ಹೊಸತು' ೨೦೧೮ರ ವಿಶೇಷ ಸಂಚಿಕೆಯ 'ಓದುಗರ ವೇದಿಕೆಗೆ' ಜಿ.ಎಸ್.ಟಿ. ಕುರಿತ ಅಭಿಪ್ರಾಯ, ಅನುಭವ ಹಂಚಿಕೊಂಡ ಎಲ್ಲರಿಗೂ ಧನ್ಯವಾದಗಳು. ಕೇಂದ್ರ ಸರಕಾರ ತಂದಿರುವ ಸರಕು ಸೇವಾ ತೆರಿಗೆ ದೇಶದ ಜನತೆಯ ಮೇಲೆ ಉಂಟುಮಾಡಿದ, ಮುಂದೆ ಉಂಟುಮಾಡಬಹುದಾದ ಪರಿಣಾಮಗಳ ಕುರಿತು ಅಭಿಪ್ರಾಯಗಳನ್ನು, ಅನುಭವಗಳನ್ನು ಈ 'ಓದುಗರ ವೇದಿಕೆ'ಯ ಮೂಲಕ ಓದುಗರ ಮುಂದಿಡಲಾಗಿದೆ. ಓದುಗರ ಪ್ರತಿಕ್ರಿಯೆಗೆ ಸ್ವಾಗತ.

–ಸಂ

## ಸುದರ್ಶನ ಚಕ್ರ ?

**ಜಿ.** ಎಸ್. ಟಿ. ಎಂದರೇನು? ಇದ್ಯಾವ ಹೊಸ ಭೂತ ಎಂದು ತಬ್ಬಿಬ್ಬಾದ ನಮ್ಮಂಥ ಹಳೆ ತಲೆಮಾರಿನವರಿಗೆ ಬುದ್ಧಿವಂತ ನವ ಪೀಳಿಗೆಯಿಂದ ಬಂದ ಉತ್ತರ. 'ಇದು ಏಕರೂಪ ತೆರಿಗೆ ಅಮ್ಮಾ. ಇದರ ಮುಂದೆ ನೀವೂ ಅಂಬಾನಿಯೂ ಸಮಾನರು.'

ಪ್ರತಿಪಕ್ಷಗಳಿರಲಿ, ಬಿಜೆಪಿ – ಸಂಘ ಪರಿವಾರಕ್ಕೆ ತಮ್ಮನ್ನು ಒತ್ತೆ ಇಟ್ಟುಕೊಂಡಿರುವ ಬಹುತೇಕ ಮಾಧ್ಯಮಗಳು ನೋಟ್‌ಬ್ಯಾನ್‌ನಂತೆ ಇದೂ ಕ್ರಾಂತಿಕಾರಕ ಹೆಜ್ಜೆ ಎಂದು ಕಹಳೆ ಊದಿದವು. ಪರೋಕ್ಷ ತೆರಿಗೆ ವ್ಯವಸ್ಥೆಯನ್ನು ಸುಧಾರಿಸುತ್ತದೆ ಎಂದು ಬಿಂಬಿಸಿದರು. ಗ್ರಾಹಕರಿಗೆ ಕೊಳ್ಳುವ ಸರಕುಗಳ ಮೇಲಿನ ತೆರಿಗೆ ಶೇಕಡ ೨೫ರಿಂದ ೩೦ರವರೆಗೆ ಕಡಿಮೆಯಾಗುತ್ತದೆ ಎಂದರು. ಇದೀಗ ಬಣ್ಣ ಬಯಲಾಗಿ ದೇಶದ ಆರ್ಥಿಕ ವ್ಯವಸ್ಥೆ ಕುಸಿಯುತ್ತಿರುವ ಸತ್ಯ ಹೊರಬಿದ್ದಿದೆ. ಬೆಲೆಗಳನ್ನು ಆಕಾಶಕ್ಕೇರಿಸಿ, ನಮ್ಮಂಥವರು ಬೊಬ್ಬೆ ಇಟ್ಟಾಗ, ಸ್ವಲ್ಪವೇ ಇಳಿಸಿದಂತೆ ಮಾಡಿ 'ನೋಡಿದಿರಾ ನಿಮ್ಮ ಮೊರೆ ಕೇಳಿದೆವು' ಎನ್ನುವಂಥ ಅಗ್ಗದ ತಂತ್ರವನ್ನು ಕೇಂದ್ರ ಸರ್ಕಾರ ಅನುಸರಿಸುತ್ತಿದೆ. ಅಗ್ಗದ ಜನಪ್ರಿಯತೆಯಿಂದ ಅಧಿಕಾರಕ್ಕೇರಿದವರು ಮತ್ತೇನು ಮಾಡಿಯಾರು!

ಅಸಮಾನತೆಗೆ ಕುಪ್ರಸಿದ್ಧವಾಗಿರುವ ಭಾರತದ ಬಲಪಂಥೀಯ ಆಡಳಿತಗಾರರಿಗೆ ಶಿಕ್ಷಣ, ಉದ್ಯೋಗಾವಕಾಶಗಳಲ್ಲಿ, ಸ್ತ್ರೀಪುರುಷರ ವೇತನದಲ್ಲಿ, ಜಾತಿ–ಜಾತಿಗಳ ನಡುವೆ ಸಮಾನತೆ ಬೇಡ. ಬದಲಿಗೆ ಏಕರೂಪ ತೆರಿಗೆ, ಏಕರೂಪ ನಾಗರಿಕ ಸಂಹಿತೆಗಳಂಥ ಬೆಂಕಿ ಇಡುವ ಯೋಚನೆಗಳು ಬರುತ್ತವೆ.

ಹಿರಿಯ ಮೇಧಾವಿ ರಂಗಕರ್ಮಿ ಪ್ರಸನ್ನ ಅರಣ್ಯೋತ್ಪತ್ತಿಗಳ ಮೇಲೆ ಸಮಾನ ತೆರಿಗೆ ಎಂದರೇನು ಎಂದು ಪ್ರತಿಭಟಿಸಿ ಹಲವು ದಿನಗಳು ಉಪವಾಸ ಕೂತರು. ನೋಟ್‌ಬ್ಯಾನ್ ಮಾಡಿದಾಗ ನೂರಾರು ಜೀವಗಳು ಹೋದರೂ, ಬೀದಿಗೆ ಬಿದ್ದರೂ ಪ್ರತಿಕ್ರಿಯಿಸದೇ ಇದ್ದವರು ಪ್ರಸನ್ನರಂಥವರ ಮೆಲ್ದನಿಗೆ ಓಗೊಡುವರೆ?

ದೇಶದ ಸಾಕ್ಷಿ ಪ್ರಜ್ಞೆಗಳಂತಿರುವ ಅಮರ್ತ್ಯ ಸೇನ್, ರಘು ರಾಂ ರಾಜನ್, ಪ್ರಸನ್ನ, ಪ್ರಕಾಶ್ ರೈರಂಥವರ ಸಲಹೆ, ವಿರೋಧಗಳಿಗೀಗ ಯಾವ ಬೆಲೆಯೂ ಇಲ್ಲ. ಯೋಜನಾ ಆಯೋಗ ನೀತಿ ಆಯೋಗವಾಯಿತು. ನೋಟ್‌ಬ್ಯಾನ್ ಸಣ್ಣಪುಟ್ಟ ವ್ಯಾಪಾರಿಗಳ, ಗೃಹಿಣಿಯರ ಜೀವ ಹಾರಿಸಿತು. ಈಗ ಅಸಂಬದ್ಧ ಅನಾರೋಗ್ಯಕರ ರೀತಿಯಲ್ಲಿ ತೆರಿಗೆ ಹೇರಿಕೆ! ಬದಲಾವಣೆ ಹೆಸರಿನಲ್ಲಿ ಹೊಸ ರೋಗಗಳು ಹುಟ್ಟಿಕೊಳ್ಳಬೇಕೆ?

ಗಾಂಧೀಜಿಯವರ ಚರಕಾ ಚಕ್ರ ಸ್ತಬ್ಧಗೊಳಿಸಿ, ಜಿ. ಎಸ್. ಟಿ. ಎಂಬ ಸುದರ್ಶನ ಚಕ್ರವನ್ನು ಕೇಂದ್ರ ಸರ್ಕಾರ ಪ್ರಯೋಗಿಸಿದೆ.

ನಮ್ಮದು ಒಂದು ಕಣ್ಣು ಹೋದರೂ ಪರವಾಗಿಲ್ಲ, ಅಲ್ಪಸಂಖ್ಯಾತರ ಎರಡು ಕಣ್ಣುಗಳನ್ನೂ ಕೀಳುವ ಸರ್ಕಾರ ಬರಲಿ ಎಂಬ ಧೋರಣೆಯಿಂದ ಮತ ಚಲಾಯಿಸಿದವರು ಈಗಲಾದರೂ ಪಶ್ಚಾತ್ತಾಪ ಪಡದಿದ್ದರೆ ಜಿ. ಎಸ್. ಟಿ.ಯಂಥ ಇನ್ನಷ್ಟು ಚಕ್ರಗಳನ್ನು ಪ್ರಯೋಗಿಸಿ ನಮ್ಮನ್ನು – ನಿಮ್ಮನ್ನು ತುರಿಯುತ್ತಾ ಹೋಗುತ್ತಾರೆ.

❑ **ಕಸ್ತೂರಿ,** ತುಮಕೂರು

* * *




## ಲಾಭಾಂಶದ ಪಾಲು ಗ್ರಾಹಕರಿಗೂ ಸಲ್ಲಬೇಕಿದೆ

೨೦೧೭ರ ಜುಲೈನಿಂದ ಜಾರಿಗೆ ತರಲಾಗಿರುವ ಒಂದು ವಸ್ತು – ಒಂದು ತೆರಿಗೆ ವ್ಯವಸ್ಥೆಯಾದ ಜಿ. ಎಸ್. ಟಿ.ಯ ಹಿಂದೆ ಸಾಕಷ್ಟು ಚಿಂತನೆಗಳು, ಚರ್ಚೆಗಳು, ವಿಚಾರ ವಿನಿಮಯಗಳು, ಆರ್ಥಿಕ ಲೆಕ್ಕಾಚಾರಗಳು ಜರುಗಿದ್ದು ದೇಶದ ಬಹುತೇಕ ರಾಜ್ಯಗಳು ಸಮ್ಮತಿಸಿವೆ. ಮೊದಲಿಗೆ ಚಾಲ್ತಿಯಲ್ಲಿದ್ದ ಸುಮಾರು ೧೭ ಪ್ರಕಾರದ ತೆರಿಗೆ ವ್ಯವಸ್ಥೆಯ ಬದಲಾಗಿ ನೂತನ ಏಕ ಮಾದರಿಯ ತೆರಿಗೆ ಜಾರಿಯಾಗಿರುವ ಸಂದರ್ಭದಲ್ಲಿ ತಯಾರಕರು ಹಾಗೂ ವ್ಯಾಪಾರಸ್ಥರು ತಮ್ಮ ಲಾಭಾಂಶವನ್ನು ಮುಂಚಿನ ಮಟ್ಟದಲ್ಲಿಯೇ ಇರಿಸಿ ಹೆಚ್ಚುವರಿ ಅಂಶವನ್ನು ಗ್ರಾಹಕರಿಗೆ ಹಸ್ತಾಂತರಿಸಬೇಕಾಗಿದ್ದರೂ ವಾಸ್ತವದಲ್ಲಿ ಹೀಗಾಗುತ್ತಿಲ್ಲವಾದ ಕಾರಣ ಜಿ. ಎಸ್. ಟಿ.ಯ ಕಾರಣ ಪದಾರ್ಥಗಳ ಬೆಲೆ ಹೆಚ್ಚಾಗಿರುವ ಬಗ್ಗೆ ಸತ್ಯಕ್ಕೆ ದೂರವಾದ ದೂರುಗಳು ಕೇಳಿ ಬರುತ್ತಿವೆ.

ಉದಾಹರಣೆಗೆ, ಮಹಿಳೆಯರ ಸ್ಯಾನಿಟರಿ ನ್ಯಾಪ್ಕಿನ್‌ಗಳಿಗೆ ಜಿ. ಎಸ್. ಟಿ. ಪೂರ್ವದಲ್ಲಿ ತೆರಿಗೆ ಸುಮಾರು ಶೇಕಡ ೧೪ ಇದ್ದಿದ್ದು, ಪ್ರಸ್ತುತ ಶೇಕಡ ೧೨ರ ಜಿ. ಎಸ್. ಟಿ. ವಿಧಿಸಲಾಗಿದೆ. ಆದರೆ, ಈ ವಸ್ತುವಿನ ತಯಾರಿಕೆಯಲ್ಲಿ ಬಳಸುವ ಕಚ್ಚಾ ಪದಾರ್ಥಗಳಿಗೆ ಶೇಕಡ ೧೮ರ ತೆರಿಗೆ ಪಾವತಿಯಾಗುತ್ತಿದ್ದು ತಯಾರಕರು ಇನ್‌ಪುಟ್ ಕ್ರೆಡಿಟ್ ಪಡೆಯಬಹುದಾಗಿರುವ ಸಂದರ್ಭದಲ್ಲಿ ಪರಿಣಾಮಕಾರಿ ತೆರಿಗೆ ಶೇಕಡ ೩ರಿಂದ ೪ರಷ್ಟು ಮಾತ್ರವಾಗಿದೆ. ಪದಾರ್ಥಗಳ ತಯಾರಕರು ಸ್ವಯಂಪ್ರೇರಿತವಾಗಿ ಜಿ. ಎಸ್. ಟಿ.ಯ ಆರ್ಥಿಕ ಸಾಧಕ–ಬಾಧಕಗಳನ್ನು ಗಮನಿಸಿ ಮಾರಾಟ ಬೆಲೆಯನ್ನು ನಿಗದಿಪಡಿಸಿದಲ್ಲಿ ಮಾತ್ರ ಸುಸಂಗತವಾದ ಲಾಭಾಂಶ ಹಾಗೂ ವಹಿವಾಟು ಸಾಧ್ಯ. ಇಲ್ಲವಾದಲ್ಲಿ, ಬಹುಶಃ ಕೇಂದ್ರ ಸರ್ಕಾರ ರಚಿಸಿರುವ ಜಿ. ಎಸ್. ಟಿ. ನಿಯಂತ್ರಣ ಸಮಿತಿ ಮಧ್ಯ ಪ್ರವೇಶಿಸಿ ಕೆಲವು ಕಠಿಣವಾದ ನಿಯಮಾವಳಿಗಳನ್ನು ತಯಾರಕರ ಹಾಗೂ ವ್ಯಾಪಾರಗಾರರ ಮೇಲೆ ಹೇರುವ ಸಾಧ್ಯತೆಗಳಿರುತ್ತವೆ. ಶೇಕಡ ೧೨ರ ಜಿ. ಎಸ್. ಟಿ.ಯನ್ನು ಮತ್ತಷ್ಟು ಇಳಿಕೆ ಮಾಡಿದಲ್ಲಿ ವಹಿವಾಟು ಹೊರದೇಶದ ಪಾಲಾಗುವ ಸಾಧ್ಯತೆಗಳಿವೆ.

❑ ***ಸುಶೀಲಾ ಬಿ. ಆರ್. ರಾಮಣ್ಣ,*** *ಬೆಂಗಳೂರು.*

* * *

## ಸರಕು ಸೇವಾ ತೆರಿಗೆ

೧೯೯೧ರಲ್ಲಿ ಕಾಂಗ್ರೆಸ್ ಸರ್ಕಾರದ ಅವಧಿಯಲ್ಲಿ ಪ್ರಾರಂಭವಾದ ಆರ್ಥಿಕ ಸುಧಾರಣೆಗಳ ಪರ್ವದ ಮುಂದುವರೆದ ಭಾಗವಾಗಿ, ಇದೇ ವರ್ಷ ಜುಲೈ ತಿಂಗಳಿನಲ್ಲಿ ನರೇಂದ್ರ ಮೋದಿ ಸರ್ಕಾರ ಸರಕು ಸೇವಾ ತೆರಿಗೆ ಕಾಯಿದೆಯನ್ನು ಜಾರಿಗೊಳಿಸಿದೆ. ಸ್ವತಂತ್ರ ಭಾರತದ ಇತಿಹಾಸದಲ್ಲಿ, ಸರಕು ಸೇವಾ ತೆರಿಗೆ ಸುಧಾರಣಾ ಕಾಯಿದೆಯನ್ನು ಐತಿಹಾಸಿಕ ಮೈಲಿಗಲ್ಲು ಎಂದು ಕೊಂಡಾಡಲಾಗಿದೆ. ನೂತನ ತೆರಿಗೆ ಸುಧಾರಣೆ ಯೋಜನೆಯಡಿ ಅನೇಕ ರಾಜ್ಯಗಳಲ್ಲಿ ಚಾಲ್ತಿಯಲ್ಲಿರುವ ವಿವಿಧ ತೆರಿಗೆಗಳನ್ನು ರದ್ದುಪಡಿಸಿ, ಸರಳ ಏಕರೂಪ ತೆರಿಗೆಯನ್ನು ಬಳಕೆ ಮಾಡಲಾಗುವುದು ಎಂದು ಪ್ರಕಟಿಸಲಾಗಿದೆ. ಈ ಸರಕು ಸೇವಾ ತೆರಿಗೆ ಪ್ರಸ್ತಾವನೆಯನ್ನು ಹಿಂದಿನ ಯು.ಪಿ.ಎ. ಸರ್ಕಾರದ ಅವಧಿಯಲ್ಲೇ ಸಲ್ಲಿಸಲಾಗಿತ್ತು. ಆದರೆ, ಪ್ರಸ್ತಾವನೆಗೆ ಅಂತಿಮ ಕಾಯಿದೆ ರೂಪವನ್ನು ನರೇಂದ್ರ ಮೋದಿ ನೇತೃತ್ವದ ಎನ್. ಡಿ. ಎ. ಸರ್ಕಾರ ನೀಡಿದೆ. ಈ ಕಾಯಿದೆಯಡಿ, ದೇಶದಲ್ಲಿ ವ್ಯಾಪಕವಾಗಿ ಮಾರಾಟವಾಗುವ 'ಪದಾರ್ಥ'ಗಳನ್ನು ಅನೇಕ ವಿಭಾಗಗಳಲ್ಲಿ ವಿಂಗಡಿಸಲಾಗಿದೆ. ಶೇಕಡ ೫ರಿಂದ ೨೮ರಷ್ಟು ತೆರಿಗೆಯನ್ನು ಸರಕು ಸೇವಾ ತೆರಿಗೆ ಯೋಜನೆಯಡಿ ವಿಧಿಸಲಾಗಿದೆ. ಸಗಟು ಮತ್ತು ಚಿಲ್ಲರೆ ವರ್ತಕರು, ಅವರ ವಾರ್ಷಿಕ ವಹಿವಾಟು ೨೦ ಲಕ್ಷಕ್ಕೂ ಮೀರಿದ್ದರೆ, ಈ ಕಾಯಿದೆಗೆ ಒಳಪಡುತ್ತಾರೆ. ವರ್ತಕರು, ಅವರ ವಾರ್ಷಿಕ ವಹಿವಾಟಿನ ಅನುಸಾರ, ತ್ರೈಮಾಸಿಕ, ಅರ್ಧವಾರ್ಷಿಕ ಮತ್ತು ವಾರ್ಷಿಕ ವರದಿಗಳನ್ನು ಜಿ. ಎಸ್. ಟಿ. ಮಂಡಳಿಗೆ ಸಲ್ಲಿಸಬೇಕಾಗುತ್ತದೆ. ಈ ಕಾಯಿದೆಯಲ್ಲಿ ವರ್ತಕರಿಗೆ ಅಧಿಕ ಪಾವತಿಯಾದ ತೆರಿಗೆ ವಾಪಸ್ಸು ಮಾಡುವ ವ್ಯವಸ್ಥೆಯನ್ನೂ ಅಳವಡಿಸಲಾಗಿದೆ.

ಆದರೆ ಈ ನೂತನ ತೆರಿಗೆ ಸುಧಾರಣಾ ಕಾಯಿದೆ ಅನುಷ್ಠಾನದ ಹಂತದಲ್ಲಿ ಅನೇಕ ಸಮಸ್ಯೆಗಳನ್ನು ಸೃಷ್ಟಿಸಿ ವರ್ತಕರಿಗೆ ಸವಾಲುಗಳನ್ನು ಒಡ್ಡಿದೆ.

ಮೊದಲನೆಯದಾಗಿ, ಸಾರ್ವಜನಿಕರಿಗೆ ಈ ಕಾಯಿದೆಯಡಿ ವಿಧಿಸಲಾಗುವ ತೆರಿಗೆ ದರಗಳ ಬಗ್ಗೆ ಮಾಹಿತಿ ಕೊರತೆ. ಎರಡನೆಯದಾಗಿ, ವರ್ತಕ ಸಮುದಾಯದಲ್ಲಿ ತೆರಿಗೆ ದರಗಳ ಬಗ್ಗೆ ವರದಿ ಸಲ್ಲಿಕೆ ಮತ್ತು ತೆರಿಗೆ ವಾಪಸಾತಿ ಬಗ್ಗೆ ಸ್ಪಷ್ಟತೆಯ ಕೊರತೆ.

ಸರಕು ಸೇವಾ ತೆರಿಗೆ ಕಾಯಿದೆ ಜಾರಿಯಾದ ಹಿನ್ನೆಲೆಯಲ್ಲಿ ಮಾರುಕಟ್ಟೆಗಳಲ್ಲಿ ಕಾಣಿಸಿಕೊಂಡ ಕ್ಷಿಪ್ರ ಪರಿಣಾಮವೆಂದರೆ ಬೆಲೆ ಏರಿಕೆ. ಅಗತ್ಯ ವಸ್ತುಗಳ ಬೆಲೆಯಲ್ಲಿ ಏರಿಕೆ ಕಂಡುಬಂತು. ಗ್ರಾಹಕರ ಪ್ರಶ್ನೆಗಳಿಗೆ ವರ್ತಕರು ಸಮಾಧಾನಕರ ವಿವರಣೆಗಳನ್ನು ನೀಡಲಾಗಲಿಲ್ಲ. ರಸ್ತೆ ಬದಿ ವಹಿವಾಟು ನಡೆಸುವ 'ದರ್ಶಿನಿ' ಉಪಾಹಾರ ಕೇಂದ್ರಗಳಲ್ಲೂ ತಿಂಡಿ, ತಿನಿಸು ಮತ್ತು ಭೋಜನದ ಬೆಲೆಗಳನ್ನು ಹೆಚ್ಚಿಸಲಾಯಿತು. ಅತ್ಯಂತ ಜನವಿರೋಧಿ ಭಾಗವೆಂದರೆ, ಕರಕುಶಲ ಮತ್ತು ಕೈಮಗ್ಗದ ವಸ್ತುಗಳನ್ನು ಸಹ ಸರಕು ಸೇವಾ ತೆರಿಗೆ ಕಾಯಿದೆಗೆ ಗುರಿಪಡಿಸಲಾಯಿತು. ಗ್ರಾಮೀಣ ಭಾಗದ ಬಡ ಕುಟುಂಬಗಳು ತಯಾರಿಸುವ ಈ ವಸ್ತುಗಳ ಮೇಲೆ ತೆರಿಗೆ ವಿಧಿಸುವುದು ಅತ್ಯಂತ ಅಸಹನೀಯ ಕ್ರಮವಾಗಿದೆ. ಕಾಯಿದೆ ಜಾರಿಯಾದ ಕೆಲವೇ ತಿಂಗಳುಗಳಲ್ಲಿ ವ್ಯಾಪಾರ ವಹಿವಾಟು ಕುಸಿದಿರುವುದು ವರದಿಯಾಗಿದೆ. ಸರ್ಕಾರ ಮಾರ್ಪಾಡುಗಳನ್ನು ಮಾಡಲು ಮುಂದಾಗಿದೆ. ಕೇಂದ್ರ ಸರ್ಕಾರ ಸಂಗ್ರಹವಾದ ತೆರಿಗೆ ಹಣದಲ್ಲಿ ರಾಜ್ಯಗಳ ಭಾಗವನ್ನು ಒಪ್ಪಂದದ ಪ್ರಕಾರ ಸಂದಾಯ ಮಾಡಬೇಕಾಗಿದೆ.

ಒಟ್ಟಾರೆ ಜಿ. ಎಸ್. ಟಿ. ಕಾಯಿದೆಯ ಅನುಷ್ಠಾನ ಅಷ್ಟು ಸರಳವಾಗಿಲ್ಲ. ಕಾಯಿದೆಯನ್ನು ಜಾರಿಗೊಳಿಸಲು ನಡೆಸಬೇಕಾಗಿದ್ದ ಪೂರ್ವ ಸಿದ್ಧತೆಗಳ ಕೊರತೆ, ಸಗಟು ಮತ್ತು ಚಿಲ್ಲರೆ ವರ್ತಕ ಸಮುದಾಯವನ್ನು ಕಾಡುತ್ತಿದೆ. ಕಾಯಿದೆಯ ಅನುಷ್ಠಾನ ಮತ್ತು ನಿರ್ವಹಣೆಯ ಜವಾಬ್ದಾರಿ ಹೊತ್ತಿರುವ ಸರಕು ಸೇವಾ ತೆರಿಗೆ ಮಂಡಳಿ ವರ್ತಕರ ಮತ್ತು ಗ್ರಾಹಕರ ಸಮಸ್ಯೆಗಳನ್ನು ಹೇಗೆ ಪರಿಹರಿಸಲಿದೆ ಎಂಬುದನ್ನು ಕಾದು ನೋಡಬೇಕು.

❑ ***ಶಂಕರನಾರಾಯಣ,*** *ಬೆಂಗಳೂರು*

* * *

## ಜಿ. ಎಸ್. ಟಿ. ಅನುಭವ

ಮುಂಬಯಿ ನಗರದಲ್ಲಿ ೬೦ ವರ್ಷಗಳಿಂದ ನೆಲೆಸಿದ ಸಾಮಾನ್ಯ ಕನ್ನಡಿಗ ನಾನು. ಭಾರತೀಯ ರಿಜರ್ವ್ ಬ್ಯಾಂಕಿನಲ್ಲಿ ಸುಮಾರು ೩೪ ವರ್ಷ ಸೇವೆ ಸಲ್ಲಿಸಿ ನಿವೃತ್ತನಾಗಿದ್ದೇನೆ. ನನ್ನ ಅನುಭವ ಏನೇ ಇದ್ದರೂ ಸಾಮಾನ್ಯ ನಾಗರಿಕನ ಕೆಳಮಧ್ಯಮ ವರ್ಗದ ಅನುಭವವಾಗಿರುತ್ತದೆ.

ಜಿ. ಎಸ್. ಟಿ. ಕಾರ್ಯಾನ್ವಯ ಮಾಡಿದ ನಂತರದಲ್ಲಿ ಉದ್ಯೋಗ, ವ್ಯಾಪಾರ ವಹಿವಾಟುಗಳಲ್ಲಿ ಪರಿಸ್ಥಿತಿಯು ಅಲ್ಲೋಲ ಕಲ್ಲೋಲವಾಗಿದೆಯೆಂದು ಓದಿ ತಿಳಿದಿದ್ದೇನೆ, ಆದರೂ ಈ ವಿಷಯದಲ್ಲಿ ನಾನೇನೂ ಅಧಿಕಾರಯುತವಾಗಿ ಬರೆಯಲಾರೆ. ಜಿ. ಎಸ್. ಟಿ. ಪ್ರಣಾಲಿ ಬಂದ ನಂತರ ಬಹಳಷ್ಟು ಬದಲಾವಣೆಗಳು ಸಾಮಾನ್ಯನ ದಿನನಿತ್ಯದ ಜೀವನದಲ್ಲಿ ಆಗಿವೆ, ಆಗುತ್ತಿವೆ. ಇದರ ಮೂಲಕ ಸಾಮಾನ್ಯನ ಜೀವನದಲ್ಲಿ ಸುಖದ ತಂಗಾಳಿ ಬೀಸುವ ಸಾಧ್ಯತೆ ಗೋಚರಿಸುತ್ತದೆ.

ಬ್ರಿಟಿಷರು ಬಿಟ್ಟು ಹೋಗುವಾಗ ಅವರಿಗೆ ಅನುಕೂಲವಾದ ಕರ ಪದ್ಧತಿ

ಕೊಟ್ಟು ಹೋಗಿದ್ದಾರೆ. ಅದು ನೇರ ತೆರಿಗೆ ಮತ್ತು ಪರೋಕ್ಷ ತೆರಿಗೆ ಪದ್ಧತಿ. ಸ್ಥಳೀಯ ಆಡಳಿತ ಸಂಸ್ಥೆಗಳ ತೆರಿಗೆ, ಆಸ್ತಿ ತೆರಿಗೆ, ರಸ್ತೆ ತೆರಿಗೆ ಇತ್ಯಾದಿಗಳೂ ಇದ್ದವು. ಈ ಎಲ್ಲ ವಲಯಗಳು ಭ್ರಷ್ಟಾಚಾರದ ಗೂಡುಗಳು. ಇವೆಲ್ಲ ಸಾಮಾನ್ಯ ನಾಗರಿಕನ ಜೀವನವನ್ನು ಹಿಂಡಿ ಹಿಪ್ಪೆ ಮಾಡಿವೆ. ಈ ಪದ್ಧತಿಗೆ ಬದಲಾಗಿ ಬಹಳಷ್ಟು ಕರಗಳನ್ನು ಒಂದುಗೂಡಿಸಿ, ಜಿ. ಎಸ್. ಟಿ. ಮಾಡಿರುವುದರಿಂದ ಬಹಳಷ್ಟು ವಿಭಾಗಗಳಲ್ಲಿರುವ ಲಂಚಖೋರಿತನಕ್ಕೆ ಕಡಿವಾಣ ಬೀಳಬಹುದು. ಇದರಿಂದ ಸಾಮಾನ್ಯ ನಾಗರಿಕರಾದ ನಮಗೆ ಲಾಭ. ಒಟ್ಟಿನಲ್ಲಿ ಹೊಸ ಪದ್ಧತಿಯು ಭ್ರಷ್ಟಾಚಾರವನ್ನು ತಡೆಯಲು ಬ್ರಹ್ಮಾಸ್ತ್ರವಾಗಲಿದೆ.

ಜಿ. ಎಸ್. ಟಿ. ಬಂದೊಡನೆ ಭಾರತ ಸ್ವರ್ಗವಾದೀತು ಎಂದು ಹೇಳಲಾಗದು. ಆದರೆ, ಇದು ಆ ದಿಶೆಯಲ್ಲಿ ಒಂದು ಹೆಜ್ಜೆ ಎಂದು ನಿಶ್ಚಯವಾಗಿ ಹೇಳಬಹುದು. ಮುಂಬಯಿ ನಗರದಲ್ಲಿ ಸಾಮಾನ್ಯರಾದ ನಾವು ಒಂದು ಮನೆ ಮಾಡುವ ಸಮಸ್ಯೆ ಎಷ್ಟು ಕಠಿಣ ಎಂಬುದು ಎಲ್ಲರಿಗೂ ಗೊತ್ತು. ಆಸ್ತಿ ಖರೀದಿಸುವಾಗ ಕಪ್ಪು ಹಣದ ಸಮಸ್ಯೆ ಎಲ್ಲರಿಗೂ ಗೊತ್ತಿದೆ. ಮೊದಲು ಆಸ್ತಿಯಲ್ಲಿ ೬೦–೮೦ ಕಪ್ಪು ಹಣದ ಸಮಸ್ಯೆಯಿದ್ದರೆ ಈಗ ಅದು ೫ರಿಂದ ೧೦ವರೆಗೆ ಪ್ರತಿಶತಕ್ಕೆ ಬಂದಿದೆ ಎಂದು ನನ್ನ ಮಿತ್ರರೂ ಹೇಳುತ್ತಿದ್ದಾರೆ. ಈ ಪರಿಸ್ಥಿತಿ ಹೀಗೆಯೇ ಮುಂದುವರೆದರೆ ಸಾಮಾನ್ಯರು ಸಹ ಮನೆ ಮಾಡುವ ಕನಸು ನನಸಾಗುವುದರಲ್ಲಿ ಸಂದೇಹವಿಲ್ಲ. ಔಷಧ ಅಂಗಡಿಗಳಲ್ಲಿ ನನ್ನಂಥ ಹಿರಿ ನಾಗರಿಕನಿಗೆ ಕೇಳದೆ ಬಿಲ್ ದೊರೆಯುತ್ತದೆ.

❑ ***ಹ. ಶ್ರೀ. ಆಡೂರ,*** *ಕಾಂದಿವಿಲಿ (ಪೂರ್ವ)*

*  *  *

## ಅವೈಜ್ಞಾನಿಕ ತೆರಿಗೆ

ನಮ್ಮ ಸೇವೆ ಮಾಡುವುದಾಗಿ ಕರಮುಗಿದು ಕಳಕಳಿಯಿಂದ ಹೇಳಿ ಮತ್ತು ಕೇಳಿ ಮತ ಪಡೆದು ಆಯ್ಕೆಯಾದ ನಮ್ಮದೇ ಪ್ರತಿನಿಧಿಗಳು, ನಮಗೆ ಗೊತ್ತಾಗದಂತೆ ರಾತ್ರೋರಾತ್ರಿ ಜನಪರವಲ್ಲದ ಜಿ. ಎಸ್. ಟಿ. ಅನ್ನೋ ಯೋಜನೆಯನ್ನೇ ಜಾರಿಗೊಳಿಸಿರುವುದು ವಿಶ್ವಾಸದ್ರೋಹವಾಗುತ್ತದೆ. ಆಧುನಿಕತೆಗೆ ತೆರೆದುಕೊಂಡಿರುವಾಗ ನಮ್ಮ ಯೋಜನೆಗಳು ಹಿಂದಿಗಿಂತಲೂ ಇಂದು ಹೆಚ್ಚು ಸರಳವಾಗಿರಬೇಕು, ಪಾರದರ್ಶಕವಾಗಿರಬೇಕು, ಮತ್ತಷ್ಟು ಜನಸ್ನೇಹಿಯಾಗಿರಬೇಕು. ಒಂದು ಹೊಸ ಯೋಜನೆ ಜಾರಿಗೊಳ್ಳುವುದೆಂದರೆ ಜನರಲ್ಲಿ ಕುತೂಹಲವಿರಬೇಕು, ಮೇಜುಕುಟ್ಟಿ ಸ್ವಾಗತಿಸುವಂತಿರಬೇಕು, ಸಂಭ್ರಮಿಸುವಂತಿರಬೇಕು. ಕಟ್ಟ ಕಡೆಯ ವ್ಯಕ್ತಿಯೂ ಕೂಡ ಒಂದು ನಿಟ್ಟುಸಿರು ಬಿಟ್ಟು ನಿರಾಳವಾಗಬೇಕು.

ಒಟ್ಟಾರೆ ಸದ್ಯದ ರಾಜಕಾರಣಿಗಳು, ಪ್ರಜಾಪ್ರಭುತ್ವದ ಆಶಯವನ್ನು ಸಾಕಾರಗೊಳಿಸಲು ಪ್ರಾಮಾಣಿಕವಾಗಿ ಶ್ರಮಿಸುತ್ತಿದ್ದಾರೆಂಬ ಭರವಸೆ, ನಂಬಿಕೆ ಕಿಂಚತ್ತೂ ನಮ್ಮಲ್ಲೀಗ ಉಳಿದಿಲ್ಲ. ಯಾರದೋ ಒಬ್ಬಬ್ಬಿರ ಋಣ ತೀರಿಸಲು ಕೋಟ್ಯಂತರ ಮುಗ್ಧ ಮತದಾರರನ್ನು ಹಲವು ರೀತಿಗಳಲ್ಲಿ ವಂಚಿಸುತ್ತಿರುವ ಸತ್ಯ ಬಯಲಾಗಿದೆ. ಪ್ರಭುತ್ವ ವಿರೋಧಿಯಾಗಿರುವ ಈ ತೆರಿಗೆಯನ್ನು ಬಲವಾಗಿ ವಿರೋಧಿಸಬೇಕಿದ್ದ ಮಾಧ್ಯಮಗಳು ಸಹ ಪ್ರಧಾನಿಯ ಪರ ವಕಾಲತ್ತು ವಹಿಸಿರುವುದು ದುರಂತ. ಟಿ. ವಿ. ಮಾಧ್ಯಮಗಳಂತೂ ಪ್ರತಿನಿಧಿಗಳನ್ನು ಪ್ರಶ್ನಿಸದೆ ವೈಭವೀಕರಿಸುವ, ಕಪೋಲ ಕಲ್ಪಿತ ಕಟ್ಟುಕತೆಗಳನ್ನು ಹೆಣೆದು ಬಣ್ಣಿಸುವ ಬಗೆಯಂತೂ ವಿಚಿತ್ರ ಮತ್ತು ಅಸಹ್ಯ.




ಜಿ.ಎಸ್.ಟಿ.
ಅನುಭವ/ಅಭಿಪ್ರಾಯಗಳು
TAX

ಈ ದೇಶದ ಮುಕ್ಕಾಲು ಭಾಗವಿರುವ ಗ್ರಾಮೀಣ ಕಡುಬಡವರ (ಮತದಾರರ) ತೆರಿಗೆ ಹಣ ಈ ನಾಡಿನ ಒಳಿತಿಗಾದರೂ ಬಳಕೆಯಾಗಿದ್ದರೆ ಒಂದಿಷ್ಟು ಸಮಾಧಾನವಿತ್ತು. ಆದರೆ ಎಲ್ಲವೂ ಬೆರಳೆಣಿಕೆಯಷ್ಟು ಉದ್ಯಮಿಗಳ ತಿಜೋರಿ ಸೇರುತ್ತಿದೆ, ಕಾಲು ಭಾಗದ ಅಧಿಕಾರಿಗಳ, ರಾಜಕಾರಣಿಗಳ ಸಂಬಳ, ಭತ್ಯೆ ಹಾಗೂ ನಗರಗಳ ಅಭಿವೃದ್ಧಿ ಹೆಸರಲ್ಲಿ ಪೋಲಾಗುತ್ತಿದೆ. ಸರಕಾರ ಯಾವುದೇ ಇರಲಿ ಅದು ಶ್ರೀಮಂತರ ಪರವಾಗಿರಬಾರದು. ರೈತಪರ, ಕಾರ್ಮಿಕಪರ, ದಲಿತಪರ, ಶೋಷಿತರಪರ, ಯುವಕರ ಪರವಾಗಿರಬೇಕು, ಸಮಾಜಮುಖಿಯಾಗಿ ನಿಲ್ಲಬೇಕು. ದೇಶದ ಅಭಿವೃದ್ಧಿಗೆ ಹಣ ಬೇಕಿದ್ದರೆ, ಇಂತಹ ಅವೈಜ್ಞಾನಿಕ ತೆರಿಗೆ ಪದ್ಧತಿಯನ್ನು ಕೈಬಿಟ್ಟು, ಜನರು ದೇವಸ್ಥಾನಗಳಲ್ಲಿರುವ ಹುಂಡಿಗಳಿಗೆ ಹಾಕುವ ಹಣವನ್ನು ಕೊಡಿಟ್ಟು ಸರಕಾರಿ ಖಜಾನೆಗೆ ತುಂಬುವಷ್ಟು ಮನಸ್ಸು ಪರಿವರ್ತನೆ ಮಾಡಿಕೊಳ್ಳಲಿ.

❑ ***ಕೆ. ಬಿ. ವೀರಲಿಂಗನಗೌಡ್ರ,*** *ಸಿದ್ಧಾಪುರ*

*  *  *

## ಜಿ. ಎಸ್. ಟಿ.

ಕಳೆದ ವರ್ಷ ಕೇಂದ್ರ ಸರ್ಕಾರವು ಎರಡು ಮಹತ್ವಾಕಾಂಕ್ಷಿ ನಿರ್ಧಾರಗಳನ್ನು ಜಾರಿಗೆ ತಂದಿತು. ಅದರಲ್ಲಿ ಇಡೀ ದೇಶಕ್ಕೆ ಅನ್ವಯವಾಗುವ ಏಕರೂಪದ ತೆರಿಗೆ ಪದ್ಧತಿಯಾದ ಸರಕು ಸೇವಾ ತೆರಿಗೆಯೂ ಒಂದು.

ಸದ್ಯಕ್ಕೆ ಒಂದು ವಸ್ತುವಿಗೆ ಇಡೀ ದೇಶದಲ್ಲಿ ಒಂದೇ ರೀತಿಯ ಬೆಲೆ ಇಲ್ಲ. ಅದು ರಾಜ್ಯದಿಂದ ರಾಜ್ಯಕ್ಕೆ ಬದಲಾಗುತ್ತ ನಿಖರ ಬೆಲೆಯು ಯಾರಿಗೂ ತಿಳಿಯದಂತಾಗಿದೆ. ಜಿ. ಎಸ್. ಟಿ.ಯಿಂದ ಇಡೀ ದೇಶಕ್ಕೆ ಹೊಂದುವಂತೆ ವಸ್ತುಗಳ ಬೆಲೆಯನ್ನು ನಿಗದಿಪಡಿಸುವುದಲ್ಲದೆ ತೆರಿಗೆ ಜಾಲವನ್ನು ವಿಸ್ತರಿಸುವುದೂ ಸೇರಿದೆ.

ಆದರೆ ಈ ತೆರಿಗೆ ಜಾಲವು ಪ್ರಾರಂಭಿಕ ಹಂತದಲ್ಲಿ ಇರುವುದರಿಂದ ಜನಸಾಮಾನ್ಯರಿಗೆ ಇದರ ಬಗ್ಗೆ ಹೆಚ್ಚಿನ ಮಾಹಿತಿ ಇಲ್ಲ. ವ್ಯಾಪಾರ ವ್ಯವಹಾರ ಮಾಡುವವರು ಇದನ್ನು ತಮ್ಮ ಮೂಗಿನ ನೇರಕ್ಕೆ ಅರ್ಥಮಾಡಿಕೊಂಡಿರುವುದರಿಂದ ಖಚಿತತೆ ಇಲ್ಲವಾಗಿದೆ. ಹಾಗಾಗಿ ಜಿ.ಎಸ್.ಟಿ. ಎಂದರೆ ನನ್ನ ದೃಷ್ಟಿಯಲ್ಲಿ ಗೊಂದಲ ಸೃಷ್ಟಿಯ ತೆರಿಗೆಯಾಗಿದೆ. ಇದು ಕೇವಲ ಪ್ರಾರಂಭ ಮಾತ್ರ. ಮುಂದೆ ಗೊಂದಲಗಳು ಬಗೆಹರಿದು ಮುಂದಿನ ದೇಶವಾಸಿ ಜನರಿಗೆ ಇದರಿಂದ ಅನುಕೂಲವಾಗಬಹುದು. ತೆರಿಗೆಗಳ್ಳತನ ತಪ್ಪಿ ಸರ್ಕಾರದಲ್ಲಿ ಸಾಕಷ್ಟು ತೆರಿಗೆ ಸಂಗ್ರಹವಾಗಿ ತನ್ಮೂಲಕ ಬಡವರಿಗಾಗಿ ಉಪಯೋಗವಾಗಲಿ. ಅದಕ್ಕೆ ಈ ಜಿ.ಎಸ್.ಟಿ.ಯು ಮುನ್ನುಡಿ ಹಾಡಲಿ. ಇದು ಗರೀಬ್ ಸೇವಾ ತೆರಿಗೆ (ಜಿ. ಎಸ್. ಟಿ.) ಆಗಲಿ ಎಂಬುದೇ ನನ್ನ ಅನಿಸಿಕೆ ಮತ್ತು ಹಾರೈಕೆ.

❑ ***ಶಿವಮೊಗ್ಗ ಗೀತಾಶಾಸ್ತ್ರಿ,*** *ಬೆಂಗಳೂರು*

*  *  *

## ಮೋದಿ ತಂದ 'ಜಿ. ಎಸ್. ಟಿ.'

ಮೋದಿ ಸರಕಾರ ಅಸ್ತಿತ್ವಕ್ಕೆ ಬಂದಾಗಿನಿಂದಲೂ ಜನ ವಿರೋಧಿ ನೀತಿಗಳನ್ನೇ ಅನುಸರಿಸುತ್ತಾ ಬಂದಿದೆ. ಚುನಾವಣೆಯ ಮುನ್ನ ಭ್ರಷ್ಟಾಚಾರದ ವಿರುದ್ಧ ಕಠಿಣ ಕ್ರಮ ಕೈಗೊಳ್ಳುತ್ತೇವೆಂದು ವಾಗ್ದಾನ ಮಾಡಿ ಈಗ ವಿರುದ್ಧ




ದಿಕ್ಕಿನಿಂದ ಸಾಗುತ್ತಿದ್ದಾರೆ. ತೆರಿಗೆ ಇಲ್ಲದ ಆಡಳಿತ ಕೊಡುತ್ತೇವೆ ಎಂದು ಜನರನ್ನು ನಂಬಿಸಿ ಅಧಿಕಾರಕ್ಕೆ ಬಂದು ಜಿ. ಎಸ್. ಟಿ. ಜಾರಿಗೊಳಿಸಿದ್ದಾರೆ.

ವಿದೇಶದಿಂದ ಕಪ್ಪು ಹಣವನ್ನು ತಂದು ಪ್ರತಿಯೊಬ್ಬನ ಖಾತೆಗೆ ೧೫ ಲಕ್ಷ ರೂಪಾಯಿ ಹಣ ಜಮಾ ಮಾಡುತ್ತೇವೆ ಹಾಗೂ ಉಳಿದ ಹಣವನ್ನು ತೆರಿಗೆಯ ರೂಪದಲ್ಲಿ ಬೊಕ್ಕಸಕ್ಕೆ ತುಂಬಿಸಿ ಜನರಿಗೆ ತೆರಿಗೆಯ ಹೊರೆಯನ್ನು ಕಡಿಮೆ ಮಾಡುವುದಾಗಿ ನೀಡಿದ ಭರವಸೆ ಸುಳ್ಳಾಯಿತು. ಭ್ರಷ್ಟಾಚಾರವನ್ನು ನಿಯಂತ್ರಿಸುವುದಾಗಿ ಹೇಳಿ ಅಧಿಕಾರಕ್ಕೆ ಬಂದ ಸರಕಾರ ಸ್ವತಃ ಭ್ರಷ್ಟಾಚಾರದಲ್ಲಿ ಮುಳುಗಿಬಿಟ್ಟಿದೆ.

ಮೋದಿ ಸರಕಾರ ೨೦೧೪ರಲ್ಲಿ ಅಧಿಕಾರ ವಹಿಸಿಕೊಂಡಾಗ ಈ ಭಾರತವನ್ನು ಪ್ರಪಂಚದಲ್ಲಿ ನಂಬರ್ ಒನ್ ಮಾಡಲು ಪಣ ತೊಟ್ಟಿತ್ತು. ಈ ಮೂರು ವರ್ಷಗಳಲ್ಲಿ ಸರಕಾರ ಮಾಡಿರುವ ಅನಾಹುತ ಒಂದಲ್ಲಾ ಎರಡಲ್ಲಾ ಸಾಕಷ್ಟು ಇವೆ. ಈಗ ಇವರ ಸರಕಾರ ಕುಸಿದಿದೆ. ನೋಟು ರದ್ದತಿ 'ಒಂದು ದೇಶ ಒಂದು ಕಾನೂನು' ಘೋಷಣೆ ಅಡಿಯಲ್ಲಿ ತರಾತುರಿಯಲ್ಲಿ ತಂದಿರುವ ಜಿ. ಎಸ್. ಟಿ. ಆರ್ಥಿಕ ವಲಯದಲ್ಲಿ ಆತಂಕ ಉಂಟುಮಾಡಿದೆ.

ನಮ್ಮ ಅರ್ಥಶಾಸ್ತ್ರಜ್ಞರು ದೇಶದ ಜನರಿಗೆ ಎಚ್ಚರಿಸುತ್ತಿದ್ದಾರೆ, ಬರುವ ದಿನಗಳಲ್ಲಿ ಅರ್ಥ ವ್ಯವಸ್ಥೆಯೇ ಕುಸಿದುಬೀಳುವ ಸಂಭವದ ಬಗ್ಗೆ ತಿಳಿಸುತ್ತಿದ್ದಾರೆ. ಅಧಿಕಾರದಲ್ಲಿದ್ದ ಮೋದಿ ಸರಕಾರ ತುರ್ತುಕ್ರಮಗಳನ್ನು ಕೈಗೊಳ್ಳುವುದು ಸೂಕ್ತ ಎಂದು ತಮ್ಮ ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ.

ಈಗ ಆಡಳಿತದಲ್ಲಿದ್ದ ಮೋದಿ ಸರಕಾರ ಇವೆಲ್ಲ ಪ್ರತಿವರ್ಷಗಳ ಸಂಕುಚಿತ ಪ್ರವೃತ್ತಿಯ ಸೃಷ್ಟಿ ಎಂದು ತಳ್ಳಿ ಹಾಕಿದ್ದಾರೆ. ಈ ಮಾತುಗಳು ಸರಕಾರ ನಡೆಸುವ ವರಿಷ್ಠರ ನಿದ್ರೆ ಕೆಡಿಸಿದೆ, ಆದರೆ ಉದ್ದಿಮೆದಾರರಿಗೆ, ವ್ಯಾಪಾರಸ್ಥರಿಗೆ, ಗ್ರಾಹಕರಿಗೆ ಜಿ. ಎಸ್. ಟಿ. ಬಿಸಿ ತಟ್ಟಿದೆ. ಈಗ ಮೋದಿ ಸರಕಾರ ತಾನೆ ಸೃಷ್ಟಿಸಿದ ಹದಗೆಟ್ಟ ಸ್ಥಿತಿಯಿಂದ ಹೊರ ಬರಲು ನೋಡುತ್ತಿದೆ.

ನೋಟು ರದ್ದತಿಯಂಥ ದುಸ್ಸಾಹಸ ಮೋದಿ ಸರಕಾರವನ್ನು ಅಲುಗಾಡಿಸುತ್ತಿದೆ. ಒಂದು ಕೋಟಿ ಉದ್ಯೋಗ ಸೃಷ್ಟಿಸುವ ಭರವಸೆ ಇಲ್ಲದಾಗಿದೆ. ಕಪ್ಪು ಹಣವನ್ನು ತರುವ ವಿಚಾರ ಮೋದಿ ಕೈಬಿಟ್ಟಿದ್ದಾರೆ. ಬ್ಯಾಂಕುಗಳ ಬಳಿ ಉದ್ದಿಮೆಗಳಿಗೆ ಸಾಲ ನೀಡಲು ಹಣವೇ ಇಲ್ಲದಾಗಿದೆ. ದೇಶದಲ್ಲಿ ರೈತರ ಸ್ಥಿತಿ ಚಿಂತಾಜನಕವಾಗಿದೆ. ಹನ್ನೆರಡು ಸಾವಿರ ರೈತರು ಆತ್ಮಹತ್ಯೆ ಮಾಡಿಕೊಂಡಿದ್ದಾರೆ.

ಮೋದಿ ರಾಜ್ಯದಲ್ಲಿ ಅಂಬಾನಿ ಅದಾನಿಯವರದ್ದೆ ದರ್ಬಾರು. ಇದರಿಂದ ಮೋದಿ ಸರಕಾರ ಯಾರ ಪರವಾಗಿದೆ ಎಂಬುದು ಎಲ್ಲರಿಗೂ ತಿಳಿದುಬಂದಿದೆ.

❑ ***ಸಂಗಣ್ಣ ಚಂದ್ರಾಮಪ್ಪ ಹೊಸಮನಿ,*** *ಕಲಬುರ್ಗಿ*

✶ ✶ ✶

## ಜಿ. ಎಸ್. ಟಿ. ಯಶಸ್ಸಿಗೆ ಸಹಭಾಗಿತ್ವ ಅವಶ್ಯ !

**ಯಾ**ವುದೇ ಹಣಕಾಸು ವ್ಯವಹಾರದಲ್ಲಿ ಸರಳತೆ ಹಾಗೂ ಪಾರದರ್ಶಕತೆ ಅತ್ಯವಶ್ಯವಾದ ಸಂಗತಿಯಾಗಿದೆ. ಒಂದು ರಾಷ್ಟ್ರದ ಅರ್ಥ ವ್ಯವಸ್ಥೆಯಲ್ಲಿ ಆದಾಯ ಮತ್ತು ಖರ್ಚುಗಳ ನಿಯಂತ್ರಣದ ಹಾಗೂ ಸಮತೋಲನದ ಕಾರಣಕ್ಕೆ ಕೆಲವು ತೆರಿಗೆಗಳ ಹೊರೆಯನ್ನು ಜನಸಾಮಾನ್ಯರ ಮೇಲೆ ವಿಧಿಸುವುದು ಅನಿವಾರ್ಯವಾಗಿದೆ – ದೇಶದ ಭದ್ರತೆ, ಬೆಳವಣಿಗೆ ಹಾಗೂ ಸಬಲೀಕರಣದ ದೃಷ್ಟಿಯಲ್ಲಿ! ತೆರಿಗೆಗಳ ಸಂಗ್ರಹದ ಆಧಾರದ ಅನ್ವಯ ದೇಶದ ಪ್ರಗತಿ ಹಾಗೂ ಬೆಳವಣಿಗೆಯ ಯೋಜನೆಗಳು ರೂಪುಗೊಳ್ಳುವುದು ವಾಸ್ತವ. ಅದು ಅತ್ಯಂತ ಪುರಾತನವಾದ ರಿವಾಜು. ತೆರಿಗೆ ಪದ್ಧತಿಗಳ ಅಧ್ಯಯನ, ಪುನರಾವರ್ತನೆ ಇತ್ಯಾದಿಗಳು ಸರ್ಕಾರದ ಜವಾಬ್ದಾರಿಯಾಗಿದ್ದು ಈ ಪ್ರಕ್ರಿಯೆಯಲ್ಲಿ ಜನಸಾಮಾನ್ಯರ ಸಹಭಾಗಿತ್ವ ಮಹತ್ವದ ಪಾತ್ರ ವಹಿಸುತ್ತದೆ ಎಂದರೆ ತಪ್ಪಾಗದು. ಈ ಹಿನ್ನೆಲೆಯಲ್ಲಿ, ನಮ್ಮ ದೇಶದ ತೆರಿಗೆ ಸಂಗ್ರಹಣಾ ವ್ಯವಸ್ಥೆಯಲ್ಲಿ ಕಳೆದ ನಾಲ್ಕೈದು ದಶಕಗಳಲ್ಲಿ ಹಲವಾರು ಮಾರ್ಪಾಡುಗಳಾಗಿದ್ದು ಜಿ. ಎಸ್. ಟಿ. ತೆರಿಗೆ ಪದ್ಧತಿ ಇತ್ತೀಚೆಗಿನದು – ಅತ್ಯಂತ ಸರಳವಾದ ತೆರಿಗೆ ಪದ್ಧತಿಯೆಂದೇ ಹೇಳಲಾಗುತ್ತಿದೆ. ಭಾರತಕ್ಕೆ ಹೊಸದಾದ ಈ ಪದ್ಧತಿಯನ್ನು ಜಗತ್ತಿನ ಬಹುತೇಕ ರಾಷ್ಟ್ರಗಳು ಅನುಸರಿಸುತ್ತಿದ್ದು ಸರಕುಗಳ, ಸೇವೆಗಳ ಮೇಲೆ ದೇಶಾದ್ಯಂತ ಏಕ ಮಾದರಿಯ ತೆರಿಗೆ ವಿಧಿಸುವ ಪದ್ಧತಿ ಇದಾಗಿದೆ. ಈ ಹಿಂದೆ ಇದ್ದ ಜಟಿಲವಾದ ತೆರಿಗೆ ಪದ್ಧತಿಯಿಂದ ಸರಳವಾದ ತೆರಿಗೆ ಪದ್ಧತಿಯ ಅನುಷ್ಠಾನದಲ್ಲಿ ರಾಷ್ಟ್ರದ ಸಕಲ ರಾಜ್ಯಗಳ ಚುನಾಯಿತ ಸರ್ಕಾರಗಳೊಟ್ಟಿಗೆ ಚರ್ಚಿಸಿ, ಅಭಿಪ್ರಾಯ ಪಡೆದ ನಂತರವೇ ಜಿ. ಎಸ್. ಟಿ. ಪದ್ಧತಿ ಜಾರಿಯಾಗಿದೆಯಾದರೂ ಆರಂಭದಲ್ಲಿ ಕೆಲವು ಎಡರು – ತೊಡರುಗಳಿಂದ ವಿಚಲಿತರಾಗುವ ಅವಶ್ಯಕತೆ ಇರದು. ಇಂತಹ ಸನ್ನಿವೇಶದಲ್ಲಿ ಮುಖ್ಯವಾಗಿ ವ್ಯಾಪಾರಿಗಳು ನೂತನ ತೆರಿಗೆ ಸಂಗ್ರಹಣಾ ವಿಧಾನವನ್ನು ಅರಿತು, ಕೆಲವು ಪ್ರಯೋಜನಗಳನ್ನು ಪ್ರಾಮಾಣಿಕವಾಗಿ ಗ್ರಾಹಕರಿಗೆ ಹಸ್ತಾಂತರಿಸಿದರೆ ನೂತನ ತೆರಿಗೆ ವ್ಯವಸ್ಥೆ ಯಶಸ್ಸು ಕಾಣಲು ಸಾಧ್ಯ. ಬದಲಾವಣೆಯೇ ಅಭಿವೃದ್ಧಿಯ ಸಂಕೇತ ಎಂಬುದೇ ಲೋಕೋಕ್ತಿಯಾಗಬೇಕು!

❑ ***ರಾಜೀವ್. ಎನ್. ಮಾಗಲ್,*** *ಸಕಲೇಶಪುರ*

✶ ✶ ✶

## ಕ್ರಾಂತಿಕಾರಿ ತೆರಿಗೆ ಪದ್ಧತಿ

**ಜಿ.** ಎಸ್. ಟಿ. ಮಸೂದೆ ಅಧಿಕೃತವಾಗಿ ಸಂವಿಧಾನ ಕಲಂ–೧೨೨–ತಿದ್ದುಪಡಿ, ೨೦೧೪ಯೆಂದು ಪ್ರಸ್ತಾಪಿಸಿದೆ. ಉತ್ಪಾದನೆ, ಮಾರಾಟ, ಬಳಕೆ ಹಾಗೂ ಸರಕುಸೇವೆಗಳ ಬಗ್ಗೆ ವಿಧಿಸುವ ಪರೋಕ್ಷ ತೆರಿಗೆ ಈವರೆಗೆ ಜಾರಿಯಲ್ಲಿತ್ತು.

ಸರಕು ಮತ್ತು ಸೇವೆಗಳ ತೆರಿಗೆ ವಿಧಿಸುವ ವಿಧಾನ ಸರಳಗೊಳಿಸಿ "ಒಂದು ದೇಶ ಒಂದು ತೆರಿಗೆ" ಯೆಂಬ ಘೋಷಣೆ ಬಂದಿದೆ. ದೇಶದಲ್ಲಿ ಸಿಗುವ ವಸ್ತುಗಳು, ವ್ಯಾಪಾರ, ವಹಿವಾಟುಗಳು ತೆರಿಗೆಯ ಆಡಳಿತಕ್ಕೆ ಒಳಪಟ್ಟಿವೆ. ತೆರಿಗೆ ಹೆಚ್ಚಾಗಿದೆಯೆಂದು ಅಂಗಡಿಯವನು ತೆರಿಗೆ ಸರ್ಕಾರಕ್ಕೆ ಪಾವತಿಸದೆ, ಗ್ರಾಹಕರಿಗೆ ವಸ್ತುಬೆಲೆ ಕಡಿಮೆ ಮಾಡಿ, ತೆರಿಗೆ ಕಟ್ಟದ ವಸ್ತುಗಳನ್ನು ಖರೀದಿಸಿ, ಅದಕ್ಕೆ "ಜಿ. ಎಸ್. ಟಿ. ಬಿಲ್" ಬೇಡ ಎನ್ನುತ್ತಾನೆ.

ಈ ರೀತಿಯಿಂದ ಮಾರಾಟಗಾರ ಮತ್ತು ಗ್ರಾಹಕರು ಅಪರಾಧಿಗಳಾಗುತ್ತಾರೆ. ಜಿ. ಎಸ್. ಟಿ. ವಿಶೇಷವೇನೆಂದರೆ ತೆರಿಗೆ ಕುರಿತಾದ ಎಲ್ಲಾ ಮಾಹಿತಿ "ಆನ್‌ಲೈನ್" ಮೂಲಕವೇ ಸಲ್ಲಿಸಬೇಕು. ಮಾರಾಟವಸ್ತು ಖರೀದಿಸುವವರು ಯಾರಾಗಲಿ ತೆರಿಗೆ ಪಾವತಿಸಿ, ವಸ್ತು ಪಡೆದುಕೊಳ್ಳಬೇಕೆಂದು ಇದರ ಆಶಯ. ಈ ನೂತನ ತೆರಿಗೆ ಪದ್ಧತಿಗೆ ಹೊಂದಿಕೊಳ್ಳುವುದು ಬಡವರಿಗೆ, ಸಣ್ಣ ವ್ಯಾಪಾರಿಗಳಿಗೆ ಸ್ವಲ್ಪಕಷ್ಟವಾದರೂ, ತಾವೆಲ್ಲಾ ಒಗ್ಗಿಕೊಂಡರೆ ಮುಂದಿನ ದಿನ ನಿರಾಳವಾಗಿರಲು ಸಾಧ್ಯ.

"ಜಿ. ಎಸ್. ಟಿ.ಯಲ್ಲಿ ಒಂದೇ ವಸ್ತುವಿಗೆ 'ಬಹುಮುಖ ತೆರಿಗೆ' ಪಾವತಿ ಇರಕೂಡದು. ಅನೇಕ ಬಾರಿ ತೆರಿಗೆಯಿದ್ದರೆ ವಸ್ತುವಿನ ಮಾರಾಟಬೆಲೆ ಏರುತ್ತದೆ. ಬಡವರಿಗೆ ಕೊಂಡುಕೊಳ್ಳಲು ತೊಂದರೆ. ಉದಾಹರಣೆಗೆ ಉತ್ಪಾದಕರಿಂದ ಮಾರಾಟಗಾರ ನೀರಿನ ಟ್ಯಾಂಕಿ ಖರೀದಿಸುತ್ತಾನೆ. ಖರೀದಿಸಿದ ಬೆಲೆಗೆ ಮಾರಾಟಗಾರ ತೆರಿಗೆ ಪಾವತಿಸುತ್ತಾನೆ. ಅದೇ ಟ್ಯಾಂಕಿ ಮಾರಾಟಗಾರ ಅದನ್ನು ಕೊಂಡು, ವಸ್ತುವಿಗೆ ಕೊಂಡಬೆಲೆ ನಿಗದಿಪಡಿಸಿ, ಬಳಕೆಯ ಗ್ರಾಹಕರಿಗೆ ಮಾರಾಟ ಮಾಡುತ್ತಾನೆ. ನೀರಿನ ಟ್ಯಾಂಕಿ ಕೊಂಡ ಬೆಲೆಗೆ ಗ್ರಾಹಕರು ತೆರಿಗೆ ಪಾವತಿಸಬೇಕು. ಹೀಗೆ ಮಾರಾಟಗಾರರಿಂದ ಮತ್ತು ಗ್ರಾಹಕರಿಂದ 'ಒಂದೇ ವಸ್ತುವಿಗೆ ಎರಡು ಸಲ ತೆರಿಗೆ' ಸರ್ಕಾರಕ್ಕೆ ಪಾವತಿಯಾಗುತ್ತದೆ. ಇದರಿಂದ ನೀರಿನ ಟ್ಯಾಂಕಿಯ ಬೆಲೆ ಏರಿಕೆಯಾಗಿ ಬಡವರು ಕೊಳ್ಳುವುದು ತೊಂದರೆ ಆಗುತ್ತದೆ.

❑ ***ಮರಿದೇವರ ಸಿದ್ದಪ್ಪ ಮೇಷ್ಟ್ರು,*** *ಬಳ್ಳಾರಿ ಜಿಲ್ಲೆ.*

✶ ✶ ✶

## ಗೊಂದಲ ಎಬ್ಬಿಸಿದ ಸರಕು ಮತ್ತು ಸೇವಾ ತೆರಿಗೆ




ರಾಷ್ಟ್ರದ ಅಭಿವೃದ್ಧಿಗೆ ಬದಲಾವಣೆ ಅಗತ್ಯ. ಈ ಬದಲಾವಣೆಗಳು ಸಾಮಾಜಿಕವಾಗಿ, ರಾಜಕೀಯವಾಗಿ, ಧಾರ್ಮಿಕವಾಗಿ, ಆರ್ಥಿಕವಾಗಿ ಅಥವಾ ಸಾಂಸ್ಕೃತಿಕವಾಗಿ ಆಗಬೇಕಾಗುತ್ತದೆ. ಬದಲಾವಣೆಯೇ ಬೆಳವಣಿಗೆಯ ಸಂಕೇತ. ಪ್ರಕೃತಿ ನಿಯಮವೇ ಬದಲಾವಣೆ. ಬದಲಾವಣೆ ಆಗದಿರುವುದು ನಾಶವಾಗುತ್ತದೆ. ಪ್ರಕೃತಿಯಲ್ಲಿ ಆಗುವ ಬದಲಾವಣೆಯನ್ನು ಮನುಷ್ಯ ನೋಡಲೇಬೇಕು ಮತ್ತು ಅನುಭವಿಸಲೇಬೇಕು. ಆದರೆ ಮಾನವ ನಿರ್ಮಿತ ಬದಲಾವಣೆಯು ವಿವೇಚನೆಗೆ ಒಳಪಟ್ಟಿದೆ. ಮಾನವ ಸಮಾಜದಲ್ಲಿ ಸಾಕಷ್ಟು ಚರ್ಚಿಸಿ, ಚಿಂತಿಸಿ, ಸಮಾಲೋಚಿಸಿ ತೀರ್ಮಾನಗಳನ್ನು ತೆಗೆದುಕೊಳ್ಳ ಬೇಕಾಗುತ್ತದೆ. ಆತುರದ ನಿರ್ಧಾರಗಳು ಅನಾಹುತಗಳಿಗೆ, ಗೊಂದಲಗಳಿಗೆ, ಕಾರಣವಾಗುತ್ತವೆ.

ಪ್ರಸ್ತುತ ಕೇಂದ್ರ ಸರ್ಕಾರ ಭಾರತದಾದ್ಯಂತ ಜಾರಿಗೆ ತಂದಿರುವ ಸರಕು ಮತ್ತು ಸೇವಾ ತೆರಿಗೆ ಟೀಕೆಗಳಿಗೆ ಕಾರಣವಾಗಿ ಗೊಂದಲದ ಗೂಡಾಗಿದೆ. ದೇಶದ ತೆರಿಗೆ ವ್ಯವಸ್ಥೆಯಲ್ಲಿ ಸಂಪೂರ್ಣ ಬದಲಾವಣೆ ಆಗಿರುವುದರಿಂದ, ಈ ಹೊಸ ವ್ಯವಸ್ಥೆಗೆ ಹೊಂದಿಕೊಳ್ಳಲು ತೆರಿಗೆ ಅಧಿಕಾರಿಗಳ ಕೈಯಲ್ಲೂ ಆಗಿಲ್ಲ, ವಹಿವಾಟುದಾರರ ಕೈಲೂ ಆಗಿಲ್ಲ, ವರ್ತಕರ ಸಮುದಾಯದಲ್ಲಿ ಲೆಕ್ಕಪತ್ರ ವಹಿವಾಟು ಬಹಳ ಸರಳವಾಗಬಹುದು ಎಂಬ ನಿರೀಕ್ಷೆ ಇತ್ತು. ಆದರೆ ಇದು ಇಂದು ಹೊರೆಯಾಗಿದೆ. ಸರ್ಕಾರವು ಸಹ ಆಗಿಂದಾಗ್ಗೆ ಹೊಸ ಹೊಸ ಆದೇಶಗಳನ್ನು ಹೊರಡಿಸುವುದರಿಂದ, ಈ ಆದೇಶಗಳನ್ನು ಜೀರ್ಣಿಸಿಕೊಳ್ಳುವುದು ಕಷ್ಟವಾಗಿದೆ. ಜಿ. ಎಸ್. ಟಿ. ಬಗ್ಗೆ ಮಾಹಿತಿ ತಂತ್ರಜ್ಞಾನ ಸೇವೆ, ನಿಯಮಾವಳಿಗಳನ್ನು ಅರ್ಥೈಸುವಿಕೆ, ವಹಿವಾಟಿನ ವಿವರ, ತೆರಿಗೆ ಪಾವತಿ, ತೆರಿಗೆ ದರಗಳ ಗೊಂದಲದಿಂದಾಗಿ ಈ ಹೊಸ ವ್ಯವಸ್ಥೆ ಅಯೋಮಯವಾಗಿದೆ. ನೋಟು ರದ್ಧತಿ ಸರಕು–ಸೇವಾ ತೆರಿಗೆ ಜಾರಿಯಾದ ಬಳಿಕ ರಾಜ್ಯ ಸರ್ಕಾರಕ್ಕೆ ತೆರಿಗೆ ಮತ್ತು ತೆರಿಗೆಯೇತರ ಮೂಲದಿಂದ ಬರುವ ಆದಾಯ ಇಳಿಮುಖವಾಗಿದೆ ಎಂಬ ಅಭಿಪ್ರಾಯಗಳಿವೆ. ವರ್ಷದಿಂದ ವರ್ಷಕ್ಕೆ ತೆರಿಗೆ ಹೆಚ್ಚಾಗಬೇಕು, ಆದರೆ ವಾರ್ಷಿಕ ತೆರಿಗೆ ಕಡಿಮೆಯಾಗಿದೆ ಎನ್ನುತ್ತಾರೆ ಆರ್ಥಿಕ ತಜ್ಞರು. ಮದ್ಯ ಮಾರಾಟ, ಮೋಟಾರು ವಾಹನ ತೆರಿಗೆಯಲ್ಲಿ ಭಾರಿ ಕುಸಿತ ಕಂಡಿದೆ. ನಿವೇಶನ, ಮನೆ, ಫ್ಲಾಟ್, ಭೂಮಿ ಮಾರಾಟ ಕಡಿಮೆಯಾಗಿದೆ. ತೆರಿಗೆಯೇತರ ಆದಾಯದಲ್ಲೂ ಕಡಿಮೆಯಾಗಿದೆ ಎಂಬ ದೂರಿದೆ. ಈ ಹೊಸ ನೀತಿಯ ಬಾಬ್ತು ಸಂವಹನ ಮತ್ತು ಮಾಹಿತಿ ಕೊರತೆಯೂ ಆಗಿದೆ.

ನೋಟ್ ಬ್ಯಾನ್‌ನಿಂದ ಜನ ಸಾಮಾನ್ಯನಿಗೆ ತೊಂದರೆಯಾಯಿತು. ಕಾರ್ಮಿಕ ವರ್ಗ ಕೆಲಸ ಕಳೆದು ಕೊಂಡಿತು. ಸುಮಾರು ೧೫೦ ಜನ ಸತ್ತರು. ಕಪ್ಪು ಹಣದ ಚಲಾವಣೆಯನ್ನು ತಡೆಯಲು ಆಗಿಲ್ಲ.

ವರ್ತಕರು ಪ್ರತಿ ತಿಂಗಳೂ ಒಟ್ಟು ನಾಲ್ಕು ಲೆಕ್ಕ ಪತ್ರ ವರದಿಗಳನ್ನು ಸಲ್ಲಿಸಬೇಕು. ಈ ವರದಿಗಳನ್ನು ಸಲ್ಲಿಸಲು ಜಾಲ ತಾಣದಲ್ಲಿ ತಾಂತ್ರಿಕ ದೋಷಗಳು ಕಂಡುಬಂದವು. ಜಿ. ಎಸ್. ಟಿ.ಯಲ್ಲಿ ಪೂರೈಕೆದಾರ ಮತ್ತು ಖರೀದಿದಾರರ ಮಾಹಿತಿಯನ್ನು ಹೋಲಿಕೆ ಮಾಡಿ ನೋಡಬೇಕು. ನಂತರ ರಿಟರ್ನ್ಸ್ ಸಲ್ಲಿಸಬೇಕು. ಇದೂ ಸಹ ವರ್ತಕರಿಗೆ ಸವಾಲಾಗಿದೆ.

ಜಿ. ಎಸ್. ಟಿ. ಸಿದ್ಧತೆ ಇಲ್ಲದೆ ಜಾರಿಗೆ ತಂದ ವ್ಯವಸ್ಥೆಯಾಗಿದೆ. ಜಿ. ಎಸ್. ಟಿ. ಎನ್. ಜಾಲ ತಾಣಗಳೂ ಸಮರ್ಥವಾಗಿಲ್ಲ. ಈ ಪದ್ಧತಿ ಹೊಸತೂ ಆಗಿದೆ. ಇದು ಸಂಪೂರ್ಣವಾಗಿ ತಂತ್ರಜ್ಞಾನ ಆಧರಿಸಿದ್ದಾಗಿದೆ. ಬಳಕೆದಾರರ ಶುಲ್ಕ, ನಗರ ಸ್ಥಳೀಯ ಸಂಸ್ಥೆಗಳು ಹಾಗೂ ಸಾರ್ವಜನಿಕ ಉದ್ಯಮಗಳಿಂದ ಬರಬೇಕಾದ ಬಡ್ಡಿ ಮತ್ತು ಬಾಕಿ ವಸೂಲಿಯಿಂದ ಸಂಗ್ರಹವಾಗಬೇಕಾಗಿದ್ದ ತೆರಿಗೆಯೇತರ ಆದಾಯದಲ್ಲಿ ನಕಾರಾತ್ಮಕ ಬೆಳವಣಿಗೆ ಕಾಣಿಸಿದೆ. ದೇಶದ ಉದ್ದಿಮೆಗಳ ಬೆನ್ನೆಲುಬು ಮುರಿದಂತಾಗಿದೆ.

ಒಟ್ಟಾರೆ ಹೇಳುವುದಾದರೆ, ಈ ಹೊಸ ವ್ಯವಸ್ಥೆ ಸರಿಯಾಗಿ ಅಧಿಕಾರಿಗಳಿಗೆ ಅರ್ಥವಾಗಿಲ್ಲ, ತಜ್ಞ ರಾಜಕಾರಣಿಗಳ ಅಭಾವವೂ ಇದೆ; ಬಹುತೇಕ ರಾಜಕಾರಣಿಗಳು ಆರ್ಥಿಕ ತಜ್ಞರಲ್ಲ. ಯಾರೋ ಹೇಳಿದ ವಿಚಾರಗಳಿಗೆ ತಲೆ ತೂಗುತ್ತಾರೆ ಅಷ್ಟೇ. ಜನ ಸಾಮಾನ್ಯರಿಗೆ ಹಾಗೂ ಕೃಷಿಕರಿಗೆ ಈ ವ್ಯವಸ್ಥೆಯ ತಲೆ–ಬುಡ ಗೊತ್ತಾಗಿಲ್ಲ. ಇನ್ನು ವ್ಯಾಪಾರಿಗಳಿಗೆ ಶೋಷಣೆಗೂ ಕಾರಣವಾಗಿದೆ. ಲೆಕ್ಕಪತ್ರ ಇಡಲು ಗೊಂದಲಗಳಿಗೂ ಕಾರಣವಾಗಿದೆ. ದೇಶದಲ್ಲಿ ಏಕರೂಪದ ತೆರಿಗೆ ಒಳ್ಳೆಯದೇ, ಆದರೆ ಅದು ತಲೆಗೆ ಭಾರವಾಗಬಾರದು.

❑ ***ಎಸ್. ಸಿ. ರಂಗನಾಥ್,*** ತುಮಕೂರು

ಕಾವ್ಯಲೋಕ



## ಬಿಸಿಲು

ತಪ್ಪಿ ಅಷ್ಟಿಷ್ಟು ತಂಗಾಳಿ ಬೀಸಿದರೂ
ಕರಗುವುದೇ ಏರುಹೊತ್ತಿನ ಬಿರುಬಿಸಲು?
ನಿಜವೆಂದರೆ...
ಬಿಸಿಲಿನಿಂದಲೇ ಬೆಳೆಯುವುದು
ಬುವಿಯ ಬ್ಯಾಂಕಿನೊಳಿಟ್ಟ
ನಮ್ಮ ತಾಳ್ಮೆಯ ಅಸಲು!

ಚಳಿಯೇನು ಬಿಸಿಲೇನು
ಒಮ್ಮೆ ಇಟ್ಟರೆ ಅಸಲು
ಬಡ್ಡಿ ಬೆಳೆವುದು ದಿನವು
ಹೊಲದಲ್ಲಿ ಬೆಳೆವಂತೆ ಫಸಲು!

ಋತುಮಾನಗಳು ಸರಿದು
ಬಿಸಿಲು ಬಂದರೆ ಬರಲಿ
ನಮ್ಮ ಬೆವರಿನ ಬಾಕಿಯೋ
ಸಮಯಕ್ಕೆ ಸರಿಯಾಗಿ ಸಿಗಲಿ!



***ಬಿ. ಎ. ಸನದಿ,*** ಮಿಲನ್, ಸಾ ಮಿಲ್ ಎದುರು, ಹೆರವಟ್ಟ, ಕುಮಟ – ೫೮೧ ೩೪೩



# ನಿರ್ಭಯಾಳಿಂದ ದಾನೇಶ್ವರಿಯವರೆಗೆ ದೆಹಲಿಯಿಂದ ವಿಜಯಪುರದವರೆಗೆ

ಶಿಕ್ಷೆ, ಅಪರಾಧ, ಸಂವಿಧಾನ, ಹಕ್ಕು, ಮಾನ್ಯತೆ, ಘನತೆ, ಗೌರವ ಹೀಗೆ ವಿಭಿನ್ನ ಆಯಾಮಗಳಲ್ಲಿ ಮಹಿಳೆಯ ಘನತೆ ಮತ್ತು ಗೌರವವನ್ನು ರಕ್ಷಿಸಲು ಹೆಣಗಾಡುತ್ತಿರುವ ಸಾಂಪ್ರದಾಯಿಕ ಸಮಾಜದಲ್ಲಿ ಸಂವೇದನೆ ಏಕೆ ನಶಿಸಿಹೋಗುತ್ತಿದೆ ಎಂಬ ಪ್ರಶ್ನೆ ಇಂದು ಮೂಡಬೇಕಿದೆ. ನಿರ್ಭಯಾ ಅರ್ಧರಾತ್ರಿಯಲ್ಲಿ ಪ್ರಯಾಣ ಮಾಡುತ್ತಿದ್ದಳು. ಮತ್ತೊಬ್ಬ ಮಹಿಳೆ ತುಂಡು ಉಡುಪು ಧರಿಸಿದ್ದಳು. ಇನ್ನೊಬ್ಬಳು ಪ್ರಚೋದನಕಾರಿ ಉಡುಪು ಧರಿಸಿದ್ದಳು. ಆದರೆ ಪಾಪ ದಾನಮ್ಮ ಏನು ಮಾಡಿದ್ದಳು. ಶಾಲೆಗೆ ಹೋಗುವ ಬಾಲಕಿ ಹಾಡ ಹಗಲಿನಲ್ಲೇ ಪುರುಷ ವಿಕೃತಿಗೆ ಬಲಿಯಾಗುವುದೆಂದರೆ ನಾವು ನಾಗರಿಕರು ಎಂದು ಗುರುತಿಸಿಕೊಳ್ಳಲು ಸಾಧ್ಯವೇ ಎಂಬ ಪ್ರಶ್ನೆ ಮೂಡಬೇಕಿದೆ.


ನಿರ್ಭಯಾ


ದಾನೇಶ್ವರಿ

ಡಿಸೆಂಬರ್ ೧೬ ೨೦೧೨ಕ್ಕೆ ದೆಹಲಿಯ ಜ್ಯೋತಿ ಸಿಂಗ್ ಅತ್ಯಾಚಾರಕ್ಕೀಡಾಗಿ ಹತ್ಯೆಗೊಳಗಾದ ಘಟನೆ ನಡೆದು ಐದು ವರ್ಷ ಪೂರೈಸಿದೆ. ನಿರ್ಭಯಾ ಪ್ರಕರಣ ಎಂದೇ ಹೆಸರಾದ ಈ ಘಟನೆಯ ನಂತರ ಭಾರತದ ಆಳುವ ವರ್ಗಗಳು ಎಚ್ಚೆತ್ತವು. ನ್ಯಾಯಾಂಗದಲ್ಲಿ ಆತ್ಮಾವಲೋಕನದ ಛಾಯೆ ಮೂಡಿತು. ರಾಜಕೀಯ ಪಕ್ಷಗಳು ಜಾಗೃತವಾದವು. ಮಹಿಳಾ ಸಂಘಟನೆಗಳು ನಿರಂತರ ಹೋರಾಟದ ಮೂಲಕ ಜನಸಾಮಾನ್ಯರಲ್ಲಿ ಜಾಗೃತಿ ಮೂಡಿಸಲು ಯತ್ನಿಸಿದವು. ಕೇಂದ್ರ ಸರ್ಕಾರ ನೇಮಿಸಿದ್ದ ವರ್ಮಾ ಸಮಿತಿಯ ಶಿಫಾರಸುಗಳು ಮಹಿಳಾ ಸಮುದಾಯದಲ್ಲಿ ಆಶಾಭಾವನೆಯನ್ನು ಮೂಡಿಸಿದ್ದವು. ನಿರ್ಭಯಾ ಪ್ರಕರಣದ ಆರೋಪಿಗಳಿಗೆ ಸುಪ್ರೀಂಕೋರ್ಟ್ ಮರಣದಂಡನೆ ಶಿಕ್ಷೆಯನ್ನು ದೃಢಪಡಿಸಿದ ನಂತರ ದೇಶದಲ್ಲಿ ಅಂತಹ ಬರ್ಬರ ಕೃತ್ಯಗಳು ಸಂಭವಿಸುವುದೇ ಇಲ್ಲ ಎನ್ನುವ ಭ್ರಮೆಯೂ ಆವರಿಸಿತ್ತು. ಆದರೆ ನಿರ್ಭಯಾಳ ನೆನಪು ಮಾಸುವ ಮುನ್ನವೇ ಕರ್ನಾಟಕದ ವಿಜಯಪುರದಲ್ಲಿ ಮತ್ತೊಬ್ಬ ಬಾಲಕಿ ನಿರ್ದಯ ಪುರುಷರ ಅಟ್ಟಹಾಸಕ್ಕೆ ಬಲಿಯಾಗಿದ್ದಾಳೆ. ೧೪ ವರ್ಷದ ದಾನೇಶ್ವರಿ ಮತ್ತೊಂದು ವಿಕೃತ ಪುರುಷಾಧಿಪತ್ಯಕ್ಕೆ ಬಲಿಯಾಗಿದ್ದಾಳೆ. ಇಲ್ಲಿ ದಾನಮ್ಮಳ ಅಸ್ಮಿತೆಯಾಗಲೀ, ಅತ್ಯಾಚಾರ ಎಸಗಿದ ವಿಕೃತ ಕಾಮಿಯ ಅಸ್ಮಿತೆಯಾಗಲೀ ಮುಖ್ಯವಲ್ಲ.

ನಿರ್ಭಯಾ ಪ್ರಕರಣ ಏಕೆ ಸಂಭವಿಸುತ್ತದೆ? ದಾನೇಶ್ವರಿ ಏಕೆ ಸಾಯುತ್ತಾಳೆ? ಅಥವಾ ಇನ್ನೆಷ್ಟು ನಿರ್ಭಯಾ ದಾನಮ್ಮಗಳು ಬಲಿಯಾದರೆ ಪುರುಷ ಸಮಾಜದೊಳಗಿನ ಕಾಮದ ಕಿಚ್ಚು ತಣಿಯಲು ಸಾಧ್ಯ? ನಾಲ್ವರು ಕಾಮುಕರಿಗೆ ಮರಣದಂಡನೆಯಾದರೆ ಪುರುಷ ಸಮಾಜದೊಳಗಿನ ವಿಕೃತಿಗಳು ಅಂತ್ಯವಾಗುತ್ತವೆಯೇ? ಈ ಪ್ರಶ್ನೆ ನಮ್ಮನ್ನು ಕಾಡುತ್ತಲೇ ಇದೆ. ಶಿಕ್ಷೆ, ಅಪರಾಧ, ಸಂವಿಧಾನ, ಹಕ್ಕು, ಮಾನ್ಯತೆ, ಘನತೆ, ಗೌರವ ಹೀಗೆ ವಿಭಿನ್ನ ಆಯಾಮಗಳಲ್ಲಿ ಮಹಿಳೆಯ ಘನತೆ ಮತ್ತು ಗೌರವವನ್ನು ರಕ್ಷಿಸಲು ಹೆಣಗಾಡುತ್ತಿರುವ ಸಾಂಪ್ರದಾಯಿಕ ಸಮಾಜದಲ್ಲಿ ಸಂವೇದನೆ ಏಕೆ ನಶಿಸಿಹೋಗುತ್ತಿದೆ ಎಂಬ ಪ್ರಶ್ನೆ ಇಂದು ಮೂಡಬೇಕಿದೆ. ನಿರ್ಭಯಾ ಅರ್ಧರಾತ್ರಿಯಲ್ಲಿ ಪ್ರಯಾಣ ಮಾಡುತ್ತಿದ್ದಳು. ಮತ್ತೊಬ್ಬ ಮಹಿಳೆ ತುಂಡು ಉಡುಪು ಧರಿಸಿದ್ದಳು. ಇನ್ನೊಬ್ಬಳು ಪ್ರಚೋದನಕಾರಿ ಉಡುಪು ಧರಿಸಿದ್ದಳು. ಆದರೆ ಪಾಪ ದಾನಮ್ಮ ಏನು ಮಾಡಿದ್ದಳು. ಶಾಲೆಗೆ ಹೋಗುವ ಬಾಲಕಿ ಹಾಡ ಹಗಲಿನಲ್ಲೇ ಪುರುಷ ವಿಕೃತಿಗೆ ಬಲಿಯಾಗುವುದೆಂದರೆ ನಾವು ನಾಗರಿಕರು ಎಂದು ಗುರುತಿಸಿಕೊಳ್ಳಲು ಸಾಧ್ಯವೇ ಎಂಬ ಪ್ರಶ್ನೆ ಮೂಡಬೇಕಿದೆ.

ದೆಹಲಿಯಲ್ಲಿ ಬಲಿಯಾದ ದೇಹ, ವಿಜಯಪುರದಲ್ಲಿ ಸುರುಟಿ ಹೋದ ದೇಹ ಭಿನ್ನವಾಗಿರಬಹುದು. ಆದರೆ ಈ ದೇಹಗಳನ್ನು ಛಿದ್ರಗೊಳಿಸಿದ ಮನಸು ಒಂದೇ ಅಲ್ಲವೇ? ಮರಣದಂಡನೆಗೆ ಗುರಿಯಾಗಿರುವ ನಾಲ್ವರು ಅತ್ಯಾಚಾರಿಗಳು, ವಿಜಯಪುರದಲ್ಲಿ ಅಟ್ಟಹಾಸ ಮೆರೆದ ವಿಕೃತ ಕಾಮಿಗಳು ಭಿನ್ನ ವ್ಯಕ್ತಿಗಳಾಗಿರಬಹುದು ಆದರೆ ಇವರಿಂದ ಭಗ್ನಗೊಂಡ ಕನಸು ಒಂದೇ ಅಲ್ಲವೇ? ಬದುಕನ್ನೇ ಹೊಸಕಿ ಹಾಕುವ

**ನಾ. ದಿವಾಕರ**



*ದಾನಮ್ಮನ ತಾಯಿಗೆ ಸಾಂತ್ವನ ಹೇಳುತ್ತಿರುವ ಹೊಸತು ಸಂಪಾದಕರು*



*ದಾನಮ್ಮನ ಹತ್ಯೆಯನ್ನು ವಿರೋಧಿಸಿ ಪ್ರತಿಭಟನೆ*

ಅನಾಗರಿಕ, ಅಮಾನುಷ ಪ್ರವೃತ್ತಿ ಒಂದು ನಾಗರಿಕ ಸಮಾಜದಲ್ಲಿ ಸುಳಿಯುವುದಾದರೂ ಹೇಗೆ? ಸಂಸ್ಕೃತಿ, ಪರಂಪರೆ, ಇತಿಹಾಸ, ಧರ್ಮ, ಮಾನವತೆ, ವಿಶ್ವಮಾನವ ಧರ್ಮ, ವಸುಧೈವ ಕುಟುಂಬಕಂ ಹೀಗೆ ವರ್ಣರಂಜಿತ ಪದಗಳನ್ನು ಬಳಸುತ್ತಲೇ ತನ್ನ ಬೆನ್ನನ್ನು ನಾವೇ ತಟ್ಟಿಕೊಳ್ಳುತ್ತಿರುವ ಭಾರತೀಯ ಸಮಾಜ ನಿರ್ಭಯಾಳನ್ನು, ದಾನಮ್ಮಳನ್ನು ಏನೆಂದು ಪರಿಗಣಿಸುತ್ತದೆ. ಎಲುಬಿನ ಹಂದರ ಮಾತ್ರ ಎಂದೋ ಅಥವಾ ಯಾವ ಕ್ಷಣದಲ್ಲಿ ಬೇಕಾದರೂ ಶರಣಾಗಲು ಸಿದ್ಧವಾಗಿರಬೇಕಾದ ನಶ್ವರ ದೇಹ ಎಂದೋ ?

ದೆಹಲಿಯಿಂದ ವಿಜಯಪುರದವರೆಗಿನ ಪಯಣದಲ್ಲಿ ಬಲಿಯಾಗಿರುವ ಹತಭಾಗ್ಯರ ಬವಣೆಯನ್ನು ಕೆಲವೇ ನಿರ್ದಿಷ್ಟ ಅಸ್ಮಿತೆಗಳಲ್ಲಿ, ಚೌಕಟ್ಟಿನಲ್ಲಿ ಬಂಧಿಸಲಾಗುವುದಿಲ್ಲ. ನಿರ್ಭಯಾ, ದಾನೇಶ್ವರಿ ಬಲಿಯಾಗಿರುವುದು ಭಾರತೀಯ ಸಮಾಜ ನಿರ್ಮಿಸಿಕೊಂಡಿರುವ ಒಂದು ಸಂವೇದನಾರಹಿತ ಸಂಸ್ಕೃತಿಗೆ. ಮಹಿಳೆಯ ಬದುಕು, ಅಸ್ತಿತ್ವ ಮತ್ತು ಅಸ್ಮಿತೆಯನ್ನು ಒಂದು ನಿರ್ದಿಷ್ಟ ಸಾಂಪ್ರದಾಯಿಕ ಚೌಕಟ್ಟಿನೊಳಗೆ ಬಂಧಿಸಿರುವ ಭಾರತದ ಸಾಂಪ್ರದಾಯಿಕ ಸಮಾಜ, ಸಾಂಸ್ಕೃತಿಕ ನೆಲೆಯಲ್ಲಿ ಈ ಚೌಕಟ್ಟಿನ ಆಧಿಪತ್ಯವನ್ನು ಪುರುಷ ಸಮಾಜಕ್ಕೆ ವಹಿಸಿದೆ. ಹಾಗಾಗಿ ಪುರುಷ ಸಮಾಜ ಮತ್ತು ಪಿತೃ ಪ್ರಾಧಾನ್ಯತೆಯನ್ನು ಪೋಷಿಸುವ ಸಾಮಾಜಿಕ ವ್ಯವಸ್ಥೆ ಮಹಿಳೆಯನ್ನು ತನ್ನ ನಿಯಂತ್ರಣದಲ್ಲಿರಿಸಲು ಪಾವಿತ್ರ್ಯತೆ, ಶೀಲ, ಕನ್ಯತ್ವ ಮುಂತಾದ ಅಸ್ತ್ರಗಳನ್ನು ಆಗಾಗ್ಗೆ ಬಳಸುತ್ತಲೇ ಇರುತ್ತದೆ. ಅತ್ಯಾಚಾರಕ್ಕೊಳಗಾಗುವ ಮಹಿಳೆ ತನ್ನ ಶೀಲ ಕಳೆದುಕೊಳ್ಳುತ್ತಾಳೆ ಎಂದು ಸಂಭ್ರಮಿಸುವ ವಿಕೃತ ಪುರುಷ ಸಮಾಜದ ದೃಷ್ಟಿಯಲ್ಲಿ ಶೀಲ ಅಥವಾ ಪಾವಿತ್ರ್ಯತೆ ನಿಯಂತ್ರಿಸಬಹುದಾದ ವಿದ್ಯಮಾನಗಳಾಗಿ ಕಾಣುತ್ತವೆ. ನಿರ್ಭಯಾ ಅಥವಾ ದಾನೇಶ್ವರಿ ಘಟನೆಗಳಲ್ಲಿ ಈ ವಿದ್ಯಮಾನಗಳನ್ನು ಭಂಗಗೊಳಿಸುವ ಮೂಲಕ ತನ್ನ ಆಧಿಪತ್ಯ ಸಾಧಿಸಲು ಪುರುಷ ಸಮಾಜ ಯತ್ನಿಸುತ್ತದೆ. ಅತ್ಯಾಚಾರ ಎಸಗುವುದು ವ್ಯಕ್ತಿ ಅಥವಾ ವ್ಯಕ್ತಿಗಳ ಒಂದು ಗುಂಪು ಹೌದಾದರೂ, ಈ ವ್ಯಕ್ತಿಗಳ ಹಿಂದಿರುವ ಸಾಂಸ್ಕೃತಿಕ ನೆಲೆಗಳು ಮತ್ತು ಸಾಮಾಜಿಕ ಸಂವೇದನೆ ಸ್ಥಾಪಿತ ವ್ಯವಸ್ಥೆಯಿಂದಲೇ ಸೃಷ್ಟಿಯಾದದ್ದಲ್ಲವೇ?

ಈ ಸ್ಥಾಪಿತ ವ್ಯವಸ್ಥೆಯ ಮೂಲ ಸಂವೇದನೆಯಲ್ಲಿ ಬದಲಾವಣೆ ಕಾಣದ ಹೊರತು ಮಹಿಳೆಯ ಮೇಲಿನ ದೌರ್ಜನ್ಯ ಕಡಿಮೆಯಾಗುವುದಿಲ್ಲ. ದಲಿತರ ಮೇಲಿನ ದೌರ್ಜನ್ಯವೂ ಕಡಿಮೆಯಾಗುವುದಿಲ್ಲ. ಇಲ್ಲಿ ಅತ್ಯಾಚಾರಕ್ಕೊಳಗಾದ ಮಹಿಳೆ ದಲಿತ ಸಮುದಾಯಕ್ಕೆ ಸೇರಿದವಳಾಗಿದ್ದರೂ ಅತ್ಯಾಚಾರಿಗೆ ಜಾತಿಯೊಂದೇ ಗುರಿಯಾಗುವುದಿಲ್ಲ. ಜಾತಿಯ ಅಹಮಿಕೆ, ಪುರುಷ ಸಮಾಜದ ದರ್ಪ ಮತ್ತು ಪೌರುಷದ ವಿಕೃತ ಮನೋಭಾವ ಇವುಗಳ ಮಿಶ್ರಣವನ್ನು ಇಂತಹ ಘಟನೆಗಳಲ್ಲಿ ಕಾಣಬಹುದು. ಸಂಪ್ರದಾಯವಾದಿಗಳಿಗೆ, ಮತಾಂಧರಿಗೆ, ಧರ್ಮದ ಅಫೀಮಿಗೆ ಬಲಿಯಾದ ಸನಾತನಿಗಳಿಗೆ ಅತ್ಯಾಚಾರಕ್ಕೊಳಗಾದ ಮಹಿಳೆ ತನ್ನ ಹಾವಭಾವಗಳಿಂದಲೋ, ವಸ್ತ್ರಧಾರಣೆಯಿಂದಲೋ, ಪುರುಷ ಸಮಾಜ ನಿರ್ಮಿಸಿದ ಚೌಕಟ್ಟನ್ನು ಮೀರುವ ವರ್ತನೆಯಿಂದಲೋ ಅಪರಾಧಿ ಸ್ಥಾನದಲ್ಲಿ ನಿಲ್ಲುವುದನ್ನು ಕಂಡಿದ್ದೇವೆ. ಹಾಗಾಗಿಯೇ ಪರೇಶ್ ಮೇಸ್ತಾನ ಸಾವು ರಾಜಕೀಯ ಮೇವು ಆಗುತ್ತದೆ, ದಾನೇಶ್ವರಿಯ ಹತ್ಯೆ ನಿರ್ಲಕ್ಷ್ಯಕ್ಕೊಳಗಾಗುತ್ತದೆ. ಸಾಂಸ್ಕೃತಿಕ ರಾಜಕಾರಣ ಸಂವೇದನೆಯನ್ನು ಕಳೆದುಕೊಂಡರೆ ಏನಾಗುತ್ತದೆ ಎಂದು ಈ ಘಟನೆಗಳು ನಿರೂಪಿಸುತ್ತವೆ.

ಆಡಳಿತ ವ್ಯವಸ್ಥೆಯ ಚುಕ್ಕಾಣಿ ಹಿಡಿದಿರುವ ಶಕ್ತಿಗಳು ಸೆಕ್ಯುಲರ್ ಆಗಿರಲಿ, ಮತಾಂಧರೇ ಆಗಿರಲಿ, ಧರ್ಮನಿಷ್ಠರೇ ಆಗಿರಲಿ, ಮಹಿಳೆಯರ, ದಲಿತರ ಮೇಲಿನ ದೌರ್ಜನ್ಯಗಳಿಗೆ ಅಡ್ಡಿಯಾಗುವುದಿಲ್ಲ. ಏಕೆಂದರೆ ದೌರ್ಜನ್ಯ, ಅತ್ಯಾಚಾರಕ್ಕೊಳಗಾಗುವ ಮಹಿಳೆ ಯಾವುದೇ ಜಾತಿಯವಳಾಗಿದ್ದರೂ ದೌರ್ಜನ್ಯ ಎಸಗುವ ಪುರುಷ ಸಮಾಜಕ್ಕೆ ಜಾತಿಯ ಸೋಂಕು ಇರುವುದಿಲ್ಲ. ಏಕೆಂದರೆ ಇದು ಮನೋಭಾವದ ಪ್ರಶ್ನೆ, ಧೋರಣೆಯ ಪ್ರಶ್ನೆ, ಕಣ್ಣೋಟದ ಪ್ರಶ್ನೆ. ಈ ಮನೋಭಾವ ಬದಲಾಗಲು ಕ್ರಾಂತಿಕಾರಿ ಸುಧಾರಣೆಗಳು ಅಗತ್ಯ. ತಮ್ಮ ದೇಹದ ಮೇಲೆ ಕೇವಲ ತಮಗೆ ಮಾತ್ರವೇ ನಿಯಂತ್ರಣದ ಹಕ್ಕು ಇದೆ ಎಂಬ ದಿಟ್ಟ ನಿರ್ಧಾರವನ್ನು ಮಹಿಳೆಯರು ತಾಳಬೇಕಿದೆ. ತಮ್ಮ ಉಡುಪು ತಮ್ಮ ಹಕ್ಕು, ತಮ್ಮ ಆಹಾರ ತಮ್ಮ ಹಕ್ಕು, ತಮ್ಮ ಸಂಪ್ರದಾಯ ತಮ್ಮ ಹಕ್ಕು, ತಮ್ಮ ಜೀವನಶೈಲಿ ತಮ್ಮ ಹಕ್ಕು ಎಂಬ ಘೋಷಣೆಯಡಿ ಮಹಿಳಾ ಸಮುದಾಯ ಮುನ್ನಡೆಯಬೇಕಿದೆ. ಪ್ರತಿಯೊಬ್ಬ ಮಹಿಳೆಯ ಮೇಲೆ ನಡೆಯುವ ದೌರ್ಜನ್ಯ ಮತ್ತು ಅತ್ಯಾಚಾರವನ್ನೂ ಮಹಿಳಾ ಅಸ್ಮಿತೆಯ ನೆಲೆಯಲ್ಲಿಯೇ ವಿರೋಧಿಸುವುದರೊಂದಿಗೆ, ಪುರುಷ ಪ್ರಧಾನ ವ್ಯವಸ್ಥೆ ಪೋಷಿಸುತ್ತಿರುವ ವಿಕೃತ ಸಂಸ್ಕೃತಿಯ ವಿರುದ್ಧ ನಿರಂತರ ಹೋರಾಟ ಇಂದಿನ ಅಗತ್ಯತೆಯಾಗಬೇಕಿದೆ.

ಈ ಘೋಷವಾಕ್ಯಗಳೊಂದಿಗೆ ಹೋರಾಡೋಣ – ನಿರ್ಭಯಾ ದಾನೇಶ್ವರಿ ಸಜೀವವಾಗುತ್ತಾರೆ :

*ನಮ್ಮ ಹಕ್ಕುಗಳನ್ನು ನೀಡಿ ಎಂದು ಕೈಚಾಚುವುದಿಲ್ಲ*
*ನಮ್ಮ ಘನತೆ ಗೌರವ ಉಳಿಸಿ ಎಂದು ಬೇಡುವುದಿಲ್ಲ*
*ನಮ್ಮ ಶೀಲ ಕಾಪಾಡಿ ಎಂದು ಕೂಗುವುದಿಲ್ಲ*
*ನಮ್ಮ ಸ್ಥಾನ ನಮಗೆ ನೀಡಿ ಎಂದು ಗೋಗರೆಯುವುದಿಲ್ಲ*
*ಈ ಹಕ್ಕುಗಳು ನಮ್ಮವು ನಾವೇ ಪಡೆದೇ ತೀರುತ್ತೇವೆ.*



**ನಾ. ದಿವಾಕರ**
ಮನೆ ಸಂಖ್ಯೆ ೭೯, ಈಶವಾಸ್ಯಂ, ನಾಗಲಕ್ಷ್ಮಿ ಮಾರ್ಗ, ೫ನೇ ಅಡ್ಡರಸ್ತೆ
ಎಂ.ಎಂ.ಜಿ. ದೇವಸ್ಥಾನ, ಬೆಲ್ ಬಡಾವಣೆ, ಲಿಂಗಾಂಬುಧಿ ರಸ್ತೆ, ಶ್ರೀರಾಂಪುರ ೨ನೇ ಹಂತ
ಮೈಸೂರು – ೫೭೦ ೦೨೩

# ಯುವಜನರಲ್ಲಿ ಹೆಚ್ಚುತ್ತಿರುವ ಹೃದಯಾಘಾತ

**ಭಾರತದಲ್ಲಿ ಹೃದಯಾಘಾತದ ಪ್ರಕರಣಗಳು ತೀವ್ರ ಗತಿಯಲ್ಲಿ ಹೆಚ್ಚಾಗುತ್ತಿವೆ. ಅದರಲ್ಲೂ ಯುವಜನರಲ್ಲಿ ಹೆಚ್ಚುತ್ತಿರುವುದು ತೀವ್ರ ಆತಂಕಕಾರಿ ವಿಷಯ. ಇಂದಿನ ಮಕ್ಕಳಿಗೆ ಶಾಲಾ ದಿನಗಳಿಂದಲೇ ಹೃದಯಾಘಾತದ ದುಷ್ಪರಿಣಾಮಗಳಿಗೆ ಕಾರಣವಾಗುವ ವಿವಿಧ ಗಂಡಾಂತರಕಾರಿ ಅಂಶಗಳ ಬಗ್ಗೆ ತಿಳಿಸಿ ಅವರನ್ನು ಜಾಗೃತಗೊಳಿಸುವ ಅಗತ್ಯವಿದೆ. ಭಾರತದಲ್ಲಿ ಹೃದಯಾಘಾತ ಪ್ರಕರಣಗಳು ಗಮನಾರ್ಹವಾಗಿ ಅಧಿಕವಾಗುತ್ತಿವೆ.**

ಇದಕ್ಕೆ ವಿರೋಧಾಭಾಸವಾಗಿ ಅಭಿವೃದ್ಧಿ ಹೊಂದಿದ ರಾಷ್ಟ್ರಗಳಲ್ಲಿ ಹೃದಯಾಘಾತ ಪ್ರಕರಣಗಳು ಗಣನೀಯವಾಗಿ ಕಡಿಮೆಯಾಗುತ್ತಿವೆ. ಆ ದೇಶಗಳಲ್ಲಿನ ಜನಸಾಮಾನ್ಯರಲ್ಲಿ ಹೆಚ್ಚಿದ ಜಾಗೃತಿ ಹಾಗೂ ಆರಂಭದ ವರ್ಷಗಳಲ್ಲೇ ಕೈಗೊಂಡ ಮುನ್ನೆಚ್ಚರಿಕೆಗಳ ಫಲವಾಗಿ ಹಾರ್ಟ್ ಅಟ್ಯಾಕ್ ಹತೋಟಿಗೆ ಬಂದಿದೆ. ಮುಂಜಾಗ್ರತೆ ಕ್ರಮಗಳನ್ನು ಪರಿಣಾಮಕಾರಿಯಾಗಿ ಅಳವಡಿಸಿ ಕೊಳ್ಳುವುದರಿಂದ ಹೃದಯಾಘಾತವನ್ನು ದೊಡ್ಡ ಮಟ್ಟದಲ್ಲಿ ತಡೆಗಟ್ಟಬಹುದು ಎಂಬುದು ದೃಢಪಟ್ಟಿದೆ. ಭಾರತದಲ್ಲೂ ತುರ್ತಾಗಿ ಈ ಜಾಗೃತಿ ಮತ್ತು ಅರಿವಿನ ಅಗತ್ಯವಿದೆ. ಏಕೆಂದರೆ ಉತ್ಪಾದಕತೆಯ ಜೀವನದ (ಹಣ ಸಂಪಾದನೆಯ) ಗರಿಷ್ಠ ಮಟ್ಟದಲ್ಲಿದ್ದಾಗ ಬಹುತೇಕ ಮಂದಿ ಹೃದಯಾಘಾತಕ್ಕೆ ತುತ್ತಾಗುತ್ತಿರುವುದರಿಂದ ಜಾಗೃತಿ ಮೂಡಿಸುವುದು ಅಗತ್ಯವಾಗಿದೆ.

ಬದಲಾದ ಜೀವನಶೈಲಿ, ದೈಹಿಕ ಶ್ರಮವಿಲ್ಲದ ದುಡಿಮೆ ಭಾರತೀಯರಲ್ಲಿ ಹೃದಯಾಘಾತದ ಸಾಧ್ಯತಾ ಪ್ರಮಾಣ ಹೆಚ್ಚಿಸಿದೆ. ಆದರೂ ಶೇ. ೭೬ರಷ್ಟು ಜನರು ಸಮಸ್ಯೆ ಅಂತಿಮ ಹಂತಕ್ಕೆ ಹೋಗುವ ತನಕ ವೈದ್ಯರ ತಪಾಸಣೆಗೆ ಒಳಗಾಗುತ್ತಿಲ್ಲ. ೨೦ರಿಂದ ೬೫ ವಯೋಮಾನದ ಶೇ. ೬೦ರಷ್ಟು ಭಾರತೀಯರಿಗೆ ಈ ಕುರಿತು ಸೂಕ್ತ ತಿಳುವಳಿಕೆಯೇ ಇಲ್ಲ.

೨೦ರಿಂದ ೩೦ರ ಹರೆಯದ ಯುವ ಜನತೆ, ತಮಗೆ ಹೃದಯಸಂಬಂಧಿ ಸಮಸ್ಯೆ ಬರುವುದಿಲ್ಲ ಎಂಬ ದೃಢನಂಬಿಕೆಯಲ್ಲಿ ತಪಾಸಣೆಗೆ ಒಳಗಾಗುವುದಿಲ್ಲ. ಆದರೆ, ಶೇ. ೨೦ರಷ್ಟು ಜನರಿಗೆ ಹೃದ್ರೋಗ ವಂಶವಾಹಿಯಾಗಿದೆ ಎಂದು ಇತ್ತೀಚೆಗೆ ಆರೋಗ್ಯ ಸಮೀಕ್ಷೆ ತಿಳಿಸಿದ್ದು, ಆಧುನಿಕ ಜೀವನಶೈಲಿಯು ಯುವಜನತೆಯಲ್ಲಿ ಹೃದಯನಾಳ ತೊಂದರೆ, ಹೃದಯಾಘಾತ, ಪಾರ್ಶ್ವವಾಯು ಸಂಭವವನ್ನು ಮೂರುಪಟ್ಟು ಹೆಚ್ಚಿಸಿದೆ. *ಭಾರತದಲ್ಲಿ ಹೃದಯಾಘಾತ ಸಂಭವದ ವಯೋಮಿತಿಯು ೪೦ರಿಂದ ೩೦ ವರ್ಷಕ್ಕೆ ಇಳಿದಿದೆ. ಇದೊಂದು ಆತಂಕದ ವಿಷಯ.*

ಕೂತಲ್ಲೇ ಕೆಲಸ (ಮಾಹಿತಿ ತಂತ್ರಜ್ಞಾನ, ಕಚೇರಿ ಕೆಲಸ); ವಿಶ್ರಾಂತಿರಹಿತ ದುಡಿಮೆ, ದೈಹಿಕ ಚಟುವಟಿಕೆ ಇಲ್ಲದಿರುವುದು, ಧೂಮಪಾನ, ಮದ್ಯಪಾನ ಇವೆಲ್ಲ ಹವ್ಯಾಸಗಳು ಹೃದಯಾಘಾತ ಹೆಚ್ಚಲು ಪ್ರಮುಖ ಕಾರಣವೆನ್ನಬಹುದು. ವಿಶ್ವ ಆರೋಗ್ಯ ಸಂಸ್ಥೆ (ಡಬ್ಲ್ಯೂ ಎಚ್ ಓ) ಪ್ರಕಾರ, ಪ್ರಪಂಚದ ನಂಬರ್ ಒನ್ ಕಿಲ್ಲರ್ ಹೃದಯಾಘಾತ. ಒತ್ತಡದ ಜೀವನ, ದೇಹದಲ್ಲಿ ಹೆಚ್ಚಿನ ಕೊಬ್ಬಿನಂಶ, ಧೂಮಪಾನ, ಮದ್ಯಪಾನ, ದೈಹಿಕ ಶ್ರಮ ರಹಿತ ಜೀವನ ಹೃದಯಾಘಾತ ಕೊಡುಗೆ ನೀಡುತ್ತಿದ್ದು ಬೋರಲಾಗಿ ಮಲಗುವವರಲ್ಲೂ ಇದರ ಸಂಭವ ಹೆಚ್ಚಿದೆ. ನಿಯಮಿತವಾಗಿ ದೇಹ ತೂಕದ ತಪಾಸಣೆ, ಕೊಬ್ಬು ರಹಿತ ಪದಾರ್ಥಗಳ ಸೇವನೆ ಹಾಗೂ ಪ್ರತಿದಿನ ೪೫ ನಿಮಿಷಗಳ ಕಾಲ ವೇಗದ ನಡಿಗೆ ಮಾಡುವ ಮೂಲಕ ಹೃದಯ ಸಂಬಂಧಿ ರೋಗಗಳನ್ನು ನಿಯಂತ್ರಿಸಬಹುದು.

ಹೃದಯವು ಒಂದು ಅಂಗವಾಗಿದ್ದು, ಅದು ಜೀವದ ಮುಂದುವರಿಕೆಗಾಗಿ ತೀರಾ ಅನಿವಾರ್ಯವಾದ ಆಮ್ಲಜನಕ ಮತ್ತು ಇತರೆ ಪೋಷಕಾಂಶಗಳನ್ನು ಪೂರೈಸಲು ದೇಹದ ವಿವಿಧ ಭಾಗಗಳಿಗೆ ರಕ್ತವನ್ನು ನಿರಂತರವಾಗಿ ಪಂಪ್ ಮಾಡುತ್ತಲೇ ಇರುತ್ತದೆ. ಆಮ್ಲಜನಕ ಮತ್ತು ಪೋಷಕಾಂಶಗಳ ಅಗತ್ಯತೆಗಳನ್ನು ಪೂರೈಸಲು ಎರಡು ಸಣ್ಣ ರಕ್ತನಾಳಗಳ ಮೇಲೆ ಹೃದಯ ಅವಲಂಬಿಸಿರುತ್ತದೆ. ಈ ರಕ್ತನಾಳಗಳನ್ನು ಕರೋನರಿ ಆರ್ಟರಿಗಳು ಎಂದು ಕರೆಯಲಾಗುತ್ತದೆ.

ವಯಸ್ಸಾಗುವ ಪ್ರಕ್ರಿಯೆ ಮುಂದುವರೆದಂತೆಲ್ಲಾ ಸಣ್ಣ ಪ್ರಮಾಣದ ಕೊಲೆಸ್ಟರಾಲ್ (ಕೊಬ್ಬು) ರಕ್ತ ನಾಳಗಳ ಗೋಡೆಗಳಲ್ಲಿ ಶೇಖರಣೆಯಾಗುತ್ತದೆ ಹಾಗೂ ಕಾಲಕ್ರಮೇಣ ನಾಳಗಳು ದಪ್ಪವಾಗಿ, ಗಟ್ಟಿಯಾಗಿ, ಕಿರಿದಾಗುತ್ತವೆ.

ಕೆಲವು ಅಂಶಗಳು ಆರಂಭದಲ್ಲಿ ಮತ್ತು ಕ್ಷಿಪ್ರವಾಗಿ ಈ ಬದಲಾವಣೆಗೆ ಕಾರಣವಾಗುತ್ತದೆ. ಈ ಅಂಶಗಳನ್ನು ಕರೋನರಿ ಆರ್ಟರಿ ರೋಗದ ರಿಸ್ಕ್ ಫ್ಯಾಕ್ಟರ್‌ಗಳು ಎಂದು ಕರೆಯಲಾಗುತ್ತದೆ.

**ಹೃದಯಾಘಾತಕ್ಕೆ ಕಾರಣವಾಗುವ ಕೆಲವು ರಿಸ್ಕ್ ಫ್ಯಾಕ್ಟರ್‌ಗಳು :**

○ **ತಂಬಾಕು ಸೇವನೆ :** ಧೂಮಪಾನಿಗಳು ಧೂಮಪಾನ ಮಾಡದವರಿಗಿಂತ ಹೃದಯಾಘಾತಕ್ಕೆ ತುತ್ತಾಗುವ ಗಂಡಾಂತರ ೩ ರಿಂದ ೬ ಪಟ್ಟು ಹೆಚ್ಚಾಗುತ್ತದೆ. ತಂಬಾಕಿನಲ್ಲಿರುವ ನಿಕೋಟಿನ್, ಕಾರ್ಬನ್ ಮೊನೊಕ್ಸೈಡ್ ಮತ್ತು ಇತರೆ ವಿಷಯುಕ್ತ ವಸ್ತುಗಳು ರಕ್ತನಾಳ ಗೋಡೆಗೆ ಹಾನಿ ಉಂಟುಮಾಡುತ್ತವೆ, ರಕ್ತದೊತ್ತಡವನ್ನು ಹೆಚ್ಚಿಸುತ್ತವೆ ಹಾಗೂ ರಕ್ತದಲ್ಲಿ ಕೊಬ್ಬಿನ ಆಮ್ಲದ ಮಟ್ಟವನ್ನು ಅಧಿಕಗೊಳಿಸುತ್ತವೆ. ಇವೆಲ್ಲವೂ ಅತಿರೋಸ್‌ಸ್ಕೆಲೋರಿಸಿಸ್ (ರಕ್ತನಾಳಗಳನ್ನು ಕಠಿಣಗೊಳಿಸುವಿಕೆ) ಸಮಸ್ಯೆಗೆ ಕಾರಣವಾಗುತ್ತದೆ. ಇವು ಹೃದಯ ಬಡಿತವನ್ನು ಹೆಚ್ಚಿಸುತ್ತವೆ ಹಾಗೂ ಅಸಮರ್ಪಕ ಹೃದಯ ಬಡಿತಕ್ಕೆ ಎಡೆ ಮಾಡಿಕೊಟ್ಟು ಹಠಾತ್ ಸಾವು ಸಂಭವಿಸಲು ಕಾರಣವಾಗುತ್ತದೆ. ಪ್ಯಾಸಿವ್ ಸ್ಮೋಕರ್‌ಗಳಲ್ಲೂ (ನೀವು ಧೂಮಪಾನ ಮಾಡದಿದ್ದರೂ, ಧೂಮಪಾನಿಗಳು ಹೊರ ಸೂಸುವ ತಂಬಾಕಿನ ಹೊಗೆಯನ್ನು ಪಕ್ಕದಲ್ಲಿದ್ದು ಸೇವಿಸುವವರು) ಇದು ಅಷ್ಟೇ ಪ್ರಮಾಣದ ಹಾನಿ ಉಂಟುಮಾಡುತ್ತದೆ ಎಂದು ಪರಿಗಣಿಸಲಾಗಿದೆ. ಬೀಡಿಗಳು, ಸಿಗಾರ್‌ಗಳು ಮತ್ತು ಪೈಪ್‌ಗಳನ್ನು ಸೇದುವುದು ಸಿಗರೇಟ್ ಸೇದಿದಷ್ಟೇ ಕೆಟ್ಟದ್ದು. ತಂಬಾಕು ಜಗಿಯುವುದು ಹಾಗೆಯೇ ನಶ್ಯ ಸೇವಿಸುವುದನ್ನು ಸಹ ಹಾನಿಕಾರಕವೆಂದು ಪರಿಗಣಿಸಲಾಗಿದೆ.

○ **ಅಧಿಕ ಕೊಲೆಸ್ಟರಾಲ್ :** ರಕ್ತದಲ್ಲಿ ಕೊಲೆಸ್ಟರಾಲ್ (ಕೊಬ್ಬು) ಪ್ರಮಾಣ ಹೆಚ್ಚಾಗುವುದರಿಂದ ಕರೋನರಿ ಆರ್ಟರಿಗಳು ಗಟ್ಟಿಯಾಗುತ್ತವೆ ಹಾಗೂ ಇದು ಹೃದಯಾಘಾತ ಸಂಭವಿಸುವ ಅವಕಾಶವನ್ನು ಹೆಚ್ಚಿಸುತ್ತದೆ. ರಕ್ತದಲ್ಲಿ ಒಟ್ಟು ಕೊಲೆಸ್ಟರಾಲ್ ಪ್ರಮಾಣ ಮುಖ್ಯವಾದರೂ ವಿವಿಧ ರೀತಿಯ ಕೊಲೆಸ್ಟರಾಲ್‌ನ ಮಟ್ಟವನ್ನು ತಿಳಿಯುವುದು ತುಂಬ ಮುಖ್ಯ. ಅತಿರೋಸ್‌ಸ್ಕೆಲೋರಿಸಿಸ್‌ಗೆ ಸಂಬಂಧ ಪಟ್ಟಂತೆ ಮುಖ್ಯವಾಗಿ ಎರಡು ರೀತಿಯ ಕೊಲೆಸ್ಟರಾಲ್‌ಗಳು ಇವೆ. ಅವುಗಳೆಂದರೆ ಎಲ್‌ಡಿಎಲ್ ಮತ್ತು ಎಚ್‌ಡಿಎಲ್ ಕೊಲೆಸ್ಟರಾಲ್‌ಗಳು.

○ **ಎಲ್‌ಡಿಎಲ್ ಕೊಲೆಸ್ಟರಾಲ್ :** ಇದನ್ನು ಕೆಟ್ಟ ಕೊಲೆಸ್ಟರಾಲ್ ಎಂದು ಕರೆಯಲಾಗುತ್ತದೆ. ಪ್ರಾಣಿ ಮೂಲಗಳಿಂದ ಪಡೆದ ಕೊಬ್ಬಿನ ಪದಾರ್ಥಗಳ ವಿಪರೀತ ಸೇವನೆಯಿಂದ ಎಲ್‌ಡಿಎಲ್ ಕೊಲೆಸ್ಟರಾಲ್ ಪ್ರಮಾಣ ಹೆಚ್ಚಾಗುತ್ತದೆ. ಪ್ರಾಣಿ ಜನ್ಯ ಕೊಬ್ಬಿನಂಶದ ಆಹಾರ ಪದಾರ್ಥಗಳೆಂದರೆ ಹಾಲಿನ ಕೆನೆ, ಬೆಣ್ಣೆ, ತುಪ್ಪ, ಮೊಸರು, ಐಸ್ ಕ್ರೀಮ್, ಮೊಟ್ಟೆಯ ಹಳದಿ ಭಾಗ, ಲಿವರ್, ಬ್ರೇನ್ ಮತ್ತು ಕಿಡ್ನಿಗಳಂಥ ಅಂಗಾಂಗ ಮಾಂಸಗಳು, ಸಿಗಡಿ ಮತ್ತು ಏಡಿಯಂಥ ಶೆಲ್ ಫಿಶ್‌ಗಳು. ಕೊಬ್ಬರಿ ಎಣ್ಣೆಯಲ್ಲೂ ಅಧಿಕ ಪ್ರಮಾಣದ ಕೊಬ್ಬಿನಂಶದ ಪದಾರ್ಥಗಳಿರುತ್ತವೆ. ಎಳ್ಳೆಣ್ಣೆ ಮತ್ತು ಸೂರ್ಯಕಾಂತಿ ಎಣ್ಣೆಗಳು ಅಧಿಕ ಪ್ರಮಾಣದ ಅನ್‌ಸ್ಯಾಚುರೇಟೆಡ್ ಫ್ಯಾಟಿ ಆಸಿಡ್‌ಗಳಿದ್ದು, ಇದು ಬಳಕೆ ಆಯ್ಕೆಗೆ ಸೂಕ್ತ.

○ **ಎಚ್‌ಡಿಎಲ್ ಕೊಲೆಸ್ಟರಾಲ್ :** ಇದು ಆರೋಗ್ಯಕ್ಕೆ ಪೂರಕವಾದ ಒಳ್ಳೆಯ ಕೊಲೆಸ್ಟರಾಲ್. ಎಚ್‌ಡಿಎಲ್ ಕೊಲೆಸ್ಟರಾಲ್‌ಅನ್ನು ನಿಯಮಿತ ದೈಹಿಕ ವ್ಯಾಯಾಮದ ಮೂಲಕ ಹೆಚ್ಚಿಸಿಕೊಳ್ಳಬಹುದು. ಎಚ್‌ಡಿಎಲ್ ಕೊಲೆಸ್ಟರಾಲ್ ಮಟ್ಟದ ಹೆಚ್ಚಳವು ಹೃದಯವನ್ನು ರಕ್ಷಿಸುತ್ತದೆ.

○ **ಅಧಿಕ ಬ್ಲಡ್ ಷುಗರ್ :** ರಕ್ತದಲ್ಲಿನ ಅನಿಯಂತ್ರಿತ ಸಕ್ಕರೆ ಪ್ರಮಾಣ ಅತಿರೋಸ್‌ಸ್ಕೆಲೋರಿಸಿಸ್ ಸಮಸ್ಯೆಗೆ ಎಡೆ ಮಾಡಿಕೊಡುತ್ತದೆ ಎಂದು ದೃಢಪಟ್ಟಿದೆ. ಇದರೊಂದಿಗೆ ಹತೋಟಿ ಇಲ್ಲದ ಡಯಾಬಿಟಿಸ್ ಅತಿಯಾದ ತೂಕ ಮತ್ತು ಅಧಿಕ ಕೊಲೆಸ್ಟರಾಲ್‌ಗೆ ಎಡೆ ಮಾಡಿಕೊಡುತ್ತದೆ. ಇವೆಲ್ಲವೂ ಹೃದಯಾಘಾತ ಗಂಡಾಂತರವನ್ನು ಇನ್ನಷ್ಟು ಹೆಚ್ಚಿಸುತ್ತವೆ.

**ಡಾ॥ ಮಹಂತೇಶ್ ಆರ್. ಚರಂತಿಮಠ್**

**○ ಅಧಿಕ ರಕ್ತದೊತ್ತಡ :** ಅಧಿಕ ರಕ್ತದೊತ್ತಡವನ್ನು ನಿಯಂತ್ರಿಸದಿದ್ದರೆ ಅದು ರಕ್ತನಾಳಗಳಲ್ಲಿ ಕೊಬ್ಬು ಶೇಖರಣೆಯಾಗಲು ಕಾರಣವಾಗುತ್ತದೆ. ಇದು ಕೇವಲ ಕರೋನರಿ ರಕ್ತನಾಳಗಳ ಮೇಲೆ ಮಾತ್ರ ದುಷ್ಪರಿಣಾಮ ಉಂಟು ಮಾಡುವುದಲ್ಲದೇ ಮೆದುಳಿನ ಹಾಗೂ ಮೂತ್ರಪಿಂಡಗಳ ರಕ್ತನಾಳಗಳಿಗೂ (ಇದು ಪಾರ್ಶ್ವವಾಯು ಮತ್ತು ಕಿಡ್ನಿ ವೈಫಲ್ಯಕ್ಕೆ ಎಡೆ ಮಾಡಿಕೊಡುತ್ತದೆ). ತೊಂದರೆ ನೀಡುತ್ತದೆ. ಅಧಿಕ ರಕ್ತದೊತ್ತಡದಿಂದ ಹೃದಯ ದೊಡ್ಡದಾಗಿ ಹಾರ್ಟ್ ಅಟ್ಯಾಕ್‌ಗೆ ಕಾರಣವಾಗುತ್ತದೆ.

**○ ಅಧಿಕ ತೂಕ :** ಅಧಿಕ ತೂಕ ಹೊಂದಿರುವ ವ್ಯಕ್ತಿಗಳಲ್ಲಿ ಹೃದಯಾಘಾತ ಪ್ರಕರಣಗಳು ಹೆಚ್ಚಾಗಿ ಕಂಡುಬರುತ್ತವೆ. ಸಮೃದ್ಧ ಆಹಾರಗಳ (ಕೊಬ್ಬು ಮತ್ತು ಸಕ್ಕರೆ ಅಧಿಕವಾಗಿರುವ ಆಹಾರ ಪದಾರ್ಥಗಳು) ಸೇವನೆ ಹಾಗೂ ವ್ಯಾಯಾಮದ ಕೊರತೆಯಿಂದ ಸಾಮಾನ್ಯವಾಗಿ ತೂಕ ಅತಿಯಾಗಿ ಹೆಚ್ಚಾಗುತ್ತದೆ. ಇದರಿಂದ ರಕ್ತದಲ್ಲಿನ ಕೊಲೆಸ್ಟರಾಲ್ ಪ್ರಮಾಣ ಹೆಚ್ಚಾಗಿ ಅತಿರೋಸ್ಕ್ಲೆರೋಸಿಸ್ ಗಂಡಾಂತರವನ್ನು ಅಧಿಕಗೊಳಿಸುತ್ತದೆ.

**○ ಐಷಾರಾಮಿ ಅಭ್ಯಾಸಗಳು :** ಎಲ್ಲರಿಗೂ ಚೆನ್ನಾಗಿ ತಿಳಿದಿರುವಂತೆ ದೈಹಿಕವಾಗಿ ಕ್ರಿಯಾಶೀಲವಾಗಿರುವ ಅಥ್ಲೇಟ್‌ಗಳಿಗೆ ಹೃದಯಾಘಾತವಾಗುವ ಸಂಭವ ತೀರಾ ಕಡಿಮೆ. ಅದೇ ರೀತಿ ದೈಹಿಕ ಜಡತ್ವದ ಐಷಾರಾಮಿ ವ್ಯಕ್ತಿ ಹಾರ್ಟ್ ಅಟ್ಯಾಕ್ ಗಂಡಾಂತರಕ್ಕೆ ಒಳಗಾಗುವ ಸಾಧ್ಯತೆ ತುಂಬ ಹೆಚ್ಚಾಗಿರುತ್ತದೆ. ಐಷಾರಾಮಿ ಅಭ್ಯಾಸಗಳು ಮತ್ತು ಸ್ಥೂಲಕಾಯ, ಬೊಜ್ಜು ಹಾಗೂ ಕೊಬ್ಬನ್ನು ಕರಗಿಸುವಲ್ಲಿ ಕಡಿಮೆ ಸಾಮರ್ಥ್ಯಕ್ಕೆ ಕಾರಣವಾಗಿ ಅಧಿಕ ಕೊಲೆಸ್ಟರಾಲ್‌ಗೆ ಎಡೆ ಮಾಡಿಕೊಡುತ್ತದೆ.

**ಹೃದಯಾಘಾತದ ಸಾಮಾನ್ಯ ಲಕ್ಷಣಗಳು :-**

- ✴ ಎದೆನೋವು, ಹೃದಯ ಭಾರವಾಗುವಿಕೆ
- ✴ ಉಸಿರಾಟದಲ್ಲಿ ತೊಂದರೆ
- ✴ ಹೆಗಲು, ಭುಜ ಅಥವಾ ದವಡೆ ನೋವು
- ✴ ಅಸ್ವಸ್ಥತೆ
- ✴ ಕಡಿಮೆ ನಾಡಿಮಿಡಿತ
- ✴ ಅತಿಯಾಗಿ ಬೆವರುವಿಕೆ
- ✴ ವಾಂತಿ
- ✴ ತಲೆಸುತ್ತುವಿಕೆ/ಶಿರೋಭ್ರಮಣೆ

ಹೃದಯಾಘಾತದ ಚಿಹ್ನೆ ಮತ್ತು ಲಕ್ಷಣಗಳಲ್ಲಿ ವ್ಯತ್ಯಾಸಗಳಿರುತ್ತವೆ. ಒಮ್ಮೊಮ್ಮೆ ಈ ಲಕ್ಷಣ ಬಿರುಸಾಗಿದ್ದರೆ, ಕೆಲವೊಮ್ಮೆ ಲಘುವಾಗಿರುತ್ತದೆ. ಕೆಲವು ಸಂದರ್ಭದಲ್ಲಿ ಯಾವುದೇ ಲಕ್ಷಣವಿಲ್ಲದೇ ಅಥವಾ ಲಘು ಲಕ್ಷಣಗಳೊಂದಿಗೆ ಸಂಭವಿಸುವ ಹಾರ್ಟ್ ಅಟ್ಯಾಕ್ ತೀವ್ರ ಎದೆನೋವಿನಂಥ ಮಾರಣಾಂತಿಕ ಪರಿಣಾಮಗಳಷ್ಟೇ ಅಪಾಯ ತಂದೊಡ್ಡುತ್ತವೆ ಎಂಬುದನ್ನು ಗಮನದಲ್ಲಿಟ್ಟುಕೊಳ್ಳಬೇಕು. ಅಜೀರ್ಣ, ಮಾನಸಿಕ ಕ್ಷೋಭೆ ಅಥವಾ ಒತ್ತಡದಂಥ ಲಕ್ಷಣಗಳು ಗೋಚರಿಸಿದರೂ ಅದನ್ನು ನಿರ್ಲಕ್ಷ್ಯ ಮಾಡದೇ ವೈದ್ಯರ ಗಮನಕ್ಕೆ ತರಬೇಕು.

**ಹೃದಯಾಘಾತಕ್ಕೆ ಕಾರಣವಾಗುವ ಕೆಲವು ರಿಸ್ಕ್ ಫ್ಯಾಕ್ಟರ್‌ಗಳು :**

- ✴ ತಂಬಾಕು ಸೇವನೆ
- ✴ ಅಧಿಕ ಕೊಲೆಸ್ಟರಾಲ್
- ✴ ಎಲ್‌ಡಿಎಲ್ ಕೊಲೆಸ್ಟರಾಲ್
- ✴ ಎಚ್‌ಡಿಎಲ್ ಕೊಲೆಸ್ಟರಾಲ್
- ✴ ಅಧಿಕ ಬ್ಲಡ್ ಷುಗರ್
- ✴ ಅಧಿಕ ರಕ್ತದೊತ್ತಡ
- ✴ ಅಧಿಕ ತೂಕ
- ✴ ಐಷಾರಾಮಿ ಅಭ್ಯಾಸಗಳು
- ✴ ಉದ್ವೇಗದ ಒತ್ತಡ ಮತ್ತು ಆಯಾಸ
- ✴ ಅನುವಂಶೀಯ ಅಂಶಗಳು

**○ ಉದ್ವೇಗದ ಒತ್ತಡ ಮತ್ತು ಆಯಾಸ:** ಉದ್ವೇಗದಿಂದ ಉಂಟಾಗುವ ಒತ್ತಡ ಮತ್ತು ಆಯಾಸವು ಅತಿರೋಸ್ಕ್ಲೆರೋಸಿಸ್ ಗಂಡಾಂತರವನ್ನು ಹೆಚ್ಚಿಸುತ್ತದೆ. ಯಾವಾಗಲೂ ಉದ್ವೇಗ, ಒತ್ತಡ, ಕೋಪ, ಆವೇಶಕ್ಕೆ ಒಳಗಾಗುವ ವ್ಯಕ್ತಿಗಳು ಹಾಗೂ ಆತುರದಲ್ಲಿ ಅಂದುಕೊಂಡಿದ್ದನ್ನು ಸಾಧಿಸಲು ತವಕಿಸುವ ಮಂದಿ ಹೃದಯಾಘಾತಕ್ಕೆ ತುತ್ತಾಗುವ ಸಾಧ್ಯತೆ ಹೆಚ್ಚಾಗಿರುತ್ತದೆ. ಇಂಥ ವ್ಯಕ್ತಿಗಳನ್ನು ನಡವಳಿಕೆ ನಮೂನೆ ರೀತಿಯವರು ಎಂದು ಕರೆಯಲಾಗುತ್ತದೆ. ಶಾಂತ ಸ್ವಭಾವದವರು, ಪ್ರಶಾಂತ ಚಿತ್ತ ಗುಣದವರು, ಮಾನಸಿಕವಾಗಿ ದೃಢವಾಗಿರುವವರು ಹಾಗೂ ತಾಳ್ಮೆಯಿಂದ ಸಮಸ್ಯೆಗಳನ್ನು ನಿಭಾಯಿಸುವವರು ದೀರ್ಘಾಯುಷಿಗಳಾಗಿ ಇರುತ್ತಾರೆ. ಮಹಿಳೆಯರಲ್ಲಿ ಮಾಸಿಕ ಋತು ಕೊನೆಗೊಳ್ಳುವತನಕ (ಮೆನೊಪಾಸ್) ಅವರಿಗೆ ಸಾಮಾನ್ಯವಾಗಿ ಹೃದಯಾಘಾತದಿಂದ ರಕ್ಷಣೆ ದೊರೆಯುತ್ತದೆ. ಆದರೆ, ಮಹಿಳೆಯರು ದೀರ್ಘಕಾಲ ಗರ್ಭ ನಿರೋಧಕ ಮಾತ್ರೆಗಳನ್ನು ಸೇವಿಸಿದರೆ ಮತ್ತು ತಂಬಾಕು ಉಪಯೋಗಿಸಿದರೆ ಈ ರಕ್ಷಣೆ ಕೊನೆಗೊಳ್ಳುತ್ತದೆ.

**○ ಅನುವಂಶೀಯ ಅಂಶಗಳು:** ಕುಟುಂಬದ ಯಾರಾದರೂ ಒಬ್ಬರಿಗೆ ಯೌವ್ವನದಲ್ಲಿ ಹೃದಯಾಘಾತವಾಗಿದ್ದರೆ ಆ ಕುಟುಂಬದಲ್ಲಿ ಯಾವುದೇ ವ್ಯಕ್ತಿ ಹಾರ್ಟ್ ಅಟ್ಯಾಕ್‌ಗೆ ಒಳಗಾಗುವ ಸಾಧ್ಯತೆ ಹೆಚ್ಚಾಗಿರುತ್ತದೆ. ಇಂಥ ಗಂಡಾಂತರದ ಅಧಿಕ ಸಾಧ್ಯತೆ ಇರುವ ಮಂದಿ ಧೂಮಪಾನ, ಐಷಾರಾಮಿ ಅಭ್ಯಾಸ ಹಾಗೂ ಅಧಿಕ ಪ್ರಮಾಣದ ಕೊಬ್ಬಿನಂಶವಿರುವ ಆಹಾರ ಪದಾರ್ಥಗಳ ಸೇವನೆಯಂಥ ಪರಿವರ್ತಿತ ಗಂಡಾಂತರಕಾರಿ ಅಂಶಗಳನ್ನು ತಪ್ಪಿಸಬೇಕಾಗುತ್ತದೆ. ಇಂಥ ವ್ಯಕ್ತಿಗಳು ಆರಂಭಿಕ ವರ್ಷದಲ್ಲೇ ಆಗಾಗ ತಪಾಸಣೆಗೆ ಒಳಗಾಗಬೇಕು.

## ಜೀವನಶೈಲಿ ಬದಲಾವಣೆ

**ಒತ್ತಡಕ್ಕೆ ಸಂಬಂಧಿಸಿದ ಹೃದ್ರೋಗ ತಡೆಗಟ್ಟಲು ಜೀವನಶೈಲಿ ಬದಲಾವಣೆಯೂ ಅಗತ್ಯ**

**○ ಧೂಮಪಾನ ವರ್ಜಿಸಿ :** ಧೂಮಪಾನ ಅಥವಾ ತಂಬಾಕು ಸೇವನೆಯಿಂದ ಉಂಟಾಗುವ ದುಷ್ಪರಿಣಾಮಗಳನ್ನು ಪಟ್ಟಿ ಮಾಡಿ. ನಂತರ ನಾನೇಕೆ ಧೂಮಪಾನ ಬಿಡಬೇಕು ಎಂಬುದನ್ನು ಬರೆಯಿರಿ. ಧೂಮಪಾನ ತ್ಯಜಿಸಲು ಸೂಕ್ತ ದಿನವನ್ನು ಗೊತ್ತು ಮಾಡಿ ದೃಢಸಂಕಲ್ಪದಿಂದ ಆ ದುಶ್ಚಟದಿಂದ ದೂರವಿರಿ. ನೀವು ಧೂಮಪಾನ ವರ್ಜಿಸಲು ನಿರ್ಧರಿಸಿದ ತಕ್ಷಣ ಸಿಗರೇಟ್‌ಗಳು, ಆ್ಯಷ್‌ಟ್ರೇ ಮತ್ತು ಲೈಟರ್ ಅನ್ನು ಹೊರಗೆ ಎಸೆಯಿರಿ.

**○ ನಿಮ್ಮ ವೈದ್ಯರೊಂದಿಗೆ ಈ ಕುರಿತು ಮುಕ್ತ ಚರ್ಚೆ ನಡೆಸಿರಿ.** ಧೂಮಪಾನ ವರ್ಜಿಸಿದ ನಂತರ ನಿಮ್ಮ ದೇಹದಲ್ಲಿ ಕೆಲವು ಪ್ರತಿಕ್ರಿಯೆಗಳು ಕಂಡುಬಂದರೆ ನಿಮಗೆ ಔಷಧಿ ನೀಡಬೇಕಾಗುತ್ತದೆ. ನಿಮಗೆ ನಿಕೋಟಿನ್ ಪರ್ಯಾಯದ ಅಗತ್ಯವಿದೆಯೇ ಎಂಬುದನ್ನು ಪರೀಕ್ಷಿಸಿಕೊಳ್ಳಿ. ಇದು ಗಮ್, ಇನ್‌ಹೇಲರ್ ಮೊದಲಾದ ರೂಪದಲ್ಲಿ ಬರುತ್ತದೆ.

**○ ಆರೋಗ್ಯಕರ ಆಹಾರ :** ಆರೋಗ್ಯ ರಕ್ಷಣೆ ಹಾಗೂ ದೈಹಿಕ-ಮಾನಸಿಕ ಸಾಮರ್ಥ್ಯ ಹೆಚ್ಚಳದಲ್ಲಿ ಉತ್ತಮ ಆಹಾರ ಮಹತ್ವದ ಪಾತ್ರ ವಹಿಸುತ್ತದೆ. ಆರೋಗ್ಯಕರವಾದ ಸಂತುಲಿತ ಮತ್ತು ಪೌಷ್ಟಿಕ ಆಹಾರ ದೇಹವನ್ನು ಸಮತೋಲನದಲ್ಲಿ ಇಡುತ್ತದೆ. ಆದರೆ ಸಕಾಲದಲ್ಲಿ ಸೇವನೆ ಮತ್ತು ಸೂಕ್ತ ಪ್ರಮಾಣದಲ್ಲಿ ಆಹಾರ ಸೇವನೆ ಮುಖ್ಯ.

**○ ಉತ್ತಮ ನಿದ್ರೆ :** ಮನುಷ್ಯನ ಆರೋಗ್ಯ ಸ್ಥಿತಿಗೆ ಸೂಕ್ತ ನಿದ್ರೆಯೂ ಅತ್ಯಗತ್ಯ. ಸಾಕಷ್ಟು ನಿದ್ರೆಯ ಮಹತ್ವದ ಬಗ್ಗೆ ಜನರಲ್ಲಿ ಅನೇಕ ತಪ್ಪು ತಿಳುವಳಿಕೆ ಇದೆ. ಸೂಕ್ತ ಸಮಯದಲ್ಲಿ ನಿದ್ರೆ ಮಾಡುವುದು ಒಳ್ಳೆಯದು. ಬೇಗನೆ ಮಲಗಿ ಬೇಗನೆ ಏಳುವುದು ಉತ್ತಮ ಅಭ್ಯಾಸ. ಆದಾಗ್ಯೂ ಸಾಕಷ್ಟು ನಿದ್ರೆ ಇಲ್ಲದಿದ್ದರೆ ಕೆಲವೊಂದು ತೊಂದರೆಗಳಿಗೆ ಕಾರಣವಾಗುತ್ತದೆ. ಅನಿದ್ರೆ, ತಲೆನೋವು, ನಿರುತ್ಸಾಹ, ಮಂಕು ಇತ್ಯಾದಿ. ಕೆಲವೊಮ್ಮೆ ಇದು ಬೊಜ್ಜು, ಅಜೀರ್ಣ, ಜ್ಞಾಪಕ ಶಕ್ತಿ ನಷ್ಟದಂಥ ಗಂಭೀರ ಸಮಸ್ಯೆಗಳಿಗೂ ಎಡೆ ಮಾಡಿಕೊಡಬಹುದು.

**ಡಾ॥ ಮಹಂತೇಶ್ ಆರ್. ಚರಂತಿಮಠ್**
ಹೃದ್ರೋಗತಜ್ಞರು, ತಥಾಗತ್ ಹಾರ್ಟ್‌ಕೇರ್ ಸೆಂಟರ್
ಮಲ್ಲಿಗೆ ಮೆಡಿಕಲ್‌ಸೆಂಟರ್ ಆವರಣ, ನಂ. ೩೧/೩೨, ಕ್ರೆಸೆಂಟ್‌ರಸ್ತೆ
ಬೆಂಗಳೂರು-೦೧ ಮೊಬೈಲ್ : ೯೪೪೮೪ ೭೨೮೮೩
ಇ - ಅಂಚೆ : mahantrc67@hotmail.com



# ೨೦೧೭ರಲ್ಲಿ ಹೆಚ್ಚು ಬಳಕೆಯಾದ ಶಬ್ದ : 'ಸ್ತ್ರೀವಾದ'

ಸ್ತ್ರೀವಾದಿಗಳೆಂದರೆ ಯಾರು? ಪುರುಷ ದ್ವೇಷಿಗಳೇ? ಎನ್ನುವ ಸಂಗತಿ ಬಹು ಹಿಂದೆಯೇ ಹೆಚ್ಚು ಚರ್ಚೆಗೆ ಒಳಗಾದ ಸಂಗತಿಯಾಗಿದೆ. ಈಗಲೂ ಸ್ತ್ರೀವಾದಿಗಳೆಂದರೆ ಬಹುತೇಕ ಅನುಮಾನದಿಂದಲೇ ನೋಡುವ ಸಂದರ್ಭಗಳೂ ಇವೆ. ಸ್ತ್ರೀಯರ ಪರವಾಗಿ ಮಾತನಾಡಿದಾಕ್ಷಣ ಅವ್ರು ಫೆಮಿನಿಸ್ಟ್, ಅವರ ಹತ್ತಿರ ಹುಷಾರಾಗಿರಿ ಎಂದು ಅಪಹಾಸ್ಯ ಮಾಡುವ ಸಂದರ್ಭಗಳೂ ಇವೆ. ಜೊತೆಗೆ ಹಣೆಗೆ ಕುಂಕುಮ ಇಡದಿದ್ದರೆ, ಮದುವೆ ಆಗಿದ್ದರೂ ಕರಿಮಣಿ ಧರಿಸದಿದ್ದರೆ, ಮೇಲು ಹೊದಿಕೆ ಇಲ್ಲದ ಉಡುಪು ಧರಿಸಿದ್ದರೆ (ದುಪ್ಪಟ್ಟ ಇಲ್ಲದ) ಹೋ ನೀವೂ ಫೆಮಿನಿಸ್ಟೇ? ಎಂದು ಕೇಳುವ ಸಂದರ್ಭ ಕನ್ನಡದಲ್ಲಿ ಈಗಲೂ ಪ್ರಚಲಿತದಲ್ಲಿದೆ. ಈ ಎಲ್ಲಾ ಸಂಗತಿಗಳು ಒಂದರ್ಥದಲ್ಲಿ ಸ್ತ್ರೀವಾದವನ್ನು ಮತ್ತು ಇದನ್ನು ನಂಬಿದ ಸ್ತ್ರೀವಾದಿಗಳನ್ನು ಗಂಭೀರವಾಗಿ ತೆಗೆದುಕೊಳ್ಳದೆ ಬಾಲಿಶವಾಗಿ ಕಾಣುವ ದೃಷ್ಟಿಕೋನಗಳು ಕೆಲಸಮಾಡುತ್ತವೆ.

**ಡಾ|| ಕಲಾವತಿ ಬಿ. ಜಿ.**

ಇತ್ತೀಚೆಗೆ ಪ್ರಜಾವಾಣಿ ಪತ್ರಿಕೆಯಲ್ಲಿ ೨೦೧೭ರಲ್ಲಿ ಹೆಚ್ಚು ಬಳಕೆಯಾದ ಶಬ್ದ 'ಸ್ತ್ರೀವಾದ' ಎನ್ನುವ ತಲೆಬರಹದ ವರದಿ ಕೊಂಚ ಕುತೂಹಲವನ್ನು ಮೂಡಿಸಿತು. ವರದಿಯನ್ನು ಮುಂದುವರೆದು ಓದಿದಂತೆ ಅದರಲ್ಲಿ "ಮೆರಿಯಮ್ ವೆಬ್‌ಸೈಟ್ ಡಾಟ್ ಕಾಮ್"ನ ಆನ್‌ಲೈನ್ ನಿಘಂಟುವಿನಲ್ಲಿ ೨೦೧೭ರಲ್ಲಿ 'ಸ್ತ್ರೀವಾದ' ಅತ್ಯಂತ ಹೆಚ್ಚು ಬಳಕೆಯಾಗಿರುವ ಶಬ್ದವಾಗಿದೆ ಎಂದು ವರದಿಯಾಗಿದೆ. ಹಾಗೇ ವೆಬ್‌ಸೈಟ್‌ನ ಶಬ್ದಕೋಶ ಶಾಸ್ತ್ರಜ್ಞ ಪೀಟರ್ ಸೂಕೊಲೋಸ್ಕಿ ಹೇಳುವಂತೆ ಲೈಂಗಿಕ ದೌರ್ಜನ್ಯ ಮತ್ತು ಶೋಷಣೆಗೆ ಸಂಬಂಧಿಸಿದ ಸುದ್ದಿಗಳು ಬಂದಾಗಲೆಲ್ಲಾ ಈ ಶಬ್ದವನ್ನು ಹೆಚ್ಚಾಗಿ ಬಳಸಲಾಗಿದೆ. ವೆಬ್‌ಸೈಟ್‌ನಲ್ಲಿ ಇರುವ ನಿಘಂಟುವಿನಲ್ಲಿ ಪ್ರತಿವರ್ಷ ಯಾವ ಶಬ್ದವನ್ನು ಹೆಚ್ಚಾಗಿ ಬಳಸಲಾಗಿದೆ ಎಂಬ ಬಗ್ಗೆ ಅಧ್ಯಯನ ನಡೆಸುತ್ತದೆ. ಈ ಅಧ್ಯಯನದ ಪ್ರಕಾರ ಮಹಿಳೆಯರ ಹಕ್ಕು ಹಾಗೂ ರಾಜಕೀಯ ಆರ್ಥಿಕ ಹಾಗೂ ಸಾಮಾಜಿಕ ಸಮಾನತೆಯ ವಿಷಯ ಬಂದಾಗಲೆಲ್ಲ 'ಸ್ತ್ರೀವಾದ' ಶಬ್ದ ಹೆಚ್ಚಾಗಿ ಕೇಳಿಬರುತ್ತದೆ ಎಂದಿದ್ದಾರೆ.

ಹೌದು 'ಸ್ತ್ರೀವಾದ' ಎನ್ನುವುದು ಈ ಹೊತ್ತು ಬಹು ವಿಸ್ತೃತವಾಗಿ ಬೆಳೆದಿದೆ. ಇದು ಕೇವಲ ಶಬ್ದಮಾತ್ರವಾಗಿರದೆ ಇದೊಂದು ಪರಿಕಲ್ಪನೆಯೂ ಹೌದು, ಜೀವಪರ ಚಿಂತನೆಯೂ ಹೌದು, ಚಳುವಳಿಯೂ ಹೌದು, ಸಿದ್ಧಾಂತವೂ ಹೌದು, ಬದುಕಿನ ಕ್ರಮವೂ ಹೌದು. ಈ ಚಿಂತನೆ ಆರಂಭಗೊಂಡಿದ್ದೇ, ಸಮಾಜದಲ್ಲಿ ಲಿಂಗಾಧಾರಿತ ಅಸಮಾನತೆಗಳಿವೆ ಎಂಬ ಅರಿವಿನೊಂದಿಗೆ, ಇದು ಮೊದಲು ಆರಂಭವಾದದ್ದು ಮತ್ತು ಇಂತಹ ಪರಿಕಲ್ಪನೆ ಬಂದದ್ದು ಪಾಶ್ಚಾತ್ಯ ಜಗತ್ತಿನಿಂದ 'ಸ್ತ್ರೀವಾದ'ಕ್ಕೆ ಸಂಬಂಧಿಸಿದ ಚರ್ಚೆ ಪಾಶ್ಚಾತ್ಯ ಜಗತ್ತಿನಲ್ಲಿ ಗಂಭೀರವಾಗಿ ಕಾಣಿಸಿಕೊಂಡಿದ್ದು ೧೯೬೦ರ ದಶಕದಲ್ಲೇ ಆದರೂ ಸುಮಾರು ಎರಡು ಶತಕಗಳ ಹಿಂದೆಯೇ ಸ್ತ್ರೀ ವಿಮೋಚನಾ ಹೋರಾಟ ಪ್ರಾರಂಭವಾಗಿದ್ದು ಇದಕ್ಕೊಂದು ಸುದೀರ್ಘ ಇತಿಹಾಸವೇ ಇದೆ. ಒಟ್ಟಾರೆ ೬೦, ೭೦ರ ದಶಕಗಳ ಹೋರಾಟವನ್ನು ಸ್ತ್ರೀ ವಿಮೋಚನಾ ಚಳುವಳಿ ಎಂದು ಗುರುತಿಸಲಾಗಿದೆ. ಈ ರೀತಿಯ ಸ್ತ್ರೀವಾದ ಚಳುವಳಿಗೆ ಅನೇಕ ಸ್ತ್ರೀವಾದಿಗಳು ಕಾರಣವಾಗಿದ್ದಾರೆ. ೧೮೪೫ರಲ್ಲಿ ಮಾರ್ಗರೇಟ್ ಪುಲರ್ ರಚಿಸಿದ ವುಮನ್ ಇನ್ ನೈನ್‌ಟೀನ್ತ್ ಸೆಂಚುರಿ, ೧೮೬೯ರಲ್ಲಿ ಜಾನ್ ಸ್ಟೂವರ್ಟ ಮಿತ ರಚಿಸಿದ 'ದಿ ಸಬ್ಜೆಕ್ಷನ್ ಆಫ್ ವಿಮೆನ್', ೧೯೨೯ರಲ್ಲಿ ವರ್ಜಿನಿಯಾ ವುಲ್ಫಳು ರಚಿಸಿದ 'ಎ ರೂಮ್ ಆಫ್ ಒನ್ಸ್‌ಓನ್', ಹಾಗೂ ಫ್ರಾನ್ಸನ ಸ್ತ್ರೀವಾದಿ ಚಿಂತಕಿ ಸಿಮೊನ್ ದ ಬೋವಾ ೧೯೪೯ರಲ್ಲಿ ರಚಿಸಿದ 'ದ ಸೆಕೆಂಡ್ ಸೆಕ್ಸ್', ಹಾಗೇ ೧೯೬೮ ಶೋವಾಲ್ಟರ ರಚಿಸಿದ 'ಥಿಂಕಿಂಗ್ ಅಬೌಟ ವಿಮೆನ್' ಕೃತಿ, ಕೇಟ ಮಿಲ್ಲೆಟ್ ೧೯೬೯ರಲ್ಲಿ ಪ್ರಕಟಿಸಿದ 'ಸೆಕ್ಸುಯಲ್ ಪಾಲಿಟಿಕ್ಸ್', ೧೯೭೨ರಲ್ಲಿ ಮೇರಿ ವೋಲ್ಲಸ್ಟನ್ ಕ್ರಾಫ್ಟ್ ರಚಿಸಿದ 'ಎ ವಿಂಡಿಕೇಶನ್ ಆಫ್ ರೈಟ್ ಆಫ್ ವಿಮೆನ್' ಮುಂತಾದ ಬರಹಗಳು ಪಾಶ್ಚಾತ್ಯ ವಿಚಾರಧಾರೆಯಲ್ಲಿ ಸ್ತ್ರೀವಾದವನ್ನು ಸಮರ್ಥವಾಗಿ ಗಟ್ಟಿಗೊಳಿಸಿದ್ದಲ್ಲದೆ, ಜಗತ್ತಿನಾದ್ಯಂತ

ಸ್ತ್ರೀ ವೈಚಾರಿಕತೆಯನ್ನು ಪ್ರಭಾವಿಸಿದವು. ಈ ಎಲ್ಲಾ ಕೃತಿಗಳು ಒಂದು ಹಂತದಲ್ಲಿ ಪಾಶ್ಚಾತ್ಯ ಸ್ತ್ರೀ ಹೋರಾಟ, ಚಳುವಳಿಗಳ ಮುಖವಾಣಿಗಳೆಂಬಂತೆ ಕಾರ್ಯ ನಿರ್ವಹಿಸಿದವು.

ಈ ಎಲ್ಲಾ ಸ್ತ್ರೀವಾದಿಗಳ ಚಿಂತನೆಗಳು ಒಂದು ಹಂತದಲ್ಲಿ ಪುರುಷ ಚಿಂತನೆಗಳ ಪ್ರೇರಣೆಯಾದರೂ, 'ಸ್ತ್ರೀವಾದಿ' ಚಿಂತನೆಗಳಲ್ಲಿ ಸಿದ್ಧಾಂತ ಹಾಗೂ ಚಳುವಳಿಗಳನ್ನು ರೂಪಿಸಿದವರು ಮಹಿಳೆಯರೇ ಆಗಿದ್ದಾರೆ. ಇದರ ಫಲವಾಗಿ ಜಾಗತಿಕವಾಗಿ 'ಸ್ತ್ರೀವಾದ' ಎನ್ನುವುದು ಒಂದಲ್ಲ ಹಲವು ಸ್ತ್ರೀವಾದಗಳಿವೆ. ಅವುಗಳೆಂದರೆ, ಉದಾರವಾದಿ ಸ್ತ್ರೀವಾದ, ಮಾರ್ಕ್ಸ್‌ವಾದಿ ಸ್ತ್ರೀವಾದ, ತೀವ್ರಗಾಮಿ ಸ್ತ್ರೀವಾದ, ಲೆಬಿಯನ್ ಸ್ತ್ರೀವಾದ, ಸಮಾಜವಾದಿ ಸ್ತ್ರೀವಾದ, ಮನೋ ವಿಶ್ಲೇಷಣಾತ್ಮಕ ಸ್ತ್ರೀವಾದ, ಕಪ್ಪು ಸ್ತ್ರೀವಾದ, ಸಾಂಸ್ಕೃತಿಕ ಸ್ತ್ರೀವಾದ, ಪರಿಸರ ಸ್ತ್ರೀವಾದ, ಆಧುನಿಕೋತ್ತರ ಸ್ತ್ರೀವಾದ ಹೀಗೆ ಹಲವು ಸ್ತ್ರೀವಾದಗಳನ್ನು ನೋಡಬಹುದು. ಹಾಗೇ– ಜಾಗತಿಕವಾಗಿ ಸ್ತ್ರೀವಾದವನ್ನು ಅಧಿಕೃತವಾಗಿ ೧೮೪೦ರಿಂದ ಅಂದರೆ ೧೯ನೇ ಶತಮಾನದಿಂದ ಇಲ್ಲಿಯವರೆಗೆ ಮೂರು ಅಲೆಗಳಲ್ಲಿ ಗುರುತಿಸಲಾಗಿದೆ. ಮೊದಲ ಸ್ತ್ರೀವಾದಿ ಅಲೆ, ಎರಡನೇ ಸ್ತ್ರೀವಾದಿ ಅಲೆ ಮತ್ತು ಮೂರನೇ ಸ್ತ್ರೀವಾದಿ ಅಲೆ ಎಂದು ಗುರುತಿಸಲಾಗಿದೆ. ೨೦೧೨ರಿಂದ ನಾಲ್ಕನೇ ಸ್ತ್ರೀವಾದಿ ಅಲೆಯನ್ನು ಸಾಮಾಜಿಕ ಜಾಲತಾಣದ ಹಿನ್ನೆಲೆಯಲ್ಲಿ 'ಸೈಬರ್ ಫೆಮಿನಿಸಮ್' ಎಂದು ಇತ್ತೀಚೆಗೆ ಗುರುತಿಸಲಾಗುತ್ತಿದೆ. ಇತ್ತೀಚೆಗೆ ಹೆಚ್ಚಿನ ಚಳುವಳಿಗಳು ಸಾಮಾಜಿಕ ಜಾಲತಾಣಗಳಿಂದ ಆರಂಭಗೊಳ್ಳುವುದನ್ನು ಗಮನಿಸಬಹುದಾಗಿದೆ.

**ಭಾರತದ ಸಂದರ್ಭದಲ್ಲಿ ಸ್ತ್ರೀವಾದ**

ಭಾರತದ ಸಂದರ್ಭದಲ್ಲಿ ಸ್ತ್ರೀವಾದವು ಈ ಮುಂಚೆ ಹೇಳಿದಂತೆ ಪಾಶ್ಚಿಮಾತ್ಯದಿಂದ ಬಂದ ಪರಿಕಲ್ಪನೆಯಾಗಿದೆ. ಜಾಗತಿಕವಾಗಿ ಸ್ತ್ರೀವಾದ ರೂಪುಗೊಂಡ ರೀತಿಯಲ್ಲಿ ಇಲ್ಲಿ ರೂಪುಗೊಂಡಿಲ್ಲವಾದರೂ, ಭಾರತೀಯ ಸಮಾಜದಲ್ಲಿರುವ ಶ್ರೇಣೀಕರಣಗಳು ಮಹಿಳೆಯ ಬದುಕಿನ ಮೇಲೆ ಪರಿಣಾಮ ಉಂಟುಮಾಡಿವೆ. ಜಾತಿ, ಧರ್ಮ, ವರ್ಗ, ಪ್ರದೇಶದ ಹಿನ್ನೆಲೆಯಲ್ಲಿ ಮಹಿಳೆಯ ಸಮಸ್ಯೆ, ಶೋಷಣೆಗಳು ಭಿನ್ನ ಭಿನ್ನ ಹಾಗಾಗಿ ಜಾಗತಿಕವಾಗಿ ಬೆಳೆದ ಸ್ತ್ರೀವಾದ ಭಾರತೀಯ ಸ್ತ್ರೀವಾದಿ ಚಿಂತನೆ, ಚಳುವಳಿಗಳನ್ನು ಪ್ರಭಾವಿಸಿದೆ. ಈ ಹಿನ್ನೆಲೆಯಲ್ಲಿ ಭಾರತೀಯ ಸ್ತ್ರೀವಾದದ ವಿಕಾಸವನ್ನು ಸ್ವಾತಂತ್ರ್ಯ ಪೂರ್ವ, ಸ್ವಾತಂತ್ರ್ಯೋತ್ತರ, ಆಧುನಿಕ ಎಂದು ಮೂರು ಘಟ್ಟಗಳಲ್ಲಿ ಗುರುತಿಸಲಾಗಿದೆ. ಹಾಗೇ ಪಾಶ್ಚಾತ್ಯದಲ್ಲಿರುವಂತೆ ಚಳುವಳಿಯ ಭಾಗವಾಗಿ ಹಲವು ಸ್ತ್ರೀವಾದದ ಪಂಗಡಗಳಿಲ್ಲ, ಇಲ್ಲಿ ಹೆಚ್ಚು ಶೈಕ್ಷಣಿಕವಾಗಿ ಮಾತ್ರ 'ಮಾರ್ಕ್ಸ್‌ವಾದಿ ಸ್ತ್ರೀವಾದ', 'ಸಾಂಸ್ಕೃತಿಕ ಸ್ತ್ರೀವಾದ', 'ದಲಿತ ಸ್ತ್ರೀವಾದ', 'ಆಧುನಿಕೋತ್ತರ ಸ್ತ್ರೀವಾದಗಳು' ಬಳಕೆಯಲ್ಲಿವೆ. ಆದರೆ ಚಳುವಳಿಗಳ ಸಂದರ್ಭದಲ್ಲಿ ಸಮಾಜವಾದಿ ಸ್ತ್ರೀವಾದವೇ ಇರುವುದು. ಹಾಗೇ ಶೈಲಜಾ ಹಿರೇಮಠ ಹೇಳುವಂತೆ "ಭಾರತದ ಸಂದರ್ಭದಲ್ಲಿ ಅದರಲ್ಲೂ ಕರ್ನಾಟಕದಲ್ಲಿ ಪಾಶ್ಚಾತ್ಯದಲ್ಲಿ ಬೆಳೆದಂತೆ ಸಿದ್ಧಾಂತ, ಚಳುವಳಿ ಒಟ್ಟೊಟ್ಟಿಗೆ ಬೆಸೆದುಕೊಂಡ ಸ್ತ್ರೀವಾದ ಹುಟ್ಟಲೇ ಇಲ್ಲ. ಇಲ್ಲಿ ರೂಪಿಸಿಕೊಳ್ಳುವ ಚಿಂತನಾ ಕ್ರಮದ ಹಿಂದೆ ಅಕಾಡೆಮಿಕ್ ಒತ್ತಡಗಳು ಕಾರ್ಯನಿರ್ವಹಿಸುತ್ತವೆ ಹೊರತು ಸಾಮಾಜಿಕ ಒತ್ತಡಗಳಲ್ಲ" ಎಂದು ಹೇಳುತ್ತಾರೆ. ಇದು ಒಂದು ಹಂತಕ್ಕೆ ಸರಿ ಅನಿಸಿದರೂ, ಇತ್ತೀಚೆಗೆ ಸೋಶಿಯಲ್ ಮೀಡಿಯಾ ಆ್ಯಕ್ಟಿವಿಸಂ ಬೆಳವಣಿಗೆಯನ್ನು ಗಮನಿಸಿದರೆ ಇದರ ಹಿಂದೆ ಇರುವ ಒತ್ತಡ ಯಾವುದು? ಜೊತೆಗೆ ವೆಬ್‌ಸೈಟ್ ನಿಘಂಟು ತಜ್ಞರು ಹೇಳುವಂತೆ, "ಮಹಿಳೆಯರ ಹಕ್ಕು ಹಾಗೂ ರಾಜಕೀಯ, ಆರ್ಥಿಕ ಸಾಮಾಜಿಕ ಸಮಾನತೆಯ ವಿಷಯ ಬಂದಾಗಲೆಲ್ಲ 'ಸ್ತ್ರೀವಾದ' ಹೆಚ್ಚಾಗಿ ಕೇಳಿ ಬರುತ್ತದೆ" ಎಂದಿದ್ದಾರೆ. ಹಾಗಾದರೆ ಇದರ ಹಿಂದೆ ಇರುವ ಒತ್ತಡ ಯಾವುದು? ಒಟ್ಟಾರೆ ಜಾಗತಿಕವಾದ ಈ ಸಂಗತಿಗಳನ್ನು ಕರ್ನಾಟಕಕ್ಕೆ ಅನ್ವಯಿಸುವುದು ಮಿತಿ ಎನಿಸಿದರೂ, ಪ್ರಸ್ತುತ ಸಂದರ್ಭದಲ್ಲಿ ಇದನ್ನು ಧನಾತ್ಮಕವಾದ ಬೆಳವಣಿಗೆಯೆಂದೇ ಪರಿಗಣಿಸಬೇಕಾಗಿದೆ.

**ಸ್ತ್ರೀವಾದಿಗಳೆಂದರೆ**

ಸ್ತ್ರೀವಾದಿಗಳೆಂದರೆ ಯಾರು? ಪುರುಷ ದ್ವೇಷಿಗಳೇ? ಎನ್ನುವ ಸಂಗತಿ ಬಹು ಹಿಂದೆಯೇ ಹೆಚ್ಚು ಚರ್ಚೆಗೆ ಒಳಗಾದ ಸಂಗತಿಯಾಗಿದೆ. ಈಗಲೂ ಸ್ತ್ರೀವಾದಿಗಳೆಂದರೆ ಬಹುತೇಕ ಅನುಮಾನದಿಂದಲೇ ನೋಡುವ ಸಂದರ್ಭಗಳೂ ಇವೆ. ಸ್ತ್ರೀಯರ ಪರವಾಗಿ ಮಾತನಾಡಿದಾಕ್ಷಣ ಅವ್ರು ಫೆಮಿನಿಸ್ಟ್, ಅವರ ಹತ್ತಿರ ಹುಷಾರಾಗಿರಿ ಎಂದು ಅಪಹಾಸ್ಯ ಮಾಡುವ ಸಂದರ್ಭಗಳೂ ಇವೆ. ಜೊತೆಗೆ ಹಣೆಗೆ ಕುಂಕುಮ ಇಡದಿದ್ದರೆ, ಮದುವೆ ಆಗಿದ್ದರೂ ಕರಿಮಣಿ ಧರಿಸದಿದ್ದರೆ, ಮೇಲು ಹೊದಿಕೆ ಇಲ್ಲದ ಉಡುಪು ಧರಿಸಿದ್ದರೆ (ದುಪ್ಪಟ್ಟ ಇಲ್ಲದ) ಹೋ ನೀವೂ ಫೆಮಿನಿಸ್ಟೆ? ಎಂದು ಕೇಳುವ ಸಂದರ್ಭ ಕನ್ನಡದಲ್ಲಿ ಈಗಲೂ ಪ್ರಚಲಿತದಲ್ಲಿದೆ. ಈ ಎಲ್ಲಾ ಸಂಗತಿಗಳು ಒಂದರ್ಥದಲ್ಲಿ ಸ್ತ್ರೀವಾದವನ್ನು ಮತ್ತು ಇದನ್ನು ನಂಬಿದ ಸ್ತ್ರೀವಾದಿಗಳನ್ನು ಗಂಭೀರವಾಗಿ ತೆಗೆದುಕೊಳ್ಳದೆ ಬಾಲಿಶವಾಗಿ ಕಾಣುವ ದೃಷ್ಟಿಕೋನಗಳು ಕೆಲಸಮಾಡುತ್ತವೆ.

ಸ್ತ್ರೀವಾದಿಗಳು ಪ್ರತಿಪಾದಿಸಹೊರಡುವುದು 'ಹೆಣ್ಣು' ಎನ್ನುವ ಸಾಮಾಜಿಕ, ರಾಜಕೀಯ, ಸಾಂಸ್ಕೃತಿಕ, ಧಾರ್ಮಿಕ ರಚನೆಯನ್ನು ಭಂಜಿಸುವುದು. ಈ ಭಂಜಿಸುವ ಕಾರ್ಯದಲ್ಲಿ ಸ್ತ್ರೀಯರೇ ಇರಬೇಕೆಂದಿಲ್ಲ. ಪುರುಷರು ಸಹ ಇದಕ್ಕೆ ಹಕ್ಕೊತ್ತಾಯವನ್ನು ಮಾಡಬಹುದು, ಹಾಗಾಗಿ ಸ್ತ್ರೀವಾದಿಗಳೆಂದರೆ ಕೇವಲ ಸ್ತ್ರೀಯರೆಂದು, ಪುರುಷ ದ್ವೇಷಿಗಳೆಂದು ಭಾವಿಸಬೇಕಾಗಿಲ್ಲ. ಬದಲಿಗೆ ಸ್ತ್ರೀ–ಪುರುಷರ ನಡುವಿನ ಲಿಂಗಾಧಾರಿತ ತಾರತಮ್ಯಗಳು, ಸ್ಥಿರ ಮಾದರಿ ವ್ಯವಸ್ಥೆಯನ್ನು ಬದಲಾಯಿಸಲು ಯಾರು ಹಕ್ಕೊತ್ತಾಯಿಸುತ್ತಾರೋ ಅವರೇ ಸ್ತ್ರೀವಾದಿಗಳು. ಈ ಹಿನ್ನೆಲೆಯಲ್ಲಿ ಇಂತಹದೊಂದು ಜೀವಪರ ದೃಷ್ಟಿಕೋನ ಹೊಂದಿದ ಪುರುಷರು ಸಹ ಸ್ತ್ರೀವಾದಿಗಳೇ ಆಗಿರುತ್ತಾರೆ. ಸ್ತ್ರೀವಾದಿ ಎನ್ನುವಾಗ ಯಾವುದೇ ಬಾಹ್ಯ ಸಂಗತಿಗಳಿಂದ ಗುರುತಿಸಬೇಕಾಗಿಲ್ಲ. ಅವರ ವೇಷಭೂಷಣ ಅಂತಿಮವಾಗಿ ಅವರವರ ಆಯ್ಕೆ, ಜೊತೆಗೆ ಸ್ತ್ರೀವಾದ ಅಪೇಕ್ಷಿಸುವುದು ಆಯ್ಕೆಯ ಬದುಕು ಮತ್ತು ಸ್ವಾತಂತ್ರ್ಯವನ್ನು. ಹಾಗಾಗಿ ಗಂಡಿಗಿಲ್ಲದ ನಿರ್ಬಂಧಗಳು, ಗುರುತುಗಳು ಹೆಣ್ಣಿಗೆ ಮಾತ್ರ ಯಾಕೆ? ಎನ್ನುವ ಪ್ರಶ್ನೆಗಳು ಈಗಲೂ ಉಳಿದಿವೆ. ಒಟ್ಟಿನಲ್ಲಿ 'ಸ್ತ್ರೀವಾದ' ಎನ್ನುವುದು ಸಾಮಾಜಿಕ, ರಾಜಕೀಯ, ಆರ್ಥಿಕ, ಸಾಂಸ್ಕೃತಿಕ ನೆಲೆಗಳಲ್ಲಿ ಸ್ತ್ರೀ–ಪುರುಷರನ್ನು ಸಮಾನವಾಗಿ ಸ್ಥಾಪಿಸಬಲ್ಲ ವ್ಯವಸ್ಥೆಗಾಗಿ ನಡೆಯುವ ಹೋರಾಟವೇ ಆಗಿದೆ.

ಒಟ್ಟಾರೆ ಲೇಖನದ ಆರಂಭದಲ್ಲಿ ಹೇಳಿದಂತೆ ೨೦೧೭ರಲ್ಲಿ 'ಸ್ತ್ರೀವಾದ' ಹೆಚ್ಚು ಬಳಕೆಯಾದ ಸಂಗತಿಯನ್ನು 'ಸೈಬರ್ ಫೆಮಿನಿಸಂ'ನ ಭಾಗವಾಗಿ ನೋಡಬಹುದಾದರೂ, ಹೆಚ್ಚು ಬಳಕೆಯಾದ ಮಾತ್ರದಲ್ಲಿ ವಾಸ್ತವದಲ್ಲಿ ಸ್ತ್ರೀಯ ಬದುಕಿನ ಮೇಲೆ ಏನಾದರೂ ಬದಲಾವಣೆ ಆಗಿದೆಯೇ ಎಂದರೆ ಉತ್ತರ ಸಂಕೀರ್ಣವೇ ಸರಿ. ಜೊತೆಗೆ ಹೆಣ್ಣಿನ ಮೇಲಾಗುವ ಶೋಷಣೆ ಹೆಚ್ಚಾದಂತೆಲ್ಲಾ ಈ ಪದವನ್ನು ಹೆಚ್ಚು ಬಳಸಲಾಗಿದೆ ಎಂದಾದರೆ ಬದಲಾವಣೆ ಎಲ್ಲಿಂದ ಸಾಧ್ಯ? ಎನ್ನುವ ವೈರುಧ್ಯದ ಪ್ರಶ್ನೆಗಳು ಏಳುವುದು ಸಹಜವೇ ಆದರೂ, ಚಳುವಳಿಯ ಭಾಗವಾದರೂ ಸರಿ ಅಥವಾ ಸಹಜವಾಗಿಯಾದರೂ ಸರಿ ಈ ಪದದ ಬಳಕೆಯಿಂದ ಒಂದು ಸಣ್ಣ ಹಂತದ ಜಾಗೃತಿ ಉಂಟಾದರೂ, ಇದು ಧನಾತ್ಮಕ ಸಂಗತಿಯಾಗಬಹುದೇನೊ ಎಂಬ ಆಶಯ ಈ ಲೇಖನದ್ದು. ಅಂತಿಮವಾಗಿ ಸ್ತ್ರೀವಾದ ಎನ್ನುವುದು ಕೇವಲ ಪದವಾಗಿರದೆ ಪರಿಭಾಷೆಯಾಗದೆ, ಅಭಿವೃದ್ಧಿ ಸಿದ್ಧಾಂತವಾಗಿ ಇನ್ನೂ ಹೆಚ್ಚು ಬೆಳೆಯಬೇಕಾಗಿದೆ.

**ಡಾ॥ ಕಲಾವತಿ ಬಿ. ಜಿ.**
ಕನ್ನಡ ವಿಭಾಗ (ಸ್ವಾಯತ್ತ) ಸ. ಸ. ಅ. ಸ. ಪ್ರ. ದ. ಕಾಲೇಜು
ಬಳ್ಳಾರಿ

## ಆಗ – ಈಗ

ಆಗ
ನಮ್ಮೂರಿನ ಕಾಗೆಗಳು
ಹಸಿರಿನ ಬೇಲಿ ಬಸಿರು ಗಿಡದಾಗ
ನಸುಕಿನ್ಯಾಗ ಒಂದೇ ವೇಳೆಗೆ
ಕಾಕಾ ಎಂದು ಕೂಗುತ್ತಿದ್ದವು.
ಈಗ
ನಮ್ಮೂರಿನ ಕಾಗೆಗಳು
ಕಚೇರಿ, ಗುಡಿ – ಗುಂಡಾರದಾಗ
ಹೊತ್ತು ಗೊತ್ತೆನ್ನದೆ
ತಾತಾ ಎಂದು ಕೂಗುತ್ತಿವೆ.

**ಶಿವರಂಜನ್ ಸತ್ಯಂಪೇಟೆ**
ಕಲಬುರಗಿ –೫೮೫೧೦೫

# ಮ್ಯಾನ್ಮಾರಿನಲೀಗ ಬುದ್ಧನಿಲ್ಲ




ನೆತ್ತರು ನಿಂತ ತಾಯ ಎದೆ ಹತ್ತಿ
ಮೊಲೆತೊಟ್ಟಿಗೆ ತಡಕುತ್ತಿದೆ ಕಂದ
ಅದ ಎತ್ತಿಕೊಡಿ ಇತ್ತ
ನನ್ನ ಮೊಲೆಯಲ್ಲಿನ್ನೂ ಹಾಲಿದೆ

ಒಂದು ತುತ್ತಿಗೆ ಬಾಯಿ ಬಿಡುತ್ತಿವೆ
ಆ ಕಂದಮ್ಮಗಳು ಕೈದಾಟಿಸಿ ಇತ್ತ
ನನ್ನ ಬಟ್ಟಲದಲ್ಲಿನ್ನೂ ಅನ್ನವಿದೆ

ಮನೆ ದೊಡ್ಡದಿದೆ ಖಂಡಿತ
ಒಂದು ದೋಣಿಯ ಜನ ಹಿಡಿಯುವಷ್ಟು
ಮಿಕ್ಕರೆ, ಕೈಕಾಲು ಸುರುಟಿ ಉರುಳಿದರಾಯ್ತು
ಕಳೆದು ಹೋದ ಬಾಲ್ಯವ ಮತ್ತೆ ಹೊದ್ದು

ಬಿಡಿ, ಒಂದು ದಿನದ ಮಾತಲ್ಲ–ಗೊತ್ತು ನನಗೆ
ನಂಬಿಕೆಯಿದೆ... ನನ್ನ–ಅವರ ರೆಟ್ಟೆಗಳಲಿ
ಮಮತೆಗೆ ಬೆಂಕಿಯಿಡುವ ಧರ್ಮವಿಲ್ಲ
ಹಸಿವೆಗೆ ಧರ್ಮದ ಬಣ್ಣವಿಲ್ಲ

ಹರಳುಗಟ್ಟಿದ ಕಣ್ಣೀರಿನ ಆ ಅವಳ ಬರಹೇಳಿ
ಹೊಸಬಳಲ್ಲ ನನಗವಳು ಕಣ್ಣೀರಿನ ಭಾಷೆ ಬಲ್ಲವಳು
ಅವಳ ತೊಡೆತೊಟ್ಟಿಲಲಿ ತಲೆಯಿಟ್ಟು
ಒಂದು ಹುಣ್ಣಿಮೆ ರಾತ್ರಿ ಕಥೆ ಹೇಳುವೆ
ಆ ಬೆರಳುಗಳ ಲಾಲಿಯಲಿ ಲೋಕ ಮರೆವೆ

ಆ ಅವನ ಕಲಕು ನೋಟ ಬೆನ್ನಿಗಂಟಿದೆ
ನನ್ನ ಹಗಲು ರಾತ್ರಿಗಳಲಿ, ಕೇಳುತ್ತಿದೆ–
ಹೇಳವ್ವೆ, ಈ ಎಲುಬಿನ ತಡಿಕೆಯೊಳಗೆ
ಬಚ್ಚಿಟ್ಟೇನೆಯೇ ಬಾಂಬು ಬಂದೂಕುಗಳ
ಕೈಕೂಸುಗಳ ಹೂಳಿ ಬಂದವರು
ಹಸಿದಿದ್ದೇವೆ ತಾಯೆ, ಒಂದು ಮೃದು ಮಾತಿಗೆ

ದೇವರೆ, ಮನುಷ್ಯರಿಗಾಗಿ ಧರ್ಮ ಕೊಟ್ಟವನೆ
ಹಿಂಸಾರತಿಯ ಕ್ರೂರ ಉನ್ಮಾದವನು
ಯಾವ ಕಲಂಮಿನಲಿ ಬರೆದು ಅಚ್ಚು ಹಾಕಿದೆ ಹೇಳು?
ಮ್ಯಾನ್ಮಾರಿನಲೀಗ ಬುದ್ಧನಿಲ್ಲ

ನಗಲಾರದೆ ಅಳಲಾರದೆ ಇಂಚಿಂಚೇ ಕುಸಿದ ಬುದ್ಧನ
ಬೆಳಕಿನ ತುಂಡುಗಳಂತಹ ಆ ಮಕ್ಕಳನೆತ್ತಿಕೊಡಿರೋ ಇತ್ತ

ಇದು ದೇಶದ್ರೋಹವಾದರೆ, ನನ್ನ ಹಣೆಗಂಟಿಸಿ
ಧರ್ಮದ್ರೋಹವಾದರೆ, ಗುಂಡಿಕ್ಕಿ ಸೀಳಿ
ಕಡೆಗೆ, ಕಣ್ಣಗಾಯದ ನೋವಾದರೂ ಮಾಯಲಿ

**ಡಾ॥ ವಿನಯಾ ಒಕ್ಕುಂದ**
'ನೆಮ್ಮದಿ', ನಂ. ೧೨೪, ಸಿ.ಐ.ಟಿ.ಬಿ. ಕಾಲೋನಿ, ಶ್ರೀನಗರ, ಧಾರವಾಡ – ೫೮೦ ೦೦೩

# OUR ADVERTISERS





# ಪರಿಮಿತ ಪರಿಕರಗಳಲ್ಲಿ ಅಪರಿಮಿತ ಸೌಂದರ್ಯ

**ಮಲ್ಲಿಕಾರ್ಜುನ ಕನ್ನೂರ**





'ವಿಜಯಪುರ' ಬಗ್ಗೆ ಒಂದು ಮಾತಿದೆ. 'ಇಲ್ಲಿನ ಬೀಜಗಳು ಇಲ್ಲಿ ಬಿತ್ತಿದರೆ ಬೆಳೆಯಲಾರವು, ಬೇರೆಡೆ ಹೋದಾಗಲೇ ಸಮೃದ್ಧವಾಗಿ ಬೆಳೆಯುತ್ತವೆ. ಈ ಮಾತಿಗೆ ಹಲವು ಉದಾಹರಣೆಗಳಿರಬಹುದು! ಆದರೆ ಮಲ್ಲಿಕಾರ್ಜುನ ಕನ್ನೂರರಂತಹ ಕಲಾವಿದರು ಈ ಮಾತಿಗೆ ಅಪವಾದ. ಇಲ್ಲೇ ಹುಟ್ಟಿ ಎಲ್ಲೋ ಹೋಗಿ, ಕಲಿತು ಬಂದು ಇಲ್ಲಿಯೇ ಉಳಿದು ಬೆಳೆದ ಕಲಾವಿದ.

ವಿಶೇಷವೆಂದರೆ ಅನುಭವಗಳ ಅಭಿವ್ಯಕ್ತಿಗೆ ತೈಲವರ್ಣ, ಕುಂಚ, ಕ್ಯಾನ್ವಾಸ್‌ಗಳಂತಹ ಶ್ರೀಮಂತ ಮಾಧ್ಯಮಗಳೇ ಇರಬೇಕೆಂಬ ಅಲಿಖಿತ ನಿಯಮವನ್ನು ಉಲ್ಲಂಘಿಸಲೆಂಬಂತೆ ತೀರಾ ಸಾಮಾನ್ಯವೆನಿಸುವ ಹಾಳೆ-ಪೆನ್ನುಗಳನ್ನು ಬಳಸಿ ಅದ್ಭುತ ಕಲಾಕೃತಿಗಳನ್ನು ರಚಿಸಿರುವುದು ಕನ್ನೂರರ ಒಂದು ದಿಟ್ಟ ಹೆಜ್ಜೆ, ಮತ್ತು ಉದಯೋನ್ಮುಖ ಚಿತ್ರಕಲಾವಿದರಿಗೆ ಮಾದರಿ. ಅವರೇ ಹೇಳಿಕೊಂಡಂತೆ 'ಬೆಲೆಬಾಳುವ ಕಲಾಪರಿಕರಗಳನ್ನು ಕೊಳ್ಳುವ ಶಕ್ತಿ ಇಲ್ಲದಿರುವ ಕಾರಣ ಮತ್ತು ಇರುವ ಸರಳ-ಪರಿಮಿತ ಪರಿಕರಗಳಿಂದಲೇ ಅದ್ಭುತ ಸೃಷ್ಟಿ ಮಾಡಬೇಕೆಂಬ ಛಲದ ಕಾರಣ ಈ ಕಲಾಕೃತಿಗಳು ಮೂಡಿಬಂದಿರುವವು'.

ಅಂತೆಯೇ ಅವರ ಆರಂಭಿಕ ಕಲಾಕೃತಿಗಳಲ್ಲಿ ಪ್ರಾದೇಶಿಕ ಪ್ರಭಾವ ತುಂಬಿದ್ದರೆ ಅನಂತರದ ಅಭಿವ್ಯಕ್ತಿಗಳಲ್ಲಿ ಸಮಕಾಲೀನ ಸಮಾಜದ, ಜಗತ್ತಿನ ಜ್ವಲಂತ ಸಂಗತಿಗಳು ದುಡಿಸಿಕೊಳ್ಳಲ್ಪಟ್ಟಿವೆ. ಅರ್ಥಾತ್ ಅಂತರರಾಷ್ಟ್ರೀಯ ವಿಧ್ವಂಸಕ ಕೃತ್ಯಗಳು ಇವರನ್ನು ಬಹುವಾಗಿ ಕಾಡಿವೆ.

ಕಲಾಕೃತಿಗಳಿಂದ ಕಲಾಭಿಜ್ಞರ ಮನಗೆದ್ದಿರುವ ಕನ್ನೂರರು, ಬೆಂಗಳೂರು, ದೆಹಲಿ, ಮುಂಬಯಿ ಸೇರಿದಂತೆ ದೇಶದ ಅನೇಕ ಕಡೆಗಳಲ್ಲಿ ತಮ್ಮ ಕಲಾಕೃತಿಗಳನ್ನು ಪ್ರದರ್ಶಿಸಿರುವರು. 2003ನೇ ಸಾಲಿನ ಕರ್ನಾಟಕ ಲಲಿತಕಲಾ ಅಕಾಡೆಮಿ ಹಾಗೂ 2006ನೇ ಸಾಲಿನ ಇನ್ಫೋಸಿಸ್ ಪ್ರಶಸ್ತಿಗಳು ಸೇರಿದಂತೆ ಹಲವು ಪ್ರಶಸ್ತಿ-ಪುರಸ್ಕಾರಗಳನ್ನು ಪಡೆದಿರುವುದು ಇವರ ಹೆಗ್ಗಳಿಕೆಯಾಗಿದೆ. ಚಿತ್ರಕಲೆಯಲ್ಲಿ ಸ್ನಾತಕೋತ್ತರ ಪದವಿ ಪಡೆದು ನಗರದ ಶ್ರೀ ಸಿದ್ಧೇಶ್ವರ ಕಲಾ ಮಹಾವಿದ್ಯಾಲಯದಲ್ಲಿ ಕೆಲವು ವರ್ಷಗಳ ಕಾಲ ಕಲಾ ಉಪನ್ಯಾಸಕರ ಸೇವೆ ಸಲ್ಲಿಸಿ ಸ್ವಯಂ ನಿವೃತ್ತಿ ಪಡೆದಿರುವರು. ಸದ್ಯ ಸ್ವತಂತ್ರ ಕಲಾವಿದರಾಗಿ, ಛಲದಿಂದ ಬದುಕು ನಡೆಸುತ್ತಿರುವ ಮಾದರಿ ವ್ಯಕ್ತಿಯಾಗಿರುವುದು ಹೆಮ್ಮೆಯ ಸಂಗತಿ.

– ಡಾ. ಶಿವಾನಂದ ಎಚ್. ಬಂಟನೂರ, ಹಂಪಿ, ದೃಶ್ಯಕಲಾವಿದ ಮತ್ತು ವಿಮರ್ಶಕ






Printed & published by Dr. Siddanagouda Patil on behalf of Navakarnataka Publications (P) Ltd., Embassy Centre, Crescent Road, Bengaluru-1 and printed at Sri Vinayaka Printers, No. 738/10, 60th Cross, 5th Block, Rajajinagar, Bengaluru-560 010. Published at Bengaluru. Editor : Dr. Siddanagouda Patil. 

